ನಿತ್ಯಾತ್ಮ ಶುಕಯೋಗಿ ವಿರಚಿತ

# ಕನ್ನಡ ಭಾಗವತ

(ಪಂಚಮ ಸಂಪುಟ)

ದಶಮಸ್ಕಂಧ

ಸಂಪಾದಕರು

ಕೆ. ವೆಂಕಟರಾಮಪ್ಪ, ಎಂ.ಎ.

ಶಾರದಾ ಮಂದಿರ

ರಾಮಯ್ಯರ್ ರಸ್ತೆ : : ಮೈಸೂರು-4



ಮೈಸೂರು ಶಾಸನ ಇಲಾಖೆಯ ಕೃಪೆಯಿಂದ]　　ಗೋವರ್ಧನಗಿರಿಧಾರಿ ಶ್ರೀಕೃಷ್ಣ

ಕನ್ನಡ ಕವಿಕಾವ್ಯಮಾಲೆ–೧೧೦

## ನಿತ್ಯಾತ್ಮಶುಕಯೋಗಿ ವಿರಚಿತ

# ಕನ್ನಡ ಭಾಗವತ

ಪಂಚಮ ಸಂಪುಟ

**ದಶಮಸ್ಕಂಧ**

ಸಂಪಾದಕರು

**ಕೆ. ವೆಂಕಟರಾಮಪ್ಪ, ಎಂ.ಎ.**

*Reader in Kannada (Rtd) University of Mysore, Mysore*

ಶಾ ರ ದಾ ಮಂ ದಿ ರ

**ರಾಮಯ್ಯರ್ ರಸ್ತೆ :: ಮೈಸೂರು–4**

ಈ ಮಾಲೆಯ ಸಂಪಾದಕರು ಮತ್ತು ಪ್ರಕಾಶಕರು

H. M. Shankar Narayan Rao, M.A.
*Professor and Head of the Department of Kannada*
*Sarada Vilas College, Mysore*

ಮೊದಲ ಮುದ್ರಣ 1964



**ಬೆಲೆ : ಸಾಧಾರಣ ಪ್ರತಿ : 15-00**
**ಕ್ಯಾಲಿಕೊ ಪ್ರತಿ : 20-00**

ಮುದ್ರಕರು

ಜಿ. ಹೆಚ್. ರಾಮರಾವ್

ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್

ಮೈಸೂರು

A. R. KRISHNA SASTRI, M.A., D. LITT.
*Professor of Kannada (Rtd)* UNIVERSITY OF MYSORE

31, SECOND CROSS ROAD, BASAVANAGUDI
BANGALORE 4
12-12-1960

ಶ್ರೀಮಾನ್ ಶಂಕರನಾರಾಯಣರಾಯರ ಸ. ಕ್ಕೆ. ಕೃಷ್ಣಶಾಸ್ತ್ರಿಯ ವಿಜ್ಞಾಪನೆಗಳು.

ನೀವು ಶ್ರೀ ಕೆ. ವೆಂಕಟರಾಮಪ್ಪ, ಎಂ.ಎ. ಅವರ ಸಂಪಾದಕತ್ವದಲ್ಲಿ ನಿತ್ಯಾತ್ಮ ಶುಕಯೋಗಿಯ ಕನ್ನಡ ಭಾಗವತವನ್ನು ಪ್ರಕಟಿಸುವಿರೆಂದು ತಿಳಿದು ಸಂತೋಷವಾಯಿತು. ಈ ಗ್ರಂಥದ ಪರಿಷ್ಕೃತ ಉತ್ತಮ ಮುದ್ರಣವೊಂದು ಆವಶ್ಯಕವಾಗಿತ್ತು. ನಿಮ್ಮ ಪ್ರಕಟನೆಗಳ ಗ್ರಂಥಶುದ್ಧಿ, ಕಾಗದ, ಮುದ್ರಣ, ಅಚ್ಚುಕಟ್ಟು ಎಲ್ಲಾ ಚೆನ್ನಾಗಿರುತ್ತವೆ.

ಭಾರತ, ರಾಮಾಯಣ, ಭಾಗವತಗಳು ಹಿಂದೂಜನರಿಗೆ ಪೂಜ್ಯವಾದ ಗ್ರಂಥಗಳು ; ಇಹಪರ ಸಾಧಕವಾದುವು. ಭಾಗವತವು ಭಾರತದಷ್ಟು ಲಲಿತವಲ್ಲ. ಆದರೆ ವೆಂಕಟರಾಮಪ್ಪನವರು ಅದರಲ್ಲಿ 'ಕೃಷ್ಣ ಚರಿತ್ರೆ'ಗಾಗಿ ಆಗಲೇ ಪರಿಶ್ರಮ ಮಾಡಿದ್ದಾರೆ. ಅದರ ಭಾವ ಭಾಷೆಗಳು ಅವರಿಗೆ ಚೆನ್ನಾಗಿ ಪರಿಚಿತವಾಗಿವೆ. ಹೊಸದಾಗಿ ಅದರ ಕೆಲವು ಹಸ್ತ ಪ್ರತಿಗಳನ್ನು ಅವರು ದೊರಕಿಸಿಕೊಂಡಿದ್ದಾರೆಂದು ತಿಳಿಯುತ್ತದೆ. ಆದ್ದರಿಂದ ಗ್ರಂಥವು ಕ್ಷಿಪ್ರವಾಗಿಯೂ ಶ್ಲಾಘ್ಯವಾಗಿಯೂ ಬರುವುದನ್ನು ಎದುರು ನೋಡುತ್ತಿದ್ದೇನೆ.

ಶ್ರೀಮದ್ಭಾಗವತದ ದಿವ್ಯನಾಯಕನಾದ ಶ್ರೀ ಕೃಷ್ಣನು ನಿಮಗೆ ಬೇಕಾದ ಎಲ್ಲಾ ಸೌಕರ್ಯಗಳನ್ನು ಒದಗಿಸಿ ಕೊಡಲಿ ; ಹಿಡಿದಿರುವ ದೊಡ್ಡ ಕಾರ್ಯವನ್ನು ನಡೆಸಿ ಕೊಡಲಿ,

ಎಂದು ಪ್ರಾರ್ಥಿಸುವ
ತಮ್ಮ
ಎ. ಆರ್. ಕೃಷ್ಣಶಾಸ್ತ್ರೀ

# ಈ ಮಾಲೆಯ ಸಂಪಾದಕರ ಮಾತು

ಕುಮಾರವ್ಯಾಸನ ಗದುಗಿನ ಭಾರತ, ಕುಮಾರವಾಲ್ಮೀಕಿಯ ತೊರವೆಯ ರಾಮಾಯಣಗಳಂತೆ, ಚಾಟು ವಿಠಲನಾಥನಿಂದ ರಚಿತವಾದುದೆಂದು ಪ್ರತೀತಿಯಿರುವ ಕನ್ನಡಭಾಗವತವೂ ಕನ್ನಡಿಗರಿಗೆ-ಅದರಲ್ಲಿಯೂ ವೈಷ್ಣವ ಪಂಥದವರಿಗೆ-ತುಂಬ ಪ್ರಿಯವೂ ಪೂಜ್ಯವೂ ಆದ ಗ್ರಂಥ. ಭಾಮಿನೀಷಟ್ಪದಿಯಲ್ಲಿ ರಚಿತವಾದ ಈ ಗ್ರಂಥ, ಗಾತ್ರ ದಲ್ಲಿ ಕನ್ನಡ ಭಾರತಕ್ಕೆ ಒಂದೂವರೆಯಷ್ಟಿದೆ. ನನಗೆ ತಿಳಿದಂತೆ ಈ ಗ್ರಂಥವನ್ನು ೧೯೩೮ರಲ್ಲಿ ಬೆಂಗಳೂರಿನಲ್ಲಿ ಅಚ್ಚುಮಾಡಲಾಗಿತ್ತು. ಮುದ್ರಣಕ್ಕಾಗಿ ಉಪಯೋಗಿಸಿದ ಕಾಗದ ಅಷ್ಟೇನೂ ಉತ್ತಮವಾದುದಲ್ಲ; ಪದ್ಯ ಗಳನ್ನು ಆರು ಸಾಲಾಗಿ ಅಚ್ಚಿಟ್ಟಿರುವುದಿಲ್ಲ; ಸಾಕಷ್ಟು ತಪ್ಪುಗಳಿರುವ ಈ ಸಂಸ್ಕರಣದಲ್ಲಿ ಶಕಟರೇಫವನ್ನು ಬಳಸಿಲ್ಲ. ಆದರೂ ಈ ಮಹಾಗ್ರಂಥವನ್ನು ಒಂದೇ ಸಂಪುಟದಲ್ಲಿ ಅಡಕವಾಗಿ ಕನ್ನಡಿಗರಿಗೆ ಒದಗಿಸಿಕೊಟ್ಟುದು ಒಂದು ಮಹಾಸಾಹಸದ ಕೆಲಸವೆಂದೇ ಹೇಳಬೇಕು. ಇದಕ್ಕಾಗಿ ಕನ್ನಡಿಗರು ಪ್ರಕಾಶಕರಿಗೆ ಕೃತಜ್ಞರಾಗಿರಬೇಕು. ಆದರೆ ಈಗ ಈ ಗ್ರಂಥದ ಪ್ರತಿಗಳೂ ದುರ್ಲಭವಾಗಿವೆ.

ಈ ಅಂಶವನ್ನು ಮನಸ್ಸಿಗೆ ತಂದುಕೊಂಡು ಶ್ರೀ ಕೆ. ವೆಂಕಟರಾಮಪ್ಪ, ಎಂ.ಎ. ಅವರ ಸಂಪಾದಕತ್ವ ದಲ್ಲಿ, ಮಹಾಗ್ರಂಥವಾದ ಕನ್ನಡ ಭಾಗವತವನ್ನು ಆರು ಸಂಪುಟಗಳಲ್ಲಿ ಅಚ್ಚಿಡಲು ಸಂಕಲ್ಪಮಾಡಿದೆ. ಪ್ರತಿ ಸಂಪುಟವನ್ನೂ ಹಳೆಯ ಓಲೆಯ ಪ್ರತಿಗಳಿಂದ ಸಂಪಾದಿಸಿ, ಪೀಠಿಕೆ ಶಬ್ದಕೋಶಗಳೊಡನೆ ಹೊರತರಲಾಗುತ್ತದೆ. ಈ ದಾರಿಯಲ್ಲಿ ನಡೆದು ಈಗಾಗಲೇ ಗ್ರಂಥದ ಪ್ರಥಮ ದ್ವಿತೀಯ ಸ್ಕಂಧಗಳು ಪ್ರಥಮಸಂಪುಟವಾಗಿ ಹೊರಬಂದಿವೆ. ಈಗ ಬಹು ಜನರ ಬಯಕೆಯಂತೆ, ಶ್ರೀ ಕೃಷ್ಣಾವತಾರ ಕಥೆಯನ್ನೊಳಗೊಂಡ ಐದನೆಯ ಸಂಪುಟವಾದ ದಶಮ ಸ್ಕಂಧವನ್ನು ಪ್ರಕಟಿಸಿದೆ. ಇದರಲ್ಲಿರುವ ಗುಣವನ್ನು ಬಲ್ಲವರು ಗ್ರಹಿಸಬೇಕು; ದೋಷಗಳನ್ನು ಮನ್ನಿಸ ಬೇಕು.

ಈ ಸಂದರ್ಭದಲ್ಲಿ ಈ ಗ್ರಂಥದ ಪ್ರಕಟನೆಯ ವಿಷಯವಾಗಿಯೂ, ನನ್ನ ಪ್ರಕಟನೆಗಳ ವಿಚಾರವಾಗಿಯೂ ಕೆಲವು ಮಾತುಗಳನ್ನು ಮಹಾಜನರ ಗಮನಕ್ಕೆ ತರಬಯಸುತ್ತೇನೆ.

ಕನ್ನಡ ಭಾಗವತದ ಪ್ರಕಟನೆಯನ್ನೇನೋ ಕೈಕೊಂಡಿದ್ದಾಯಿತು. ಆದರೆ ಅಚ್ಚು ಮುಂದುವರಿದಂತೆಲ್ಲ, ಈ ಕಾರ್ಯ ಬಹುಧನ ಸಾಧ್ಯವಾದದ್ದು, ಒಬ್ಬ ವ್ಯಕ್ತಿ ಮಾಡತಕ್ಕದ್ದಲ್ಲ, ಸಾಹಿತ್ಯಪರಿಷತ್ತಿನಂತಹ, ವಿಶ್ವ ವಿದ್ಯಾನಿಲಯದಂತಹ ಒಂದು ಸಂಸ್ಥೆ ಕೈಕೊಳ್ಳತಕ್ಕದ್ದು ಎಂಬ ಅಂಶ ಬಹುಬೇಗ ಅರಿವಾಯಿತು. ಆದರೇನು? ಕೈಕೊಂಡ ಕೆಲಸವನ್ನು ಮಧ್ಯದಲ್ಲಿ ನಿಲ್ಲಿಸಲಾದೀತೇ? ಈ ಸಂಪುಟಕ್ಕೆ ವಿಶೇಷದ್ರವ್ಯ ಬೇಕೆಂಬ ಅಂಶವನ್ನು ಮನಸ್ಸಿಗೆ ತಂದುಕೊಂಡು ಚಂದಾದಾರರನ್ನು ಕೂಡಿಸಬೇಕೆಂದು ಸಂಕಲ್ಪಿಸಲಾಯಿತು. ಅನೇಕ ಮಹನೀಯರು ತಾವಾಗಿಯೇ ಮುಂದೆ ಬಂದು ಪೋಷಕರಾಗಿ, ಹಿತೈಷಿಗಳಾಗಿ, ಚಂದಾದಾರರಾಗಿ ಸಹಾಯಮಾಡಿ ಪ್ರೋತ್ಸಾ ಹಿಸಿದ್ದಾರೆ. ಇವರಲ್ಲಿ ಮುಸಲ್ಮಾನ್ ಹಾಗೂ ಕ್ರಿಶ್ಚಿಯನ್ ಬಂಧುಗಳಿರುವುದೂ ಒಂದು ಹೆಮ್ಮೆಯ ವಿಷಯ. ಈ ಮಹನೀಯರ ಹೆಸರುಗಳನ್ನು ಗ್ರಂಥದ ಕೊನೆಯಲ್ಲಿ ಕೊಟ್ಟಿದೆ.

ಮೈಸೂರಿನ ಅರಸುಮನೆತನ ಬಹಳ ಕಾಲದಿಂದಲೂ ವಿದ್ವತ್ತಿಗೂ, ಕವಿಜನಾಶ್ರಯಕ್ಕೂ, ಔದಾ ರ್ಯಕ್ಕೂ ಪ್ರಖ್ಯಾತವಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಆಳಿದ ಮಹಾಸ್ವಾಮಿಯವರಾದ ಶ್ರೀ ಚಿಕ್ಕದೇವ ರಾಯರ ಒಡೆಯರ, ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ, ಶ್ರೀ ಚಾಮರಾಜ ಒಡೆಯರ, ಶ್ರೀ ನಾಲ್ವಡಿ ಕೃಷ್ಣ ರಾಜ ಒಡೆಯರ ಹೆಸರುಗಳು ರತ್ನದಂತಹ ಹೆಸರುಗಳು. ಚಿಕ್ಕದೇವರಾಯರೂ ಮುಮ್ಮಡಿ ಕೃಷ್ಣರಾಜ ಒಡೆ ಯರೂ ಕನ್ನಡದಲ್ಲಿ ಗ್ರಂಥಗಳನ್ನು ರಚಿಸಿರುವುದಲ್ಲದೆ, ವಿದ್ವಾಂಸರಿಗೂ ಕವಿಗಳಿಗೂ ಪ್ರೋತ್ಸಾಹಕೊಟ್ಟು, ಕೃತಿ ರಚನೆ ಮಾಡಿಸಿ, ಕನ್ನಡ ದೇವಿಗೆ ಹೊಂದೊಡಗೆ ತೊಡಿಸಿ, ಕನ್ನಡದ ತೇರನ್ನು ಮುಂದೆಳೆದರು. ಶ್ರೀ ಚಾಮ ರಾಜ ಒಡೆಯರಾದರೊ ಕನ್ನಡದಲ್ಲಿ ನಾಟಕಗಳಿಲ್ಲದ ಕೊರತೆಯನ್ನು ಮನಗಂಡು, ವಿದ್ವಾಂಸರಿಂದ ಇಂಗ್ಲಿಷ್ ಸಂಸ್ಕೃತ ಭಾಷೆಗಳಿಂದ ನಾಟಕಗಳನ್ನು ಕನ್ನಡಿಸಿ, ಆಡಿಸಿ, ಕನ್ನಡ ಸಾಹಿತ್ಯದ ಈ ಭಾಗವನ್ನು ಪುಷ್ಟಿಗೊಳಿಸಿದರು. ಈ ಅಂಶ ಲೋಕವಿದಿತವಾಗಿದೆ. ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಂತೂ ಮೈಸೂರು ವಿಶ್ವವಿದ್ಯಾ

ನಿಲಯ ಕನ್ನಡಸಾಹಿತ್ಯ ಪರಿಷತ್ತುಗಳು ಸ್ಥಾಪಿತವಾಗಿ, ಹೊಸಗನ್ನಡ ಸಾಹಿತ್ಯದಲ್ಲಿ ವಸಂತಮಾಸ ತಲೆದೋರಿತು. ರಾಜಾಶ್ರಯ ಅನೇಕ ವಿದ್ವಾಂಸರಿಗೆ ಕವಿಗಳಿಗೆ ಲೇಖಕರಿಗೆ ಕಲ್ಪವೃಕ್ಷದಂತಾಯಿತು. ತಮ್ಮ ಹಿರಿಯರ ಮೇಲ್ಪಂಕ್ತಿಯನ್ನೇ ಅನುಸರಿಸಿ ನಾಡುನುಡಿಗಳ ಸೇವೆಗೆ ಬದ್ಧಕಂಕಣರಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಂದ್ರ ವೊಡೆಯರು ವಿದ್ವಾಂಸರಿಂದ ಋಗ್ವೇದವನ್ನೂ, ಉಪನಿಷತ್ತುಗಳನ್ನೂ, ಪುರಾಣಗಳನ್ನೂ ಕನ್ನಡಕ್ಕೆ ಅನುವಾದ ಮಾಡಿಸಿ, ಕನ್ನಡ ಜನತೆಯ ವಿಶೇಷ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಅಲ್ಲದೆ ಪಾಶ್ಚಾತ್ಯ ದೇಶಗಳಲ್ಲಿ ಭಾರತೀಯ ಸಂಸ್ಕೃತಿಯ ರಾಯಭಾರಿಗಳಾಗಿದ್ದಾರೆ ನಮ್ಮ ಮಹಾರಾಜರು. ವಿದ್ವಾಂಸರೂ ಗ್ರಂಥಕರ್ತರೂ ಆಗಿರುವ ಮಹಾಸ್ವಾಮಿಯವರ ವಿದ್ಯಾಪಕ್ಷಪಾತವೂ ಔದಾರ್ಯವೂ ಲೋಕಪ್ರಸಿದ್ಧವಾಗಿವೆ. ಮಹಾಸ್ವಾಮಿಯವರಿಗೆ ಈ ಕಾರ್ಯದ ಸ್ವರೂಪವನ್ನು ನಾನು ನಿವೇದಿಸಿಕೊಂಡಾಗ, ಇದನ್ನು ಅವರು ತಮ್ಮ ದಿವ್ಯಚಿತ್ತಕ್ಕೆ ತಂದುಕೊಂಡು, ಈ ಕೆಲಸ ಸುಗಮವಾಗುವಂತೆ ಒಂದು ಸಾವಿರ ರೂಪಾಯಿಗಳನ್ನು ಅನುಗ್ರಹಿಸಿದರು. ಮಹಾಸ್ವಾಮಿಯವರ ಈ ಒಂದು ಅನುಗ್ರಹಕ್ಕೆ, ಕೃಪೆಗೆ ನಾನು ಪ್ರಭುಗಳಿಗೆ ಅತ್ಯಂತ ಕೃತಜ್ಞನಾಗಿದ್ದೇನೆ. ಮಹಾಸ್ವಾಮಿಯವರಿಗೂ, ಅವರ ಕುಟುಂಬವರ್ಗಕ್ಕೂ ಆಯುರಾರೋಗ್ಯಗಳನ್ನು ದಯಪಾಲಿಸಲೆಂದು ನನ್ನ ಇಷ್ಟದೈವವೂ ಕುಲದೈವವೂ ಆದ ಹರಿಹರದ ಹರಿಹರೇಶ್ವರನನ್ನು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಇನ್ನೊಂದು ವಿಷಯ. ಶ್ರೀ ಮನ್ಮಹಾರಾಜರವರಿಂದ ಈ ಸಹಾಯವನ್ನು ಒದಗಿಸಿಕೊಡುವುದರಲ್ಲಿ ನನ್ನ ಮಾನ್ಯ ಮಿತ್ರರೂ, ಮಹಾರಾಜರವರ ಆಪ್ತ ಕಾರ್ಯದರ್ಶಿಗಳೂ ಆಗಿದ್ದ ಶ್ರೀ. ಡಿ.ಜೆ. ಬಾಲರಾಜ್, ಬಿ.ಎಸ್.ಸಿ. ಐ. ಎ. ಎಸ್. ಅವರು ನನ್ನ ಮೇಲಣ ಅಭಿಮಾನದಿಂದ, ಈ ವಿಷಯದಲ್ಲಿ ತುಂಬ ಆಸಕ್ತಿ ವಹಿಸಿ, ಈ ನೆರವನ್ನು ಆಗಮಾಡಿಸಿದ್ದಾರೆ. ಇಷ್ಟೇ ಅಲ್ಲದೆ ನನ್ನಲ್ಲಿ ಅವರಿಗಿರುವ ಅಭಿಮಾನ ವಿಶ್ವಾಸಗಳು ಅನೇಕ ಸಂದರ್ಭಗಳಲ್ಲಿ ಸುವ್ಯಕ್ತವಾಗಿವೆ. ಇದಕ್ಕಾಗಿ ನಾನು ಅವರಿಗೆ ಚಿರಋಣಿ. ಹಾಗೇಯೇ ಮಹಾರಾಜರವರ ಉಪಕಾರ್ಯದರ್ಶಿಗಳಾದ ಶ್ರೀ ಎಂ. ಎಸ್. ನಾರಾಯಣಸ್ವಾಮಿ, ಎಂ.ಎ. ಅವರೂ ಸಹ ಈ ಕಾರ್ಯದಲ್ಲಿ ವಿಶೇಷ ಆಸಕ್ತಿಯನ್ನೂ ಆದರಾಭಿಮಾನಗಳನ್ನೂ ವ್ಯಕ್ತಪಡಿಸಿದ್ದಾರೆ. ಈ ಇಬ್ಬರು ಮಹನೀಯರ ನೆರವಿರದಿದ್ದ ಪಕ್ಷದಲ್ಲಿ ಈ ಸಾಹಿತ್ಯ ರಥವನ್ನು ಸುಗಮವಾಗಿ ಎಳೆದು ದಡಕ್ಕೆ ತಂದು ನಿಲ್ಲಿಸಲು ಖಂಡಿತ ಸಾಧ್ಯವಾಗುತ್ತಿರಲಿಲ್ಲ. ಇದೂ ಅಲ್ಲದೆ ಮಹಾಜನರಿಂದ ನನಗೆ ಸಹಾಯವನ್ನು ಒದಗಿಸಿಕೊಡುವುದರಲ್ಲಿ ನನ್ನ ಮಿತ್ರರಾದ ಸರ್ವಶ್ರೀ ಎಮ್. ಎನ್. ರಾಮಚಂದ್ರ ಜೋಯಿಸ್, ಎಸ್. ಎನ್. ಶಂಕರ್, ಎ. ವಿ. ನಾರಾಯಣರಾವ್, ಜಿ. ನಾರಾಯಣ ದೀಕ್ಷಿತ್, ಜಿ. ಮಾಧವ ನಾಯಕ್, ಟಿ. ಎಸ್. ರಾಘವಾಚಾರ್, ಟಿ. ವಿ. ಶ್ರೀನಿವಾಸರಾವ್, ವೇದಾಂತ ಹೆಮ್ಮಿಗೆ, ಇವರುಗಳು ತುಂಬ ಸಹಾಯ ಮಾಡಿದ್ದಾರೆ. ಈ ಎಲ್ಲ ಮಹನೀಯರಿಗೆ ಈ ಮೂಲಕ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇನೆ.

ಕೊನೆಯದಾಗಿ ಒಂದು ವಿಷಾದದ ಮಾತು. ಈ ನನ್ನ ಉದ್ಯಮವನ್ನು ತುಂಬುಮನಸ್ಸಿನಿಂದ ಹರಸಿ, ಧನಸಹಾಯ ಮಾಡಿದ ನನ್ನ ವಿದ್ಯಾಗುರುಗಳಾದ ಶ್ರೀ. ಎಸ್. ವಿ. ಶ್ರೀನಿವಾಸರಾಯರು ದೂರದ ದೇಶವಾದ ಟೆಹರಾನಿನಲ್ಲಿ ಮರಣಹೊಂದಿದುದು ಸಂಕಟದ ಸಂಗತಿ. ಹಾಗೆಯೇ ದಾವಣಗೆರೆಯ ಡಿ. ಇ. ಎ. ಶಾಲೆಯ ಮುಖ್ಯೋಪಾಧ್ಯಾಯರೂ, ಮೈಸೂರಿನ ಕೃಷ್ಣಮೂರ್ತಿಪುರದ ಮೀನಾಕ್ಷೀ ಭವನದ ವ್ಯವಸ್ಥಾಪಕರೂ ಮಿತ್ರರೂ ಆದ ಶ್ರೀ. ಜಿ. ಶೇಷಗಿರಿರಾಯರೂ, ಶ್ರೀ. ಟಿ. ಶ್ರೀನಿವಾಸರಾಯರೂ ಈ ಸಂಪುಟ ಹೊರಬರುವ ಮುನ್ನವೇ ದೈವಾಧೀನರಾದುದು ತುಂಬ ದುಃಖದ ಸಂಗತಿ. ಈ ಮಾಲೆಯ ಸಂಪಾದಕನು ಈ ಮಹನೀಯರಿಂದ ಆದ ಸಹಾಯವನ್ನು ನೆನೆಯುತ್ತ, ಅವರ ಅಕಾಲಮರಣಕ್ಕಾಗಿ ಕಣ್ಣೀರಿಡುತ್ತ, ಅವರ ಆತ್ಮಕ್ಕೆ ಶಾಂತಿಯನ್ನು ಕೋರುತ್ತಾನೆ.

ಈ ಗ್ರಂಥದ ಪ್ರಕಟನೆಯಿಂದ ಬರಬಹುದಾದ ಲಾಭಾಂಶ ಭಾಗವತದ ಮಿಕ್ಕ ಸಂಪುಟಗಳ ಪ್ರಕಟನೆಗೂ ನಮ್ಮ ಕಾಲೇಜಿನ ಬಡಹುಡುಗರಿಗೆ ಸಹಾಯಮಾಡುವುದಕ್ಕೂ ಉಪಯೋಗವಾಗುತ್ತದೆಯೆಂಬ ಅಂಶವನ್ನು ಈ ಮೂಲಕ ಮಹಾಜನರ ಗಮನಕ್ಕೆ ತರಬಯಸುತ್ತೇನೆ.

* * * * *

ನನ್ನ ಸಾಹಿತ್ಯಮಾಲೆ ಆರಂಭವಾಗಿ ಹನ್ನೆರಡು ವರ್ಷಗಳಾದವು. ಉತ್ತಮ ಗ್ರಂಥಗಳನ್ನೇ ಅಚ್ಚಿಡಬೇಕೆಂಬ ಏಕೈಕ ಧ್ಯೇಯದಿಂದ ಸುಪ್ರಸಿದ್ಧ ವಿದ್ವಾಂಸರ, ಕವಿಗಳ, ಲೇಖಕರ ನೆರವನ್ನು ಪಡೆದು, ಒಬ್ಬಂಟಿಗನಾಗಿ ಕೆಲಸಮಾಡಿ, ನೂರಕ್ಕೂ ಮೇಲ್ಪಟ್ಟು ಗ್ರಂಥಗಳನ್ನು ಪ್ರಕಟಿಸಿದ್ದೇನೆ. ಇದುವರೆವಿಗೂ ನನ್ನಿಂದ ಪ್ರಕಟವಾಗಿರುವ ಗ್ರಂಥಗಳಲ್ಲಿ ವಿಸ್ತಾರವಾದ ಪೀಠಿಕೆ ಶಬ್ದಕೋಶಗಳಿಂದ ಕೂಡಿದ, ಸುಸಂಪಾದಿತವಾದ ಹಳಗನ್ನಡ ನಡುಗನ್ನಡ ಗ್ರಂಥಗಳಿವೆ. ಸ್ಕಾಟ್, ಜೇನ್ ಆಸ್ಟಿನ್, ಪ್ಲೇಟೊ, ಭಾರವಿ, ಕಾಳಿದಾಸ, ಭವಭೂತಿ, ಭಾಸ, ಶೂದ್ರಕ ಇವರೇ ಮೊದಲಾದ ಪ್ರಸಿದ್ಧ ಇಂಗ್ಲಿಷ್ ಸಂಸ್ಕೃತ ಲೇಖಕರ ಗ್ರಂಥಗಳ ಅನುವಾದಗಳಿವೆ. ಅನೇಕ ವಿದ್ವತ್ಪತ್ರಿಕೆಗಳಲ್ಲಿ ಚದುರಿ ಹೋಗಿ, ಈಗ ಸುಲಭವಾಗಿ ಸಿಕ್ಕದೆ ಇರುವ, ಆದರೆ ವಿದ್ವಾಂಸರಿಗೂ, ಕನ್ನಡದ ಪ್ರೌಢವಿದ್ಯಾರ್ಥಿಗಳಿಗೂ ಅತ್ಯವಶ್ಯಕವಾಗಿ ಬೇಕಾಗಿರುವ, ಡಾ. ಎ. ಆರ್. ಕೃ., ಪ್ರೊ. ತೀ. ನಂ. ಶ್ರೀ., ಪ್ರೊ. ಡಿ. ಎಲ್. ಎನ್., ಈ ವಿದ್ವಾಂಸರ ವಿದ್ವತ್ಪೂರ್ಣವಾದ ಲೇಖನಗಳ ಸಂಪುಟಗಳಿವೆ. ಹಿರಿಯ ವಿಮರ್ಶಕರಾದ ಪ್ರೊ. ಎಸ್. ವಿ. ರಂಗಣ್ಣನವರ 'ಹೊನ್ನಶೂಲ' 'ಕಾಳಿದಾಸನ ನಾಟಕಗಳ ವಿಮರ್ಶೆ' ಯಂತಹ ಪ್ರಬಂಧ ಸಂಪುಟಗಳಿವೆ. ಎಲ್ಲಕ್ಕೂ ಮಿಗಿಲಾಗಿ ನನ್ನಿಂದ ಪ್ರಕಟವಾಗಿರುವ ಡಾ. ಕೆ. ಕೃಷ್ಣಮೂರ್ತಿಗಳ ಭಾಮಹ, ದಂಡಿ, ವಾಮನ, ಆನಂದವರ್ಧನ, ಕ್ಷೇಮೇಂದ್ರ, ಮಮ್ಮಟ—ಇವರೇ ಮೊದಲಾದ ಸುಪ್ರಸಿದ್ಧ ಆಲಂಕಾರಿಕರ ಗ್ರಂಥಗಳ ಅನುವಾದಗಳು ಕನ್ನಡದಲ್ಲಿ ಅಲಂಕಾರಗ್ರಂಥಗಳಿಲ್ಲದ ಕೊರತೆಯನ್ನು ತುಂಬಿಕೊಟ್ಟು, ಕನ್ನಡದ ವಿದ್ಯಾರ್ಥಿಗಳಿಗೆ ತುಂಬ ಉಪಯುಕ್ತವಾಗಿದೆ ಎಂದು ಹೇಳಿದರೆ, ಇದನ್ನು ಅಹಂಕಾರದ ಮಾತೆಂದು ಯಾರೂ ಭಾವಿಸಬಾರದು. ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ 'ಶಬ್ದಮಣಿದರ್ಪಣಂ' 'ವಡ್ಡಾರಾಧನೆ' ಎಂಬ ಗ್ರಂಥಗಳು ವಿದ್ಯಾರ್ಥಿಗಳಿಗೆ ದೊರಕದಿದ್ದಾಗ, ಅವುಗಳನ್ನು ಧೈರ್ಯಮಾಡಿ ಅಚ್ಚಿಡಿಸಿದ್ದೇನೆ. ಈ ತೆರನಾದ ಗ್ರಂಥಗಳನ್ನು ವಿಶೇಷವಾದ ಅಚ್ಚಿನ ಮೊಳೆಗಳ ವ್ಯವಸ್ಥೆಯುಳ್ಳ, ಅಚ್ಚುಕೂಟಗಳಲ್ಲಿಯೇ ಅಚ್ಚು ಮಾಡಿಸಬೇಕು. ಈ ಗ್ರಂಥಗಳ ಮಾರಾಟಕ್ಕೆ ಕನಿಷ್ಠಪಕ್ಷ ಹತ್ತುವರ್ಷಗಳಾದರೂ ಕಾಯಬೇಕು. ಪ್ರಕಾಶಕರು ಕಾಗದಕ್ಕೆ, ಅಚ್ಚುಕೂಟಕ್ಕೆ, ಲೇಖಕರಿಗೆ ಕೊಡುವುದು ಇಡಿಗಂಟು; ಆದರೆ ಈ ಗ್ರಂಥಗಳ ಮಾರಾಟದಿಂದ ಬರುವುದು ಪುಡಿಗಂಟು. ಮೇಲಾಗಿ ಪುಸ್ತಕವ್ಯಾಪಾರಿಗಳು ವಿಶೇಷರೀತಿಯ ದಳ್ಳಾಳಿಯನ್ನು ಬಯಸುತ್ತಾರೆ. ಕ್ರಿಮಿ ಕೀಟಗಳಿಂದ, ಮಾಸಲಾಗುವ ಪ್ರತಿಗಳಿಂದ ಆಗುವ ನಷ್ಟ ಕಡಿಮೆಯಾದುದೇನೂ ಅಲ್ಲ.[1] ಒಂದು ಪುಸ್ತಕ ಹೊರಬರಬೇಕಾದರೆ ನನ್ನ ತೆರದ ಪ್ರಕಾಶಕರು ಗ್ರಂಥಕರ್ತರ ಉದ್ದಕ್ಕೂ ಕರಡುಪ್ರತಿಯನ್ನು ನೋಡಬೇಕು, ಗ್ರಂಥಕರ್ತರ ಮನೆಗೆ ಅಚ್ಚುಕೂಟಕ್ಕೆ ಕಾಲು ಸವೆಯಿಸಬೇಕು. ಪುಸ್ತಕ ಹೊರಬಿದ್ದ ಮೇಲೆ ಅಂಗಡಿಯಿಂದ ಅಂಗಡಿಗೆ ಅಲೆದು, ಬಾಕಿ ವಸೂಲಾಗದೆ ನಿರಾಶೆಪಡುವ ಸಂಕಟವನ್ನು ಅನುಭವಿಸಿಯೇ ನೋಡಬೇಕು.[2] ವಿಶೇಷ ಸಂದರ್ಭಗಳಲ್ಲಿ ಲೇಖಕರಿಗೆ ಸಂಭಾವನೆಯನ್ನು ಮುಂಗಡವಾಗಿ ಕೊಟ್ಟು, ಹಾಕಿದ ಬಂಡವಾಳಕ್ಕೆ ಬಡ್ಡಿಯನ್ನು ತೆರುತ್ತ, ಹತ್ತಾರು ವರ್ಷಗಳ ಕಾಲ ಕಾಯುವ ಪ್ರಸಂಗದಿಂದ ಬರುವ ಲಾಭವನ್ನು ವಾಚಕರೇ ಊಹಿಸಿಕೊಳ್ಳಿ!

ಕನ್ನಡ ಪುಸ್ತಕ ಪ್ರಕಾಶನಕ್ಕೆ ಇಷ್ಟು ತೊಂದರೆಯಿದ್ದರೂ, ಧೈರ್ಯಮಾಡಿ ನನ್ನ ಪ್ರಕಾಶನವನ್ನು ಮುಂದುವರಿಸಿಕೊಂಡು ಹೋಗಲು ಮೈಸೂರು ಹಾಗೂ ಕರ್ನಾಟಕ ವಿಶ್ವವಿದ್ಯಾನಿಲಯಗಳ ಕನ್ನಡ ಪಠ್ಯ ಪುಸ್ತಕ ನಿಯಾಮಕ ಸಮಿತಿಯಿಂದ ಬಂದಿರುವ ನೆರವನ್ನು ಇಲ್ಲಿ ವಿಶೇಷ ಕೃತಜ್ಞತೆಯಿಂದ ಸ್ಮರಿಸುವುದು ನನ್ನ ಮೊದಲ ಕರ್ತವ್ಯ. ಗುಣಗ್ರಾಹಿಗಳಾದ ಸಮಿತಿಯವರು ಇತರ ಪ್ರಕಾಶಕರನ್ನು ಪ್ರೋತ್ಸಾಹಿಸಿದಂತೆ ನನ್ನನ್ನು ಪ್ರೋತ್ಸಾಹಿ

---

[1] Enterprising kannada scholors like Mr. H. M. Shankaranarayana Rao, M. A., who have enthusiastically taken to book publication business are caught in a vicious circle. Due to central excise and 'Provincial Sales-Tax' among other things, the cost of paper and printing has become enormously high and books become unsalable if they are priced proportionately. Retail book sellers demand high rate of commission and books on credit sale. Consequent bad debts and loss over unsold copies are not negligible. Shop rent, godown rent, and establishment charges are going up every day.' Dr. A. R. Krishna Sastri, M. A., D. LITT.

[2] ಮುದ್ರಣ, ಪ್ರಕಾಶನ, ಮಾರಾಟ, ಹಣದ ವಸೂಲಿ ಇವು ಯಾವುವೂ ಈಗ ಹಿತವಾಗಿಲ್ಲ, ಡಾ. ಎ. ಆರ್. ಕೃಷ್ಣಶಾಸ್ತ್ರೀ: 'ಭಾಷಣಗಳು ಮತ್ತು ಲೇಖನಗಳು'–ಗ್ರಂಥಕರ್ತನ ವಿಜ್ಞಾಪನೆ.

ಸಿದ್ಧಾರೆ. ಪ್ರತಿಯೊಂದು ತರಗತಿಯ ಮಟ್ಟಕ್ಕೆ, ಯೋಗ್ಯತೆಗೆ ತಕ್ಕಂತೆ ಪುಸ್ತಕಗಳನ್ನು ಆಯ್ಕೆ ಮಾಡುವುದರಲ್ಲಿ ನನ್ನ ಪ್ರಕಟನೆಗಳನ್ನೂ ಲೇಖಕರನ್ನೂ ಗೌರವಿಸಿದ್ದಾರೆ. ಇದೇ ಅಂಶವನ್ನು ಬೇರೊಂದು ರೀತಿಯಲ್ಲಿ ಹೇಳುವುದಾದರೆ ವಿಶ್ವವಿದ್ಯಾನಿಲಯವು ತೋರಿದ ಈ ಗೌರವ ಕಾಳಿದಾಸ ಭವಭೂತಿ ಭಾರವಿಗಳಿಗೆ ; ಪ್ಲೇಟೋ, ಸ್ಕಾಟ್, ಕೆಂಪುನಾರಾಯಣ, ರಾಘವಾಂಕರಿಗೆ. ಇದು ಹೆಮ್ಮೆಯ ವಿಷಯ. ಈ ಗ್ರಂಥಗಳನ್ನು ಪಠನಮಾಡಿದುದಕ್ಕಾಗಿ ನನಗೆ ತಿಳಿದಂತೆ ವಿದ್ಯಾರ್ಥಿಗಳು ಎಂದೂ ವ್ಯಥೆಪಟ್ಟಿಲ್ಲ.

ಆದರೂ ನಿಜಾಂಶವನ್ನು ತಿಳಿಯದೆ ಅನೇಕ ಮಹಸೀಯರು ನನ್ನ ಮೇಲಿನ ಅಸೂಯೆಯಿಂದ ನನ್ನ ಪ್ರಕಟನೆಗಳ ಬೆಲೆ ಹೆಚ್ಚು, ಪದೇ ಪದೇ ಈ ಪ್ರಕಟನೆಗಳೇ ಪಠ್ಯ ಪುಸ್ತಕವಾಗುತ್ತಿವೆಯೆಂದು ಪತ್ರಿಕೆಗಳ ಮೂಲಕ, ವಿಶ್ವವಿದ್ಯಾನಿಲಯಕ್ಕೆ ಬರೆಯುವುದರ ಮೂಲಕ, ವೈಯಕ್ತಿಕವಾಗಿ ನನಗೆ ಅನಾಮಧೇಯ ಪತ್ರಗಳನ್ನು ಬರೆಯುವುದರ ಮೂಲಕ ಅಪಪ್ರಚಾರಮಾಡುತ್ತಿದ್ದಾರೆ. ಈ ವಿಷಯದಲ್ಲಿ ಮಹಾಜನರ ಗಮನಕ್ಕೆ ಒಂದೆರಡು ಅಂಶಗಳನ್ನು ತರಬೇಕಾಗಿದೆ. ನನ್ನ ವ್ಯವಹಾರ ಒಂದು ವಿಧದಲ್ಲಿ ಸರಳವಾಗಿರುವುದರಿಂದಲೂ[3], ಪ್ರಸಿದ್ಧ ಕನ್ನಡಲೇಖಕರು[4] ನನ್ನ ಗುರುಗಳೋ ಇಲ್ಲವೆ ಗೆಳೆಯರೋ ಆಗಿರುವುದರಿಂದಲೂ ನನ್ನ ಮಾಲಿಗೆ ಹಿರಿಮೆ ಬಂದು ಅವು ಪಠ್ಯ ಪುಸ್ತಕಗಳಾದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಇದಕ್ಕಾಗಿ ನಾನು ಯಾವ ಸಮಿತಿಯ ಸದಸ್ಯರನ್ನೂ ಕಂಡು ನನ್ನ ಪ್ರಭಾವವನ್ನು ಬೀರಲು ಯತ್ನಿಸಿಲ್ಲ. ಅದಕ್ಕೆ ಪ್ರತಿಯಾಗಿ ಎಲ್ಲ ಪ್ರಕಾಶಕರಂತೆ ನಾನೂ ನನ್ನ ಪ್ರಕಟನೆಗಳನ್ನು ಸಮಿತಿಯವರ ಗಮನಕ್ಕೆ ತರುವ ಕರ್ತವ್ಯವನ್ನು ಮಾಡಿದ್ದೇನೆ. ದೇಶದ ಬೇರೆ ಬೇರೆ ವಿಶ್ವ ವಿದ್ಯಾನಿಲಯದಿಂದ ಬರುವ ವಿದ್ವಾಂಸರಾದ ಎಂಟು ಜನರಿರುವ ಸಮಿತಿಯ ಮೇಲೆ ಪ್ರಭಾವ ಬೀರುವ ಮಾತನ್ನಾಡುವುದು ಹುಚ್ಚುತನವೇ ಸರಿ. ಒಂದು ವೇಳೆ ಪಠ್ಯಪುಸ್ತಕದ ಪ್ರೋತ್ಸಾಹ ದೊರಕದಿದ್ದರೂ ನನ್ನ ಸಾಹಿತ್ಯ ರಥ ಮುಂದೆ ಹೋಗುತ್ತಿತ್ತು. ಕನ್ನಡದಲ್ಲಿ ಸಂಸ್ಕೃತ ಅಲಂಕಾರ ಗ್ರಂಥಗಳ ಅನುವಾದಗಳನ್ನು ತರಬೇಕೆಂಬ ನನ್ನ ಹೆಬ್ಬಕೆಯನ್ನು ಖಂಡಿತವಾಗಿ ಬಿಟ್ಟುಕೊಡುತ್ತಿರಲಿಲ್ಲ. ಈ ಪ್ರೋತ್ಸಾಹದಿಂದ ನನ್ನ ಕಾರ್ಯ ಬಹುಮಟ್ಟಿಗೆ ಸುಗಮವಾಯಿತು. ಇನ್ನೊಂದು ವಿಷಯ. ಒಂದು ಗ್ರಂಥ ಪಠ್ಯ ಪುಸ್ತಕವಾದರೆ ಅದರ ಲಾಭದ ಬಹ್ವಂಶ ಲೇಖಕರಿಗೆ ಸಂಭಾವನೆಯ ರೂಪದಲ್ಲಿ ಸಲ್ಲುತ್ತದೆ. ಇಷ್ಟೇ ಪ್ರತಿಗಳು ಬೇಕೆಂಬ ಅರಿವಾಗದೆ, ಹೆಚ್ಚು ಪ್ರತಿಗಳನ್ನು ಅಚ್ಚಿಟ್ಟು, ಅವು ಮಾರಾಟವಾಗದೆ, ಸಾವಿರಾರು ಪ್ರತಿಗಳು ಉಳಿದ ಎಷ್ಟೋ ಪಠ್ಯಗ್ರಂಥಗಳು ನಾಲ್ಕಾರು ವರ್ಷಗಳಿಂದ ನನ್ನ ಬಳಿ ಇವೆ. ಇದನ್ನು ನಷ್ಟವೆಂದು ಪರಿಗಣಿಸಬೇಕಲ್ಲವೆ? ಇವು ಮಾರಾಟವಾಗಬೇಕಾದರೆ ನಾಲ್ಕಾರು ವರ್ಷ ಕಾದು ವಿಶೇಷವಾದ ದಳ್ಳಾಳಿಯನ್ನು ತೆರಬೇಕು. ಇನ್ನು ಬೆಲೆಯ ವಿಚಾರ: ಡಾ. ಸುಕ್ತಂಕರ್ ಅವರು ಹೇಳುವಂತೆ ಒಳ್ಳೆಯ ಲೇಖಕ, ಕಾಗದ ಮುದ್ರಣಗಳು ಬೇಕಾದರೆ ಸ್ವಲ್ಪ ಹೆಚ್ಚು ಬೆಲೆ ಕೊಡಬೇಕಾಗುವುದು ಅನಿವಾರ್ಯ. ವಿಶೇಷವಾಗಿ ಮೈಸೂರಿನ ವೆಸ್ಲಿಪ್ರೆಸ್, ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿನಲ್ಲಿ ಮುದ್ದಾಗಿ ಅಚ್ಚಾಗಿರುವ ನನ್ನ ಪ್ರಕಟನೆಗಳಿಗೆ—ಅವು ಪಠ್ಯ ಪುಸ್ತಕವಾಗಲಿ ಆಗದಿರಲಿ—ಒಂದು ಮಟ್ಟದಲ್ಲಿ ಬೆಲೆಯನ್ನು ಗೊತ್ತುಮಾಡಿರುತ್ತೇನೆ. ಪಠ್ಯ ಪುಸ್ತಕವಾಯಿತೆಂದು ಬೆಲೆಯನ್ನು ಎಂದೂ ಹೆಚ್ಚುಮಾಡಿಲ್ಲ. ಮೇಲಾಗಿ ಗ್ರಂಥಕ್ಕೆ ಬೆಲೆಯನ್ನು ನಿಗದಿ ಮಾಡುವುದು ನನ್ನನ್ನೇ ಅವಲಂಬಿಸಿರುವುದಿಲ್ಲ. ಗ್ರಂಥಕರ್ತರನ್ನೂ ಅನೇಕ ವೇಳೆ ದೆಹಲಿಯ ಸಾಹಿತ್ಯ ಅಕಾದೆಮಿಯಂತಹ ಸಂಸ್ಥೆಯನ್ನೂ ಅವಲಂಬಿಸಿರುತ್ತದೆ. ಈ ಎಲ್ಲ ಅಂಶಗಳನ್ನು ಮನಸ್ಸಿಗೆ ತಂದುಕೊಂಡು, ಮಹಾಜನರು ನನ್ನ ಪ್ರಕಟನೆಗಳ ವಿಷಯದಲ್ಲಿ ಸಹಾನುಭೂತಿಯನ್ನು ತೋರಿಸಬೇಕೆಂದೂ, ಮಿಕ್ಕವರು ಕನ್ನಡದ ಮುನ್ನಡೆಗೆ ಅಸಹಾಯಕವಾಗುವ ಮಾತುಗಳನ್ನಾಡಬಾರದೆಂದೂ ಪ್ರಾರ್ಥನೆ.

ಸುಮಾರು ಇಪ್ಪತ್ತೈದು ವರ್ಷಕ್ಕೂ ಮೇಲ್ಪಟ್ಟ ಹಿಂದಿನ ಮಾತು: ಕನ್ನಡ ಎಂ ಎ. ವಾಚಾ ಪರೀಕ್ಷೆಗಾಗಿ ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರನ್ನು ಸಂಧಿಸುವ ಸುಯೋಗವನ್ನು ನಾನು ಪಡೆದಿದ್ದೆ. ಪರೀಕ್ಷೆ ಮುಗಿದಮೇಲೆ ಅವರು ನನ್ನನ್ನು ಬೀಳ್ಕೊಡುತ್ತ 'ಕನ್ನಡವನ್ನು ನಿಮ್ಮ ಕೈಯಲ್ಲಿಟ್ಟಿದ್ದೇವೆ. ಅದನ್ನು ಚೆನ್ನಾಗಿ

---

[3] '....his publications are worthwhile, and his business manners are straight sweet and excellent'—Prof. S. V. Ranganna M. A.

[4] 'Mr. H. M. Shankara Narayana Rao has published in Kannada very decent books with good get-up. They comprise original works, translations, and editions of classics by reputed scholars and university professors.' Dr. A. R. Krishna Sastri.

ಕಾಪಾಡಿಕೊಂಡು ಬನ್ನಿ' ಎಂದು ತುಂಬ ಅಭಿಮಾನದಿಂದ, ಕಳಕಳಿಯಿಂದ ನುಡಿದು ಕೈಮುಗಿದರು. ಈ ದೃಶ್ಯ ನನ್ನ ಮನಸ್ಸಿನಲ್ಲಿ ಇನ್ನೂ ಅಚ್ಚಳಿಯದೆ ನಿಂತಿದೆ. ಶ್ರೀಯವರು ಆ ರೀತಿ ನುಡಿದಾಗ ನನಗೆ ಒಂದು ಕಡೆ ಸಂತೋಷವೂ, ಮತ್ತೊಂದು ಕಡೆ ನಾಚಿಕೆಯೂ ಏಕಕಾಲದಲ್ಲಿ ಉಂಟಾದವು. ನನ್ನಂತಹ ಅಲ್ಪನೆಲ್ಲಿ? ನಾಡುನುಡಿಗಳ ಸೇವೆಗೆ ಬದ್ಧಕಂಕಣರಾಗಿ ತಮ್ಮ ಬದುಕನ್ನೇ ಮುಡಿಪಾಗಿಸಿದ ಆ ಮಹನೀಯರೆಲ್ಲಿ? ನಮ್ಮಲ್ಲಿ ಅವರು ಮಾಡಿದ ಪ್ರಾರ್ಥನೆ ಈಡೇರದ ವಿಷಯವೆಂದೇ ಭಾಸವಾಗಿ ಮನಸ್ಸಿನಲ್ಲಿ ಸಂಕೋಚಭಾವನೆ ಮೂಡಿತು. ಸುಸಮರ್ಥರಾದ ವಿದ್ವನ್ಮಣಿಗಳೂ, ಕನ್ನಡನಾಡಿನಲ್ಲೇ ಹೆಸರಾಂತವರೂ, ವಿದ್ಯಾರ್ಥಿ ಲೋಕದಿಂದ ಪೂಜಿತರೂ ಆದ ಸರ್ವಶ್ರೀ. ಬಿ. ಎಂ. ಶ್ರೀ., ಟಿ. ಎಸ್. ವೆಂ., ಎ. ಆರ್. ಕೃ., ತೀ. ನಂ. ಶ್ರೀ., ಡಿ. ಎಲ್. ಎನ್., ವಿ. ಸೀ., ಕೆ. ವೆಂ. ಇವರು ನನಗೆ ಕನ್ನಡದಲ್ಲಿ ಪಾಠ ಹೇಳಿ, ಕನ್ನಡದಲ್ಲಿ ಅಕ್ಕರೆಯನ್ನುಕ್ಕಿಸಿ ಮಾರ್ಗದರ್ಶನ ಮಾಡಿದರು. ಕನ್ನಡ ಉಪಾಧ್ಯಾಯನಾಗಿ ನನಗೆ ತಿಳಿದಷ್ಟರ ಮಟ್ಟಿಗೆ ವಿದ್ಯಾರ್ಥಿಗಳಿಗೆ ಪಾಠವನ್ನು ಹೇಳಿದ್ದಾಯಿತೇ ಹೊರತು, ಕನ್ನಡಕ್ಕಾಗಿ ವಿಶೇಷ ರೀತಿಯ ಕೆಲಸ ನನ್ನಿಂದ ಸಾಧ್ಯವಾಗಲಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಆದರೂ ಕನ್ನಡ ವಿದ್ಯಾರ್ಥಿಗಳಿಗೆ, ವಿದ್ವಾಂಸರಿಗೆ ಉಪಯುಕ್ತವಾಗುವ, ಕನ್ನಡ ವಿದ್ವತ್ಪ್ರಪಂಚವನ್ನು ಬೆಳಸಲು ಅನುಕೂಲವಾಗಿರುವ, ನನ್ನ ವಿದ್ಯಾಗುರುಗಳ ಮತ್ತು ಮಿತ್ರರ ಗ್ರಂಥಗಳನ್ನು ಪ್ರಕಟಿಸಿರುವೆನೆಂಬ ಹೆಮ್ಮೆ ಸಮಾಧಾನಗಳು ನನಗಿವೆ. ಅಲ್ಲದೆ ಕೆಲವು ಹೊಸ ಲೇಖಕರನ್ನೂ ನಾನು ಪ್ರೋತ್ಸಾಹಿಸಿದ್ದೇನೆ. ಕನ್ನಡ ಸಾಹಿತ್ಯದ ರಾಜಮಾರ್ಗದಲ್ಲಿ ನನ್ನದೊಂದು ಸರಸ್ವತೀದೇವಿಯ ಚಿಕ್ಕ ಮೆರವಣಿಗೆ ಹೊರಟಿದೆ. ಅದನ್ನು ಕಂಡು ಹಿರಿಯರು ಆನಂದಿಸಿ ಹರಿಸಿದ್ದಾರೆ.[5] ಅವರ ಅವ್ಯಾಜ ವಾತ್ಸಲ್ಯ ಹಿರಿದು. ಆದರೆ ಈ ಉತ್ಸವವನ್ನು ಕಂಡು ಪುಸ್ತಕಪ್ರಕಾಶನದ ಕೆಲವು ವೃತ್ತಿಬಾಂಧವರೂ ಇತರ ಅಲ್ಪರೂ ನಕ್ಕು, ಕುಹಕದ ನುಡಿಗಳನ್ನಾಡಿದ್ದಾರೆ. ಅದರಿಂದ ನನ್ನ ಕೆಲಸಕ್ಕೆ ಯಾವ ಕುಂದೂ ಬರಲಾರದು. ಆನೆಯ ಮೇಲೆ ಹೋಗುವವನನ್ನು ನಾಯಿ ಕಚ್ಚಲಾರದಷ್ಟೆ!

ಇನ್ನು ಸಂತೋಷದ ಒಂದು ನುಡಿ. ಈ ಗ್ರಂಥವನ್ನು ಮೂರು ಓಲೆಯಗರಿಗಳಿಂದ ಸಂಪಾದಿಸಿ, ಇದಕ್ಕೆ ಪೀಠಿಕೆ ಶಬ್ದಕೋಶಗಳನ್ನು ಜೋಡಿಸಿ ನನ್ನ ಮಾಲೆಯಲ್ಲಿ ಪ್ರಕಟನೆಯಾಗಲು ನನ್ನ ಗುರುಗಳಾದ ಶ್ರೀ. ಕೆ. ವೆಂಕಟರಾಮಪ್ಪ, ಎಂ.ಎ. ಅವರು ಒಪ್ಪಿದ್ದಾರೆ. ನಮ್ಮಿಬ್ಬರ ಗುರುಗಳಾದ ಡಾ. ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ. ಅವರು ನಮ್ಮ ಪ್ರಯತ್ನವನ್ನು ಹರಸಿದ್ದಾರೆ. ಗ್ರಂಥವನ್ನು ಮುದ್ದಾಗಿ ಮುದ್ರಿಸಿ ಕೊಟ್ಟಿರುವ ಕೀರ್ತಿ

---

[5] The books that have been published in this series (Kannada Kavi Kavya Male) are of varied interest and of permanent value...... I wish his endeavours all succes. – Dr. K.V. Puttappa M.A., D.Litt. Vice Chancellor, Mysore University(16-7-59)

Sri H. M. Shankara Naryana Rao deserves to be congratulated on his courageous contribution to the fostering of learning. Sri S. V. Ranganna M.A., Professor of English. – (Rtd.) Mysore University. (5-5 1959)

Kannada Kavi Kavya Male, is one of the few Publication series in Kannada where one can expect quality in contents and get up as well.

The Kannada Public should really be grateful to him for the valuable service which only the Government or a University usually undertakes—Sri T. N. Srikantyaiya, M.A., Professor of Kannada, Maharaja's College, Mysore(6-5-59)

No publisher is doing such a work as this, and it is taking a great risk, for the books are not readily sold. It is only Govermment Institutions which can do such work and it is highly commendable that an individual, out of his own resources is doing this....He richly deservcs all encouragement by the Government and the public. I wish his activities in publishing ancient texts all progress and success. —Sri D. L. Narasimhachar M. A. Professor of Kannada, Maharaja's College, Mysore (5-5-59).

ಮೈಸೂರು ಪ್ರಿಂಟಿಗ್ ಮತ್ತು ಪಬ್ಲಿಷಿಂಗ್ ಹೌಸಿನ ಒಡೆಯರಾದ ಶ್ರೀ. ಜಿ. ಎಚ್. ರಾಮರಾಯರದು. ಈ ಎಲ್ಲ ಮಹನೀಯರಿಗೂ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ.

ಸುದೀರ್ಘವಾದ ' ಸಂಪಾದಕರ ಮಾತ 'ನ್ನು ವಾಚಕರು ಮನ್ನಿಸಿ, ಇದರಲ್ಲಿರಬಹುದಾದ ಲೋಪದೋಷಗಳನ್ನು ಗಮನಿಸದೆ ಕನ್ನಡಿಗರು ಈ ಗ್ರಂಥವನ್ನು ಆದರದಿಂದ ಬರಮಾಡಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

ಶಾರದಾ ಮಂದಿರ, ರಾಮಯ್ಯರ್ ರಸ್ತೆ, ಮೈಸೂರು–4
ವಿಜಯದಶಮಿ, 16–10–64.

ಎಚ್. ಎಂ. ಶಂಕರನಾರಾಯಣರಾವ್
**ಮಾಲೆಯ ಸಂಪಾದಕ**

## ಪೀಠಿಕೆ

**ಮೊದಲ ಮಾತು:**

ಶ್ರೀಭಾಗವತಪುರಾಣವನ್ನು ಕನ್ನಡದಲ್ಲಿ ಮೊದಲು ಬರೆದ ಯಶಸ್ಸು, ನಿತ್ಯಾತ್ಮಶುಕಯೋಗಿಯದು. 'ನಿತ್ಯಾತ್ಮ ಶುಕಯೋಗಿ' ಯೆಂಬುದು ಕವಿಯ ಬಿರುದು ಅಥವಾ ಕಾವ್ಯನಾಮ. ಆತನ ನಿಜವಾದ ಹೆಸರು ಖಚಿತವಾಗಿ ತಿಳಿಯದು. ಪ್ರತಿ ಸಂಧಿಯ ಕೊನೆಯಲ್ಲಿಯೂ ಕವಿ 'ನಿತ್ಯಾತ್ಮ' ಎಂಬ ಅಂಕಿತವನ್ನು ಬಳಸಿದ್ದಾನೆ. ನಿತ್ಯಾತ್ಮ, ನಿತ್ಯಾತ್ಮಗೋಪೀನಾಥ, ನಿತ್ಯಾತ್ಮನಾರಾಯಣ, ನಿತ್ಯಾತ್ಮಸದ್ಮದೃಶ, ನಿತ್ಯಾತ್ಮಶಿವ ಎಂದು ಬೇರೆ ಬೇರೆ ಹೆಸರುಗಳನ್ನು ನಿತ್ಯಾತ್ಮ ಶಬ್ದದೊಂದಿಗೆ ಸೇರಿಸಿ ಕವಿ ಅಂಕಿತವಾಗಿ ಬಳಸಿರುವನಾದ್ದರಿಂದ ಈ ಕವಿಯು 'ನಿತ್ಯಾತ್ಮ'ನೆಂಬ ಕಾವ್ಯನಾಮವನ್ನು ಹೊಂದಿದ್ದನೆಂದು ತಿಳಯಬೇಕಾಗಿದೆ. ಶುಕಮಹರ್ಷಿ ಪರೀಕ್ಷಿತನಿಗೆ ಉಪದೇಶಿಸಿದ ಭಾಗವತವನ್ನು ಕನ್ನಡದಲ್ಲಿ ರಚಿಸಿದ ಈ ಭಕ್ತಕವಿ 'ಶುಕ' ಶಬ್ದವನ್ನು ತನ್ನ ಅಭಿಮಾನದ ಬಿರುದಾಗಿ ಧರಿಸಿ 'ನಿತ್ಯಾತ್ಮಶುಕಯೋಗಿ' ಎಂದು ತನ್ನನ್ನು ವರ್ಣಿಸಿಕೊಂಡಿದ್ದಾನೆ.

ಈತನ ನಿಜವಾದ ಹೆಸರು ಸದಾನಂದನೆಂದಿರಬಹುದೆಂದು ತೋರುತ್ತದೆ. ಏಕೆಂದರೆ ಕನ್ನಡ ಭಾಗವತದಲ್ಲಿ ಹಲವು ಕಡೆ 'ಇದು ಸದಾನಂದಾಖ್ಯಯೋಗಿಯ ತೊದಲುನುಡಿ' 'ಯೋಗೀಂದ್ರನಖಿಳೋದಿತ ಸದಾನಂದ ಮುದದೊಳಭಿವರ್ಣಿಸಿದಂ' 'ಗೋಪೀನಾಥ ಮಂಗಳವನೀವನು ಸದಾನಂದಾಖ್ಯ ಮುನಿವರಗೆ' ಎಂಬ ವಾಕ್ಯಗಳು ಕಾಣಸಿಕ್ಕುತ್ತವೆ. 'ಯೋಗಿ, ಯೋಗೀಂದ್ರ' ಎಂಬ ಮಾತುಗಳು ಬಂದಿರುವುದರಿಂದ ಈ ಕವಿ ಸನ್ಯಾಸಿಯಾಗಿದ್ದಿರಬಹುದೆಂಬ ಸಂಶಯವೂ ತೋರುತ್ತದೆ. ಅಚ್ಯುತಾರಣ್ಯನೆಂಬ ಯತಿಯನ್ನು ಬಹಳವಾಗಿ ಹೊಗಳಿ ಆತನ ಪ್ರೇರಣೆಯಂತೆ ಭಾಗವತರಚನೆಗೆ ಕೈಹಾಕಿದುದಾಗಿ ಹೇಳಿಕೊಂಡಿರುವುದರಿಂದ ಅಚ್ಯುತಾರಣ್ಯರೆಂಬ ಯತಿಗಳು ನಮ್ಮ ಕವಿಗೆ ಗುರುಗಳಾಗಿದ್ದಿರಬಹುದು. ಗುರುಶಿಷ್ಯರಿಬ್ಬರೂ ಯತಿಗಳಾಗಿದ್ದು ಅವರಿಂದ ಕಾವ್ಯರಚನೆ ನಡೆದಾಗ ಅದು ಭಗವತ್ಕಥನವಾಗದೆ ಬೇರೇನು ತಾನೆ ಆಗಲು ಸಾಧ್ಯ?

ಕನ್ನಡ ಭಾಗವತದಲ್ಲಿ ಬೇರೆ ಯಾವ ಕನ್ನಡ ಕವಿಯ ಸ್ಮರಣೆಯನ್ನೂ ಕವಿ ಮಾಡಿಲ್ಲ. ಬೇರೆ ಯಾವ ಕನ್ನಡ ಕವಿಯೂ ಈತನ ಹೆಸರನ್ನು ಹೇಳಿದಂತೆ ಕಾಣಬರುವುದಿಲ್ಲ. ಸುಮಾರು ಹನ್ನೆರಡು ಸಾವಿರ ಪದ್ಯಗಳನ್ನೊಳಗೊಂಡ ಈ ಬೃಹದ್ಗ್ರಂಥವನ್ನು ರಚಿಸಿದ ಕವಿಯನ್ನು ಬೇರಾರೂ ಹೆಸರಿಸದೆ ಇರುವುದು ಆಶ್ಚರ್ಯವೇ ಸರಿ. ಮದರಾಸಿನ ಪ್ರಾಚ್ಯಕೋಶಾಗಾರದ ಒಂದು ಪ್ರತಿಯಲ್ಲಿ ಅದನ್ನು ಪ್ರತಿಮಾಡಿದ ಕಾಲವನ್ನು ಶಾಲಿವಾಹನಶಕ ನಾನೂರ ನಲವತ್ತೊಂದನೆಯ ವರ್ಷವೆಂದು ಹೇಳಿದೆ. ರಘುನಾಥನೆಂಬ ಒಬ್ಬ ಲಿಪಿಕಾರನು ರಾಮಣ್ಣನೆಂಬ ಒಬ್ಬ ಶ್ರೀಮಂತ ಭಕ್ತನಿಗಾಗಿ ಭಾಗವತವನ್ನು ಬರೆದುಕೊಟ್ಟನೆಂದು ಹೇಳಲಾಗಿದೆ. ಆದ್ದರಿಂದ ಪ್ರತಿಮಾಡಿದ ಕಾಲ ಕ್ರಿ.ಶ. ೧೫೧೯ ಎಂದಾಯಿತು. ನಕಲು ಮಾಡಿದುದೇ ೧೫೧೯ ಆದರೆ ಅಸಲು ಕೃತಿರಚನೆ ಇನ್ನೂ ಹಲವು ವರ್ಷಗಳ ಮುಂಚೆಯೇ ಆಗಿರಬಹುದು. ಕುಮಾರವ್ಯಾಸನ ಆದರ್ಶವನ್ನಿಟ್ಟುಕೊಂಡು ಆತನ ಗ್ರಂಥರಚನಾಪದ್ಧತಿಯನ್ನು ಅನುಸರಿಸಿ ಬರೆದಂತೆ ತೋರುವುದರಿಂದ ಈ ಕಾವ್ಯ ಕುಮಾರವ್ಯಾಸನ ಅನಂತರ ಕ್ರಿ. ಶ. ೧೫೦೦ರ ಒಳಗೆ ರಚಿತವಾಗಿರಬಹುದೆಂದು ನಂಬಬಹುದು.

ಕನ್ನಡ ಭಾಗವತದ ಹನ್ನೊಂದು ಹನ್ನೆರಡನೆಯ ಸ್ಕಂಧಗಳ ಕೊನೆಯಲ್ಲಿ 'ಚಾಟು ವಿಠಲ' ನೆಂಬವನು ಈ ಭಾಗವತವನ್ನು ಬರೆದನೆಂದು ಹೇಳಿದೆ. ಗ್ರಂಥದ ಬೇರೆ ಯಾವ ಭಾಗದಲ್ಲಿಯೂ ಈ ಹೆಸರು ಬಂದಿಲ್ಲ. ಸದಾನಂದಯೋಗಿಗೇ ಆ ವೇಳೆಗೆ 'ಚಾಟುವಿಠಲ' ನೆಂಬ ಬಿರುದು ಲಭಿಸಿತ್ತೋ ಅಥವಾ ಆ ಹೆಸರಿನ ಬೇರೊಬ್ಬ ಕವಿ ಆ ಕೊನೆಯ ಎರಡು ಸ್ಕಂಧಗಳನ್ನು ಬರೆದನೋ ಹೇಳುವಂತಿಲ್ಲ. ಆದರೆ ಆ ಸ್ಕಂಧಗಳಲ್ಲಿಯೂ ಅಚ್ಯುತಾರಣ್ಯಯತಿಯ ಸ್ತೋತ್ರವಿದೆ. ಹನ್ನೊಂದನೆಯ ಸ್ಕಂಧದ ಮೂವತ್ತಾರನೆಯ ಸಂಧಿಯ ಕಡೆಯ ಭಾಗದಲ್ಲಿ ಈ ಪದ್ಯವಿದೆ:

ಪೊಂಗೊಳಲ ಬಾರಿಸುತ ಗೋಕುಲ
ದಂಗನೆಯರನು ಮೋಹಿಸುತ ಸ
ರ್ವಾಂಗಶೋಭನನೆರಿಸಿ ನೆನೆವರ ಮನದಲನವರತ

ಹಿಂಗದೇ ವರ್ತಿಸುವ ಭಯ ಮಾ
ತಂಗ ಮೃಗಪತಿ ಗೋಪಿನಾಥನು
ಮಂಗಳವನೀವನು ಸದಾನಂದಾಖ್ಯಮುನಿವರಗೆ || (೩೬–೯೯)

ಇದರಲ್ಲಿ 'ಸದಾನಂದಾಖ್ಯ ಮುನಿವರ' ಎಂಬ ಹೆಸರು ಬಂದಿರುವುದು ಗಮನಾರ್ಹವಾಗಿದೆ. ಆದರೆ ಸಂಧಿಯ ಕೊನೆಯಲ್ಲಿ 'ಸತ್ಕವಿ ಚಾಟುವಿಠಲನೊರೆದನೀ ಕೃತಿಯ' ಎಂಬ ಹೇಳಿಕೆಯಿದೆ. ಸದಾನಂದಮುನಿಯು ಮೊದಲ ಹತ್ತು ಸ್ಕಂಧಗಳನ್ನು ಅಚ್ಯುತಾರಣ್ಯಗುರುವರನ ಮಾರ್ಗದರ್ಶನದಲ್ಲಿ ರಚಿಸಿಯಾದ ಮೇಲೆ ಯಾವುದೋ ಕಾರಣದಿಂದ ಗ್ರಂಥರಚನೆ ನಿಂತುಹೋಗಿರಲು ಅವನಲ್ಲಿ ಭಕ್ತಿಯಿದ್ದ—ಬಹುಶಃ ಅವನ ಶಿಷ್ಯನಾದ—ಚಾಟು ವಿಠಲನು ಅಪೂರ್ಣವಾಗಿ ನಿಂತು ಹೋಗಿದ್ದ ಈ ಪುರಾಣತಿಲಕವನ್ನು ಭಕ್ತಿಯಿಂದ ರಚಿಸಿ ಪೂರ್ಣಮಾಡಿರ ಬಹುದು!

ಭಾಗವತಕವಿಗೆ ಭಕ್ತಿಪ್ರಚಾರವೇ ಪ್ರಧಾನವಾದ ಗುರಿ. ಅದಕ್ಕಾಗಿಯೇ ಗ್ರಂಥರಚನೆಗೆ ತೊಡಗಿ ಭಗವ ದ್ಭಾಗವತರ ಪುಣ್ಯಚರಿತ್ರೆಗಳಿಂದ ತುಂಬಿರುವ ಭಾಗವತಪುರಾಣವನ್ನೇ ಆಯ್ದುಕೊಂಡು ಆ ವೇಳೆಗೆ ಕನ್ನಡದಲ್ಲಿ ಜನಪ್ರಿಯವಾಗಿದ್ದ ಷಟ್ಪದೀಛಂದಸ್ಸಿನಲ್ಲಿ ರಚಿಸಿದ್ದಾನೆ. ಹರಿಗುಣಸ್ತುತಿ, ಹರಿಪಾದಮಹಿಮಾ ಸಂಕೀರ್ತನೆ, ಭಕ್ತಿತತ್ವನಿರೂಪಣೆ, ಭಕ್ತರ ಸಾಧನೆ ಸಿದ್ಧಿಗಳ ವರ್ಣನೆ, ಇವು ಭಾಗವತಕಾರನ ಧ್ಯೇಯಗಳು. ಈ ಧ್ಯೇಯ ಸಾಧನೆಗೆ ತಕ್ಕ ವಸ್ತುವನ್ನೇ ಕವಿ ಆರಿಸಿಕೊಂಡಿದ್ದಾನೆ. ಅನೇಕ ಭಕ್ತರು ಭಗವಂತನ ಪೂಜೆ, ಧ್ಯಾನ, ಸ್ತೋತ್ರ ಗಳಿಂದ, ನಿರಂತರ ಸ್ಮರಣೆ, ಜಪತಪಗಳಿಂದ ಅವನ ಕೃಪಾಪಾತ್ರರಾದರೆ ಬೇರೆ ಕೆಲವರು ವೈರಮಾರ್ಗವನ್ನು ಅನು ಸರಿಸಿ 'ಘೋರಚೇಷ್ಟಿತರಾಗಿ' ಬೇಗನೆ ಭಗವಂತನನ್ನು ಸೇರಿದರು. ಭಗವಂತನ ಅಂಘ್ರಿಕಮಲದ ಸ್ಮರಣೆಯೇ 'ಭವಮೋಕ್ಷಕಾರಣ'. ಆತನ ಪಾದಧ್ಯಾನವೇ 'ಸರ್ವಾರ್ಥ ಸಂಪತ್ಸುಖಕೆ ಕಾರಣ!' ಆದ್ದರಿಂದ ಭಕ್ತರು ಎಡೆಬಿಡದೆ ಶ್ರೀಹರಿಯ ಧ್ಯಾನಾಸಕ್ತರಾಗಬೇಕು. ಮಹಾ ಭಕ್ತರ ದಿವ್ಯಚರಿತ್ರೆಗಳನ್ನು ಕೇಳಬೇಕು. ಅದ ಕ್ಕಾಗಿಯೇ ನಮ್ಮ ಕವಿ ಅಖಿಳ ಭವರೋಗ ಹರವಾದ ಭಾಗವತವನ್ನು ಕನ್ನಡದಲ್ಲಿ ರಚಿಸಲು ಸಂಕಲ್ಪಿಸಿದನು.

ಭಾಗವತದರ್ಥವನು ಸಂಗ್ರಹ
ವಾಗಿ ಬಲ್ಲಂದದಲಿ ವಿಷಯವಿ
ಭಾಗವನು ತತ್ತತ್ಪ್ರಯೋಜನ ಜನಿತ ಸಿದ್ಧಿಯನು
ರಾಗದಿಂದಱುಪುವೆನಖಿಳ ಭವ
ರೋಗಹರವಿದೆನಲ್ಕೆ ಮಾಳ್ಕೆ ಮ
ಹಾಗುಣಜ್ಞರು ಕಾವ್ಯಸಾರಸ್ಯವನು ಸಜ್ಜನರು

ಆದರೆ ಕವಿಗೆ ಇದು ಕನ್ನಡ ಕಾವ್ಯವೆಂಬ ಕಾರಣದಿಂದ ಜನ ಅವಜ್ಞೆಮಾಡಬಹುದೆಂಬ ಅಂಜಿಕೆಯೂ ಇತ್ತು; ಆದ್ದ ರಿಂದಲೇ ಅವನು

ಕನ್ನಡದ ಕೃತಿಯೆಂದವಜ್ಞಾ
ಪನ್ನರಾಗದಿರಕಟ ದರ್ಪಣ
ಕನ್ನಡಿಯಿದೆಂದೆಂದಡಾವುದು ಕೊರತೆ ನೋಡುವಡೆ
ತನ್ನ ಮುಖಸಂದರುಶನವಲಾ ಪ್ರತಿ
ಪನ್ನಫಲ ಹರಿಗುಣಚರಿತ್ರದ
ವರ್ಣನೆಗೆ ಕುಂದೇನು ಭಾಷಾಭೇದದಲಿ ಕೃತಿಯ

ಎಂದು ಪ್ರಶ್ನೆ ಹಾಕಿದ್ದಾನೆ. ಭಾಷೆ ಬೇರಾದ ಮಾತ್ರಕ್ಕೆ ಭಾಗವತಕೃತಿಗೆ ಏನೂ ಕೊರತೆಯಾಗದೆಂದೂ ಹರಿಗುಣ ಕೀರ್ತನೆ ಹರಿಚರಿತ್ರವರ್ಣನೆಗಳನ್ನು ಯಾವ ಭಾಷೆಯಲ್ಲಿ ಕೇಳಿದರೂ ಫಲವೊಂದೇ ಎಂಬರ್ಥವನ್ನು ಬಹಳ ಕಳಕಳಿ ಯಿಂದ ಬಿನ್ನವಿಸಿಕೊಂಡಿದ್ದಾನೆ. ಕನ್ನಡಕ್ಕೆ ಸಾಕಷ್ಟು ಪೂಜ್ಯತೆ ಕನ್ನಡಿಗರ ಹೃದಯಗಳಲ್ಲಿ ಆ ಕಾಲದಲ್ಲಿಯೂ ಇರಲಿಲ್ಲವಾದೀತು. ಆದ್ದರಿಂದಲೇ ಈ ಭಕ್ತಕವಿ ಹೀಗೆ ಹೇಳಿಕೊಳ್ಳಬೇಕಾಯತು. 'ದರ್ಪಣ' ವೆಂದರೂ

'ಕನ್ನಡಿ' ಯೆಂದರೂ ಪದಾರ್ಥವೊಂದೇ. ಅದರ ಗುಣಲಕ್ಷಣಗಳಲ್ಲಿ ಏನೂ ವ್ಯತ್ಯಾಸವಾಗುವುದಿಲ್ಲ. ಹಾಗೆಯೇ ಭಗವಂತನ ಕಥೆಯನ್ನು ಕನ್ನಡದಲ್ಲಿ ಹೇಳಿದರೆ ಅದರ ಮಹಿಮೆ ಏನೂ ತಗ್ಗದು. ಈ ಅಭಿಪ್ರಾಯವನ್ನು ಭಾಗವತಕಾರನೇ ಅಲ್ಲದೆ ಆತನಿಗಿಂತ ಮುಂಚಿನ ಕವಿಗಳೂ ಈಚಿನ ಹಲವು ಕವಿಗಳೂ ಪ್ರಸ್ತಾಪಿಸಿ ತಮ್ಮ ಕನ್ನಡದ ಅಭಿಮಾನವನ್ನು ಮೆರೆದು ಆ ಕಾಲದ ಕನ್ನಡಿಗರನ್ನು ಎಚ್ಚರಿಸಿ ಕೃತಿರಚನೆಮಾಡಿದ್ದಾರೆ. 'ಕನ್ನಡದ ಕೃತಿಯೆಂದು ಅವಜ್ಞಾಪನ್ನರಾಗದಿಂ' ಎಂದು ಬೇಡಿಕೊಂಡಿರುವುದು ಎಲ್ಲ ಕಾಲದ ಕನ್ನಡಿಗರಿಗೂ ಮಾರ್ಗದರ್ಶನ ನೀಡುವಂಥ ಮಾತೇ ಆಗಿದೆ. ಕನ್ನಡ ಕವಿಗಳ ಈ 'ಅಳುಕು' ಇಂದಿನ ಕಾಲಕ್ಕೆ ಮಾತ್ರ ಸೀಮಿತವಾದುದಲ್ಲ. ಅದು ಹಿಂದೆಯೂ ಇದ್ದದ್ದೇ ಎಂದು ತಿಳಿಯಬಹುದು. ಆದರೆ ಆ ಕವಿಗಳು ಈ ಅಂಜಿಕೆಗೆ ಸೋತು ತಮ್ಮ ಕೃತಿ ರಚನೆಯ ಸಂಕಲ್ಪವನ್ನು ಕೈಬಿಡಲಿಲ್ಲ; ಅದು ಕನ್ನಡಿಗರ ಭಾಗ್ಯ. ಭಾರತ ಭಾಗವತಗಳಂಥ ಬೃಹದ್ಗ್ರಂಥಗಳನ್ನು ಸರಳವಾಗಿ ಕನ್ನಡಕ್ಕೆ ಅನುವಾದಿಸಿಕೊಟ್ಟ ಆ ಭಕ್ತಕವಿಗಳ ಕನ್ನಡ ಪ್ರೇಮವನ್ನು ಎಷ್ಟು ಕೊಂಡಾಡಿದರೂ ಸ್ವಲ್ಪವೇ. ಯಾವ ಲಾಭಾಕಾಂಕ್ಷೆಯೂ ಇಲ್ಲದೆ ಆ ಯೋಗಿಗಳು ಲೋಕಸಂಗ್ರಹಣಾರ್ಥವಾಗಿ ಮಹಾ ಶ್ರಮ ಸಾಧ್ಯವಾದ ಈ ಕಾರ್ಯವನ್ನು ಕೈಕೊಂಡು ಸಾಧಿಸಿ ಯಶಃಕಾಯರಾಗಿದ್ದಾರೆ, ಅವರ ಕೃತಿಗಳು ಕನ್ನಡ ವಿರುವವರೆಗೂ ಲೋಕದಲ್ಲಿ ಜನಪ್ರಿಯವಾಗಿ ನಿಲ್ಲುತ್ತವೆ.

ಭಾಗವತ ಪುರಾಣತಿಲಕ! ಅದರಲ್ಲಿ ಭಗವಂತನ ದಿವ್ಯಚರಿತ್ರೆಯ ವರ್ಣನೆಯಿದೆ. ಅದನ್ನು ಕೇಳುವುದು, ಓದುವುದು, ಮೋಕ್ಷಕ್ಕೆ ಸಾಧನಗಳು. ಅದು ವೇದವೆಂಬ ಕಲ್ಪವೃಕ್ಷದ ಹಣ್ಣು! ಶುಕಮಹರ್ಷಿಯ ಮಾತಿನಲ್ಲಿ ಹರಿದುಬಂದ ಅಮೃತ, ಭಾಗವತ. ಅಂಥ ರಸವತ್ತಾದ ಗ್ರಂಥ ಸ್ವರ್ಗ, ಕೈಲಾಸ, ವೈಕುಂಠ, ಸತ್ಯಲೋಕಗಳಲ್ಲಿಯೂ ಸಿಕ್ಕುವುದಿಲ್ಲವಂತೆ! ಆದ್ದರಿಂದ ಭಾಗ್ಯಶಾಲಿಗಳಾದ ಭಕ್ತರು, ರಸಿಕರಾದ ಭಾವುಕರು, ಈ ಲೋಕದಲ್ಲಿರುವಾಗಲೇ ಭಾಗವತರಸ ಪಾನಮಾಡಿ ಕೃತಾರ್ಥರಾಗಬೇಕು.

ಭಾಗವತವನ್ನು ಮೊದಲು ಭಗವಂತನಾದ ನಾರಾಯಣನೇ ಬ್ರಹ್ಮನಿಗೆ ಪ್ರೀತಿಯಿಂದ ಹೇಳಿದನು. ಅದನ್ನು ಬ್ರಹ್ಮನು ತನ್ನ ಪ್ರೀತಿಯ ಮಾನಸಪುತ್ರನಾದ ನಾರದನಿಗೆ ಉಪದೇಶಿಸಿದನು; ನಾರದನು ಅದನ್ನು ವ್ಯಾಸ ಮಹರ್ಷಿಗೆ ಹೇಳಿದನು. ವ್ಯಾಸನು ಈ ಪುಣ್ಯಕಥೆಯನ್ನು ಪರಮಭಾಗವತನಾದ ಶುಕನಿಗೆ ಹೇಳಿದನು. ಆ ಮಹಾ ಮುನಿಯು ಮರಣಭೀತಿಯಿಂದ ತೊಳಲುತ್ತಿದ್ದ ಪರೀಕ್ಷಿತ ಮಹಾರಾಜನಿಗೆ 'ಭವಮೋಕ್ಷಕಾರಣ'ವಾದ ಈ ದಿವ್ಯ ಚರಿತ್ರೆಯನ್ನು ಹೇಳಿದನು. ಅದನ್ನು ಭಕ್ತಿಯಿಂದ ಕೇಳಿದ ಆ ರಾಜನು ಮೋಕ್ಷಸಾಮ್ರಾಜ್ಯವನ್ನು ಸೂರೆಗೊಂಡನು. ಶುಕನು ಅರಸನಿಗೆ ಹೇಳುತ್ತಿದ್ದಾಗ ಅಲ್ಲಿದ್ದ ಅನೇಕ ಮುನಿಗಳು ಭಾಗವತವನ್ನು ಕೇಳಿ ಕೃತಕೃತ್ಯರಾದರು. ಅಂಥವ ರಲ್ಲಿ ಸೂತಮಹರ್ಷಿ ಒಬ್ಬ. ಆತನು ಇದನ್ನು ನೈಮಿಶಾರಣ್ಯದಲ್ಲಿ ಸಭೆಸೇರಿದ್ದ ಶೌನಕಾದಿ ಮಹರ್ಷಿಗಳಿಗೆಲ್ಲ ಹೇಳಿದನು. ಅದೇ ಇಂದು ಲೋಕಕ್ಕೆ ದೊರೆತಿರುವ 'ಭಾಗವತಪುರಾಣತಿಲಕಂ.' ದೇವಭಾಷೆಯ ಆ ಮಹಾ ಕೃತಿಯನ್ನು ನಮ್ಮ ನಿತ್ಯಾತ್ಮಶುಕಯೋಗಿಯು ಕನ್ನಡಿಗರಿಗೆ ನೀಡಿದ್ದಾನೆ.

ಭಾಗವತವು ಹನ್ನೆರಡು ಸ್ಕಂಧಗಳನ್ನೊಳಗೊಂಡ ವಿಸ್ತಾರವಾದ ಗ್ರಂಥ. ಮೊದಲಲ್ಲಿನ ಎರಡು ಸ್ಕಂಧ ಗಳು ಪೀಠಿಕಾರೂಪದಲ್ಲಿವೆ. ಸೂತ ಮಹರ್ಷಿಗಳನ್ನು ಶೌನಕಾದಿಗಳು ನೈಮಿಶಾರಣ್ಯದಲ್ಲಿ ಸಂಧಿಸಿ ಕಲಿಯುಗದ ನರರಿಗೆ ಮೋಕ್ಷಸಾಧನೆಗೆ ಸುಲಭೋಪಾಯವಾವುದೆಂದು ಪ್ರಶ್ನಿಸಲು ಅವರು:

ತನ್ನ ಕಥೆಗಳ ಕೇಳುವಾ ಸಂ
ಪನ್ನಭಾಗ್ಯರ ಹೃದಯಕಮಲದ
ಕರ್ಣಿಕೆಯ ಮನೆಮಾಳ್ಪ ಪುಣ್ಯಶ್ರವಣಕೀರ್ತನನು
ಪನ್ನಗಾರಿಧ್ವಜನಘೌಘ ಮ
ಹಾರ್ಣವಕೆ ವಡಬಮುಖಾನಳ
ಸನ್ನಿಭನು ತಾನೈಸಲೇ ಪನ್ನಗಶಾಯಿ . . .

ಎಂದು ನುಡಿದು ಶ್ರೀ ಹರಿಯ ಧ್ಯಾನದ ಮಹಿಮೆಯನ್ನು ವರ್ಣಿಸಿ ಅದರಿಂದ ಹಿಂದೆ ಪರೀಕ್ಷಿತ ಮಹಾರಾಜನಿಗೆ ಹೇಗೆ ಮುಕ್ತಿ ಲಭಿಸಿತೆಂಬುದನ್ನು ವಿವರಿಸುತ್ತಾರೆ. ಆಗ ಆ ಋಷಿಗಳೆಲ್ಲರೂ ಹರಿಯ ಕಥೆಯನ್ನು ತಮಗೆ ವಿಸ್ತಾರ ವಾಗಿ ಹೇಳಬೇಕೆಂದು ಬೇಡಿಕೊಳ್ಳಲು ಸೂತರು ಭಾಗವತದ ಮಹಿಮೆಯನ್ನು ಹೇಳಿ "ಆ ಸಮಸ್ತ ಪುರಾಣಶಾಸ್ತ್ರ

ಮಹಾಸಮುದ್ರದ ಸಾರವಿದೆಲಾ" ಎಂದು ನುಡಿದು ಅವರಿಗೆ ಭಾಗವತವನ್ನು ಹೇಳಲು ತೊಡಗುತ್ತಾರೆ. ಭಗವಂತನು ಲೋಕೋದ್ಧಾರಕ್ಕಾಗಿ ಅನೇಕಾನೇಕಸಲ ಭೂಲೋಕದಲ್ಲಿ ಅವತರಿಸಿದನೆಂದೂ ಅವತಾರಗಳ ಸಂಖ್ಯೆಯನ್ನು ತಿಳಿಯುವುದು ಅಶಕ್ಯವೆಂದೂ ಹೇಳಿ ಅವುಗಳಲ್ಲಿ ಮುಖ್ಯವಾದುವುಗಳನ್ನು ಪ್ರಸ್ತಾಪಿಸುತ್ತಾರೆ:

ಜಗದುದರನವತಾರ ಸಂಖ್ಯೆಯ
ಬಗೆಯ ಬಲ್ಲವರಾರು ಭೂಪಾಂ
ಸುಗಳನಭ್ರದ ತಾರೆಗಳನಾಸಾರ ಬಿಂದುಗಳ
ತೆಗೆದು ಲೆಕ್ಕಿಸಬಹುದೆ ಭೃಗ್ವಾ
ದಿಗಳು ಸುರನರವರರು ಮನ್ವಾ
ದಿಗಳು ಹರಿಯಂಶಾಂಶ ಸಂಭವರಿವರು ಕೇಳೆಂದ

ಭೂಮಿಯ ಧೂಳಿನ ಕಣಗಳನ್ನೂ ಆಕಾಶದಲ್ಲಿನ ನಕ್ಷತ್ರಗಳನ್ನೂ ಮಳೆಯ ಹನಿಗಳನ್ನೂ ಲೆಕ್ಕಿಸಬಹುದೋ ಏನೋ. ಆದರೆ ಭಗವಂತನ ಅವತಾರಸಂಖ್ಯೆಯನ್ನು ಊಹಿಸಬಲ್ಲವರಿಲ್ಲ. ಭೃಗು ಮುಂತಾದವರು, ಮನುಗಳು, ದೇವತೆಗಳು, ಮಾನವಶ್ರೇಷ್ಠರು ಇವರೆಲ್ಲರೂ ಶ್ರೀ ಹರಿಯ ಅಂಶಾಂಶಗಳಿಂದ ಸಂಭವಿಸಿದವರು. ಇವರಲ್ಲಿ ಕೆಲವರು ಮಹಾ ವಿಷ್ಣುವಿನ ಅಂಶದಿಂದ ಹುಟ್ಟಿದವರು. ಇನ್ನು ಹಲವರು ಕೆಲವು ಕಲೆಗಳಿಂದ ಜನಿಸಿದವರು. ಇವರೆಲ್ಲರ ಪೈಕಿ ಆ ಯಾದವಶಿರೋಮಣಿಯಾದ ಶ್ರೀ ಕೃಷ್ಣನು ಮಾತ್ರ ಸಾಕ್ಷಾತ್ ವಿಷ್ಣುವೇ! ರಾಕ್ಷಸರು ಹೆಚ್ಚಿಕೊಂಡರೆ ಹರಿಯು ಅವತರಿಸಿ ಅವರನ್ನು ನಿಗ್ರಹಿಸಿ ತನ್ನ ಆಶ್ರಿತರೂ ಭಕ್ತರೂ ಆದ ದೇವತೆಗಳು, ಗೋವುಗಳು, ದ್ವಿಜರು ಮುಂತಾದವರನ್ನೆಲ್ಲ ರಕ್ಷಿಸುತ್ತಾನೆ. ಭಗವಂತನ ಅವತಾರಗಳ ಕಥೆಯನ್ನು ಹೇಳುವ ಪುರಾಣಗಳ ಲಕ್ಷಣಗಳನ್ನೂ ಭಗವಲ್ಲೀಲಾಮಹಿಮೆಯನ್ನೂ ತಿಳಿಸಿ ಪ್ರಧಾನವಾದ ಇಪ್ಪತ್ತೆರಡು ಅವತಾರಗಳನ್ನು ಕವಿ ತಿಳಿಸಿದ್ದಾನೆ. ಅವು ಸನಕಾದಿಯೋಗಿಗಳು, ಯಜ್ಞ, ವರಾಹ, ನಾರದ, ನರ, ನಾರಾಯಣ, ಕಪಿಲ, ವೃಷಭಯೋಗಿ, ಪೃಥು, ಮತ್ಸ್ಯ, ಕೂರ್ಮ, ಧನ್ವಂತರಿ, ಮೋಹಿನಿ, ನರಹರಿ, ವಾಮನ, ಪರಶುರಾಮ, ವೇದವ್ಯಾಸ, ಶ್ರೀರಾಮ, ಬಲರಾಮ, ಶ್ರೀ ಕೃಷ್ಣ, ಬುದ್ಧ ಮತ್ತು ಕಲ್ಕಿ. ಕಲ್ಕಿಯ ಅವತಾರವು ಇನ್ನೂ ಆಗಬೇಕಾದದ್ದು.

ಬಳಿಕ ಕಲಿಸಂಧ್ಯಾ ಶತದಲ
ಸ್ಖಲಿತ ವಿಕ್ರಮ ವಿಷ್ಣು ಕೀರ್ತಿಯ
ಲಲನೆಯಲಿ ಸಲೆ ಕಲ್ಕಿ ನಾಮದಲುದಿಸಿ ಕಲಿಯುಗದ
ಖಳನೃಪರನಪಹರಿಸಿ ಧರ್ಮವ
ನೆಲೆಗೊಳಿಸಿ ಕೃತಯುಗವ ನೆಱೆ ಕೈ
ಕೊಳಿಸಿ ಗೋದ್ವಿಜ ದೇವಕುಲವನು ಸಲಹಿದಪನೆಂದ

ಕಲಿಯುಗದ ಕೊನೆಯಲ್ಲಿ ಮಹಾವಿಷ್ಣುವು ಕಲ್ಕಿನಾಮದಲ್ಲಿ ಅವತರಿಸಿ ನೀಚರಾದ ರಾಜರನ್ನೆಲ್ಲ ದಂಡಿಸಿ ಧರ್ಮವನ್ನು ಸ್ಥಾಪಿಸುತ್ತಾನೆ; ಮತ್ತೆ ಕೃತಯುಗವನ್ನು ಆರಂಭಿಸುತ್ತಾನೆ.

ಮೂರನೆಯ ಸ್ಕಂಧದಲ್ಲಿ ಭಾಗವತ ನಿಜವಾಗಿ ಆರಂಭವಾಗಿದೆಯೆನ್ನಬಹುದು. ಕಲ್ಪಾವಸಾನದ ಕಥೆ, ಬ್ರಹ್ಮನ ಉದಯ, ವೈಕುಂಠ ವರ್ಣನೆ, ಜಯ ವಿಜಯರ ಕಥೆ, ಹಿರಣ್ಯಾಕ್ಷ ಹಿರಣ್ಯಕಶಿಪುಗಳ ಚರಿತ್ರೆ, ಕಪಿಲ ದೇವ ಹೂತಿಯರ ಚರಿತ್ರೆ ಇವೆಲ್ಲ ಇಲ್ಲಿ ವರ್ಣಿತವಾಗಿವೆ. ನಾಲ್ಕನೆಯ ಸ್ಕಂಧದಲ್ಲಿ ದಕ್ಷಯಜ್ಞದ ವೃತ್ತಾಂತವೂ, ಗಿರಿಜಾಕಲ್ಯಾಣದ ಕಥೆಯೂ ಬಂದಿವೆ. ಧ್ರುವ, ಪೃಥು, ಪುರಂಜನರ ಕಥೆಗಳಿವೆ. ಐದನೆಯ ಸ್ಕಂಧದಲ್ಲಿ ಪ್ರಿಯವ್ರತ ರಾಯ ವೃಷಭರಾಯ ಜಡಭರತ ಮನು ಮಹೇಶ್ವರರು ಇವರೆಲ್ಲರ ಕಥೆಗಳೂ, ಖಗೋಳ ಮತ್ತು ಸ್ವರ್ಗ–ನರಕ ಲೋಕಗಳ ವರ್ಣನೆಯೂ ಬಂದಿವೆ. ಆರು ಮತ್ತು ಏಳನೆಯ ಸ್ಕಂಧಗಳಲ್ಲಿ ಅಜಾಮಿಳ, ವೃತ್ರಾಸುರ, ಸಪ್ತ ಮರುತ್ತುಗಳು, ಪ್ರಹ್ಲಾದ ಮತ್ತು ತ್ರಿಪುರಾಸುರರ ಚರಿತ್ರೆಗಳಿವೆ. ಎಂಟನೆಯ ಸ್ಕಂಧವು ಮನು ಮುನಿಗಳ ವರ್ಣನೆ ಮಾಡಿ ಗಜೇಂದ್ರೋಪಾಖ್ಯಾನವನ್ನು ಹೇಳುತ್ತದೆ. ದುರ್ವಾಸರು ಇಂದ್ರನಿಗೆ ಕೊಟ್ಟ ಶಾಪದ ಕಥೆ, ಸಮುದ್ರಮಥನದ ಇತಿಹಾಸ, ಮೋಹಿನಿಯ ಅವತಾರ, ವಾಮನ ಮತ್ತು ಮತ್ಸ್ಯಾವತಾರಗಳ ಕಥೆಗಳೂ ಈ ಸ್ಕಂಧದಲ್ಲಿಯೇ ಸೇರಿಕೊಂಡಿವೆ. ನವಮಸ್ಕಂಧದಲ್ಲಿ ವೈವಸ್ವತಮನುವಿನ ವಂಶವರ್ಣನೆ ಬರುತ್ತದೆ. ಭಕ್ತನಾದ ಅಂಬ

ರೀಷನ ಕಥೆ, ಇಕ್ಷ್ವಾಕುವಂಶದ ವರ್ಣನೆ, ಭಗೀರಥನು ಗಂಗೆಯನ್ನು ಭೂಮಿಗೆ ತಂದ ವೃತ್ತಾಂತ, ಶ್ರೀರಾಮಾವತಾರದ ಕಥೆ, ಪರಶುರಾಮವೃತ್ತಾಂತ, ಮದಾಲಸೆಯ ಉಪಾಖ್ಯಾನ ಇವು ಮುಖ್ಯವಾಗಿವೆ. ದಶಮಸ್ಕಂಧವೇ ಭಾಗವತದಲ್ಲಿ ಬಹಳ ಜನಪ್ರಿಯವಾದ ಭಾಗ. ನವಮಸ್ಕಂಧದ ಕೊನೆಯಲ್ಲಿ ಆರಂಭವಾದ ಯಾದವ ವಂಶವರ್ಣನೆ ಇದರಲ್ಲಿ ಮುಂದುವರಿದು ಯಾದವಶಿರೋಮಣಿಯಾದ ಶ್ರೀ ಕೃಷ್ಣನ ಚರಿತ್ರೆ ವಿಸ್ತಾರವಾಗಿ ಬಂದಿದೆ ಇಲ್ಲಿ. ಕೃಷ್ಣನ ತಂದೆತಾಯಿಗಳಾದ ವಸುದೇವ ದೇವಕಿಯರ ಮದುವೆಯ ಕಥೆಯಿಂದ ಆರಂಭವಾಗಿ ಸ್ವಾಮಿ ಅಶ್ವಮೇಧ ಯಾಗಮಾಡಿದ ಕಥೆಯವರೆಗೆ ಶ್ರೀ ಕೃಷ್ಣನ ಜೀವಿತ ವೃತ್ತಾಂತವೆಲ್ಲ ಹತ್ತನೆಯ ಸ್ಕಂಧದಲ್ಲಿಯೇ ಬಂದಿದೆ. ಭಾಗವತವೆಂದೊಡನೆ ಜನ ಸಾಮಾನ್ಯವಾಗಿ ಶ್ರೀ ಕೃಷ್ಣಚರಿತ್ರೆಯನ್ನು ಸ್ಮರಿಸಿಕೊಳ್ಳುತ್ತಾರೆ. ಒಟ್ಟು ಭಾಗವತದಲ್ಲಿ ದಶಮಸ್ಕಂಧದಷ್ಟು ವಿಸ್ತಾರವಾದ ಸ್ಕಂಧವಾವುದೂ ಇಲ್ಲ. ಏಕಾದಶಸ್ಕಂಧದಲ್ಲಿ ಶ್ರೀ ಕೃಷ್ಣನಿರ್ಯಾಣ ಕಥೆ ಬರುತ್ತದೆ. ಯಾದವರು ದುರಹಂಕಾರದಿಂದ ವರ್ತಿಸಿ ಋಷಿಶಾಪಕ್ಕೆ ಗುರಿಯಾಗಿ ಮದ್ಯಪಾನದಿಂದ ಮತ್ತರಾಗಿ ಅಂತಃಕಲಹದಿಂದ ಸತ್ತ ಕಥೆ, ಕೃಷ್ಣನು ವನದಲ್ಲಿ ಮಲಗಿದ್ದರೆ ಜರಸ್ ಎಂಬ ಬೇಟೆಗಾರನು ಅವನನ್ನು ಒಂದು ಜಿಂಕೆಯೆಂದು ಭ್ರಾಂತಿಪಟ್ಟು ಬಾಣಪ್ರಯೋಗ ಮಾಡಿ ಕೊಂದ ಕಥೆ ಈ ಸ್ಕಂಧದಲ್ಲಿವೆ. ಕೊನೆಯದಾದ ಹನ್ನೆರಡನೆಯ ಸ್ಕಂಧವು ಚಿಕ್ಕದು. ಅದರಲ್ಲಿ ಭವಿಷ್ಯನ್ನರಪಾಲರ ಕಥೆಯಿದೆ. ಈ ಭಾಗವತ ಕಥೆಯನ್ನೆಲ್ಲ ಶುಕಮಹರ್ಷಿಗಳಿಂದಲೇ ನೇರವಾಗಿ ಕೇಳಿದ ಮಹಾ ಭಕ್ತನಾದ ಪರೀಕ್ಷಿತ ಮಹಾರಾಜನಿಗೆ ಸದ್ಗತಿ ಲಭಿಸಿದ ವೃತ್ತಾಂತ ಈ ಸ್ಕಂಧದಲ್ಲಿ ಬಂದಿದೆ.

ಭಗವತ್ ಭಾಗವತರ ಕಥೆಗಳನ್ನೊಳಗೊಂಡ ಈ ಗ್ರಂಥಕ್ಕೆ ಭಾಗವತವೆಂದೆಂದೇ ಹೆಸರು. ಭಗವಂತನ ಅನೇಕ ಅವತಾರಗಳ ಕಥೆ ಇಲ್ಲಿ ರಾಮಣೀಯಕವಾಗಿ ನಿರೂಪಿತವಾಗಿವೆ. ಹಾಗೆಯೇ ಭಗವಂತನ ಅನೇಕ ಭಕ್ತರ ಕಥೆಗಳೂ ಇಲ್ಲಿವೆ. ಮಹಾವಿಷ್ಣುವಿನ ಲೀಲಾವರ್ಣನೆಯಿಂದ ತುಂಬಿದ ಈ ಪುರಾಣ ಸಹಜವಾಗಿ ವಿಷ್ಣುಭಕ್ತರಿಗೆ ಅತ್ಯಂತ ಪ್ರಿಯವೂ ಪೂಜ್ಯವೂ ಆಗಿದೆ. ಇದು ಭಾರತದ ಎಲ್ಲ ಭಾಷೆಗಳಿಗೂ ಅನುವಾದವಾಗಿ ಎಲ್ಲೆಡೆಗಳಲ್ಲಿಯೂ ಪ್ರಚಾರವಾಗಿದೆ.

ನಮ್ಮ ಭಾಗವತಕವಿಗೆ ಹರಿಗುಣಸ್ತುತಿ, ಹರಿಪಾದಭಕ್ತರ ಚಾರಿತ್ರಕಥನ, ಭಕ್ತಿಮಾರ್ಗನಿರೂಪಣೆ ಇವು ಮುಖ್ಯವಾದ ಗುರಿಗಳು. ಈ ಗುರಿಸಾಧನೆಗೆ ಆತನು ನಿರಂತರವಾಗಿ ಶ್ರಮಿಸಿದ್ದಾನೆ. ಆದರೆ ಆತನ ಕೃತಿಯಲ್ಲಿ ಕಾವ್ಯಗುಣ ಕಡಿಮೆಯಾಗಿಲ್ಲ. ನಿತ್ಯಾತ್ಮಶುಕನು ಆ ವೀರನಾರಾಯಣನ ಭಕ್ತ ಕುಮಾರವ್ಯಾಸನ ಜಾಡನ್ನು ಹಿಡಿದು ನಡೆಯುತ್ತ ರಸವತ್ತಾದ ಕಾವ್ಯನಿರ್ಮಾಣ ಮಾಡಲು ಹೋಗಿದ್ದಾನೆ. ಭಾಮಿನೀ ಷಟ್ಪದಿ ಕವಿಗೆ ಒಲಿದು ಬಂದಿದೆ. ಎಲ್ಲಿಯೂ ಕುಂಟದ ಪದ್ಯರಚನೆ ನಿತ್ಯಾತ್ಮಶುಕನ ಸಲ್ಲಕ್ಷಣ. 'ಹಲಗೆ ಬಳಪ ಪಿಡಿಯದ ಅಗ್ಗಳಿಕೆ' ನಾರಣಪ್ಪನಿಗೆ ಮಾತ್ರವೇ ಅಲ್ಲ, ನಿತ್ಯಾತ್ಮಶುಕನಿಗೂ ಸಲ್ಲುತ್ತದೆ. ಕವಿಯ ಸರಳ ಭಾಷೆ, ಸುಂದರ ಉಪಮಾನಗಳು ರಮ್ಯವೂ ಸಮಯೋಚಿತವೂ ಆಗಿದ್ದು ವಾಚಕರ ಚಿತ್ತಾಪಹಾರಕಗಳಾಗಿವೆ. ಕಾವ್ಯಾಂಗಗಳೆಂದು ಹಲವು ಹದಿನೆಂಟು ವರ್ಣನೆಗಳಿಗೆ ಜೋತುಬೀಳದೆ ಕವಿ ಕಥಾನಿರೂಪಣೆಗೆ ಕಂಟಕವಾಗದಂತೆ ಸಮಯೋಚಿತವಾಗಿ ತನ್ನ ವರ್ಣನಾಕುಶಲತೆಯನ್ನು ಮೆರೆದಿದ್ದಾನೆ.

ವಸುದೇವ ದೇವಕಿಯರ ವಿವಾಹವನ್ನು ವರ್ಣಿಸಲು ಹೊರಟು ಕವಿ 'ಯಾದವರ ಪುರದೊಳಗೆ ತಳಿತುದು ಮೇದಿನೀಶ ಮಹಾವಿವಾಹ ವಿಧಾನವಿಸ್ತಾರ' ಎಂದು ಒಂದು ಮಾತಿನಲ್ಲಿ ಹೇಳಿ ಮುಗಿಸಿಬಿಟ್ಟು ತನಗೆ ಪ್ರಕೃತವಾದ ಮದುಮಕ್ಕಳ ಮೆರವಣಿಗೆಯಲ್ಲಿ ದೈತ್ಯನಾದ ಕಂಸನು ತಾನೇ ಸಾರಥಿಯಾಗಿ ರಥ ನಡಿಸಿದ ಸಂಗತಿಯನ್ನೂ ಅವನ ಉತ್ಸಾಹವನ್ನೂ ಹೇಳಿ ನಗರದ ಮಧ್ಯೆ ಬಂದಾಗ ಕೇಳಿಬಂದ ಘೋರವಾದ ಆಕಾಶವಾಣಿಯನ್ನು ಪ್ರಸ್ತಾಪಿಸುತ್ತಾನೆ. ಅದನ್ನು ಕೇಳಿದ ಜನಕ್ಕಾದ ಗಾಬರಿ, ನಿರುತ್ಸಾಹಗಳನ್ನು ಕವಿ 'ಮಂಗಳದ ಬೆಳಗೆಯ್ಯಲ ಕಟಕಟಂಗಳದ ಮಳೆಗಱೆದ ತೆಱನಾಯ್ತು' ಎಂದು ಸೂತ್ರಪ್ರಾಯವಾಗಿ ಬಣ್ಣಿಸಿರುವುದು ಬಹಳ ಸ್ವಾರಸ್ಯವಾಗಿದೆ. ಬೆಳೆದ ಗದ್ದೆಗೆ ಬೆಂಕಿಯ ಮಳೆ ಸುರಿದ ಹಾಗಾಯಿತಂತೆ—ಆ ನಭೋನಿನದ ಕೇಳಿ!

**ಕಥಾ ಸಾರಾಂಶ:**

ಶ್ರೀ ಕೃಷ್ಣ ಪರಮಾತ್ಮನು ದುಷ್ಟ ಕ್ಷತ್ರಿಯರಿಂದ ನರಳುತ್ತಿದ್ದ ಭೂಲೋಕದ ಸಜ್ಜನರನ್ನು ಸಂರಕ್ಷಿಸಿ ಭೂಭಾರವನ್ನು ಕಳೆದು ಧರ್ಮಸಂಸ್ಥಾಪನೆ ಮಾಡುವುದಕ್ಕಾಗಿ ಭೂಲೋಕದಲ್ಲಿ ಅವತರಿಸಿದ ಮಹಾವಿಷ್ಣು. ಭೂ

ದೇವಿಯು ಕಂಸನೇ ಮೊದಲಾದ ಮಹಾದುಷ್ಟ ರಾಕ್ಷಸರ ಪಾಪಕೃತ್ಯಗಳಿಂದ ನೊಂದು ಚತುರ್ಮುಖ ಬ್ರಹ್ಮನಲ್ಲಿ ಮೊರೆಯಿಡಲು ಅವನು ತನ್ನಿಂದ ಆಗದ ಕೆಲಸವಿದೆಂದು ತಿಳಿದು ಆಕೆಯನ್ನೂ ಜೊತೆಯಲ್ಲಿ ಕರೆದುಕೊಂಡು ಇಂದ್ರಾದಿ ದಿಕ್ಪಾಲಕರೊಡನೆ ವೈಕುಂಠಕ್ಕೆ ಹೋಗಿ ಮಹಾವಿಷ್ಣುವಿಗೆ ವಿಜ್ಞಾಪಿಸಿಕೊಂಡನು. ವಿಷ್ಣುವಿನ ಆಜ್ಞೆಯಂತೆ ತಾನು ಮಾಡಿದ ಸೃಷ್ಟಿ ಇಂದಿಗೆ ಕೆಟ್ಟುಹೋಗುವುದೆಂದೂ ಲೋಕಕ್ಕೆ ರಕ್ಷಣೆ ಇಲ್ಲವಾಗಿದೆಯೆಂದೂ ಹೇಳಿಕೊಂಡನು.

ಶ್ರೀ ಮಹಾವಿಷ್ಣು ದೇವತೆಗಳ ಸಂಕಟವನ್ನೂ ಭೂದೇವಿಯ ಮೊರೆಯನ್ನೂ ಕೇಳಿ ಕನಿಕರಿಸಿ "ಅಂಜದಿರಿ, ನಾನು ಭೂಮಿಯ ಮೇಲೆ ಆದಿಶೇಷನೊಡನೆ ಅವತರಿಸಿ ರಾಜವೇಷದಲ್ಲಿರುವ ಸಮಸ್ತ ದೈತ್ಯರನ್ನೂ ಸಂಹರಿಸುತ್ತೇನೆ." ಎಂದು ಅಭಯ ನೀಡಿದನು. ಬ್ರಹ್ಮಾದಿದೇವತೆಗಳೆಲ್ಲರೂ ಸಾಷ್ಟಾಂಗಪ್ರಣಾಮ ಮಾಡಿ ಆತನ ಅನುಗ್ರಹಕ್ಕೆ ಆನಂದಿಸಿದರು. ಆಗ ಮಹಾವಿಷ್ಣುವು ಸಮಸ್ತ ದೇವತೆಗಳೂ ಯದುಕುಲದಲ್ಲಿ ಹುಟ್ಟಬೇಕೆಂದೂ ಅವರಿಂದ ಮುಂದೆ ತನಗೆ ಸಹಾಯವಾಗುವುದೆಂದೂ ಹೇಳಿ ಅಂತರ್ಧಾನನಾದನು ; ತರುವಾಯ ಮಧುರಾ ನಗರದ ವಸುದೇವನೆಂಬ ಯಾದವನ ಸುತನಾಗಿ ಜನ್ಮಿಸಲು ನಿರ್ಧರಿಸಿಕೊಂಡನು.

ಇತ್ತ ಮಧುರಾ ನಗರದಲ್ಲಿ ಕಂಸನು ತನ್ನ ತಂದೆಯೂ ಆ ದೇಶದ ಪ್ರಭುವೂ ಆದ ಉಗ್ರಸೇನ ಮಹಾರಾಜನನ್ನು ಸಿಂಹಾಸನಚ್ಯುತನನ್ನಾಗಿಸಿ ಸೆರೆಯಲ್ಲಿಟ್ಟು ತಾನೇ ರಾಜಪದವಿಯನ್ನು ಆಕ್ರಮಿಸಿಕೊಂಡನು. ಅವನ ಉಪಟಳಕ್ಕೆ ಹೆದರಿ ಅನೇಕ ಯಾದವರು ದಿಕ್ಕಾಪಾಲಾಗಿ ವಲಸೆ ಹೋದರು. ಉಳಿದವರು ಯಾವ ಕಾಲಕ್ಕೆ ಏನು ವಿಪತ್ತೋ ಎಂದು ಅಂಜುತ್ತ ಹೊತ್ತು ಕಳೆಯುತ್ತಿದ್ದರು. ಹೀಗಿರುವಾಗ ದೇವಕನ ಮಗಳು ದೇವಕಿಯನ್ನು ಯದೂತ್ತಮನಾದ ವಸುದೇವನು ಮದುವೆಯಾದನು. ರಾಜಪುತ್ರಿಯ ಮದುವೆಗೆ ಸಹಜವಾಗಿ ನಗರದ ಜನರೆಲ್ಲ ಸಡಗರಪಟ್ಟರು. ಜನ ಊರನ್ನೆಲ್ಲ ಸಿಂಗರಿಸಿದರು. ಎಲ್ಲೆಲ್ಲೂ ಗಾಯನ ನಾಟ್ಯ ಸಮಾರಂಭಗಳು ನಡೆಯುತ್ತಿದ್ದುವು. ಕಂಸನು ತನ್ನ ತಂಗಿಯ ಮದುವೆಯನ್ನು ಬಹಳ ವಿಜೃಂಭಣೆಯಿಂದಲೇ ಮಾಡಿದನು. ಉತ್ಸಾಹದ ಭರದಲ್ಲಿ ಮದುಮಕ್ಕಳ ಮೆರವಣಿಗೆಯ ರಥಕ್ಕೆ ಸ್ವಯಂ ಕಂಸನೇ ಸಾರಥಿಯಾಗಿದ್ದನು. ಊರಿನ ಮಧ್ಯಪ್ರದೇಶಕ್ಕೆ ಮೆರವಣಿಗೆ ಬಂದಾಗ ಇದ್ದಕ್ಕಿದ್ದಂತೆ ಅದ್ಭುತವಾದ ಶಬ್ದವಾಯಿತು. ಅನೇಕ ಮೋಡಗಳು ಒಟ್ಟಿಗೆ ಒಂದೇ ಸಲ ಗುಡುಗಿದ ಹಾಗಾಯಿತು. ಎಲ್ಲರೂ ಗಾಬರಿಗೊಂಡರು. ಆಗ ಒಂದು ಅಶರೀರವಾಣಿ ಕೇಳಿಸಿತು : "ಎಲವೋ ಖೂಳ ಕಂಸ, ಈ ನಿನ್ನ ತಂಗಿಯ ಎಂಟನೆಯ ಗರ್ಭದಲ್ಲಿ ಮಹಾವಿಷ್ಣುವೇ ಹುಟ್ಟಿ ನಿನ್ನನ್ನು ಕೊಲ್ಲುತ್ತಾನೆ." ಈ ಮಾತುಗಳನ್ನು ಕೇಳಿ ಯುವರಾಜ ಕಂಸನ ಉತ್ಸಾಹವೆಲ್ಲ ಇಂಗಿಹೋಯಿತು. ತನ್ನ ಮಮತೆಯ ತಂಗಿಯೇ ತನ್ನ ಕೊಲೆಗಾರನನ್ನು ಹೆರುವಳೆಂದು ಕೇಳಿದಾಗ ಅವನಿಗೆ ಮೇರೆಯಿಲ್ಲದ ರೋಷ ಹುಟ್ಟಿತು. ಆ ತಂಗಿಯನ್ನೇ ಕೊಲೆಮಾಡಿ ಅಶರೀರವಾಣಿಯನ್ನು ಸುಳ್ಳಾಗಿಸಬೇಕೆಂಬ ಸಂಕಲ್ಪ ಮೂಡಿತು. ಒಡನೆಯೇ ಅವನು ರಥದಲ್ಲಿ ಕುಳಿತಿದ್ದ ದೇವಕಿಯನ್ನು ಸೆಳೆದು ಕತ್ತಿಯಿಂದ ಅವಳ ಕೊರಳನ್ನು ಕತ್ತರಿಸಲು ಹವಣಿಸಿದನು. ವಸುದೇವನಿಗೆ ದಿಕ್ಕು ತೋರದ ಹಾಗಾಯಿತು. ಈ ಅನಿರೀಕ್ಷಿತವಾದ ಆಪತ್ತಿನಿಂದ ದೇವಕಿಯನ್ನು ಸಂರಕ್ಷಿಸಲು ಅವನಿಗೆ ಬೇರೇನೂ ದಾರಿ ತೋರದೆ ದೇವಕಿಯ ಮಕ್ಕಳೆಲ್ಲವನ್ನೂ ಕಂಸನಿಗೆ ಒಪ್ಪಿಸಿಬಿಡುವುದಾಗಿ ಮಾತುಕೊಟ್ಟನು. ದೇವಕಿ ಹೆರುವ ಮಗನಿಂದ ತನಗೆ ವಿಪತ್ತೇ ಹೊರತು ದೇವಕಿಯೇ ಮಾರಕಳಲ್ಲವೆಂದು ತಿಳಿದ ಕಂಸನು ಕೊಂಚ ಶಾಂತನಾಗಿ ಹೆಂಗೊಲೆಯ ಪ್ರಯತ್ನವನ್ನು ಕೈಬಿಟ್ಟನು. ಬೀಸುವ ದೊಣ್ಣೆ ತಪ್ಪಿತೆಂದು ವಸುದೇವನು ಸಂತುಷ್ಟನಾದನು. ಮದುವೆಯ ಮೆರವಣಿಗೆ ಅಲ್ಲಿಗೆ ಮುಗಿಯಿತು. ಮದುಮಕ್ಕಳು ಕಂಸನ ಸೆರೆಮನೆಯನ್ನು ಸೇರಬೇಕಾಯಿತು.

ವಿಧಿವಿಲಾಸವನ್ನು ಯಾರು ವರ್ಣಿಸಬಹುದು ? ಮದುವೆಯ ಸಂಭ್ರಮದಲ್ಲಿದ್ದ ವಸುದೇವ ದೇವಕಿಯರು ಬಯಲಮಾತಿನ ದೆಸೆಯಿಂದ ರಾಜಕೋಪಕ್ಕೆ ಸಿಕ್ಕಿ ಸೆರೆಯಾಳುಗಳಾಗಿ ನರಳಬೇಕಾಯಿತು. ಅನಿವಾರ್ಯವಾದುದನ್ನು ಅನುಭವಿಸಿ ತೀರಬೇಕಷ್ಟೆ ? ಕಾಲಕ್ರಮದಲ್ಲಿ ಆ ದಂಪತಿಗಳು ಅದಕ್ಕೇ ಹೊಂದಿಕೊಂಡರು. ಕೀರ್ತಿಮಾನ್ ಎಂಬ ದೊಡ್ಡ ಮಗ ಹುಟ್ಟಿದನು. ವಸುದೇವನು ಮದುವೆಯ ದಿನ ಕಂಸನಿಗೆ ಮಾತುಕೊಟ್ಟಿದ್ದಂತೆ ತನ್ನ ಮೊದಲ ಮಗುವನ್ನು ಎತ್ತಿಕೊಂಡು ಬಂದು ಮೃತ್ಯುವಿಗೆ ಒಪ್ಪಿಸುವಂತೆ ಕಂಸನ ಕೈಯಲ್ಲಿ ಕೊಟ್ಟನು. ಈ ಅಪೂರ್ವವಾದ ಸತ್ಯವಾಕ್ಯತೆ ಧರ್ಮನಿಷ್ಠೆಗಳನ್ನು ಕಂಡು ದೈತ್ಯನಾದರೂ ಕಂಸನ ಮನಸ್ಸು ಕರಗಿತು. ಅವನಿಗೂ ಕನಿಕರ ಹುಟ್ಟಿತು. ದೇವಕಿಯ ಎಂಟನೆಯ ಮಗು ತನಗೆ ಮೃತ್ಯುವೇ ಹೊರತು ಮಿಕ್ಕ ಮಕ್ಕಳು ತನಗೆ ವೈರಿಗಳಲ್ಲವೆಂಬುದನ್ನು ಸ್ಮರಿಸಿ ಆ ಮಗುವನ್ನು ವಸುದೇವನಿಗೆ ಹಿಂತಿರುಗಿಕೊಟ್ಟನು. ಈ ಅಪೂರ್ವವಾದ ಔದಾರ್ಯವನ್ನು ಕಂಡು

ವಸುದೇವನಿಗೆ ಆಶ್ಚರ್ಯವಾಯಿತು. ಅವನು ಧೈರ್ಯಮಾಡಿ ಮಗುವನ್ನು ಹಿಂದಕ್ಕೆ ತಂದು ದೇವಕಿಗೆ ಕೊಟ್ಟನು. ಆದರೆ ಈ ಸಂತೋಷ ಅವರಿಗೆ ಹೆಚ್ಚು ದಿನ ಉಳಿಯಲಿಲ್ಲ. ಕಂಸನ ಸಭೆಗೆ ಬಂದ ನಾರದನು "ಮಹಾವಿಷ್ಣುವು ಬಹಳ ಮಾಯಾವಿ. ಅವನನ್ನು ನಂಬಲಾಗದು. ನೀನು ಎಂಟನೆಯ ಮಗುವಿಗಾಗಿ ಕಾದಿದ್ದರೆ ವಿಷ್ಣು ಮುಂಚೆಯೇ ಹುಟ್ಟಿ ನಿನ್ನನ್ನು ಮೋಸಪಡಿಸಬಹುದು" ಎಂದು ಕಂಸನಿಗೆ ಉಪದೇಶಿಸಿದನು. ಆಗ ಮತ್ತೆ ಕಂಸನ ದೈತ್ಯಬುದ್ಧಿ ಪ್ರಕೋಪವಾಯಿತು. ಅವನು ತಾನು ಹಿಂದೆ ಆಡಿದ್ದ ಔದಾರ್ಯದ ಮಾತುಗಳನ್ನು ಮರೆತು ವಸುದೇವನ ಮಕ್ಕಳನ್ನು ಹಿಡಿತರಿಸಿ ಕೊಂದುಬಿಟ್ಟನು. ಹೀಗೆ ಆರು ಮಕ್ಕಳೂ ನಷ್ಟವಾಗಿಹೋದವು. ದೇವಕಿ ಏಳನೆಯ ಸಲ ಗರ್ಭವತಿಯಾದಾಗ ಭಗವಂತನು ಮಾಯೆಯ ಸಹಾಯದಿಂದ ಆ ಶಿಶುವನ್ನು ಒಯ್ದು ವಸುದೇವನ ಇನ್ನೊಬ್ಬ ಹೆಂಡತಿಯಾದ ರೋಹಿಣಿಯ ಗರ್ಭದಲ್ಲಿರಿಸಿದನು. ಕಂಸನ ಕಡೆಯವರು ಈ ದೈವರಹಸ್ಯವನ್ನರಿಯದೆ ದೇವಕಿಗೆ ಗರ್ಭಸ್ರಾವವಾಯಿತೆಂದು ಭಾವಿಸಿದರು. ಹಾಗೆ ರೋಹಿಣಿಯ ಗರ್ಭದಲ್ಲಿ ಬೆಳೆದು ಹುಟ್ಟಿದವನೇ ಬಲರಾಮ. ಶ್ರೀಮನ್ಮಹಾವಿಷ್ಣುವೇ ಎಂಟನೆಯ ಶಿಶು. ಈ ಸಲ ಕಂಸನು ಬಹಳ ಕಟ್ಟುನಿಟ್ಟಾದ ಕಾವಲನ್ನು ಏರ್ಪಡಿಸಿ ತನ್ನ ಕೊಲೆಗಾರ ಹುಟ್ಟುವುದನ್ನೇ ಎದುರು ನೋಡುತ್ತಿದ್ದನು. ಶ್ರಾವಣಮಾಸದ ಬಹುಳ ಅಷ್ಟಮಿಯ ದಿನ ಅರ್ಧರಾತ್ರಿಯ ವೇಳೆಯಲ್ಲಿ ದೇವಕಿ ಪ್ರಸವಿಸಿದಳು. ಚತುರ್ಭುಜನೂ ಶಂಖಚಕ್ರಗದಾಧಾರಿಯೂ ಆದ ಶ್ರೀಮನ್ಮಹಾವಿಷ್ಣುವು ತನ್ನ ನಿಜಸ್ವರೂಪದಲ್ಲಿ ಹುಟ್ಟಿಬಂದನು. ದೇವಕೀ ವಸುದೇವರು ಬೆರಗಾಗಿ ಭಗವಂತನಿಗೆ ಸಾಷ್ಟಾಂಗ ಪ್ರಣಾಮ ಮಾಡಿ ತಮ್ಮ ಸಂಕಟವನ್ನು ಹೇಳಿಕೊಂಡರು. ಅವರ ಪ್ರಾರ್ಥನೆಯನ್ನೆಲ್ಲ ಲಾಲಿಸಿ, ತಾನು ಧರ್ಮಸಂಸ್ಥಾಪನೆಗಾಗಿಯೇ ಹುಟ್ಟಿರುವುದಾಗಿಯೂ ಅದೇ ಹೊತ್ತಿನಲ್ಲಿ ಗೋಕುಲದ ನಂದನ ಹೆಂಡತಿ ಯಶೋದೆಯು ಹೆಣ್ಣುಮಗಳನ್ನು ಹೆತ್ತಿರುವುದಾಗಿಯೂ ಆ ಒಡನೆಯೇ ತನ್ನನ್ನು ಅಲ್ಲಿಗೆ ತೆಗೆದುಕೊಂಡು ಹೋಗಿ ಯಶೋದೆಯ ಬಳಿಯಲ್ಲಿಟ್ಟು ಆ ಹೆಣ್ಣುಮಗುವನ್ನು ತಂದು ಇಲ್ಲಿರಿಸಬೇಕೆಂದು ಹೇಳಿ ತನ್ನ ದಿವ್ಯರೂಪವನ್ನು ಉಪಸಂಹರಿಸಿ ಸಾಧಾರಣ ಮಗುವಿನ ರೂಪವನ್ನು ಹೊಂದಿದನು.

ನಂದನು ಭಗವಂತನ ಆದೇಶದಂತೆ ಆಶಿಶುವನ್ನೆತ್ತಿಕೊಂಡು ನಂದ ಗೋಕುಲಕ್ಕೆ ಹೊರಡಲು ಸಿದ್ಧನಾದನು. ಆ ಕೂಡಲೆ ಸೆರೆಮನೆಯ ಕದಗಳು ತಾವಾಗಿ ತೆರೆದುಕೊಂಡವು. ಕಾವಲ ಭಟರು ಗಾಢನಿದ್ರಾವಶರಾಗಿದ್ದರು. ಸುಲಲಿತವಾಗಿ ವಸುದೇವನು ಸೆರೆಮನೆಯ ಪರಿಸರಗಳನ್ನು ದಾಟಿ ಮಧುರಾ ನಗರವನ್ನೂ ಬಿಟ್ಟು ಹೊರಟು ಯಮುನಾ ನದೀ ತೀರವನ್ನು ಸೇರಿದನು. ರಭಸದಿಂದ ಮಳೆ ಸುರಿಯತೊಡಗಲು ಸ್ವಯಂ ಆದಿಶೇಷನೇ ಬಂದು ತನ್ನ ಹೆಡೆಯನ್ನೇ ವಸುದೇವನಿಗೆ ಕೊಡೆಯಂತೆ ಹಿಡಿದನು! ಭೋರ್ಗರೆದು ಹರಿಯುತ್ತಿದ್ದ ಯಮುನಾನದಿ ವಸುದೇವನಿಗೆ ದಾರಿ ಕೊಟ್ಟಿತು! ಅವನು ಸುಸೂತ್ರವಾಗಿ ಗೋಕುಲವನ್ನು ಸೇರಿ ಆ ದೇವಶಿಶುವನ್ನು ಯಶೋದೆಯ ಪಕ್ಕದಲ್ಲಿ ಮಲಗಿಸಿ ಅವಳು ಆಗತಾನೆ ಪ್ರಸವಿಸಿದ್ದ ಹೆಣ್ಣುಮಗುವನ್ನು ಎತ್ತಿಕೊಂಡು ಹಿಂತಿರುಗಿದನು. ಅವನು ಸೆರೆಮನೆಯನ್ನು ಸೇರುತ್ತಲೇ ಅದರ ಕದಗಳು ಮುಚ್ಚಿಕೊಂಡವು. ಅವನ ಕಾಲುಗಳಿಗೆ ಮತ್ತೆ ಸಂಕಲೆಗಳು ಬಿದ್ದವು. ಕಾವಲುಗಾರರು ಎಚ್ಚರಗೊಂಡರು. ದೈವವಿಮುಖರಾದಾಗ ಯಾರಿಗಾದರೂ ಕಷ್ಟ ತಪ್ಪದು!

ಹೊಸ ಮಗು ಅತ್ತ ಸದ್ದು ಕೇಳಿಸಿದ ಒಡನೆಯೇ ಭಟರು ಹೋಗಿ ಕಂಸನಿಗೆ ತಿಳಿಸಿದರು. ಈ ಸುದ್ದಿಗೇ ಕಾದು ಕುಳಿತಿದ್ದ ಕಂಸನು ಆತುರದಿಂದ ಓಡಿಬಂದು ಸೂತಿಕಾಗೃಹವನ್ನು ಹೊಕ್ಕು ನೋಡಿದಾಗ ಅದು ಹೆಣ್ಣುಮಗುವಾಗಿತ್ತು! ಆದರೂ ಲೆಕ್ಕಿಸದೆ ಅವನು ತಂಗಿಯ ಗೋಳನ್ನೂ ಗಮನಿಸದೆ ಆ ಎಳೆಯ ಕಂದಮ್ಮನನ್ನು ಹೊತ್ತು ತಂದು ಕಲ್ಲಿಗೆ ಅಪ್ಪಳಿಸಲು ಮೇಲಕ್ಕೆತ್ತಿದನು. ಆದರೆ ಆ ಶಿಶುವು ಅವನ ಕೈಯಿಂದ ತಪ್ಪಿಸಿಕೊಂಡು ಮೇಲಕ್ಕೆ ನೆಗೆದು "ಎಲವೋ ಶಿಶುಹಂತಕ! ನಿನಗೆ ದಕ್ಕುವ ಕವಳವೇ ನಾನು? ನಿನ್ನನ್ನು ಕೊಲ್ಲುವ ಧೀರನು ಬೇರೆ ಕಡೆ ಬೆಳೆಯುತ್ತಿದ್ದಾನೆ. ಬೇಗ ನಿನ್ನ ಕೊರಳು ಕತ್ತರಿಸುತ್ತಾನೆ!" ಎಂದು ಗಟ್ಟಿಯಾಗಿ ಕೂಗಿ ಹೇಳಿ ಅದೃಶ್ಯವಾಯಿತು. ಕಂಸನ ದುಃಖ ನಿರಾಸೆಗಳಿಗೆ ಮೇರೆಯಿಲ್ಲದಂತಾಯಿತು. ಮಾಯಾವಿಯಾದ ವಿಷ್ಣುವು ತನ್ನನ್ನು ಕಡೆಗೂ ಮೋಸಪಡಿಸಿದನೆಂದು ಕೋಪ! ಬಯಲ ಮಾತನ್ನು ನೆಚ್ಚಿ ತಂಗಿಗೆ ಸಲ್ಲದ ದುಃಖವನ್ನೊಡ್ಡಿದೆನೆಂದು ದುಃಖ. ದೇವಕೀ ವಸುದೇವರಲ್ಲಿ ಅವನು ಕ್ಷಮೆ ಬೇಡಿಕೊಂಡನು.

ಇತ್ತ ಗೋಕುಲದಲ್ಲಿ ನಂದ ಯಶೋದೆಯರ ಸಂಭ್ರಮ ಹೇಳತೀರದು. ಆ ನಟ್ಟಿರುಳಿನಲ್ಲಿಯೇ ನಂದನು ಜೋಯಿಸರನ್ನು ಕರೆಯಿಸಿ ಮಗುವಿಗೆ ಜಾತಕರ್ಮ ಮಾಡಿಸಿ ಪರಿಜನ ಸಮೇತನಾಗಿ ವಿಪ್ರರನ್ನಾರಾಧಿಸಿದನು.

ಮಗು ಹುಟ್ಟಿದ ಸುದ್ದಿ ತಿಳಿದ ಕೂಡಲೆ ನೆರೆಹೊರೆಯ ಗೋಪಿಯರು ಉತ್ಸಾಹದಿಂದ ಬಂದು ಯಶೋದೆಯನ್ನು ಅಭಿನಂದಿಸಿ ಮಗುವನ್ನು ಹರಸಿದರು. ಅಂದಿನಿಂದ ಅಖಿಲೇಶ್ವರನಾದ ಕೃಷ್ಣನ ಸಾನ್ನಿಧ್ಯ ಗೋಕುಲಕ್ಕೆ ವಿಶೇಷ ವೈಭವವನ್ನುಂಟುಮಾಡಿತು.

ವಸುದೇವ ದೇವಕಿಯರನ್ನು ಸಂತೈಸಿ ಕಳುಹಿಸಿದುದಾದ ಮೇಲೆ ಕಂಸನು ಅರಮನೆಯಲ್ಲಿ ತನ್ನ ಆಪ್ತ ಪರಿವಾರದೊಡನೆ ಮಂತ್ರಾಲೋಚನೆ ಮಾಡಿ ತನ್ನ ವೈರಿಯಾದ ಮಹಾವಿಷ್ಣುವು ಎಲ್ಲಿ ಹುಟ್ಟಿರುವನೆಂಬುದನ್ನು ಕಂಡು ಹಿಡಿದು ಅವನು ಇನ್ನೂ ಎಳೆಯವನಾಗಿರುವಾಗಲೇ ಕೊಲ್ಲಬೇಕೆಂದು ನಿರ್ಣಯಿಸಿದನು. ಬ್ರಾಹ್ಮಣರು ಮಾಡುವ ಯಜ್ಞಾದಿಗಳೇ ದೇವತೆಗಳಿಗೆ ಆಧಾರಗಳಾದ್ದರಿಂದ ಸರ್ವಪ್ರಯತ್ನಗಳಿಂದಲೂ ಯಜ್ಞಗಳನ್ನು ಕೆಡಿಸಿ ವೇದಜ್ಞರಾದ ವಿಪ್ರರನ್ನು ಹಿಡಿದು ಕೊಲ್ಲಬೇಕೆಂದೂ ನಿರ್ಣಯವಾಯಿತು. ಅದರಂತೆ ಅನೇಕ ರಾಕ್ಷಸರು ನಾಡಿನ ಮೂಲೆ ಮೂಲೆಗಳಿಗೂ ಹೋಗಿ ಸಜ್ಜನಪೀಡೆ ನಡೆಸತೊಡಗಿದರು. ಅನೇಕಾನೇಕ ಪ್ರಜೆಗಳು ಕಂಗೆಟ್ಟು ದೇಶತ್ಯಾಗ ಮಾಡಿ ಬೇರೆ ಬೇರೆ ಕಡೆಗಳಿಗೆ ಹೋಗಿ ಸೇರಿಕೊಂಡರು.

ಹೀಗಿರುವಾಗ ಒಂದು ದಿನ ಕಂಸನಿಗೆ ಸಲ್ಲಿಸಬೇಕಾದ ವರ್ಷವರ್ತನೆಯನ್ನು ಕೊಟ್ಟು ಬರಲು ನಂದನು ಮಥುರೆಗೆ ಹೋಗಿ ಕಂಸನನ್ನು ಕಂಡು ಕಾಣಿಕೆ ಕೊಟ್ಟು ತನ್ನ ಪುತ್ರೋತ್ಸವದ ಸುದ್ದಿಯನ್ನು ತಿಳಿಸಿದನು. ಮುಪ್ಪಿನಲ್ಲಿ ಮಗ ಹುಟ್ಟಿದುದು ಭಾಗ್ಯವಿಶೇಷವೆಂದು ಹೇಳಿ ಕಂಸನು ನಂದನಿಗೆ ಅಭಿನಂದನೆ ಹೇಳಿದನಾದರೂ ಅವನ ಮನಸ್ಸಿನಲ್ಲಿ ಆ ಮಗುವೇ ವಿಷ್ಣುವಿರಬಹುದೇ ಎಂಬ ಸಂಶಯ ಮೂಡದಿರಲಿಲ್ಲ. ನಂದನು ಬಂದ ಸುದ್ದಿ ಕೇಳಿ ವಸುದೇವನು ಬಂದು ಅವನಿಂದ ತನ್ನ ಮಗುವಿನ ಯೋಗಕ್ಷೇಮವನ್ನು ಕೇಳಿ ತಿಳಿದುಕೊಂಡು ಮುಂದೆ ಅನೇಕ ಉತ್ಪಾತಗಳು ಸಂಭವಿಸಬಹುದೆಂದೂ ಆದ್ದರಿಂದ ಒಡನೆಯೇ ಗೋಕುಲಕ್ಕೆ ಹೋಗಿ ಮಗನನ್ನು ಎಚ್ಚರದಿಂದ ಸಂರಕ್ಷಿಸಿಕೊಳ್ಳಬೇಕೆಂದೂ ಹೇಳಿ ಕಳುಹಿಸಿದನು.

ನಂದನು ವಸುದೇವನ ಎಚ್ಚರಿಕೆಯ ಮಾತುಗಳನ್ನೆ ಮನನಮಾಡುತ್ತ ಗೋಕುಲಕ್ಕೆ ಹಿಂತಿರುಗಿದನು. ಆ ವೇಳೆಗಾಗಲೆ ಅಲ್ಲಿ ಪೂತನಿಯೆಂಬ ರಾಕ್ಷಸಿ ಕೃಷ್ಣನಿಗೆ ವಿಷವುಣಿಸಿ ಕೊಲ್ಲಲು ಹವಣಿಸಿ ಬಂದವಳು ತಾನೇ ಸತ್ತು ಬಿದ್ದಿದ್ದಳು. ಆ ಬೃಹದಾಕಾರದ ಹೆಣವನ್ನು ಕಂಡು ನಂದನು ಅಂಜಿ ನಡುಗಿದನು. ಅವಳ ಎದೆಯಮೇಲೆ ತನ್ನ ಎಳೆಯ ಮಗು ಆಡುತ್ತಿದ್ದುದನ್ನು ಕಂಡು ಅವನಿಗೆ ಜೀವ ಮರಳಿ ಬಂದ ಹಾಗಾಯಿತು. ಯಶೋದೆ ಪೂತನಿಯ ಚೀತ್ಕಾರವನ್ನು ಕೇಳಿ ಓಡಿಬಂದು ತನ್ನ ಮಗುವನ್ನೆತ್ತಿಕೊಂಡು ದೃಷ್ಟಿ ತೆಗೆದು ಮುದ್ದಾಡಿದಳು. ನಂದನು ವಸುದೇವನು ಅನಾಗತಕೋವಿದನೇ ಇರಬೇಕೆಂದು ಭಾವಿಸಿ ಮನಸಾವಂದಿಸಿ ಎಚ್ಚರದಿಂದಿದ್ದನು.

ಕಂಸಭೃತ್ಯರನೇಕರು ಗೋಕುಲಕ್ಕೆ ಬಂದರು. ತೃಣಾವರ್ತ, ಶಕಟಾಸುರ ಮೊದಲಾದವರನ್ನು ಶಿಶುಕೃಷ್ಣನು ಲೀಲಾಜಾಲವಾಗಿ ಕೊಂದುಬಿಟ್ಟನು. ಕಂಸನ ದೂತರಾರೂ ಜೀವಂತರಾಗಿ ಹಿಂದಿರುಗಲಿಲ್ಲ. ಕೃಷ್ಣಬಲರಾಮರಿಬ್ಬರೂ ನೆರೆಹೊರೆಯ ಗೋಪಬಾಲಕರೊಡನೆ ಆಟವಾಡುತ್ತ ನಕ್ಕು ನಲಿದು ಗೋಕುಲದಲ್ಲೆಲ್ಲ ಓಡಾಡುವ ಹಾಗಾದರು. ಗೋಪಿಯರು ಈ ಪುಟ್ಟ ಮಕ್ಕಳ ಮುದ್ದು ಚೇಷ್ಟೆಗಳನ್ನು ಮೆಚ್ಚಿ ಸಂತೋಷದಿಂದ ಆದರಿಸುತ್ತಿದ್ದರು. ಬಾಲಕರು ಕ್ರಮೇಣ ಗಟ್ಟಿಗರಾಗಿ ಅವರಿವರ ಮನೆಯ ಹಾಲು ಬೆಣ್ಣೆಗಳನ್ನು ಲೂಟಿಮಾಡಿ ಗೆಳೆಯರೊಡನೆ ಸ್ವೇಚ್ಛೆಯಾಗಿ ಕುಡಿದು, ಮೆದ್ದು, ಉಳಿದುದನ್ನು ಕೋತಿಗಳಿಗೂ ಹಂಚುತ್ತಿದ್ದರು. ಇವರ ಉಪಟಳ ಹೆಚ್ಚಲು ಗೋಪಿಯರು ಯಶೋದೆಗೆ ದೂರು ಹೇಳಿದರು. ಆದರೆ ಕೃಷ್ಣನ ಕಳ್ಳತನವನ್ನು ಪತ್ತೆ ಹಚ್ಚಿ ರುಜುವಾತು ಮಾಡಲಾಗಲಿಲ್ಲ. ತಾಯಿ ಆಕ್ಷೇಪಿಸಿದಾಗ ಕೃಷ್ಣನು ಅವಳಿಗೆ ವಿಧ ವಿಧವಾಗಿ ಸಮಾಧಾನ ಹೇಳುತ್ತಿದ್ದನು.

ಒಮ್ಮೆ ಕೃಷ್ಣನು ಮಣ್ಣು ತಿಂದನೆಂದು ದೂರು ಬರಲು ಯಶೋದೆ ಬಲವಂತವಾಗಿ ಅವನ ಬಾಯಿ ಬಿಡಿಸಿ ನೋಡಿದಾಗ ಅವಳಿಗೆ ಅಲ್ಲಿ ಸಮಸ್ತ ಭೂಮಂಡಲವೇ ಕಾಣಿಸಿ ಅವಳು ಬೆರಗಾದಳು! ಇನ್ನೊಮ್ಮೆ ಅವನ ತುಂಟತನವನ್ನು ಸಹಿಸಲಾರದೆ ಒರಳಿಗೆ ಕಟ್ಟಿಹಾಕಲು ಕೃಷ್ಣನು ಆ ಒರಳನ್ನು ಎಳೆದುಕೊಂಡು ಹೋಗಿ ಅಂಗಳದಲ್ಲಿದ್ದ ಜೋಡು ಮತ್ತಿಯ ಮರಗಳ ನಡುವೆ ಸಿಕ್ಕಿಸಿ ಎಳೆಯಲು ಆ ದೊಡ್ಡ ಮರಗಳೆರಡೂ ಬಿದ್ದು ಹೋದವು! ಅವು ಸಾಧಾರಣ ಮರಗಳಲ್ಲ. ಶಾಪಗ್ರಸ್ತರಾಗಿದ್ದ ಗಂಧರ್ವರು ಆ ರೂಪದಲ್ಲಿದ್ದರು. ಕೃಷ್ಣಸ್ಪರ್ಶದಿಂದ ಅವರಿಗೆ ಶಾಪ ವಿಮೋಚನೆಯಾಯಿತು. ಆದರೆ ನಂದಾದಿಗಳಿಗೆ ಬಿದ್ದಿದ್ದ ಮರಗಳು ಮಾತ್ರ ಕಾಣಿಸಿದುವು. ಇದೇನೋ ಮಹಾ ಉತ್ಪಾತವೆಂದೇ ಭಾವಿಸಿ ನಂದನು ಇನ್ನು ಗೋಕುಲದಲ್ಲಿ ನಿಲ್ಲುವುದು ಕ್ಷೇಮವಲ್ಲವೆಂದು ನಿರ್ಣಯಿಸಿ ಅಲ್ಲಿಂದ ಸಮಸ್ತ

ಗೋಪಗೋಪಿಯರನ್ನೂ ಕರೆದುಕೊಡು ಬೃಂದಾವನವೆಂಬ ಬೇರೊಂದು ಸ್ಥಳಕ್ಕೆ ಹೋಗಿ ನೆಲಸಿದನು. ಅಲ್ಲಿ ಕೃಷ್ಣ ಬಲರಾಮರು ಸಾಧಾರಣ ಗೋಪಾಲಕರಂತೆ ದನಗಳನ್ನು ಕಾಯುತ್ತ ಬಾಲ್ಯಸಹಜವಾದ ಹಲವು ಆಟಪಾಟಗಳಲ್ಲಿ ಆಸಕ್ತರಾಗಿ ಹೊತ್ತು ಕಳೆಯುತ್ತಿದ್ದರು.

ಒಂದು ದಿನ ಮನೆಯಲ್ಲಿ ಊಟಮಾಡಿ ಹೊರಟ ಕೃಷ್ಣ ಬಲರಾಮರು ಇತರ ಬಾಲಕರ ಸಂಗಡ ಸೇರಿ ತಮ್ಮ ದನಕರುಗಳನ್ನು ಅಟ್ಟಿಕೊಂಡು ಯಮುನಾನದಿಯ ಒಂದು ಮಡುವಿನ ಬಳಿಗೆ ಹೋದರು. ಅದರಲ್ಲಿ ಕಾಳೀಯನೆಂಬ ಭಯಂಕರ ಸರ್ಪ ವಾಸವಾಗಿದ್ದು ಅನೇಕ ಗೋವುಗಳನ್ನೂ ಗೋಪಾಲಕರನ್ನೂ ಕೊಂದಿದೆಯೆಂದು ಹುಡುಗರು ಹೇಳಿದುದನ್ನು ಕೇಳಿ ಕೃಷ್ಣನು ಆ ಮಡುವಿನೊಳಕ್ಕೆ ಧುಮುಕಿ ಅಲ್ಲೋಲ ಕಲ್ಲೋಲ ಮಾಡಿದನು. ಕಾಳಿಯನಿಗೆ ಬಹಳ ಸಿಟ್ಟುಬಂದು ಮೇಲೆದ್ದು ಕೃಷ್ಣನನ್ನು ಕಬಳಿಸಲು ಪ್ರಯತ್ನಿಸಿದನು. ಕೃಷ್ಣನು ಅವನ ಹೆಡೆಗಳ ಮೇಲೆ ರೌದ್ರನಾಟ್ಯವನ್ನೇ ನಲಿದು ಅವನನ್ನು ಅರೆಜೀವ ಮಾಡಿದನು. ಕಾಳಿಯನ ಪ್ರಾಣ ಉಳಿಯುವುದೇ ಸಂದೇಹವಾಯಿತು. ಆಗ ಅವನ ಹೆಂಡಿರು ಕೃಷ್ಣನಲ್ಲಿಗೆ ಬಂದು ಪತಿಭಿಕ್ಷೆ ಬೇಡಿದರು. ಕೃಷ್ಣನು ಅವರ ಮೇಲೆ ಕನಿಕರಿಸಿ ಕಾಳಿಯನನ್ನು ಜೀವದಿಂದುಳಿಸಿ ಯಮುನೆಯನ್ನು ಬಿಟ್ಟು ಸಮುದ್ರಕ್ಕೆ ಹೋಗುವಂತೆ ಆಜ್ಞಾಪಿಸಿದನು.

ಇನ್ನೊಮ್ಮೆ ಇಂದ್ರನು ಸಿಟ್ಟುಗೊಂಡು ಗೋಕುಲದ ಮೇಲೆ ಬಹಳ ಬಿರುಸಾದ ಮಳೆ ಸುರಿಸಿ ಗೋ ಗೋಪ ಗೋಪಿಯರಿಗೆ ನಿಲ್ಲಲು ನೆರಳಿಲ್ಲದಂತೆ ಮಾಡಿದನು. ಆಗ ಶ್ರೀಕೃಷ್ಣನು ತನ್ನವರಿಗೆ ಧೈರ್ಯ ಹೇಳಿ ಗೋವರ್ಧನ ಪರ್ವತವನ್ನೇ ಕಿತ್ತು ಎತ್ತಿ ಹಿಡಿದುಕೊಂಡುಬಿಟ್ಟನು. ಆ ಬೆಟ್ಟದ ಕೆಳಗೆ ಪ್ರಜೆಗಳೂ ಹಸುಕರುಗಳೂ ಆಶ್ರಯ ಪಡೆದು ಹಲವು ದಿನ ನೆಮ್ಮದಿಯಾಗಿದ್ದುಬಿಟ್ಟರು. ಇಂದ್ರನೇ ಸೋತು ಬಂದು ಕೃಷ್ಣನಲ್ಲಿ ಕ್ಷಮೆ ಬೇಡಬೇಕಾಯಿತು!

ಹೀಗೆ ಕೃಷ್ಣಬಲರಾಮರು ಅನೇಕ ಅದ್ಭುತ ಕಾರ್ಯಗಳನ್ನು ಮಾಡಿ ಲೋಕವನ್ನು ಆಶ್ಚರ್ಯಕ್ಕೀಡು ಮಾಡಿದರು. ಇದನ್ನೆಲ್ಲ ಕೇಳಿದ ಕಂಸನು, ಇವರಿಂದಲೇ ತನ್ನ ನಚ್ಚಿನ ವೀರರಾದ ಕೇಶಿ ಮೊದಲಾದ ರಾಕ್ಷಸರೆಲ್ಲ ಮಡಿದಿರಬೇಕೆಂದು ಊಹಿಸಿ ಹೇಗಾದರೂ ಮಾಡಿ ಇವರನ್ನು ಕೊಲ್ಲಿಸಬೇಕೆಂದು ಸಂಕಲ್ಪಿಸಿದನು. ಅವನನ್ನು ಉಪಾಯವಾಗಿ ಮಥುರೆಗೆ ಕರೆತಂದರೆ ತನ್ನ ಕೆಲಸ ಸುಲಭವಾಗಬಹುದೆಂದು ಯೋಚಿಸಿ ಕಂಸನು ಅವರನ್ನು ಕರೆತರಲು ಯಾದವರಲ್ಲಿ ಬಹಳ ಭಕ್ತನೆಂದು ಪ್ರಸಿದ್ಧನಾಗಿದ್ದ ಅಕ್ರೂರನೆಂಬ ಹಿರಿಯನನ್ನು ನೇಮಿಸಿದನು. ಸದ್ಯದಲ್ಲೇ ನಡೆಯಲಿದ್ದ ಬಿಲ್ಲ ಹಬ್ಬಕ್ಕೆ ಕೃಷ್ಣ ಬಲರಾಮರನ್ನು ಕರೆತರಬೇಕೆಂದು ಅವನಿಗೆ ತಿಳಿಸಲಾಯಿತು. ಕಂಸನ ದುರುದ್ದೇಶವನ್ನು ಅರ್ಥಮಾಡಿಕೊಂಡಿದ್ದ ಅಕ್ರೂರನು ಆ ದುಷ್ಟನ ಮಾತನ್ನು ಮೀರುವಂತಿರಲಿಲ್ಲ. ಈ ನೆಪದಲ್ಲಿ ಕೃಷ್ಣದರ್ಶನವಾದರೆ ಸಾಕೆಂದು ಯೋಚಿಸಿ ಒಪ್ಪಿಕೊಂಡು ಅವನು ಕಂಸನ ರಾಜರಥದಲ್ಲಿ ಕುಳಿತು ಮಥುರೆಯಿಂದ ಬೃಂದಾವನಕ್ಕೆ ಪ್ರಯಾಣ ಹೊರಟನು. ಗೋಕುಲದ ಹೆಬ್ಬಾಗಿಲ ಹತ್ತಿರ ಹೋಗುವ ವೇಳೆಗೆ ಸಂಜೆಯಾಗಿತ್ತು. ಗೋವುಗಳನ್ನು ಅಟ್ಟಿಕೊಂಡು ಆಗತಾನೆ ಕೃಷ್ಣನು ಊರೊಳಗೆ ಹೋಗಿದ್ದನು. ದಾರಿಯಲ್ಲಿ ಅವನ ಹೆಜ್ಜೆಯ ಗುರುತುಗಳು ಕಾಣುತ್ತಿದ್ದವು. ಅಕ್ರೂರನು ಕೂಡಲೆ ರಥದಿಂದಿಳಿದು ಆ ಪಾದಚಿಹ್ನೆಗಳಿಗೆ ನಮಸ್ಕಾರ ಮಾಡಿ ಆ ಮಣ್ಣನ್ನೇ ಕಣ್ಣಿಗೊತ್ತಿಕೊಂಡು ಮೈಗೆ ಲೇಪಿಸಿಕೊಂಡು ಹರ್ಷಪಟ್ಟನು. ಆ ಹೊತ್ತಿಗೆ ಗೋಪಬಾಲಕರೊಡನೆ ನಲಿಯುತ್ತಿದ್ದ ಕೃಷ್ಣನ ದರ್ಶನವಾಗಲು ಅಕ್ರೂರನು ಭಕ್ತಿಯಿಂದ ಪಾದಾಭಿವಂದನ ಮಾಡಿದನು. ದಯಾಸಮುದ್ರನಾದ ಶ್ರೀ ಕೃಷ್ಣನು ಅಕ್ರೂರನನ್ನು ಸ್ವಾಗತಿಸಿ ಮನೆಗೆ ಕರೆದುಕೊಂಡು ಹೋಗಿ ಆದರದಿಂದ ಅತಿಥಿಸತ್ಕಾರ ಮಾಡಿದನು. ಊಟ ಉಪಚಾರಗಳೆಲ್ಲ ಆದಮೇಲೆ ಅಕ್ರೂರನು ಕಂಸನ ದುಷ್ಟಚರಿತ್ರೆಯನ್ನೆಲ್ಲ ಕೃಷ್ಣನಿಗೆ ಸೂಕ್ಷ್ಮವಾಗಿ ಹೇಳಿ ಪ್ರಕೃತ ತಾನು ಬಂದ ಕಾರಣವನ್ನು ತಿಳಿಸಿದನು.

ಶ್ರೀ ಕೃಷ್ಣನು ಅಕ್ರೂರನಿಗೆ ಸಮಾಧಾನ ಮಾಡಿ ಮಾರನೆ ದಿನ ಮಥುರೆಗೆ ಹೊರಡುವುದಾಗಿ ಹೇಳಲು ನಂದನು ಸಮಸ್ತ ಗೋಪರಿಗೂ ತಿಳಿಸಿ ಬೇಕಾದ ಸಿದ್ಧತೆ ಮಾಡಿದನು. ಬೆಳಗಾಗುತ್ತಲೂ ಕೃಷ್ಣಬಲರಾಮರು ಪ್ರಯಾಣ ಸನ್ನದ್ಧರಾದುದನ್ನು ಕಂಡು ಗೋಪಿಯರು ಬಹಳ ಕಳವಳಕ್ಕೀಡಾದರು. ಅವರು ಅಕ್ರೂರನನ್ನು ಬೈದು ಕೃಷ್ಣನಿಗೆ ಮೊರೆಯಿಟ್ಟುಕೊಂಡರು. ಇದಾವುದರಿಂದಲೂ ಚಲಿತನಾಗದೆ ಶ್ರೀ ಕೃಷ್ಣನು ಎಲ್ಲರಿಗೂ ಸಮಾಧಾನ ಹೇಳಿ ಅಕ್ರೂರನೊಡನೆ ರಥ ಹತ್ತಿ ಮಥುರೆಗೆ ಹೊರಟನು. ಅನೇಕ ಗೋಪಾಲಕರು ತಮ್ಮ ನೆಚ್ಚಿನ ಕೃಷ್ಣನೊಡನೆ ಮಥುರೆಗೆ ಪ್ರಯಾಣ ಮಾಡಿದರು. ಇದನ್ನೆಲ್ಲ ನೋಡುತ್ತಿದ್ದ ಗೋಪಿಯರು ಚಿತ್ರಪ್ರತಿಮೆಗಳಂತೆ ನಿಷ್ಪಂದರಾಗಿ ನಿಂತುಬಿಟ್ಟರು! ಕೃಷ್ಣ, ಕೃಷ್ಣನು ಕುಳಿತಿದ್ದ ರಥ, ಆ ರಥದ ಧ್ವಜಶಿರ, ಕೊನೆಗೆ ಆ ರಥದಿಂದೆದ್ದ ಧೂಳು

ಆಕಾಶದಲ್ಲಿ ಕಾಣುತ್ತಿರುವ ತನಕ ನೋಡುತ್ತ ನಿಂತಿದ್ದು ಆ ಭಕ್ತಮಹಿಳೆಯರು ನಿರಾಶರಾಗಿ ಅಪರಿಹಾರ್ಯವಾದ ಹೃದಯ ಭಾರದಿಂದ ನೊಂದು ಕಂಗೆಟ್ಟು ತಮ್ಮ ತಮ್ಮ ಮನೆಗಳಿಗೆ ಹಿಂತಿರುಗಿದರು.

ಅಕ್ರೂರನೊಡನೆ ಕೃಷ್ಣಬಲರಾಮರು ರಥವೇರಿ ಹೊರಡಲು ಮಾರ್ಗದ ಉದ್ದಕ್ಕೂ ಜನರು ದರ್ಶನಾಕಾಂಕ್ಷಿಗಳಾಗಿ ಉಪಾಯನಗಳೊಡನೆ ಕಾದುಕೊಂಡಿದ್ದು ಅವರ ಸುಂದರಾಕಾರಗಳನ್ನು ಕಂಡ ಒಡನೆಯೇ ಜಯಕಾರಮಾಡಿ ಸ್ವಾಗತಿಸುತ್ತಿದ್ದರು. ಕೃಷ್ಣದರ್ಶನಮಾತ್ರದಿಂದ ಜನ್ಮಸಾಫಲ್ಯವೊದಗಿತೆಂದು ಸಂತೋಷಿಸುತ್ತಿದ್ದ ಆ ಪ್ರಜೆಗಳನ್ನು ಕೃಷ್ಣನು ತನ್ನ ಪ್ರೀತಿಯ ಮಾತುಗಳಿಂದ ಆನಂದಪರವಶರನ್ನಾಗಿಸಿ ಪಯಣವನ್ನು ಮುಂದುವರಿಸುತ್ತಿದ್ದನು. ಕಾಳಿಂದಿಯನ್ನು ದಾಟಿ ಮಧುರಾನಗರದ ಸಮೀಪಕ್ಕೆ ಬರುತ್ತಲೂ ನಂದನು ತನ್ನ ಜತೆಯ ಗೋಪರೊಡನೆ ಅಲ್ಲಿನ ಉಪವನದಲ್ಲಿ ಬೀಡಾರಹೂಡಿದನು. ಆ ವೇಳೆಗೆ ಅಲ್ಲಿಗೆ ಬಂದು ಸೇರಿದ ಕೃಷ್ಣಬಲರಾಮರು ಅಲ್ಲಿಯೇ ನಿಂತು ಅಕ್ರೂರನನ್ನು ಊರೊಳಕ್ಕೆ ಕಳುಹಿಸಿದರು. ಅಕ್ರೂರನಾದರೂ ಕೃಷ್ಣನನ್ನು ಅಗಲಲಾರದೆ ಕಣ್ಣೀರಿಡುತ್ತಿರಲು "ಮರುಗಬೇಡ, ಆ ಕುಹಕಿ ಕಂಸನನ್ನು ಮೊದಲು ಕೊಂದು ಆಮೇಲೆ ನಿನ್ನ ಮನೆಗೆ ಬರುತ್ತೇನೆ. ಈಗ ಸಂಶಯಪಡದೆ ಹೋಗಿ ಕಂಸನಿಗೆ ನಮ್ಮ ಆಗಮನವಾರ್ತೆಯನ್ನು ತಿಳುಹಿಸು" ಎಂದು ಹೇಳಿದನು.

ಆ ಸಂಜೆ ಗೋಪಬಾಲಕರೊಡನೆ ಸರಸ ಸಂಭಾಷಣೆ ನಡೆಸುತ್ತ, ವಿನೋದ ಕೇಳಿಗಳನ್ನು ಸಲ್ಲಿಸಿ ಕತ್ತಲಾಗುತ್ತಲೆ ಕೃಷ್ಣಬಲರಾಮರು ಜತೆಯ ಹುಡುಗರನ್ನೂ ಕರೆದುಕೊಂಡು ಮಧುರೆಯನ್ನು ಹೊಕ್ಕರು. ಇವರು ಬಂದ ವರ್ತಮಾನವನ್ನು ಕೇಳಿದ ಮಧುರಾನಿವಾಸಿಗಳು ಬೀದಿ ಬೀದಿಗಳಲ್ಲಿ ಚಪ್ಪರಗಳನ್ನು ಹಾಕಿ, ರಂಗವಲ್ಲಿಗಳನ್ನು ಬರೆದು ಗುಡಿ ತೋರಣಗಳನ್ನೇರಿಸಿ ಕೃಷ್ಣನ ಸ್ವಾಗತಕ್ಕೆ ಸಿದ್ಧರಾಗಿದ್ದರು. ಜನರ ಆದರಾತಿಶಯಗಳನ್ನು ಕಂಡು ಹರ್ಷಿಸಿ ರಾಮಕೃಷ್ಣರು ಮುಂದೆ ಸಾಗುತ್ತಿರುವಾಗ ಕಂಸನ ಮಡಿಬಟ್ಟೆಗಳನ್ನು ಹೊತ್ತ ರಾಜರಜಕನು ಕಾಣಿಸಿದನು. ಆಗ ಕೃಷ್ಣನು ಅವನನ್ನು ಕುರಿತು "ಅಯ್ಯಾ, ನಾವು ನಿಮ್ಮ ಅರಸನ ಸೋದರಳಿಯಂದಿರು. ನಮಗೆ ನಿನ್ನಲ್ಲಿರುವ ಮಡಿಬಟ್ಟೆಗಳನ್ನು ಕೊಡು" ಎಂದು ಕೇಳಿದನು. ಆದರೆ ಅವನು ಅಹಂಕಾರದಿಂದ ಅವರನ್ನು ಕಾಡುಮನುಷ್ಯರೆಂದು ಅಲ್ಲಗಳೆದು ಬಟ್ಟೆಗಳನ್ನು ಕೊಡಲು ನಿರಾಕರಿಸಿದನು. ಆಗ ಕೃಷ್ಣನು ಅವನನ್ನು ಹಿಡಿದೆಳೆದು ಕೆಳಗೆ ಕೆಡವಿ ಅವನ ತಲೆಯನ್ನು ಚಿವುಟಿಹಾಕಿದನು. ಅಗಸನ ಸಂಗಡಿಗರು ಅಂಜಿ ದಿಕ್ಕೆಟ್ಟು ಓಡಿದರು ಕೃಷ್ಣಬಲರಾಮರು ತಮಗೆ ಬೇಕಾದ ವಸ್ತ್ರಗಳನ್ನು ತೆಗೆದುಕೊಂಡು ತಮ್ಮ ಸಂಗಡಿಗರಿಗೂ ಕೊಟ್ಟರು.

ಪೀತಾಂಬರಧಾರಿಗಳಾದ ರಾಮಕೃಷ್ಣರು ತಮ್ಮ ಸಂಗಡಿಗರ ನಡುವೆ ಮರಿಯಾನೆಗಳಂತೆ ಮೆರೆಯುತ್ತಿರಲು ಸುದಾಮನೆಂಬ ಮಾಲೆಗಾರನು ಅವರಿಗೆ ಬೇಕು ಬೇಕಾದ ಪುಷ್ಪಹಾರಗಳನ್ನು ಆದರದಿಂದ ಕೊಟ್ಟು ಸತ್ಕರಿಸಿದನು. ಮುಂದೆ ಕುಬ್ಜೆಯೆಂಬ ದಾಸಿಯು ವಿಧವಿಧವಾದ ಪರಿಮಳ ಗಂಧಾನುಲೇಪನಗಳನ್ನು ಹೊತ್ತು ತರುತ್ತಿದ್ದುದನ್ನು ಕಂಡು ಕೃಷ್ಣನು "ಎಲೌ ಕಾಂತೆ, ನಾವು ನಿಮ್ಮ ರಾಜನ ಅಳಿಯಂದಿರು. ನಮಗೆ ನೀನು ಅನುಲೇಪನಗಳನ್ನು ಕೊಡು, ನಿನಗೆ ಬೇಕಾದ ಇಷ್ಟಾರ್ಥಗಳನ್ನು ಕೈಗೂಡಿಸುತ್ತೇವೆ" ಎಂದನು. ಹೆಸರಿಗೆ ತಕ್ಕಂತೆ ಕುಬ್ಜಳೇ ಆಗಿದ್ದ ಆ ತ್ರಿವಕ್ರೆಯು ಕೃಷ್ಣನ ದಿವ್ಯಸುಂದರ ಮೂರ್ತಿಯನ್ನು ಕಂಡು ಆನಂದಪರವಶೆಯಾಗಿ 'ಅಯ್ಯಾ ನಿಮ್ಮ ಒಲವೇ ಸಾಕು. ಕರ್ಮಾಧೀನಳಾದ ನಾನು ಈ ವಕ್ರವಾದ ಶರೀರ ಹೊಂದಿ ತ್ರಿವಕ್ರೆಯೆಂದೇ ಹೆಸರು ಪಡೆದಿದ್ದೇನೆ. ಇದನ್ನು ಹೋಗಲಾಡಿಸಲು ನೀನೇನು ವಿಧಾತ್ರನೆ? ನನಗೆ ಇನ್ನಾವ ಮನೋರಥ?' ಎಂದು ಹೇಳಿ ತಾನು ತಂದಿದ್ದ ಪರಿಮಳ ದ್ರವ್ಯಗಳನ್ನೆಲ್ಲ ಅವನಿಗೆ ಸಮರ್ಪಣೆ ಮಾಡಿಬಿಟ್ಟಳು. ಕೃಷ್ಣನು ಸಂತುಷ್ಟನಾಗಿ ಎಲ್ಲರಿಗೂ ಗಂಧ ಹಚ್ಚಿ ತಾನು ಸ್ವೇಚ್ಛೆಯಾಗಿ ಲೇಪಿಸಿಕೊಂಡು ಹರ್ಷಿಸಿ ಆ ಕುಬ್ಜೆಯನ್ನು ಕೈಯಿಂದ ಮುಟ್ಟಿದನು. ಅಷ್ಟುಮಾತ್ರದಿಂದ ಅವಳ ಕುರೂಪವೆಲ್ಲ ಹೋಗಿ ಅಪ್ಸರೆಯಂತೆ ಪರಮ ಸುಂದರಿಯಾದಳು! ಈ ಅದ್ಭುತ ಪವಾಡವನ್ನು ಕಂಡ ಮಧುರಾನಿವಾಸಿಗಳು ಬೆರಗಾದರು, ಕೃಷ್ಣನ ಅದ್ಭುತ ದೈವೀಶಕ್ತಿಯನ್ನು ಮೆಚ್ಚಿ ಕೊಂಡಾಡಿ ಜಯಘೋಷ ಮಾಡಿದರು.

ಬಿಲ್ಲ ಹಬ್ಬಕ್ಕೆ ಬಂದ ತಾವು ಇನ್ನು ಕಾಲಹರಣ ಮಾಡಬಾರದೆಂದು ಯೋಚಿಸಿ ರಾಮಕೃಷ್ಣರು ಕಂಸನ ಆಯುಧಶಾಲೆಗೆ ಹೋಗಿ ಚಿನ್ನದ ಹಿಡಿ ಹಾಕಿದ್ದ ರಾಜಧನುಸ್ಸನ್ನು ನೋಡಿ ಅದಕ್ಕೆ ಕೈ ಹಾಕಿದರು. ಕಾವಲುಗಾರರು ಪ್ರತಿಷೇಧ ಹೇಳುತ್ತಿದ್ದರೂ ಲೆಕ್ಕಿಸದೆ ಅದಕ್ಕೆ ಬಾಣ ಹೂಡುವ ಯತ್ನ ಮಾಡಲು ಆ ಬಿಲ್ಲು ಎರಡು ತುಂಡಾಗಿ ಮುರಿದು ಬಿದ್ದಿತು! ಕಾವಲ ಭಟರು ಸಿಟ್ಟಾಗಿ ಇವರನ್ನು ಹಿಡಿಯಲು ಹವಣಿಸಲು ಕೃಷ್ಣ ಬಲರಾಮರು ತಲಾ ಒಂದು ಬಿಲ್ಲುತುಂಡನ್ನೇ ಹಿಡಿದು ಅವರನ್ನೆಲ್ಲ ಹೊಡೆದಟ್ಟಿ ಆಯುಧಶಾಲೆಯಿಂದ ಹೊರಟರು.

ಬಿಲ್ಲು ಮುರಿದ ಶಬ್ದ ಕೇಳಿ ಅರಮನೆಯಲ್ಲಿದ್ದ ಕಂಸ ಬೆಚ್ಚಿಬಿದ್ದನು. ಗೋಪಾಲಕರು ಮಾಡಿದ ಹಲವು ಸಾಹಸಗಳ ವೃತ್ತಾಂತವನ್ನು ಕೇಳಿ ಅವನು ತಳಮಳಗೊಂಡು ಅವರನ್ನು ಕೊಲ್ಲಿಸಲು ನಾನಾ ಹಂಚಿಕೆಗಳನ್ನು ಹಾಕಿದನು. ಅರಮನೆಯ ಹೊರಬಾಗಿಲ ಬಳಿಯಲ್ಲಿಯೇ ಕುವಲಯಾಪೀಡನೆಂಬ ದೊಡ್ಡ ಆನೆಯಿಂದ ಅವರನ್ನು ತುಳಿಸಬೇಕೆಂಬುದು ಮೊದಲ ಯೋಚನೆ. ಅದರಿಂದಲೂ ತಪ್ಪಿಸಿಕೊಂಡು ಒಳಗೆ ಬಂದರೆ ಚಾಣೂರ ಮುಷ್ಟಿಕರೆಂಬ ಮಹಾಮಲ್ಲರಿಂದ ಅವರನ್ನು ಕೊಲ್ಲಿಸಬೇಕೆಂಬುದು ಅವನ ಕೊನೆಯ ಏರ್ಪಾಡು. ಎಲ್ಲ ಪೂರ್ವಸಿದ್ಧತೆಗಳನ್ನೂ ಮಾಡಿಕೊಂಡು ಕಂಸನು ಕಾದಿದ್ದನು. ಸೂರ್ಯೋದಯವಾಗುವ ವೇಳೆಗೆ ರಾಮಕೃಷ್ಣರು ಕಂಸನ ಅರಮನೆಯ ಬಳಿಗೆ ಬಂದರು.

ಮೇರು ಪರ್ವತವೇ ಸೊಂಡಿಲು ಧರಿಸಿ ಬರುತ್ತಿದೆಯೋ ಎಂಬಂತೆ ತೋರುತ್ತಿದ್ದ ಕುವಲಯಾಪೀಡವು ಈ ಬಾಲಕರ ಮೇಲೆ ರಭಸದಿಂದ ನುಗ್ಗಿಬಂತು. ಗೋಪಾಲಕರು ಅಂಜಿ ದಿಕ್ಕಾಪಾಲಾಗಿ ಓಡಿದರು. ಕೃಷ್ಣನು ಆನೆಯ ಕಾಲುಗಳ ಮಧ್ಯೆ ಬಚ್ಚಿಟ್ಟುಕೊಂಡು ಕೊಂಚಹೊತ್ತು ಆನೆಯನ್ನು ಆಟವಾಡಿಸಿದನು. ಕಡೆಗೆ ಅದು ಕಂಡುಕೊಂಡು ಕೃಷ್ಣನನ್ನು ಸೊಂಡಿಲಿನಿಂದ ಹಿಡಿದೆತ್ತಲು ಎಲ್ಲರೂ ಗಾಬರಿಗೊಂಡರು. ಆದರೆ ಕೃಷ್ಣನು ಮಾವಂತನನ್ನು ಸದೆದು ಅಂಕುಶ ಕಿತ್ತುಕೊಂಡು ಆನೆಯನ್ನು ತಿವಿದು ಕೆಡವಿದನು ; ಅದರ ಸೊಂಡಿಲನ್ನು ಕತ್ತರಿಸಿ ಅದರ ದಂತಗಳನ್ನೇ ಕಿತ್ತು, ಆಯುಧಗಳಂತೆ ಬಳಸುತ್ತ ಕಂಸಭಟರನ್ನು ನಿಗ್ರಹಿಸಿ ಆನೆಯ ಶವದ ಮೇಲೆ ನಿಂತು ಎಲ್ಲರಿಗೂ ದರ್ಶನ ಕೊಟ್ಟನು. ಜನರು ಆನಂದದಿಂದ ಜಯಘೋಷ ಮಾಡಿದರು. ಗೋಪರಿಗೆ ಹೋದ ಜೀವ ಮರಳಿ ಬಂದಂತಾಯಿತು, ದೇವತೆಗಳು ಸಂತೋಷಾತಿಶಯದಿಂದ ಪುಷ್ಪವೃಷ್ಟಿ ಮಾಡಿದರು.

ಆನೆಯ ದಂತಗಳನ್ನು ಹೆಗಲ ಮೇಲಿಟ್ಟುಕೊಂಡು ರಂಗಪ್ರವೇಶಮಾಡಿದ ರಾಮಕೃಷ್ಣರನ್ನು ಕಂಡು ಕಂಸನು ಕಂಗಾಲಾದನು. ಇವರು ತನ್ನ ಮೃತ್ಯುಸ್ವರೂಪರೇ ಹೌದೆಂದು ಭಾವಿಸಿ ಕುಗ್ಗಿಹೋದನು. ಅಲ್ಲಿ ಸೇರಿದ್ದ ಪ್ರಜಾವರ್ಗಕ್ಕೆ ಕೃಷ್ಣದರ್ಶನದಿಂದ ಅಮಿತಾನಂದವಾಯಿತು. ಆಗ ಕಂಸನ ಆಣತಿಯಂತೆ ಮಲ್ಲರ ನಾಯಕನಾದ ಚಾಣೂರನು ಕೃಷ್ಣನನ್ನು ಕಾಳಗಕ್ಕೆ ಕರೆದನು. ಕೃಷ್ಣ ಚಾಣೂರರಿಗೂ ಮುಷ್ಟಿಕ ಬಲರಾಮರಿಗೂ ಮಲ್ಲಯುದ್ಧ ಮೊದಲಾಯಿತು. ಸಮಜೋಡಿಯಲ್ಲದ ಈ ಕಾಳಗವನ್ನು ಕಂಡು ಮಧುರೆಯ ಹೆಂಗಳೆಯರು ಮಮ್ಮಲ ಮರುಗಿದರು. ಆ ಸುಜನರ ಸಂಕಟವನ್ನು ಸರ್ವಾಂತರ್ಯಾಮಿಯಾದ ಕೃಷ್ಣನು ಅರಿತು ಅವರನ್ನು ಒಮ್ಮೆ ಕೃಪಾದೃಷ್ಟಿಯಿಂದ ನೋಡಿ, ಚಾಣೂರನ ಕೈಗೆ ಸಿಕ್ಕದೆ ತಪ್ಪಿಸಿಕೊಂಡನು. ರಭಸದಿಂದ ನುಗ್ಗಿ ಬಂದ ಆ ಮಹಾಮಲ್ಲನು ಜೋಕು ತಿಂದು ಕೆಳಗೆಬಿದ್ದನು. ಒಡನೆಯೇ ಕೃಷ್ಣನು ಅವನ ಮೇಲೇರಿ ಹೊಡೆದು ಹೊರಳಿಸಿ ಎದೆಗೆ ಬಲವಾಗಿ ಒದ್ದನು. ಆ ಪೆಟ್ಟಿಗೆ ಚಾಣೂರನಿಗೆ ಮೂಗು ಬಾಯಿಗಳಲ್ಲಿ ರಕ್ತ ಹರಿದು ಪ್ರಾಣ ಹಾರಿಹೋಯಿತು. ಆ ವೇಳೆಗೆ ಬಲರಾಮನು ತನ್ನ ವಜ್ರಮುಷ್ಟಿಯಿಂದ ಆ ಮುಷ್ಟಿಕನನ್ನು ಗುದ್ದಿಗುದ್ದಿ ಕೊಂದನು. ಜಗಜೆಟ್ಟಿಗಳೆನ್ನಿಸಿಕೊಂಡಿದ್ದ ಆ ಮಹಾಮಲ್ಲರಿಬ್ಬರೂ ಈ ದನಕಾಯುವ ಹುಡುಗರ ಕೈಯಲ್ಲಿ ಸತ್ತ ಸಂಗತಿ ಕಣ್ಣಿಂದ ಕಂಡವರಿಗೇ ನಂಬುವುದು ಕಷ್ಟವಾಗಿತ್ತು.

ಕೃಷ್ಣನು ಆ ಕೂಡಲೆ, ಸಿಂಹಾಸನದ ಮೇಲೆ ಕುಳಿತು ತನ್ನ ಭಟರನ್ನು ಕಾಳಗಕ್ಕೆ ಪ್ರೋತ್ಸಾಹಿಸುತ್ತ ಕೂಗಾಡುತ್ತಿದ್ದ ಕಂಸನನ್ನು ಗಮನಿಸಿ ಅವನ ಬಳಿಗೆ ಒಂದೇ ನೆಗೆತ ನೆಗೆದು ಅವನನ್ನು ಹಿಡಿದೆಳೆದನು. ಮೊದಲೇ ಹೆದರಿಕೆಯಿಂದ ಅರ್ಧ ಸತ್ತಂತಾಗಿದ್ದ ಕಂಸನು ಸಿಂಹಾಸನದಿಂದ ಕೆಳಗುರುಳಲು ಕೃಷ್ಣನು ಅವನನ್ನು ಲೀಲಾಜಾಲವಾಗಿ ಹೊಡೆದು ಕೊಂದುಹಾಕಿದನು. ರಂಗವೆಲ್ಲ ರಕ್ತಮಯವಾಯಿತು. ಅಣ್ಣನ ದುರ್ಗತಿಗೆ ರೋಷಗೊಂಡು ಅವನ ತಮ್ಮಂದಿರು ಮೇಲೆ ಬೀಳಲು, ನೋಡುತ್ತಿದ್ದ ಬಲರಾಮನು. ಅವರನ್ನೆಲ್ಲ ಒಟ್ಟಿಗೆ ಯಮಲೋಕಕ್ಕೆ ಕಳುಹಿಸಿ ಕೊಟ್ಟನು. ಲೋಕ ನಿಷ್ಕಂಟಕವಾಯಿತು.

ಕಂಸನನ್ನು ಕೊಂದಾದ ಕೂಡಲೆ ರಾಮಕೃಷ್ಣರು ನೇರವಾಗಿ ಮಧುರೆಯ ಸೆರೆಮನೆಗೆ ನುಗ್ಗಿ ದೇವಕೀ ವಸುದೇವರನ್ನೂ ಉಗ್ರಸೇನಮಹಾರಾಜನನ್ನೂ ಸೆರೆಯಿಂದ ಬಿಡಿಸಿದರು. ಆ ತರುವಾಯ ಉಗ್ರಸೇನನನ್ನು ಮರಳಿ ಸಿಂಹಾಸನದ ಮೇಲೆ ಕೂಡಿಸಿ ಕೃಷ್ಣನು ರಾಜನಿರ್ಮಾಪಕನಾದನು! ಮೊಮ್ಮಗ ತಾತನಿಗೆ ಪಟ್ಟಾಭಿಷೇಕ ಮಾಡುವ ಈ ಲೋಕೋತ್ತರ ಘಟನೆಯನ್ನು ಕಂಡ ಅಂದಿನ ಮಧುರಾನಿವಾಸಿಗಳೇ ಧನ್ಯತಮರು. ಕಂಸನ ಕಾಟದಿಂದ ನೊಂದು ದೇಶತ್ಯಾಗಮಾಡಿ ಹೊರಗೆ ಹೋಗಿದ್ದ ಯಾದವರನ್ನೆಲ್ಲ ಕರೆಯಿಸಿ ಅವರಿಗೆ ಬೇಕಾದ ಧನ

ಕನಕಾದಿಗಳನ್ನು ಕೊಟ್ಟು ಆದರಿಸಿ ಅವರವರ ಮಂದಿರಗಳನ್ನು ಅವರಿಗೆ ಕೊಡಿಸಿ ಶ್ರೀಕೃಷ್ಣನು ಧರ್ಮಸಂಸ್ಥಾಪಕನಾದನು !

ವಸುದೇವನು ಹಿಂದೆ ಸೆರೆಮನೆಯಲ್ಲಿ ಸಂಕಲ್ಪಿಸಿದ್ದಂತೆ ಸಾವಿರಾರು ಗೋವುಗಳನ್ನು ದಾನ ಮಾಡಿದನು. ಕಂಸನ ಗೋಧನವನ್ನೆಲ್ಲ ತರಿಸಿ ಅವುಗಳ ಕೋಡುಗಳಿಗೆ ಚಿನ್ನದ ಕೊಪ್ಪುಗಳನ್ನು ತೊಡಿಸಿ ಬೇಕು ಬೇಕಾದವರಿಗೆ ವಸುದೇವನು ಕೊಟ್ಟುಬಿಟ್ಟನು. ಆ ತರುವಾಯ ಶ್ರೀಕೃಷ್ಣ ಬಲರಾಮರಿಗೆ ಉಪನಯನವಾಯಿತು! ಮಧುರೆಯಲ್ಲಿ ಹಿಂದೆಂದೂ ಕಂಡರಿಯದ ಮಹೋತ್ಸವವೇ ಆಯಿತು. ಸಮಸ್ತ ಯಾದವರೂ ಆನಂದೋತ್ಸಾಹಗಳಿಂದ ನಲಿದರು.

ಉತ್ಸವಕಾರ್ಯಗಳೆಲ್ಲ ಮುಗಿದ ಮೇಲೆ ರಾಮಕೃಷ್ಣರು ಕಾಶೀನಿಲಯನಾದ ಸಾಂದೀಪನಿಯೆಂಬ ವಿಪ್ರಶ್ರೇಷ್ಠನನ್ನು ಸೇರಿ ಅವನಿಂದ ಕ್ರಮವಾಗಿ ಉಪದೇಶ ಪಡೆದು ವಿದ್ಯಾಮೂರ್ತಿಗಳಾದರು! ಅವರ ವಿದ್ಯಾಸಾಧನೆ ಸಿದ್ಧಿಗಳನ್ನು ಕಂಡು ಸಾಂದೀಪನಿ ಈ ಬಾಲಕರು ಸಾಧಾರಣರಲ್ಲ, ಕಾರಣಪುರುಷರೇ ಸರಿಯೆಂದು ತಿಳಿದು ಇಂಥ ಶಿಷ್ಯರನ್ನು ಪಡೆದ ತಾನೇ ಧನ್ಯನೆಂದು ಬಗೆದನು. ತಾನು ಕೇವಲ ನೆಪ ಮಾತ್ರಕ್ಕೆ ಗುರುವೆಂಬುದು ಆ ಜ್ಞಾನಿಗೆ ಸುಲಭವಾಗಿ ತಿಳಿಯಿತು. ನಲವತ್ತು ನಾಲ್ಕು ದಿನಗಳಲ್ಲಿ ಧನುರ್ವೇದವೇ ಮೊದಲಾದ ಸಮಸ್ತ ವಿದ್ಯೆಗಳನ್ನೂ ಕಲಿತು ಪಾರಂಗತರಾದ ರಾಮಕೃಷ್ಣರನ್ನು ಸಾಂದೀಪನಿಯು ಆನಂದದಿಂದ ಆಶೀರ್ವದಿಸಿದನು.

ಪೂರ್ಣವಿದ್ಯರಾದ ರಾಮಕೃಷ್ಣರು ಗುರುದಕ್ಷಿಣೆ ಕೊಡಲು ಸಿದ್ಧರಾದರು. ಆದರೆ ಅವರಲ್ಲಿ ಏನು ಕೇಳಬೇಕೆಂದು ಆತನಿಗೆ ಹೊಳೆಯಲಿಲ್ಲ. ಆತನು ತನ್ನ ಹೆಂಡತಿಯ ಸಲಹೆ ಕೇಳಲು ಆಕೆ ಸ್ವಲ್ಪವೂ ಯೋಚಿಸದೆ 'ಪ್ರಭಾಸತೀರ್ಥದಲ್ಲಿ ಅಳಿದು ಹೋದ ನನ್ನ ಮಗನನ್ನು ತಂದು ಕೊಡಲಿ' ಎಂದು ಹೇಳಿಬಿಟ್ಟಳು! ಅದರಂತೆ ರಾಮಕೃಷ್ಣರು ಸಾಗರರಾಜನ ಬಳಿಗೆ ಹೋಗಿ ತಮ್ಮ ಗುರುಪುತ್ರನನ್ನು ಬೇಡಿದರು. ಆದರೆ ಅವನು "ಸ್ವಾಮಿ, ಸತ್ತವರನ್ನು ಮತ್ತೆ ತಂದು ಕೊಡಲಾದೀತೆ? ಸಾವು ಬದುಕುಗಳ ಸ್ವರೂಪ ತಮಗೆ ತಿಳಿಯದೆ?" ಎಂದನು. ಆಗ ಕೃಷ್ಣನು 'ಅಯ್ಯಾ, ಪ್ರಾರಬ್ಧಕರ್ಮವಶದಿಂದ ಜೀವರು ನರಕಾದಿಗಳನ್ನು ಸೇರುವರೆಂದು ನಾನು ಬಲ್ಲೆ. ಆದರೆ ನಾನೊಲಿದ ಮೇಲೆ ಯಾವ ಪ್ರಾರಬ್ಧವೂ ಅಡ್ಡಿಯಾಗಬಾರದು. ಹೋಗು. ಗುರುಪುತ್ರನನ್ನು ಕರೆದು ತಾ' ಎಂದನು. ಮೂಜಗದ ಒಡೆಯನ ಆಣತಿಯನ್ನು ಮೀರಲಾರದೆ ಸಾಗರನು ಹೋಗಿ ಗುರುಪುತ್ರನನ್ನು ತಂದು ಒಪ್ಪಿಸಿದನು. ಆ ಕೂಡಲೆ ರಾಮಕೃಷ್ಣರು ಸಾಂದೀಪನಿಯ ಸನ್ನಿಧಿಯನ್ನು ಸೇರಿ ಗುರುದಕ್ಷಿಣೆ ಸಲ್ಲಿಸಿದರು. ಆ ದಂಪತಿಗಳ ಹರ್ಷವನ್ನು ಬಣ್ಣಿಸ ಬಲ್ಲವನು ಯಾರು? ಸಾಂದೀಪನಿ ಬೇರೇನೂ ತೋರದೆ ಆ ಬಾಲಕರನ್ನು ಬಾಚಿ ತಬ್ಬಿಕೊಂಡು "ಮಕ್ಕಳಿರಾ, ಪೃಥ್ವೀಪಾಲರಾಗಿ, ಪವಿತ್ರ ಕೀರ್ತಿಗಳಾಗಿ." ಎಂದು ಬಾಯಿತುಂಬ ಹರಸಿದನು.

ಗುರುಕುಲವಾಸ ಮುಗಿಸಿ ಗುರು ಗುರುಪತ್ನಿಯರ ಹಾರ್ದಿಕ ಆಶೀರ್ವಾದಗಳನ್ನು ಗಳಿಸಿ ಹಿಂದಿರುಗಿದ ರಾಮಕೃಷ್ಣರನ್ನು ಮಧುರೆಯ ಜನ ಅತ್ಯಂತ ಆನಂದ ಸಂಭ್ರಮಗಳಿಂದ ಸ್ವಾಗತಿಸಿದರು.

ಕಂಸಹನನವಾದ ಮೇಲೆ ಅವನ ಹೆಂಡಿರಾದ ಅಸ್ತಿ ಪ್ರಾಪ್ತಿಯರು ತಮ್ಮ ತಂದೆಯ ಮನೆ ಸೇರಿ ಜರಾಸಂಧನೊಡನೆ ತಮ್ಮ ಸಂಕಟವನ್ನು ತೋಡಿಕೊಂಡು ಗೋಳಾಡಿದರು. ತನ್ನ ಮಕ್ಕಳ ದುಸ್ಥಿತಿ ಕಂಡು, ಅವರ ಗೋಳು ಕೇಳಿದ ಮಗಧರಾಜನಿಗೆ ಮಹಾ ರೋಷವುಕ್ಕಿ ಸೈನ್ಯಸಮೇತನಾಗಿ ಮಧುರೆಯ ಮೇಲೆ ದಾಳಿಮಾಡಿದನು. ಆದರೆ ರಾಮಕೃಷ್ಣರ ಪರಾಕ್ರಮ ಅಪ್ರತಿಹತವಾದದ್ದು. ಜರಾಸಂಧನ ಸೈನ್ಯ ನಾಶವಾಯಿತು. ಸಾಮಂತರಾಜರು ದಿಕ್ಕೆಟ್ಟು ಓಡಿದರು. ಜರಾಸಂಧನ ರಥವು ನುಚ್ಚು ನೂರಾಯಿತು. ಬಲರಾಮನು ಅವನನ್ನು ಕಾಳಗದಲ್ಲಿ ಸೋಲಿಸಿ ಅವಮಾನ ಪಡಿಸಿದನು. ಜರಾಸಂಧನು ಅನಿವಾರ್ಯವಾಗಿ ಹಿಮ್ಮೆಟ್ಟಿ ಓಡಬೇಕಾಯಿತು.

ಗೋಪಾಲಕರ ಕೈಲಿ ಸೋತುದು ಜರಾಸಂಧನಿಗೆ ದೊಡ್ಡ ಅವಮಾನವಾಯಿತು. ಆ ಸಂಕಟವನ್ನು ಅವನು ಮರೆಯಲಾರದೆ ಹೋದನು. ಅವನು ಮತ್ತೆ ಸೈನ್ಯವನ್ನು ಜತೆಗೂಡಿಸಿಕೊಂಡು ಮಧುರೆಯ ಮೇಲೆ ದಂಡಯಾತ್ರೆ ಮಾಡುವ ಹವಣಿಕೆಯಲ್ಲಿಯೇ ಇದ್ದನು. ಆದರೆ ಅವನ ಆಟ ಸಾಗಲಿಲ್ಲ. ಸಲಸಲವೂ ರಾಮಕೃಷ್ಣರ ಕೈಲಿ ಸೋತು ಬರುತ್ತಿದ್ದನು. ಒಟ್ಟು ಹದಿನೇಳು ಸಲ ದಂಡಯಾತ್ರೆ ಮಾಡಿ ಜರಾಸಂಧನು ವಿಫಲನಾದನು. ಆದರೆ ಅವನ ವೈರ ಹೋಗಲಿಲ್ಲ. ಹದಿನೆಂಟನೆಯ ಸಾರಿ ಬಹಳ ದೊಡ್ಡ ಸೈನ್ಯವನ್ನು ಜತೆಗೂಡಿಸಿಕೊಂಡು ಜರಾಸಂಧನು ಮಧುರೆಯ ಕಡೆ ಹೊರಟನು. ಆ ವಾರ್ತೆ ಗೂಢಚಾರರಿಂದ ತಿಳಿಯುತ್ತಲೇ ಕೃಷ್ಣನು ಇನ್ನು ಮಧುರೆಯನ್ನು ಈ ಪಾಪಿಯ ದಾಳಿಗೀಡುಮಾಡುವುದು ಸರಿಯಲ್ಲವೆಂದು ಬಗೆದು ಬಲರಾಮನೊಡನೆ ನಗರವನ್ನು ಬಿಟ್ಟು ಹೊರಟನು. ಇವರು

ಹೊರಟು ಹೋಗುತ್ತಿದ್ದುದನ್ನು ಕಂಡು ಜರಾಸಂಧನು ಮಧುರಾನಗರವನ್ನು ಬಿಟ್ಟು ಇವರನ್ನೇ ಬೆನ್ನಟ್ಟಿದನು. ಆಗ ಕೃಷ್ಣನು ಬಲರಾಮನ ಸಹಾಯದಿಂದ ಮತ್ತೆ ಮಾಗಧನನ್ನು ಯುದ್ಧದಲ್ಲಿ ಸೋಲಿಸಿದನು. ಇನ್ನು ಎಂದಿದ್ದರೂ ಮಧುರೆಗೆ ಜರಾಸಂಧನ ಕಡೆಯಿಂದ ವಿಪತ್ತು ತಪ್ಪದೆಂದು ಭಾವಿಸಿ ಬೇರೊಂದು ದುರ್ಗವನ್ನು ಹುಡುಕುವ ಯೋಚನೆ ಮಾಡಿದನು. ಮಧುರಾಪಟ್ಟಣವು ಜರಾಸಂಧನ ಹಲವು ಮುತ್ತಿಗೆಗಳಿಂದ ಶಿಥಿಲವಾಗಿತ್ತು. ಆದ್ದರಿಂದ ಬೇರೊಂದು ನಗರ ಅತ್ಯಗತ್ಯವೆಂದು ಭಾವಿಸಿದ ಕೃಷ್ಣನು ಮಿಕ್ಕೆಲ್ಲ ಬಗೆಯ ದುರ್ಗಗಳಿಗಿಂತ ಜಲದುರ್ಗವೇ ಅತ್ಯಂತ ಶ್ರೇಷ್ಠವೆಂದು ಭಾವಿಸಿ ಸಮುದ್ರದ ನಡುವೆ ಇದ್ದ ಕುಶಸ್ಥಲಿ ಎಂಬ ಹೆಸರಿನ ಊರನ್ನು ಆರಿಸಿಕೊಂಡನು. ನೈರುತ್ಯದಿಕ್ಕಿನಲ್ಲಿ ಸಮುದ್ರದ ಮೇಲೆ ಒಂದು ಯೋಜನದಷ್ಟು ಸೇತುವೆಯನ್ನು ಕಟ್ಟಿ ಕುಶಸ್ಥಲಿಯ ಮೇಲೆ ಒಂದು ಮಹಾನಗರವನ್ನು ಸೃಷ್ಟಿಮಾಡಿದನು. ಹನ್ನೆರಡು ಯೋಜನ ವಿಸ್ತಾರವಾದ, ಆ ನಗರದಲ್ಲಿ ಅನೇಕಾನೇಕ ಸೌಧಗಳನ್ನು ತನ್ನ ದೈವಿಕ ಶಕ್ತಿಯಿಂದ ಸೃಷ್ಟಿಸಿದನು. ನಿರ್ಜನವಾಗಿದ್ದ ಒಂದು ಸಣ್ಣ ದ್ವೀಪ ಭಗವಂತನ ಇಚ್ಛಾಮಾತ್ರದಿಂದ ಮಹಾನಗರವಾಗಿ ಪರಿಣಮಿಸಿತು. ಸಮಸ್ತ ಯಾದವರನ್ನೂ ಅಲ್ಲಿಗೆ ಸಾಗಿಸಿ ಅವರನ್ನು ನೆಲೆಗೊಳಿಸಲಾಯಿತು. ಕೃಷ್ಣಸಾನ್ನಿಧ್ಯದಿಂದ ಆ ಪಟ್ಟಣವು ವೈಕುಂಠದಂತೆ ಶೋಭಾಯಮಾನವಾಯಿತು. ಅದಕ್ಕೆ ಕೃಷ್ಣನು ದ್ವಾರವತಿ ಎಂದು ಹೆಸರಿಟ್ಟನು. ಪಟ್ಟಣದಲ್ಲಿ ಎಲ್ಲರನ್ನೂ ಸುರಕ್ಷಿತವಾಗಿ ನಿಲ್ಲಿಸಿದ ಮೇಲೆ ಕೃಷ್ಣಬಲರಾಮರು ತಮ್ಮ ಮೇಲೆ ದಂಡೆತ್ತಿ ಬರುತ್ತಿದ್ದ ಕಾಲಯವನನ ಸೈನ್ಯವನ್ನು ನೋಡುವ ಆಸೆಯಿಂದ ಯಾರಿಗೂ ತಿಳಿಯದ ಹಾಗೆ ಹೊರಹೊರಟರು.

ಕಾಲಯವನನ ಸೈನಿಕರು ಚತುರ್ಭುಜಮೂರ್ತಿಯಾದ ಶ್ರೀ ಕೃಷ್ಣನನ್ನು ಗಮನಿಸಿದರು. ಕೂಡಲೆ ಅವರ ನಾಯಕನಿಗೆ ವರ್ತಮಾನ ಹೋಯಿತು. ಕಾಲಯವನನು ಆ ಕ್ಷಣ ಪರಿವಾರಸಮೇತನಾಗಿ ಕೃಷ್ಣನನ್ನು ಬೆನ್ನಟ್ಟಿದನು. ಇಬ್ಬರಿಗೂ ಕಾಳಗ ಮೊದಲಾಯಿತು. ಕೃಷ್ಣನು ರಥವಿಲ್ಲದೆ ಪಾದಚಾರಿಯಾಗಿದ್ದುದನ್ನು ಕಂಡು ಕಾಲಯವನನು ಸಹ ರಥವನ್ನು ಬಿಟ್ಟು ಕೆಳಗಿಳಿದನು. ಇಬ್ಬರಿಗೂ ಖಾಡಾಖಾಡಿ ಕಾಳಗ ಮೊದಲಾಯಿತು. ಕೃಷ್ಣನು ಅಸುರನನ್ನು ನೋಡದೆ ಪಕ್ಕಕ್ಕೆ ತಿರುಗಿ ಓಡತೊಡಗಲು ಅವನು ಇನ್ನಷ್ಟು ರಭಸದಿಂದ ಅಟ್ಟಿಸಿಕೊಂಡು ಹೋಗಿ ಅವನನ್ನು ನಿಲ್ಲಿಸಿದನು. ಕೃಷ್ಣನನ್ನು ತಡೆದು ನಿಲ್ಲಿಸಿ 'ಸುಭಟಾಗ್ರಣಿಗಳು ಹೀಗೆ ಓಡಬಹುದೆ?' ಎಂದು ಮೂದಲಿಸಿದನು. ಆದರೆ ಕೃಷ್ಣನು ಇವನ ಮೂದಲಿಕೆಯನ್ನು ಲಕ್ಷ್ಯಮಾಡದೆ ಓಡುತ್ತಲೇ ಇದ್ದನು. ಕಾಲಯವನನು ಅವನ ಹಿಂದೆಯೇ ಬರುತ್ತ "ಎಲವೋ ಕೃಷ್ಣ! ದಾನವಾಂತಕನೆಂದೂ ಮೂರು ಲೋಕದ ಒಡೆಯನೆಂದೂ ಜಂಭ ಕೊಚ್ಚಿಕೊಳ್ಳುವೆ. ಕಾಳಗಕ್ಕೆ ಬಂದರೆ ನಿಲ್ಲದೆ ಓಡುವ ಹೇಡಿ ನೀನು. ನಿನಗೆ ಈ ಹೆಮ್ಮೆಯ ಬಿರುದುಗಳೇಕೆ? ನಾಚಿಕೆಯಾಗಬೇಡವೆ ನಿನಗೆ?" ಎಂದು ಹೀನವಾಗಿ ಬಯ್ಯುತ್ತಿದ್ದನು. ಕಾಲಯವನನು ಹೀಗೆ ಮೂದಲಿಸಿ ಬರುತ್ತಿರಲು ಕೃಷ್ಣನು ಅದನ್ನು ಸ್ವಲ್ಪವೂ ಲೆಕ್ಕಕ್ಕೆ ತೆಗೆದುಕೊಳ್ಳದೆ ಓಡಿ ಒಂದು ಗಿರಿಯ ಗುಹೆಯನ್ನು ಪ್ರವೇಶಿಸಿದನು; ಅಲ್ಲಿ ಒಂದು ದೊಡ್ಡ ಬಂಡೆಯ ಮರೆಯಲ್ಲಿ ಅವಿತಿಟ್ಟುಕೊಂಡನು. ಅವನ ಹಿಂದೆಯೇ ಬಂದ ಕಾಲಯವನನು ಒಡನೆಯೇ ಗುಹೆಯನ್ನು ಪ್ರವೇಶಿಸಿ ನೋಡಿದರೆ ನೆಲದ ಮೇಲೆ ಯಾರೋ ಒಬ್ಬ ಅರಸನು ಮಲಗಿದ್ದನು. ಅವನೇ ಕೃಷ್ಣನೆಂದು ಭಾವಿಸಿ ಸರಿಯಾಗಿ ವಿಮರ್ಶಿಸದೆ ದುಡುಕಿನಿಂದ "ಓಡಿಬರುವುದೇಕೆ? ಹೀಗಿ ಕಾಲು ನೀಡಿ ಮಲಗಿಕೊಳ್ಳುವುದೇಕೆ? ನನ್ನನ್ನು ನೋಡುವ ಧೈರ್ಯವಿಲ್ಲದೆ ಕಣ್ಣು ಮುಚ್ಚಿಕೊಳ್ಳಲೇಕೆ?" ಹೀಗೆ ಹೀಯಾಳಿಸುತ್ತ ಕಾಲಯವನನು ಮಲಗಿದ್ದ ಆ ರಾಜನನ್ನು ಕಾಲಲ್ಲಿ ಒದ್ದನು. ಆ ಕ್ಷಣದಲ್ಲಿಯೇ ಆತನು ಕಣ್ಣು ತೆರೆದು ಸಿಟ್ಟಾಗಿ ಗರ್ಜಿಸುತ್ತ ತನ್ನ ಮುಂದಿದ್ದವನನ್ನು ದೃಷ್ಟಿಸಿ ನೋಡಲು ಆತನ ಕಣ್ಣಿನಿಂದ ಹುಟ್ಟಿದ ಬೆಂಕಿಯಲ್ಲಿ ಆ ದೈತ್ಯನು ಸುಟ್ಟು ಬೂದಿಯಾದನು. ಆತನು ಬೇರಾರೂ ಆಗಿರದೆ ಮುಚುಕುಂದನೆಂಬ ಮಹಾಯೋಗಿಯಾಗಿದ್ದನು. ಹಲವು ಶತಮಾನಗಳಿಂದ ತಪಸ್ಸು ಮಾಡುತ್ತ ಅಲ್ಲಿ ಯೋಗನಿದ್ರೆಯಲ್ಲಿದ್ದನು. ಯವನನು ಸುಟ್ಟುಹೋದ ಮೇಲೆ ಆ ಮಹಾಯೋಗಿಯು ಪಕ್ಕಕ್ಕೆ ತಿರುಗಲು ಮುರಹರನ ಮಂಗಳ ಮೂರ್ತಿ ಕಾಣಿಸಿತು. ಆ ಮಹಾತೇಜೋಮೂರ್ತಿಯನ್ನು ಗಮನಿಸಿ ಮುಚುಕುಂದನು ಆನಂದಪರವಶನಾಗಿ ನಮಸ್ಕಾರಮಾಡಿ ತನ್ನ ಪರಿಚಯವನ್ನು ಹೇಳಿಕೊಂಡನು. ಕೃಷ್ಣನು ಆತನಿಗೆ ತನ್ನ ನಿಜರೂಪವನ್ನು ತೋರಿ ಬೇಕಾದ ವರವನ್ನು ಕೊಡಲು ಸಿದ್ಧನಾದನು. ಮುಚುಕುಂದನು ಬೇರೇನನ್ನೂ ಕೇಳದೆ ಮೋಕ್ಷವನ್ನು ಕೇಳಿಕೊಂಡನು. ಕೃಷ್ಣನು ಅವನಿಗೆ ಅನುಗ್ರಹ ಮಾಡಿ ಮೋಕ್ಷ ಕೊಟ್ಟನು.

ಕೃಷ್ಣನು ಹೀಗೆ ಉಪಾಯವಾಗಿ ಕಾಲಯವನನನ್ನೂ ಯವನೇಶ್ವರನ ಸೈನ್ಯವನ್ನೂ ಕೊಂದು ಅವನ ಧನಕನಕಾದಿಗಳನ್ನೂ ವಸ್ತು ವಾಹನಾದಿಗಳನ್ನೂ ದ್ವಾರಕೆಗೆ ಸಾಗಿಸಿದನು. ಆ ಸಮಯಕ್ಕೆ ಜರಾಸಂಧನ್ನು

ಸೈನ್ಯಸಾಗರದೊಡನೆ ಬಂದು ಕೃಷ್ಣನನ್ನು ಅಡ್ಡಗಟ್ಟಿದನು. ಬಲರಾಮ ಕೃಷ್ಣರಲ್ಲಿ ರಥಾಶ್ವಗಳಿರಲಿಲ್ಲ. ಆಯುಧಗಳಿರಲಿಲ್ಲ. 'ಈ ಬರಿಗೈಯ ಯುವಕರು ಈ ಮಹಾ ಸೈನ್ಯವನ್ನು ಹೇಗೆ ಗೆದ್ದಾರು ?' ಎಂದು ಗಗನದಲ್ಲಿ ನೋಡುತ್ತಿದ್ದ ದೇವಾನುದೇವತೆಗಳು ಯೋಚನಾಮಗ್ನರಾದರು. ಆದರೆ ರಾಮಕೃಷ್ಣರು ಒಂದೆರಡು ಕ್ಷಣ ಭಯಗೊಂಡ ಹಾಗೆ ನಟಿಸುತ್ತ ಓಡಿದ ಹಾಗೆ ಮಾಡಿ ಹೆಮ್ಮರಗಳನ್ನು ಮುರಿದುಕೊಂಡು ಶತ್ರುಸೈನ್ಯದ ಮೇಲೆ ಬಿದ್ದರು. ಆ ಸೈನ್ಯದಲ್ಲಿ ಮಹಾ ಪ್ರಳಯವೇ ಆಗಿ ಹೋಯಿತು. ಮರದ ಪೆಟ್ಟಿಗೆ ಆನೆ ಕುದುರೆಗಳು ಚೂರು ಚೂರಾಗಿ ಬಿಟ್ಟವು. ಯುದ್ಧ ಭೂಮಿ ರಕ್ತದ ಮಡುವಾಗಿ ಹೋಯಿತು. ಮಗಧನೇ ಮೊದಲಾದ ರಾಜರಿಗೆ ಗಾಬರಿಯಾಯಿತು. ಆದರೆ ರಾಮ ಕೃಷ್ಣರಿಗೆ ಅವನನ್ನು ಕೊಲ್ಲುವ ಉದ್ದೇಶವಿರಲಿಲ್ಲ. ಆದ್ದರಿಂದ ಅವರು ಮತ್ತೆ ಓಡುತ್ತ ಹೊರಟು ಗೋಮಂತ ಪರ್ವತದ ಶಿಖರವನ್ನು ಸೇರಿದರು. ಮಗಧನು ಇವರ ಪಲಾಯನವನ್ನು ನೋಡಿ ಹರ್ಷಗೊಂಡು ಓಡಿ ಬಂದು ಪರ್ವತವನ್ನು ಸುತ್ತುಗಟ್ಟಿದನು. ಬೆಟ್ಟಕ್ಕೇ ಬೆಂಕಿ ಹಚ್ಚಿದರು. ಆದರೆ ರಾಮಕೃಷ್ಣರು ಯಾವುದೋ ಮಾಯೆಯಲ್ಲಿ ಬೆಟ್ಟದಿಂದ ಹಾರಿ ದ್ವಾರಕೆಯನ್ನು ಸೇರಿದರು. ಆಮೇಲೆ ಶ್ರೀಕೃಷ್ಣನು ಸಾಲ್ವ, ಹಂಸಡಿಬಿಕರು ಮುಂತಾದ ಅನೇಕ ದುಷ್ಟರನ್ನು ಕೊಂದು ದ್ವಾರಕಿಗೆ ಹಿಂತಿರುಗುವಾಗ ಪಾಂಡವರು ದ್ರುಪದನನ್ನು ಯುದ್ಧದಲ್ಲಿ ಗೆದ್ದು ಬಂದ ವಾರ್ತೆ ಕೇಳಿ ಸಂತೋಷಪಟ್ಟನು.

ಆನರ್ತ ದೇಶದ ರೈವತನೆಂಬ ರಾಜನು ತನ್ನ ಮಗಳು ರೇವತಿಯನ್ನು ಬಲರಾಮನಿಗೆ ಕೊಟ್ಟು ಮದುವೆ ಮಾಡಿದನು. ಅದೇ ಸಮಯದಲ್ಲಿ ಭೀಷ್ಮಕ ರಾಜನ ಮಗಳು ರುಕ್ಮಿಣಿಯು ಕೃಷ್ಣನ ಸಾಹಸ ಚರಿತೆಯನ್ನು ಕೇಳಿ ಅವನನ್ನು ಮೋಹಿಸಿದಳು. ಅವನನ್ನೇ ಮದುವೆಯಾಗುವ ಅಭಿಲಾಷೆ ಅವಳಿಗೆ ಬಲವಾಯಿತು. ಆದರೆ ಅವಳ ಅಣ್ಣ ರುಕ್ಮಿಯು ಸರ್ವ ಪ್ರಯತ್ನದಿಂದಲೂ ಅವಳನ್ನು ಚೈದ್ಯ ದೇಶದ ರಾಜನಾದ ಶಿಶುಪಾಲನಿಗೆ ಕೊಟ್ಟು ಮದುವೆ ಮಾಡಬೇಕೆಂದು ಸಂಕಲ್ಪಿಸಿ ಅದಕ್ಕೆ ತಕ್ಕ ಸಿದ್ಧತೆಗಳನ್ನು ನಡೆಸುತ್ತಿದ್ದನು. ರುಕ್ಮಿಣಿಗೆ ಇದು ಸರ್ವಥಾ ಸಮ್ಮತ ವಿರಲಿಲ್ಲ. ರುಕ್ಮಿ ಅವಳ ಇಷ್ಟಾನಿಷ್ಟಗಳನ್ನು ಗಮನಿಸಲೇ ಇಲ್ಲ. ಭೀಷ್ಮಕರಾಜನು ಸಹ ಮಗನ ಮಾತನ್ನು ಮೀರಿ ಏನೂ ಮಾಡುವ ಸ್ಥಿತಿಯಲ್ಲಿರಲಿಲ್ಲ. ಆಗ ರುಕ್ಮಿಣಿಯು ಬೇರೇನೂ ಮಾರ್ಗ ತೋರದೆ ಶ್ರೀ ಕೃಷ್ಣನಿಗೆ ಒಂದು ಪತ್ರವನ್ನು ಬರೆದು ನಂಬಿಕೆಯಾದ ಒಬ್ಬ ಬ್ರಾಹ್ಮಣನ ಕೈಯಲ್ಲಿ ಕೊಟ್ಟು ಕಳುಹಿಸಿದಳು. ಶ್ರೀ ಕೃಷ್ಣನು ರುಕ್ಮಿಣಿಯ ಪತ್ರದ ಅಭಿಪ್ರಾಯವನ್ನು ಗಮನಿಸಿ ಹರ್ಷಗೊಂಡು ಆ ಬ್ರಾಹ್ಮಣನೊಡನೆ ಕುಂಡಿನೀಪುರಕ್ಕೆ ಬಂದು ರುಕ್ಮಿಯ ಸೈನ್ಯವನ್ನು ನಿಗ್ರಹಿಸಿ ರುಕ್ಮಿಣಿಯನ್ನು ಅಪಹರಿಸಿಕೊಂಡು ಬಂದನು. ಅವನನ್ನು ಬೆನ್ನಟ್ಟಿ ಬಂದ ರುಕ್ಮಿ ಕಾಳಗದಲ್ಲಿ ಸೋತು ಅವಮಾನಪಟ್ಟನು.

ಪೌಂಡ್ರಕದೇಶದ ವಾಸುದೇವನೆಂಬ ಒಬ್ಬ ರಾಜನು ತಾನೇ ಜಗತ್ತಿಗೆ ಒಡೆಯನೆಂದೂ ಕೃಷ್ಣನಿಗೆ ಯಾವ ಮನ್ನಣೆಯೂ ಸಲ್ಲದೆಂದೂ ಕೂಗಾಡುತ್ತ ಅವನ ಮೇಲೆ ಯುದ್ಧಕ್ಕೆ ಬಂದನು; ದ್ವಾರಕಾಪಟ್ಟಣಕ್ಕೆ ಮುತ್ತಿಗೆ ಹಾಕಿದನು. ಯಾದವರಿಗೂ ಪೌಂಡ್ರಕನ ಕಡೆಯವರಿಗೂ ಘೋರವಾದ ಯುದ್ಧವಾಯಿತು. ಕಡೆಗೆ ಕೃಷ್ಣನು ಪೌಂಡ್ರಕನನ್ನು ಯಮಪಟ್ಟಣಕ್ಕೆ ಅಟ್ಟಿ ವಿಜಯಶಾಲಿಯಾದನು. ಸತ್ರಾಜಿತನು ಸೂರ್ಯಾನುಗ್ರಹದಿಂದ ಸಂಪಾದಿಸಿದ ಸ್ಯಮಂತಕ ರತ್ನಕ್ಕೆ ಕೃಷ್ಣ ಆಸೆಪಟ್ಟನೆಂದು ಅವನ ಮೇಲೆ ಅಪಕೀರ್ತಿ ಬಂತು. ಆದರೆ ವಾಸ್ತವವಾಗಿ ಅದು ಸತ್ರಾಜಿತನ ತಮ್ಮ ಪ್ರಸೇನನಿಂದ ಜಾಂಬವಂತನ ಕೈಸೇರಿತ್ತು. ಇದನ್ನರಿಯದೆ ಸತ್ರಾಜಿತನೂ ಅವನ ಕಡೆಯವರೂ ಕೃಷ್ಣನೇ ಪ್ರಸೇನನನ್ನು ಕೊಂದು ಮಣಿಯನ್ನು ಅಪಹರಿಸಿದನೆಂದು ಆಪಾದಿಸಿದರು. ಅಪವಾದವನ್ನು ಸಹಿಸಲಾರದೆ ಕೃಷ್ಣನು ಪ್ರಸೇನನನ್ನು ಹುಡುಕಿಕೊಂಡು ಹೊರಡಲು ಅಡವಿಯಲ್ಲಿ ಅವನನ್ನು ಒಂದು ಸಿಂಹವು ಕೊಂದದ್ದು ತಿಳಿಯಿತು. ಪ್ರಸೇನನ ಶವದ ಬಳಿ ಸಿಂಹದ ಹೆಜ್ಜೆಯ ಗುರುತುಗಳಿದ್ದುವು. ಆ ಹೆಜ್ಜೆಯ ಗುರುತುಗಳನ್ನು ಹಿಡಿದು ಹೋಗಲು ಒಂದು ಕರಡಿ ಆ ಸಿಂಹವನ್ನು ಕೊಂದ ಲಕ್ಷಣ ಕಾಣಿಸಿತು. ಕರಡಿಯ ಹೆಜ್ಜೆಯನ್ನು ಹಿಡಿದು ಹೋಗಲು ಒಂದು ಗುಹೆ ಸಿಕ್ಕಿತು. ಅಲ್ಲಿ ಒಬ್ಬ ಯುವತಿಯು ಒಂದು ತೊಟ್ಟಿಲನ್ನು ತೂಗುತ್ತಿದ್ದುದು ಕಾಣಿಸಿತು. ಆ ತೊಟ್ಟಿಲಿಗೆ ಸ್ಯಮಂತಕಮಣಿ ಕಟ್ಟಿದ್ದುದು ಕಾಣಿಸಿತು. ಆ ಯುವತಿ ಜಾಂಬವಂತನ ಪ್ರೀತಿಯ ಮಗಳು ಜಾಂಬವತಿ. ಅವಳು ಕೃಷ್ಣನ ಮೋಹನಾಕಾರವನ್ನು ನೋಡಿ ಮೆಚ್ಚಿ ಮೂರ್ಛೆ ಹೋದಳು. ಉತ್ತರಕ್ಷಣದಲ್ಲಿಯೇ ಜಾಂಬವಂತನು ಬರಲು ಮಣಿಯ ವಿಚಾರಕ್ಕೆ ಕೃಷ್ಣ ಜಾಂಬವಂತರಿಗೆ ವಿವಾದ ಹುಟ್ಟಿ ಜಗಳವಾಗಿ ಕೊನೆಗೆ ಯುದ್ಧಕ್ಕೇ ಮೊದಲಾಯಿತು. ಎಷ್ಟುದಿನ ಕಾದಾಡಿದರೂ ಯಾರೂ ಸೋಲಲಿಲ್ಲ. ಜಾಂಬವಂತನಿಗೆ ಕೊನೆಗೆ ಬಳಲಿಕೆಯುಂಟಾಯಿತು. ದ್ವಾಪರ ಯುಗದಲ್ಲಿ ತನ್ನೊಡನೆ ಇಷ್ಟು ರಭಸದಿಂದ ಕಾದಾಡಬಲ್ಲವನು ಯಾರಿರ

ಬಹುದೆಂದು ಯೋಚಿಸುತ್ತಿದ್ದಾಗ ಕೃಷ್ಣನು ತನ್ನ ರಾಮಾವತಾರದ ರೂಪವನ್ನು ತೋರಿಸಿದನು. ಜಾಂಬವಂತನು ಆತನು ತನ್ನ ಆತ್ಮಸ್ವಾಮಿಯೆಂಬುದನ್ನರಿತು ಕೃಷ್ಣನಿಗೆ ವಂದಿಸಿ ಸಂತೋಷದಿಂದ ಆ ಮಣಿಯನ್ನು ಅವನಿಗೇ ಕೊಟ್ಟು ತನ್ನ ಮಗಳು ಜಾಂಬವತಿಯನ್ನು ಕೃಷ್ಣನಿಗೆ ಕೊಟ್ಟು ಮದುವೆ ಮಾಡಿದನು. ಜಾಂಬವತೀಸಮೇತನಾಗಿ ಕೃಷ್ಣನು ದ್ವಾರಕಿಗೆ ಬಂದು ಎಲ್ಲರೆದುರಿಗೆ ಆ ಮಣಿಯನ್ನು ಸತ್ರಾಜಿತನಿಗೆ ಒಪ್ಪಿಸಿದನು. ಸತ್ರಾಜಿತನು ಕೃಷ್ಣನ ಮೇಲೆ ಅಪವಾದ ಹೊರಿಸಿದುದಕ್ಕೆ ವ್ಯಥೆಪಟ್ಟು ಕೃಷ್ಣನ ಸತ್ಯವನ್ನು ಮೆಚ್ಚಿ ತನ್ನ ಮಗಳು ಸತ್ಯಭಾಮೆಯನ್ನು ಅವನಿಗೆ ಕೊಟ್ಟು ಮದುವೆ ಮಾಡಿದನು. ಆಗ ಆ ಮಣಿಯನ್ನೂ ಕೃಷ್ಣನಿಗೆ ಕೊಡಬಂದನಾದರೂ ಕೃಷ್ಣನು ಅದನ್ನು ತಿರಸ್ಕರಿಸಿದನು.

ಪಾಂಡವರು ಇಂದ್ರಪ್ರಸ್ಥದಲ್ಲಿ ನಿಂತು ರಾಜ್ಯ ಪಡೆದಿರುವರೆಂದು ಕೇಳಿ ಕೃಷ್ಣನು ಅವರನ್ನು ನೋಡುವ ಆಸೆಯಿಂದ ಇಂದ್ರಪ್ರಸ್ಥಕ್ಕೆ ಹೊರಟನು. ಮುಂಚೆ ದೂತರು ಓಡಿ ಹೋಗಿ ಕೃಷ್ಣಾಗಮನದ ವಾರ್ತೆಯನ್ನು ಹೇಳಲು ಧರ್ಮರಾಯನು ತಮ್ಮಂದಿರೊಡನೆ ಕೃಷ್ಣನನ್ನು ಎದಿರುಗೊಳ್ಳಲು ಹೊರಟನು. ಸಮಸ್ತ ಪುರಜನ ಪರಿಜನರು ಕೃಷ್ಣಸಂದರ್ಶನಾಪೇಕ್ಷಿಗಳಾಗಿ ಅರಸನನ್ನನುಸರಿಸಿ ನಗರದ ಹೊರವಳಯದಲ್ಲಿ ಸೇರಿದರು. ನಗರದ ಹೆಬ್ಬಾಗಿಲಲ್ಲಿಯೇ ಇವರೆಲ್ಲ ನಿಂತಿದ್ದುದನ್ನು ಕಂಡು ಶ್ರೀ ಕೃಷ್ಣನು ರಥದಿಂದ ಇಳಿದು ಧರ್ಮರಾಯ ಭೀಮರಿಗೆ ನಮಸ್ಕಾರ ಮಾಡಿದನು; ಅರ್ಜನನನ್ನು ಆಲಿಂಗಿಸಿದನು. ಮಾದ್ರೇಯರು ನಮಸ್ಕಾರ ಮಾಡಲು ಅವರನ್ನು ತಕ್ಕೈಸಿ ಎಲ್ಲರನ್ನೂ ಸಂತೋಷ ಸಮುದ್ರದಲ್ಲಿ ಓಲಾಡುವಂತೆ ಮಾಡಿದನು. ಕುಶಲಪ್ರಶ್ನೆಗಳಾದ ಮೇಲೆ ಕೌಂತೇಯರೊಡನೆ ರಥಾರೂಢನಾದ ಕೃಷ್ಣನು ನಗರಪ್ರವೇಶ ಮಾಡಿದನು. ಪುರಜನ ಪರಿಜನರ ಹರ್ಷೋದ್ಗಾರಗಳನ್ನೂ, ಜಯ ಘೋಷಗಳನ್ನೂ ಕೇಳುತ್ತ ಅರಮನೆಯನ್ನು ಪ್ರವೇಶಿಸಿ ಕುಂತೀದೇವಿಯನ್ನು ಕಂಡು ಕೊಂಚ ಹೊತ್ತು ಆಕೆಯೊಡನೆ ಯೋಗಕ್ಷೇಮ ವಿಚಾರ ಮಾಡಿದನು. ಕುಂತಿ ಏಕಚಕ್ರಪುರದಲ್ಲಿ ತಾವು ಪಟ್ಟ ಕಷ್ಟವನ್ನು ಹೇಳಿ ಅರಗಿನಮನೆಯ ವಿಪತ್ತನ್ನು ವರ್ಣಿಸಿ ಸಂಕಟವನ್ನು ತೋಡಿಕೊಂಡದ್ದಲ್ಲದೆ ದ್ರೌಪದಿಯ ಸ್ವಯಂವರಕ್ಕೆ ಮುಂಚೆ ಕೃಷ್ಣನು ಕುಂಬಾರರ ಮನೆಯಲ್ಲಿ ತಮಗೆ ದರ್ಶನ ಕೊಟ್ಟುದನ್ನು ಸ್ಮರಿಸಿಕೊಂಡು ಕೃಷ್ಣನನ್ನು ಮನಸಾರ ಹೊಗಳಿದಳು. ಕೃಷ್ಣನು ಕುಂತಿಯ ಪ್ರೇಮಾ ದರಗಳನ್ನು ಹೊಗಳಿ ಸತ್ಯಭಾಮೆಯ ತಂದೆಗೆ ಉಂಟಾದ ವಿಪತ್ತನ್ನೂ ಅದಕ್ಕೆ ಕಾರಣನಾದ ಶತಧನ್ವನನ್ನು ಕೊಲ್ಲಲು ತಾನು ಓಡಿದುದನ್ನೂ ಹೇಳಿ ಆ ಆತುರದ ಕೆಲಸವಿಲ್ಲದಿದ್ದರೆ ತಾನು ಇನ್ನೂ ಮುಂಚೆಯೇ ಬರುತ್ತಿದ್ದು ದಾಗಿ ಹೇಳಿ ಆಕೆಯನ್ನು ಸಂತೈಸಿದನು. ಪಾಂಡವರೊಡನೆ ಕೆಲವು ದಿನ ಸಂತೋಷ ಸಂಭ್ರಮಗಳಿಂದ ಕಳೆದು ಶ್ರೀಕೃಷ್ಣನು ಅವರನ್ನು ಸಂತೋಷಪಡಿಸಿದನು.

ಮುಂದೆ ಶ್ರೀ ಕೃಷ್ಣನು ಮುರಾಸುರನನ್ನೂ ನರಕಾಸುರನನ್ನೂ ಕೊಂದು ಭಗದತ್ತನನ್ನು ಆ ರಾಜ್ಯಕ್ಕೆ ಪಟ್ಟಾಭಿಷೇಕ ಮಾಡಿದನು. ಸತ್ಯಭಾಮೆಯ ಆಸೆಯನ್ನು ಪೂರೈಸುವ ಸಲುವಾಗಿ ಶ್ರೀ ಕೃಷ್ಣನು ಇಂದ್ರನೊಡನೆ ಕಾಳಗ ಹೂಡಿ ಪಾರಿಜಾತ ವೃಕ್ಷವನ್ನು ಅಮರೇಂದ್ರನ ವನದಿಂದ ತಂದು ಸತ್ಯಭಾಮೆಯ ಉಪವನದಲ್ಲಿ ನೆಟ್ಟನು. ದ್ವಾರಕಿಯಲ್ಲಿ ಕೃಷ್ಣನು ಸುಖದಿಂದಿರುವಾಗ ಅರ್ಜುನನು ತೀರ್ಥಯಾತ್ರೆಯ ನೆಪದಿಂದ ಪ್ರಭಾಸ ತೀರ್ಥಕ್ಕೆ ಬರಲು ಕೃಷ್ಣನು ಅವನನ್ನು ಯೋಗಿಯ ವೇಷದಲ್ಲಿ ದ್ವಾರಕಿಗೆ ಬರಮಾಡಿಕೊಂಡು ಬಲರಾಮನನ್ನು ಪ್ರೋತ್ಸಾಹಿಸಿ ಯೋಗಿವೇಷದ ಅರ್ಜುನನಿಗೆ ತನ್ನ ತಂಗಿಯಾದ ಸುಭದ್ರೆಯನ್ನೇ ಪರಿಚರ್ಯೆಗೆ ನಿಲ್ಲಿಸುವಂತೆ ಮಾಡಿ ಸಕಾಲದಲ್ಲಿ ಸುಭದ್ರೆಯೊಡನೆ ಅರ್ಜುನನು ಇಂದ್ರಪ್ರಸ್ಥಕ್ಕೆ ಓಡಿಹೋಗುವಂತೆ ತಂತ್ರಮಾಡಿದನು. ಸುಭದ್ರಾರ್ಜುನರ ವಿವಾಹ ವೈಭವದಿಂದ ನೆರವೇರಿತು.

ಶ್ರೀ ಕೃಷ್ಣನು ತಾನೇ ಪುರುಷೋತ್ತಮನೆಂಬ ಅರಿವಿದ್ದರೂ ತೀರ್ಥಯಾತ್ರೆಯ ಸಂಕಲ್ಪಮಾಡಿ ಸಕಲ ತೀರ್ಥಗಳನ್ನೂ ಪವಿತ್ರವನ್ನಾಗಿಸುವ ಅನೇಕ ಮುನಿಗಳನ್ನು ಸಂದರ್ಶನ ಮಾಡಿದನು. ಬದರಿಕಾಶ್ರಮಕ್ಕೆ ಹೋಗಿ ಅನೇಕ ವಿಪ್ರರ್ಷಿ ದೇವರ್ಷಿ ರಾಜರ್ಷಿಗಳನ್ನು ಸಂದರ್ಶನಮಾಡಿದನು. ಅವರೆಲ್ಲರಿಗೂ ಸತ್ಕಾರಗಳನ್ನು ಮಾಡಿ ಗೌರವಿಸಿ ಬೇಕು ಬೇಕಾದ ವಸ್ತುಗಳನ್ನು ದಾನಮಾಡಿ ಅವರ ದರ್ಶನ ಸಂಭಾಷಣೆಗಳಿಂದ, ಅವರ ಪಾದೋದಕ ಸ್ಪರ್ಶನದಿಂದ ತಾನು ಪಾವನನಾದೆನೆಂದೂ ಹಲವು ಜನ್ಮಗಳ ಪಾಪರಾಶಿ ತೊಳೆದು ಹೋಯಿತೆಂದೂ ಹೇಳಿ ಅವರಿಗೆ ನಮಸ್ಕಾರಮಾಡಿ ಸಮಸ್ತ ರಾಜರಿಗೂ ಪ್ರಜೆಗಳಿಗೂ ಮಾರ್ಗದರ್ಶನ ಮಾಡಿದನು. ಕೃಷ್ಣನು ನೈಮಿಷಾರಣ್ಯದಲ್ಲಿ ಒಂದು ಯಾಗಶಾಲೆಯನ್ನು ನಿರ್ಮಿಸಿ ವಸುದೇವನ ಕೈಯಲ್ಲಿ ಒಂದು ಯಜ್ಞ ಮಾಡಿಸಿ ಎಲ್ಲರನ್ನೂ ಕರೆದುಕೊಂಡು

ದ್ವಾರಕೆಗೆ ಹಿಂತಿರುಗಿದನು. ಶ್ರೀ ಕೃಷ್ಣನು ಪಾಂಡವರ ಸಹಾಯಕನಾಗಿ ಇಂದ್ರಪ್ರಸ್ಥಕ್ಕೆ ಬಂದು ಧರ್ಮರಾಯನ ಪ್ರಾರ್ಥನೆಯಂತೆ ಅವನ ಕೈಯಲ್ಲಿ ರಾಜಸೂಯ ಯಾಗ ಮಾಡಿಸಲು ಬದ್ಧಕಂಕಣನಾಗಿ ನಿಂತು ಅದಕ್ಕೆ ಬೇಕಾದ ಸಂಸಿದ್ಧತೆಯಲ್ಲಿ ತೊಡಗಿದನು. ಭೀಮಾರ್ಜುನರನ್ನು ಕರೆದುಕೊಂಡು ಜರಾಸಂಧನ ಅರಮನೆಯನ್ನು ಪ್ರವೇಶಿಸಿ ಭೀಮನಿಂದ ಜರಾಸಂಧನನ್ನು ಕೊಲ್ಲಿಸಿ ಮಾಗಧನ ಸೆರೆಯಲ್ಲಿದ್ದ ರಾಜರನ್ನು ಬಿಡುಗಡೆಮಾಡಿ ಅವನ ಮಗ ಸಹದೇವನನ್ನು ಪಟ್ಟಕ್ಕೇರಿಸಿ ವಿಶೇಷವಾದ ಧನಕನಕಗಳನ್ನು ತೆಗೆಸಿಕೊಂಡು ಇಂದ್ರಪ್ರಸ್ಥಕ್ಕೆ ಹಿಂತಿರುಗಿದನು. ಕೃಷ್ಣನ ಬೆಂಬಲದಿಂದ ಭೀಮಾರ್ಜುನರೂ ನಕುಲಸಹದೇವರೂ ದಿಗ್ವಿಜಯ ಮಾಡಿ ಭರತವರ್ಷದ ಅನೇಕ ರಾಜರನ್ನು ಗೆದ್ದು ಧರ್ಮರಾಯನು ಮಾಡಬೇಕಾದ ರಾಜಸೂಯಕ್ಕೆ ವಿಪುಲವಾದ ಧನಕನಕ ವಸ್ತು ವಾಹನಗಳನ್ನು ಸಂಗ್ರಹಿಸಿದರು. ಎಲ್ಲ ರಾಜರೂ ಪಾಂಡವರಿಗೆ ಮಣಿದು ಕಪ್ಪಕಾಣಿಕೆಗಳನ್ನು ಕೊಟ್ಟದ್ದಲ್ಲದೆ ಧರ್ಮರಾಯನ ಆಹ್ವಾನವನ್ನು ಅಂಗೀಕರಿಸಿ ಯಜ್ಞಕ್ಕೆ ಬಂದು ಬಗೆಬಗೆಯಾಗಿ ಸಹಕರಿಸಿದರು. ಸ್ವಯಂ ದುರ್ಯೋಧನನೇ ಬಂದು ಧರ್ಮರಾಯನ ಯಜ್ಞದಲ್ಲಿ ಭಾಗಿಯಾದನು. ರಾಜಸೂಯ ಅಮಿತ ವೈಭವದಿಂದ ನಡೆಯಿತು. ಯಜ್ಞದ ಕಡೆಯಲ್ಲಿ ಅಗ್ರ ಪೂಜೆಮಾಡುವ ಪ್ರಸಂಗ ಬಂತು. ಪಾಂಡವರ ವೈಭವಕ್ಕೆ ಸೂತ್ರಧಾರನೋಪಾದಿಯಲ್ಲಿ ಕೆಲಸ ಮಾಡಿದ ಶ್ರೀ ಕೃಷ್ಣನಿಗೇ ಅಗ್ರಪೂಜೆಯೆಂದು ನಿರ್ಣಯಿಸಿ ಅವನನ್ನು ಭದ್ರಾಸನದ ಮೇಲೆ ಕೂಡಿಸಿ ಅರ್ಘ್ಯ ಕೊಡುವ ಹೊತ್ತಿನಲ್ಲಿ ಆ ಸಭೆಯಲ್ಲಿ ಇದ್ದ ಚೇದಿದೇಶದ ದೊರೆ ಶಿಶುಪಾಲನೆಂಬ ದೈತ್ಯನು ಇದನ್ನು ಪ್ರತಿಭಟಿಸಿ ಶುದ್ಧ ಕ್ಷತ್ರಿಯ ರಾಜಮಹಾರಾಜರುಗಳೇ ಸೇರಿರುವ ಸಭೆಯಲ್ಲಿ ರಾಜನಲ್ಲದ ಒಬ್ಬ ಗೊಲ್ಲರವನಿಗೆ ಪೂಜೆ ಸಲ್ಲಿಸುವುದು ಯೋಗ್ಯವಲ್ಲವೆಂದೂ ಹಾಗೆ ಅಯೋಗ್ಯವಾದುದನ್ನು ಮಾಡಿ ಧರ್ಮರಾಯನು ಸಮಸ್ತ ರಾಜಸಮೂಹವನ್ನೂ ಅವಮಾನಪಡಿಸುತ್ತಿರುವನೆಂದೂ ವಾದಿಸಿ ಶ್ರೀ ಕೃಷ್ಣನನ್ನು ಬಹಳವಾಗಿ ಹೀಯಾಳಿಸಿದನು. ಶ್ರೀ ಕೃಷ್ಣನು ಶಿಶುಪಾಲನ ದುರ್ಭಾಷೆಯನ್ನೆಲ್ಲ ಸಹನೆಯಿಂದ ಕೇಳಿ ಕಡೆಗೆ ಮಿತಿ ಮೀರಿದಾಗ ಅವನನ್ನು ತನ್ನ ಚಕ್ರಾಯುಧದಿಂದ ಕೊಂದನು.

ಶ್ರೀ ಕೃಷ್ಣಪರಮಾತ್ಮನು ಹೀಗೆ ಅನೇಕ ದೈತ್ಯರನ್ನು ಸಂಹರಿಸಿ ದಾನವಾಂತಕನೆಂಬ ಬಿರುದನ್ನು ಸಾರ್ಥಕಪಡಿಸಿಕೊಂಡನು. ಪಾಂಡವರು ಅನುಚಿತವಾದ ದ್ಯೂತದಲ್ಲಿ ತೊಡಗಿ ರಾಜ್ಯಕೋಶಗಳನ್ನು ಕಳೆದುಕೊಂಡು ಅಪಮಾನಪಟ್ಟು ದುಃಖಿತರಾಗಿದ್ದ ವೇಳೆಯಲ್ಲಿ ಕೃಷ್ಣನು ಅವರನ್ನು ಕಂಡು ಸಂತೈಸಿ ದ್ರೌಪದಿಗೆ ಸಮಾಧಾನ ಹೇಳಿ ದ್ವಾರಕೆಗೆ ಹಿಂತಿರುಗಿದನು. ಕೃಷ್ಣನು ಭಕ್ತಪರಾಧೀನನು. ಪಾಂಡವರು, ಪಾಂಡವರಿಗಿಂತ ಹೆಚ್ಚಾಗಿ ದ್ರೌಪದಿ, ಪರಮ ಭಕ್ತರು. ಅವರ ಶ್ರೇಯಸ್ಸೇ ತನ್ನ ಶ್ರೇಯಸ್ಸೆಂದೂ ಅವರ ದುಃಖವೇ ತನ್ನ ದುಃಖವೆಂದೂ ಭಾವಿಸಿದುದೇ ಅಲ್ಲದೆ ಶ್ರೀಕೃಷ್ಣನು ಪಾಂಡವರನ್ನು ತನ್ನ ಪ್ರಾಣಗಳೆಂದು ಉದ್ಘೋಷಿಸಿದ್ದನು. ಧರ್ಮಮಾರ್ಗಾನುಸಾರಿಗಳೂ ಭಕ್ತರೂ ಆದ ಪಾಂಡವರ ಮೇಲೆ ಕೃಷ್ಣನಿಗೆ ಅಮಿತಾನುಗ್ರಹ. ಆದ್ದರಿಂದಲೇ ಅವನು ಪಾರ್ಥಸಾರಥಿಯೇ ಅಲ್ಲದೆ ಪಾಂಡವ ಸಾರಥಿಯೂ ಆಗಿದ್ದನು. ಪಾಂಡವರ ಅಜ್ಞಾತವಾಸವಾದ ಮೇಲೆ ಅವರಿಗೆ ನ್ಯಾಯವಾಗಿ ಸಲ್ಲಬೇಕಾಗಿದ್ದ ರಾಜ್ಯವನ್ನು ಕೊಡಿಸಲು ಪಾಂಡವ ದೂತನಾಗಿ ದುರ್ಯೋಧನನ ಸಭೆಗೆ ಹೋದನು. ಕೌರವನು ನಿರಾಕರಿಸಿ ಕೃಷ್ಣನನ್ನು ಅವಮಾನಪಡಿಸಿದನು ; ಅವನನ್ನು ಕಟ್ಟಿಹಾಕಲು ಪ್ರಯತ್ನಿಸಿದನು. ಮಹಾಮಹಿಮನಾದ ಕೃಷ್ಣನು ತನ್ನ ವಿಶ್ವರೂಪವನ್ನು ಮೆರೆದು ದುರ್ಯೋಧನನ ಸಭೆಯಿಂದ ಹೊರಕ್ಕೆ ಬಂದನು. ಕೌರವ ಪಾಂಡವರಲ್ಲಿ ಯುದ್ಧ ನಿರ್ಣಯವಾಯಿತು, ಆಗ ಶ್ರೀ ಕೃಷ್ಣನು ಅರ್ಜುನನ ಸಾರಥಿಯಾಗಲು ಒಪ್ಪಿಕೊಂಡು ಮಹಾಭಾರತ ಯುದ್ಧದಲ್ಲಿ ಭೀಷ್ಮ, ದ್ರೋಣ, ಕರ್ಣ, ಅಶ್ವತ್ಥಾಮಾದಿಗಳನ್ನು ಗೆಲ್ಲಲು ಅರ್ಜುನನಿಗೆ ಸಹಾಯ ಮಾಡಿದನು. ಭೀಮ ದುರ್ಯೋಧನರ ಗದಾಯುದ್ಧದಲ್ಲಿ ಭೀಮನಿಗೆ ಸಕಾಲದಲ್ಲಿ ಯೋಗ್ಯ ಸಲಹೆಯನ್ನು ನೀಡಿ ಭೀಮನಿಗೆ ವಿಜಯವನ್ನುಂಟುಮಾಡಿದನು. ಪಾಂಡವರಿಗೆ ಕೃಷ್ಣನು ರಕ್ಷಾಕವಚದಂತೆ ಇದ್ದನು.

ಕೌರವವಧೆಯಾದ ನಂತರ ಧರ್ಮರಾಯನಿಗೆ ಹಸ್ತಿನಾವತಿಯಲ್ಲಿ ಪಟ್ಟಾಭಿಷೇಕ ಮಾಡಿಸಿ ಕೃಷ್ಣ ದ್ವಾರಕೆಗೆ ಹಿಂತಿರುಗಿದನು. ಅಲ್ಲಿ ಶ್ರೀಕೃಷ್ಣನು ವೈಭವದಿಂದ ಅಷ್ಟಮಹಿಷಿಯರೊಡನೆ ಸುಖಿಯಾಗಿ ಕಾಲಯಾಪನೆ ಮಾಡುತ್ತ ದೀನರಕ್ಷಕನೆಂದೂ ಧರ್ಮಸಂಸ್ಥಾಪಕನೆಂದೂ ಪ್ರಸಿದ್ಧನಾಗಿ ಯದುವಂಶಭೂಷಣನಾಗಿ ಮೆರೆಯುತ್ತಿದ್ದನು. ಹೀಗಿರುವಾಗ ಹಿಂದೆ ಸಾಂದೀಪನಿಯ ಹತ್ತಿರ ಕೃಷ್ಣನ ಸಹಾಧ್ಯಾಯಿಯಾಗಿದ್ದ ಸುಧಾಮನೆಂಬ ಬ್ರಾಹ್ಮಣನು ಕ್ರೂರವಾದ ಬಡತನಕ್ಕೆ ಸಿಕ್ಕಿ ನಾನಾಕ್ಲೇಶಗಳನ್ನು ಅನುಭವಿಸುತ್ತ ಸಂಸಾರನಿರ್ವಹಣ ಮಾಡಲಾರದೆ ಸಂಕಟಪಟ್ಟು ತನ್ನ ಸತಿಯ ಸಲಹೆಯಂತೆ ಶ್ರೀ ಕೃಷ್ಣನನ್ನು ಕಂಡು ಯೋಚನೆ ಮಾಡಬೇಕೆಂದು ಸಂಕಲ್ಪಿಸಿ ದ್ವಾರ

ಕಿಗೆ ಹೊರಟನು. ಹೊರಡುವಾಗ ಆತನ ಹೆಂಡತಿ ಭಕ್ತರ ಕಲ್ಪವೃಕ್ಷದೋಪಾದಿಯಲ್ಲಿದ್ದ ಕೃಷ್ಣನಿಗೆ ಉಪಾಯನ ಕೊಡುವುದಕ್ಕೆ ಏನೂ ಅನುಕೂಲವಿಲ್ಲದಿರಲು ನೆರೆಹೊರೆಯವರನ್ನು ಯಾಚಿಸಿ ಸ್ವಲ್ಪ ಅವಲಕ್ಕಿಯನ್ನು ತಂದು ಕೊಟ್ಟಳು. ಕುಚೇಲನು – ಅದು ಸುಧಾಮನಿಗೆ ಇದ್ದ ಅಡ್ಡ ಹೆಸರು – ಆ ಅವಲಕ್ಕಿಯ ಗಂಟನ್ನು ಕಂಕುಳಲ್ಲಿರಿಸಿ ಕೊಂಡು ದ್ವಾರಕಾ ಪಟ್ಟಣಕ್ಕೆ ಪಾದಚಾರಿಯಾಗಿ ಹೊರಟನು. ಆ ಬಡವನು ಬಹಳ ಪ್ರಯಾಸದಿಂದ ದಾರಿಯನು ಸವೆಸುತ್ತ ತನ್ನ ಬಾಲ್ಯದ ಸಹಾಧ್ಯಾಯಿಯ ಹಿಂದಣ ಪರಿಚಯವನ್ನು ನೆನೆಸಿಕೊಳ್ಳುತ್ತ ಈ ನೆಪದಿಂದಲಾದರೂ ಆ ಪುರುಷೋತ್ತಮನ ದರ್ಶನ ಲಭಿಸುವುದೆಂದು ಹರ್ಷಿಸಿ ಪ್ರಯಾಣ ಮಾಡಿದನು. ಶ್ರೀಹರಿಯ ದರ್ಶನ ಸಂಭಾಷಣೆಗಳ ಒಂದು ಭಾಗ್ಯವನ್ನೇ ಕುರಿತು ಚಿಂತಿಸುತ್ತ ರೋಮಾಂಚಿತನಾಗುತ್ತಿದ್ದನು. ದಾರಿ ನಡೆದು ನಡೆದು ಕಡೆಗೆ ಸಮುದ್ರ ತರಂಗಗಳಿಂದ ಸುತ್ತುವರಿಯಲ್ಪಟ್ಟ ದ್ವಾರಕೆಯನ್ನು ಕಂಡು ಹರ್ಷಿತನಾಗಿ ಕೃಷ್ಣನ ಅರಮನೆಯ ಹೆಬ್ಬಾಗಿಲಿಗೆ ಬಂದನು. ಜೀರ್ಣಾಂಬರಧಾರಿಯಾದ ಈ ಬ್ರಾಹ್ಮಣನನ್ನು ಕಂಡು ಎಲ್ಲರೂ ಅಲಕ್ಷ್ಯದಿಂದ ನೋಡುತ್ತಿರಲು ಆತನನು ದೂರದಲ್ಲಿಯೇ ನೋಡಿದ ಶ್ರೀ ಕೃಷ್ಣನು ಎದ್ದು ಬೇಗ ಬೇಗನೆ ಬಂದು ಅವನನ್ನು ಸ್ವಾಗತಿಸಿ ಅಪ್ಪಿಕೊಂಡು ಆದರಿಸಿ ಕೈ ಹಿಡಿದು ಕರೆದುಕೊಂಡು ಬಂದು ಅರ್ಧಾಸನದಲ್ಲಿ ಕುಳ್ಳಿರಿಸಿಕೊಂಡು ಯೋಗಕ್ಷೇಮವನ್ನು ವಿಚಾರಿಸಿದನು ಶ್ರೀ ಕೃಷ್ಣನು ಕೃಶಾಂಗನೂ ದೀನನೂ ಹರುಕು ಬಟ್ಟೆಗಳನ್ನುಟ್ಟವನೂ ಆದ ಈ ಬಡಬ್ರಾಹ್ಮಣನಿಗೆ ತೋರುತ್ತಿದ ಅಮಿತವಾದ ಆದರವನ್ನು ನೋಡಿ ಪರಿಜನರೆಲ್ಲ ಬೆರಗಾದರು. ಕೃಷ್ಣನು ಕುಚೇಲನಿಗೆ ಅರ್ಘ್ಯ ಪಾದ್ಯಾದಿಗಳನು ಕೊಟ್ಟು ಸತ್ಕರಿಸಿ ಕೂಡಲೆ ಒಂದು ಗೋದಾನ ಮಾಡಿದನು. ಆ ಮೇಲೆ ಒಳಗೆ ಕರೆದುಕೊಂಡು ಹೋಗಿ ಸ್ನಾನಾದಿ ಗಳನ್ನು ಮಾಡಿಸಿ ದಿವ್ಯಾಂಬರಗಳನ್ನು ಉಡಿಸಿ ಗಂಧಾನುಲೇಪನಗಳನ್ನು ಕೊಟ್ಟು ಮಾಲೆ ಹಾಕಿ ಸ್ತ್ರೀಯರು ಚಾಮರವಿಕ್ಕುತ್ತಿರಬೇಕಾದರೆ ಷಡ್ರಸೋಪೇತವಾದ ಭೋಜನ ಮಾಡಿಸಿ ತಾಂಬೂಲ ಕೊಟ್ಟು ಪ್ರೀತಿಯಿಂದ ಸಂಭಾಷಣೆ ಮಾಡುತ್ತಿದ್ದನು. 'ಈ ತಿರುಕ ಹಾರುವನಿಗೆ ಏನು ಪುಣ್ಯವಿತ್ತೋ' ಎಂದು ಅರಮನೆಯಲ್ಲಿದ್ದವರೆಲ್ಲ ಆಶ್ಚರ್ಯಪಡುತ್ತಿದ್ದರು.

ತಾವು ಹಿಂದೆ ಕಾಶೀನಗರದಲ್ಲಿ ಸಾಂದೀಪನಿಯ ಶಿಷ್ಯರಾಗಿ ಗುರುಕುಲವಾಸಮಾಡಿದ ಕಥೆಯನ್ನು ಸ್ಮರಿಸಿಕೊಂಡು, ಒಂದು ದಿನ ಸೌದೆ ತರಲು ಕಾಡಿಗೆ ಹೋಗಿ ಮಳೆಗೆ ಸಿಕ್ಕಿ ಕಂಗೆಟ್ಟಿದ್ದಾಗ ಆ ಬ್ರಾಹ್ಮಣೋತ್ತಮನು ಗಾಬರಿಯಿಂದ ತಮ್ಮನ್ನು ಹುಡುಕಿಕೊಂಡು ಬಂದು ಆದರಿಸಿ ಮೆಚ್ಚಿ ಆಶೀರ್ವದಿಸಿದ ಸಂಗತಿಯನ್ನು ಶ್ರೀ ಕೃಷ್ಣನು ಜ್ಞಾಪಿಸಿಕೊಂಡು ಹೇಳಿ ಕುಚೇಲನನ್ನು ಸಂತೋಷಪಡಿಸಿದನು. ಕುಚೇಲನಾದರೋ ಕೃಷ್ಣನ ಅಮಿತವಾದ ಆದ ರದಿಂದ ಆನಂದಪರವಶನಾದನು. ತನ್ನ ಗೆಳೆಯನು ಇಷ್ಟು ಭಾಗ್ಯಶಾಲಿಯಾಗಿದ್ದರೂ ತನ್ನನ್ನು ಮರೆಯಲಿಲ್ಲವೆಂದು ತಿಳಿದು ಹರುಷದಿಂದ ಉಬ್ಬಿ ಹೋದನು. ಅವನಿಗೆ ತಾನು ಅಲ್ಲಿಗೆ ಬಂದ ಉದ್ದೇಶವೇ ಮರೆತು ಹೋಯಿತು. ಅವನು ಶ್ರೀ ಕೃಷ್ಣನ ಸಹವಾಸ ಸಂಭಾಷಣೆಗಳಿಂದ ಸಂತುಷ್ಟನಾಗಿ ಲೋಕವಿಭ್ರಮವನ್ನು ಮರೆತನು. ಆಸಮಯದಲ್ಲಿ ಕೃಷ್ಣನು "ಮಿತ್ರನೆ, ನನಗಾಗಿ ನೀನು ಏನೂ ಕಾಣಿಕೆ ತರಲಿಲ್ಲವೆ?" ಎಂದು ಕೇಳಿದನು. ಆ ವೇಳೆಗೆ ಕುಚೇಲನು ತಾನು ತಂದಿದ್ದ ಅವಲಕ್ಕಿಯನ್ನು ಕೊಡಲು ನಾಚಿಕೊಂಡಿದ್ದನು. ಕೃಷ್ಣನು ಅವನ ಕಂಕುಳಲ್ಲಿದ್ದ ಗಂಟನ್ನು ಗಮನಿಸಿ ಅದನ್ನು ಬಲವಂತದಿಂದ ತೆಗೆದುಕೊಂಡು ಬಿಚ್ಚಿ ಅದರಲ್ಲಿದ್ದ ಅವಲಕ್ಕಿಯಲ್ಲಿ ಒಂದು ಹಿಡಿಯಷ್ಟು ತೆಗೆದುಕೊಂಡು ಬಾಯಿಗೆ ಹಾಕಿಕೊಂಡನು. ಕುಚೇಲನು ಆ ಮಹಾನುಭಾವನ ಧಾರಾಳ ಮನಸ್ಸನ್ನೂ ಸಲಿಗೆಯನ್ನೂ ಸ್ನೇಹಪರತೆ ಯನ್ನೂ ಮೆಚ್ಚಿ ಪರವಶನಾಗಿ ಹೋದನು. ಆ ಸಮಯದಲ್ಲಿ ರುಕ್ಮಿಣಿಯು ಕೃಷ್ಣನನ್ನು ತಡೆದಳು ; ಆತ್ಮಸಂತುಷ್ಟ ನಿಗೆ ಇಷ್ಟೊಂದು ಚಪಲವಿರಬಾರದೆಂದು ನುಡಿದಳು. ಕೃಷ್ಣನು ಹುಸಿಮುನಿಸನ್ನು ವಹಿಸಿ ಭಕ್ತನಿಗೆ ಬಡತನ ವನ್ನುಂಟುಮಾಡಿದುದಕ್ಕಾಗಿ ಲಕ್ಷ್ಮೀಸ್ವರೂಪಳಾದ ಆಕೆಯನು ಆಕ್ಷೇಪಿಸಿದನು. ಆ ರಾತ್ರಿ ಕೃಷ್ಣಕುಚೇಲರು ಒಟ್ಟಿಗೆ ಭೋಜನ ಮಾಡಿ ಇಷ್ಟಸಲ್ಲಾಪಗಳನ್ನು ಮಾಡುತ್ತ ಇದ್ದುಬಿಟ್ಟರು. ಬೆಳಗಾಗುತ್ತಲೂ ಕುಚೇಲನು ಕೃಷ್ಣನಿಗೆ ನಮಿಸಿ ಅನುಜ್ಞೆ ಪಡೆದು ತನ್ನ ಊರಿಗೆ ಹೊರಟನು.

ತನ್ನ ಊರಿಗೆ ಪ್ರಯಾಣ ತೊಡಗಿದಾಗ ಕುಚೇಲನಿಗೆ ತನ್ನ ಹೆಂಡತಿಯ ನೆನಪಾಯಿತು. ಅವಳ ಮಾತಿ ನಂತೆ ತಾನು ಕೃಷ್ಣನಲ್ಲಿ ಧನವನ್ನು ಬೇಡಲು ಹೊರಟದ್ದು ಸ್ಮರಣೆಗೆ ಬಂತು. ಈಗ ತಾನು ತನ್ನ ಗೆಳೆಯನಲ್ಲಿ ಏನನ್ನೂ ಬೇಡದೆ ಬರಿಗೈಯಲ್ಲಿ ಹಿಂತಿರುಗಿ ಹೋದರೆ ಅವಳಿಗೆಷ್ಟು ನಿರಾಸೆಯಾಗಬಹುದೆಂದು ಯೋಚಿಸಿ ವ್ಯಥೆಪಟ್ಟನು. ಆದರೆ ದ್ವಾರಕೆಯಲ್ಲಿದ್ದಾಗ ಭಗವಂತನಲ್ಲಿ ಏನು ಬೇಡುವುದಕ್ಕೂ ಮನಸ್ಸಾಗಲಿಲ್ಲ. ತನ್ನ ಸಂಸಾರದ ಕಷ್ಟ

ಕಾರ್ಪಣ್ಯಗಳನ್ನು ಸ್ಮರಿಸಿಕೊಂಡು ಚಿಂತಿಸುತ್ತಾ ಕುಚೇಲನು ದಾರಿ ನಡೆದನು. ಹೋಗುವಾಗ ಇದ್ದ ಉತ್ಸಾಹ ಹಿಂತಿರುಗುವಾಗ ಇರಲಿಲ್ಲ. ಅಂತು ಹೇಗೋ ನಡೆದು ಊರಿಗೆ ಬಂದನು. ಆದರೆ ಅವನಿಗೆ ತನ್ನ ಮನೆಯ ಗುರುತೇ ಸಿಕ್ಕಲಿಲ್ಲ. ತನ್ನ ಗುಡಿಸಲು ಕಣ್ಮರೆಯಾಗಿ ಅರಮನೆಯ ಹಾಗೆ ಆಗಿತ್ತು. ಕುಚೇಲನು ದಾರಿದಪ್ಪಿದೆನೆಂದು ಬೇರೆ ಕಡೆಗೆ ಹೋಗುವುದರಲ್ಲಿದ್ದನು ಆಗ ಕುಚೇಲನ ಹೆಂಡತಿಯು ದಿವ್ಯಾಂಬರಗಳನ್ನು ಧರಿಸಿ ರತ್ನಾಭರಣಗಳನ್ನು ತೊಟ್ಟು ಪರಿವಾರಸಮೇತಳಾಗಿ ಬಂದು ಗಂಡನನ್ನು ಮನೆಯೊಳಕ್ಕೆ ಕರೆದುಕೊಂಡು ಹೋಗಿ ಪಾದ್ಯ ಕೊಟ್ಟು ಉಪಚರಿಸಿದಳು. ಕುಚೇಲನು ತನ್ನ ಕಣ್ಣನ್ನೇ ನಂಬಲಾರದೆ ಹೋದನು. ದಯಾಮಯನಾದ ಕೃಷ್ಣನು ತಾನು ಬೇಡದಿದ್ದರೂ ಅಪರಿಮಿತ ಐಶ್ವರ್ಯವನ್ನು ಕೊಟ್ಟನೆಂದು ಅವನು ಆಗ ಅರ್ಥಮಾಡಿಕೊಂಡನು. ಅವನ ಭಗವದ್ಭಕ್ತಿ ಹೆಚ್ಚಾಯಿತು. ಕೃಷ್ಣಸ್ಮರಣೆ ಮಾಡುತ್ತ ಕುಚೇಲನು ಆನಂದಪರವಶನಾದನು. ಶ್ರೀಕೃಷ್ಣನ ಭಕ್ತಾನುಗ್ರಹ ಅವ್ಯಾಜವಾದದ್ದು; ಅನಂತವಾದದ್ದು.

ದೇವಕೀದೇವಿಯು ಕೃಷ್ಣನ ಅನೇಕ ಮಹಿಮಾಕಾರ್ಯಗಳನ್ನು ನೋಡಿ ಅವನು ಸಾಧಾರಣ ಮಾನವನಲ್ಲವೆಂಬುದನ್ನು ಮನಗಂಡು ತಾನು ಕಂಸನ ಸೆರೆಮನೆಯಲ್ಲಿ ಹೆತ್ತು ಕಳೆದುಕೊಂಡ ತನ್ನ ಆರು ಮಕ್ಕಳನ್ನೂ ತೋರಿಸಬೇಕೆಂದು ಅವನನ್ನು ಕೇಳಿಕೊಂಡಳು. ತಾಯಿಯ ಪ್ರಾರ್ಥನೆಯನ್ನು ಮನ್ನಿಸಿ ಕೃಷ್ಣನು ಬಲರಾಮಸಮೇತನಾಗಿ ಹೊರಟು ಆ ಮಕ್ಕಳು ಸುತಲ ಲೋಕದಲ್ಲಿರುವರೆಂದು ಪತ್ತೆಮಾಡಿದನು. ಕೃಷ್ಣಾಗಮನವನ್ನು ಕೇಳಿ ಸುತಲ ಲೋಕಾಧಿಪತಿಯಾದ ಬಲಿಚಕ್ರವರ್ತಿಯು ರಾಮಕೃಷ್ಣರನ್ನು ಇದಿರುಗೊಂಡು ಅರ್ಘ್ಯ ಪಾದ್ಯಗಳನ್ನು ಕೊಟ್ಟು ಸತ್ಕರಿಸಿ ಆತನ ಅಪ್ಪಣೆಯಂತೆ ದೇವಕಿಯ ಆರು ಮಕ್ಕಳನ್ನೂ ತಂದು ಕೊಟ್ಟನು. ಬಲಿಚಕರ್ವತಿಯನ್ನು ಬೀಳ್ಕೊಂಡು ಕೃಷ್ಣ ಬಲರಾಮರು ದೇವಕಿಯ ಬಳಿಗೆ ಬಂದು ಆ ಮಕ್ಕಳನ್ನು ಒಪ್ಪಿಸಿದರು. ದೇವಕಿಯು ಮನ್ಮಥನಂತೆ ರೂಪವಂತರಾದ ಆ ಮಕ್ಕಳನ್ನು ನೋಡಿ ಆನಂದಾಶ್ರುಗಳನ್ನು ಸುರಿಸುತ್ತ ಆ ಅರ್ಭಕರನ್ನು ಅಪ್ಪಿಕೊಂಡು ಮುದ್ದಾಡಿದಳು; ಆ ಮಕ್ಕಳಿಗೆ ಹಾಲೂಡಿದಳು. ಆ ಕುಮಾರಕರು ಕೃಷ್ಣಾನುಗ್ರಹದಿಂದ ಸುಂದರ ಮೂರ್ತಿಗಳಾಗಿ ಬೆಳೆದು ದೇವಕೀ ವಸುದೇವ ಕೃಷ್ಣಾದಿಗಳಿಗೆ ಎರಗಿ ಸ್ತೋತ್ರಮಾಡಿದರು. ಆಮೇಲೆ ಹರಿಬಲರ ಪಾದಧೂಳಿಯನು ತಲೆಯಲ್ಲಿ ಧರಿಸಿ ದಿವ್ಯವಿಮಾನವನ್ನೇರಿ ವಿಷ್ಣುಲೋಕವನ್ನುಕುರಿತು ಹೊರಟರು. ದೇವಕೀದೇವಿಯು ನೋಡುತ್ತಿದ್ದ ಹಾಗೆಯೇ ಅವರು ಅಂತರಿಕ್ಷದಲ್ಲಿ ಕಣ್ಮರೆಯಾದರು. ಕೃಷ್ಣನು ದೇವಕೀದೇವಿಗೆ ಆ ಮಕ್ಕಳ ನಿಜಸ್ವರೂಪವನ್ನು ವಿವರಿಸಿ ಆಕೆಯ ಅಜ್ಞಾನವನ್ನು ಪರಿಹರಿಸಿದನು. ದೇವಕೀ ವಸುದೇವರು ಕೃಷ್ಣನು ಸಾಕ್ಷಾತ್ ವಿಷ್ಣುವೇ ಎಂದು ಮನಗಂಡು ಆತನನ್ನು ಭಕ್ತಿಪೂರ್ವಕವಾಗಿ ಸ್ತೋತ್ರಮಾಡಿದರು.

ಶ್ರೀ ಕೃಷ್ಣನು ದೈತ್ಯ ಸಂಹಾರ ಮಾಡಿ ಭೂಭಾರವನ್ನಿಳಿಸಿ ಶಿಷ್ಟರಕ್ಷಣೆ ಮಾಡುತ್ತ ದ್ವಾರಕಿಯಲ್ಲಿ ನೆಲಸಿರಲು ಅನೇಕ ದೇವರ್ಷಿಗಳು, ರಾಜರ್ಷಿಗಳು, ಭಕ್ತಭಾಗವತೋತ್ತಮರು ಅವನ ದರ್ಶನಾರ್ಥವಾಗಿ ಅಲ್ಲಿಗೆ ಬಂದು ಹೋಗುತ್ತಿದ್ದರು. ದ್ವಾರಕಾಪಟ್ಟಣ ಭೂಲೋಕವೈಕುಂಠವಾಯಿತು. ನಾರದಾದಿ ಮಹರ್ಷಿಗಳಿಗೆ ಅದು ಆಶ್ರಯವಾಯಿತು. ಯಾದವರು ಯಾವುದೋ ಭಾಗ್ಯಾತಿಶಯದಿಂದ ಭೂಲೋಕದಲ್ಲಿಯೇ ಕೃಷ್ಣಸಾನ್ನಿಧ್ಯವನ್ನು ಪಡೆದು ಕೃತಕೃತ್ಯರಾದರು.

## ಶ್ರೀ ಕೃಷ್ಣನ ಕಾಲ

ಬೆಸನಗರದಲ್ಲಿ ದೊರೆತ ಕ್ರಿಸ್ತಪೂರ್ವ ಎರಡನೆಯ ಶತಮಾನದ ಒಂದು ಶಾಸನದಲ್ಲಿ ಭಾಗವತ ಹೆಲಿಯೋ ಡೋರಸ್ ಎಂಬಾತನು ದೇವದೇವನಾದ ವಾಸುದೇವನ ಪೂಜಾಮಂದಿರದ ಎದುರಿಗೆ ಒಂದು ಗರುಡ ಗಂಬವನ್ನು ಮಾಡಿಸಿದನೆಂದು ಹೇಳಿದೆ. ಈ ಹೆಲಿಯೋ ಡೋರಸ್ ಗ್ರೀಕ್ ನಾಗರಿಕ. ಅವನು ತಾನು ಭಾಗವತನೆಂದು ಹೇಳಿಕೊಂಡಿರುವುದರಿಂದ ಅವನ ಕಾಲಕ್ಕೇ ಭಾಗವತ ಧರ್ಮ ಪ್ರಚಾರವಾಗಿದ್ದಿತೆಂದು ಸ್ಪಷ್ಟವಾಗುತ್ತದೆ. ಅಲ್ಲದೆ ಅನ್ಯ ದೇಶದವರೂ ಆ ಧರ್ಮವನ್ನು ಮೆಚ್ಚಿಕೊಂಡಿದ್ದರೆಂದೂ ತಿಳಿಯುತ್ತದೆ. ಭಾಗವತರೆಂಬ ಹೆಸರಿನ ಭಕ್ತರು ಕ್ರಿಸ್ತಶಕಕ್ಕೆ ಇನ್ನೂರು ವರ್ಷಗಳ ಹಿಂದೆಯೇ ಭರತಖಂಡದಲ್ಲಿದ್ದರೆಂದ ಮೇಲೆ ಆ ಧರ್ಮಕ್ಕೆ ಮುಖ್ಯ ದೇವರಾದ ಶ್ರೀಕೃಷ್ಣ ವಾಸುದೇವನ ಪೂಜೆ ಆ ವೇಳೆಗಾಗಲೆ ಜನಪ್ರಿಯವಾಗಿದ್ದು ಪ್ರಚಾರದಲ್ಲಿದ್ದಿರಬೇಕು. ರಾಜಪುತ್ರ ಸ್ಥಾನದ ಘೋಸುಂಡಿಯೆಂಬ ಸ್ಥಳದಲ್ಲಿ ಸಂಕರ್ಷಣ ವಾಸುದೇವರ ಪೂಜಾಮಂದಿರದ ಸುತ್ತ ಒಂದು ಪ್ರಾಕಾರವನ್ನು ನಿರ್ಮಿಸಿದ ಸಂಗತಿ ಆ ಊರಿನಲ್ಲಿ ದೊರೆತ ಕ್ರಿ. ಪೂರ್ವ ೨೦೦ಕ್ಕೆ ಹಿಂದಿನ ಶಾಸನವೊಂದರಲ್ಲಿ ಹೇಳಿದೆ. ನಾನಾ

ಘಾಟ್ ಶಾಸನವೊಂದರಲ್ಲಿ ಸಂಕರ್ಷಣ ವಾಸುದೇವರುಗಳನ್ನು ಇತರ ದೇವರುಗಳ ಹೆಸರುಗಳ ಜತೆಯಲ್ಲಿ ದ್ವಂದ್ವ ಸಮಾಸವಾಗಿ ಹೇಳಿರುವುದರಿಂದ ಶ್ರೀ ಕೃಷ್ಣನು ಪರದೈವವೆಂದು ಆವೇಳೆಗಾಗಲೇ ಸಿದ್ಧಾಂತವಾಗಿದ್ದಿತೆಂದು ತಿಳಿಯಬೇಕು. ಆದ್ದರಿಂದ ಕೃಷ್ಣಕಥೆ ಕ್ರಿಸ್ತನ ಕಥೆಯ ಅನುಕರಣವೆಂಬ ಹೇಳಿಕೆ ಬುಡವಿಲ್ಲದ್ದು.

ಶ್ರೀ ಕೃಷ್ಣ ವಾಸುದೇವನ ಪೂಜೆಯು ಬಹಳ ಪುರಾತನ ಕಾಲವಲ್ಲಿಯೇ, ಅಂದರೆ ಕ್ರಿಸ್ತ ಜನನಕ್ಕೆ ಹಲವು ಶತಮಾನಗಳಿಗೂ ಮೊದಲೇ ಭರತಖಂಡದಲ್ಲಿ ಹಬ್ಬಿದ್ದಿತೆಂದು ನಂಬಬಹುದು. ಮತ್ಸ್ಯಪುರಾಣ, ವಾಯುಪುರಾಣ, ವಿಷ್ಣು ಪುರಾಣ, ಭಾಗವತಗಳಲ್ಲೆಲ್ಲ ಈ ಮುಂದಿನ ಶ್ಲೋಕವಿದೆ.

ಯಾವತ್ ಪರೀಕ್ಷಿತೋ ಜನ್ಮ ಯಾವನ್ನಂದಾಭಿಷೇಚನಂ
ಏವಂ ವರ್ಷಸಹಸ್ರಂ ತು ಜ್ಞೇಯಂ ಪಂಚದಶೋತ್ತರಂ.

ಪರೀಕ್ಷಿತನ ಜನ್ಮಕಾಲದಿಂದ ನಂದನ ರಾಜ್ಯಾಭಿಷೇಕದವರೆಗೆ ೧೦೧೫ ವರ್ಷಗಳು ಕಳೆದವು. ನಂದನು ಕ್ರಿಸ್ತ ಪೂರ್ವ ೩೪೩ರಲ್ಲಿ ರಾಜ್ಯಕ್ಕೆ ಬಂದನೆಂದು ತಿಳಿದುಬಂದಿದೆ. ಆದ್ದರಿಂದ ಪರೀಕ್ಷಿತನು ಬಹಳಮಟ್ಟಿಗೆ ಕ್ರಿಸ್ತಪೂರ್ವ ೧೪೫೮ರಲ್ಲಿ ಜನಿಸಿರಬಹುದು. ಅದಕ್ಕೆ ಕೆಲವು ವರ್ಷಗಳ ಮುಂಚೆಯೇ ಮಹಾಭಾರತ ಯುದ್ಧ ನಡೆಯಿತು. ಶ್ರೀ ಕೃಷ್ಣನು ಭಾರತ ಯುದ್ಧದಲ್ಲಿ ಅರ್ಜುನನ ಸಾರಥಿಯಾಗಿದ್ದನಾದ್ದರಿಂದ ಕ್ರಿಸ್ತ ಪೂರ್ವ ಹದಿನೈದನೆಯ ಶತಮಾನ ಅವನ ಜೀವಿತಕಾಲವೆಂದು ಊಹಿಸಬಹುದು. ಇಂದಿಗೆ ಮೂರು ಸಾವಿರ ವರ್ಷಗಳ ಹಿಂದೆ ಶ್ರೀ ಕೃಷ್ಣನ ಅವತಾರವಾಯಿತು.

## ಶ್ರೀ ಕೃಷ್ಣ ಕಥಾವಿಲಾಸ

ಸುಮಾರು ಮೂರು ಸಾವಿರ ವರ್ಷಗಳ ಹಿಂದೆ ಜೀವಿಸಿದ್ದ ಮಹಾಪುರುಷನೊಬ್ಬನ ಕಥೆಯನ್ನು ಅನೇಕ ಕವಿಗಳು ಬೇರೆ ಬೇರೆ ಕಾಲಗಳಲ್ಲಿ ರಚಿಸಿದ್ದಾರೆ. ಒಂದು ಪುರಾಣ ಕಥೆಗಿಂತ ಇನ್ನೊಂದು ಭಿನ್ನವಾಗಿದೆ. ಎಲ್ಲ ಪುರಾಣಗಳಿಗಿಂತಲೂ ಮಹಾಭಾರತ ಪ್ರಾಚೀನವಾದದ್ದು. ಅದರಲ್ಲಿ ಕೃಷ್ಣಕಥೆ ಇದೆ. ಆದರೆ ಅದು ಪ್ರಬುದ್ಧನಾದ ಶ್ರೀ ಕೃಷ್ಣನು ಪಾಂಡವರ ಪಕ್ಷಪಾತಿಯಾಗಿ ಮಾಡಿದ ಸಾಹಸಗಳ ವೃತ್ತಾಂತವೇ ಹೊರತು ಅವನ ಬಾಲ್ಯದ ಕಥೆ ಅದರಲ್ಲಿಲ್ಲ. ಅವನ ಸಮಕಾಲೀನರು ಬೇರೆ ಬೇರೆ ಸಂದರ್ಭಗಳಲ್ಲಿ ಆಡುವ ಮಾತುಗಳಲ್ಲಿ ಕೃಷ್ಣನ ಬಾಲ್ಯ ಯೌವನಗಳ ಕಥೆಯನ್ನು ಕುರಿತ ಕೆಲವು ಸೂಚನೆಗಳಿವೆ. ಆದರೆ ಕ್ರಮವಾಗಿ ಆದ್ಯಂತವಾದ ಕೃಷ್ಣಕಥೆ ಭಾರತದಲ್ಲಿ ಸಿಕ್ಕುವುದಿಲ್ಲ. ಪುರಾಣಗಳಲ್ಲಿ ಶ್ರೀ ಕೃಷ್ಣನ ಜನನ ಬಾಲ್ಯಗಳ ಕಥೆ ದೊರಕುವುದೇ ಹೊರತು ಅವನ ಮುಂದಿನ ಚರಿತ್ರೆಯಿಲ್ಲ. ಭಾಗವತ ಪುರಾಣದಲ್ಲಿ ಮಾತ್ರ ಶ್ರೀ ಕೃಷ್ಣನ ಜನನದಿಂದ ಹಿಡಿದು ಅವಸಾನದ ವರೆಗಿನ ಸಮಗ್ರ ಕಥೆಯನ್ನು ಹೇಳಿವೆ.

ಈ ಎಲ್ಲ ಕಥೆಗಳಲ್ಲಿ ಸತ್ಯ ಯಾವುದು, ಕಲ್ಪನೆ ಯಾವುದು, ಎಂದು ವಿಚಾರಮಾಡಿ ನಿರ್ಣಯಿಸುವುದು ಸುಲಭವಲ್ಲ. ಅದು ಬಹಳ ಸಾಹಸದ ಕೆಲಸವೇ ಸರಿ. ಶ್ರೀ ಕೃಷ್ಣನಂಥ ಧರ್ಮಸಂಸ್ಥಾಪಕನ ಕಥೆಯನ್ನು ಹೇಳುವಾಗ, ಭಕ್ತರು ಆತನ ಮಹಿಮಾತಿಶಯಾವನ್ನು ಹಾಡಿ ಹೊಗಳುವಾಗ, ಅವನು ನಡೆಸಿದ ದುಷ್ಟಶಿಕ್ಷಣ ಶಿಷ್ಟರಕ್ಷಣ ಕಾರ್ಯಗಳನ್ನು ಹೇಳುವಾಗ ಯಾವಾಗಲೂ ಶುದ್ಧ ಸತ್ಯವನ್ನೇ ಹೇಳುವರೆಂಬ ಭರವಸೆ ಸಾಧ್ಯವಿಲ್ಲ. ಅಂಥ ಸಂದರ್ಭಗಳಲ್ಲಿ ಇತಿಹಾಸ, ಪುರಾಣ, ಕವಿಕಲ್ಪನೆ ಎಲ್ಲವೂ ಹಾಲಲ್ಲಿ ಹಾಲು ಬೆರೆತಂತೆ ಬೆರೆತುಹೋಗಿ ಪುನಃ ವಿಂಗಡಿಸುವುದು ಸ್ಸಾಧ್ಯವಲ್ಲವೆನಿಸುತ್ತದೆ.

ಈ ಪುಣ್ಯಚರಿತ್ರೆಯಲ್ಲಿ ಯಾವ ಯಾವ ಕಥೆಗಳು ಯಾವ ಯಾವ ಕಾಲದಲ್ಲಿ ಲೀನವಾದುವೋ ತಿಳಿಯುವುದು ಕಷ್ಟ. ಕೃಷ್ಣಕಥೆ, ವ್ಯಾಸರು ಪುರಾಣಗಳಲ್ಲಿ ಭಾರತದಲ್ಲಿ ಸೇರಿಸುವ ಮೊದಲು, ಎಷ್ಟು ಕಾಲದಿಂದ ಜನತೆಯಲ್ಲಿ ಪ್ರಚಾರದಲ್ಲಿದ್ದಿತೋ ತಿಳಿಯದು. ಭಾವುಕರಾದ ಭಕ್ತರು ತಮ್ಮ ಆರಾಧ್ಯದೈವದ ಮಹಿಮೆಯನ್ನು ವರ್ಣಿಸುವಾಗ ತಮ್ಮ ಕಲ್ಪನಾಶಕ್ತಿಗೆ, ಪ್ರತಿಭೆಗೆ ಕಡಿವಾಣ ಹಾಕಲಾರರು. ಸಣ್ಣದಾಗಿ ಪ್ರಾರಂಭವಾದ ಇತಿಹಾಸ ಉದಾರಿಗಳಾದ ಪುರಾಣ ಕವಿಪಾಠಕರ ಉತ್ಸಾಹ ಪರಿಶ್ರಮಗಳಿಂದ ಕ್ರಮ ಕ್ರಮವಾಗಿ ವಿಕಾಸಹೊಂದಿ ಬೆಳೆದು ಅದ್ಭುತವೂ ರಮ್ಯವೂ ಪುಣ್ಯಪ್ರದವೂ ಆದ ದಿವ್ಯಕಥೆಯಾಗುತ್ತದೆ. ಶ್ರೀ ಕೃಷ್ಣನ ಕಥೆಯೂ ಹಾಗೆಯೇ ಬೆಳೆದಿದೆ.

ಶ್ರೀ ಕೃಷ್ಣಕಥೆಯಲ್ಲಿ ಭಗವದ್ಗೀತೆಯೆಂಬ ಉಪನಿಷತ್‌ಸಾರವನ್ನು ಉಪದೇಶಿಸಿದ ಮತಾಚಾರ್ಯನ

ಕಥೆಯಿದೆ. ರಾಜತಂತ್ರವಿಶಾರದನಾಗಿ ರಾಜನಿರ್ಮಾಪಕನಾಗಿ ಮೆರೆದ ಕ್ಷತ್ರಿಯೋತ್ತಮನ ಕಥೆಯೂ ಸೇರಿದೆ. ಗೊಲ್ಲನಾಗಿ ಗೋಪಾಲಕನಾಗಿದ್ದು ಗೋಪೀಜನಪ್ರಿಯನಾಗಿ ಬಾಳಿದ ಗೋಪಾಲಕೃಷ್ಣನ ಕಥೆಯಿದೆ. ಈ ಎಲ್ಲ ಕಥೆಗಳೂ ಪೂರ್ಣವಾಗಿ ಸೇರಿಹೋಗಿ ಒಬ್ಬನೇ ಕೃಷ್ಣನು ಗೋಪಾಲಕ, ದುಷ್ಟಮರ್ದನ, ರಾಜನಿರ್ಮಾಪಕ, ಕ್ರಾಂತಿಕಾರಕ, ಧರ್ಮೋಪದೇಶಕ, ಧರ್ಮಸಂಸ್ಥಾಪಕನಾಗಿದ್ದನೆಂದು ಇಂದು ಭಾಗವತ ಸಾರಿ ಹೇಳುತ್ತಿದೆ. ಮಹಾವಿಷ್ಣುವೇ ಭೂಭಾರಹರಣಾರ್ಥವಾಗಿ ಮಾನವನಾಗಿ ಅವತರಿಸಿ ಕಂಸಾದಿ ದೈತ್ಯರ ಸಂಹಾರಮಾಡಿದನೆಂದು ಪುರಾಣಗಳೆಲ್ಲ ಏಕಕಂಠದಿಂದ ಹೇಳತ್ತವೆ. ಈ ಪುರಾಣಕಥೆಯ ಹಲವು ಪ್ರಸಂಗಗಳ ಮೂಲವನ್ನು ಕಂಡುಹಿಡಿಯುವ ಸಾಹಸ ನಡೆದಿದೆ. ಅನೇಕ ವಿದ್ವಾಂಸರು ತಮ್ಮ ಸಂಶೋಧನೆಯಿಂದ ಶ್ರೀ ಕೃಷ್ಣಕಥೆಯ ಮೂಲರೂಪವನ್ನು ಕಾಣಲು ಹವಣಿಸಿದ್ದಾರೆ. ಆದರೆ ನದೀಮೂಲ ಋಷಿಮೂಲಗಳಂತೆ ದೇವಮೂಲವೂ ನಮ್ಮ ಶೋಧನೆಗೆ ಸಿಕ್ಕುವುದು ಕಷ್ಟ. ಇದು ಹೀಗೆಯೇ ಸರಿಯೆಂದು ಖಚಿತವಾಗಿ ನಿರ್ಣಯಿಸುವುದು ದುಸ್ಸಾಧ್ಯ. ಆದರೆ ಗುರಿ ಮುಟ್ಟುವುದಕ್ಕಿಂತ ಪ್ರಯಾಣದಲ್ಲಿಯೇ ಹೆಚ್ಚು ಆನಂದ ಕಾಣುವ ಜನಕ್ಕೆ ಈ ಶೋಧನೆಯೇ ಬಹಳ ಸ್ವಾರಸ್ಯವಾಗಿದೆ.

ಕೃಷ್ಣ, ವಾಸುದೇವ, ದೇವಕೀಪುತ್ರ, ನಾರಾಯಣ, ಉಪೇಂದ್ರ, ದಾಮೋದರ ಮೊದಲಾದ ಬೇರೆ ಬೇರೆ ಹೆಸರುಗಳಿಂದ ಶ್ರೀ ಕೃಷ್ಣನನ್ನು ಹೊಗಳುವುದು ರೂಢಿಯಾಗಿದೆ. ಈ ಎಲ್ಲ ಹೆಸರುಗಳೂ ಒಬ್ಬ ವ್ಯಕ್ತಿಗೇ ಅನ್ವಯಿಸುವುವೆಂದೂ ಅವನೇ ಯಾದವರ ವಸುದೇವನ ಮಗ ಕೃಷ್ಣನೆಂದೂ ನಂಬಿದ್ದೇವೆ. ಆದರೆ ಪುರಾಣಗಳ ರಚನೆಯಾಗುವ ಮುನ್ನ ಈ ಕೆಲವು ಹೆಸರುಗಳಿಗೆ ಬೇರೆ ಅರ್ಥ ಬಳಕೆಯಲ್ಲಿದ್ದಿತು. ಕೃಷ್ಣನೆಂಬ ಹೆಸರು ವೇದೋಪನಿಷತ್ತುಗಳಲ್ಲಿಯೂ ಇದೆಯಾದರೂ ಅದು ಒಬ್ಬ ಅಸುರನ ಹೆಸರು. ಇನ್ನು ಕೆಲವು ಸಂದರ್ಭಗಳಲ್ಲಿ ಅದು ಒಬ್ಬ ಮಂತ್ರದ್ರಷ್ಟನಾದ ಋಷಿಯ ಹೆಸರು. ವಿಷ್ಣು, ವಾಸುದೇವ ಎಂಬ ಹೆಸರುಗಳಿಗೆ ವೇದಕಾಲದಲ್ಲಿದ್ದ ಅರ್ಥವೇ ಬೇರೆ. ಆದ್ದರಿಂದ ಕಂಸಾಂತಕನಾದ ಶ್ರೀ ಕೃಷ್ಣನ ಕಥೆ ಪ್ರಸಿದ್ಧವಾದ ಮೇಲೆ ಕಾಲಕ್ರಮದಲ್ಲಿ ಮೇಲಿನ ಹೆಸರುಗಳನ್ನೆಲ್ಲ ಕೃಷ್ಣನಿಗೂ ಅನ್ವಯಿಸುತ್ತ ಬಂದಿರಬೇಕೆಂದು ಕೆಲವರು ವಾದ.

'ವಾಸನಾದ್ವಾಸುದೇವಸ್ಯ ವಾಸಿತಂ ತೇ ಜಗತ್ರಯಂ
ಸರ್ವಭೂತನಿವಾಸೋಽಸಿ ವಾಸುದೇವ ನಮೋಸ್ತು ತೇ'

ಎಂಬಲ್ಲಿ ವಾಸುದೇವನು ಸರ್ವ ಭೂತಗಳಲ್ಲಿಯೂ ಅಂತರ್ಯಾಮಿಯಾಗಿರುವ ಭಗವಂತನೇ ಹೊರತು ವಸುದೇವನ ಮಗನೆಂಬ ಅರ್ಥವಿಲ್ಲ. 'ವಸನಾತ್ ಸರ್ವಭೂತಾನಾಂ ವಾಸುದೇವಸ್ತತೋ ವೇದ್ಯ :' 'ಸರ್ವಭೂತಾಧಿವಾಸಶ್ಚ ವಾಸುದೇವಸ್ತತೋ ಹ್ಯಯಂ' ಎಂದು ಮಹಾಭಾರತದಲ್ಲಿಯೇ ಹೇಳಿದೆ. ಮೊದಲಿಗೆ ವಾಸುದೇವನೆಂಬ ಹೆಸರು ಪರದೈವಕ್ಕೇ ಅನ್ವಯಿಸುತ್ತಿದಿತೆಂದು ತಿಳಿಯಬಹುದು. ಅಲ್ಲದೆ 'ವಾಸು' ಶಬ್ದಕ್ಕೆ ವಿಷ್ಣುವೆಂಬ ಅರ್ಥವಿರುವಂತೆ ತಿಳಿದಿದೆ (1) ಸಗರನ ಮಕ್ಕಳು ಯಾಗಾಶ್ವವನ್ನು ಹುಡುಕಿಕೊಂಡು ಹೊರಟು ಭೂಮಿಯನ್ನು ಅಗೆದು ಒಳಹೊಕ್ಕಾಗ ಅವರಿಗೆ ವಾಸದೇವನೇ ಕಪಿಲನ ರೂಪದಲ್ಲಿ ಕಾಣಿಸಿಕೊಂಡನೆಂದು ಶ್ರೀಮದ್ರಾಮಾಯಣದಲ್ಲಿ ಹೇಳಿದೆ. (2) 'ದದೃಶುಃ ಕಪಿಲಂ ತತ್ರ ವಾಸುದೇವಂ ಸನಾತನಂ' ಆದ್ದರಿಂದ ಯಾದವರ ವಸುದೇವನ ಮಗ ವಾಸುದೇವನೆಂಬ ಅರ್ಥವಿವರಣೆ ಪುರಾಣ ಕಥೆಯ ಕಾಲಕ್ಕೆ ಬಳಕೆಗೆ ಬಂದಿರಬೇಕು.

'ವಸುದೇವೋಸ್ಯ,ಜನಕಃ ಸ ಏವಾನಕದುಂದುಭಿಃ' ಎಂದು ಅಮರಕೋಶದ ಹೇಳಿಕೆ. ಅದರಂತೆ ಕೃಷ್ಣನ ತಂದೆ ವಸುದೇವನಿಗೆ ಆನಕದುಂದುಭಿ ಎಂಬ ಹೆಸರು ಇದ್ದಿತೆಂಬುದು ಸುಸ್ಪಷ್ಟ. ಹರಿವಂಶದಲ್ಲಿ 'ಆನಕದುಂದುಭಿ' ಎಂಬ ಹೆಸರು ಬಂದಿದೆ. ವಾಸುದೇವನೆಂಬ ಹೆಸರು ಕೃಷ್ಣನಿಗೆ ಅನ್ವಯಿಸತೊಡಗಿದಾಗ ಅವನ ತಂದೆಗೆ ವಸುದೇವನೆಂಬ ಹೆಸರು ಕಟ್ಟಿರಬೇಕೆಂದು ಕೆಲವರ ತರ್ಕ. ಅಲ್ಲದೆ ಕೃಷ್ಣನಿಗೆ ವಾಸುಭದ್ರನೆಂಬ ಹೆಸರೂ ಇದೆ. ಭಾಸನು ಬಲಭದ್ರ ವಾಸುಭದ್ರರೆಂಬ ಹೆಸರುಗಳನ್ನು ಬಳಸಿದ್ದಾನೆ. ಮಣಿಭದ್ರ ಮಾಣಿಭದ್ರ ಎಂಬ ಹೆಸರುಗಳೆರಡೂ ಯಕ್ಷರ ಒಡೆಯನಿಗೆ ಅನ್ವಯಿಸುತ್ತವೆ. ನರಸಿಂಹ, ನಾರಸಿಂಹ ಎಂಬ ಎರಡು ರೂಪಗಳೂ ಬಳಕೆಯಲ್ಲಿದ್ದು ಒಬ್ಬ ವ್ಯಕ್ತಿಗೆ ಅನ್ವಯಿಸುತ್ತವೆ. ನರಸಿಂಹನ ಮಗ ನಾರಸಿಂಹನೆಂದು ಯಾರೂ ಭಾವಿಸುವುದಿಲ್ಲ.ಹಾಗೆಯೇ ವಸುದೇವ ವಾಸುದೇವ ಎಂಬ ಎರಡು ಹೆಸರುಗಳೂ ಒಬ್ಬ ದೇವರಿಗೇ ಅನ್ವಯವಾಗುತ್ತಿದ್ದುವೋ ಏನೋ !

---

1) Apte : Sanskrit Englsh Dictionery

2) ಬಲಕಾಂಡ 40-25

'ನಾರಾಯಣ' ಶಬ್ದಕ್ಕೂ ಅಂತರ್ಯಾಮಿಯೆಂಬ ಅರ್ಥವಿದೆ. ನಾರದ ಪಂಚರಾತ್ರದಲ್ಲಿ ವಿಷ್ಣುವಿಗೆ 'ನಾರಶಾಯಿ' ಎಂಬ ಹೆಸರೂ ಇದೆ. ನಾರದಲ್ಲಿ ಮಲಗುವವನು ನಾರಶಾಯಿ, ನಾರದಲ್ಲಿ ಸಂಚರಿಸುವವನು 'ನಾರಾಯಣ.' 'ನಾರ' ಎಂದರೆ ಜಲ. ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ತಾ ಯದಸ್ಯಾಯನಂ ಪೂರ್ವಂ ತೇನ ನಾರಾಯಣಃ ಸ್ಮೃತಃ । ಅಂಥಾ ನಾರದಲ್ಲಿ ವಾಸಿಸುವನು ನಾರಾಯಣ. 'ನರಸಮೂಹೋ ನಾರಂ ತಸ್ಯಾಯನಮಿತಿ ವಾ ತದಯನಮಸ್ಯೇತಿ ವಾ' ಎಂದರೆ ನರಸಮೂಹವನ್ನು ತನ್ನೊಳಗೆ ಇರಿಸಿಕೊಂಡಿರುವವನು ಅಥವಾ ನರಸಮೂಹದೊಳಗೆ ವ್ಯಾಪಿಸಿರುವವನು ಎಂದೂ ಅರ್ಥ ಬಳಕೆಯಲ್ಲಿದೆ. ಆದ್ದರಿಂದ ನಾರಾಯಣನೆಂದರೆ ಸರ್ವಾಂತರ್ಯಾಮಿಯಾದ ಭಗವಂತನೆಂಬ ಅರ್ಥವಿತ್ತು. ವಿಷ್ಣುಶಬ್ದಕ್ಕೂ ಹೀಗೆಯೇ ಅರ್ಥವಿದೆ. ವಿಶ್ವವನ್ನು ವ್ಯಾಪಿಸಿರುವವನು ವಿಷ್ಣು. ಹೀಗೆ ನಾರಾಯಣ, ವಿಷ್ಣು, ವಾಸುದೇವ ಎಂಬ ಈ ಮೂರು ಹೆಸರುಗಳಿಗೂ ಒಂದೇ ಅರ್ಥವಿದ್ದುದರಿಂದ ಅವುಗಳನ್ನು ಒಬ್ಬ ವ್ಯಕ್ತಿಗೇ ಅನ್ವಯಿಸುವುದು ಶಕ್ಯವಾಯಿತು.

ನಾರಾಯಣಾಯ ವಿದ್ಮಹೇ
ವಾಸುದೇವಾಯ ಧೀಮಹಿ
ತನ್ನೋ ವಿಷ್ಣುಃ ಪ್ರಚೋದಯಾತ್

ಎಂಬ ತೈತ್ತಿರೀಯಾರಣ್ಯಕದ ವಾಕ್ಯದಿಂದ ಈ ಮೂರು ಶಬ್ದಗಳ ಅರ್ಥವೂ ಒಂದೇ ಎಂದು ಅರ್ಥವಾಗುತ್ತದೆ. ವೇದಗಳ ಕಾಲಕ್ಕೆ ಈ ಶಬ್ದಗಳು ಪರಬ್ರಹ್ಮನಿಗೆ ಅನ್ವಯಿಸುತ್ತಿದ್ದು ಪುರಾಣಗಳ ಕಾಲದಲ್ಲಿ ಇವು ತ್ರಿಮೂರ್ತಿಗಳಲ್ಲಿ ಒಬ್ಬನಾದ ವೈಕುಂಠಪತಿ ನಾರಾಯಣನ ಹೆಸರುಗಳಾದವು.

ಛಾಂದೋಗ್ಯೋಪನಿಷತ್ತಿನಲ್ಲಿ ಶ್ರೀ ಕೃಷ್ಣನು ಘೋರ ಆಂಗಿರಸನೆಂಬ ಗುರುವಿನ ಸನ್ನಿಧಿಯಲ್ಲಿ ಒಂದು ರಹಸ್ಯ ವಿದ್ಯೆಯನ್ನು ಕಲಿತನೆಂದು ಹೇಳಿದೆ. ಋಗ್ವೇದದಲ್ಲಿ ಮಂತ್ರದ್ರಷ್ಟಾರನಾದ ಒಬ್ಬ ಕೃಷ್ಣನ ಪ್ರಸ್ತಾಪವಿದೆ. ಈ ಎರಡು ಕಡೆಗಳಲ್ಲಿಯೂ ಕೃಷ್ಣನೆಂಬವನು ಮಾನವನೇ ಹೊರತು ದೇವರಲ್ಲ. ಇನ್ನು ದೇವಾಧಿದೇವನೆನಿಸುವುದೆಲ್ಲಿ ಬಂತು ? ಆದರೆ ವೇದಯುಗದ ಕೊನೆಯ ಭಾಗದಲ್ಲಿ ರಚಿತವಾದುದೆಂದು ಹೇಳಲಾದ ನಾರಾಯಣಾಥರ್ವಶಿರಸೋಪನಿಷತ್ತಿನಲ್ಲಿಯೂ ಆತ್ಮಬೋಧೋಪನಿಷತ್ತಿನಲ್ಲಿಯೂ ಕೃಷ್ಣನು ಮಧುಸೂದನನಂತೆಯೇ ಬ್ರಹ್ಮಣ್ಯನೆಂದು ಹೇಳಿದೆ. ಇಲ್ಲಿ 'ಬ್ರಹ್ಮಣ್ಯ' ಶಬ್ದಕ್ಕೆ ಅರ್ಥವೇನೇ ಇದ್ದರೂ ಕುಷ್ಣನು ಮಧುಸೂದನನಿಗೆ ಸಮಾನನೆಂಬ ಅರ್ಥ ಬರುತ್ತದೆ. ಇದರಿಂದ ವೇದಯುಗದ ಕೊನೆ ಕೊನೆಯಲ್ಲಿ ಕೃಷ್ಣನಿಗೆ ದೇವತ್ವದ ಗಣನೆಯುಂಟಾಗಿದ್ದಿತೆಂದು ಊಹಿಸಲಾಗಿದೆ.

ವೇದೋಪನಿಷತ್ತುಗಳ ಮಂತ್ರ ದ್ರಷ್ಟಾರನಾದ ಶ್ರೀಕೃಷ್ಣ, ಇಂದ್ರನ ಸಹಾಯಕನಾದ ವಿಷ್ಣು (ಇಂದ್ರಸ್ಯ ಯುಜ್ಯಸ್ಸಖಾ) ನಾರಾಯಣ, ಈ ಮೂರು ಕಥೆಗಳೂ ಸೇರಿ ಒಂದಾಗಿರುವುದಲ್ಲದೆ ಇದರ ಜೊತೆಗೆ ಗೋಪಾಲಕನಾದ ಒಬ್ಬ ಕೃಷ್ಣನ ಕಥೆಯೂ ಹಾಸುಹೊಕ್ಕಾಗಿ ಬೆರೆತು ಹೋಗಿದೆ. ಗೋಪಾಲಕನಾದ ಕೃಷ್ಣನ ಪ್ರಸ್ತಾಪ ವೇದೋಪನಿಷತ್ತುಗಳಲ್ಲಿಲ್ಲ. 'ಗೋಪಾಲ'ಕೃಷ್ಣನ ಕಥೆಗೆ 'ಹರಿವಂಶ' ಮುಖ್ಯ ಆಧಾರ. ಅದಕ್ಕಿಂತ ಮೊದಲು ಕೃಷ್ಣನ ಕಥೆಗಳು ಗೋಪಾಲಕರಾದ ಆಭೀರರಲ್ಲಿ ಬಳಕೆಯಲ್ಲಿದ್ದಿರಬಹುದು. ಅವರು ಅಲೆಮಾರಿಗಳಾದ ಗೋಪಾಲಕರೆಂದೂ ಯಾವುದೋ ಕಾಲದಲ್ಲಿ ಆ ಪಂಗಡದವರು ಭರತಖಂಡದ ಪಶ್ಚಿಮೋತ್ತರಭಾಗಗಳಲ್ಲಿ ನೆಲಸಿದರೆಂದೂ ಅವರಲ್ಲಿ ವಿಶೇಷವಾಗಿ ಪ್ರಚಾರವಾಗಿದ್ದ ಗೋಪಾಲಕೃಷ್ಣ ದೇವರ ಕಥೆಗಳೇ ಆಮೇಲೆ 'ಹರಿವಂಶ'ದಲ್ಲಿ ಗ್ರಥಿತವಾದುವೆಂದೂ ತಜ್ಞರ ಅಭಿಪ್ರಾಯ. 'ಆಭೀರಪಲ್ಲಿ'ಎಂಬ ಹೆಸರು ಹರಿವಂಶದಲ್ಲಿ ಗೊಲ್ಲರ ನಿವಾಸಗಳಿಗೆ ಸಲ್ಲುತ್ತದೆ. ಆಭೀರರು ಜಾತಿಯಲ್ಲಿ ಕ್ಷತ್ರಿಯರು, ವೃತ್ತಿಯಲ್ಲಿ ಪಶುಪಾಲಕರು. ಅವರು ಪಾಂಚನದ ಅಥವಾ ಪಂಚಾಪಗಾ, ಪಂಜಾಬು ಪ್ರಾಂತ್ಯದಲ್ಲಿ ವಾಸಮಾಡುತ್ತಿದ್ದು ಕಾಲಕ್ರಮದಲ್ಲಿ ಭಾರತದ ಇತರ ಪ್ರಾಂತ್ಯಗಳಿಗೆ ವಲಸೆ ಹೊರಟಿರಬಹುದು. ಅವರು ಹೋದಕಡೆಗಳಲ್ಲೆಲ್ಲ ಗೋಪಾಲಕೃಷ್ಣನ ಕಥೆಗಳನ್ನು ಹಬ್ಬಿಸಿದ್ದಾರೆ. ಆ ಕಥೆಗಳೇ ಆಮೇಲೆ ಹರಿವಂಶ ಭಾಗವತಗಳಲ್ಲಿ ಸೇರಿ ವಾಸುದೇವ ಕೃಷ್ಣನ ಕಥೆಯಲ್ಲಿ ಹೊಂದಿಕೊಂಡಿವೆ.

ಭಾಗವತ ವಿಷ್ಣುಪುರಾಣವನ್ನು ಬಹಳಮಟ್ಟಿಗೆ ಹೋಲುತ್ತದೆ. ಅದರ ಪಂಚಮಾಂಶದಲ್ಲಿ ಬರುವ ಕೃಷ್ಣಕಥೆಯನ್ನೇ ಭಾಗವತಕಾರನು ದಶಮಸ್ಕಂಧದಲ್ಲಿ ವಿಸ್ತಾರವಾಗಿ ಹೇಳಿದ್ದಾನೆ. ಆದರೆ ವಿಷ್ಣುಪುರಾಣದಲ್ಲಿ ಇಲ್ಲದ ಕೆಲವು ಕಥೆಗಳನ್ನೂ ಭಾಗವತದಲ್ಲಿ ಕಾಣಬಹುದು. ತೃಣಾವರ್ತನೆಂಬ ರಕ್ಕಸನನ್ನು ಕೊಂದ ಕಥೆ, ಯಶೋ

ದೆಗೆ ಕೃಷ್ಣನ ಬಾಯಲ್ಲಿ ವಿಶ್ವರೂಪ ಸಂದರ್ಶನ, ಯಶೋದೆ ಬಾಲಕೃಷ್ಣನನ್ನು ಹಗ್ಗದಿಂದ ಕಟ್ಟಿಹಾಕಲಾರದೆ ಹೋದಾಗ ಭಗವಂತನೇ ದಯೆತೋರಿ ಬಂಧನಕ್ಕೆ ಒಳಗಾದದ್ದು, ಶಂಖಚೂಡನೆಂಬ ರಕ್ಕಸನಕಥೆ, ಇವು ವಿಷ್ಣು ಪುರಾಣದಲ್ಲಿಲ್ಲ. ಅವುಗಳ ಪೈಕಿ ಯಶೋದೆ ಕೃಷ್ಣನನ್ನು ಕಟ್ಟಿಹಾಕಿದ ಪ್ರಸಂಗ ಬೇರೆ ಯಾವ ಪುರಾಣದಲ್ಲಿಯೂ ಇಲ್ಲ. ಆದರೆ ದಕ್ಷಿಣ ದೇಶದ ದ್ರಾವಿಡಪ್ರಬಂಧಗಳಲ್ಲಿ ಈ ಕಥೆಯಿದೆಯೆಂದು ತಿಳಿಯುತ್ತದೆ. ಭಗವಂತನ ಚರಿತ್ರೆ ಬರೆಯುವಾಗ, ಅವನ ಮಹಿಮಾವರ್ಣನೆಗೆ ತೊಡಗಿದಾಗ ಭಾಗವತರು ಸಹಜವಾಗಿ ಮೈಮರೆಯುತ್ತಾರೆ, ಉತ್ಸಾಹದಿಂದ ಕತೆ ಕಟ್ಟುತ್ತಾರೆ. ಜನತೆಯಲ್ಲಿ ಪ್ರಚಾರದಲ್ಲಿದ್ದ ಕತೆಗಳನ್ನು ಗ್ರಂಥದಲ್ಲಿ ಸೇರಿಸುತ್ತಾರೆ. ಪುರಾಣ ಗಳು ಬೆಳೆಯುತ್ತವೆ.

ಭಾಗವತ ವಿಷ್ಣುಪುರಾಣಗಳಲ್ಲಿ ಮಾತ್ರವಲ್ಲದೆ ಲಿಂಗಪುರಾಣ, ಬ್ರಹ್ಮವೈವರ್ತಪುರಾಣ, ಬ್ರಹ್ಮ ಪುರಾಣ, ವಾಯುಪುರಾಣ, ಅಗ್ನಿಪುರಾಣ, ಪದ್ಮಪುರಾಣ, ಹರಿವಂಶ ಮುಂತಾದ ಬೇರೆ ಪುರಾಣಗಳಲ್ಲಿಯೂ ಕೃಷ್ಣ ಕಥೆಯಿದೆ. ಕೆಲವು ಬಹಳ ಸಂಗ್ರಹವಾಗಿ, ಇನ್ನು ಕೆಲವು ಸಹಸ್ರಾರು ಶ್ಲೋಕಗಳಷ್ಟು ವಿಸ್ತಾರವಾಗಿ ಇವೆ. ಇವೆಲ್ಲ ಕ್ಕಿಂತ ಪ್ರಾಚೀನವಾದ ಮಹಾಭಾರತದಲ್ಲಿ ಶ್ರೀಕೃಷ್ಣ ಕಥೆಯಿದೆ. ಅದರಲ್ಲಿ ಕೃಷ್ಣನು ಪಾಂಡವರ ಬಂಧು ವಾಗಿ, ಅವರ ಸಂಗಡಿಗನಾಗಿ, ಅವರ ಶತ್ರುನಾಶನ ಮಾಡುವುದಕ್ಕಾಗಿ ಹಲವು ತಂತ್ರಗಳನ್ನು ಹೂಡಿ ಕೃತಕೃತ್ಯನಾದ ಪ್ರಬುದ್ಧ ಕೃಷ್ಣನ ವೃತ್ತಾಂತವಿದೆಯೇ ಹೊರತು ಅವನ ಶೈಶವಬಾಲ್ಯಗಳ ಕಥೆಯಿಲ್ಲ. ಅಲ್ಲಲ್ಲಿ (ಸಿಂಹಾವಲೋಕನ ಕ್ರಮದಲ್ಲಿ) ಕೃಷ್ಣನ ಶಿಶುಲೀಲೆಯ ಸೂಚನೆಗಳು ಬಂದಿವೆಯಾದರೂ ಅವು ಗಳಿಂದ ಸಮಗ್ರವಾದ ಕೃಷ್ಣಕಥೆಯನ್ನು ಚಿತ್ರಿಸಿಕೊಳ್ಳುವುದು ಸಾಧ್ಯವಲ್ಲ. ಭಾರತಕರ್ತನಿಗೆ ಕುರುಪಾಂಡವರ ಯುದ್ಧದ ಕಥೆ ಪ್ರಧಾನವೇ ಹೊರತು ಕೃಷ್ಣಚರಿತ್ರೆಯಲ್ಲ. ಆ ಕಥೆಯಲ್ಲಿ ಕೃಷ್ಣ ವಹಿಸಿದ ಪಾತ್ರವನ್ನು ಮಾತ್ರ ಅವನು ವರ್ಣಿಸಿದ್ದಾರೆ.

ಭಾರತದಲ್ಲಿ ಶ್ರೀಕೃಷ್ಣನ ಜನನ ಬಾಲ್ಯಗಳ ವೃತ್ತಾಂತವಿಲ್ಲದ ಕೊರತೆಯನ್ನು ನಿವಾರಿಸುವ ಸಲು ವಾಗಿಯೇ ಬ್ರಹ್ಮಪುರಾಣ ವಿಷ್ಣುಪುರಾಣಗಳು ಹುಟ್ಟಿರಬೇಕು. ಆದರೆ ಅವುಗಳಲ್ಲಿ ಭಾರತಯುದ್ಧದಲ್ಲಿ ಕೃಷ್ಣನು ವಹಿಸಿದ ಪಾತ್ರದ ಕಥೆಯಿಲ್ಲ. ಇವೆರಡನ್ನೂ ಹೊಂದಿಸಿ ಸಮಗ್ರವಾದ ಕೃಷ್ಣಕಥೆಯನ್ನು ಹೇಳುವ ಪುರಾಣ ಭಾಗ ವತವೊಂದೇ ಎಂದು ತಿಳಿಯ ಬಂದಿದೆ.

## ರಾಧೆ

ಬ್ರಹ್ಮವೈವರ್ತ ಪುರಾಣದಲ್ಲಿ ಶ್ರೀಕೃಷ್ಣಕಥೆ ಸಾಕಷ್ಟು ವಿಸ್ತಾರವಾಗಿ ಬಂದಿದೆಯಾದರೂ ಅಲ್ಲಿ ರಾಧೆಯ ಚರಿತ್ರೆಯೇ ಪ್ರಧಾನ. ಅವಳೇ ಕೃಷ್ಣನ ಶಕ್ತಿ. ಶ್ರೀದಾಮನೆಂಬ ಕೃಷ್ಣನ ಸ್ನೇಹಿತನೊಬ್ಬನು ರಾಧೆಗೆ ಶಾಪಕೊಟ್ಟದ್ದರಿಂದ ಅವಳು ಭೂಲೋಕದಲ್ಲಿ ಗೊಲ್ಲತಿಯಾಗಿ ಹುಟ್ಟಬೇಕಾಯಿತು. ಆಗ ಅವಳಿಗೋಸ್ಕರ ಕೃಷ್ಣನೂ ಭೂಮಿಯಮೇಲೆ ಜನ್ಮವೆತ್ತಿದನು. ರಾಧಾಕೃಷ್ಣರ ವಾಸಸ್ಥಾನಕ್ಕೆ ಗೋಲೋಕವೆಂದೇ ಹೆಸರು! ಅದು ವಿಷ್ಣು ಲೋಕಕ್ಕಿಂತ ಮೇಲೆಯೇ ಇರುವಂಥಾದ್ದು! ಈ ಪುರಾಣದ ಪ್ರಕಾರ ಕೃಷ್ಣನೇ ವಿಷ್ಣುವನ್ನು ಸೃಷ್ಟಿಸಿದನು! ಅವನು ವಿಷ್ಣುವಿನ ಅವತಾರವಲ್ಲ. ಗಣೇಶನೂ ಕೃಷ್ಣನ ಅವತಾರವೆಂದು ಈ ಪುರಾಣದ 'ಗಣೇಶಕಾಂಡ' ವೆಂಬ ಭಾಗದಲ್ಲಿ ಹೇಳಿದೆಯಂತೆ. ಹೀಗೆ ರಾಧಾಕೃಷ್ಣರ ಮಹಿಮೆಯನ್ನು ಹೊಗಳಲು ಹೊರಟ ಈ ಪುರಾಣದಲ್ಲಿ ಕೃಷ್ಣನ ಚರಿತ್ರೆ ಸಮಗ್ರವಾಗಿ ಬಂದಿದೆಯಾದರೂ ಇದಕ್ಕೂ ಇತರ ಪುರಾಣಗಳಲ್ಲಿನ ಕಥೆಗೂ ಬಹಳ ವ್ಯತ್ಯಾಸವಿದೆ.

ರಾಧೆಯೇ ಮೊದಲು ಭೂಲೋಕದಲ್ಲಿ ಹುಟ್ಟಿದ್ದರಿಂದ ಅವಳು ಕೃಷ್ಣನಿಗಿಂತ ದೊಡ್ಡವಳು. ಬಾಲಕ ನಾದ ಕೃಷ್ಣನನ್ನು ಕರೆದುಕೊಂಡು ನಂದನು ಒಂದು ದಿನ ಕಾಡಿನಲ್ಲಿ ಗೋವುಗಳನ್ನು ಕಾಯುತ್ತಿರುವಾಗ ಮೇಘ ಗರ್ಜನೆ ತೊಡಗಿ ಬಿರುಮಳೆಗೆ ಆರಂಭವಾಯಿತು. ಮಳೆಗಾಳಿಗಳ ಹೊಡೆತಕ್ಕೆ ಸಿಕ್ಕಿ ಚಳಿಯಿಂದ ಹಿಂಸೆಪಡು ತ್ತಿದ್ದ ಶಿಶು ಕೃಷ್ಣನನ್ನು ನಂದನು ತನ್ನ ಎದೆಗೆ ಅಪ್ಪಿಕೊಂಡು ಹೇಗೋ ಸಂತೈಸಲು ಪ್ರಯತ್ನಿಸಿದ್ದನು. ಆ ಹೊತ್ತಿ ನಲ್ಲಿ ದಿವ್ಯ ಸುಂದರಿಯಾದ ರಾಧೆಯು ಅಲ್ಲಿಗೆ ಬಂದಳು. ಅವಳ ದೈವೀಲಾವಣ್ಯವನ್ನು ಕಂಡು ಬೆರಗಾಗಿ ಅವಳು ಸಾಕ್ಷಾತ್ ವಿಷ್ಣುಮಾಯೆಯೆಂದೇ ಬಗೆದು ಕೃಷ್ಣನನ್ನು ಅವಳಿಗೆ ಒಪ್ಪಿಸಿದನಂತೆ! ಆ ಕೂಡಲೆ ಕೃಷ್ಣಸಮೇತಳಾದ ರಾಧೆ ರಾಸಮಂಡಲವನ್ನು ಸ್ಮರಿಸಿಕೊಳ್ಳಲು ಅಲ್ಲಿ ನಯನಮನೋಹರವಾದ ವಿಹಾರಭೂಮಿ ಏರ್ಪಟ್ಟುದೇ ಅಲ್ಲದೆ ಕೃಷ್ಣನಿಗೆ ತಟ್ಟನೆ ಹೊಸಪ್ರಾಯ ಬಂತು. ಆ ವೇಳೆಗೆ ಸರಿಯಾಗಿ ಬ್ರಹ್ಮನೇ ಅಲ್ಲಿಗೆ ಬಂದು ತಾನೇ 'ಕನ್ಯಾದಾತೃ'

ಮತ್ತು ಪುರೋಹಿತನಾಗಿ ರಾಧಾಕೃಷ್ಣರಿಗೆ ಶಾಸ್ತ್ರೋಕ್ತವಾಗಿ ಮದುವೆಮಾಡಿಸಿದನು! ವಿವಾಹಾನಂತರ ರಾಧಾಕೃಷ್ಣರು ಲೀಲಾವಿಹಾರದಲ್ಲಿ ಮಗ್ನರಾಗಿದ್ದು ಬಿಟ್ಟರು.

ರಾಧೆಯ ವೃತ್ತಾಂತವು ಈ ಬ್ರಹ್ಮವೈವರ್ತ ಪುರಾಣದಲ್ಲಲ್ಲದೆ ಬೇರೆ ಯಾವ ಪುರಾಣದಲ್ಲಿಯೂ ಇಲ್ಲದಿರುವುದರಿಂದಲೂ 'ಗೀತಗೋವಿಂದ'ವನ್ನು ರಚಿಸಿದ ಜಯದೇವ ಕವಿಗಿಂತ ಹಿಂದಿನ ಯಾವ ಕವಿಗೂ ಈ ಕಥೆ ತಿಳಿದಂತೆ ನಿದರ್ಶನವಿಲ್ಲದಿರುವುದರಿಂದಲೂ ಈ ಪುರಾಣವು ಮಿಕ್ಕ ಪುರಾಣಗಳಿಗಿಂತ ಬಹಳ ನೂತನವಾದುದೆಂದು ತೋರುತ್ತದೆ. ಕ್ರಿಸ್ತಶಕ ಹನ್ನೆರಡನೆಯ ಶತಮಾನದ ನಿಂಬಾರ್ಕನೆಂಬ ವೈಷ್ಣವಾಚಾರ್ಯನು ರಾಧೆ ಕೃಷ್ಣನ ಪರಮ ಪ್ರೇಯಸಿಯೆಂದು ಮೊದಲಬಾರಿಗೆ ಹೇಳಿದ್ದಾನೆ. ಈ ರಾಧಾಮಾಧವರ ಕಥೆ ಜನರಲ್ಲಿ ಪ್ರಚಾರದಲ್ಲಿದ್ದು ಬಹುಶಃ ಹನ್ನೆರಡನೆಯ ಶತಮಾನದಿಂದೀಚೆಗೆ ಗ್ರಂಥಸ್ಥವಾಗಿರಬೇಕು.

ಅಂತು ಬೇರೆ ಬೇರೆ ಪುರಾಣಗಳು ಕೃಷ್ಣ ಕಥೆಯನ್ನು ತಮ್ಮ ತಮ್ಮ ದೃಷ್ಟಿಗನುಗುಣವಾಗಿ ಸಂಗ್ರಹವಾಗಿಯೋ ವಿಸ್ತಾರವಾಗಿಯೋ ಹೇಳುವಾಗ ಅನೇಕ ವಿಚಾರಗಳಲ್ಲಿ ಏಕಾಭಿಪ್ರಾಯವಿಲ್ಲ. ಈ ಎಲ್ಲ ಪುರಾಣಗಳನ್ನೂ ಶ್ರೀ ವ್ಯಾಸಭಗವಾನರೇ ರಚಿಸಿದ್ದರೂ ಅವುಗಳಲ್ಲಿನ ಕೃಷ್ಣ ಕಥೆ ಏಕರೀತಿಯಾಗಿಲ್ಲ. ಈ ಕಾರಣದಿಂದ ವ್ಯಾಸನೆಂಬ ಹೆಸರಿನವರು ಹಲವರಿದ್ದಿರಬಹುದೆಂಬ ಊಹೆಯೂ ಇಲ್ಲದಿಲ್ಲ. ಅದೆಲ್ಲ ಹೇಗೇ ಇದ್ದರೂ ಪುರಾಣಕಥೆಯ ಪ್ರಕಾರ ಶ್ರೀಕೃಷ್ಣನು ಪರದೈವ. ಅವನು ಮಹಾವಿಷ್ಣುವಿನ ಅವತಾರ. ಅವನ ಅಪಾರವಾದ ದೈವೀ ಮಹಿಮೆ, ಅದ್ಭುತಶಕ್ತಿಗಳ ವಿಷಯದಲ್ಲಿ ಭಿನ್ನಾಭಿಪ್ರಾಯವಿಲ್ಲ. ಯಾವ ಪುರಾಣವೂ ಕೃಷ್ಣನನ್ನು ಸಾಧಾರಣ ಮಾನವಮಾತ್ರನೆಂದು ಭಾವಿಸುವುದಿಲ್ಲ. ಶ್ರೀ ಕೃಷ್ಣನು ಮೆರೆದ ಅನೇಕಾನೇಕ ಅದ್ಭುತ ಪವಾಡಗಳನ್ನು ಪುರಾಣಗಳೆಲ್ಲ ಉತ್ಸಾಹದಿಂದ ವರ್ಣಿಸುತ್ತವೆ.

ಮಹಾಭಾರತದಲ್ಲಿಯೂ ಶ್ರೀ ಕೃಷ್ಣನು ಮಹಾಮಹಿಮಾಶಾಲಿಯಾದ ದೇವರೆಂಬ ಹೇಳಿಕೆ ಹಲವು ಸಲ ಬಂದಿದೆ. ಭೀಷ್ಮ, ಧರ್ಮರಾಯ, ದ್ರೌಪದಿ ಮೊದಲಾದವರು ಕೃಷ್ಣನನ್ನು ಪರದೈವಸ್ವರೂಪವೆಂದೇ ಭಾವಿಸಿದ್ದಾರೆ. ಅಲ್ಲದೆ ಕೃಷ್ಣನು ದುರ್ಯೋಧನನ ಸಭೆಯಲ್ಲಿ, ಆಮೇಲೆ ರಣರಂಗದಲ್ಲಿ ಪಾರ್ಥನಿಗಾಗಿ ತನ್ನ ವಿರಾಟ್ ಸ್ವರೂಪವನ್ನು ತೋರಿಸಿದನು! ಆದರೂ ಒಂದೆರಡು ಕಡೆ ಶ್ರೀ ಕೃಷ್ಣನೇ ತಾನು ದೇವರಲ್ಲವೆಂದು ಹೇಳಿಕೊಂಡದ್ದಿದೆ. 'ದೇವರೆಂದೇ ನೀವು ಬಗೆವಿರಿ ದೇವತನವೆಮಗಿಲ್ಲ|' 'ಅಹಂ ಹಿ ತತ್ಕರಿಷ್ಯಾಮಿ ಪರಂ ಪುರುಷಕಾರತಃ| ದೈವಂ ತು ನ ಮಯಾ ಶಕ್ಯಂ ಕರ್ಮ ಕರ್ತುಂ ಕಥಂಚನ |' ಎಂಬ ಹೇಳಿಕೆಗಳಿವೆಯಾದರೂ ಶ್ರೀ ಕೃಷ್ಣನ ದೈವೀಮಹಿಮೆಯ ವರ್ಣನೆಯ ಭರದಲ್ಲಿ ಇವು ನಮ್ಮ ಗಮನದಲ್ಲಿ ಸ್ಥಿರವಾಗಿ ಉಳಿಯುವುದಿಲ್ಲ. ಇವೆಲ್ಲ ಅವನ ನರನಾಟಕವೆಂದು ಬಗೆಯುತ್ತೇವೆ.

ಭಾರತದ ಕೃಷ್ಣನು ಅಧರ್ಮಿಗಳಾದ ಅನೇಕ ದೈತ್ಯರನ್ನೂ ದುಷ್ಟ ಕ್ಷತ್ರಿಯರನ್ನೂ ಕೊಂದು, ಕೊಲ್ಲಿಸಿ, ಲೋಕಸಂರಕ್ಷಣೆ ಮಾಡಿ ಶಾಂತಿಧರ್ಮಗಳನ್ನು ಸ್ಥಾಪಿಸಿದ ಮಹಾವೀರಪುರುಷನೇ ಹೊರತು ಉಪನಿಷತ್ಕೃಷ್ಣನಂತೆ ಧರ್ಮೋಪದೇಶಕನಲ್ಲವೆಂದು ಹೇಳುವುದುಂಟು. ಆದರೆ ಭಾರತದ ಕೃಷ್ಣನು ಅರ್ಜುನನಿಗೆ ಉಪದೇಶಿಸಿದ ಭಗವದ್ಗೀತೆಯು ಉಪನಿಷತ್ತುಗಳ ಸಾರವೆನಿಸಿದ್ದು ಪ್ರಸ್ಥಾನತ್ರಯದಲ್ಲಿ ಒಂದಾಗಿದೆ. ಸಮಸ್ತ ಮತಾಚಾರ್ಯರಿಗೂ ಅದು ಮುಖ್ಯ ಗ್ರಂಥವಾಗಿದ್ದು ಹಲವರು ಅದಕ್ಕೆ ಭಾಷ್ಯಗಳನ್ನು ರಚಿಸಿ ತಮ್ಮ ತಮ್ಮ ಮತವನ್ನು ಪ್ರತಿಪಾದಿಸಿದ್ದಾರೆ. ಆದ್ದರಿಂದ ಭಾರತದ ಕೃಷ್ಣನು ಧರ್ಮಸಂಸ್ಥಾಪಕನೂ ಹೌದು, ಧರ್ಮಸ್ವರೂಪವನ್ನು ಲೋಕಕ್ಕೆ ಉಪದೇಶಿಸಿದ ಮಹಾಜ್ಞಾನಿಯೂ ಹೌದು, ದುಷ್ಟಮರ್ದನಕ್ಕೋಸ್ಕರ ಹಲವು ತಂತ್ರಗಳನ್ನು ಪ್ರಯೋಗಿಸಿ ಕಾರ್ಯಸಾಧನೆ ಮಾಡಿದ ಉಪಾಯಕೋವಿದನಾದ ರಾಜನಿರ್ಮಾಪಕನೂ ಹೌದು, ಸ್ವಯಂ ಅನೇಕ ದೈತ್ಯರನ್ನು ಖಾಡಾಖಾಡಿ ಯುದ್ಧದಲ್ಲಿ ಕೊಂದ ಮಹಾ ವೀರಶ್ರೇಷ್ಠನೂ ಹೌದು.

ಭಾಗವತದ ಶ್ರೀಕೃಷ್ಣ ಮಹಾವಿಷ್ಣುವಿನ ಅವತಾರ. ಅವನು ಹುಟ್ಟುವಾಗಲೇ ಶಂಖಚಕ್ರಗದಾಪಾಣಿಯಾಗಿ ಹುಟ್ಟಿದನು. ಹುಟ್ಟುತ್ತಲೂ ಮಾತನಾಡಿ ದೇವಕೀವಸುದೇವರಿಗೆ ಧೈರ್ಯ ಹೇಳಿ ಮುಂದೆ ಮಾಡಬೇಕಾದ ಕೆಲಸಗಳನ್ನೆಲ್ಲ ತಿಳಿಯಹೇಳಿ ನರಶಿಶು ರೂಪ ಧರಿಸಿದವನು. ಆ ದೇವಶಿಶುವನ್ನು ಎತ್ತಿಕೊಂಡಿದ್ದ ಕಾರಣದಿಂದಲೇ ಭೋರ್ಗರೆದು ಹರಿಯುತ್ತಿದ್ದ ಯಮುನಾನದಿ ವಸುದೇವನಿಗೆ ದಾರಿ ಬಿಟ್ಟಿತು. ಆದಿಶೇಷನೇ ಬಂದು ತನ್ನ ಹೆಡೆಯನ್ನು ಕೊಡೆಯಂತೆ ಹಿಡಿದು ಮಳೆಯಿಂದ ತೊಂದರೆಯಾಗದಂತೆ ಮಾಡಿದನು! ಇನ್ನೂ ಹಾಲ ಹಸುಳೆಯಾಗಿ

ದ್ದಾಗಲೇ ಕೃಷ್ಣ ಪೂತನಿಯನ್ನು ಕೊಂದನು. ಶಕಟಾಸುರ, ತೃಣಾವರ್ತ, ಮೊದಲಾದ ಇನ್ನೂ ಅನೇಕ ರಕ್ಕಸ ರನ್ನು ಅವನು ಶೈಶವಾವಸ್ಥೆಯಲ್ಲಿರುವಾಗಲೇ ಕೊಂದನು. ಸ್ವಲ್ಪ ದೊಡ್ಡ ಹುಡುಗನಾದ ಮೇಲೆ ಯಮುನೆಯ ಮಡುವಿನೊಳಕ್ಕೆ ಧುಮುಕಿ ಅಲ್ಲಿದ್ದ ಕಾಳೀಯನೆಂಬ ಘೋರ ಸರ್ಪವನ್ನು ಶಿಕ್ಷಿಸಿ ಬುದ್ಧಿ ಹೇಳಿ ಸಮುದ್ರಕ್ಕೆ ಅಟ್ಟಿದನು. ಇಂದ್ರನು ಗೋಕುಲದ ಮೇಲೆ ವಿಶೇಷ ರಭಸದಿಂದ ಮಳೆಗರೆದು ಅನರ್ಥವುಂಟುಮಾಡಿದಾಗ ಕೃಷ್ಣನು ಗೋವರ್ಧನ ಪರ್ವತವನ್ನೇ ಕಿತ್ತು ಏಳು ದಿನಗಳ ಕಾಲ ಎತ್ತಿ ಹಿಡಿದುಕೊಂಡು ಅದರಡಿಯಲ್ಲಿಯೇ ಗೋಪಗೋಪೀ ಜನಕ್ಕೆ ಆಶ್ರಯ ನೀಡಿ ಸಂರಕ್ಷಿಸಿ ಇಂದ್ರನ ಸೊಕ್ಕು ಮುರಿದನು. ಇವೆಲ್ಲ ಮಾನವ ಮಾತ್ರನಿಂದ ಆಗಬಹುದಾದ ಕೆಲಸಗಳೆ? ಈ ಅತಿಮಾನುಷವ್ಯಾಪಾರಗಳನ್ನೆಲ್ಲ ನಡೆಸಬಲ್ಲ ಮಹಾನುಭಾವನು ದೇವಾಂಶ ಸಂಭೂತನೊ ದೇವನೊ ಆಗಿರಬೇಕು. ಮಾನವನು ಇಂಥಾ ಕೆಲಸಗಳನ್ನು ಸಾಧಿಸಿದರೆ ಅವನಿಗೆ ದೇವತ್ವದ ಗಣನೆಯಾಗುವುದರಲ್ಲಿ ಸೋಜಿಗವೇನಿದೆ? ಅವನನ್ನು ಮೆಚ್ಚಿ ಪೂಜಿಸಿದ ಜನ ಅಂಥವನನ್ನು ದೇವರೆಂದು ಗೌರವಿಸಿದರೆ, ದೇವಾಧಿದೇವನೆಂದು ಹಾಡಿ ಹೊಗಳಿದರೆ, ಅದರಲ್ಲಿ ಆಶ್ಚರ್ಯವೇನೂ ಇಲ್ಲ.

ಶ್ರೀ ಕೃಷ್ಣನ ದೈವೀ ಮಹಿಮಾತಿಶಯವನ್ನು ವರ್ಣಿಸುವ ಭಾಗವತದಲ್ಲಿಯೇ ಆತನ ಮಾನವ ಕಥೆಯೂ ರೂಪುಗೊಂಡಿದೆ. ಕಂಸನನ್ನು ಕೊಂದು ಉಗ್ರಸೇನನನ್ನು ಪಟ್ಟಕ್ಕೆ ಕೂರಿಸಿದ ಮೇಲೆ ಕೃಷ್ಣನಿಗೆ ಉಪನಯನ ವಾಯಿತಂತೆ. ಆಗ ಅವನು ಸಾಂದೀಪನಿ ಎಂಬ ಗುರುವಿನ ಹತ್ತಿರ ವಿದ್ಯಾಭ್ಯಾಸಕ್ಕೆ ತೊಡಗಿದನಂತೆ. ಆ ಸಮಯದಲ್ಲಿ ಸಾಂದೀಪನಿಯ ಹೆಂಡತಿ ಕೃಷ್ಣನನ್ನೂ ಅವನ ಸಹಾಧ್ಯಾಯಿ ಸುದಾಮನನ್ನೂ ಸೌದೆ ತರುವಂತೆ ಆಜ್ಞಾಪಿಸಿದಳಂತೆ. ದೇವರಾದರೇನು, ದೇವಾಧಿದೇವನಾದರೇನು? ವೇಷ ಮರೆಸಿಕೊಂಡಾಗ ಇಂಥ ಕಷ್ಟಗಳು ತಪ್ಪಿದ್ದಲ್ಲ. ಕುಂಭ ದ್ರೋಣ ವರ್ಷ ಸುರಿಯತೊಡಗಿತು. ಆಗ ಮಳೆಗೆ ಸಿಕ್ಕಿ ಆಶ್ರಯ ದೊರೆಯದೆ ಕತ್ತಲಲ್ಲಿ ಕಂಗೆಟ್ಟು ಆ ಹುಡುಗರು ಭೀತರಾಗಿ ಛಳಿಗೆ ನಡುಗುತ್ತ ಏನೂ ತೋರದೆ ಒಬ್ಬರನ್ನೊಬ್ಬರು ತಬ್ಬಿಕೊಂಡು ನಿಂತಿದ್ದರೆಂದು ಭಾಗವತಕವಿ ಹೃದಯ ಸ್ಪಂದಿಯಾದ ರೀತಿಯಲ್ಲಿ ವರ್ಣಿಸಿದ್ದಾನೆ. ಗೋವರ್ಧನ ಪರ್ವತವನ್ನೇ ಎತ್ತಿ ಹಿಡಿದು ಗೋ ಗೋಪ ಗೋಪಿಯರಿಗೆ ರಕ್ಷಣೆ ಕೊಟ್ಟ ಆ ಪರಮಾತ್ಮನು ಇಲ್ಲೇಕೋ ಕಾಗೆ ಮಳೆಯಲ್ಲಿ ನೆನೆದ ಹಾಗೆ ಅಸಹಾಯ ನಾದನು. ಇದೇನು ನರ ನಾಟಕವೋ? ಅಥವಾ ಮೊದಲು ಮಾನವನ ಚರಿತ್ರೆಯಾಗಿ ಆರಂಭವಾದ ಕೃಷ್ಣ ಕಥೆಗೆ ಬೇರೆ ಬೇರೆ ಅಂಶಗಳು ಸೇರಿ ಕೊನೆಗೆ ಅವನಿಗೆ ದೈವತ್ವದ ಮನ್ನಣೆಯುಂಟಾಯಿತೊ ಏನೊ!

ಮಥುರಾ ನಗರದಮೇಲೆ ಜರಾಸಂಧ ಕಾಲಯವನಾದಿಗಳು ಹಲವು ಸಲ ದಂಡೆತ್ತಿ ಬಂದು ಕಾದಾಡಿದ ಮೇಲೆ ಕೊನೆಯ ಸಲ ಕೃಷ್ಣ ಶತ್ರುಗಳನ್ನು ಎದುರಿಸದೆ ಪಲಾಯನ ಮಾಡಿ ಮುಚುಕುಂದನ ಮೂಲಕ ದೈತ್ಯ ಸಂಹಾರ ಮಾಡಿಸುತ್ತಾನೆ. ಜರಾಸಂಧನ ಕೊಲೆಗೆ ಭೀಮನ ಸಹಾಯ ಬಯಸುತ್ತಾನೆ. ಸ್ಯಮಂತಮಣಿಯ ನಿಮಿತ್ತದಿಂದ ಅಪವಾದಕ್ಕೆ ಗುರಿಯಾಗಿ ಎಲ್ಲ ಸಾಧಾರಣ ಮಾನವರಂತೆ ಬಹಳವಾಗಿ ದುಃಖಿಸುತ್ತಾನೆ. ಹೀಗೆ ಶ್ರೀ ಕೃಷ್ಣನು ಆದರ್ಶಮಾನವನಾಗಿ ಬಾಳಿ ದೈವತ್ವದ ಮನ್ನಣೆ ಪಡೆದು ಕೊನೆಗೆ ಭಕ್ತ ಕವಿಗಳ ಕೈಗೆ ಸಿಕ್ಕಿ ದೇವಾಧಿ ದೇವನಾಗಿದ್ದಾನೆ. ಅವನ ಚರಿತ್ರೆ ಪಾಪಪರಿಹಾರಕವಾದದ್ದು.

ಶ್ರೀ ಕೃಷ್ಣನು ಹಸುಗೂಸಾಗಿದ್ದಾಗಲೇ ಪೂತನಿಯೆಂಬ ಕರಾಳ ರಕ್ಕಸಿಯೊಬ್ಬಳನ್ನು ಕೊಂದ ಕಥೆ ಲೋಕಪ್ರಸಿದ್ಧವಾಗಿದೆ. ಅವಳು ಸ್ತನ್ಯಪಾನ ಮಾಡಿಸುವ ನೆಪದಲ್ಲಿ ವಿಷವೂಡಿ ಕೊಲ್ಲಲು ಹವಣಿಸಿದಳು! ಆದರೆ ಶಿಶುರೂಪಿಯಾದ ಭಗವಾನ್ ಕೃಷ್ಣನು ಸ್ತನ್ಯದ ಜತೆಯಲ್ಲಿ ಅವಳ ಜೀವವನ್ನೂ ಹೀರಿಬಿಟ್ಟನು. ಅವಳು ಸತ್ತು ಬಿದ್ದಾಗ ಆ ಬೃಹದ್ದೇಹವನ್ನು ಅಖಂಡವಾಗಿ ಹೊರಕ್ಕೆ ಸಾಗಿಸಲು ಶಕ್ಯವಾಗದೆ ಕತ್ತರಿಸಿ ಬಂಡಿಗಳ ಮೇಲೆ ಹೇರಿ ಸಾಗಿಸಬೇಕಾಯಿತೆಂದು ಭಾಗವತಕಾರನು ಬಣ್ಣಿಸಿದ್ದಾನೆ.

ಆದರೆ ವಿಷ್ಣು ಪುರಾಣದಲ್ಲಿ ಅವಳು ಒಬ್ಬ ಬಾಲಘಾತಿನಿಯಾದ ಹೆಂಗಸು, ಅವಳು ರಕ್ಕಸಿಯಲ್ಲ ಹರಿವಂಶ ದಲ್ಲಿ ಅವಳು ಕಂಸಧಾತ್ರಿ. ಕಾಮರೂಪಿಣಿಯಾದ ಆ ಹೆಂಗಸು ಗೋಕುಲಕ್ಕೆ ಹಕ್ಕಿಯ ರೂಪದಲ್ಲಿ ಹೋದಳಂತೆ! ಬ್ರಹ್ಮವೈವರ್ತ ಪುರಾಣವು ಅವಳನ್ನು ಕಂಸಭಗಿನಿಯೆಂದು ಹೇಳುತ್ತದೆ. ಅವಳು ಬ್ರಾಹ್ಮಣಸ್ತ್ರೀಯ ವೇಷ ಧರಿಸಿ ಮಥುರೆಯಿಂದ ಗೋಕುಲಕ್ಕೆ ಹೋದಳಂತೆ. ರಾಜಸೂಯ ಯಾಗದ ಕೊನೆಯಲ್ಲಿ ಅಗ್ರಪೂಜೆ ಸಂದರ್ಭದಲ್ಲಿ ಶಿಶುಪಾಲನು ಕೃಷ್ಣನನ್ನು ನಿಂದಿಸಹೊರಟು 'ಯದ್ಯನೇನ ಹತೋ ಬಾಲೇ ಶಕುನಿಶ್ಚಿತ್ರಮತ್ರ ಕಿಮ್' ಎಂದು ಪ್ರಶ್ನಿಸಿದ್ದಾನೆ. ಬಾಲ್ಯದಲ್ಲಿ ಕೃಷ್ಣನು ಒಂದು ಹಕ್ಕಿಯನ್ನು ಕೊಂದ ಮಾತ್ರಕ್ಕೆ ಅದರಲ್ಲಿ ಹೆಚ್ಚಿನ ಆಶ್ಚರ್ಯವೇನು? ಶಕುನಿ ಎಂದರೆ ಹಕ್ಕಿ. ಪೂತನಿಯು ಗೋಕುಲಕ್ಕೆ ಹಕ್ಕಿಯ ರೂಪದಲ್ಲಿ ಹೋದಳೆಂದು ಹರಿವಂಶದಲ್ಲಿ ಹೇಳಿರುವು

ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಶ್ರೀ ಕೃಷ್ಣನು ಬಕನನ್ನು ಕೊಂದನೆಂಬ ಪುರಾಣಕಥೆಯೂ ಇದೆ. ಬಲಶಾಲಿಯಾದ ಮಗು ಒಂದು ಹಕ್ಕಿಯನ್ನು ಕೊಲ್ಲುವುದು ಅಗಾಧವೇನೂ ಅಲ್ಲ.

ಅಮರಕೋಶದಲ್ಲಿ 'ಅಭಯಾತ್ವವ್ಯಥಾ ಪಥ್ಯಾ ವಯಸ್ಥಾ ಪೂತನಾಮೃತಾ' ಎಂದು ಹೇಳಿದೆ. ಅಳಲೆಕಾಯಿಗೆ ಪೂತನಾ ಎಂದು ಹೆಸರು. ಅಸ್ವಸ್ಥವಾದ ಶಿಶುವಿಗೆ ಅಳಲೆ ಕಾಯಿಂದ ಔಷಧ ಮಾಡಿರಬಹುದು. ಅದೇ ಕಾಲಕ್ರಮದಲ್ಲಿ ಕರಾಳ ರಕ್ಕಸಿಯ ರೂಪ ತಾಳಿರಬಹುದೆ? ಪೂತನಾ ಎಂಬ ಒಂದು ರೋಗ ಎಳೆಯ ಮಕ್ಕಳಿಗೆ ಬರಬಹುದಾದ್ದೆಂದು ಸೂಚಿಸಿ ಅದರ ಲಕ್ಷಣ, ಅದಕ್ಕೆ ಮಾಡಬೇಕಾದ ಚಿಕಿತ್ಸೆ ಮುಂತಾದ ಸಂಗತಿಗಳನ್ನು ಶುಶ್ರುತದಲ್ಲಿ ಹೇಳಿದೆ. ಶಿಶು ಕೃಷ್ಣನಿಗೆ ಬಹುಶಃ ಆ ರೋಗ ಬಂದಿದ್ದು ವಾಸಿಯಾಗಿದ್ದಿರಬಹುದು. ಅದನ್ನೇ ಹಕ್ಕಿಯೆಂದು, ಕಂಸಧಾತ್ರಿಯೆಂದು, ಕಂಸಭಗಿನಿಯೆಂದು, ಕಲ್ಪಿಸಿ ಕಡೆಗೆ ಘೋರ ರಾಕ್ಷಸಿಯನ್ನಾಗಿ ಮಾಡಿರಬಹುದೆ?

ಮಹಾವಿಷ್ಣುವಿಗೆ ದಾಮೋದರನೆಂಬ ಹೆಸರೂ ಇದೆ. 'ದಮಾದ್ದಾಮೋದರೋ ವಿದುಃ' ಎಂದು ಮಹಾಭಾರತದಲ್ಲಿ ಇದಕ್ಕೆ ಅರ್ಥ ಹೇಳಿದೆ. ದಮವಿರುವುದರಿಂದ ದಾಮೋದರನೆನಿಸಿಕೊಂಡನೆಂದು ಇಲ್ಲಿ ವ್ಯಕ್ತ. ದಮ, ಎಂದರೆ ಇಂದ್ರಿಯನಿಗ್ರಹ, ಮನೋನಿಗ್ರಹ. "ದಮಾದಿ ಸಾಧನೇನ ಉದರ ಉತ್ಕೃಷ್ಟಾ ಗತಿರ್ಯಾತಯಾ ಗಮ್ಯತಿ ಇತಿ ದಾಮೋದರಃ" 'ಉದರ' ಇಲ್ಲಿ ಉತ್ಕೃಷ್ಟಗತಿ. ದಮದಿಂದ ಉತ್ಕೃಷ್ಟ ಗತಿಯನ್ನು ಪಡೆದವನು ದಾಮೋದರ. ವೇದಕಥೆಗಳಲ್ಲಿ ವಿಷ್ಣುವು ಇಂದ್ರನಿಗಿಂತ ಕಡಿಮೆ ಅಂತಸ್ತಿನವನು. ಆದರೆ ಅವನು ತಪಸ್ಸಿನಿಂದ ಉತ್ಕೃಷ್ಟ ಗತಿಯನ್ನು ಸಾಧಿಸಿದನು, ಪ್ರಾಶಸ್ತ್ಯವನ್ನು ಸಂಪಾದಿಸಿದನು. ಈ ಹೆಸರನ್ನು ಆಶ್ರಯಿಸಿ ಭಾಗವತದಲ್ಲಿ ಒಂದು ಕಥೆ ಸೃಷ್ಟಿಯಾದ ಹಾಗೆ ತೋರುತ್ತದೆ. ಯಶೋದೆ, ಒಂದು ದಿನ ಕೃಷ್ಣನ ಚೇಷ್ಟೆಗೆ ರೋಸಿಹೋಗಿ ಅವನನ್ನು ಕಟ್ಟಿ ಹಾಕಲು ಸಂಕಲ್ಪಿಸಿ ಒಂದು ಹಗ್ಗ ತಂದು ಅವನ ಸೊಂಟಕ್ಕೆ ಬಿಗಿದು ಒಂದು ಒರಳಿಗೆ ಕಟ್ಟಿಹಾಕಿದಳಂತೆ. ಮೊದಲು ಎಷ್ಟು ಹಗ್ಗ ತಂದರೂ ಶಿಶು ಕೃಷ್ಣನ ಸೊಂಟಕ್ಕೆ ಕಟ್ಟಲು ಸಾಲದೆ ಹೋಗಲು ಯಶೋದೆ ಬಹಳ ವ್ಯಗ್ರಳಾದಾಗ ಭಗವಂತ ಕನಿಕರಿಸಿ ತಾನೇ ಬಂಧನಕ್ಕೊಳಗಾದನಂತೆ. ಹೀಗೆ ದಾಮದಿಂದ (ಹಗ್ಗ) ಉದರಕ್ಕೆ ಕಟ್ಟಿಸಿಕೊಂಡದ್ದರಿಂದ ಅವನು 'ದಾಮೋದರ' ನೆನಿಸಿದನಂತೆ!

ಹಾಗೆಯೇ ಉಪೇಂದ್ರನೆಂಬ ಹೆಸರನ್ನು ಆಶ್ರಯಿಸಿ ಒಂದು ಕಥೆ ಹುಟ್ಟಿದೆ. ಉಪೇಂದ್ರನೆಂಬುದು ಮಹಾವಿಷ್ಣುವಿನ ಹೆಸರುಗಳಲ್ಲೊಂದು. ಉಪೇಂದ್ರನೆಂದರೆ ಇಂದ್ರನಿಗಿಂತ ಚಿಕ್ಕವನು ಅಥವಾ ಚಿಕ್ಕ ಇಂದ್ರನೆಂದು ಅರ್ಥವಾಗಬೇಕು—ಉಪನದಿ, ಉಪನಗರ, ಉಪನೇತ್ರ—ಇದ್ದ ಹಾಗೆ. ಆದರೆ 'ಇಂದ್ರಾದುಪರಿ ಉಪೇಂದ್ರಃ' ಎಂದು ಚಮತ್ಕಾರವಾದ ಅರ್ಥಕಲ್ಪಿಸಿದೆ. ಇಂದ್ರನನ್ನು ಸೋಲಿಸಿದ್ದರಿಂದ ಅವನಿಗೆ ಉಪೇಂದ್ರನೆಂದು ಹೆಸರಾಯಿತಂತೆ! ಗೋವರ್ಧನೋದ್ಧಾರದ ಸಂದರ್ಭದಲ್ಲಿ ಇಂದ್ರನು ಕೃಷ್ಣನಿಗೆ ಸೋತದ್ದರಿಂದ ಅವನಿಗೆ ಉಪೇಂದ್ರನೆಂಬ ಹೆಸರಾಯಿತೆಂದು ಹೇಳಿದೆಯಾದ್ದರಿಂದ ಈ ಅರ್ಥವಿವರಣೆಗೆ ಬಲ ಸಿಕ್ಕಿದಂತಾಯಿತು. ನಂದಾದಿ ಗೋಪಾಲಕರು ಮಾಡುತ್ತಿದ್ದ ಇಂದ್ರಯಜ್ಞವನ್ನು ಕೃಷ್ಣನು ನಿಲ್ಲಿಸಿದ್ದರಿಂದ ಸಿಟ್ಟುಗೊಂಡ ಇಂದ್ರನು ಬಹಳ ಬಿರುಸಾದ ಮಳೆ ಸುರಿಸಲು ಗೋವರ್ಧನ ಪರ್ವತವನ್ನೇ ಕಿತ್ತು ಕೊಡೆಯಂತೆ ಎತ್ತಿ ಹಿಡಿದು ಕೃಷ್ಣನು ಇಂದ್ರನ ಸೊಕ್ಕು ಮುರಿದನು. ಆಗ ವಿಧಿಯಿಲ್ಲದೆ ಇಂದ್ರನು ಶರಣಾಗತನಾಗಲು ಕೃಷ್ಣನು ಅವನ ಮೇಲಿನ ಅನುಗ್ರಹಬುದ್ಧಿಯಿಂದ ಉಪೇಂದ್ರನೆಂಬ ಹೆಸರನ್ನು ತಾನು ಧರಿಸಿದನಂತೆ! ವೇದಯುಗದಲ್ಲಿ ಇಂದ್ರನೇ ಪರದೈವ. ವಿಷ್ಣು ಅವನ ಸಹಾಯಕ! ಅವನಿಗಿಂತ ಚಿಕ್ಕವನೇ ಸರಿ. ವಿಷ್ಣುಕೃಷ್ಣರ ಕಥೆಗಳು ಬೆರೆತು ಒಂದಾದ ಮೇಲೆ ಅವನ ಉಪೇಂದ್ರತ್ವವು ಇವನಿಗೂ ಬರಬೇಕಾಯಿತು. ಅದಕ್ಕಾಗಿ ಈ ಕಥೆ ಹುಟ್ಟಿದೆಯೆಂದು ಭಾವಿಸಿದರೆ ತಪ್ಪಾಗಲಾರದು.

ವೇದದಲ್ಲಿ ವಿಷ್ಣುವಿನ 'ಮೂರು ಹೆಜ್ಜೆಗಳ' ವರ್ಣನೆ ಹಲವು ಸಲ ಬಂದಿದೆ. 'ತ್ರೀಣಿ ಪದಾ ವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯ:' ಈ ಮೂರು ಹೆಜ್ಜೆಗಳು ಸೂರ್ಯನ ಉದಯ ಮಧ್ಯಾಹ್ನ ಮತ್ತು ಅಸ್ತಮಾನಗಳೇ ಎಂದು ಒಂದು ವಾದ. 'ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ' ಎಂಬ ವಾಕ್ಯಕ್ಕೆ ವಿಷ್ಣುವು ವಾಸ್ತವವಾಗಿ ಭೂಮಿ ಅಂತರಿಕ್ಷ ಆಕಾಶಗಳನ್ನು ಮೆಟ್ಟಿದನೆಂದೇ ಅರ್ಥ ಮಾಡಲಾಗಿದೆ. ಈಗ ವಿಷ್ಣುವಿನ ಮೂರು ಹೆಜ್ಜೆಗಳು ಸೂರ್ಯನ ದೈನಂದಿನ ಚಲನೆಯ ಮೂರು ಘಟ್ಟಗಳೆಂಬ ಅರ್ಥ ಹೋಗಿ ಅವು ಮೂರು ಲೋಕಗಳೆಂಬ ಅರ್ಥ ಬಂದಿತು. ಬಹುಶಃ ಯಾವನೋ ಪುರಾಣಕವಿ ಇದರಿಂದ ಸ್ಫೂರ್ತಿ ಪಡೆದು ವಾಮನಾವತಾರದ ಕಥೆ ಕಟ್ಟಿದ್ದರೂ ಇರಬಹುದು. ವಿಷ್ಣುವಿನ ಈ ಮೂರು ಹೆಜ್ಜೆಗಳಲ್ಲಿ ಎರಡು ಎಲ್ಲರಿಗೂ

ಕಾಣಿಸುವಂಥವೆಂದೂ ಮೂರನೆಯದು ವಿಷ್ಣುವಿಗೆ ವಿನಾ ಬೇರಾರಿಗೂ ತಿಳಿಯದೆಂದೂ ಒಂದು ಹೇಳಿಕೆ. ಅದೇ ವಿಷ್ಣುವಿನ ಪರಮ ಪದ! ಆ ಪರಮ ಪದದಲ್ಲಿ ದೇವತೆಗಳೂ ಪಿತೃಗಳೂ ಆನಂದಿಸುವರು. ಕಠೋಪನಿಷತ್ತಿನ ಮೂರನೆಯ ವಲ್ಲಿಯಲ್ಲಿ ಈ ಶ್ಲೋಕ ಇದೆ.

ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ನರಃ ।
ಸೋऽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ ॥

ಇಲ್ಲಿ 'ವಿಷ್ಣೋಃ ಪರಮಪದಂ' ಎಂಬ ಮಾತಿಗೆ ಸಂಸಾರಮಾರ್ಗದ ಕೊನೆಯೆನಿಸಬಹುದಾದ ಮುಕ್ತಿಪದ ಎಂದು ಅರ್ಥವಿದೆ. 'ತದ್ವಿಷ್ಣೋಃ ವ್ಯಾಪನಶೀಲಸ್ಯ ಬ್ರಹ್ಮಣಃ ಪಾರಮಾತ್ಮನೋ ವಾಸುದೇವಾಖ್ಯಸ್ಯ ಪರಮಂ ಪ್ರಕೃಷ್ಟಂ ಪದಂ ಸ್ಥಾನಂ ಸತ್ತತ್ವಮಿತಿ' ಎಂದು ಭಾಷ್ಯ. ಇಲ್ಲಿ ವಿಷ್ಣುಶಬ್ದಕ್ಕೆ ವ್ಯಕ್ತ್ಯರ್ಥ ಸಲ್ಲದು. ಆದರೆ ಪುರಾಣಗಳ ಕಾಲಕ್ಕೆ ವಿಷ್ಣು, ವಾಸುದೇವ, ನಾರಾಯಣ, ಎಲ್ಲ ಒಬ್ಬನೇ ದೇವರ ಹೆಸರುಗಳೆಂದಾಗಿ ಅವನು ಹಲವು ಅವತಾರಗಳನ್ನೆತ್ತಿದ ಕಥೆಗಳು ಹುಟ್ಟಿ ಬೆಳೆದು ಹಬ್ಬಿದುವು.

'ವಿಷ್ಣುರ್ಗೋಪಾ ಅದಾಭ್ಯಃ' ಎಂಬ ವೇದವಾಕ್ಯಕ್ಕೆ ವಿಷ್ಣುವು ಅದಮ್ಯನಾದ ಪಾಲಕನೆಂದು ಅರ್ಥವಾದರೆ ಪುರಾಣಿಕರು 'ಗೋಪ' ಶಬ್ದವನ್ನು ಹಿಡಿದು ಕೃಷ್ಣನು ಗೋಪಾಲಕನಾಗಿದ್ದನೆಂದು ಕಥೆ ಕಟ್ಟಿರಬೇಕೆಂದು ಹಲವರ ಅಭಿಪ್ರಾಯ. ಇಂದ್ರನಿಗೆ 'ಗೋವಿದ್' ಎಂಬ ಹೆಸರು ವೇದಗಳಲ್ಲಿ ಇದೆ. ಗೋವುಗಳನ್ನು ಪತ್ತೆಮಾಡಿದವನು, ಕಂಡುಹಿಡಿದವನು, ಎಂದು ಆ ಮಾತಿಗೆ ಅರ್ಥ, ಪಣಿಗಳು ಇಂದ್ರನ ಹಸುಗಳನ್ನು ಕದಿಯಲು ಬೃಹಸ್ಪತಿ ಸಹಾಯದಿಂದ ಇಂದ್ರನು ಅವರನ್ನು ಪತ್ತೆಮಾಡಿದ ಕಥೆ ಪ್ರಸಿದ್ಧ. 'ಗೋತ್ರಭಿದ್' ಎಂದೂ ಇಂದ್ರನಿಗೆ ಹೆಸರುಂಟು. ದನಗಳ ರೊಪ್ಪಗಳನ್ನು ಭೇದಿಸಿದವನು, ವಶಪಡಿಸಿಕೊಂಡವನು ಎಂದು ಆ ಮಾತಿಗೆ ಅರ್ಥಕಲ್ಪಿಸಿದ್ದಾರೆ. ಆದರೆ ಗೋಶಬ್ದಕ್ಕೆ ಭೂಮಿಯೆಂದೂ ಅರ್ಥವಿರುವುದರಿಂದ ಗೋವಿದನೆಂದರೆ ಹಿರಣ್ಯಾಕ್ಷ ಕದ್ದುಕೊಂಡು ಹೋದ ಭೂಮಿಯನ್ನು ಪತ್ತೆ ಹಿಡಿದವನೆಂದೂ ಅರ್ಥ ಮಾಡಬಹುದಾಗಿದೆ. ಹಾಗೆಯೇ 'ಗೋತ್ರ' ಶಬ್ದಕ್ಕೆ ಗೋವುಗಳನ್ನು ರಕ್ಷಿಸುವ, ಅವುಗಳಿಗೆ ಮೇವು ನೀರುಗಳನ್ನು ಒದಗಿಸುವಂಥ ಬೆಟ್ಟ ಎಂದು ಗ್ರಹಿಸಿದರೆ ಅಂಥ ಬೆಟ್ಟವನ್ನು ವಜ್ರಾಯುಧದಿಂದ ಭೇದಿಸಿದವನು ಇಂದ್ರ. ಈ ಕಲ್ಪನೆಯನ್ನು ಬಳಸಿಕೊಂಡು ವಸುದೇವನು ನಡೆಸಲಿದ್ದ ಇಂದ್ರಯಾಗ, ಅದಕ್ಕೆ ಕೃಷ್ಣನು ಒಡ್ಡಿದ ಅಡ್ಡಿ, ಅದರಿಂದ ಸಿಟ್ಟುಗೊಂಡು ಇಂದ್ರ ಸುರಿಸಿದ ಘೋರವಾದ ವೃಷ್ಟಿ, ಆ ಪರ್ವತವನ್ನೇ ಹಿಡಿದೆತ್ತಿ ಕೃಷ್ಣ ಗೋವುಗಳನ್ನೂ ಗೋಪ ಗೋಪಿಯರನ್ನೂ ರಕ್ಷಿಸಿದ್ದು—ಈ ಕಥೆಗಳನ್ನೆಲ್ಲ ಪ್ರತಿಭಾಶಾಲಿಗಳಾದ ಪುರಾಣಕವಿಗಳು ಕಟ್ಟಿದ್ದಾರೆ. ಶ್ರೀಕೃಷ್ಣ 'ಗೋವಿಂದ' ನಾಗಿದ್ದಾನೆ!

ಹೀಗೆ ಹುಡುಕುತ್ತ ಹೋದರೆ ಭಾಗವತದ ಅನೇಕ ಕಥೆಗಳಿಗೆ ವೇದಗಳಲ್ಲಿ ಮೂಲ ಕಾಣುತ್ತದೆ. ಆದರೆ ಆ ಬೇರಿನಿಂದ ಮೊಳಕೆಯಾಗಿ ಈ ಮಹಾವೃಕ್ಷ ಬೆಳೆದು ನಿಂತ ಅದ್ಭುತವಿಕಾಸ ಕಥೆಯನ್ನು ತಿಳಿಯಲು ಸಾಕಷ್ಟು ಸಾಧನಗಳಿಲ್ಲ. ವೇದಕಾಲದ ಋಷಿಗಳು, ಮಂತ್ರದ್ರಷ್ಟರು, ಬಳಸಿದ ಒಂದು ರೂಪಕವೇ ಒಂದು ದೊಡ್ಡ ಉಪಾಖ್ಯಾನವಾಗಿ ಬೆಳೆದು ಲೋಕಮೋಹಕವಾದ ಕಾವ್ಯವಾಗುತ್ತದೆ.

ನಿತ್ಯಾತ್ಮಶುಕನು ಸಂಸ್ಕೃತ ಭಾಗವತವನ್ನು ಸಕ್ರಮವಾಗಿ ಅನುವಾದ ಮಾಡುವ ದೀಕ್ಷೆಯುಳ್ಳ ಕವಿ. ಮೂಲಕಥೆಯಲ್ಲಿ ಯಾವ ಮಾರ್ಪಾಟನ್ನೂ ಮಾಡುವುದು ಅವನ ಇಚ್ಛೆಯಲ್ಲ. ಭಗವಚ್ಚರಿತ್ರೆಯನ್ನು ಲೋಪವಿಲ್ಲದೆ ಹೇಳಿ ಕೃತಕೃತ್ಯನಾಗಬೇಕೆಂಬ ಹಂಬಲ ನಿತ್ಯಾತ್ಮ ಶುಕನದು. ಆದರೆ ಅವನು ಯಾಂತ್ರಿಕವಾಗಿ ಪದಕ್ಕೆ ಪದವಿಟ್ಟು ಬರೆದ 'ಭಾಷಾಂತರ' ಕಾರನಲ್ಲ. ಶ್ರೀ ಕೃಷ್ಣಕಥೆಯನ್ನು ಆಸೆಯಿಂದ ಮನನ ಮಾಡಿ ಅದರ ಆನಂದವನ್ನು ತಾನು ಅನುಭವಿಸಿ ಆ ಕಥೆಯ ಸವಿಯನ್ನು ಕನ್ನಡಿಗರಿಗೆ ಉಣ ಬಡಿಸಲು ಹೊರಟ ಶ್ರೇಷ್ಠ ಭಕ್ತಕವಿ. ಅಲ್ಲಲ್ಲಿ ಕೆಲವು ಸಣ್ಣ ಪುಟ್ಟ ವ್ಯತ್ಯಾಸಗಳನ್ನು ಮಾಡಿದ್ದರೆ ಅವು ಮೂಲ ಕಥೆಗೆ ಸೊಗಸನ್ನುಂಟು ಮಾಡುವಂಥವೇ ಹೊರತು ಬೇರೆಯಲ್ಲ. ನಿತ್ಯಾತ್ಮನು ತನ್ನ ಪ್ರತಿಭೆ ಪಾಂಡಿತ್ಯಗಳನ್ನು ಮೆರೆಸುವ ಸಲುವಾಗಿ ಸ್ವಾತಂತ್ರ್ಯ ವಹಿಸಿ ಧಾರ್ಷ್ಟ್ಯದಿಂದ ಭಗವದ್ಭಾಗವತರ ಪುಣ್ಯಕಥೆಗಳಲ್ಲಿ ಅನಗತ್ಯವಾದ ಮಾರ್ಪಾಟುಗಳನ್ನು ಮಾಡುವ ಗೋಜಿಗೆ ಹೋಗಿಲ್ಲ.

## ಶ್ರೇಷ್ಠವರ್ಗದ ಅನುವಾದಕ

ಕನ್ನಡ ಭಾಗವತ ಹನ್ನೆರಡುಸಾವಿರಕ್ಕೂ ಹೆಚ್ಚಿನ ಸಂಖ್ಯೆಯ ಪದ್ಯಗಳನ್ನೊಳಗೊಂಡ ಮಹಾಗ್ರಂಥ. ನಿತ್ಯಾತ್ಮ ಶುಕಯೋಗಿಯು ಭಗವದ್ಭಾಗವತರ ಪುಣ್ಯ ಚರಿತ್ರೆಯಿಂದ ಕೂಡಿದ ಈ ಬೃಹದ್ಗ್ರಂಥವನ್ನು ರಚಿಸಿರು

ವುದು ಆತನ ಕನ್ನಡಪ್ರೇಮಕ್ಕೆ ಸಾಕ್ಷಿಯಾಗಿದೆ. ಆತನು ದೇವಭಾಷೆಯೆನಿಸಿಕೊಂಡ ಸಂಸ್ಕೃತವನ್ನರಿಯದ ಸಾಮಾನ್ಯ ಕನ್ನಡಿಗರಿಗೂ, ಸುಲಭವಾಗಿ ತಿಳಿಯುವಂತೆ ಕಾವ್ಯರಚನೆಮಾಡಿ 'ಭವರೋಗಹರ'ವಾದ ಈ ಪುಣ್ಯಕಥೆಯನ್ನು ಕನ್ನಡಲೋಕದಲ್ಲಿ ಯಶಸ್ವಿಯಾಗಿ ಪ್ರಚುರಪಡಿಸಿದ್ದಾನೆ. ಈತನಿಗಿಂತ ಮುಂಚೆ ಯಾವ ಕನ್ನಡ ಕವಿಯೂ ಈ ಸಾಹಸಕ್ಕೆ ಮನಸ್ಸು ಮಾಡಲಿಲ್ಲ. ಆಮೂಲಾಗ್ರವಾಗಿ ಭಾಗವತವನ್ನು ಮೊದಲು ಕನ್ನಡದಲ್ಲಿ ರಚಿಸಿದ ಯಶಸ್ಸು ನಮ್ಮ ನಿತ್ಯಾತ್ಮ ಶುಕಯೋಗಿಯದೇ ಸರಿ.

ನಿತ್ಯಾತ್ಮಶುಕ ಬಹಳ ವಿನಯಶಾಲಿ. ಆತನಿಗೆ ತಾನು ಪಂಡಿತನೆಂಬ ಹೆಮ್ಮೆಯಾಗಲಿ, ಪ್ರೌಢಕವಿ, ಮಹಾ ಪ್ರತಿಭಾಶಾಲಿಯೆಂಬ ಗರ್ವವಾಗಿರಲಿ ಸುತರಾಂ ಇಲ್ಲ. 'ಭಾಗವತದರ್ಥವನು ಸಂಗ್ರಹವಾಗಿ ಬಲ್ಲಂದದಲಿ ಪೇಳುವೆನು' ಎಂದು ಬಹಳ ನಮ್ರತೆಯಿಂದ ಹೇಳಿಕೊಂಡು ಈ ಮಹಾಕೃತಿಯ ರಚನೆಗೆ ತೊಡಗಿದ್ದಾನೆ. ಮಹಾತ್ಮರು ಯಾವಾಗಲೂ ಸ್ವಪ್ರತಿಷ್ಠೆಯನ್ನು ಹೇಳಿಕೊಳ್ಳಲು ಇಷ್ಟಪಡುವುದಿಲ್ಲ. ಪರನಿಂದೆಯಂತೂ ಅವರಿಗೆ ಸರ್ವಥಾ ಹಿಡಿಸದು. ಆದ್ದರಿಂದಲೇ ಕನ್ನಡ ಭಾಗವತದ ಅವತಾರಿಕೆಯಲ್ಲಿ 'ಕುಕವಿನಿಂದೆ' ಇಲ್ಲವೇ ಇಲ್ಲ! ಮುಕ್ತಿಗೆ ಮೂಲಸಾಧನವೆನಿಸಿದ ಅಕೃತಕ ಅಚ್ಯುತಭಕ್ತಿಯ ಹಿರಿಮೆಯನ್ನು ಲೋಗರಿಗೆ ಉಪದೇಶಿಸುವ ಮಹೋದ್ದೇಶದಿಂದ ಪ್ರೇರಿತನಾದ ಈ ಸಾತ್ವಿಕ ಕವಿಗೆ ಇತರ ಲೌಕಿಕವಿಷಯಗಳು ಬಹಳ ಕ್ಷುದ್ರವೆಂದು ತೋರಿರಬೇಕು. ಶ್ರವಣಮಾತ್ರದಿಂದ ಅಖಿಳಜೀವರ ಭವದ ಬೇಗೆಯ ಬೀಜವನ್ನೇ ಬಿಸಿಮಾಡುವಂಥ ಈ ಪಾವನ ಕಥೆಯನ್ನು ಹೇಳುವ ಭರದಲ್ಲಿ ನಿತ್ಯಾತ್ಮ ಶುಕನಿಗೆ ಕವಿಯಶಸ್ಸಿನ ಆಸೆ, ಪಾಂಡಿತ್ಯದ ಹೆಮ್ಮೆ, ಅಲಂಕಾರಶೈಲಿಯ ವ್ಯಾಮೋಹ ಯಾವುದೂ ಮುಖ್ಯವೆನಿಸಿಲ್ಲ. 'ಭುವನಸ್ತುತಮುಪ್ಪನೆಗಟ್ಟಿ, ಪೂಜೆಲಾಭ'ಗಳೆಲ್ಲ ಈ ಭಕ್ತಕವಿಯ ದೃಷ್ಟಿಯಲ್ಲಿ ಕ್ಷುಲ್ಲಕ: 'ನವರಸಾಲಂಕಾರ ಸವನಿಸಲಿ ಮೇಣುಳಿಯಲಿ!' ಅದು ಕವಿಯ ದೃಷ್ಟಿಯಲ್ಲಿ ದೊಡ್ಡ ವಿಷಯವಲ್ಲ. 'ಅಘವನ ಪವನಮಿತ್ರಚರಿತ್ರ ಪವಿತ್ರ'ವೆನಿಸಿದ ಕಾವ್ಯ ಲೋಕಪೂಜ್ಯ. ಅಂಥ ಕಾವ್ಯರಚನೆಯೇ ನಿತ್ಯಾತ್ಮ ಶುಕಯೋಗಿಯ ಏಕೈಕವಾದ ಧ್ಯೇಯ, 'ಕವಿತೆಗದುವೇ ಫಲವಲಾ!' 'ಮಿಕ್ಕವರ ವರ್ಣನೆ ವಿಫಲ' ಭಗವಂತನ ಚರಿತ್ರೆಯಲ್ಲದೆ ಇತರರ ಕಥೆ ಹೇಳತೊಡಗುವುದು ಆತನಿಗೆ ಸರ್ವಥಾ ಸಮ್ಮತವಲ್ಲ. 'ವಾಯಸನಿವಹನಿರ್ಮಿತ ತೀರ್ಥ ಹಂಸನಿಷೇವ್ಯವಲ್ಲ!' ಆದ್ದರಿಂದ ಭಾಗವತಕವಿಗೆ ಐಹಿಕ ಭೋಗಭಾಗ್ಯಗಳ ಚಿಂತನೆಯಾಗಲಿ, ರಾಜಪೂಜೆಯ ಹಂಬಲವಾಗಲಿ ಎಷ್ಟು ಮಾತ್ರವೂ ಇಲ್ಲ. ಆತನ ಕಾವ್ಯದಲ್ಲಿ ವ್ಯಾಸ ಶುಕರಿಬ್ಬರ ಹೊರತು ಬೇರಾವ ಸಂಸ್ಕೃತ ಕವಿಯ ಸುದ್ದಿಯಾಗಲಿ ಕನ್ನಡಕವಿಯ ಪ್ರಸ್ತಾಪವಾಗಲಿ ಇಲ್ಲ.

ಭಾಗವತ ಪುರಾಣವನ್ನು ಲೋಕಕ್ಕೆ ನೀಡಿದ ವ್ಯಾಸ ಶುಕರಿಬ್ಬರನ್ನು ಕವಿ ಮುಕ್ತಕಂಠದಿಂದ ಹೊಗಳಿ ಭಕ್ತಿಯ ವಂದನೆ ಸಲ್ಲಿಸಿದ್ದಾನೆ. 'ಎರಡು ತೋಳಿನ ವಿಷ್ಣು, ಮುಖವೊಂದರಲಿ ಮೆರೆವ ಬ್ರಹ್ಮ, ನೊಸಲಲಿ ವರನಯನವೊಂದಿಲ್ಲದಾ ಸಾಕ್ಷಾತು ಪರಮಶಿವ' ಎಂದು ವರ್ಣಿಸಿ ಶ್ರೀವ್ಯಾಸಮಹರ್ಷಿ ತ್ರಿಮೂರ್ತಿಸ್ವರೂಪನೆಂದು ಹೇಳಿ ಭಕ್ತಿಯಿಂದ ಸ್ತುತಿಸಿದ್ದಾನೆ. ವ್ಯಾಸಭಗವಾನರು ಭಾಗವತ ರಚನೆಮಾಡಿ 'ಧರೆಯ ಜೀವರ ಜನನ ಮರಣಾಂಕುರ ಕುಠಾರ'ರಾದರೆಂದೇ ನಿತ್ಯಾತ್ಮಶುಕನ ಅವಿಚಲವಾದ ನಂಬಿಕೆ. ವ್ಯಾಸರಿಂದ ಉಪದೇಶ ಪಡೆದು ಪರಮಭಾಗವತೋತ್ತಮನಾದ ಶುಕಮಹರ್ಷಿ ಈ ಪುರಾಣತಿಲಕವನ್ನು ಆಸನ್ನಮರಣನಾಗಿದ್ದ ಪರೀಕ್ಷಿತ ಮಹಾರಾಜನಿಗೆ ಉಪದೇಶಿಸಿ ಆತನ ಎಲ್ಲ ಭಯಗಳನ್ನೂ ನಿವಾರಿಸಿ ಮೋಕ್ಷಕ್ಕೆ ಕಳುಹಿಸಿ 'ಕರುಣಾಳುಗಳ ದೇವ'ನೆನಿಸಿಕೊಂಡನು! ಈ ಇಬ್ಬರು ಮಹಾ ಋಷಿಗಳ ಸ್ಮರಣೆ ಮಾಡಿ ವಂದನೆ ಸಲ್ಲಿಸಿ ನೇರವಾಗಿ ಭಾಗವತರಚನೆಗೆ ಆರಂಭಿಸಿದ್ದಾನೆ, ನಮ್ಮ ಕನ್ನಡ ಕವಿ.

ಭಾಗವತ ಪರಮ ಪುರುಷೋತ್ತಮನ ಲೀಲಾ ಚರಿತ್ರೆ. ಇಚ್ಛಾಮಾತ್ರದಿಂದ ಸೃಷ್ಟಿಸ್ಥಿತಿಲಯಗಳನ್ನು ನಡೆಸಬಲ್ಲ ಭಗವಂತನು ಈ ಮಾನವಲೋಕದಲ್ಲಿ ಧರ್ಮಸಂಸ್ಥಾಪನೆ ಮಾಡುವ ಸಲುವಾಗಿ ಹಲವು ಸಲ ವಿವಿಧ ರೂಪಗಳಲ್ಲಿ ಅವತರಿಸಿದ ಲೋಕೋತ್ತರವಾದ ಅದ್ಭುತ ವೃತ್ತಾಂತ ಈ ಪುರಾಣಕಾವ್ಯದ ವಸ್ತು. ಜಗದುದರನಾದ ಮಹಾವಿಷ್ಣುವಿನ ಅವತಾರಸಂಖ್ಯೆಯನ್ನು ಯಾರು ತಾನೆ ನಿರ್ಣಯಿಸಿ ಹೇಳಬಹುದು? ಭೃಗ್ವಾದಿಗಳು, ಸುರನರವರರು, ಮನ್ವಾದಿಗಳು ಸಹ ಆ ಹರಿಯ ಅಂಶಾಂಶ ಸಂಭವರು. ಅವರಲ್ಲೆಲ್ಲ ಯಾದವ ಶಿರೋಮಣಿಯಾದ ಶ್ರೀಕೃಷ್ಣನು ಸಾಕ್ಷಾದ್ವಿಷ್ಣುವೇ ಸರಿ! ಲೋಕಕಂಟಕರಾಗಿ ಹೆಚ್ಚಿಕೊಂಡ ಕಂಸ ಶಿಶುಪಾಲಾದಿ ದಾನವರನ್ನು ಸಂಹರಿಸಿ ಭೂಭಾರವನ್ನು ಪರಿಹರಿಸುವುದಕ್ಕಾಗಿ ಈ ಲೋಕದಲ್ಲಿ ಲೀಲಾಮೂರ್ತಿಯಾಗಿ ಅವತರಿಸಿ ದನುಜವೈರಿಯೆನಿಸಿಕೊಂಡ ಮಹಾವಿಷ್ಣುವಿನ ದಿವ್ಯಕಥೆಯೇ ಭಾಗವತದ ಹತ್ತನೆಯ ಸ್ಕಂಧದ ವಸ್ತು. ಈ ಸ್ಕಂಧ ಆ ದೇವ

ಮಾನವನ ಅನೇಕಾನೇಕ ಅದ್ಭುತ ರಮ್ಯ ಕಥಾನಕಗಳಿಂದ ತುಂಬಿ ಲೋಕಮೋಹಕವಾಗಿದೆ.

ವಿವಿಧ ಮನೋವೃತ್ತಿಯ ವಿಭಿನ್ನ ಸಂಸ್ಕೃತಿಗಳ ಹಲವು ಬಗೆಯ ಜನರ ಜೀವನ ಚಿತ್ರಗಳಿಂದ ತುಂಬಿ ಭಾಗವತ ಕಥೆಗಳ ಒಂದು ದೊಡ್ಡ ಗಣಿಯಂತೆ ಇದೆ. ಇದರಲ್ಲಿ ಲೋಕೋದ್ಧಾರಕನಾದ ಭಗವಂತನ ಚರಿತ್ರೆಯೇ ಅಲ್ಲದೆ ಅನೇಕ ಭಾಗವತೋತ್ತಮರ ಪಾವನ ಕಥೆಗಳೂ ಇವೆ. ಅಕ್ರೂರ, ಉದ್ಧವ, ಕುಚೇಲ, ಮುಚುಕುಂದ, ಮೊದಲಾದ ಮಹಾಭಕ್ತರ ಸಾಧನೆ ಸಿದ್ಧಿಗಳ ವೃತ್ತಾಂತವನ್ನು ಇಲ್ಲಿ ತಿಳಿಯಬಹುದಾಗಿದೆ. ಹಾಗೆಯೇ ಕಂಸ ಜರಾಸಂಧ ಶಿಶುಪಾಲ ದಂತವಕ್ತ್ರನೇ ಮೊದಲಾದ ಅನೇಕ ದೈತ್ಯರು ಭಗವಂತನೊಡನೆ ವೈರಸಾಧನೆಗೆ ಹವಣಿಸಿದ ಕಥೆಗಳೂ ಇಲ್ಲಿವೆ. ಸರಳ ಜೀವಿಗಳಾದ ಮುಗ್ಧ ಗೋಪ ಗೋಪಿಯರ ನಡುವೆ ಶಿಶು ಕೃಷ್ಣನು ನಕ್ಕು ನಗಿಸಿ ನಲಿದು ಬೆಳೆದ ಕಥೆ ಇಲ್ಲಿದೆ. ಗೋಪಿಯರ ಅಕುಟಿಲವಾದ ಕೃಷ್ಣಭಕ್ತಿಯ ಮಧುರ ಚಿತ್ರಣ ಭಾಗವತದ ಒಂದು ಸುಂದರ ಭಾಗ. ಶ್ರೀ ಕೃಷ್ಣನು ಗೋಪಬಾಲಕನಾಗಿ ಇತರ ಹುಡುಗರೊಡನೆ ಬೆರೆತು ವನವನಾಂತರಗಳಲ್ಲಿ ಸಂಚರಿಸಿ ಅವರ ಜೀವನದ ಕಷ್ಟ ಕಾರ್ಪಣ್ಯಗಳನ್ನು ಹೋಗಲಾಡಿಸಲು ಹೆಣಗಿ ಗೋವರ್ಧನೋದ್ಧಾರ ಕಾಳೀಯ ಮರ್ದನಾದಿಗಳನ್ನು ಮಾಡಿದ ರೋಮಾಂಚಕಾರಿಯಾದ ಸಾಹಸ ಕಥೆಗಳು ಇದರಲ್ಲಿವೆ. ಶಿಶು ಶ್ರೀ ಕೃಷ್ಣನ ಲೀಲಾವಿನೋದಗಳನ್ನು ಭಾಗವತಕಾರನು ಓದುಗರ ಚಿತ್ತಾಪಹಾರಕವಾದ ರೀತಿಯಲ್ಲಿ ಯಥೇಷ್ಟವಾಗಿ ವರ್ಣಿಸಿದ್ದಾನೆ.

ಶ್ರೀ ಕೃಷ್ಣನು ಇನ್ನೂ ಹಸುಳೆಯಾಗಿದ್ದಾಗಲೆ ಪೂತನಾ ಮೊದಲಾದ ಅನೇಕಾನೇಕ ದೈತ್ಯರನ್ನು ಲೀಲಾಜಾಲವಾಗಿ ಕೊಂದ ಅದ್ಭುತ ಚರಿತ್ರೆಯನ್ನು ನಿರೂಪಿಸುವಾಗ ಕವಿ ನಮ್ಮನ್ನು ದ್ವಾಪರ ಯುಗಕ್ಕೆ ಕೊಂಡೊಯ್ದು ಗೋಕುಲದಲ್ಲಿ ನಿಲ್ಲಿಸುತ್ತಾನೆ. ಕೃಷ್ಣಲೀಲಾ ವಿನೋದಗಳು ನಮ್ಮ ಚಿತ್ತಫಲಕದ ಮೇಲೆ ಚಿತ್ರಿತವಾಗುತ್ತವೆ. ನಿತ್ಯಾತ್ಮ ಶುಕನ ಮಾತಿನ ಮೋಡಿಗೊಳಗಾದ ನಾವು ಪರವಶರಾಗಿ ಬಾಹ್ಯ ಪ್ರಪಂಚವನ್ನು ಮರೆಯುವಂತಾಗುತ್ತದೆ. ನಮ್ಮ ಮನಸ್ಸು ಕಾವ್ಯಸಮಾಧಿ ಹೊಂದುತ್ತದೆ. ಗೋಕುಲದ ಯಶೋದೆ, ಬಾಲಕೃಷ್ಣ, ಗೋಪ ಗೋಪಿಯರು, ಎಲ್ಲ ನಮ್ಮ ಒಳಗಣ್ಣಿನ ಮುಂದೆ ಎದ್ದು ನಿಲ್ಲುತ್ತಾರೆ!

ದೇವಕಿಯ ಮದುವೆಯ ಮೆರವಣಿಗೆಯ ಸಮಯದಲ್ಲಿ ಅಶರೀರ ವಾಣಿಯೊಂದು ಅವಳ ಅಷ್ಟಮ ಗರ್ಭ ಸಂಜಾತನ ದೆಸೆಯಿಂದ ಕಂಸನು ಮರಣ ಹೊಂದುವನೆಂದು ಘೋಷಿಸಿದಾಗ ಕನ್ನಡ ಕವಿ

ಮಂಗಳದ ಬೆಳೆಗೈಯಲಕಟಕ
ಟಂಗಳದ ಮಳೆಗಱೆದ ತೆರನಾ
ಯ್ತು'

ಎಂದು ವರ್ಣಿಸಿ ಬಹಳ ಮನೋಜ್ಞವಾದ ಉಪಮಾನ ಹೇಳಿ ಆ ಸಮಯದಲ್ಲಿ ಅಲ್ಲಿನ ಜನರ ಸಂಭ್ರಮ ಉತ್ಸಾಹಗಳಿಗುಂಟಾದ ಘೋರ ಆಘಾತದ ಚಿತ್ರವು ನಮ್ಮ ಕಣ್ಣಿಗೆ ಕಟ್ಟಿದಂತೆ ಮಾಡಿದ್ದಾನೆ. ಮೂಲದಲ್ಲಿ ಇಂಥಾದ್ದೇನೂ ಇಲ್ಲದೆ ಆ ಆಕಾಶವಾಣಿಯಿಂದ ಕೆರಳಿದ ಕಂಸನು ತಂಗಿಯನ್ನು ಕೊಲ್ಲಲು ಉದ್ಯುಕ್ತನಾದನೆಂದು ಮಾತ್ರ ಹೇಳಿದೆ. ಇಲ್ಲಿ ಕನ್ನಡ ಕವಿಯ ಸಮಯೋಚಿತವಾದ ಸುಂದರ ವರ್ಣನಾಸಾಮರ್ಥ್ಯ, ಸಾರ್ಥಕವಾದ ಉಪಮಾನಿರೂಪಣಶಕ್ತಿಗಳು ಪ್ರಕಾಶಕ್ಕೆ ಬಂದಿವೆ.

ಇತ್ಯುಕ್ತಃ ಸ ಖಲಃ ಪಾಪೋ ಭೋಜಾನಾಂ ಕುಲಪಾಂಸನಃ |
ಭಗಿನೀಂ ಹಂತುಮಾರಬ್ಧಃ ಖಡ್ಗಪಾಣಿಃ ಕಚೇಽಗ್ರಹೀತ್ ||

ಎಂದಿಷ್ಟು ಮಾತ್ರ ಮೂಲದಲ್ಲಿದ್ದರೆ ಕನ್ನಡ ಕವಿ ಕಂಸ ವಸುದೇವರ ನಡುವೆ ದೀರ್ಘವಾದ ಬಿರುಸು ಮಾತಿನ ವಿವಾದವನ್ನೇ ನಡೆಯಿಸಿದ್ದಾನೆ. ಆ ಸನ್ನಿವೇಶದಲ್ಲಿ ಅಂಥ ವಿವಾದವೇ ಹೆಚ್ಚು ಸಮಂಜಸವೆನಿಸುತ್ತದೆ. ಕಂಸನು 'ಸ್ವಾರ್ಥೋನ್ಮೂಲಿತ ಸೌಹೃದ' ನಾಗಿ ಅಶರೀರವಾಣಿಯ ದೆಸೆಯಿಂದ ಮಹಾ ಕ್ರೂರಿಯಾಗಿ ನಿರಪರಾಧಿನಿಯಾದ ದೇವಕಿಯ ಪ್ರಾಣಕ್ಕೆ ಸಂಚಕಾರ ತರಲು ಸಿದ್ಧನಾಗಿ 'ತಂಗಿಯೋ ತನ್ನೊಡಲ ಕೇಡಿನ ಸಿಂಗಿಯೋ' ಎಂದು ಆರ್ಭಟಿಸಿ ಖಡ್ಗವೆತ್ತಿದಾಗ ಆಗ ತಾನೆ ದೇವಕಿಯನ್ನು ಮದುವೆಯಾಗಿದ್ದ ವಸುದೇವ ಅಡ್ಡ ಬರಬೇಕಾಯಿತು! ಆ ಸಮಸ್ತ ಬಂಧುಸಮೂಹದಲ್ಲಿ ಕಂಸನಿಗೆ ಬುದ್ಧಿ ಹೇಳಬಲ್ಲ ಧೀರರಿನ್ನಾರೂ ಇರಲಿಲ್ಲ! ಆಗ ಮದುವಣಿಗನೇ ಅಡ್ಡ ಬಂದು 'ಹೆಂಗೊಲೆ ವೀರರಿಗೆ ವೈಸಿರಿಯೆ?' ಎಂದು ಪ್ರಾರಂಭಿಸಿ ಜೀವನ ಮರಣಗಳನ್ನು ಕುರಿತು ಸಣ್ಣ ಉಪದೇಶ ಭಾಷಣವನ್ನೇ ಮಾಡಿದ್ದಾನೆ. ಕನ್ನಡ ಕಂಸನು ವಸುದೇವನ ಉಪದೇಶವನ್ನು ಅವಹೇಳನಮಾಡಿದ್ದಾನೆ. ಸಂಸ್ಕೃತ ಭಾಗವತದ ಕಂಸನಂತೆ ಇವನು ಮಾತನ್ನೇ ಆಡದೇ ಇರಲಿಲ್ಲ!

ಆರು ಹೇಳಿದರಾತ್ಮವಿದ್ಯೆಯ
ಸಾರವನು ನಿನಗಿದನು ನಿನ್ನೀ
ನಾರಿಗುಪದೇಶಿಸುವುದೊಡಲಿದು ನಿತ್ಯವಲ್ಲೆಂದು
ಆರು ಕೊಲುವರು ಕೊಲಿಸಿ ಕೊಂಬವ
ರಾರು ಸಾರೆಲವೊ ಕೊಂದಡೆ
ಸಾರಲಜ್ಞೆಯದು ತನಗೆ ಪಾತಕವೆಂದು ಖಳ ಜಱೆದ

ಹೀಗೆ ಕಂಸನು ವಸುದೇವನನ್ನು ಅಣಕಿಸಿ ಮಾತನಾಡಿರುವುದು ಹೆಚ್ಚು ಸಮಯೋಚಿತವಾಗಿದ್ದು ಕಂಸನ ಅಸುರ ಸ್ವಭಾವದ ಸ್ಪಷ್ಟ ಚಿತ್ರವನ್ನು ಮೂಡಿಸುತ್ತದೆ.

ಮುಂದೆ ದೇವಕಿಯು ಮಕ್ಕಳ ವಿಷಯ ಹೇಳಹೊರಟು ಮೂಲ ಭಾಗವತದಲ್ಲಿ

ಅಥ ಕಾಲ ಉಪಾವೃತ್ತೇ ದೇವಕೀ ಸರ್ವದೇವತಾ ।
ಪುತ್ರಾನ್ ಪ್ರಸುಷುವೇ ಚಾಷ್ಟೌ ಕನ್ಯಾಂ ಚೈವಾನುವತ್ಸರಂ ॥

'ಕಾಲ ಕ್ರಮದಲ್ಲಿ ದೇವಕಿಯು ವರ್ಷ ವರ್ಷವೂ ಎಂಟು ಮಂದಿ ಗಂಡುಮಕ್ಕಳನ್ನೂ ಒಬ್ಬ ಹೆಣ್ಣು ಮಗಳನ್ನೂ ಹೆತ್ತಳು' ಎಂದು ಸರ್ವಸಾಧಾರಣ ರೀತಿಯಲ್ಲಿ, ವೃತ್ತ ಪತ್ರಿಕೆಯ ವರದಿಯಂತೆ ಹೇಳಿದ್ದರೆ ಕನ್ನಡ ಭಾಗವತ ಕಾರನು 'ಬಳಿಕ ಕಾಲಾಂತರಕೆ ಸತಿ ಮಕ್ಕಳನು ನೆಱೆ ದಂಡಕ್ಕೆ ಧನವನು ಗಳಿಸುವಂತಳಲುತ್ತ ಪಡೆದಳು ಪಾಪ ಕೋಪಮರ' ಎಂದುನುಡಿದು ಸ್ವಾರಸ್ಯವನ್ನು ಹೆಚ್ಚಿಸಿದ್ದಾನೆ. ದೇವಕಿಯ ಆ ಮಕ್ಕಳು ಮಹಾ ತೇಜಸ್ವಿಗಳಾಗಿದ್ದ ರೆಂದು ಸೂಚಿಸಿರುವುದಲ್ಲದೆ ಅವುಗಳನ್ನು ಪಡೆದದ್ದು ಕೇವಲ ಕಂಸನಿಗೆ ಬಲಿಕೊಡುವುದಕ್ಕೇ ಎಂಬುದನ್ನು 'ದಂಡಕ್ಕೆ ಧನವ ಗಳಿಸುವಂತೆ' ಎಂಬ ಉಪಮಾನದಿಂದ ಒತ್ತಿ ಹೇಳಿದ್ದಾನೆ.

ವಸುದೇವ ತನ್ನ ಮೊದಲ ಮಗನಾದ ಕೀರ್ತಿಮಾನನನ್ನು ಹಿಂದೆ ತಾನು ಹೇಳಿದ್ದ ಪ್ರಕಾರ ಎತ್ತಿ ಕೊಂಡು ಹೋಗಿ ಕಂಸನಿಗೆ ಒಪ್ಪಿಸಿದ ಸನ್ನಿವೇಶದಲ್ಲಿ ಕಂಸ ಮನಸ್ಸಿನಲ್ಲಿ ವಸುದೇವನ ಸತ್ಯಪರತೆಯನ್ನು ಮೆಚ್ಚಿ ಕೊಂಡರೂ ಹೊರಗೇನೂ ಹೇಳದೆ ಆ ಮಗುವನ್ನು ಹಿಂದಕ್ಕೆ ಕೊಟ್ಟು ಕಳುಹಿಸಿದನೆಂದು ಮೂಲದಲ್ಲಿ ಹೇಳಿದೆ. ಆದರೆ ಕನ್ನಡದಲ್ಲಿ ಕಂಸನು ವಸುದೇವನನ್ನು ಬಾಯಿ ತುಂಬ ಹೊಗಳಿದ್ದಾನೆ.

ದೇವನೋ ಠಕ್ಕಿಲ್ಲದಿಹ ವಸು
ದೇವ ನೀನಕಟಾತ್ಮ ವಿದ್ಯಾ
ಕೋವಿದರ ಕುಲದೈವವೋ ಶಿವಶಿವ ಮಹಾದೇವ
ಆವನಲಿ ದೊರಕೊಂಬುದೀ ಸ
ತ್ಯಾವಲಾಂಬನ ಧೈರ್ಯವೀ ದೃಢ
ಭಾವವೀ ಪರಿತೋಷವೀ ನಿರ್ವ್ಯಾಕುಲತೆ ತಾನೆಂದ
ಕಂಡೆ ನಾನೀ ನಿನ್ನ ಸತ್ಯದ
ಗಂಡುಗಲಿತನದಿರವನೇತಕೆ
ಕೊಂಡು ಹೋಗೀ ಶಿಶುವನಳಲಿಸಲೇಕೆ ತಂಗಿಯನು
ಚಂಡಿಯೇನುಳಿದೇಳು ಮಕ್ಕಳ
ಕೊಂಡು ಫಲವೇನೆನಗೆ ಕಾಲನ
ದಂಡನಹನೆಂಟನೆಯ ಗರ್ಭದ ಶಿಶುವಲಾಯೆಂದ

ಕಂಸನ ಈ ಹೊಗಳಿಕೆ ಅವನ ದೈತ್ಯ ಪ್ರವೃತ್ತಿಗೆ ಅನುಗುಣವಾಗಿದೆ. ಮೆಚ್ಚಿಗೆಯಾದಾಗ ಅತಿ ಹೆಚ್ಚಿನ ಹೊಗಳಿಕೆ, ಕೋಪ ಬಂದಾಗ ನೀತಿ ನಿಯಮಗಳನ್ನೆಲ್ಲ ಗಾಳಿಗೆ ತೂರಿ ಮೇರೆಯಿಲ್ಲದ ಕ್ರೌರ್ಯವನ್ನು ತೋರುವಿಕೆ, ಇದಲ್ಲವೆ, ದೈತ್ಯ ಲಕ್ಷಣ? ಕಂಸನ ಉದ್ರೇಕ ಸ್ವಭಾವವನ್ನು ನಿತ್ಯಾತ್ಮ ಶುಕನು ಬಹಳ ಸ್ವಾರಸ್ಯ ವಾಗಿ ಚಿತ್ರಿಸಿದ್ದಾನೆ. ಆದರೆ ಮೂಲಕಥೆಯ ಎಲ್ಲೆಕಟ್ಟನ್ನು ಮೀರದೆ ಪಾತ್ರಗಳ ಗುಣಶೀಲ ನಿರೂಪಣೆಗೆ ಸಹಾಯಕವಾಗುವಂತೆ ಕೆಲವು ಸಣ್ಣ ಪುಟ್ಟ ಸವರಣೆಗಳನ್ನು ಮಾಡಿ ಮೂಲ ಕೃತಿಗೆ ಕನ್ನಡದ ಮೆರುಗು

ಕೊಟ್ಟಿದ್ದಾನೆ. ಮೂಲ ಗ್ರಂಥದ ಯಾವ ಉಪಾಖ್ಯಾನವನ್ನೂ ಈತನು ಕೈಬಿಟ್ಟಿಲ್ಲ, ಆದರ ಯಾವ ಕಲ್ಪನೆಯನ್ನೂ ಕನ್ನಡಕ್ಕೆ ತರದೆ ಮರೆತಿಲ್ಲ. ಮೂಲದಲ್ಲಿ ಕೆಲವು ಕಡೆ ಸೂತ್ರಪ್ರಾಯವಾಗಿರುವ ವಾಕ್ಯಗಳಿಗೆ ನಿತ್ಯಾತ್ಮ ಶುಕನು ಕೊಂಚವಟ್ಟಿಗೆ ಭಾಷ್ಯವನ್ನು ರಚಿಸಿದ್ದಾನೆ. ಹೀಗೆ ವಿಸ್ತರಿಸಿ ಹೇಳಿರುವುದರಿಂದ ಕನ್ನಡ ಭಾಗವತ ದಶಮಸ್ಕಂಧ ೧೦೩ ಸಂಧಿಗಳಷ್ಟು ದೀರ್ಘವಾಗಿ ಬೆಳೆದಿದೆ. ಮೂಲದಲ್ಲಿ ತೊಂಬತ್ತು ಸಂಧಿಗಳು ಮಾತ್ರ ಇವೆ.

ಹೇಳ ಹೊರಟ ವಿಷಯವನ್ನು ಹೆಚ್ಚು ಸ್ಪಷ್ಟಪಡಿಸುವುದಕ್ಕಾಗಿ ಕನ್ನಡ ಕವಿಯು ನಾಡ ಗಾದೆಗಳನ್ನು ಧಾರಾಳವಾಗಿ ಬಳಸಿದ್ದಾನೆ. ಇಂದ್ರಯಾಗದ ಪ್ರಯತ್ನವನ್ನು ಕಂಡು ಅದರ ಉದ್ದೇಶ, ಅಭಿಮಾನದೇವತೆ, ಯಾಗವಿಧಾನ ಮುಂತಾದ ಸಂಗತಿಗಳನ್ನು ವಿಚಾರಿಸಿದ ಶ್ರೀ ಕೃಷ್ಣನಿಗೆ ನಂದನು ಲೋಕಕ್ಕೆ ಮಳೆಗರೆದು ತೃಣಜಲ ಸಸ್ಯ ಸಮೃದ್ಧಿಯನ್ನುಂಟುಮಾಡುವ ಇಂದ್ರನ ಸಂತೋಷಾರ್ಥವಾಗಿ ಈ ಯಾಗವೆಂದು ಹೇಳಲು ಶ್ರೀ ಕೃಷ್ಣನು ಮಳೆ ಪ್ರಕೃತಿ ವ್ಯಾಪಾರವಾಗಿದ್ದು ಅದಕ್ಕಾಗಿ ಇಂದ್ರನನ್ನು ಪೂಜಿಸುವ ಪ್ರಮೇಯವಿಲ್ಲವೆಂದು ವಾದಿಸುವಾಗ 'ಗ್ರಾಮಶಾಂತಿಗೆ ಬೋಳಿಸುವನೇ ಮಂಡೆಯನು ತಳವಾರನಾರಿಂಗೋಸುಗಿಂದ್ರನು ಮಳೆಗಳನು ಕರೆವ' ಎಂದು ಪ್ರಶ್ನಿಸಿದ್ದಾನೆ. ಈ ಮಂಡೆ ಬೋಳಿಸಿಕೊಳ್ಳುವ ತಳವಾರನ ಸುದ್ದಿ ಸಂಸ್ಕೃತ ಭಾಗವತದಲ್ಲಿಲ್ಲ. ಆದರೆ ಇದು ಅರ್ಥಸ್ಪಷ್ಟೀಕರಣಕ್ಕೆ ಬಹಳ ಸಹಾಯಕವಾಗಿರುವುದು ಸ್ವಯಂವೇದ್ಯವಾಗಿದೆ.

ಶ್ರೀ ಕೃಷ್ಣಶಿಶುವನ್ನು ಕೊಲ್ಲಲು ಗೋಕುಲಕ್ಕೆ ಮೊದಲು ಬಂದವಳು ಪೂತನಿ. ಅವಳು ಮಹಾ ಮಾಯಾವಿದೆ. ತನ್ನ ಘೋರ ರೂಪವನ್ನು ಮರೆಮಾಚಿಕೊಂಡು, ಗಂಡನ ಬಳಿಗೆ ಬರುವ ಮಹಾಲಕ್ಷ್ಮಿಯಂತೆ ಅಲಂಕರಿಸಿಕೊಂಡು ಬಂದಳಂತೆ! ಅವಳು ನಂದನ ಅರಮನೆಯನ್ನು ಹೊಕ್ಕು ತೊಟ್ಟಲಲ್ಲಿ ಮಲಗಿದ್ದ ಶ್ರೀ ಕೃಷ್ಣನನ್ನು ಕಂಡು ಮೋಹದ ತಾಯಿಯೋಪಾದಿಯಲ್ಲಿ ನಟಿಸುತ್ತ ಆ ಮಗುವನ್ನೆತ್ತಿ ತನ್ನ ತೊಡೆಯ ಮೇಲೆ ಮಲಗಿಸಿಕೊಂಡಳಂತೆ. ಈ ಸಂಗತಿಯನ್ನು ಹೇಳುತ್ತ ಮೂಲ ಭಾಗವತಕರ್ತರು ಹೀಗೆ ಬರೆದಿದ್ದಾರೆ :—

ತಾಂ ತೀಕ್ಷ್ಣಚಿತ್ತಾಮತಿವಾಮಚೇಷ್ಟಿತಾಂ
ವೀಕ್ಷ್ಯಾಂತರಾಕೋಶಪರಿಚ್ಛದಾಸಿವತ್ |
ವರಸ್ತ್ರಿಯಂ ತತ್ಪ್ರಭಯಾ ಚ ಧರ್ಷಿತೇ
ನಿರೀಕ್ಷಮಾಣೇ ಜನನೀ ಅತಿಷ್ಠತಾಂ || (10-6-9)

(ಚರ್ಮದ ಒರೆಯಲ್ಲಿ ಮುಚ್ಚಿರುವ ಹರಿತವಾದ ಕತ್ತಿಯೋಪಾದಿಯಲ್ಲಿ ಸುಂದರ ವೇಷಧಾರಿಣಿಯಾದ ಆ ರಕ್ಕಸಿಯ ಅಂದ ಚಂದಗಳಿಂದ ಬೆರಗಾದ ಯಶೋದೆ ದೇವಕಿಯರು ಅದನ್ನು ನೋಡುತ್ತ ತೆಪ್ಪನಿದ್ದರು). ಇಲ್ಲಿ ಯಶೋದೆ ಮನೆಯಲ್ಲಿರುವಾಗಲೇ ಪೂತನಿ ಅಲ್ಲಿಗೆ ಬಂದಿದ್ದಳೆಂದೂ ತಾಯಿ ನೋಡುತ್ತಿದ್ದ ಹಾಗೆಯೇ ಆ ಮಗುವಿಗೆ ಸ್ತನ್ಯಪಾನಮಾಡಿಸಲು ಸಿದ್ಧಳಾದಳೆಂದೂ ಸ್ಪಷ್ಟವಾಗಿದೆ! ಇದು ಅಷ್ಟು ಸಮಂಜಸವಾಗಿ ತೋರುವುದಿಲ್ಲ. ತಾಯಿ ಎದುರಿಗಿರುವಾಗ ಅನ್ಯಸ್ತ್ರೀ ಅದೆಷ್ಟೇ ತೇಜಸ್ವಿನಿಯಾದರೂ ಮಗುವಿಗೆ ಸ್ತನ್ಯಕೊಡುವ ಸ್ವಾತಂತ್ರ್ಯ ವಹಿಸಿಯಾಳೆ? ಹಾಗೆ ಸ್ವತಂತ್ರಿಸಿದರೆ ಮಗುವಿನ ತಾಯಿ ಸಹಿಸಿಕೊಂಡು ಸುಮ್ಮನಿರುವುದುಂಟೆ? ನಿತ್ಯಾತ್ಮಶುಕ ಇದನ್ನು ಗ್ರಹಿಸಿ ಪೂತನಿ ಯಶೋದೆಯಿಲ್ಲದ ಹೊತ್ತು ಸಾಧಿಸಿ ಅವಳ ಮನೆಯನ್ನು ಕಳ್ಳತನದಿಂದ ಪ್ರವೇಶಿಸಿದಳೆಂದು ಕಲ್ಪಿಸಿದ್ದಾನೆ. 'ದಾಡೆಯಿಲ್ಲದ ದುಷ್ಟೆ ಹೊಕ್ಕಳು ನಂದನಾಲಯವ | ಮಾಡಹೋಗಿರೆ ತಾಯಿ ಕೆಲಸವನೂಡಿ ಕೊಲುವೆನು ವಿಷವ ನೆನುತವೆ ಮೂಡಿದೊರೆಯ ಕಠಾರಿಯಂತೆ ಕಠೋರ ಭಾವದಲಿ!' ಯಶೋದೆ ಕಾರ್ಯಾಂತರಕ್ಕಾಗಿ ಮನೆಯಿಂದ ಹೊರಗೆ ಹೋಗಿದ್ದಾಗ ಪೂತನಿ ಬಂದು ತನ್ನ ಶಿಶುಮಾರಣ ಕಾರ್ಯಕ್ಕೆ ತೊಡಗಿದಳೆಂದು ಹೇಳಿರುವುದು ಹೆಚ್ಚು ಸಮಂಜಸವಾಗಿದೆ. ಕೃಷ್ಣ ಸ್ತನ್ಯದ ಜತೆಯಲ್ಲಿ ಪೂತನಿಯ ಪ್ರಾಣವನ್ನೂ ಹೀರಲು ಅವಳು ನಿಜ ಸ್ವರೂಪದಲ್ಲಿ ಸತ್ತು ಬೀಳುವಳು. ಆಗ ಅವಳ ಬೃಹದಾಕೃತಿಯ ಶರೀರದ ಮೇಲೆ ಹಸುಳೆ ಕೃಷ್ಣನು ಹೊರಳಾಡುತ್ತಿರುವುದನ್ನು ಕಂಡು ಗೋಪಿಯರು ಗಾಬರಿಯಿಂದ ಆ ಕೂಸನ್ನು ಯಶೋದೆಗೆ ಒಪ್ಪಿಸಿದರು. ಅವರೆಲ್ಲ ಸೇರಿ ಮಗುವಿಗೆ ಬಗೆ ಬಗೆಯ ಶಾಂತಿ ಕರ್ಮಗಳನ್ನು ಮಾಡಿದರಂತೆ!

ಶ್ರೀ ಕೃಷ್ಣನು ನರಕಾಸುರನನ್ನು ಕೊಂದು ಅವನ ಸೆರೆಯಲ್ಲಿದ್ದ ರಾಜಕನ್ಯೆಯರನ್ನು ಬಿಡಿಸಿ ಅವನ ಮಗನಿಗೆ ಪಟ್ಟಕಟ್ಟಿಯಾದ ಮೇಲೆ ಇಂದ್ರಲೋಕಕ್ಕೆ ಹೋಗಿಬಂದ ವೃತ್ತಾಂತವಿದೆ. ಭಾಗವತದ ದಶಮಸ್ಕಂಧದ ಐವತ್ತೊಂಬತ್ತನೆಯ ಅಧ್ಯಾಯದಲ್ಲಿ ಈ ವೃತ್ತಾಂತ ಬಹಳ ಸಂಗ್ರಹವಾಗಿ ಮೂರೇ ಶ್ಲೋಕಗಳಲ್ಲಿ ವರ್ಣಿತವಾಗಿದೆ.

ಗತ್ವಾಸುರೇಂದ್ರಭವನಂ ದತ್ವಾದಿತ್ಯೈಚಕುಂಡಲೇ|
ಪೂಜಿತ ಸ್ತ್ರಿದಶೇಂದ್ರೇಣ ಸಹೇಂದ್ರಾಣ್ಯಾಚಸಪ್ರಿಯಃ ||
ಚೋದಿತೋಭಾರ್ಯಯೋತ್ಪಾಟ್ಯ ಪಾರಿಜಾತಂ ಗರುತ್ಮನಿ |
ಆರೋಪ್ಯಸೇಂದ್ರಾನ್ ವಿಬುಧಾನ್ ನಿರ್ಜಿತ್ಯೋನಯತ್ ಪುರಮ್ ||
ಸ್ಥಾಪಿತಃ ಸತ್ಯಭಾಮಾಯಾ ಗೃಹೋದ್ಯಾನೋಪಶೋಭನಃ |
ಅನ್ವಗುರ್ಭಮರಾಃ ಸ್ವರ್ಗಾತ್ ತದ್ಗಂಧಾಸವಲಂಪಟಾಃ ||

ಶ್ರೀ ಕೃಷ್ಣನು ಹಿಂದೆ ನರಕಾಸುರನು ಅಪಹರಿಸಿದ್ದ ಅದಿತಿಯ ಕರ್ಣಕುಂಡಲಗಳನ್ನು ತೆಗೆದುಕೊಂಡು ಹೋಗಿ ಅದಿತಿಗೆ ಸಮರ್ಪಿಸಿ ಇಂದ್ರ ಇಂದ್ರಾಣಿಯರಿಂದ ಪೂಜಿತನಾಗಿ ಹಿಂತಿರುಗುವಾಗ ನಂದನವನದ ಪಾರಿಜಾತ ವೃಕ್ಷವನ್ನು ತನ್ನ ಹೆಂಡತಿಯ ಪ್ರೇರಣೆಯಂತೆ ಕಿತ್ತುತಂದನು. ಅದನ್ನು ಪ್ರತಿಭಟಿಸಿದ ಇಂದ್ರನನ್ನೂ ದೇವತೆಗಳನ್ನೂ ಸೋಲಿಸಿ ಆ ವೃಕ್ಷವನ್ನು ತನ್ನ ಪಟ್ಟಣಕ್ಕೆ ತಂದು ಸತ್ಯಭಾಮೆಯ ಗೃಹೋದ್ಯಾನಕ್ಕೆ ಅಲಂಕಾರವಾಗಿ ಸ್ಥಾಪಿಸಿದನು. ಆಗ ದೇವಲೋಕದ ದುಂಬಿಗಳು ಆ ಹೂವಿನ ವಾಸನೆಯ ಮೋಹದಿಂದ ಅದನ್ನು ಹಿಂಬಾಲಿಸಿ ಬಂದವು.

ಇಷ್ಟು ಸಂಗ್ರಹವಾಗಿರುವ ಪಾರಿಜಾತಾಪಹರಣ ವೃತ್ತಾಂತವು ಕನ್ನಡದ ನಿತ್ಯಾತ್ಮ ಶುಕನ ಭಾಗವತದಲ್ಲಿ ಎರಡು ಅಧ್ಯಾಯಗಳಷ್ಟು ವಿಸ್ತಾರವಾಗಿ ಬೆಳೆದಿದೆ.[2] ಈ ಭಾಗವನ್ನು ನಿತ್ಯಾತ್ಮ ಶುಕರು ವಿಜಯಧ್ವಜತೀರ್ಥರು ರಚಿಸಿರುವ 'ಪದರತ್ನಾವಳಿ' ವ್ಯಾಖ್ಯಾನದಲ್ಲಿರುವ ಅಧಿಕ ಪಾಠದ ಮೂರು ಅಧ್ಯಾಯಗಳನ್ನು ಅನುಸರಿಸಿ ಬರೆದಿರುವಂತೆ ತೋರುತ್ತದೆ. ಮೂಲದಲ್ಲಿ ಸೂತ್ರಪ್ರಾಯವಾಗಿ ಸೂಚಿಸಿರುವ ಅಂಶಗಳನ್ನು ಆ ಅಧಿಕಪಾಠದಲ್ಲಿ ವಿಸ್ತಾರವಾಗಿ ವಿವರಿಸಿ ಹೇಳಿದ್ದಾರೆ.

ಶ್ರೀ ಕೃಷ್ಣನನ್ನು ಇಂದ್ರಾದಿಗಳು ಅಮರಾವತಿಯ ಹೆಬ್ಬಾಗಿಲಲ್ಲಿ ಇದಿರುಗೊಂಡು ಸ್ವಾಗತಿಸಿ ರಥದ ಮೇಲೆ ಕುಳ್ಳಿರಿಸಿಕೊಂಡು ಅರಮನೆಗೆ ಕರೆದುಕೊಂಡು ಹೋದ ವೃತ್ತಾಂತವೇ ಆರು ಶ್ಲೋಕಗಳಷ್ಟಾಗಿದೆ. ಅನಂತರ ಕೃಷ್ಣನನ್ನು ಅಭಿನಂದಿಸಿ ಸೊಸೆಯಾದ ಸತ್ಯಭಾಮೆಯನ್ನು ಅಪ್ಪಿಕೊಂಡು ಆದರಿಸಿ "ನತೇಜರಾ ನವೈರೂಪ್ಯಂ ಕಾಂತೇನ ಸಹವಿಪ್ರಿಯಂ | ಭೂಯಾತ್ಕಲ್ಯಾಣಿ ಸುವ್ಯಕ್ತಂ ಮತ್ಪ್ರಸಾದಾತ್ಕದಾಚನ ||" ಎಂದು ಆಶೀರ್ವದಿಸಿಳಂತೆ! ನಿತ್ಯಾತ್ಮಶುಕನು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ

'ಹೂಗಳನು ಮುಡಿಸಿದಳು ನೀರಸ
ವಾಗದಿರಲಿವು ನಿನಗೆನುತ ತನು
ಭೋಗವನು ಮಾಡಿಸಿದಳನುಲೇಪನವಿಧಾನದಲಿ
ಆಗದಿರಲಿದಕಳಿವೆಂದು ವುತ್ತಮ
ರಾಗದಲಿ ದಿವ್ಯಾಂಬರವನಾ
ಭೋಗಿಶಯನನ ವನಿತೆಗಿತ್ತಳು ಮಾಸದಿರಲೆಂದು

ಎಂದು ವರ್ಣಿಸಿ ಅದಿತಿ ಸತ್ಯಭಾಮೆಗೆ ಮಾಡಿದ ಮರ್ಯಾದೆಗಳನ್ನೆಲ್ಲ ಹೇಳಿದ್ದಾನೆ.

ಅದಿತಿದೇವಿಯ ಅನುಗ್ರಹ ಆಶೀರ್ವಾದಗಳನ್ನು ಪಡೆದು ಆಕೆಯನ್ನು ಬೀಳ್ಕೊಂಡು ಗರುಡನನ್ನೇರಿ ಹೊರಟ ಕೃಷ್ಣಸತ್ಯೆಯರು ಇಂದ್ರನ ನಂದನವನಕ್ಕೆ ಬಂದರು. ಅಲ್ಲಿ ಪಾರಿಜಾತವನ್ನು ನೋಡಿ ಸತ್ಯಭಾಮೆಯು ಆಸೆಪಟ್ಟು ಕೃಷ್ಣನನ್ನು ಪೀಡಿಸಿದಳು. ಶಚೀದೇವಿ ತನ್ನನ್ನು ಸರಿಯಾಗಿ ಗೌರವಿಸಲಿಲ್ಲವಾದ್ದರಿಂದ ತನಗೆ ಅಸಮಾಧಾನವಾಯಿತೆಂದೂ ಆದ್ದರಿಂದ ಈ ಪಾರಿಜಾತವನ್ನು ತೆಗೆದುಕೊಂಡು ಹೋಗಲೇಬೇಕೆಂದು ಸತ್ಯಭಾಮೆಯ ತರ್ಕ. ಕೃಷ್ಣನುಹೆಂಡತಿಯ ಅಪೇಕ್ಷೆಯನ್ನು ತಿರಸ್ಕರಿಸಲಾರದೆ ಆ ಗಿಡವನ್ನು ಕಿತ್ತನು. ಆಗ ಸಹಜವಾಗಿ ವನಪಾಲಕರು ಪ್ರತಿಭಟಿಸಿದರು. ಕೂಡಲೆ ಇಂದ್ರನಿಗೆ ಸುದ್ದಿ ಹೋಯಿತು. ಕುಬೇರ ಅಗ್ನಿ ವಾಯು ಮೊದಲಾದ ದಿಕ್ಪಾಲಕರೊಡನೆ ಇಂದ್ರ ಕಾಳಗಕ್ಕೆ ಬಂದನು. ಆಗ ಕೃಷ್ಣನು ದೇವಸೈನ್ಯವನ್ನು ಹೆಂಡತಿಗೆ ತೋರಿಸಿ "....ಸತ್ಯಾಮಾಹಜಗತ್ಪತಿಃ|

---

1 ಗೀತಾ ಪ್ರೆಸ್ ಪ್ರಕಟಿತವಾದ ಶ್ರೀಮದ್ಭಾಗವತ ಮಹಾಪುರಾಣಮ್ ಪುಟ 530.

2 70 ಮತ್ತು 71ನೆಯ ಸಂಧಿಗಳು.

ಇಮೇ ಪ್ರಾಹುಣಿಕಾಃ ಪ್ರಾಪ್ತಾಸ್ತವ ಬೃಂದಾರಕಾ ಇತಿ ||" ಆ ಕೂಡಲೆ ದೇವತೆಗಳು ಬಾಣ ವೃಷ್ಟಿಯನ್ನೇ ಕರೆದರು. ಸತ್ಯಭಾಮೆ ಇದಾವುದನ್ನೂ ಲೆಕ್ಕಿಸದೆ ಶಾರ್ಙ್ಗವನ್ನು ಹಿಡಿದು ಯುದ್ಧ ಹೂಡಿ ಅವರ ಬಾಣಗಳನ್ನೆಲ್ಲ ಲೀಲಾಜಾಲವಾಗಿ ಕತ್ತರಿಸಿದಳು.

ನಮ್ಮ ನಿತ್ಯಾತ್ಮಶುಕನೂ ಈ ಕಥೆಯನ್ನೇ ಹೇಳಿರುವನಾದರೂ ಕನ್ನಡ ಸತ್ಯಭಾಮೆ ಕೊಂಚ ನಯ. ದನುಜರಿಪು ಕೃಷ್ಣನು ದೇವಸೈನ್ಯವನ್ನು ಕಂಡು ತನ್ನಂಗನೆಗೆ ಹೀಗೆ ಹೇಳಿದನಂತೆ :

ದೇವಿ ಬಂದರು ಬಿದ್ದಿನರು ಸಂ
ಭಾವಿಸುವಡೇನುಂಟು ನಿನ್ನಯ
ಭಾವದಲಿ ಸಂವರಿಸಿ ಸಂತವಿಸೀ ಸುರಾವಳಿಯ
ನಾವು ಮುನ್ನವೆ ಹೇಳೆವೇ ನೀ
ನಾವ ಬುದ್ಧಿಯ ಕಂಡೆ ಸಮರವ
ನೀವೆಯೋ ಮೇಣ್ಮರನನೀವೆಯೊ ಎಂದನಸುರಾರಿ ||

ವಿಜಯಧ್ವಜರ ಕೃಷ್ಣನಿಗೆ ಇಷ್ಟೆಲ್ಲ ಹೇಳಲು ವಿರಾಮವಿರಲಿಲ್ಲ. ಅಲ್ಲದೆ ಯುದ್ಧಮಾಡುವೆಯೋ ಪಾರಿಜಾತವನ್ನೇ ಹಿಂತಿರುಗಿಸುವೆಯೋ ಎಂಬ ಸಮಸ್ಯೆಯನ್ನು ಒಡ್ಡಲು ಅವನಿಗೆ ಇಷ್ಟವಾಗಲಿಲ್ಲ, ಕೃಷ್ಣನು ಹೀಗೆ ಕೇಳಿದಾಗ ನಿತ್ಯಾತ್ಮಶುಕನ ಸತ್ಯಭಾಮೆ ಒಮ್ಮಿಂದೊಮ್ಮೆ ಗಂಡನ ಕೈಯಲ್ಲಿದ್ದ ಬಿಲ್ಲನ್ನು ಸೆಳೆದುಕೊಳ್ಳಲಿಲ್ಲ. ಅವಳು ತಾನೇನೂ ನಿರ್ಣಯ ಮಾಡದೆ ವಿನಯದಿಂದ ಹೀಗೆಂದಳಂತೆ :

ಚಿತ್ತವಿಸು ನಿರ್ಬಂಧವೆನ್ನಯ
ಚಿತ್ತದಲಿ ಮುನ್ನಿಲ್ಲ ದೇವರ
ಚಿತ್ತದೊಳಗುಳ್ಳುದು ಮಾಳ್ಪುದು ತನ್ನ ನೆವದಿಂದ
ಭಕ್ತರೀ ಸುರರಿವರೊಡನೆ ತಲೆ
ಯೊತ್ತಲೇಕೆಲೆ ದೇವಯೆನುತಾ
ಮತ್ತಕಾಶಿನಿ ನುಡಿದಳಾ ನಿತ್ಯಾತ್ಮಕನ ಮೊಗ ನೋಡಿ

ಪಾರಿಜಾತ ವೃಕ್ಷದ ಮೇಲೆ ಆಸೆ, ಶಚಿಯ ಮೇಲೆ ರೋಷ, ಇದ್ದರೂ ಕನ್ನಡ ಸತ್ಯಭಾಮೆ ಗಂಡನ ಇಷ್ಟವನ್ನು ಪೂರ್ತಿ ಅಲಕ್ಷ್ಯಮಾಡಲು ಸಿದ್ಧಳಲ್ಲ; ಭಕ್ತರೊಡನೆ ಕಾಳಗ ಹೂಡುವುದೂ ಅವಳಿಗೆ ಹರ್ಷಪ್ರದವಲ್ಲ. ಅಥವಾ ಗಂಡನ ಪ್ರೀತ್ಯರ್ಥವಾಗಿ ಹಾಗೆ ಹೇಳಿದಳೊ! ಅಂತು ಅವಳು ಗಂಡನ ಇಷ್ಟಾನಿಷ್ಟಗಳ ಚಿಂತನೆಯನ್ನು ಸ್ವಲ್ಪವಾದರೂ ಮಾಡತಕ್ಕವಳಾಗಿದ್ದಾಳೆ! ಕೃಷ್ಣನು ಯಾವುದೂ ಹೇಳದೆ ಸುಮ್ಮನಿದ್ದುಬಿಟ್ಟನು. ಈ ಮಧ್ಯೆ ದೇವತೆಗಳ ರಭಸ ಹೆಚ್ಚಾಯಿತು. ಇನ್ನು ಸತ್ಯಭಾಮೆ ಸುಮ್ಮನಿರತಕ್ಕವಳೆ? "ಕೃಷ್ಣನೊಪ್ಪುವ ಕರದ ಶಾರ್ಙ್ಗವ ಕಳೆದು ಕೊಂಡಳು ಕಾಂತೆ ನಸುನಗುತ"

ಯುದ್ಧ ಆರಂಭವಾಯಿತು. ಮೊದಲು ಕುಬೇರನ ಸತ್ವಪರೀಕ್ಷೆಯಾಯಿತು. ಅವನು ಕಡೆಗೆ ಸೋತು ಪಲಾಯನಮಾಡಿದನು. ಯಮ, ವರುಣ, ಅಗ್ನಿಗಳಿಗೂ ಅದೇ ಗತಿಯಾಯಿತು. ವಾಯು ಮಾತ್ರ ಶ್ರೀ ಕೃಷ್ಣ ಸಾಕ್ಷಾತ್ ಹರಿಯೆಂದು ಅರಿತು ಪಲಾಯನಮಾಡಿದನು! ಆಮೇಲೆ ಪರಶಿವನೇ ನಂದಿವಾಹನನಾಗಿ ಬಂದು ಕೃಷ್ಣನೊಡನೆ ಯುದ್ಧಮಾಡಿ ಸೋತನು. ಶಿವನ ಸರದಿ ಆದಮೇಲೆ ಇಂದ್ರ ಬಂದು ಖಾಡಾಖಾಡಿ ಯುದ್ಧಮಾಡಿ ಸೋತು ಹಿಮ್ಮೆಟ್ಟಿದನು. ಪಲಾಯನಮಾಡುತ್ತಿದ್ದ ಇಂದ್ರನನ್ನು ಸತ್ಯಭಾಮೆಯು ಕ್ರೂರವಾಗಿ ಮೂದಲಿಸಲು ಆಗ ಅವನು ಕೃಷ್ಣನಿಗೆ ಶರಣಾಗತನಾದನು. ಕೃಷ್ಣ ಅವನನ್ನು ಸಂತೈಸಿ ತಾನು ವೈಕುಂಠ ಸೇರಿದ ಮೇಲೆ ಪಾರಿಜಾತವೃಕ್ಷವು ಪುನಃ ನಂದನಕ್ಕೆ ಬರುವುದೆಂದು ಆಶ್ವಾಸನೆ ನೀಡಿ ದ್ವಾರಕೆಗೆ ಬಂದು ಸತ್ಯಭಾಮೆಯ ಮನೆಯ ತೋಟದಲ್ಲಿ ಅದನ್ನು ನೆಟ್ಟನು. ಶ್ರೀ ಕೃಷ್ಣನ ಪರಾಕ್ರಮ, ದೈವೀಮಹಿಮೆಗಳನ್ನು ಹೊಗಳಲು ನಿತ್ಯಾತ್ಮಶುಕನು ಈ ಪ್ರಸಂಗವನ್ನು ಬಳಸಿಕೊಂಡಿದ್ದಾನೆ. ಶಿವನನ್ನು ಗೆದ್ದನೆಂದು ವರ್ಣಿಸಿ ವಿಷ್ಣುಪಾರಮ್ಯವನ್ನು ನಿರೂಪಿಸಲು ಈ ಉಪಾಖ್ಯಾನ ಅನುಕೂಲವಾಗಿದೆ. ಇಂಥ ಪ್ರಸಂಗ ಮೂಲ ಭಾಗವತದಲ್ಲಿ ಅತಿ ಸಂಗ್ರಹವಾಗಿದ್ದುದರಿಂದ ವಿಜಯಧ್ವಜರು ಸಹಜವಾಗಿ ಅದನ್ನು ಕೊಂಚ ಬೆಳೆಸಿದರು. ನಿತ್ಯಾತ್ಮಕವಿ ಲೋಕರಂಜಕವಾದ

ಉಪಾಖ್ಯಾನವನ್ನು ಬಿಡಲೊಲ್ಲದೆ ಸೇರಿಸಿಕೊಂಡಿದ್ದಾನೆ. ಅಧಿಕಪಾಠವಾದರೆ ತಾನೆ ಏನು ಹಾನಿ. ಅದು ಕೃಷ್ಣಮಹಿಮಾವರ್ಣನೆಗೆ ಸಹಾಯಕವಾಗಿರುವಾಗ?

ಭಾಗವತದ ಏಕೈಕವಾದ ಧ್ಯೇಯ ಭಕ್ತಿಮಾರ್ಗ ನಿರೂಪಣೆ. ಮಹಾವಿಷ್ಣುವಿನ ಪಾರಮ್ಯವನ್ನು ಮೊದಲು ಹೇಳಿ ಆತನ ನಿರಂತರವಾದ ಧ್ಯಾನ ಪೂಜೆ ಸಂಕೀರ್ತನಗಳಿಂದ ಆ ದೇವದೇವನ ಅನುಗ್ರಹಕ್ಕೆ ಪಾತ್ರರಾಗಿ ಸಂಸಾರ ಶೃಂಖಲೆಗಳಿಂದ ಮೋಕ್ಷವನ್ನು ಪಡೆಯಬಹುದೆಂಬ ಸಿದ್ಧಾಂತವನ್ನು ಉಪದೇಶಮಾಡುವುದು ಭಾಗವತಕಾರನ ಗುರಿ. ಇದನ್ನು ಸಾಧಿಸುವುದಕ್ಕೆ ವಿಷ್ಣುವಿನ ಮಹಿಮೆಯನ್ನು ಹೊಗಳುವುದು, ಆತನ ಅನೇಕ ಅವತಾರಕಥೆಗಳನ್ನು ಹೇಳುವುದು, ವಿಷ್ಣುಭಕ್ತಿಯಿಂದ ಅನಿಷ್ಟ ಪರಿಹಾರಮಾಡಿಕೊಂಡು 'ಸುಖಸಾಧನೆಮಾಡಿಕೊಂಡ ಭಗವದ್ಭಕ್ತರ ಚರಿತ್ರೆಗಳನ್ನು ವರ್ಣಿಸುವುದು, ಭಗವಂತನಲ್ಲಿ ಭಕ್ತಿಯಿಡದೆ ಅಗೌರವದಿಂದ ವರ್ತಿಸಿ, ವೈರಸಾಧಿಸಿ ದುಷ್ಟರಾಗಿ ಕೆಟ್ಟವರ ಕಥೆಗಳನ್ನು ಹೇಳುವುದು—ಹೀಗೆ ನಾಲ್ಕು ಮಾರ್ಗಗಳಿವೆ. ಭಾಗವತಕಾರನು ಈ ಎಲ್ಲ ಮಾರ್ಗಗಳನ್ನೂ ಅನುಸರಿಸಿ ಭಕ್ತಿಪಂಥದ ಹಿರಿಮೆಯನ್ನು ಯಶಸ್ವಿಯಾಗಿ ನಿರೂಪಿಸಿ ಕೃತಕೃತ್ಯನಾಗಿದ್ದಾನೆ.

ಕಥೆಯ ಮಧ್ಯೆ ಅವಕಾಶ ಕಲ್ಪಿಸಿಕೊಂಡು ಕವಿ ವೈಕುಂಠಪತಿಯ ಮಹಿಮಾತಿಶಯವನ್ನು ನೇರವಾಗಿ ವರ್ಣಿಸಿ ಹೇಳಿದ್ದಾನೆ. ಮುನಿಗಳ ಮನಕ್ಕೆ ನಿಲುಕದ, ವೇದಗಳಿಗೆ ಅಗೋಚರನಾದ ಆ ಭಗವಂತನ ಹಿರಿಮೆ ಹೆಚ್ಚುಗಳನ್ನು ಕವಿ ಕೊಂಡಾಡಿದ್ದಾನೆ. ಅವನು ದೇವಾಧಿದೇವನೆಂದೂ ಇಂದ್ರನೇ ಮೊದಲಾದ ಸಮಸ್ತ ದೇವರುಗಳೂ ವಿಷ್ಣುವಿನ ಅಧೀನರಾಗಿ, ಆಜ್ಞಾವಿಧೇಯರಾಗಿ, ಆತನ ಕರುಣೆಯನ್ನು ನಿರೀಕ್ಷಿಸಿಕೊಂಡು, ಕೋಪಕ್ಕೆ ಅಂಜಿಕೊಂಡು, ವರ್ತಿಸುತ್ತಿರುವರೆಂದು ಹೇಳಿ ಅವನ ಅತುಲ ಮಹಿಮೆಯನ್ನು ಭಾಗವತಕಾರನು ಚಿತ್ರಿಸಿದ್ದಾನೆ.

ಭಾಗವತದಲ್ಲಿ ಭಗವಂತನ ಅನೇಕ ಅವತಾರ ಕಥೆಗಳು ವಿಸ್ತಾರವಾಗಿ ಮೂಡಿಬಂದಿವೆ. ಪ್ರಸಿದ್ಧವಾದ ಅಷ್ಟಾವತಾರ ವೃತ್ತಾಂತಗಳೇ ಅಲ್ಲದೆ ಇನ್ನೂ ಅನೇಕಾನೇಕ ಅವತಾರಗಳನ್ನು ಕವಿ ಬಣ್ಣಿಸಿದ್ದಾನೆ. ಅವರಲ್ಲೆಲ್ಲ ಪರಮಶ್ರೇಷ್ಠನೆನಿಸಿದ ಯಾದವ ಶಿರೋಮಣಿ ಶ್ರೀಕೃಷ್ಣ ವಾಸುದೇವನ ಕಥೆ ದಶಮಸ್ಕಂಧದ ತುಂಬ ಇದೆ. ವಸುದೇವನ ಹೆಂಡತಿ ದೇವಕೀದೇವಿಯ ಹೊಟ್ಟೆಯಲ್ಲಿ ಹುಟ್ಟಿ ಕಂಸನ ಸೆರೆಮನೆಯಿಂದ ತಪ್ಪಿಸಿಕೊಂಡು ಗೋಕುಲದ ನಂದಪತ್ನಿ ಯಶೋದೆಯಲ್ಲಿ ಹೋಗಿ ಸೇರಿ ಗೋಪಬಾಲಕನಾಗಿ ಬೆಳೆದು ಜನನಾಯಕನಾಗಿ ಮಥುರೆಗೆ ಬಂದು ದುಷ್ಟ ದೈತ್ಯನಾದ ಕಂಸನನ್ನು ಸಂಹರಿಸಿ ತಾತನಾದ ಉಗ್ರಸೇನನಿಗೆ ಪಟ್ಟಕಟ್ಟಿ ನಾನಾ ಉಪಾಯಗಳಿಂದ ಜರಾಸಂಧ, ಕಾಲಯವನ, ಶಿಶುಪಾಲ, ದಂತವಕ್ತ್ರ, ನರಕಾಸುರ, ಮೊದಲಾದ ಅನೇಕಾನೇಕ ದಾನವರನ್ನು ಸಂಹಾರ ಮಾಡಿ, ಮಾಡಿಸಿ, ಪಾಂಡವಪಕ್ಷಪಾತಿಯಾಗಿ ಮಹಾಭಾರತಯುದ್ಧದಲ್ಲಿ ಕೌರವರೇ ಮೊದಲಾದ ಅನೇಕ ದುಷ್ಟ ಕ್ಷತ್ರಿಯರನ್ನು ನಾಶಪಡಿಸಿ ಭೂಮಿಯನ್ನು ನಿಷ್ಕಂಟಕವಾಗಿಸಿ ಧರ್ಮಸಂಸ್ಥಾಪನೆ ಮಾಡಿದ ಸಾಹಸಮಯವಾದ ಅದ್ಭುತವೃತ್ತಾಂತ ಇಲ್ಲಿದೆ.

ಇನ್ನು ವಿಷ್ಣುಭಕ್ತಾಗ್ರೇಸರರಾದ ಭಾಗವತೋತ್ತಮರ ಪುಣ್ಯಕಥೆಗಳಿಗೆ ಇಲ್ಲಿ ಕೊರತೆಯಿಲ್ಲ. ದಶಮಸ್ಕಂಧದಲ್ಲಿಯೇ ಅಕ್ರೂರ, ಉದ್ಧವ, ಕುಚೇಲ ಮುಚುಕುಂದ ಮೊದಲಾದ ಹಲವರು ಭಕ್ತಶ್ರೇಷ್ಠರ ಭಕ್ತಿಚಿತ್ರಗಳು ಇಲ್ಲಿ ಬಹಳ ಸುಂದರವಾಗಿ ಮೂಡಿಬಂದಿವೆ. ಭಗವಂತನನ್ನೇ ತಮ್ಮ ಮಗುವೆಂದು ನಂಬಿ ಪ್ರೀತಿಸಿ ವಾತ್ಸಲ್ಯ ತೋರಿ ಸಾಕಿ ಸಲಹಿ ಕೈವಲ್ಯಸುಖಾನುಭವ ಮಾಡಿದ ನಂದ ಯಶೋದೆಯರ ಮುಗ್ಧಭಕ್ತಿ, ಆದರೆ ಅಚಂಚಲವಾದ ಭಕ್ತಿಯ ಕಥೆ ಈ ಸ್ಕಂಧದಲ್ಲಿ ಓದುಗರ ಮನಸ್ಸನ್ನು ಆನಂದಪ್ರವಾಹದಲ್ಲಿ ತೇಲಿಸುತ್ತದೆ. ಗೋಪಿಯರು ಅನ್ಯಾದೃಶವಾದ ಪ್ರೇಮದಿಂದ ಕೃಷ್ಣನನ್ನಾರಾಧಿಸಿ ಧನ್ಯರಾದ ಮಧುರ ವೃತ್ತಾಂತ ಇಲ್ಲಿದೆ. 'ಮಂತ್ರಮೂರುತಿ ಗೋಪಕನ್ಯಾಸಂತತಿಗೆ ಹರಹರ ಸುಲಭನದೆಂತುಟೋ ನಿತ್ಯಾತ್ಮ ಕೃಷ್ಣನಚಿಂತ್ಯಗುಣವನಧಿ!' ಶ್ರೀ ಕೃಷ್ಣನು ಗೋಪಿಯರೊಡನೆ ರಾಸಕ್ರೀಡೆ ನಡೆಸಿದನು; ಅವರೊಡನೆ ಸರಸಸಲ್ಲಾಪಗಳನ್ನು ಮಾಡಿ ಸಂತೋಷಿಸಿದನು. ಇನ್ನು ಕೃಷ್ಣನ ಒಡನಾಡಿಗಳಾಗಿ ಅವನೊಡನೆ ಲಗ್ಗೆಚೆಂಡು ಮರಕೋತಿ ಮೊದಲಾದ ಆಟಗಳನ್ನಾಡಿ ಆನಂದಿಸಿದ ಆ ಗೋಪಬಾಲಕರ ಭಾಗ್ಯವನ್ನಂತು ನಮ್ಮ ನಿತ್ಯಾತ್ಮ ಕವಿ ಬಹಳ ಸಡಗರದಿಂದ ಬಣ್ಣಿಸಿದ್ದಾನೆ. ಸ್ವಯಂ ಭಗವಂತನೇ ಭೂಮಿಗಿಳಿದು ಬಂದು ಆ ಮುಗ್ಧ ಬಾಲಕರೊಡನೆ ಸೇರಿ ಅವರಲ್ಲಿ ಒಬ್ಬನಾಗಿ ಹಾಲು ಬೆಣ್ಣೆ ಮೊಸರುಗಳನ್ನು ಕದ್ದು, ಚೇಷ್ಟೆ ಮಾಡಿ, ಅವರೊಡನೆ ವನವನಾಂತರಗಳಲ್ಲಿ ಸಂಚರಿಸಿ ಅವರ ಸಮಸ್ತ ಕಷ್ಟಸುಖಗಳಲ್ಲಿಯೂ ಪಾಲುಗೊಂಡು ಅವರ ಬದುಕನ್ನು ಪಾವನ ಮಾಡಿದನೆಂದರೆ ಆ ಹುಡುಗರ ಭಾಗ್ಯಕ್ಕೆ ಮೇರೆಯುಂಟೆ?

ಇನ್ನು ಶ್ರೀ ಕೃಷ್ಣನೊಡನೆ ವೈರ ಸಾಧಿಸಿದವರ ಚರಿತ್ರೆಯನ್ನು ಗಮನಿಸೋಣ. ಶಿಶು ಕೃಷ್ಣನನ್ನು ವಿಷವೂಡಿ ಕೊಲ್ಲ ಬಗೆದ ಪೂತನಿ ತಾನೇ ಸತ್ತಳಷ್ಟೆ! ಅವಳ ಶವವನ್ನು ಕಾಡಿನಲ್ಲಿಟ್ಟು ಸುಟ್ಟಾಗ ಅದರಿಂದ ಪರಿಮಳ ಗಂಧ ಹೊರಹೊಮ್ಮಿತ್ತಂತೆ! ಶ್ರೀ ಕೃಷ್ಣನ ಸ್ಪರ್ಶಮಾತ್ರದಿಂದ ಅವಳ ಪಾಪಸಮೂಹ ನಷ್ಟವಾಯಿತು. ಮರೆತು ಒಮ್ಮೆ ಸ್ಮರಣೆ ಮಾಡಿದರೆ, ಅವನ ಚರಿತ್ರೆಯನ್ನು ಒಮ್ಮೆ ಕೇಳಿದರೆ, ಜನರ ಭವಬಂಧನ ಬಿಟ್ಟು ಹೋಗುವುದೆಂಬಾಗ ಅಚ್ಯುತನನ್ನು ತನ್ನ ಎದೆಗೆ ಅವಚಿಕೊಂಡು ಸ್ತನ್ಯ ನೀಡಿದಮೇಲೆ ಅವಳಿಗೆ ದುರ್ಗತಿಯಾದೀತೆ? ಆ ಪತಿತಪಾವನನ ಸಂಸ್ಪರ್ಶದಿಂದ ಪೂತನಿ ಸದ್ಗತಿ ಹೊಂದಿದಳು! ಕಂಸನು ಕೃಷ್ಣನು ಹುಟ್ಟುವ ಮೊದಲೇ ಅವನ ಮೇಲೆ ವೈರಸಾಧಿಸಲು ಬದ್ಧಸಂಕಲ್ಪನಾಗಿದ್ದನು. ಮಹಾವಿಷ್ಣು ತನ್ನ ತಂಗಿಯ ಎಂಟನೆಯ ಗರ್ಭದಲ್ಲಿ ಹುಟ್ಟುವನೆಂದು ತಿಳಿದು ಆ ತಂಗಿಯನ್ನೂ ಅವಳ ಗಂಡನನ್ನೂ ಸೆರೆಯಲ್ಲಿಟ್ಟನು; ಅವರ ಮಕ್ಕಳನ್ನೆಲ್ಲ ಕೊಂದನು. ಕೊನೆಗೆ ಆ ಎಂಟನೆಯ ಮಗು ಹೆಣ್ಣುಮಗುವಾಗಿದ್ದರೂ ಲೆಕ್ಕಿಸದೆ ಅದನ್ನೂ ಕೊಲ್ಲಲು ಯತ್ನಿಸಿದನು. ಆ ಮಾಯಾವಿ ಮಹಾವಿಷ್ಣು ಯಾವ ರೀತಿಯಲ್ಲಿ ಬರುವನೋ ಎಂದು ಅಂಜಿ ದುಷ್ಟ ಕಂಸನು ನಿರಂತರವಾಗಿ ಅವನ ಚಿಂತನೆಯನ್ನೇ ಮಾಡುತ್ತ ದೇವಕಿಯ ಹೆರಿಗೆಯ ಹೊತ್ತನ್ನೇ ಕಾಯುತ್ತ ಇರುಳೆಲ್ಲ ಜಾಗರಣೆ ಮಾಡಿದನಂತೆ! ದೂತರು ಸುದ್ದಿ ಹೇಳುತ್ತಲೇ ಅವನು ಆ ಕಗ್ಗತ್ತಲೆಯಲ್ಲಿ ಬೀಳುವುದೇಳುವುದನ್ನು ಗಮನಿಸದೆ ಮಹಾ ಆತುರದಿಂದ ಬಂದು ಆ ಶಿಶುವನ್ನು ಹಿಡಿದು ತಂದು ಕೊಲ್ಲಹೊರಟನಂತೆ! ಈ ವೈರಸಾಧನೆಯೇ ಅವನಿಗೆ ಕೃಷ್ಣಸಾಕ್ಷಾತ್ಕಾರ ಮಾಡಿಸಿತು. ಬಿಲ್ಲ ಹಬ್ಬಕ್ಕೆಂದು ಕೃಷ್ಣಬಲರಾಮರನ್ನು ಮಧುರೆಗೆ ಕರೆಸಿಕೊಂಡ ಕಂಸನ ಕಥೆಯನ್ನು ಕವಿ ಬಹಳ ಹೃದ್ಯವಾಗಿ ಚಿತ್ರಿಸಿದ್ದಾನೆ. ಆ ಬಾಲಕರಿಬ್ಬರ ಕೊಲೆಗೆ ಕಂಸ ಎಷ್ಟು ಏರ್ಪಾಡುಗಳನ್ನು ಮಾಡಿದ! ಎಷ್ಟು ಜನರನ್ನು ಹುರಿದುಂಬಿಸಿದ! ಕೊನೆಗೆ ಕುವಲಯಾಪೀಡನೆಂಬ ಆನೆಯಿಂದ ಅವರನ್ನು ತುಳಿಸಲು ಹವಣಿಸಿದ್ದನಂತೆ! "ಅನವರತ ವೈರೋತ್ತರದ ಭರಭಾರದಲಿ ನೆನೆನೆನೆದಿರುಳು ಹಗಲೋರಂತೆ ತನ್ಮಯನಾಗಿ ಮೂಜಗವ ಬೆರಸಿ ಕಾಣುತ ಕಂಸನಾ ಮುರಹರನ ಸಾರೂಪ್ಯವನು ಪಡೆದನು!" ಪರಮ ಭಕ್ತರಿಗೇನು ದುರ್ಲಭ?

ಭಕ್ತರು ವಾತ್ಸಲ್ಯಭಾವ, ದಾಸ್ಯಭಾವ, ಮಿತ್ರಭಾವ ಮಧುರಭಾವ ಸಾಧನೆಯಿಂದ ಭಗವಂತನನ್ನು ಒಲಿಸಿಕೊಂಡು ಸಾಕ್ಷಾತ್ಕಾರ ಪಡೆದರೆ ಕಂಸಾಸುರನು ವೈರಭಾವಸಾಧನೆಯಿಂದ ಸಾರೂಪ್ಯಸಿದ್ಧಿ ಪಡೆದನೆಂದು ವರ್ಣಿಸಿರುವುದು ಬಹಳ ಸ್ವಾರಸ್ಯವಾಗಿದೆ. ಭಗವಂತನ ಕರುಣೆಗೆ ಮೇರೆಯಿಲ್ಲ. ದ್ವೇಷದಿಂದಲಾದರೂ ಅವನನ್ನು ಸಂತತವಾಗಿ ಧ್ಯಾನಮಾಡಿದ್ದರಿಂದ ಅವನು ಕಂಸನನ್ನು ಸಂಸಾರ ಬಂಧನದಿಂದ ಬಿಡುಗಡೆ ಮಾಡಿದನು! ವೈರಿಗಳಿಗೇ ಇಷ್ಟು ಕರುಣೆ ತೋರಿದರೆ ಭಗವಂತನು ಇನ್ನು ಪರಮಭಕ್ತರನ್ನು ಆದರಿಸದೆ ಬಿಡುವುದುಂಟೆ?

ಭಗವಂತ ಪತಿತಪಾವನನು. ಕಂಸನ ಘಟ್ಟವಳ್ತಿಯಾದ ಕುಬ್ಜೆ ಶ್ರೀ ಕೃಷ್ಣನ ಮೋಹಕ ರೂಪ ಕಂಡು ಸಂತೋಷಿಸಿ ರಾಜ ಭೋಗ್ಯವಾದ ಪರಿಮಳ ಗಂಧವನ್ನು ಅವನಿಗೆ ಆದರದಿಂದ ಕೊಟ್ಟಳು. ಅಷ್ಟು ಮಾತ್ರದಿಂದಲೇ ಒಲಿದ ಸುಲಭಸಂತುಷ್ಟನಾದ ಪರಮಾತ್ಮನು ಅವಳ ವಿಕಾರರೂಪವನ್ನು ಹೋಗಲಾಡಿಸಿ ಅವಳನ್ನು ಪರಮ ಸುಂದರಿಯನ್ನಾಗಿಸಿದನಂತೆ! ಕುಚೇಲನು ಕೊಟ್ಟ ಅವಲಕ್ಕಿಯನ್ನು ತುತ್ತುಗೊಂಡು ಆ ದೀನನಿಗೆ ಮೇರೆಯರಿಯದ ಭಾಗ್ಯವನ್ನು ನೀಡಿದ. ಸಾಂದೀಪನಿಯ ಹೆಂಡತಿಯ ಕೋರಿಕೆಯನ್ನು ಮನ್ನಿಸಿ ಅವರ ಮೃತಶಿಶುವನ್ನು ಪುನರುಜ್ಜೀವಿಸಿ ತಂದು ಕೊಟ್ಟು ಅಪೂರ್ವವಾದ 'ಗುರುದಕ್ಷಿಣೆ' ಸಲ್ಲಿಸಿದ ಶ್ರೀ ಕೃಷ್ಣನ ದಯೆಯನ್ನು ಬಣ್ಣಿಸಿ ಮುಗಿಸಿಲಾದೀತೆ? ಭಗವಂತ ಭಕ್ತಪರಾಧೀನ. ಅವನು 'ಹೂವ ತರುವರ ಮನೆಗೆ ಹುಲ್ಲು ತರುವ!' ನಿಗರ್ವ ಶಿರೋಮಣಿ, ಅವ್ಯಾಜಕರುಣಾಮೂರ್ತಿ.

ಮೃತ್ಯುಮುಖ ಪತಿತರಿಗೆ ಭವಭಯ
ತಪ್ತರಿಗೆ ಮೋಹಾಂಧಕಾರ ನಿ
ವೃತ್ತ ದೃಷ್ಟಿಗಳಿಂಗೆ ದುಃಖನಿಮಗ್ನ ಮತಿಗಳಿಗೆ
ಮರ್ತ್ಯರಿಗೆ ಮನವೊಲಿದು ಕರುಣಾ
ಮೂರ್ತಿ ಸಕಲಾನರ್ಥ ದುಃಖನಿ
ವೃತ್ತಿಯನು ಮಾಡುತ್ತಲಿದ್ದನು ನಿಜಚರಿತ್ರದಲಿ

ನಿತ್ಯಾತ್ಮ ಶುಕನ ಕಾವ್ಯ ಮೂಲಸಂಸ್ಕೃತ ಗ್ರಂಥದ ಕ್ರಮವಾದ ಅನುವಾದವೇ ಆದರೂ ಸ್ವಕಪೋಲ

ಕಲ್ಪಿತ ಕಾವ್ಯಗಳಂತೆಯೇ ಏಕಧಾರೆಯಾಗಿ ಹರಿಯುವ ಕವಿತಾ ರಚನೆಯಿಂದ ಸುಶೋಭಿತವಾಗಿದೆ. ಇದರಲ್ಲಿನ ವರ್ಣನೆಗಳು ಬೇರೆ ಅನೇಕ ಕನ್ನಡ ಕಾವ್ಯಗಳಲ್ಲಿದ್ದಂತೆ ದೀರ್ಘವಾಗಿ ಬೆಳೆದು ಕಥೆಯ ಓಟಕ್ಕೆ ಭಂಗ ತರುವುದಿಲ್ಲ. ವರ್ಣನೆಗೆ ಪ್ರಾಧಾನ್ಯ ಕೊಟ್ಟು ಕಥೆಯನ್ನು ಮರೆಯುವ, ಕುಗ್ಗಿಸುವ, ಸಾಹಸಕ್ಕೆ ಎಲ್ಲಿಯೂ ಕವಿ ಕೈ ಹಾಕಿಲ್ಲ. ಅನಗತ್ಯವಾದ, ಸಮಯೋಚಿತವಲ್ಲದ ವರ್ಣನೆ ಈ ಕಾವ್ಯದಲ್ಲೆಲ್ಲಿಯೂ ಕಾಣುವುದಿಲ್ಲ. ಇನ್ನು ಶ್ಲೇಷ ವಿರೋಧಾಭಾಸಾದಿ ಅಲಂಕಾರಗಳತ್ತ ನಮ್ಮ ಕವಿಯು ಗಮನವೇ ಹರಿದಿಲ್ಲ. ಮಾತಿನ ಧೋರಣೆಯಲ್ಲಿ ತಾನಾಗಿ ಬರುವ ಉಕ್ತಿಚಮತ್ಕಾರಗಳನ್ನು ಕವಿ ತಡೆದಿಲ್ಲವೇ ಹೊರತು ಉದ್ದೇಶಪೂರ್ವಕವಾಗಿ ಅಲಂಕಾರ ಪ್ರಯೋಗಕ್ಕೆ ಆಸೆ ಪಟ್ಟಿಲ್ಲ. ಪಾಂಡಿತ್ಯ ಪ್ರದರ್ಶನದಲ್ಲಿ ಕವಿಗೆ ಅಪೇಕ್ಷೆಯಿಲ್ಲ. ಹರಿಕೀರ್ತನೆ, ಹರಿಗುಣಸುತ್ತಿಗಳೇ ಆತನ ಪರಮ ಧ್ಯೇಯಗಳಾಗಿದ್ದು ಅವುಗಳ ಸಾಧನೆಗೆ ನಿರಂತರವಾಗಿ ಶ್ರಮಿಸಿ ಕೃತಕೃತ್ಯನಾಗಿದ್ದಾನೆ. ಭಾವುಕರಾದ ವಾಚಕರಿಗೆ ಈ ಕಾವ್ಯ ಎಂದಿಗೂ ಬತ್ತದ ರಸದೊರತೆ, ಭಕ್ತರ ನಿಧಿ.

## ಗ್ರಂಥಪಾಠ

ಈ ಸಂಪುಟದ ಗ್ರಂಥಪಾಠವನ್ನು ಗೊತ್ತುಪಡಿಸಲು ಮೂರು ಓಲೆಯ ಪ್ರತಿಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಮೊದಲನೆಯದು ನನ್ನ ಮಾನ್ಯ ಸ್ನೇಹಿತರಾಗಿದ್ದ ದಿವಂಗತ ವಿ. ವೆಂಕಟಾದ್ರಿಶರ್ಮರವರು ಅನುಗ್ರಹಿಸಿಕೊಟ್ಟ ಓಲೆಯ ಪುಸ್ತಕ. ಇದರಲ್ಲಿ ಕನ್ನಡ ಭಾಗವತದ ಹನ್ನೆರಡು ಸ್ಕಂಧಗಳೂ ಸಮಗ್ರವಾಗಿವೆ. ಪಾಠ ಬಹಳ ಮಟ್ಟಿಗೆ ಶುದ್ಧವಾಗಿದೆ, ಗ್ರಂಥಪಾತಗಳು ವಿರಳ. ಇದರಲ್ಲಿ ಶಕಟ ರೇಫವನ್ನು ಸಾಮಾನ್ಯವಾಗಿ ತಪ್ಪಿಲ್ಲದೆ ಬಳಸಿದೆ. ಆದರೆ ಇದರ ಮೊದಲ ಹಾಳೆ ಮತ್ತು ಕೊನೆಯ ಹಾಳೆ ಎರಡೂ ಇಲ್ಲ ಆದ್ದರಿಂದ ಇದನ್ನು ಪ್ರತಿಮಾಡಿದವನ ಹೆಸರಾಗಲಿ ಮಾಡಿಸಿದವನ ಹೆಸರಾಗಲಿ ತಿಳಿಯುವಂತಿಲ್ಲ. ಪ್ರತಿ ಸಿದ್ಧವಾದ ಕಾಲವೂ ತಿಳಿಯುವಂತಿಲ್ಲ. ಬರೆವಣಿಗೆ ತಪ್ಪಿಲ್ಲದೆ ಇರುವುದಲ್ಲದೆ ಅಕ್ಷರಗಳು ಮುದ್ದಾಗಿವೆ. ಎರಡನೆಯ ಪುಸ್ತಕ ಮೈಸೂರು ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟಿನ ಡೈರೆಕ್ಟರ್ ಶ್ರೀ ಎಚ್. ದೇವೀರಪ್ಪ, ಎಂ.ಎ. ಅವರು ದಯೆಯಿಟ್ಟು ಕೊಡಿಸಿದ ಕೆ. ೧. ಎಂಬ ಓಲೆಯ ಪ್ರತಿ. ಇದರಲ್ಲಿಯೂ ಹನ್ನೆರಡು ಸ್ಕಂಧಗಳೂ ಸಮಗ್ರವಾಗಿವೆ. ಅಕ್ಷರಗಳು ಬಹಳ ಸ್ಪಷ್ಟವಾಗಿಯೂ ಅಂದವಾಗಿಯೂ ಇದ್ದು ಓದುವುದಕ್ಕೆ ಬಹಳ ಹಿತವಾಗಿದೆ. ಇದರಲ್ಲಿ ಶಕಟರೇಫದ ಬಳಕೆಯಿಲ್ಲ. ಇದು ಶಾಲಿವಾಹನಶಕ ೧೬೪೦ರಲ್ಲಿ ನಕಲು ಮಾಡಿದ ಪ್ರತಿಯೆಂದು,ಅದರಲ್ಲಿಯೇ ಹೇಳಿದೆ. ಮೂರನೆಯದು ಅದೇ ಸಂಸ್ಥೆಯ ಕೆ. ೬೮೯ ಎಂಬ ಸಂಖ್ಯೆಯ ಗ್ರಂಥ. ಇದರಲ್ಲಿಯೂ ಶಕಟರೇಫವಿಲ್ಲ. ಪ್ರತಿಯ ಆದ್ಯಂತಗಳು ಇಲ್ಲ. ಹಲವು ಗರಿಗಳು ಹುಳು ಕೊರೆದು ಕೆಟ್ಟು ಹೋಗಿವೆ. ಅಕ್ಷರಗಳೂ ಬಹಳ ಸಣ್ಣ. ಆದರೆ ಇದರಲ್ಲಿ ಕೆಲವು ಬಹಳ ಅಪೂರ್ವವಾದ ಪಾಠಗಳು ದೊರೆತಿವೆ. ಮಿಕ್ಕೆರಡು ಗ್ರಂಥಗಳ ಸಹಾಯದಿಂದ ಪರಿಹರಿಸಲಾಗದ ಕೆಲವು ಸಮಸ್ಯೆಗಳು ಇದರಿಂದ ಸುಲಭವಾಗಿ ಬಗೆಹರೆದಿದೆ. ಸಾಮಾನ್ಯವಾಗಿ ಮೂರು ಗ್ರಂಥಗಳಿಗೂ ಸಾಮಾನ್ಯವಾದ ಪಾಠಗಳನ್ನೇ ಅಂಗೀಕರಿಸಿದ್ದೇನೆ. ಇವಲ್ಲದೆ ಇನ್ನು ಕೆಲವು ಪ್ರತಿಗಳನ್ನು ಪ್ರಾಚ್ಯವಿದ್ಯಾ ಸಂಸ್ಥೆಯಲ್ಲಿ ನೋಡಿ ಸಹಾಯ ಪಡೆದಿದ್ದೇನೆ. ಯಾವ ಪಾಠವನ್ನೂ ನಾನು ತಿದ್ದುವ ಸಾಹಸಕ್ಕೆ ಕೈಹಾಕಿಲ್ಲ. ಆದರೆ ಪಾಠಾಂತರಗಳನ್ನು ಅಚ್ಚು ಮಾಡುವ ನಿರ್ಣಯವನ್ನು ವಿಧಿಯಿಲ್ಲದೆ ಕೈಬಿಡಬೇಕಾಯಿತು. ಈಗಲೇ ಸಾಕಷ್ಟು ವಿಸ್ತಾರವಾಗಿರುವ ಈ ಬೃಹದ್ಗ್ರಂಥವು ಪಾಠಾಂತರಗಳೆಲ್ಲ ಸೇರಿದರೆ ಕಡೆಯ ಪಕ್ಷ ಇದರ ಅರ್ಧದಷ್ಟು ಗಾತ್ರವಾದರೂ ಹೆಚ್ಚುತ್ತಿತ್ತು. ಅಷ್ಟು ಹೆಚ್ಚಿನ ಹೊರೆಯನ್ನು ಪ್ರಕಾಶಕರ ಮೇಲೆ ಹೊರಿಸಲು ಶಕ್ಯವಾಗಲಿಲ್ಲ.

ನನಗೆ ಅಗತ್ಯವಾದ ಓಲೆಯ ಪ್ರತಿಗಳನ್ನು ಬೇಡಿದಾಗ ತರಿಸಿಕೊಟ್ಟು ಸಹಾಯ ಮಾಡಿದ ನನ್ನ ಮಿತ್ರರಾದ ಶ್ರೀ. ಎಚ್. ದೇವೀರಪ್ಪ, ಎಂ.ಎ. ಅವರ ಹಾರ್ದಿಕ ಸಹಕಾರ ನನ್ನ ಕೆಲಸವನ್ನು ಬಹಳ ಸುಲಭ ಮಾಡಿತು. ಅವರಿಗೆ ನನ್ನ ಕೃತಜ್ಞತೆ ಸಲ್ಲುತ್ತದೆ.

ಇನ್ನು ಈ ಗ್ರಂಥ ಪ್ರಕಟನೆಯ ಹೊಣೆ ಹೊತ್ತು ನನಗೆ ವಿಶೇಷವಾದ ಬೆಂಬಲ, ಪ್ರೋತ್ಸಾಹ, ಕೊಟ್ಟು ನನ್ನಿಂದ ಈ ಕೆಲಸ ಮಾಡಿಸಿದ ಶ್ರೀ ಎಚ್. ಎಂ. ಶಂಕರನಾರಾಯಣರಾಯರ ಉಪಕಾರವನ್ನು ಎಷ್ಟು ಮೆಚ್ಚಿದರೂ ಸ್ವಲ್ಪವೇ. ಆದರೆ ಅವರ ವಿಷಯ ಹೆಚ್ಚು ಹೇಳಬಯಸುವುದಿಲ್ಲ. ನನಗೆ ಬಹಳ ಸಲಿಗೆಯವರೇ ಆದ ರಾಯರು ಸಂಕೋಚಪಟ್ಟುಕೊಳ್ಳಬಹುದು. ಆದರೆ ಭಾಗವತದ ಪ್ರಕಟನೆಯಂಥ ದ್ರವ್ಯಸಾಧ್ಯವೂ, ಶ್ರಮ

ಸಾಧ್ಯವೂ ಆದ ದೊಡ್ಡ ಕೆಲಸ ಅವರ ಅಮಿತವಾದ ಕಾರ್ಯೋತ್ಸಾಹ ಕರ್ಮಶ್ರದ್ಧೆಗಳಿಂದ ಸಾಧ್ಯವಾಗಿದೆಯೇ ಹೊರತು ಬೇರೆಯಲ್ಲ. ಕಾಗದ ಹೊಂಚುವುದು, ಪ್ರೆಸ್ಸಿಗೆ ಓಡಾಟ, ಬಂಡವಾಳ ಹೂಡಿಕೆ—ಇವೇ ಅಲ್ಲದೆ ಅಚ್ಚಿನ ಕರಡುಗಳನ್ನು ತಿದ್ದುವುದರಲ್ಲಿಯೂ ರಾಯರು ನನಗೆ ಬಹಳವಾಗಿ ನೆರವಾಗಿದ್ದಾರೆ. ಅವರ ಈ ನೆರವು ಇಲ್ಲದೆ ಹೋಗಿದ್ದರೆ ಬಹುಶಃ ಅನೇಕ ತಪ್ಪುಗಳು ಹಾಗೆಯೇ ಉಳಿದುಬಿಡುತ್ತಿದ್ದವು. ಆ ಕೆಲಸದಲ್ಲಿ ಅವರು ಬಹಳ ನಿಪುಣರೂ ಚಾಣಾಕ್ಷರೂ ಆದ ಅನುಭವಿಗಳು! ಅವರ ಉಪಕಾರವನ್ನು ನಿರಂತರವಾಗಿ ಸ್ಮರಿಸುತ್ತಿರುತ್ತೇನೆ.

ಇಷ್ಟಾದರೂ ಅಲ್ಲಲ್ಲಿ ನಮ್ಮ ಕಣ್ಣು ತಪ್ಪಿಸಿ ಕೆಲವು ಅಚ್ಚಿನ ತಪ್ಪುಗಳು ಉಳಿದುಕೊಂಡಿವೆ. ಸಹೃದಯರಾದ ವಾಚಕರು ದಯೆಯಿಟ್ಟು ಮನ್ನಿಸಬೇಕು.

ಈ ಗ್ರಂಥದ ಮುದ್ರಣಕಾರ್ಯದ ಬಹಳ ಶ್ರದ್ಧೆ ವಹಿಸಿ ಅಕ್ಕರೆಯಿಂದ ಸಹಕರಿಸಿದ ಶ್ರೀ ಜಿ.ಎಚ್. ರಾಮರಾವ್ ಬಿ.ಎಸ್‌ಸಿ. ಅವರಿಗೆ ನಮ್ಮ ಕೃತಜ್ಞತೆ ಸಲ್ಲತಕ್ಕದ್ದಾಗಿದೆ. ಅವರ ಕೈಮೀರಿದ ಕಾರಣಗಳಿಂದಾಗಿ ಮುದ್ರಣಕಾರ್ಯಕ್ಕೆ ತಡೆ ಒದಗಿದಾಗ ನಮಗಿಂತ ಅವರಿಗೇ ಹೆಚ್ಚಿನ ಬೇಸರವಾಗಿದ್ದುದು ನಮಗೆ ತಿಳಿಯದುದಲ್ಲ.

ನಿತ್ಯಾತ್ಮ ಶುಕಯೋಗಿಯ ಈ ಗ್ರಂಥದ ಪ್ರಕಟನೆಯ ವಿಷಯದಲ್ಲಿ ನಮ್ಮ ವಿದ್ಯಾಗುರುಗಳಾದ ಡಾ. ಎ. ಆರ್. ಕೃಷ್ಣಶಾಸ್ತ್ರಿ, ಎಂ.ಎ., ಡಿ.ಲಿಟ್ ಅವರು ಮೊದಲಿನಿಂದಲೂ ನಮಗೆ ಅತ್ಯಂತ ಪ್ರೋತ್ಸಾಹವನ್ನು ನೀಡಿದ್ದಾರೆ. ನಮ್ಮ ಮೇಲೆ ಅವರ ವಾತ್ಸಲ್ಯ ಬಲು ಹಿರಿದು. ಇದಕ್ಕಾಗಿ ನಾನು ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ. ಎರಡನೆಯದಾಗಿ ನನ್ನ ಶಿಷ್ಯ ಮಿತ್ರರಾದ ಶ್ರೀ. ಶಂಕರನಾರಾಯಣರಾಯರ ಪ್ರೇರಣೆ, ಪ್ರೋತ್ಸಾಹ, ಬೆಂಬಲಗಳೇ ನಾನು ಈ ಗ್ರಂಥಸಂಪಾದನ ಕಾರ್ಯವನ್ನು ಕೈಕೊಳ್ಳಲು ಕಾರಣ. ಈ ಕಾಲದಲ್ಲಿ ಗ್ರಂಥಪ್ರಕಾಶನ ಅಷ್ಟೇನೂ ಸುಲಭಕಾರ್ಯವಲ್ಲ. ಎಲ್ಲ ವಸ್ತುಗಳ ಬೆಲೆಗಳೂ ಗಗನಕ್ಕೇರಿರುವ ಈ ದಿನಗಳಲ್ಲಿ ಈ ರೀತಿಯ ದೀರ್ಘಕಾವ್ಯದ ಮುದ್ರಣ ಪ್ರಕಾಶನಗಳು ಕಷ್ಟಸಾಧ್ಯವೆಂದು ನಾನು ಹಿಂಜರಿದಾಗ, ನನಗೆ ಧೈರ್ಯ ಹೇಳಿ, ಈ ಕಾವ್ಯದ ಪ್ರಕಾಶನದ ಪೂರ್ಣ ಹೊಣೆ ಹೊತ್ತು ತಮ್ಮ ಸಾಹಸವನ್ನು ಮೆರೆದರು. ಆದರೆ ಇದು ಬಹುದ್ರವ್ಯಸಾಧ್ಯವಾದ ಕಾರ್ಯವೆಂದು ಅವರು ಬಹುಬೇಗ ಮನಗಂಡರು. ಆಗ ರಾಯರು ಜನತಾಜನಾರ್ದನನಿಗೆ ಅರಿಕೆಮಾಡಿಕೊಂಡು ಹಣ ಕೂಡಿಸುವ ಹಂಚಿಕೆ ನಡೆಸಿ, ಚಂದಾದಾರರನ್ನು ಸೇರಿಸಲು ಪ್ರಯತ್ನಿಸಿದರು. ಹಲವು ಜನ ಮಹನೀಯರು ಉದಾರವಾಗಿ ಧನಸಹಾಯ ಮಾಡಿದರೂ ಅದು ಸಾಕಷ್ಟು ಪ್ರಮಾಣದಲ್ಲಿ ಒದಗಿ ಬರಲಿಲ್ಲ. ಅಂಥ ಸಮಯದಲ್ಲಿ ವಿದ್ಯಾಭಿಮಾನ, ಸಾಹಿತ್ಯಪ್ರೇಮ, ಔದಾರ್ಯಗಳಿಗೆ ಹೆಸರಾಂತ ಮೈಸೂರಿನ ಯದುವಂಶಾಲಂಕಾರ ಶ್ರೀಮನ್ಮಹಾರಾಜ ಶ್ರೀಮಜ್ಜಯಚಾಮರಾಜವೊಡೆಯರ್ ಬಹದ್ದೂರ್ ಅವರು ಉದಾರವಾಗಿ ಧನಸಹಾಯ ಮಾಡಿ ಈ ಕೆಲಸ ಸುಗಮವಾಗುವಂತೆ ಮಾಡಿದರು. ನಿರ್ವ್ಯಾಜವಾದ ಅವರ ಈ ಅನುಗ್ರಹಕ್ಕೆ ನಾವು ಶ್ರೀಮನ್ಮಹಾರಾಜರವರಿಗೆ ಅತ್ಯಂತ ಕೃತಜ್ಞರು. ಅವರಿಗೂ, ಅವರ ಕುಟುಂಬವರ್ಗಕ್ಕೂ ಆಯುರಾರೋಗ್ಯಗಳನ್ನೂ ಇತೋಪ್ಯತಿಶಯವಾದ ವೈಭವಗಳನ್ನೂ ಕರುಣಿಸಲೆಂದು ಈ ಮೂಲಕ ಭಗವಂತನನ್ನು ಬೇಡುತ್ತೇನೆ.

ಮೈಸೂರು ಕೆ. ವೆಂಕಟರಾಮಪ್ಪ.
15-12-1964

ಶ್ರೀ

# ಮಂಗಳ ಪದ್ಯಗಳು

ಶ್ರೀ ಗೌರೀವಿಲಸದ್ಬಾಹುವಲ್ಲೀ ವೇಲ್ಲಿತ ವಿಗ್ರಹಂ ।
ವಂದೇ ಹರಿಹರಾಕಾರಾನಲ್ಪಕಲ್ಪ ಮಹೀರುಹಂ ॥

ಶ್ರೀವಾಣೀ ಗಿರಿಜಾಶ್ಚಿರಾಯ ದಧತೋ ವಕ್ಷೋ ಮುಖಾಙ್ಗೇಷು ಯೇ
ಲೋಕಾನಾಂ ಸ್ಥಿತಿಮಾವಹನ್ತ್ಯವಿಹಿತಾಂ ಸ್ತ್ರೀಪುಂಸಯೋಗೋದ್ಭವಾಂ ।
ತೇ ವೇದತ್ರಯಮೂರ್ತಯಸ್ತ್ರಿಪುರುಷಾಸ್ಸಂಪೂಜಿತಾವಸ್ಸುರೈ
ರ್ಭೂಯಾಸುಃ ಪುರುಷೋತ್ತಮಾಮ್ಬುಜಭವ ಶ್ರೀಕನ್ಧರಾ ಶ್ಶ್ರೇಯಸೇ ॥

ದೇವೋ ದೈತ್ಯ ಕುಲಾಂತಕಃ ಪರಶಿವಃ ಕಂದರ್ಪದರ್ಪಾಂತಕೋ
ಲಂಕಾತಂಕವಿಧಾಯಕಃ ಕುರುಪತೇಃ ಸಂಕಲ್ಪ ಸಂಕೋಚಕಃ
ಲೋಕೈಕಸ್ತ್ರಿಪುರಾಂತಕಸ್ತ್ರಿಜಗತಾಮಾತಂಕಕಾಲಾಂತಕೋ
ವಿಶ್ವಾಕ್ರಾಂತಗುಹಾಂತಕೋ ಹರಿಹರಃ ಪಾಯಾತ್ ಸ ವಿಶ್ವಂ ಜಗತ್ ॥

ಶ್ರೀ ಗೌರೀಲಲನಾವಿಲಾಸವಿಲಸತ್ ಸೀಮಂತಮುಕ್ತಾಮಣಿಃ
ದೀನಾನಾಥಜನಪ್ರಸಾದ ಜನನಪ್ರೋದ್ಭಾಸಿಚಿಂತಾಮಣಿಃ
ಉದ್ದಾಮೋಪನಿಷತ್ ಶಿಖಾಮಣಿರಮರ್ತ್ಯಾನೀಕಭೂಷಾಮಣಿಃ
ಸೋಽಯಂ ಪಾತು ನಿರಂತರಂ ಹರಿಹರಸ್ತ್ರೈಲೋಕ್ಯರಕ್ಷಾಮಣಿಃ ॥

ಹರಿಯಿಂದಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು ಪೇಳ್ವರ್ ಕೆಲಂಬರ್
ಹರನಿಂದಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು ಪೇಳ್ವರ್ ಕೆಲಂಬರ್
ನರರಾ ಸಂದೇಹಮಂ ಪಿಂಗಿಸಲತಿಶಯದಿಂ ಕೂಡಲೂರಲ್ಲಿ ಶೋಭಾ
ಕರಮಪ್ಪಂತೊಂದೆ ರೂಪಂ ತಳೆದ ಹರಿಹರಂ ಕೂರ್ತು ರಕ್ಷಿಕ್ಕೆ ನಿಮ್ಮಂ ॥

# ಪ್ರಶಸ್ತಿ ಪದ್ಯಾಷ್ಟಕಂ

ತ್ಯಾಗೇ ಯೋಗೇ ಚ ಯೋ ರಾಗೀ ರಾಜ್ಯಪಾಲಧುರಂಧರಃ ।
ಜಯಚಾಮನೃಪೋ ಜೀಯಾತ್ ಯಶೋರಾಶಿಗುಣಾರ್ಣವಃ ॥

ಭಾರತೀ ಭಾರತೀಸೇವಾತತ್ಪರಾಣಾಂ ಪುರೋಗಮಃ ।
ಕಲಾಕಲಾಪಕುಶಲೋ ಗ್ರಂಥಕಾರಸ್ಸುವಿಶ್ರುತಃ ॥

ವಾಣೀ ಯಸ್ಯ ವಿಹಾರಿಣೀ ತ್ರಿಭುವನೇ ವಿದ್ವನ್ಮನೋಮೋದಿನೀ
ಕ್ಷೋಣೀ ಯಸ್ಯ ಚ ಧರ್ಮವರ್ಮರುಚಿರಾ ಸತ್ಕರ್ಮಸಂಭಾವಿನೀ ।
ಜ್ಞಾನೇ ಯಸ್ಯ ವಿಶಾಲವಿಶ್ವವಿಲಸದ್ ವಿಜ್ಞಾನಮಂಗೀಕೃತಂ
ಸ ಶ್ರೀಮಾನ್ ಜಯಚಾಮರಾಜಮನೃಪತಿಃ ರಾಜರ್ಷಿರೂರ್ಜಸ್ವಲಃ ॥

ಯಸ್ಯೌದಾರ್ಯಗುಣಾತ್ ಪುರಾಣನಿಚಯಂ ಋಗ್ವೇದಭಾಷ್ಯಾದಿಕಂ
ಕರ್ಣಾಟೇಽದ್ಯ ವಿಭಾತಿ ಕರ್ಣಮಧುರಂ ಕರ್ಣಾಟಭಾಷಾಂಕಿತಂ ।
ಯತ್ಸಾಹಿತ್ಯಸುಧಾಂ ಬುಧಾ ರಸವಿದಃ ಸ್ತುನ್ವಂತಿ ದೇಶಾಂತರೇ
ತಸ್ಯ ಶ್ರೀ ಜಯಚಾಮರಾಜನೃಪತೇಃ ಸುಸ್ವಾಗತಂ ಸ್ವಾಗತಂ ॥

ಕೃತಿಯೊಳ್ ಮೇಣ್ ಸಂಸ್ಕೃತಿಯೊಳ್
ಮತಿಯೊಳ್ ಹಿತಗೈವ ನಾಡನಾಳ್ವಾಣತಿಯೊಳ್
ಕ್ಷಿತಿಯೊಳ್ ಪ್ರತಿಯಿಲ್ಲೆನೆ
ನುತಿಪೆಂ ಜಯಚಾಮರಾಜರುಜ್ವಲಜಸಮಂ ॥

ದೊರೆ ಮೈಸೂರಿನ ಜನತೆಗೆ
ದೊರೆ ತಾಂ ಮದರಾಸಿನಲ್ಲಿ ದೊರೆಯೆಲ್ಲೆಡೆಗಂ
ದೊರೆ ಜನ್ಮದೆ ಕರ್ಮದೆ
ದೊರೆ ಧರ್ಮದಿನೆನಿಸಲಿಂತು ನೋಂತರುಮೊಳರೇ ॥

ಕಲೆಯೊಳ್ ತತ್ತ್ವವಿಚಾರದೊಳ್ ಕವಿತೆಯೊಳ್ ಸೌಂದರ್ಯಮೀಮಾಂಸೆಯೊಳ್
ಲಲಿತಾಲಂಕೃತಿಯೊಳ್ ಸಮಂತು ರಸದೊಳ್ ವಿಜ್ಞಾನದುನ್ಮೇಷದೊಳ್
ವಿಲಸನ್ಮಾನಸಮೊಪ್ಪೆ ಲೋಕಹಿತಕೆಂದಾಸ್ತಿಕ್ಯ ಸಂದೇಶಮಂ
ಪಲವಾರುಂ ಕೃತಿಯಿಂ ನೆಗಳ್ಚಿದರಿವರ್ ರಾಜರ್ಷಿವಂಶೋಜ್ವಲರ್ ॥

ಪರಮಾಶ್ಚರ್ಯಮಿದಲ್ತೆ ತಾಮೆ ವಿಬುಧರ್ ಸಾಹಿತ್ಯ ಸೇವಾಪರರ್
ಧರಣೀಪಾಲಕರಾದೊಡಂ ನಡೆಯಿಪರ್ ಕೈಕೊಂಡು ಲೋಗರ್ಕಳಂ
ಗುರುಕಾರುಣ್ಯಮುದಗ್ರಸಿದ್ಧಪದಮಂ ತಂದಿತ್ತುದನಾರ್ಥ್ಯಮೆಂ
ಬರಿವುಳ್ಳರ್ ಜಯಚಾಮರಾಜ ವಿಭುಗಳ್ ಭದ್ರಂ ಶುಭಂ ಮಂಗಳಂ ॥

**ಡಾ. ಕೆ. ಕೃಷ್ಣಮೂರ್ತಿ**

---

ನಿತ್ಯಾತ್ಮ ಶುಕಯೋಗಿ ವಿರಚಿತ

# ಕನ್ನಡ ಭಾಗವತ

## ದಶಮಸ್ಕಂಧ

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

ಅಗಜಾನನಪದ್ಮಾರ್ಕಂ ಗಜಾನನಮಹರ್ನಿಶಂ ।
ಅನೇಕದಂತಂ ಭಕ್ತಾನಾಮೇಕದಂತಮುಪಾಸ್ಮಹೇ ॥

ಇಂದೀವರದಲಶ್ಯಾಮಮಿಂದಿರಾನಂದಕಂದಲಂ ।
ವಂದಾರುಜನಮಂದಾರಂ ವಂದೇಹಂ ಯದುನಂದನಂ ॥

ಯದ್ಭಕ್ತಿಂ ನ ವಿನಾ ಮುಕ್ತಿಃ ಯಃ ಸೇವ್ಯಃ ಸರ್ವಯೋಗಿನಾಂ
ತಂ ವಂದೇ ಪರಮಾನಂದಘನಂ ಶ್ರೀ ನಂದನಂದನಮ್ ॥

ವಂಶೀ ವಿಭೂಷಿತಕರಾನ್ನವನೀರದಾಭಾತ್ ।
ಪೀತಾಂಬರಾದರುಣ ಬಿಂಬಫಲಾಧರೋಷ್ಠಾತ್ ।
ಪೂರ್ಣೇಂದು ಸುಂದರ ಮುಖಾದರವಿಂದ ನೇತ್ರಾತ್ ।
ಕೃಷ್ಣಾತ್ಪರಂ ಕಿಮಪಿ ತತ್ವಮಹಂ ನ ಜಾನೇ ॥

ಶರಣಂ ಕರವಾಣಿ ಶರ್ಮದಂ ತೇ ಚರಣಂ ವಾಣಿ ಚರಾಚರೋಪಜೀವ್ಯಂ ।
ಕರುಣಾಮಸೃಣೈಃ ಕಟಾಕ್ಷಪಾತೈಃ ಕುರು ಮಾಮಂಬ ಕೃತಾರ್ಥ ಸಾರ್ಥವಾಹಂ ॥

ನಿಗಮ ಕಲ್ಪತರೋರ್ಗಲಿತಂ ಫಲಂ ಶುಕಮುಖಾದಮೃತದ್ರವಸಂಯುತಂ ।
ಪಿಬತ ಭಾಗವತಂ ರಸಮಾಲಯಂ ಮುಹುರಹೋ ರಸಿಕಾ ಭುವಿಭಾವುಕಾಃ ॥

ಶ್ರೀಮದ್ಭಾಗವತಾಭಿಧಃ ಸುರತರುಃ ಸಾರಾಂಕುರಃ ಸಜ್ಜನೇ ।
ಸ್ಕಂಧೈರ್ದ್ವಾದಶಭಿಸ್ತತಃ ಪ್ರವಿಲಸದ್ಭಕ್ತ್ಯಾಲವಾಲೋದಯಃ ॥
ದ್ವಾತ್ರಿಂಶತ್ ತ್ರಿಶತಂ ಚ ಯಸ್ಯ ವಿಲಸಚ್ಛಾಖಾಃ ಸಹಸ್ರಾಣ್ಯಹೋ ।
ಪರ್ಣಾನ್ಯಷ್ಟದಶೇಷ್ಟದೋಽತಿ ಸುಲಭೋ ವರ್ವರ್ತಿ ಸರ್ವೋಪರಿ ॥

ಯಂ ಪ್ರವಜಂತಮನುಪೇತಮಪೇತಕೃತ್ಯಂ ।
ದ್ವೈಪಾಯನೋ ವಿರಹಕಾತರ ಆಜುಹಾವ ॥
ಪುತ್ರೇತಿ ತನ್ಮಯತಯಾ ತರವೋಽಭಿನೇದುಃ ।
ತಂ ಸರ್ವಭೂತ ಸುಹೃದಂ ಮುನಿಮಾನತೋಽಸ್ಮಿ ॥

# ಮಂಗಳಾಚರಣೆ

ಶ್ರೀವರನು ಶಾಶ್ವತನಖಿಳವೇ
ದಾವಳೀ ಸಂಸ್ತುತ್ಯನಮಿತಗು
ಣಾವಲಂಬನನಂಬುಜೋದ್ಭವಮುಖ್ಯ ಸುರವಂದ್ಯ
ದೇವದೇವನಶೇಷ ಧರಣೀ
ದೇವ ಗೋದ್ವಿಜರಕ್ಷಣಾರ್ಥಕೃ
ತಾವತಾರನು ಮಾಳ್ಕೆ ಯೋಗಕ್ಷೇಮವನು ನಮಗೆ ೧

ನಿಗಮ ಕಲ್ಪಮಹಾದ್ರುಮದ ಶಾ
ಖೆಗಳ ತುದಿಯಲಿ ತೋರ್ಪ ಪರರಿಗೆ
ಬಗೆಯಬಾರದ ಪರಮ ತತ್ತ್ವಾಮೃತ ರಸಾಯನವ
ಸೊಗಯಿಸುವ ಭಾಗವತ ಫಲವನು
ಜಗಕೆ ದಯೆಯಿಂದಿತ್ತ ಕರುಣಾ
ಳುಗಳ ದೇವನು ಶುಕನು ಮಾಳ್ಕೆ ಶುಭೋದಯವ ನಮಗೆ ೨

ಭಾಗವತದರ್ಥವನು ಸಂಗ್ರಹ
ವಾಗಿ ಬಲ್ಲಂದದಲಿ ವಿಷಯವಿ
ಭಾಗವನು ತತ್ತತ್ಪ್ರಯೋಜನಜನಿತ ಸಿದ್ಧಿಯನು
ರಾಗದಿಂದಱುಪುವೆನಖಿಳಭವ
ರೋಗ ಹರವಿದೆನಲ್ಕೆ ಮಾಳ್ಕೆ ಮ
ಹಾಗುಣಜ್ಞರು ಕಾವ್ಯಸಾರಥ್ಯವನು ಸಜ್ಜನರು ೩

ಕನ್ನಡದ ಕೃತಿಯೆಂದವಜ್ಞಾ
ಪನ್ನರಾಗದಿರಕಟ ದರ್ಪಣ
ಕನ್ನಡಿಯಿದೆಂದೆಂದಡಾವುದು ಕೊರತೆ ನೋಡುವಡೆ
ತನ್ನ ಮುಖಸಂದರುಶನವಲಾ ಪ್ರತಿ
ಪನ್ನಫಲ ಹರಿಗುಣ ಚರಿತ್ರದ
ವರ್ಣನೆಗೆ ಕುಂದೇನು ಭಾಷಾಭೇದದಲಿ ಕೃತಿಯ ೪

ಹರಿಗುಣಸ್ತುತಿ ಹರಿಪರಾಯಣ
ಶರಣಜನ ಸತ್ಕೀರ್ತಿಸಂಸ್ತುತಿ
ಹರಿಪದಾಂಬುಜಭಕ್ತಿ ತತ್ಸಾಧನದ ವಿಸ್ತಾರ
ಹರಿನಿಜಜ್ಞಾನೋಪಲಾಲಿತ
ಪರತರಾನಂದಾನುಭವವಿನಿ
ತಿರದೆ ವಿಸ್ತರವೆನಲು ವರ್ಣಿಸತಕ್ಕುದಿದಱೊಳಗೆ ೫

ಅನಶನ ವ್ರತದಲಿ ಪರೀಕ್ಷಿತೆ
ಜನಪನಿರೆ ಭಾಗೀರಥಿಯ ಪಾ
ವನವೆನಿಸಿದುತ್ತರ ದಿಶಾಭಾಗದಲಿ ಪರಿವಡಿಸಿ
ಮುನಿನಿಕರವೈದಿರಲು ಕರುಣಾ
ವನಧಿ ವೇದವ್ಯಾಸ ನಂದನ
ನನುಪಮುಂಗಭಿವರ್ಣಿಸಿದನಿದನಧಿಕ ಕರುಣದಲಿ ೬

# ಮೊದಲನೆಯ ಸಂಧಿ

ಅವನಿದುಷ್ಪಕ್ಷತ್ರ ಕುಲಭಾ
ರವನು ಸೈರಿಸಲಱಿಯದಬುಜೋ
ದ್ಭವಗೆ ಬಿನ್ನವಿಸಿದಳು ಬಲಿದುದು ಮೇಲೆ ಸುರಕಾರ್ಯ

ಹೇಳಿದಿರಿ ನೀವೆನಗೆ ತಾ ದಿಟ
ಕೇಳಿದೆನಲಾ ಸೋಮಸೂರ್ಯರ
ಪೀಳಿಗೆಯ ಭೂಪೋತ್ತಮರ ಪಾವನಚರಿತ್ರವನು
ಹೇಳಬೇಹುದು ತನಗೆ ಯದುಭೂ
ಪಾಳನನ್ವಯದೊಳಗೆ ಲಕ್ಷ್ಮೀ
ಲೋಲನವತರಿಸಿದ ಕಥೆಯನದನೆಂದನಾಭೂಪ ೧

ಅಱಿಯರಜ ಭವಮುಖ್ಯರಾವನ
ನಿಱುಗೆಯನು ವೇದಾಂತಕೋಟಿಗ
ಳೊಱಲಿ ಕಾಣಿಸಲಱಿಯವಾವನ ಪಾದಪಂಕಜವ
ಮಱೆವಿಡಿದು ಮರ್ತ್ಯಾವತಾರದ
ಲುಱುವ ದೈವವದೆಂತು ಜನಿಸಿದ
ತೆಱನನೆಲೆ ಮುನಿನಾಥ ಕೃಪೆಮಾಡುವುದು ತನಗೆಂದ ೨

ಆವ ಸುಕೃತದ ಸಿದ್ಧಿಯೋ ಮೇ
ಣಾವ ತಪದ ಸಮೃದ್ಧಿಯೋ ವಸು
ದೇವದೇವಕಿಯರಿಗೆ ಪೂರ್ವಭವಾಂತರಾರ್ಜಿತದ
ದೇವದೇವನನಖಿಳ ನಿಗಮಶಿ
ರೋವಿರಾಜಿತ ಪಾದಪದುಮನ
ನಾವಪರಿಯಲಿ ಭಜಿಸಿ ಮಗನನು ಪಡೆದರವರೆಂದ ೩

ಉದಿಸಿ ಯದುಕುಲದೊಳಗದಾವಂ
ಗದಲಿ ಮಾನುಷವೆನಿಪ ಕರ್ಮವ
ಪದುಮನಾಭನು ವಿರಚಿಸಿದನದನೆಲ್ಲವನು ತನಗೆ
ವಿದಿತವೆನೆ ವಿಸ್ತರಿಸಿ ಕಾರು
ಣ್ಯದಲಿ ಕರುಣಿಪುದಾರು ನೀವ
ಲ್ಲದೆ ಭವಾಬ್ಧಿನಿಮಗ್ನಜನ ನಿಸ್ತಾರಕರರೆಂದ ೪

ಇದೆಯಲಾ ಭವರೋಗಕೌಷಧ
ವಿದೆ ನಿವೃತ್ತಾಶೇಷತೃಷ್ಣರ
ಹೃದಯಕರುಷಣವಖಿಳಕರ್ಣಾಮೃತದ ಕಡುಗಡಲು
ಇದನು ಕೇಳಿದೆನಿನ್ನು ಸಾಕೆಂ
ಬುದಿತ ಪಾತಕಿಗಳಿಗೆ ಗತಿಯಾ
ವುದೊ ಕೃತಘ್ನರಿಗಾತ್ಮಘಾತಕರಿಗೆ ಶಿವಾಯೆಂದ ೫

ಆವನೊಲವಿನ ಸಾರಥಿತ್ವದ
ನಾವೆಯಿಂದಸ್ಮತ್ಪಿತಾಮಹ
ನಾ ವಿಗಡ ಗುರು ಭೀಷ್ಮನಕ್ರಾವಳೀಸುದುಸ್ತರದ
ಓವೊ ಭಾರತಸೈನ್ಯ ಶರಧಿಯ
ನೋವದುತ್ತರಿಸಿದನಲ್ಲೈ ತಾ
ನಾವಪರಿಯಲಿ ಮಱೆವೆನಾ ಕುಲದೇವತೆಯನೆಂದ ೬

ಮತ್ತೆ ಗುರುಸುತನಸ್ತ್ರವಹ್ನಿಯ
ಕಿತ್ತಡದ ಕೋಪದಲಿ ತನುವಿದು
ಹೊತ್ತಿ ಹೊಗೆವುತ್ತಿರಲು ಚಕ್ರಾಯುಧನು ಮನವೊಲಿದು
ಇತ್ತೆಱದ ನೃಪರನ್ವಯದ ನಿಜ
ಬಿತ್ತೆನಿಪ ತನ್ನಂಗವಿದನಾ
ಪೆತ್ತ ತಾಯುದರವನು ಪೊಕ್ಕೋವಿದನಲಾ ಯೆಂದ ೭

ಸಕಲಜೀವನಿಕಾಯ ಕರಣ
ಪ್ರಕರದಂತರ್ವರ್ತಿ ಪುರುಷಾ
ತ್ಮಕನೆನಿಸಿ ಸಲಹುವನದಾವನಶೇಷಭುವನವನು
ಮಕರಿಸುತ ಹೊಱಗಿದ್ದು ಕಾಲಾ
ತ್ಮಕನೆನಿಸಿ ಸಂಹರಿಸುವಖಿಳಾ
ತ್ಮಕನನೊಲ್ಲದ ಮರ್ತ್ಯರಿಗೆ ಗತಿಯಾವುದಕಟೆಂದ ೮

ಬಲ್ಲಹರ ಬಲ್ಲಹನೆ ನೀನೇ
ಬಲ್ಲೆ ಕರುಣಿಪುದೆನಗೆ ಲಕ್ಷ್ಮೀ
ವಲ್ಲಭನ ಲೀಲಾವತಾರ ಕಥಾಪ್ರಸಂಗವನು
ನಿಲ್ಲದೀ ಮನವಾ ಮುಕುಂದನ
ಸಲ್ಲಲಿತ ಗುಣಗಣ ಸುಧಾಬ್ಧಿಯ
ಲಲ್ಲದಿತರಕಥಾಮೃತದ ಕೂಪೋದಕದಲೆಂದ ೯

ಒಂದು ಜನ್ಮದಲಿಬ್ಬರುದರದ
ಲೊಂದಿ ಸಂಕರುಷಣನು ಜನಿಸಿದ
ನೆಂದಡತ್ಯದ್ಭುತವಲಾ ದೇವಕಿಗೆ ರೋಹಿಣಿಗೆ
ನಂದನನು ತಾನಾದನೇತಕೆ
ತಂದೆಯರಮನೆಯಿಂದ ದೇವ ಮು
ಕುಂದನೆಯ್ದಿದನುದಿಸಿ ನಂದಾವಾಸದೆಡೆಗೆಂದ ೧೦

ಬಾಲಕೇಳಿಗಳೆಸೆಯಲಾ ನಂ
ದಾಲಯದಲೆನಿತು ದಿನ ಲಕ್ಷ್ಮೀ
ಲೋಲನಾಡಿದ ನಾಟಕವನಾ ವೃಂದಾವನಾಂತದಲಿ
ಮೇಲೆ ತಾಯೊಡವುಟ್ಟಿದ ಕ್ಷಿತಿ
ಪಾಲನಲ್ಲಾ ಕಂಸನಾತನ
ಕಾಲನನು ಕಾಣಿಸಿದನೆಂಬಾ ಮಾತದೆಂತೆಂದ ೧೧

ಸಕಲಬಂಧುಗಳೊಡನೆ ಸರ್ವಾ
ತ್ಮಕನದಾವ ನಿವಾಸದಲಿ ಬಾ
ಲಕಿಯರೊಡನೆಸೆದಿರ್ದನೆನಿಬರು ಸತಿಯರಾತ್ಮಜರು
ಪ್ರಕೃತಿಗುಣರಹಿತಾತ್ಮನವನಿಗೆ
ಸುಕೃತಫಲ ಕೈಗೂಡಲಿರ್ದನು
ಭಕುತವತ್ಸಲನೇಸು ಕಾಲ ನಿಜೇಚ್ಛೆಯಿಂದೆಂದ ೧೨

ಆ ರಮಾವಲ್ಲಭನ ಲೀಲೋ
ದಾರ ಪುಣ್ಯಚರಿತ್ರವನು ಸಂ
ಸಾರ ಘೋರವ್ಯಾಧಿ ವಿದ್ರಾವಿತರಿಗೌಷಧವ
ಕಾರುಣಿಕ ಕರುಣಿಸುವುದೆಲ್ಲವ
ನಾರು ನಿನ್ನಂತಿರಲು ಹರಿಗುಣ
ಚಾರುಸುಧೆಯನು ಸರಿಗಱೆವ ಸಂಪನ್ನಗುಣರೆಂದ ೧೩

ರಿಸಿಗಳರಸನೆ ನಿನ್ನ ಮುಖದಿಂ
ದೊಸರುವಚ್ಯುತ ಗುಣಕಥಾಮೃತ
ರಸವನಾಸ್ವಾದಿಸುತ ತನಗನಶನದ ದುಸ್ಸಹದ
ಹಸಿವುತೃಷೆಗಳು ಮುನಿವರನೆ ಬಾ
ಧಿಸವು ತುಷ್ಟಿಯನೆಯ್ದುತಿದೆ ತ
ನ್ನಸು ಮಹಾಮೃಷ್ಟಾನ್ನಭೋಜನಕಧಿಕವೆನಲೆಂದ ೧೪

ಮನವಿದಚ್ಯುತಗುಣಕಥಾಮೃತ
ವನಧಿಯೊಳಗೋಲಾಡುವಂತೆಲೆ
ಮುನಿಪ ಕರುಣಿಸು ನಿಜಪದೈಕಪರಾಯಣಂಗೆನಗೆ
ತನುವಿನಾಯಸವೇವುದೆಂದಾ
ಜನಪನಾಮುನಿವರನ ಪದಯುಗ
ವನಜದಲಿ ಮೈಯಿಕ್ಕಿ ಮುಳುಗಿದನಶ್ರುಪೂರದಲಿ ೧೫

ಶಿರವ ಹಿಡಿದೆತ್ತಿದನು ಮುನಿಪತಿ
ಕರುಣದಲಿ ಮೈದಡವಿ ಕೇಳೆ
ನ್ನರಸ ಕೇಳೆಲೆ ಭಾಗ್ಯನಿಧಿ ಪರಹಿತಪರಾಯಣನೆ
ಧರೆಯಲಾರೀ ನಿನ್ನ ಹೋಲುವ
ಪರಮವೈಷ್ಣವರೆನುತ ಕಲಿಮಲ
ಹರವೆನಿಸ ಕೃಷ್ಣಾವತಾರವನೊಲಿದು ವರ್ಣಿಸಿದ ೧೬

ವಸುಧೆ ದೈತ್ಯರ ಭಾರದಲಿ ತಲೆ
ಕುಸಿದು ಪಾತಾಳಕ್ಕೆ ಬೀಳುತ
ಬಸಿವ ಕಂಬನಿಧಾರೆಯಲಿ ಮೈನನೆದು ಬಡವಾಗಿ
ಹಸುವಿನಾಕೃತಿಯಿಂದ ತನು ಕಂ
ಪಿಸುತ ಕಂಡವರಕಟಕಟ ಎನೆ
ಬಿಸಜಸಂಭವನಲ್ಲಿಗೆಯ್ದಿದಳೆಱಗಿದಳು ಪದಕೆ ೧೭

ಬಿನ್ನವಿಸಿದಳು ದೈತ್ಯದಾನವ
ರೆನ್ನ ಮೇಲಮರಾಸುರಾಹವ
ಖಿನ್ನಗಾತ್ರರು ಜನಿಸಿ ದುಷ್ಟಕ್ಷತ್ರರೂಪದಲಿ
ಬನ್ನಬಡಿಸುತ್ತಿದೆ ನಿಜಾಶ್ರಮ
ವರ್ಣಧರ್ಮಂಗಳನು ಬಾಧಿಸು
ತಿನ್ನು ನೀನೇ ಬಲ್ಲೆಯೆಂದಳು ತನ್ನ ದುಃಸ್ಥಿತಿಯ ೧೮

ಕೇಳಿದನು ಪೆಣ್ಬುಯ್ಯಲನು ನೆಱೆ
ದೋಲಗದ ಜನ ಬೆದಱಲೆತ್ತಿದ
ನಾಲಿಸಿದನಾಲೋಚನೆಯ ಮಾಡಿದನು ಸುರರೊಡನೆ
ಪಾಲಿಸುವಡಳವಲ್ಲೆನುತ್ತಾ
ನೀಲಲೋಹಿತ ಶಕ್ರ ಯಮ ದಿಗು
ಪಾಲರೊಡನೈತಂದನಜನಿಂಗಡಲ ತಡಿಗಾಗಿ ೧೯

ಆಮಹಾಬ್ಧಿಯ ತಡಿಯಲಮರ
ಸ್ತೋಮಸಹಿತಭಿನಮಿಸಿ ಭಕ್ತ
ಕ್ಷೇಮಧಾಮನೆ ಪುಣ್ಯನಾಮನೆ ನಿಗಮದುರ್ಗಮನೆ
ಸೋಮಸೂರ್ಯಕೃಶಾನುಕೋಟಿವಿ
ರಾಮತೇಜೋನಿಧಿಯೆ ರಕ್ಷಿಸು
ಭೂಮಿಭಾರವನಪಹರಿಸಿ ಕೃಪೆಮಾಳ್ಪುದೆಮಗೆಂದ ೨೦

ಪರಮಪುರುಷ ಪರೇಶ ಪರಮೇ
ಶ್ವರ ಪರಂಜ್ಯೋತಿಸ್ವರೂಪನೆ
ಪರಮ ಪರಮಾನಂದರೂಪನೆ ರೂಪವಿರಹಿತನೆ
ಶರಣುವೊಕ್ಕೆವು ಕಾವುದೆಮ್ಮನು
ಧರೆಯಭಾರವ ಕಳೆದು ನಿಜಭ
ಕ್ತರಿಗೆ ನೆಱೆನಿರ್ಭಯವ ಮಾಡುವುದೆಂದನಬುಜಭವ ೨೧

ಒಱಲುತೈದಳೆ ಧರಣಿ ದೈತ್ಯರ
ಹೋಱೆಗಳುಕಿ ಹೇರಾಳ ದುಃಖದ
ಲುಱುವನೆಂದೆನಗೆಂದಡಾನೇಗುವೆನು ನಿರ್ಣಯವ
ಅಱಿಯೆ ತಾನಿದನೆನ್ನ ತನ್ನಲಿ
ಹೆಱೆವ ಕಾರ್ಯವೆ ದೇವರಿಗೆ ತಾ
ನಱುಪಿದೆನು ಕಾಲದಲಿ ತನಗಿನ್ನಿಲ್ಲ ಭಯವೆಂದ ೨೨

ಸೃಷ್ಟಿಗೆನ್ನನು ಸೃಜಿಸಿ ರಕ್ಷಿಸ
ಲಷ್ಟದಿಗುಪಾಲರನು ನೀ ಬೆಳ
ಗಿಟ್ಟೆ ನಭದಲಿ ಚಂದ್ರಸೂರ್ಯರ ತಾರಕಗ್ರಹವ
ನೆಟ್ಟನೀ ಜಗವೈದೆ ಕರುಣಾ
ದೃಷ್ಟಿಯಲಿ ಜೀವಿಸಿದುದಿನ್ನೆಗ
ಕೆಟ್ಟುದಿಂದೆನಲೊಡೆಯನವಧರಿಸುವುದು ಬಿನ್ನಪವ ೧೩

ದೆಸೆಗಳೆಸೆಯಲು ಕರ್ಣವಿವರದ
ಲಸು ಪವನ ನಿನ್ನಕ್ಷಿಗಳು ರವಿ
ಶಶಿಗಳಾಸ್ಯದಲಗ್ನಿಯು ಲಲಾಟದಲಿ ಹುಬ್ಬುಗಳ
ರಸನೆಯಲಿ ಪಾಶಾಯುಧನು ಭುಜ
ವಿಸರದಲಿ ದಿಗಧಿಪರು ತನಗಾ
ವಸಥ ಗುಹ್ಯದಲೆನಲು ಜಗದಾತ್ಮಕನು ನೀನೆಂದ ೧೪

ಮೃತ್ಯು ಗುದದಲಿ ನಾಭಿಯಲಿ ನಭ
ವುತ್ತಮಾಂಗದಲಾಯ್ತು ದಿವವೆನೆ
ಕೃತ್ತಿವಾಸನಹಮ್ಮಿನಲಿ ಶಶಿ ಮನದಲುದುಭವಿಸಿ
ಉತ್ತರಿಸಿದನು ನಭಕೆ ದೇವರ
ಚಿತ್ತದಲಿ ಕ್ಷೇತ್ರಜ್ಞನಿಂತು
ತೃಪ್ತಿಯಾಯ್ತೀ ಜಗಕೆ ದೇವರಸನ್ನಿಧಿಯಲೆಂದ ೧೫

ದೇವದೇವನ ನೇಮದಲಿ ರಾ
ಜೀವನಾಭನೆ ಸೃಜಿಸಿದೆನು ಭುವ
ನಾವಳಿಯನದ್ದುವನು ಕಣ್ಗಿಚ್ಚಿನಲಿ ಹರನಿದನು
ಕಾವರಿಂದ್ರಾದಿಗಳು ನೀನೇ
ಜೀವಭೂತನು ಜಗಕೆ ನಿಮ್ಮಡಿ
ಗಾವು ಬಿನ್ನಹಮಾಳ್ಪುದೇನಖಿಳಾತ್ಮಕಂಗೆಂದ ೧೬

ಅಭಯಹಸ್ತವ ತೋಱಿ ಭುವನ
ಪ್ರಭುವೆ ರಕ್ಷಿಸಬೇಹುದೆಂದಾ
ತ್ರಿಭುವನೇಶ್ವರಗೆಱಗಿ ಕೈಗಳ ಮುಗಿದು ಬಿನ್ನವಿಸೆ
ನಿಭೃತಕಾರುಣ್ಯಾಬ್ಧಿ ಘನಸ
ನ್ನಿಭನು ಗಂಭೀರೋಕ್ತಿಯಲಿ ಕೇ
ಳ್ನಭದೊಳಿದ್ದಿಂತೆಂದನಾ ಕಮಲಜಭವಾದ್ಯರಿಗೆ ೧೭

ಕೇಳಿದೆನು ನಾನೆಲ್ಲವನು ಧರೆ
ಯೂಳಿಗವನಂಜದಿರಿ ಧಾತ್ರಿಯ
ಮೇಲೆ ತಾನವತರಿಸಿದಪೆನುರಗಾಧಿಪತಿ ಸಹಿತ
ಲೋಲಲೋಚನೆ ಲಕ್ಷ್ಮಿಸಹಿತ ನೃ
ಪಾಲವೇಷಚ್ಛನ್ನ ದೈತ್ಯರ
ಸೀಳುವೆನು ಭಯಬೇಡೆನುತ್ತಡಗಿತು ನಭೋನಿನದ ೧೮

ಅಲಿಸುತ ವೈಯಿಕ್ಕಿ ಕಮಲಜ
ನೇಳುತಂದಿದನೆಂದನಮರರು
ಕೇಳಿದಿರೆ ಕಾರುಣ್ಯನಿಧಿ ಕರುಣಿಸಿದ ಮಾತುಗಳ
ಪೇಳುವೆನು ನಿಮಗಾನು ಝುಡತಿಯ
ಲೇಳಿದಿಟವನು ಮಾಡದೆಲ್ಲರು
ಮೌಳಿಗಳಲಾಂತೀಗಳಿಂತಿರೆ ಮಾಡಬೇಕೆಂದ ೧೯

ಹುಟ್ಟಿದಪನವನಿಯಲಿ ನೀವೂ
ಹುಟ್ಟುವುದು ಯದುಕುಲದಲೆಲ್ಲರು
ಹುಟ್ಟುವುದು ನಿಮ್ಮಬಲೆಯರು ತತ್ಪೂಜನಾರ್ಥದಲಿ
ಸೃಷ್ಟಿಯೊಡೆಯನು ಧರೆಯ ಮೇಲೊಡ
ಲಿಟ್ಟು ಸುಳಿವನ್ನೆಗ ಶರೀರವ
ತೊಟ್ಟಹುದು ತತ್ಪಾದಸೇವಕರಾಗಿ ನೀವೆಂದ ೨೦

ವಿದಿತವೆನೆ ವಸುದೇವನೆಂಬನ
ಸದನದಲಿ ಸಾಕ್ಷಾತು ವಿಷ್ಣುವೆ
ಯದುಕುಲಾಮಲಕೈರವಾಕರ ಪೂರ್ಣಶಶಿಯೆನಿಸಿ
ಉದಿಸಿದಪನಗ್ರಜನನಂತನು
ಪದುಮನಾಭಪ್ರಿಯಚಿಕೀರ್ಷೆಯ
ಲುದುಭವಿಪನೀ ಧರೆಗಭೀಷ್ಟಪ್ರದನು ತಾನಾಗಿ ೨೧

ಈಸಮಸ್ತ ಜಗಜ್ಜನಸ್ಥಿತಿ
ನಾಶಹೇತುವೆನಿಪ್ಪ ಮಾಯೆ ವಿ
ಲಾಸದಲಿ ಜನಿಸುವಳು ಗಡ ಜನಮೋಹನಾರ್ಥದಲಿ
ವಾಸುದೇವನ ನೇಮವಾಯ್ತು ಗ
ಡಾಸುರದ ಹೊಱೆ ಹೋಯ್ತು ಧರಣಿಗೆ
ಲೇಸು ನಮ್ಮಿಷ್ಟಾರ್ಥವಾಯ್ತಿನ್ನಂಜಬೇಡೆಂದ ೨೨

ಇಂತು ಸಂತವಿಸಿದನು ವಿಬುಧರ
ಸಂತತಿಯನಳಬೇಡೆನುತ ಭೂ
ಕಾಂತೆಯನು ಬೋಳೈಸಿ ಭುವನಾಧೀಶ್ವರರಿಗೊಲಿದು
ಚಿಂತೆಯನು ಮಾಣಿಸುತ ಹರುಷ
ಸ್ವಾಂತನೆಲ್ಲರ ಬೀಳುಕೊಟ್ಟು ದಿ
ಗಂತವಿಶ್ರುತಕೀರ್ತಿ ನಡೆತಂದನು ನಿಜಾಲಯಕೆ ೨೩

ಅತ್ತಲನ್ನೆಗ ಮಧುರೆಯೆಂಬ ಪು
ರೋತ್ತಮದಲಾ ಶೂರಸೇನ ನೃ
ಪೋತ್ತಮನು ಪೂರ್ವದಲಿ ಸಲಹಿದನವನಿಮಂಡಲವ
ಉತ್ತಮಾಮಳಕೀರ್ತಿ ತತ್ಸಾಂ
ತತ್ಯದಲಿ ಸಂಭವಿಸಿ ಮೆಱೆದನು
ವೃತ್ತಗುಣಗಣನೆನಿಸಿ ಶೂರನೃಪಾಲನೀಧರೆಗೆ ೨೪

ಆ ವಿಮಲಗುಣನಿಧಿಗೆ ವರವಸು
ದೇವನಾತ್ಮಜನಾಗಿ ಧರೆಯಲಿ
ಭೂವರನೆ ಬಹುಪುಣ್ಯರಾಶಿಗೆ ತವರುಮನೆಯಾಗಿ
ಜೀವನಿಕರಕ್ಕಿಷ್ಟ ದೈವದ
ಠಾವ ತೋಱುವ ಗುರುವಿನಂದದ
ಲೀ ವಸುಧೆಗಗ್ಗದ ಮಹೋದಯದಂತೆ ರಂಜಿಸಿದ ೩೫

ಉಗ್ರಸೇನನೆನಿಪ್ಪ ನೃಪನ
ಭ್ಯುಗ್ರತೇಜೋವನಧಿ ವಿಪುಳೋ
ದಗ್ರಭುಜಬಲನಹಿತಕಾನನದಹನದಾವಾಗ್ನಿ
ಅಗ್ರಜನು ದೇವಕಿಗೆ ತತ್ಸುತ
ನುಗ್ರವಿಕ್ರಮ ಕಂಸನೆಂಬ ದು
ರಾಗ್ರಹಕ್ಷಿತಿಪಾಲನೊಪ್ಪಿರಲಿಂತು ಮಧುರೆಯಲಿ ೩೬

ದೇವಕನ ಸುತೆ ಸಕಲ ಸೌಭಾ
ಗ್ಯಾವಳೀ ಸಂಪನ್ನೆ ತ್ರಿಭುವನ
ಪಾವನಾಮಳ ಕೀರ್ತಿ ಪುಣ್ಯವಿತಾನವಿಸ್ತೀರ್ಣೆ
ದೇವಕೀಸಂಜ್ಞಿತೆ ಸಮಸ್ತ ಸು
ರಾವಳೀಸಂಸ್ತುತ್ಯೆ ರೂಪಗು
ಣಾವಲಂಬನೆಯೆಸೆದಳಾ ಪುರಲಕ್ಷ್ಮಿಯಂದದಲಿ ೩೭

ಮಧುರೆಯೆಂಬಾಪುರಕೆ ದೇವತೆ
ಮಧುಮಥನನದಱಿೊಳಗೆ ನಿಲೆ ಸ
ನ್ನಿಧನೆನಿಸಿ ಸಾಕ್ಷಾತ ಕಾಮಿತಸಿದ್ಧಿಗಳ ಕೊಡುತ
ಮಧುರೆಯದು ಸಂಪನ್ನನಿಜಗುಣ
ಮಧುರದಲಿ ರಂಜಿಸಿತು ನೆಱೆ ನಿರ
ವಧಿಕವಹ ನಿತ್ಯಾತ್ಮನಾರಾಯಣನ ಕರುಣದಲಿ ೩೮

ಮೊದಲನೆಯ ಸಂಧಿ ಮುಗಿಯಿತು

# ಎರಡನೆಯ ಸಂಧಿ

ದೇವಸನ್ನಿಭಮಹಿಮನಾ ವಸು
ದೇವನೆಸೆದನು ಮಧುರೆಯಲಿ ವರ
ದೇವಕೀದೇವಿಯ ವಿವಾಹದ ಪರಮವಿಭವದಲಿ

ಅರಸ ಕೇಳಾಮಧುರೆಯೆಂಬಾ
ಪುರದೊಳಗೆ ದೇವಕನ ಮಗಳನು
ಪರಮಕನ್ಯಾರತ್ನವನು ದೇವಕಿಯನೊಂದು ದಿನ
ಪುರುಷವೇಷದ ಧರೆಯಜಂಗಮ
ಪರುಷವೆನಿಪ ಯದೂತ್ತಮನು ಪತಿ
ಕರಿಸಿದನು ವೈವಾಹಿಕದಲಂದೊಲಿದು ವಸುದೇವ ೧

ಆದುದುತ್ಸವವೇನನೆಂಬೆನು
ಯಾದವರ ಪುರದೊಳಗೆ ತಳಿತುದು
ಮೇದಿನೀಶ ಮಹಾವಿವಾಹವಿಧಾನವಿಸ್ತಾರ
ಆದರದ ಹೂವಲಿಯ ರಚನೆಯ
ಬೀದಿಗಳ ಬಹುವಿಧ ವಿತಾನದ
ನಾದನಿರ್ಭರ ಭೂರಿಭೇರೀ ಬಹಳರಭಸದಲಿ ೨

ಕರಿತುರಗರಥ ಪಾದಚಾರಿಗ
ಳುರವಣಿಸಿ ಹೊಱನಡಲು ರಥವನು
ವರವಧುಗಳೇಱಿದರು ಬಹಳಛತ್ರಚಾಮರದ
ಭರದಲದ್ದುದು ಗಗನ ಸುರರಂ
ಬರದಲೊಯ್ಯಾರಿಸಲು ವೀಣಾ
ಮುರಜ ಶಂಖಧ್ವನಿ ಛಡಾಳಿಸಲೆಂಟು ದಿಕ್ಕಿನಲಿ ೩

ಆ ರಥವನೊಡನೇಱಿ ಕಂಸನು
ದಾರಮತಿ ತಂಗಿಯನು ಕಳುಹುತ
ಭೂರಿವಿಭವದಲಂದು ನಡೆದನು ನಿಬ್ಬಣಿಗರೊಡನೆ
ವೀರ ಮಾಗಧವಂದಿಗಳು ಕೈ
ವಾರಿಸಲು ಕಳಕಳದ ಪರಿಜನ
ವಾರಿಧಿಯ ಪರಮೋತ್ಸವದ ಸಂಭ್ರಮ ಸಮೃದ್ಧಿಸಿತು ೪

ಚಾರುಮಣಿ ರಚನೆಗಳು ಮೆಱೆವಱು
ನೂರು ದಿವ್ಯರಥಂಗಳನು ನಾ
ನೂರು ಭದ್ರಗಜಂಗಳನು ಹದಿನಾಲ್ಕು ಸಾವಿರದ
ಸಾರ ತುರಗಂಗಳನು ಮಗಳಿಗೆ
ಮಿಱುವನುರಾಗದಲಿ ಕೊಟ್ಟನು
ದಾರಮತಿ ದಾಸೀಸಹಸ್ರವನುರು ಗುಣಾನ್ವಿತರ ೫

ಕುದುರೆ ದಂಡಿಗೆಗಳಲಿ ದಾಪಿಯ
ರುದಿತವಿಭವಾಲಂಕೃತಿಯಲೊ
ಪ್ಪಿದರು ಕೂಡೆ ಸಹಸ್ರಸಂಖ್ಯೆಯಲಾ ರಥವ ಬಳಸಿ
ಪದರಜದ ಪರಿವೇಷದಲಿ ಹೂ
ಳಿದುದು ನಭವೆಣ್ದೆಸೆಯ ಪರಿಜನ
ವುದಧಿಘೋಷದಲುಲಿಯೆ ವರವಧುಗಳನು ಪರಿವರಿಸಿ ೬

ಆ ಮಹೋತ್ಸವದೊಳಗೆ ಕಂಸಸ
ನಾಮನಾ ತಂಗಿಯನು ಮನ್ನಿಸು
ತಾ ಮಹಾರಥದೊಳಗೆ ವಾಘೆಯ ಹಿಡಿದು ಕುಳ್ಳಿರ್ದು
ಪ್ರೇಮದಿಂದೆಸಗುತಿರೆ ನೋಘ
ಸ್ತೋಮ ಮೊಳಗುವವೋಲು ವಿಭವವಿ
ರಾಮವಾಗಲು ನುಡಿದುದೊಂದು ಮಹಾನಭೋನಿನದ ೭

ಎಲವೊ ಕೇಳೆಲೆ ಕಂಸ ಖೂಳರ
ತಿಲಕ ತಂಗಿಯನೋಘ ದಾವಾ
ನಲವಿದಱುತುಕೊಳ್ಳೆಂಟನೆಯ ಗರ್ಭದಲಿ
ನಳಿನನಾಭನು ಜನಿಸಿ ನಿನ್ನಯ
ತಲೆಯ ಮುಱಿದಪನೆಂದು ನಭದಲಿ
ಮೊಳಗುವಂತಿರೆ ನುಡಿದಡಂಗಿದುದೊಂದು ಘನರಭಸ ೮

ಮಂಗಳದ ಬೆಳಗೈಯಲಕಟಕ
ಟಂಗಳದ ಮಳೆಗಱೆದ ತೆಱನಾ
ಯ್ತಂಗದಲಿ ಭಯ-ಹೊಯ್ದು ಖಳನದ ಕೇಳಿದಾಕ್ಷಣಕೆ
ಕಂಗಳಲಿ ಕಿಡಿಗೆದಱು ಫಡಫಡ
ತಂಗಿಯೋ ತನ್ನೊಡಲ ಕೇಡಿನ
ಸಿಂಗಿಯೋ ಸಾರೆನುತ ಕೊಂಡನು ಜಡಿದಥಾಯುಧವ ೯

ಕೆಡೆಯೆನುತ ಬಾಲಕಿಯ ಮುಂದಲೆ
ವಿಡಿದು ಮದುವೆಯ ರಥದ ಹಲಗೆಯ
ಕೆಡೆಯೊದೆದು ಕೂರಸಿಯ ಕೊರಳಿಗೆ ಮೋಹುತಿರೆ ಕಂಡು
ನಡುಗಿದನು ವಸುದೇವನಬಲೆಯ
ಕಡುನಿರೋಧಸ್ಥಿತಿಗೆ ಹೋಹೋ
ಕೆಡಿಸದಿರು ಕೊಲ್ಲದಿರೆನುತ್ತಡ್ಡವಿಸುತಿಂತೆಂದ ೧೦

ಕೂರಸಿಗೆ ಕೈಯೊಡ್ಡಿ ಕೇಳೆಲೆ
ವೀರ ವಿಪುಳಪರಾಕ್ರಮಿಯೆ ನೀ
ನಾರು ನೆನೆದುದಿದೇನು ವೈವಾಹಿಕಮಹೋತ್ಸವದ
ಭಾರವಣೆ ಲೇಸಾಯ್ತು ಹೆಂಗೊಲೆ
ವೀರರಿಗೆ ಮೈಸಿರಿಯೆ ತಂಗಿಗೆ
ಸಾರಿಬರುಹವೆ ಕೊರಳ ಖಡುಗದ ಧಾರೆ ಲೇಸೆಂದ ೧೧

ಕೊಂದವಗೆ ಕೊಲೆ ತಪ್ಪಲಱಿವುದೆ
ತಂದೆ ಬಱಿದೇ ಬಯಲ ಮಾತಿಗೆ
ಕೊಂದು ನೀನೇಕಿಳಿವೆ ನರಕಕ್ಕೆ ಸಂಬಳವ ನೆರಹಿ
ಹೊಂದಿದವರೇ ಮಗುಳೆ ಕೊಲುವರು
ಕೊಂದವರನಂತವರ ಕೈಯಲಿ
ಹೊಂದುವರು ಹಗೆ ಹಲವು ಜನ್ಮಾಂತರಕೆ ಬಿಡದೆಂದ ೧೨

ಹುಟ್ಟಿದಾಗಲೆ ಸಾವು ತಲೆಯಲಿ
ಕಟ್ಟಿಹುದು ಜೀವರಿಗೆ ವಿಧಿ ಬರೆ
ದಿಟ್ಟುದನು ಮಿಱುವ ಸಮರ್ಥರದಾರು ತ್ರಿಜಗದಲಿ
ಹುಟ್ಟಿದವರಿಗೆ ಸಾವು ತಪ್ಪದು
ನೆಟ್ಟನಿಂದೇ ವೋಣು ಲೋಕದ
ಸೃಷ್ಟಿಕಾಲದ ಕಡೆಯಲಾಗಲಭಿಜ್ಞಮತವೆಂದ ೧೩

ಒಡಲು ಸಹಿತಲೆ ಕಂಸ ಸಾವಾ
ಗೊಡನೆ ಬಾರದು ಮನೆಯ ಮಕ್ಕಳು
ಮಡದಿಯರ ಮಾತೇಕೆ ಮಾಡಿದ ಕರ್ಮ ಜೀವರಿಗೆ
ಒಡನೆ ಬಹುದು ಭವಾಂತರಂಗಳಿ
ಗೊಡರಿಸದಿರದುಕಾರಣನ್ಯರಿ
ಗೆಡರನಸುವಿಂಗೆಂಬರಱಿವುಳ್ಳವರು ಕೇಳೆಂದ ೧೪

ನಡೆವವರು ಮುಂದೊಂದು ಹೆಜ್ಜೆಯ
ನಿಡುತ ಹಿಂದಣ ಹೆಜ್ಜೆಯನು ನೆಱೆ
ಸಡಿಲಿಸುವರರಂತಂತೆ ದೇಹವ ಹಿಡಿದು ದೇಹವನು
ಬಿಡುವ ನೀ ಜೀವಾತ್ಮಕರ್ಮದ
ತೊಡಕಿನಲಿ ತನು ಸಿಲುಕಿ ಹುಟ್ಟುತ
ಮಡಿವುತಿಹನೆಡೆವಱಿಯದೆಲೆ ಭೂಪಾಲ ಕೇಳೆಂದ ೧೫

ತನುವೆ ತಾನೀ ಜೀವವೆಂಬಡೆ
ಕನಸಿನಲಿ ದೇಹಾಂತರವನಾಂ
ತನುಭವಿಸಿದಪನೊಡಲನುಳಿದುದಱಿಂದ ಬೇಱೆನಿಸಿ
ನೆನಸಿನನುಭವ ತೋರ್ಪವೊಲು ಕನ
ಸಿನಲಿ ಮಾಡಿದ ಪುಣ್ಯಪಾಪವ
ನನುಭವಿಸುವನು ಜೀವನೈಹಿಕವನು ಪರತ್ರದಲಿ ೧೬

ಅಱಿಯಲೀಸಳು ಮಾಯೆ ಕನಸಿನ
ತೆಱದಲೀ ಪೂರ್ವಾನುಭವವನು
ಮಱೆಸುವಳು ವೈರಾಗ್ಯಜನಿಸದವೋಲು ಜೀವರಿಗೆ
ಅಱಿದಡೀ ಭವಣಿಗೆಯ ದುಃಖವ
ನಱಿದು ಕೊಂಬರೆ ಮಗುಳೆ ವಿಷಯ
ಕ್ಕೆಱಗಿ ಮಾನುಷ್ಯದಲಿ ಬಱುದೊಱಿವೋಗಿ ಕೇಳೆಂದ ೧೭

ಎಲ್ಲಿಗೆಲ್ಲಿಗೆ ಮನವಿದಪ್ರತಿ
ಮಲ್ಲ ಹರಿವುದು ದೈವಗತಿಯಿಂ
ದಲ್ಲಿಗಲ್ಲಿಗೆ ಬಳಸಿ ಕರಣೇಂದ್ರಿಯದ ವೃತ್ತಿಗಳು
ನಿಲ್ಲದೊಡನೈದುವುವು ಬಹು ಮಾ
ಯೋಲ್ಲಸಿತ ಭೌತಿಕ ಶರೀರವ
ನಲ್ಲಿಗಲ್ಲಿಗೆ ಹಿಡಿದು ಜನಿಸುವನಾತ್ಮ ನೋಡೆಂದ ೧೮

ಜಲದಕಂಪಾದಿಗಳು ರವಿಮಂ
ಡಲಕೆ ತೋರ್ಪಂತನಲ ಕಾಷ್ಠಾ
ವಳಿಗಳಲಿ ತೋರ್ಪಂತೆ ತದ್ಗುಣಸಂಗಿಯೆಂದೆನಿಸಿ
ಹೊಳೆದು ಕೆಡುವೀ ಕಾಯ ಕರಣಾ
ವಳಿಯ ವಿಷಯಭ್ರಾಂತಿ ತನಗೆಂ
ದಳಲುವನು ರಾಗಾನುಗತಿಯಲಿ ಜೀವನಿವನೆಂದ ೧೯

ದೇಹಿಯಂತದಱಿಂದ ಭೂತ
ದ್ರೋಹವನು ನೆಱೆ ಮಾಡಿ ಸುಗತಿಗೆ
ಬಾಹಿರನು ತಾನಾಗಿ ಕೆಡೆವನು ಘೋರನರಕದಲಿ
ದ್ರೋಹಿಗೀ ವಿಧಿ ತಪ್ಪದೆಂಬುದ
ನೂಹಿಸದೆ ಹೆಂಗೊಲೆಗೆ ಮನವನು
ಸಾಹಸಿಕ ನೀನೆಂತು ಮಾಡಿದೆ ತಂದೆ ಹೇಳೆಂದ ೨೦

ಮುನ್ನ ಭೂತದ್ರೋಹವನು ಸಂ
ಪನ್ನಮತಿ ನೀ ಮಾಡಿದುದಱಿಂ
ದನ್ಯರಿಂದೀ ಮರಣಭಯವಿಂದಾಯಿತೈ ನಿನಗೆ
ಮುನ್ನ ಮಱೆವೆಯಲಾದನರ್ಥವ
ನಿನ್ನು ಪತಿಕರಿಸುವರೆ ತಿಳಿದಂ
ದುನ್ನತಾಮಳಕೀರ್ತಿ ನಿನಗಿದು ಯೋಗ್ಯವಲ್ಲೆಂದ ೨೧

ಕರುಣವಿಲ್ಲೆಲೆ ಪಾಪಿ ನಿನಗೀ
ತರುಣಿಯನು ಕೊಲುವಲ್ಲಿ ತಂಗಿಯ
ಕೊರಳ ನೋಡಾ ನಡುಗುತಿದೆ ಬೆವರಿಡುವ ಕಾಯದಲಿ
ಹರಹರಾರಿದ ನೆನೆವರಿಂತಾ
ದರಿಸದೀ ಮದುವೆಯಲಿ ಮಂಗಳ
ವಿರಚನೆಯಲೀ ವೈಪರೀತ್ಯವಿದೇಕೆ ನಿನಗೆಂದ ೨೨

ಆರು ಹೇಳಿದರಾತ್ಮವಿದ್ಯೆಯ
ಸಾರವನು ನಿನಗಿದನು ನಿನ್ನೀ
ನಾರಿಗುಪದೇಶಿಸುವುದೊಡಲಿದು ನಿತ್ಯವಲ್ಲೆಂದು
ಆರು ಕೊಲುವರು ಕೊಲಿಸಿಕೊಂಬವ
ರಾರು ಸಾರೆಲವೆಲವೊ ಕೊಂದಡೆ
ಸಾರಲಱಿಯದು ತನಗೆ ಪಾತಕವೆನುತ ಖಳ ಜರೆದ ೨೩

ಕೊಲ್ಲು ತನ್ನನು ಖಡುಗವನು ತೆಗೆ
ಕೊಲ್ಲದಿರು ಬಾಲಕಿಯನೇತಕೆ
ತಲ್ಲಣಿಸಿದಪೆ ಪಾಪಿ ಹೋಹೋ ಮಾಣು ಮಾಣೆನಲು
ಮುಳ್ಳು ಕಾಲಲಿ ಮುಱಿದಡಕಟಾ
ಹುಲ್ಲಸುಡುವರೆ ಸಾರೆಲವೊ ತಾ
ಬಲ್ಲೆ ನೆಲ್ಲವನೇಕೆ ನಿನಗೀ ಚಿಂತೆ ಹೋಗೆಂದ ೨೪

ಹಲವು ಪರಿಯಲಿ ನಾಲ್ಕುಪಾಯದ
ಬಳಕೆಯಲಿ ದುರ್ಬುದ್ಧಿಯನು ನೆಱೆ
ತಿಳುಹಲಱಿಯದೆ ನೋಡಿ ಮನದೊಳಗಳಲಿ ಬಿಸುಸುಯ್ದು
ಗಳದಲಿಕ್ಕಿದ ಮೃತ್ಯುಪಾಶವ
ಗೆಲುವುಪಾಯವದಾವುದೆಂದು
ಮ್ಮಳಿಸಿ ತನ್ನೊಳಗೆಂದನಾ ವಸುದೇವನುತ್ತರವ ೨೫

ಬುದ್ಧಿಬಲವೆನಿತನಿತರಲಿ ನೆಱೆ
ಬುದ್ಧಿವಂತರು ಕೊರಳಲಿಕ್ಕಿದ
ದುರ್ಧರದ ಪಾಶವನು ಗೆಲುವರು ಮೃತ್ಯುಸಂಜ್ಞಿಕದ
ಬುದ್ಧಿಗಿದುವೇ ಫಲವಲಾ ತ
ದ್ಬುದ್ಧಿಬಲದಲಿ ಹೋಗದಿರ್ದಡೆ
ಬುದ್ಧಿವಂತರಿಗಾವುದುಂಟಪರಾಧವಕಟೆಂದ ೨೬

ಕೊಡುವೆನೀ ಮೃತ್ಯುವಿಗೆ ಮಕ್ಕಳ
ಮಡದಿಯನು ತಲೆಗಾಯೆ ನಾನೀ
ಕಡುಕೃಪಣೆಯನನಾಥೆಯನು ಮೃತ್ಯುವಿನ ಮುಖದಿಂದ
ಮಡದಿ ಸಾಯದೆ ತಾನು ಸಾಯದೆ
ಕಡುಗುವೀ ಖಳನಿವನು ಸಾಯದೆ
ಪಡೆದೆನಾದಡೆ ಮಕ್ಕಳನು ತಾ ಕೊಡುವೆ ನಿನಗೆಂದ ೨೭

ಅಡವಿಯೊಳಗಣ ಕೊರಡುಗಳಿಗುರಿ
ಯೊಡನೆ ಸಲೆ ಸಂಯೋಗವಾವಾ
ಗೊಡರಿಸುವುದಗಲಿಸುವುದೆಂಬುದನಱಿವರಾರಿನ್ನು
ಕಡೆಗೆ ಕಾಲನ ಮನೆಯ ಬಾಣಸಿ
ನಡಿಗೆಕಾಱರ ತೆರಕೆ ಮುನ್ನಾ
ರೊಡಲು ಸೇರುವುದೆಂಬ ನಿಶ್ಚಯವಾರಿಗುಂಟೆಂದ ೨೮

ಬಂದ ಮೃತ್ಯುವ ತಪ್ಪಿಸುವೆನಿದ
ನೊಂದು ಬಾರಿಗೆ ಬಾಲಕಿಗೆ ಮ
ತ್ತಿಂದೆ ಮೇಣದು ಬರಲಿ ನಾಳೆಯೆ ಬರಲಿ ದೈವದಲಿ
ಎಂದು ಮನದಲಿ ತಿಳಿದು ನಿಶ್ಚಯ
ದಿಂದ ಬೇವುತ್ತೊಡಲೊಳಗೆ ಕೃಪೆ
ಯಿಂದ ನಗುತಾ ಖಳನೊಡನೆ ವಸುದೇವನಿಂತೆಂದ ೨೯

ನಿರ್ಣಯವ ಕೇಳಾದಡೆಲೆ ಸಂ
ಪನ್ನಗುಣವಾರಿಧಿಯೆ ಹೇಳೈ
ನಿನ್ನಕೊಲುವವರಾರು ಸತಿಯೋ ಮೇಣು ತತುಸುತರೋ
ನನ್ನಿ ನಿನಗಾನೊಂದುಪಾಯವ
ಮನ್ನಿಸುವಡಿದನೆಂಬೆನೆಮಗು
ತ್ಪನ್ನರಾದಾತ್ಮಜರನೀವೆನು ನಿನ್ನ ವಶಕೆಂದ ೩೦

ವನಿತೆಗುದುಭವಿಸಿದರನೆಲ್ಲರ
ನಿನಗೆ ಕೊಡುವೆನು ಮಕ್ಕಳನು ನೃಪ
ವನಹಿಮಾಂಶುವೆ ಕೊಲ್ಲದಿರು ಹಗೆಯಲ್ಲ ಸತಿ ನಿನಗೆ
ಜನದ ನುಡಿಗೆಡೆಯಾಗಬೇಡ
ನ್ನನುನಯವ ಕೇಳೆನಲು ದುರ್ಮತಿ
ಮನದೊಳಗೆ ನೆಱೆ ನಂಬಿ ಬಿಟ್ಟನು ಸತಿಯ ಮುಂದಲೆಯ ೩೧

ಕಳುಹಿ ಮರಳಿದನತ್ತಲಾ ಖಳ
ತಿಲಕನರಮನೆಗಿತ್ತಲಾ ನಿಜ
ಲಲನೆಸಹಿತೈದಿದನು ತನ್ನಯ ಮನೆಗೆ ವಸುದೇವ
ಬಳಿಕ ಕಾಲಾಂತರಕೆ ಸತಿ ಮ
ಕ್ಕಳನು ನೆಱೆ ದಂಡಕ್ಕೆ ಧನವನು
ಗಳಿಸುವಂತಳಲುತ್ತ ಪಡೆದಳು ಪಾವಕೋಪಮರ ೩೨

ಕೀರ್ತಿಮಾನೆಂದೆಂಬ ತನ್ನಯ
ಪುತ್ರನನು ಮನದೊಳಗೆ ಮಱುಗುತ
ಸತ್ಯಸಂಧನು ನುಡಿಯ ಪಾಲಿಸಲೆಂದು ವಸುದೇವ
ಮೃತ್ಯುವಿಗೆ ಕೊಳ್ಳೆನುತ ಕಂಸಂ
ಗಿತ್ತಡದನೀಕ್ಷಿಸುತ ತೂಗಿದ
ನುತ್ತಮಾಂಗವನಕಟ ವಿಸ್ಮಿತನಾಗುತಿಂತೆಂದ ೩೩

ದೇವನೋ ದಿಟಕಲ್ಲದೊಡೆ ವಸು
ದೇವ ನೀನಕಟಾತ್ಮ ವಿದ್ಯಾ
ಕೋವಿದರ ಕುಲದೈವವೋ ಹರಹರ ಮಹಾದೇವ
ಆವನಲಿ ದೊರಕೊಂಬುದೀ ಸ
ತ್ಯಾವಲಂಬನ ಧೈರ್ಯವೀ ದೃಢ
ಭಾವವೀ ಪರಿತೋಷವೀ ನಿರ್ವ್ಯಾಕುಲತೆ ತಾನೆಂದ ೩೪

ಕಂಡೆ ನಾನೀ ನಿನ್ನಸತ್ಯದ
ಗಂಡುಗಲಿತನದಿರವನೇತಕೆ
ಕೊಂಡು ಹೋಗೀ ಶಿಶುವನಳಲಿಸಲೇಕೆ ತಂಗಿಯನು
ಚಂಡಿಯೇನುಳಿದೇಳು ಮಕ್ಕಳ
ಕೊಂಡು ಫಲವೇನೆನಗೆ ಕಾಲನ
ದಂಡವಹನೆಂಟನೆಯ ಗರ್ಭದ ಶಿಶುವಲಾ ಯೆಂದ ೩೫

ಎನಲು ಮನದಲಿ ಶಂಕಿಸುತ ಕಂ
ಸನನು ಮನ್ನಿಸಿ ಮಾತಿನಲಿ ಸೈ
ಯೆನುತ ಕಳುಹಿಸಿಕೊಂಡು ಬಂದನು ಮನೆಗೆ ವಸುದೇವ
ವನಜಮುಖಿ ದೇವಕಿಗೆ ಪುತ್ರರು
ಜನಿಸಿದರು ಸುಖದುಃಖಹೇತುಗ
ಳೆನಿಸಲಱುವರು ಪಾಪಕರ್ಮಂಗಳವೊಲತಿಬಳರು ೩೬

ಒಂದುದಿನ ಸುರನರಮಹೋರಗ
ಬೃಂದವಂದಿತ ಚರಣಕಮಲ
ದ್ವಂದ್ವನೆನಿಸುವ ನಾರದನು ಮಧುರಾಪುರಾಂತಿಕಕೆ
ಬಂದಡೀಕ್ಷಿಸುತಿದಿರುವಂದಭಿ
ವಂದಿಸಲು ಕುಳ್ಳಿರ್ದು ಕಂಸಂ
ಗೆಂದನಮರರ ಗುಪಿತ ಗುಂಭಿತ ರಾಜಕಾರಿಯವ ೩೭

ಕುಶಲವೈ ನಿನಗಖಿಳಬಾಂಧವ
ವಿಸರ ಭೃತ್ಯಾಮಾತ್ಯವರ್ಗದ
ದೆಸೆಗೆ ಸುಖವೈ ಕ್ಷೇಮವೇ ಮಹಿಷೀಜನಂಗಳಿಗೆ
ವಸುಧೆ ನಿಷ್ಕಂಟಕವೆ ನಿನಗಾ
ರೊಸೆವವರು ವೈರಿಗಳು ಬಲ್ಲೈ
ಮಸುಳದೈ ನೃಪನೀತಿಯೆಂದನು ನಾರದನು ನಗುತ ೩೮

ಇಲ್ಲ ಹಿತವರು ಯಾದವರು ನಿನ
ಗೆಲ್ಲ ಹಗೆಯಹ ಸುರರು ಯಾದವ
ರಲ್ಲ ನೀನೇ ಕಾಲನೇಮಿಯೆಂಬ ಸುರಾರಿ ಪೂರ್ವದಲಿ
ಬಲ್ಲೆ ನಾನಿದನಱಿವರು ಪಲ
ರಿಲ್ಲ ದೇವಕಿಯುದರದಲಿ ಸಿರಿ
ವಲ್ಲಭನು ಸಂಜನಿಸಿದಪನಿದನಱಿದುಕೊಳ್ಳೆಂದ ೩೯

ಬಱಿದೆ ಸಾಯದಿರಾರು ನೀನೆಂ
ದಱಿಯದೀ ಯಾದವರನಾರೆಂ
ದಱಿಯದೆನ್ನವರೆಂದು ನೆಱೆ ವಿಶ್ವಾಸವನು ಮಾಡಿ
ಮಱಸಿ ಗಂಟಲ ಕೊಯ್ದಪನು ಸಿರಿ
ಯೆಱೆಯನಿಂತೀ ರಾಜಕಾರ್ಯವ
ನಱಿತಿಹುದು ನಂದಾದಿ ಗೋಪರು ಸಹಿತ ಸುರರೆಂದ ೪೦

ಧರೆಯ ದುಷ್ಟಕ್ಷತ್ರರನು ಸಂ
ಹರಿಸಿ ಭೂಮಿಯ ಭಾರವನು ಪರಿ
ಹರಿಸಿ ಸುರರನು ರಕ್ಷಿಸುವ ಭರ ವಿಷ್ಣುವಿಂಗೆಂದು
ಒರೆದು ಕಂಸಂಗೆಲ್ಲವನು ಮುನಿ
ಸರಿದನಂಬರಗತಿಯಲತ್ತಲು
ಹರೆಗಳೆದ ಕಾಳೋರಗಂಗೆಣೆಯಾದನಮರಾರಿ ೪೧

ಎಲವೊ ಕರೆಕರೆ ಕಳ್ಳನನು ಕರೆ
ಕುಲಗೆಡುಕ ವಸುದೇವನನು ಮ
ಕ್ಕಳನು ತರಹೇಳೆನುತ ಗದ್ದುಗೆವೊಯ್ದು ನಿಂದಿರ್ದ
ಲಲನೆ ಮಱುಗಲು ಶಿಶುಗಳಾಱನು
ಶಿಲೆಯಲಪ್ಪಳಿಸಿದನು ಸೆಱೆಸಂ
ಕಲೆಗಳಿಗೆ ವಸುದೇವದೇವಕಿಯರನು ನೂಕಿಸಿದ ೪೨

ತಂದೆಯನು ಸಂಕಲೆಯಲಿಟ್ಟಾ
ಮಂದಮತಿ ಯಾದವರು ಸುರರೆಂ
ದಂದು ಮೊದಲಾಗಖಿಳ ಮಿತ್ರ ಸಗೋತ್ರಬಾಂಧವರ
ವೃಂದವನು ಪರಿಭವಿಸಿ ಪಶುಧನ
ಮಂದಿರವನಪಹರಿಸಿ ಬಾಧಿಸ
ಲಂದು ದೇಶತ್ಯಾಗವನು ಮಾಡಿದುದು ಜನನಿವಹ ೪೩

ಕೇಶಿ ಬಕಚಾಣೂರ ಮುಷ್ಟಿಕ
ರೋಷಿ ವಿವಿಧಾರಿಷ್ಟ ದುಷ್ಟ ಮ
ಹಾಸುರ ತೃಣಾವರ್ತಧೇನುಕ ವತ್ಸರೆಂಬವರ
ಆ ಸುರಾರಿ ಪ್ರಲಂಬ ಪೂತನಿ
ಕೌಸಲಾಘಾಸುರರೆನಿಪ ಕ
ಟ್ಟಾಸುರದ ಖಳನಿಕರವನು ಕೆಳೆಗೊಂಡನಾ ಕಂಸ ೪೪

ಮತ್ತೆ ಮಾಗಧ ಚೈದ್ಯ ಧರಣೀ
ಪುತ್ರ ಮುರ ಬಾಣಾಸುರಾದಿಗ
ಳುತ್ತಮಕ್ಷಿತಿಪಾಲಬಲವನು ನೆಱಹಿ ಬೆಂಬಲಕೆ
ತುತ್ತುಗೊಂಬೆನು ಯಾದವರನೆನು
ತತ್ಯಧಿಕ ರೋಷಾನುಬಂಧವ
ಬಿತ್ತಿಬೆಳೆವುತ್ತಿರ್ದನಾ ನಿಜಬಂಧುವರ್ಗದಲಿ ೪೫

ಚಂಡವಿಕ್ರಮನುಱುಬೆಗಾಱದೆ
ಕಂಡ ದೆಸೆಗೋಡಿದರು ಕೋಸಲ
ಮಂಡಲಕೆ ಪಾಂಚಾಲ ಮಗಧವಿದರ್ಭಕೇಕಯಕೆ
ಕಂಡು ಬದುಕಿದರಲ್ಲಿ ಕೆಲರು
ದ್ದಂಡನನು ಸೇವಕರಪದದಲಿ
ಗಂಡುಗೆಡಿಸಿದನಿಂತು ಸಕಲ ಮಹಾಮಹೀಶ್ವರರ ೪೬

ಅರಸ ಕೇಳಿಂತಾಱು ಮಕ್ಕಳು
ಸರಸಿಜಾನನೆಗುದಿಸಿ ಕಾಲನ
ವರಿಸಲಲ್ಲಿಂದೇಳನೆಯ ಗರ್ಭದಲಿ ದೇವಕಿಗೆ
ಹರುಷಶೋಕಪ್ರದವೆನಲು ಗೋ
ಚರಿಸಿತಾಸಾಕ್ಷಾತುಧರಣೀ
ಧರನೆನಿಪ ಶೇಷಾವತಾರವನಂತನಾಜ್ಞೆಯಲಿ ೪೭

ಸಕಲಭುವನೇಶ್ವರನು ಸಕಲಾ
ತ್ಮಕನು ಕಂಡನು ಕಂಸಭಯವನು
ಶಕುತಿಯೆನಿಸುವ ಮಾಯೆಗಾಜ್ಞಾಪಿಸಿದನಿದನೊಲಿದು
ಚಕಿತಗರ್ಭವನೊಯ್ವುದಾ ದೇ
ವಕಿಯುಱಿಯದಂತೀಗವರ ಬಾ
ಲಕಿಯ ರೋಹಿಣಿಯುದರದಲಿ ತಂದಿರಿಸು ಹೋಗೆಂದ ೪೮

ದುಷ್ಟಕಂಸಾಸುರ ಕುಲಾಧಮ
ನಟ್ಟುಳಿಗೆ ನಿಲಲಾರದುಱಿ ಕಂ
ಗೆಟ್ಟುದೆಸೆದೆಸೆಗೋಡಿ ವಸುದೇವನ ವಧೂನಿವಹ
ನೆಟ್ಟನಡಗಿರಲವರೊಳತ್ಯು
ತ್ಕೃಷ್ಟರೋಹಿಣಿಯೆಂಬಳೈದಳೆ
ಸೃಷ್ಟಿಕಾರಣೆ ನಂದಗೋಕುಲದೊಳಗೆ ಹೋಗೆಂದ ೪೯

ಬಳಿಕ ತಾನೇ ದೇವಕಿಯ ಬಸು
ಱೊಳಗೆ ತನುಗೊಂಡವನಿಭಾರವ
ಕಳೆಯಲುದುಭವಿಸಿದಪೆನಱಿ ಸಂದೇಹವಿಲ್ಲಿದಕೆ
ಇಳಿದು ನೀನಾ ನಂದನಗೋಪನ
ಲಲನೆಯಲಿ ಸಂಜನಿಸು ಜೀವಾ
ವಳಿಗೆ ಜೀವಿಕೆಯಾಗು ತನಗೆಯು ತಂಗಿಯಾಗೆಂದ ೫೦

ದೇವಿ ಪೂಜಿಸಿಕೊಂಡು ಸುರರಿಂ
ಗೀವುದಿಷ್ಟಾರ್ಥವನು ಬಲಿಯ
ನ್ನಾವಳಿಯಲಾರಾಧಿಸಲಿ ಜನವೆಲ್ಲ ನಿನ್ನನವನು
ಪಾವನಸ್ಥಾನದಲಿ ಬಹುನಾ
ಮಾವಳಿಗಳಿಂದೆಸೆದು ಧರೆಯಲಿ
ಜೀವರಿಗೆ ಜಯವಿಭವಸೌಖ್ಯಸಮೃದ್ಧಿಕರಿಯೆನಿಸಿ ೫೧

ಭುವನವಂದಿತೆದುರ್ಗೆ ಜಯ ವೈ
ಷ್ಣವಿ ಕುಮುದೆ ಚಂಡಿಕೆ ವರಾಂಬಿಕೆ
ಶಿವೆ ಪರಮಮಾಧವಿ ಮಹೇಶ್ವರಿ ಕೃಷ್ಣೆಯೆಂದೆಂಬ
ದಿವಿಜವರನುತೆ ಕಾಳಿ ಕನ್ಯಾ
ಪ್ರವರನಾರಾಯಣಿಯೆನಲ್ಕಿಂ
ತವನಿಯಲಿ ವಿಖ್ಯಾತನಾಮವ ಪಡೆದೆ ನೀನೆಂದ ೫೨

ಫಣಿಪತಿಯ ನೀನೊಯ್ದಿರಿಸಿ ರೋ
ಹಿಣಿಯ ಜಠರಾಂತದಲಿ ಸಂಕರು
ಷಣನೆನಿಪ್ಪಭಿಧಾನ ಬಲ್ಲಿದನಾಗಿ ಬಲನೆಂದು
ಗುಣವನಧಿ ಜಗತೀ ಮನೋಹರ
ಗುಣದಲೆಸೆವುದು ರಾಮವೆಸರಲಿ
ಗಣಿಸದಿರು ಹೋಗೆಂದೆನುತ ಮಾಯೆಯನು ಬೀಳ್ಕೊಟ್ಟ ೫೩

ದೇವದೇವನ ಬೆಸನ ಮಾಯಾ
ದೇವಿ ತಲೆಯಲಿ ಧರಿಸಿ ಪದದಲಿ
ಮೂವೆ ಬಲವಂದೆಱಗಿ ಹೋಗುವೆನೆನುತ ಬೀಳ್ಕೊಂಡು
ದೇವಕಿಯ ಜಠರದಲನಂತನ
ನೋವದೊಯ್ದಿರಿಸಿದಳು ರೋಹಿಣಿ
ದೇವಿಯುದರದಲಾಕ್ಷಣದಲಾಳ್ದನ ನಿರೂಪದಲಿ ೫೪

ಕೆಟ್ಟುದೋ ದೇವಕಿಯ ಬಸುಱೊಡೆ
ದಟ್ಟುಳಿಯ ಬಲುಭೂತ ತಿಂದುದು
ಜಟ್ಟಿಗನನೋಡಿಸದೆ ಕೆಡಿಸಿದರೂರವರು ಮುನ್ನ
ಹುಟ್ಟಿದವರಂತಕನ ನಗರಿಗೆ
ಬಟ್ಟೆದೆಗೆದರು ಶಿಶುಗಳಱುವರು
ಕೆಟ್ಟೆವಾವಿನ್ನೆನುತ ಮಱುಗಿದುದಖಿಳಜನನಿವಹ ೫೫

ಇರಲಿರಲು ದೇವಕಿಯ ಮನದಾ
ಸಱು ಸರಿಯೆ ಸಂತೋಷಲತೆಯಂ
ಕುರಿಸೆ ಭಾರಾಕ್ರಾಂತಧಾತ್ರಿಯ ಕೊರಳುಸೈನೆಗೆಯೆ
ಸ್ಥಿರಚರಾಖಿಳ ಭೂತದೊಳು ನೆಱೆ
ಭರಿತನಹ ನಿತ್ಯಾತ್ಮನಂದವ
ತರಿಸಬಗೆದನು ದೇವಕಿಯ ಜಠರದಲಿ ಮನವೊಲಿದು ೫೬

ಎರಡನೆಯ ಸಂಧಿ ಮುಗಿಯಿತು

## ಮೂರನೆಯ ಸಂಧಿ

ಕಮಲ ಭವವಂದ್ಯ ಪದಯುಗ
ವಿಮಲ ಪೀಠನೆನಿಪ್ಪ ಲಕ್ಷ್ಮೀ
ರಮಣನವತರಿಸಿದನು ದೇವಕಿಗೊಲಿದು ಮಗನೆನಿಸಿ.

ಅರಸ ಕೇಳಿಂತಾಱು ಮಕ್ಕಳು
ದುರುಳ ಕಂಸನ ಕೈಯಲಂತಕ
ಪುರಕೆ ಸರಿಯಲು ಮೇಲೆ ಸಪ್ತಮ ಗರ್ಭವಿಳೆಗಿಳಿಯೆ
ಸರಸಿಜಾನನೆ ದೇವಕಿಯ ಬಸು
ಱುರಿಗೆ ತಂಪನು ಕಱೆವ ಪೋಲವ
ತರಿಸಲೆಂದಸುರಾರಿ ತಳೆದನು ವರಕೃಪೇಕ್ಷಣವ ೧

ಭಕುತ ಭಯಭಂಜನನು ಸಕಲಾ
ತ್ಮಕನು ಸಕಲ ಕ್ಷೇಮ ಕಾರಣ
ಶಕುತಿಯನು ಸಂಗ್ರಹಿಸಿ ಲೋಕಾನುಗ್ರಹಾರ್ಥದಲಿ
ಸಕಲ ಭರಿತನು ನಿಂದನಾ ದೇ
ವಕಿಯ ಜಠರಕ್ಕೆ ಬರುತ ಭಾಗ್ಯಾ
ಧಿಕನೆನಿಪ ವಸುದೇವನಂತಃಕರಣ ವೃತ್ತಿಯಲಿ ೨

ರವಿಯುವೋಲುರುತೇಜದಲಿ ದಿಗು
ವಿವರವನು ಬೆಳಗುತ್ತ ಧರೆಯಲಿ
ಪವನಸಖನಂತರಿ ದುರಾಸದ ದುಸ್ಸಹತ್ವದಲಿ
ದಿವಿಜರಧಿದೇವತೆಯಮೋಲ್ಕಂ
ಡವರ ಕಂಗಳು ಕೋರವಿಸೆ ಜನ
ನಿವಹದಲಿ ಜಗದೇಕನಾಥನನಾಂತು ರಂಜಿಸಿದ ೩

ಬಳಿಕ ವೈಷ್ಣವ ಪರಮ ತೇಜವ
ಲಲನೆ ದೇವಕಿ ದೇವಿ ಜಠರದ
ಲಲಘುಮತಿ ಧರಿಸಿದಳು ನಿಗಮಪ್ರಕರಶಿರದಂತೆ
ಸಲೆ ಜಗನ್ಮಯನೊಳಗಿರಲು ತೊಳ
ತೊಳಗಿ ಬೆಳಗಿದಳೆಂಟು ದೆಸೆಗಳ
ನಿಳೆಗೆ ಜಂಗಮ ಬೊಮ್ಮ ವಿದ್ಯಾಮೂರ್ತಿಯಂದದಲಿ ೪

ಕೊಡದ ದೀಪವೊ ಮೇಣು ಮುಗಿಲೊಳ
ಗಡಗಿದ ಚಿರದ್ಯುತಿಯೋ ಮೂರ್ಖರ
ಜಡಹೃದಯದೊಳಗಿರ್ದ ವೇದ ಸರಸ್ವತಿಯೊ ಮೇಣು
ಒಡಲ ಮೆಱೆವ ಮಹಾತ್ಮ ನಱುತವೊ
ಮೃಡಸಖನನೊಳಗಾಂತು ಬೆಳಗುವ
ಕಡು ನಿರೋಧದ ದೇವಕಿಯು ಸೆಱೆಮನೆಯ ಬಂಧನದಿ ೫

ಕಂಡನಾಕೆಯ ನಿಲವನತ್ಯು
ದ್ದಂಡ ತೇಜವನಾ ಪ್ರಭಾವವ
ಮಂಡಲಾಧಿಪ ಕಂಸನಾತನು ತನ್ನ ಹಗೆಯೆನಿಪ
ಪುಂಡರೀಕದ ಕಣ್ಣವನು ನೆಲೆ
ಗೊಂಡನಿಂದೀಕೆಯಲಿ ಮುನ್ನಿನ
ದಂಡಿಯಿಲ್ಲಿದು ಹೊಸತೆನುತ ಕಳವಳಿಸುತಿಂತೆಂದ ೬

ಇಱಿದು ಕಳೆವೆನೆ ತಂಗಿ ಗರ್ಭಿಣಿ
ಹೊಱದು ನೆಲನೆನ್ನುವನು ಹೆಂಗುಸ
ನಿಱಿಯದಿರ್ದಡೆ ವಿಷ್ಣು ಬಹುಮಾಯಾವಿ ಜನಿಸಿದಡೆ
ಇಱಿಯಲಳವಟ್ಟಪನೊ ಮೇಣಿದ
ನಱಿಯಬಾರದೆನುತ್ತ ತಾನೇ
ಸೆಱೆವನೆಯಲಿದ್ದಂತೆ ಚಿಂತಾತುರನು ಕಾದಿರ್ದ ೭

ಜಾಗರದಲಿದ್ದಿರುಳು ಹಗಲುಂ
ಬಾಗ ಮೇಣುಡುವಾಗ ಪವಡಿಸು
ವಾಗ ನಿಂದಿರ್ದಾಗ ಮಿಗೆ ನಡೆವಾಗ ನುಡಿವಾಗ
ಯೋಗಿಗಳ ಪೋಲೆಡೆವಱಿಯದಾ
ಭೋಗಿ ಶಯನನ ನೆನೆದು ಭಯದಲಿ
ಭೂಗಧೀಶನು ಜಗವ ತನ್ಮಯವಾಗಿರಲು ಕಂಡ ೮

ಇತ್ತಲಾ ದೇವಕಿಯ ಜಠರದ
ಲುತ್ತಮ ಶ್ಲೋಕಾಢ್ಯ ಪರಪುರು
ಷೋತ್ತಮನು ನೆಲಸಿರಲು ಸುರವರರತ್ತಲಭ್ರದಲಿ
ಮೊತ್ತದಮರರು ಸಹಿತ ನೆರೆದುದು
ಕೃತ್ತಿವಾಸ ವಿರಿಂಚಿ ಮೊದಲಾ
ದುತ್ತಮರು ಮುನಿವರರು ಮನುಗಳು ಸುಪ್ರಜೇಶ್ವರರು ೯

ಗರುಡ ಕಿನ್ನರ ಸಿದ್ಧ ವಿದ್ಯಾ
ಧರ ಮಹೋರಗ ಯಕ್ಷ ಗಂಧ
ರ್ವರು ಮರುದಸುರುದ್ರ ಖಚರಾದಿತ್ಯರಶ್ಮಿಗಳು
ನಿರುಪಮಾಪ್ಸರ ನಿವಹದಿಂ ಸಹಿ
ತರಳ ಮಳೆಗಱೆವುತ್ತ ವಿಬುಧೇ
ಶ್ವರರು ನೆರೆದುದಸಂಖ್ಯ ವೈಮಾನಿಕರು ಸಂದಣಿಸಿ ೧೦

ಆ ಸಕಲಸುರನಿಕರ ಸಹಿತಬು
ಜಾಸನನು ತಲೆವಾಗಿ ಭುವನಾ
ಧೀಶನಿಕರಾಧೀಶ್ವರಗೆ ವೇದಾಂತವಿಶ್ರುತಗೆ
ಭಾಸುರದ್ಯುತಿಗಳ ವಿಮಾನದ
ಬೀಸಿಗೆಯ ಬಹುಮಂಗಳಸ್ತುತಿ
ಘೋಷವೆಸೆಯಲು ವಿದಿತಪರಮೋತ್ಸವದಲಿಂತೆಂದ ೧೧

ಸತ್ಯಸಂಧನೆ ಸತ್ಯಪರನೇ
ಸತ್ಯರೂಪನೆ ಸತ್ಯಯೋಗಿಯೆ
ಸತ್ಯವಿಹಿತನೆ ಸತ್ಯಸಾಕ್ಷಿಯೆ ಸತ್ಯವಿಗ್ರಹನೆ
ಸತ್ಯಸುಖಸಂಪನ್ನಿಧಿಯೆ ನುತ
ಸತ್ಯನೇತ್ರನೆ ಸತ್ಯಗಾತ್ರನೆ
ಸತ್ಯಮಯ ಸತ್ಯಾತ್ಮ ಶರಣಾಗೆಂದನಭುಜಭವ ೧೨

ಅವತರಿಸಿದಪೆನೆಂಜಬೇಡೆಂ
ದವಗೆ ದೇವರು ಕೊಟ್ಟಭಾಷೆಗೆ
ಸವನಿಸಿದಿರಿಪ್ಪವನು ಸತ್ಯವ್ರತನು ನಿನ್ನಂತೆ
ಭುವನದೊಳಗಾರನ್ಯರಮರ
ಪ್ರವರನುತ ಜಡಭೂತ ಪಂಚಕ
ನಿವಹವಿರಹಿತ ಸತ್ಯಪರ ಶರಣಾಗು ತನಗೆಂದ ೧೩

ಮತಿಯವೃತ್ತಿಗಳೆನಿಪವಸ್ಥಾ
ತ್ರಿತಯದೊಡನಳಿಯದತಿ ಸತ್ಯನೆ
ನುತ ಜಗತ್ಕಾರಣನೆ ಜಗದಾತ್ಮಕನೆ ತೋರ್ಕೆಯಲಿ
ವಿತತಸಾಕ್ಷಿಯೆ ಕರ್ಮಸಮ್ಯ
ಙ್ಮತಿಫಲೈಕಾಶ್ರಯನೆ ಲಕ್ಷ್ಮೀ
ಪತಿಯೆ ಪರಮೇಶ್ವರನೆ ಶರಣಾಗೆಂದನಬ್ಜಭವ ೧೪

ಒಂದು ಮೊದಲೆಲೆ ಹತ್ತು ಕಾಯೆರ
ಡಂದವಡೆದ ನವಾಕ್ಷರಸ ನಾ
ಲ್ಕಂದದೆಂಟೀ ಶಾಖೆ ಮೊದಲೇಳಾಱರಿಂದಹುದು
ಸಂದ ಕಿಱುಬೇರೈದು ಹೆಬ್ಬೇ
ರೊಂದೆರಡು ಮತ್ತೆರಡು ಪಕ್ಷಿಗ
ಳಿಂದೆಸೆವುದೊಂದಾದಿ ವೃಕ್ಷವದಂತರಿಕ್ಷದಲಿ ೧೫

ಇದಕೆ ನೀನೇ ಕರ್ತು ಕಡೆ ನಡು
ಮೊದಲು ನಿನ್ನಲಿ ನಿನ್ನನುಗ್ರಹ
ದುದಯವದರಭ್ಯುದಯದಲಿ ಸಂಸಾರವೃಕ್ಷವಿದು
ವಿದಿತತತ್ವರು ಕಾಂಬರೇಕ
ತ್ವದಲಿ ನಿನ್ನಲಿ ಜಗವ ನಾನಾ
ತ್ವದಲಿ ಮಾಯಾ ಮೋಹಿತಾತ್ಮರು ಕಾಂಬರದನೆಂದ ೧೬

ಲೀಲೆಯಿಂದವತರಿಸಿ ಜಗವನು
ಪಾಲಿಸುವೆ ವರಸತ್ವ ಗುಣದಲಿ
ಜಾಲವನು ಸೃಜಿಸುತಿಹೆ ನೀ ರಾಜಸದಿ ತಾಮಸದಿ
ಲಾಲಿಸುತ ಸಜ್ಜನರು ಕಳಿವರು
ಕಾಲಭಯವನು ನಿನ್ನ ಪೋಲುಕೃ
ಪಾಳು ಲೋಕದ ದೈವವಾರೆಂದನು ಸರೋಜಭವ ೧೭

ನಿನ್ನ ಪದಯುಗ ಪೋತದಲಿ ಸಂ
ಪನ್ನ ಮತಿಗಳು ಕಳಿದು ಸಂಸಾ
ರಾರ್ಣವವನೈದುವರು ನಿಜ ಸಾಮ್ರಾಜ್ಯ ಸಂಪದವ
ಅನ್ಯರಹ ಮುಕ್ತಾಭಿಮಾನಿಗ
ಳರ್ಣವದಲಾಳುವರು ಭವದೀ
ಯೋನ್ನತಾಮಲ ಭಕುತಿಪೋತವನೊಲ್ಲದವರೆಂದ ೧೮

ಅವರ ವೋಲಾಳುವರೆ ದಿಟ ನಿ
ನ್ನವರು ಸಂಸಾರಾಬ್ಧಿಯಲಿ ವಾ
ಧವ ಮಹಾತ್ಮರು ನಿನ್ನ ಕೃಪೆಯಲಿ ಬದ್ಧರಾದವರು
ಭುವನಪಾವನ ಮೂರ್ತಿಗಳು ಭಾ
ಗವತ ಗುಣ ಸಂಪೂರ್ತಿಗಳು ವೈ
ಷ್ಣವ ಮಹಾಯೋಗಾತ್ಮ ನಿಧಿಗಳು ಪುಣ್ಯತಮರೆಂದ ೧೯

ಅರಸು ಮಕ್ಕಳು ನಾಡ ತಳವಾ
ರರನು ಕೊಂಬರೆ ನಿನ್ನ ಪದಯುಗ
ಶರಣರಾರಿಂಗಂಜುವರು ವಿಶ್ವೇಶ್ವರೇಶ್ವರರ
ಶಿರವ ನೊದೆದಾಡುವರು ಪಾವನ
ಚರಿತರೊಲಿದಂದಲಿ ಲೋಕೋ
ತ್ತರವಿಹಾರರು ಚರಿಸುತಿಹರೀ ಧರೆಗೆ ಹಿತರೆಂದ ೨೦

ಸ್ಥಿತಿಗೆ ಜೀವನಿಕಾಯದರ್ಥಾ
ಯತಿಗೆ ಕೇವಲ ಶುದ್ಧ ಸತ್ವಾ
ನ್ವಿತನೆನಿಸಿ ಲೀಲಾವತಾರದ ಕೃತಿಗಳನು ಧರಿಸಿ
ನತರನುದ್ಧರಿಸುತ್ತ ನೀನಿರೆ
ಕೃತತಪೋಯೋಗಂಗಳಿಂದೀ
ಕ್ಷಿತಿಯ ಜನವಾರಾಧಿಸುತ ಕೃತಕೃತ್ಯರಹರೆಂದ ೨೧

ದೇವ ನೀ ದಿಟ ಜನಿಸಿದಂತೆ ಗು
ಣಾವಲಂಬನದಿಂದ ತೋಱುದ
ಡೀ ವಿವಿಧಗುಣರೂಪನಾಮಕ್ರಿಯೆಗಳಿವು ನಿನಗೆ
ಕೇವಲಾತ್ಮಂಗುಂಟೆ ಸಾಕ್ಷಿಗೆ
ಸಾವಯವ ತನುಧರ್ಮ ಭಕ್ತ ಹಿ
ತಾವತಾರನೆ ನಿಜವಿಹಾರವನಱವರಾರೆಂದ ೨೩

ಇಳಿದುದವನಿಯ ಭಾರವಿಂದಿನ
ಲುಳಿದುದೆಮ್ಮಭಿಮಾನ ದೇವರು
ಸಲುಗೆವಡೆದಿಚ್ಛಾಕೃತಿಯಲವತರಿಸಿದುದರಿಂದ
ಲಲಿತಪದರೇಖಾಂಕಿತವನೆಲೆ
ಜಲಜಲೋಚನ ಸ್ವರ್ಗದಲಿ ನಿ
ನ್ನೊಲವಿನಾಲೋಕನದಲೆಸೆವುದ ಕಾಣ್ಬೆ ನಾನೆಂದ ೨೪

ಮಂಗಳವೆನಿಪ್ಪಮಳಗುಣಚರಿ
ತಂಗಳನು ಕೇಳುತ್ತ ಹೇಳುತ
ಹಿಂಗದಾಮ್ರೇಡಿಸುತ ನೆನೆವುತ ದಿವ್ಯಮೂರ್ತಿಯನು
ಸಂಗದೋಷವನೊದೆವರೀ ಭವ
ಸಂಗಿಗಳು ನಿನ್ನವರೆನಿಸಿ ಸ
ರ್ವಾಂಗದಲಿ ದಾಂಟುವರು ಭವಸಾಗರವನಿದನೆಂದ ೨೫

ಅಕಟ ಜನನವಿಹೀನನಖಿಳಾ
ತ್ಮಕನು ಜನಿಸಿದೆಯೆಂಬುದಿದು ಯೌ
ಕ್ತಿಕವೆ ದೇವ ವಿನೋದವಲ್ಲವೆ ಕಾಣೆ ಕಾರಣವ
ಪ್ರಕೃತಿಯಾವನ ನೇಮದಿಂದೀ
ಸಕಲವನು ನಿರ್ಮಿಸಿ ವಿಭಾಡಿಸಿ
ಮಕರಿಸುವಳೆನೆ ನಿನ್ನ ಮಹಿಮೆಯನಱವರಾರೆಂದ ೨೬

ವೀರನರಸುರತಿರ್ಯಗಾದ್ಯವ
ತಾರವನು ನೀ ಮಾಡಿ ಮುನ್ನಿನ
ಭೂರಿಜಗವನು ಸಲಹುವಂತಿಂದೀಗಳೀಧರೆಯ
ಭಾರವನು ಕಳೆ ಕಾವುದೆಮ್ಮನು
ದಾರ ಕಾರುಣ್ಯೇಕ್ಷಣದ ಸಂ
ಸಾರಿಕನೆ ಪೊಡೆವಂಟು ಬೇಡುವೆನೆಂದನಬುಜಭವ ೨೭

ತಾಯೆ ನಿನ್ನೀಜಠರದಲಿ ನಾ
ರಾಯಣನು ಜನಿಸಿಪ್ಪನಂಜದಿ
ರೀಯಘಾಯುವೆನಿಪ್ಪ ಕಂಸಂಗತಿನೃಶಂಸಂಗೆ
ಆಯಿತೇಳೌ ನಿಜಮನೋಭಿ
ಪ್ರಾಯಸಿದ್ಧಿ ಸಮಸ್ತ ಭುವನ ನಿ
ಕಾಯವನು ರಕ್ಷಿಸುವ ಮಗನನು ಪಡೆವೆ ನೀನೆಂದ ೨೮

ಸ್ತುತಿಯಿಸುತ ಸುರವರರು ಸಹಿತಾ
ಶತಧೃತಿ ಪ್ರಮುಖಾಮರೋತ್ತಮ
ರತುಳ ಗುಣವನಧಿಯನು ಬಲವಂದೆಱಗಿ ಬೀಳ್ಕೊಂಡು
ವಿತತ ಹರುಷದಲೈದಿದರು ಸ
ನ್ನುತ ನಿಜಾವಾಸಂಗಳಿಗೆ ಮುನಿ
ಮತಿ ವಿದೂರನು ಬೆಳವುತಿರ್ದನು ಸತಿಯ ಜಠರದಲಿ ೨೯

ಇರಲಿರಲು ನವಮಾಸ ಗರ್ಭದ
ಲಿರಲು ಸಂದವು ಸರ್ವಲೋಕೇ
ಶ್ವರಗೆ ಪುಣ್ಯಗ್ರಹನಿಕರ ಮಂಗಳ ಮಹೋತ್ಸವದ
ನಿರುಪಮ ಶ್ರಾವಣಬಹುಳ ಬಂ
ಧುರ ಗುಣಾಷ್ಟಮಿ ರೋಹಿಣಿಯಲವ
ತರಿಸಿದನು ಸುರನಿಕರವಂಬರದೊಳಗೆ ನಲಿದಾಡೆ ೩೦

ದೆಸೆಗಳಲಿ ಗಗನದಲಿ ಜಲದಲಿ
ವಸುಧೆಯಲಿ ಸಲೆ ಸುಪ್ರಸನ್ನತೆ
ಮುಸುಕಿದುದು ಮೂಡಿದುದು ಘನಪರಿತೋಷ ಜನ ಮನದಿ
ಎಸೆವ ಶಶಿ ತಾರೆಗಳು ಕಾಂತಿ
ಪ್ರಸರದಲಿ ಪರಿವೃಪ್ತವಾದುವು
ದೆಸೆಗಳೆಂಟೀನೆಂಬೆನಚ್ಯುತನುದಯದುತ್ಸವವ ೩೧

ಧರೆಯಲಾಯ್ತುತ್ಸವ ಪರಂಪರೆ
ಪುರವರ ಗ್ರಾಮಾಕರಾಶ್ರಮ
ಗಿರಿ ನದೀ ಸಾಗರ ಸರೋವರ ದೀರ್ಘಿಕೆಗಳೊಳಗೆ
ಮೊರೆವ ತುಂಬಿಯ ಕೋಗಿಲೆಯ ಸು
ಸ್ವರದ ಗಿಳಿವಿಂಡುಗಳ ಹರುಷೋ
ತ್ಕರುಷವೆಣ್ದೆಸೆಗಳ ಸಮಗ್ರಶ್ರೀ ಸಮರ್ಥಿಸಿತು ೩೨

ತಂಪಿನಲಿ ಕಂಪಿನಲಿ ತಂಬೆಲ
ರಿಂಪುವಡೆದೆಡೆಯಾಡಿ ತಳಿರ್ಗಳ
ಕಂಪಿತ ದ್ರುಮ ಕುಸುಮ ಸೌರಭ ಸಾಂದ್ರ ದಿಕ್ತಟದ
ಬಿಂಪು ದುರ್ಧರವಾಯ್ತು ಧರಣಿಯ
ಬಿಂಪು ಬೀತುದು ಭುವನ ಭವನದ
ಸೊಂಪು ಸೈವೆಳಗಿತ್ತು ನೃಪ ಕೃಷ್ಣಾವತಾರದಲಿ ೩೩

ವೀರ ಸುರದುಂದುಭಿಯ ಮೊಳಗುವ
ಭೂರಿ ಕಹಳಾರವದ ತುಂಬುರ
ನಾರದರ ಸಂಗೀತದಮರಾಂಗನೆಯರುತ್ಸವದ
ಪ್ರೇರಣದ ಘನಪುಷ್ಪವೃಷ್ಟಿಗ
ಳೋರಣದ ಕರಪುಟವಿಹಿತ ಮಣಿ
ತೋರಣದ ಸೇವಾ ಮಹೋತ್ಸವವೆಸೆದುದಭ್ರದಲಿ ೩೪

ಹಾರ ಕುಂಡಲ ಮಕುಟಮಣಿ ಕೇ
ಯೂರ ಕೌಸ್ತುಭ ಕಂಕಣೋಜ್ವಲ
ವೀರ ಮುದ್ರಿಕೆಗಳ ಕರಾಗ್ರದ ಭುಜಚತುಷ್ಟಯದ
ಪೇರುರದ ಮೌಕ್ತಿಕ ಮನೋಹರ
ಚಾರು ಕಂಠಾಭರಣ ಕಿರಣದ
ಸಾರ ಸರ್ವಾಂಗದ್ಯುತಿಯಲಂದೆಸೆದನಸುರಾರಿ ೩೫

ಅರಳುಗಂಗಳ ಸುಪ್ರಸನ್ನಾಂ
ಬುರುಹ ವದನದಲಮಲ ದಂತಾಂ
ಕುರದ ದೀಪ್ತಿಯ ಪವಳವಿಡಿದರುಣಾಧರದ್ಯುತಿಯ
ವರ ಮಕುಟಮಣಿ ಕಾಂತಿ ಪರಿ ಬಂ
ಧುರ ಗುಡಾಳಕನಿಚಯ ಸುಮನೋ
ಹರ ಚತುರ್ಭುಜ ಮೂರ್ತಿಯಲಿ ತೊಳತೊಳಗಿ ರಂಜಿಸಿದ ೩೬

ಕರವಿರಾಜಿತ ಶಂಖ ಚಕ್ರಾಂ
ಬುರುಹ ಗದೆಗಳ ಸಾಂದ್ರ ನೀಲಾಂ
ಬುರುಹ ಕಾಂತಿಯ ಕಟಿನಿಹಿತ ಪೀತಾಂಬರದ್ಯುತಿಯ
ದರಹಸಿತ ಕರುಣಾ ಕಟಾಕ್ಷದ
ಸಿರಿಮೊಗದ ಸರ್ವಾಂಗಲಕ್ಷ್ಮಿಯ
ಪರಮ ಪುರುಷನ ಮೂರ್ತಿ ಮುಂದಿರೆ ಕಂಡನಾ ಶೌರಿ ೩೭

ಕಂಗಳಲಿ ಸಾಕ್ಷಾತ್ ಮುರಹರ
ನಂಗಲಕ್ಷ್ಮಿಯನೀಕ್ಷಿಸುತ ಯದು
ಪುಂಗವನು ಪುಳಕಾಮೃತದಲಡಿಗಡಿಗೆ ಮುಳುಗಿದನು
ಹೊಂಗಿದುದು ತನು ತತ್ಪದಾಂಬುಜ
ಸಂಗಸುಖ ಸಾಮ್ರಾಜ್ಯ ಭೋಗದ
ಭಂಗ ಭಾವೋದ್ರೇಕ ಪರಮಾಹ್ಲಾದ ಭಾರದಲಿ ೩೮

ಹತ್ತುಸಾವಿರ ಪಶುಗಳನು ವಿ
ಪ್ರೋತ್ತಮರಿಗೀ ಸೆಱೆಯನಿದನಾ
ನುತ್ತರಿಸಿದಂದಿಂಗೆ ಕೊಡುವೆನೆನುತ್ತ ಮನದೊಳಗೆ
ದತ್ತವೆನೆ ಸಂಕಲ್ಪಿಸುತ್ತ ಯ
ದೂತ್ತಮನು ಸಾಷ್ಟಾಂಗದಲಿ ಪುರು
ಷೋತ್ತಮಂಗಭಿನಮಿಸಿ ಪುಳಕಿತನಾಗುತಿಂತೆಂದ ೩೯

ಅಱಿಯರಾವನನಖಿಳ ಯೋಗಿಗ
ಳರಸ ನಿಜಯೋಗಾಮಳಾಂತಃ
ಕರಣದಲಿ ಕಾಣರು ತಪೋನಿಷ್ಠರು ಸುನಿರ್ಮಳರು
ಚರಣರಜವನು ಮುಟ್ಟಲಮ್ಮದೆ
ಮಱುಗುತಿರಲಾ ಶ್ರುತಿನಿಕರ ಗೋ
ಚರಕೆ ಸುಳಿವುದಿದಾವ ಪುಣ್ಯದ ಸಿದ್ಧಿ ತನಗೆಂದ ೪೦

ವಿಕೃತಿಗಳ ತೋರ್ಕೆಗಳು ತೋರ್ಕಾ
ಪ್ರಕೃತಿಯುಳುವೆಯಲದನು ಮತ್ತಾ
ಪ್ರಕೃತಿಯುಳುವೆಯ ತೋರ್ಕು ನಿನ್ನುಳುವೆಯನು ದಿಟವೆಂದು
ಪ್ರಕೃತಿ ವಿಕೃತಿ ಗುಣಪ್ರಕಾಶ
ಪ್ರಕಟಿತಾತ್ಮನೆ ನೀನುಳಿಯಲಾ
ಪ್ರಕೃತಿ ವಿಕೃತಿ ಗುಣ ಸ್ವರೂಪವನಱಿವರಾರೆಂದ ೪೧

ಆ ನಿಖಿಳ ಜಗದಾತ್ಮನೆನಿಸುವ
ನೀನೆ ಮಾಯಾಮಯ ಗುಣತ್ರಯ
ತಾನೆನಿಸಿ ಸುರನರಚರಾಚರ ಜೀವಜಾತದಲಿ
ಸ್ಥಾನಸಂಜ್ಞಿತ ಕರಣದೊಳಗಭಿ
ಮಾನವನು ಹೊತ್ತಂತೆ ತದ್ಗುಣ
ಹೀನನಾದಂತೆರಡು ತೆಱದಲಿ ತೋರ್ಪೆ ನೀನೆಂದ ೪೨

ಹೊಱಗೊಳಗು ನಿನಗಿಲ್ಲವಿನಿತಾ
ವರಣವಪ್ಪುದರಿಂದ ಸರ್ವಾಂ
ತರನೆ ಸರ್ವಾತ್ಮಕನೆ ಸರ್ವ ಜಗತ್ಪ್ರವರ್ತಕನೆ
ನಿರುತವಿಂತಿದನಱಿಯದಾತ್ಮನ
ಹೊಱಗೆ ಬೇಱುಂಟೆಂಬ ಬುದ್ಧಿಯ
ನಱಿ ಮರುಳುವಾಳ್ಪವರು ಮಾಯಾ ಮಾತ್ರದೊಳಗೆಂದ ೪೩

ತನುರಹಿತ ಪರಿಪೂರ್ಣ ಸಂವಿ
ತ್ತೆನಿಪ್ಪನೀನೇ ಸಕಲ ಲೋಕಕೆ
ಜನನ ವಿಲಯಸ್ಥಾನಕಾರಣನೆಂಬರಱಿವವರು
ಚಿನುಮಯನೆ ಹುಸಿಯಹುದೆ ನಿ
ಶ್ಚೇತನಗಳಹ ಗುಣಗಳಿಗೆ ಯೋ
ಗ್ಯತೆ ಜನಿಸಲಱಿವುದೆ ನೀನುಳಿಯೆ ಸೃಷ್ಟ್ಯಾದಿಕರ್ಮದಲಿ ೪೪

ನಿೞಱಿ ಮೂಲ ಪ್ರಕೃತಿಯನು ಮೈ
ದೋಱುವಿಂದ್ರಿಯ ಕರಣನಿಚಯಕೆ
ಮಾಱುವೋಗದೆ ಮಱವೆಗಾನಂದಾನುಭವ ಪದದ
ತೋಱುಕೆಯ ಸೋಹಮ್ಮಿನಿರವನು
ತೋಱಿ ತುರ್ಯಾತೀತ ಸನ್ನುತ
ಸಾರ ಸಂವಿನ್ಮಾತ್ರನೆನಿಸುವ ವಸ್ತು ನೀನೆಂದ ೪೫

ಬೆಳಸಿ ರಜದಲಿ ಸತ್ವಗುಣದಲಿ
ನಿಲಿಸಿ ತಾಮಸ ಗುಣದಲಿದನ
ಕ್ಕಳಿಸಿ ಜಗವನು ನಿನ್ನ ಮಾಯಾಶಕ್ತಿಯಲಿ ನೀನೆ
ಉಳಿವೆ ನಿನ್ನಲಿ ನಿನ್ನ ಮಹಿಮೆಯ
ನೆಲೆಯನಱಿವವರಾರು ಮಾಯಾ
ವಿಲಸಿತದ ವಿದ್ಯಾವಿಮೋಹಿತ ಬುದ್ಧಿಗಳಲೆಂದ ೪೬

ಖಳನಿಕರ ಹೆಚ್ಚಿದರೆ ಭಾರವ
ಕಳೆಯಲೆಂದೀ ಧರೆಗೆ ತನ್ನಯ
ನಿಳಯದಲಿ ಮೈದೋಱಿದೈ ತನಗಿಂದು ಶಿಶುವಾಗಿ
ಭಳಿರೆ ಭಾಪುರೆ ಭಕ್ತಕರುಣಾ
ಜಲನಿಧಿಯೆ ನಿಜಭಕ್ತ ಜನ ವ
ತ್ಸಲನೆ ಭಕ್ತಾಧೀನವೃತ್ತಿಯೆ ಜಯುನಮೋ ಯೆಂದ ೪೭

ಎನ್ನ ಗೃಹದಲಿ ದೇವ ನೀನು
ತ್ಪನ್ನನಹುದನು ಕೇಳಿ ಕೊಂದನು
ಮುನ್ನವೇ ನಿನ್ನಗ್ರಜರನೀ ಕಂಸ ಕಡುಪಾಪಿ
ಇನ್ನಿದನು ಕೇಳಿದರೆ ಬಾರನೆ
ಕುನ್ನಿ ಕೊಲಲೀ ಕ್ಷಣವೆಯೆನುತ ಕೃ
ಪಾರ್ಣವನ ಪದಕೆಱಗಿ ಬಿನ್ನಹ ಮಾಡಿದನು ನಡುಗಿ ೪೮

ದೇವದೇವನ ಪದದಲಾ ವಸು
ದೇವ ತಲೆವಾಗಿರಲು ದೇವಕಿ
ದೇವಿ ಪರಮೇಶ್ವರನೆ ನಿಜಸುತನಾಗಿಲು ಕಂಡು
ಭಾವರಸ ಪುಳಕ ಪ್ರಪೂರದ
ಲೋವೆನುತ ತನುಮಱೆದು ತದ್ಗತ
ಭಾವದಲಿ ತಲೆವಾಗಿ ಬಿನ್ನಹ ಮಾಡಿದಳು ತರಳೆ ೪೯

ಅಹಹ ಕಂಡೆನು ಕಂಡೆನಗ್ಗದ
ಬಹಳ ನಿಗಮಶಿರೋವಿರಾಜಿತ
ಮಹಿಮನನು ಕರಣೇಂದ್ರಿಯಂಗಳ ಬಳಕೆಗಳು ಪೊಗದ
ಮಹದಹಂಕಾರಾದಿ ಮಾಯಾ
ವಿಹಿತ ಗುಣನಿಕರಂಗಳಲಿ ಮುಂ
ದಿಹ ಸದಾನಂದೈಕ ಸತ್ಯಜ್ಞಾನವಿಗ್ರಹನ ೫೦

ನಷ್ಟವಹುದೀ ಲೋಕ ಕಮಲಜ
ನಟ್ಟೆ ಕೆಡೆವಾ ಹೊತ್ತು ನೆಱೆನೆಱೆ
ಗುಟ್ಟಭುವನವನು ಭೌತಿಕನಿಕರವನು ಜಱೆದು
ಅಟ್ಟಹೊಗಿಸಲು ಕಾಲನಾಗಿದ
ಹುಟ್ಟಿದೆಡೆಯನು ನೀನು ನಿನ್ನಲಿ
ನೆಟ್ಟನುಳಿವೆ ನಿರಾಮಯಾನಂದಾನುಭವನಾಗಿ ೫೧

ಕಾಲನನು ನಿಜಚೇಷ್ಟೆಯೆಂಬರು
ಕಾಲ ತೀರಿದಡೀ ಚರಾಚರ
ಜಾಲವಿದು ತತ್ಕಾಲವಶದಲಿ ಚೇಷ್ಟೆ ನಡೆದಿಹುದು
ಕಾಲಕಾಲನೆ ನಿರುಪಮಕ್ಷ್ಮೇ
ಮಾಲಯನೆ ನಿನ್ನಂಘ್ರಿಕಮಲದ
ಮೂಲವನು ಮಱೆವೊಕ್ಕೆನೆಂದಳು ದೇವಕೀದೇವಿ ೫೨

ಮೃತ್ಯುವೆಂಬ ಮಹೋರಗನು ಬೆಂ
ಬತ್ತಿ ಬರಬರಲೋಡಿ ಭರದಲಿ
ಮರ್ತ್ಯರೀ ಹದಿನಾಲ್ಕು ಲೋಕಂಗಳಲಿ ನೆಱೆ ತೊಳಲಿ
ಮತ್ತೆ ಕಾವರ ಕಾಣದೀ ನಿ
ನ್ನುತ್ತಮಾಂಘ್ರಿಯನಾಶ್ರಯಿಸಿ ಬಹ
ಮೃತ್ಯುವನು ಕೆಡೆಯೊದೆವರೆಂದಳು ಕಾಂತೆ ಕೈಮುಗಿದು ೫೩

ಮೃತ್ಯುಭಯ ಭಂಜನನೆ ಬಿನ್ನಹ
ಚಿತ್ತವಿಸುವುದು ತನ್ನಭಾಗಕೆ
ಮೃತ್ಯುವೀ ಕಂಸಾಖ್ಯನತಿಶಯ ಪಾಪಚೇಷ್ಟಿತನು
ಮತ್ತೆ ಬಂಧುದ್ರೋಹಿ ರಕ್ಷಿಸು
ಪುತ್ರಶೋಕಾತುರೆಯನೆನ್ನನು
ಸತ್ಯಸಂಧನೆ ಸಕಲಜಗದಾತ್ಮಕನೆ ಚಿನುಮಯನೆ ೫೪

ಎಂತು ಧರಿಸಿದೆನುದರದಲಿ ನೀ
ನೆಂತು ಜನಿಸಿದೆ ದೇವ ನಿನ್ನುದ
ರಾಂತರದಲಡಗಿಹುವಲ್ಲೆ ಬ್ರಹ್ಮಾಂಡಕೋಟಿಗಳು
ಅಂತರಹಿತನೆ ನಿಖಿಳ ಮಾಯಾ
ಚಿಂತ್ಯಮಹಿಮನೆ ರಕ್ಷಿಸೆನುತಾ
ಕಾಂತೆ ನೈಯಿಕ್ಕಿದಳು ನಿತ್ಯಾತುಮನ ಚರಣದಲಿ ೫೫

**ಮೂರನೆಯ ಸಂಧಿ ಮುಗಿಯಿತು**

# ನಾಲ್ಕನೆಯ ಸಂಧಿ

ದೇವದೇವನನೊಯ್ದಿರಿಸಿ ವಸು
ದೇವನಾ ಗೋಕುಲದಿ ಮಾಯಾ
ದೇವಿಯನು ಮಗುಳೊಯ್ದನಾ ಮಧುರಾಪುರಾಂತಿಕಕೆ.

ಜನಪ ಕೇಳಿಂತೆನಲು ಕೇಳುತ
ಜನಕ ಜನನಿಯರಿಂಗೆ ಕರುಣಾ
ವನಧಿ ನುಡಿದನು ನಗುತ ನೀವ್ಮುನ್ನಾದಿ ಯುಗದೊಳಗೆ
ಜನಿಸಿರಲು ವರ ಪೃಶ್ನಿ ಸುತಪರು
ವನಜಭವ ನೀ ಸೃಷ್ಟಿಸಂಪಾ
ದನವ ಮಾಡುವುದೆನಲು ನಿಂದಿರಿ ತಪಕೆ ನೀವೆಂದ ೧

ಅಱಿದು ಪಂಚೇಂದ್ರಿಯದ ವೃತ್ತಿಯ
ನಱಿದು ಪಂಚಾರ್ಥವನು ಧೃತಿಯನು
ಮೆಱೆದು ಮನವನು ನಿಲಿಸಿ ತನ್ನೀ ದಿವ್ಯಮೂರ್ತಿಯಲಿ
ಅಱಿಯದಿತರವನಿರಲು ನೀವೆ
ನ್ನಱಿಕೆಯಲಿ ನಾಲುಕು ಯುಗಗಳು
ತ್ತರಿಸಲಾ ನಿಮಗಂದು ಮೈದೋಱಿದೆನು ನಾನೆಂದ ೨

ನೋಡಿ ಕಂಡಿರಿ ತನ್ನ ಮೂರ್ತಿಯ
ನೀಡಿಱವ ಪುಳಕದಲಿ ಪದದಲಿ
ನೀಡಿ ತನುವನು ಹೊರಳುತಿರಲಾನೊಲಿದು ನಿಮಗಂದು
ಬೇಡಿ ವರವನೆನಲ್ಕೆ ಮಗನನು
ಬೇಡಿದಿರಿ ತನ್ನಂದದವನನು
ನಾಡೊಳೆನ್ನಂದದವರಾರ್ಹುಂಟೆಂದೆ ನಾನಂದು ೩

ಆದಡಾನೇ ಮಗನಹೆನು ಭಾ
ಗ್ಯೋದಧಿಗಳೆಂದೆನುತ ಜನಿಸಿದೆ
ನಾದಿಯಲಿ ವರಪೃಶ್ನಿಗರ್ಭಾನ್ವಯದಲಾನೊಲಿದು
ತೀದುದದು ಮತ್ತದಿತಿ ಕಾಶ್ಯಪ
ರಾದಿರವರಲಿ ನಿಮಗೆ ವಾಮನ
ನಾದೆನಳೆದೆನು ಧರೆಯನೀರಡಿಮಾಡಿ ತಾನೆಂದ ೪

ಮತ್ತೆ ಮೂಱನೆ ಭವದಲೀ ಯು
ತ್ಪತ್ತಿ ನಿಮಗೀ ಧರೆಯುಲಾಗಲು
ಪುತ್ರನಾದೆನು ಪುಣ್ಯವಂತರಿರಿಂದು ನಿಮಗಾನು
ಇತ್ತ ವರವದು ಪೂರ್ಣವಾಯ್ತಿಂ
ದುತ್ತಮರಿರಿದನಱುಹಲೀ ನಿಜ
ಮೂರ್ತಿಯನು ತೋಱಿದೆನು ನೀವಿದಕಂಜಬೇಡೆಂದ ೫

ಅಱಿವಿರೆನ್ನ ನಿಜಸ್ವರೂಪವ
ನಱಿಯದೀ ಪುತ್ರಾನುರಾಗದ
ನೆಱೆ ಮಹಾಸ್ನೇಹಾನುಬಂಧದ ಭಾವದಲಿ ನೆನೆದು
ಅಱಿಯಲರಿದೇ ಮಾಣಲೆನ್ನೊಳ
ಗೆಱಕವುಳ್ಳರೆ ತನ್ನ ಪದವನು
ತೆಱುವೆನವರಿಗೆ ತಪ್ಪಲಱಿಯದು ಮುಕುತಿಪದವೆಂದ ೬

ಎನುತ ನರಶಿಶುತನವನಾಂತನು
ದನುಜಹರನಾಕ್ಷಣದಲಾ ನಿಜ
ಜನಕ ಜನನಿಯರೀಕ್ಷಿಸಲು ನಿಮಿಷಾರ್ಧಮಾತ್ರದಲಿ
ದನುಜನಱಿಯದವೋಲು ರಕ್ಷಿಸು
ವನುವದೆಂತೀ ಶಿಶುವನೆನುತಳಿ
ಮನದ ಭಯದಿಂದೆತ್ತಿಕೊಂಡನು ನೋಡಿ ವಸುದೇವ ೭

ಪ್ರೇರಿಸಿದನಾ ಗೋಕುಲಕೆ ದೈ
ತ್ಯಾರಿ ಶೌರಿಯ ಮನವನಲ್ಲಿ ಕು
ಮಾರಿ ಜನಿಸಿದಳಾ ಯಶೋದೆಗೆ ಮಾಯೆಯಂಶದಲಿ
ಬಾರಿಸಿತು ಕಡುನಿದ್ರೆ ಭಟರಿಗೆ
ವಾರಿಜಾಕ್ಷನ ಯೋಗಮಾಯೆಯ
ಭೂರಿಬಲವನು ಬಲ್ಲರಾರೆಲೆ ಭೂಪ ಕೇಳೆಂದ ೮

ಕಾಲಲಿಕ್ಕಿದ ಬಿಗಿದ ಸಂಕಲೆ
ಬೀಳುಕೊಂಡುದು ಮುಱಿದು ತತ್ಪುರ
ಪಾಲಕರು ನಿದ್ರೆಯಲಿ ಪರವಶರಾದರಾ ಕ್ಷಣಕೆ
ಕೀಲು ಸಡಿಲಿದವೋರಣದ ಹೇ
ರಾಳ ವಜ್ರಕವಾಟ ನಿಕರದ
ಲಾಳಮುಂಡಿಗೆ ಯಗುಳಿ ಸಂಕಲೆ ಕೀಲುಗಳು ಕಳೆಯೆ ೯

ಬಟ್ಟೆ ಸುಕರವದಾಯ್ತು ದೇವಕಿ
ನಿಟ್ಟಸುತ ಬೆಱಗಾಗಲುದರದೊ
ಳಷ್ಟಸಿದ್ಧಿಗಳೊಡೆಯನನು ತಕ್ಕಯಿಸಿ ವಸುದೇವ
ಬಿಟ್ಟುಕೊಂಡನು ಮನೆಯನೇ ತಾ
ನುಟ್ಟ ಧೋತ್ರದ ಸೆಱಗನೇ ಮುಸು
ಕಿಟ್ಟು ಶಿಶುವಿಂಗೊಯ್ಯನೊಯ್ಯನೆ ಬಾಗಿಲನು ಕಳೆದ ೧೦

ಭೂವರನೆ ಮಱೆದೊಮ್ಮೆ ನೆನೆದಡೆ
ಜೀವರಿಗೆ ಭವಬಂಧ ಬಿಡುತಿರೆ
ದೇವದೇವನನೆತ್ತಿ ಕೊಂಡುರದೊಳಗೆ ತಕ್ಕಯಿಸಿ
ಆವುದಚ್ಚರಿ ಹೊಱವಡುವ ವಸು
ದೇವನಂಘ್ರಿಯ ನಿಗಳನೋಕ್ಷವ
ದಾವುದೈ ನೃಪ ಚಿತ್ರ ಬಂಧಕವಾಟ ನಿರ್ಭೇದ ೧೧

ಉಱುವ ದೈವವನುರದಲಾಂತಿದಿ
ರಱಿಯದಾ ವಸುದೇವ ಮನೆಯನು
ಹೊಱವಡುತ ಬರೆ ಮುಂದೆ ಮಾರ್ಗವುಹಾಂಧಕಾರದಲಿ
ಕಱೆವ ಮಳೆಯಲಿ ಕೆಸಱಿನಲಿ ಮು
ಕ್ಕುಱಿಸಿ ಮುಂಗುಡಿ ನೂಕದಿರಲದ
ನಱಿದನಂತನು ಬಂದನಾ ಕ್ಷಣವಾಳ್ದನಿದ್ದೆಡೆಗೆ ೧೨

ಹಾಸಿದನು ತನ್ನೊಡಲನವನಿಗೆ
ಭಾಸುರದ ಹೆಡೆವಣಿ ಸಹಸ್ರ ವಿ
ಳಾಸದಲಿ ಬೆಳಗಿದನು ಹೆಡೆಗಳ ಕೊಡೆಯನಂಬರಕೆ
ಶೇಷನೆತ್ತಿದನೆನಲು ಮಹಿಮೆಯ
ದೇಸು ಘನವೋ ಸಕಲ ಲೋಕಾ
ಧೀಶ ವಿಷ್ಣುವನಾಂತು ನೃಪ ನಡೆತಂದನೊಲವಿನಲಿ ೧೩

ನಡೆತರಲು ಮುಮ್ಮಾರ್ಗದಲಿ ಹೆ
ಗ್ಗಡಲ ವೋಲ್ದೆರೆ ಮಸಗಿ ಗಗನವ
ತುಡಕುವುಲ್ಲೋಲಂಗಳಿಂದಿತ್ತಡಿಯನಾಕ್ರಮಿಸಿ
ಗಿಡುಮರಂಗಳನಲೆವುತಿದಿರಲಿ
ಕಡು ಭಯಂಕರೆಯಾಗಿ ಮಿಗೆ ಭೋ
ರ್ಗರೆದು ಯಮುನೆ ಮಹೋಗ್ರಮುಖದಲಿ ಹರಿವುತಿರೆ ಕಂಡ ೧೪

ಮುಂದುಗಾಣದೆ ಯದುವರನು ಗೋ
ವಿಂದನನು ತಕ್ಕಯಿಸಿಕೊಂಡಾ
ನಂದದಲಿ ಮೈಮಱೆದು ಹೊಗುತಿರೆ ಕಂಡು ಭಯದಿಂದ
ನಿಂದಳಿದ್ದೆಸೆಗಬುಧಿ ಮಾರ್ಗವ
ನಂದು ರಘುಪತಿಗಿತ್ತವೋಲರ
ವಿಂದಸಖಸುತೆ ತೆಗೆದು ಬಿಟ್ಟಳು ಯದುಪತಿಗೆ ಪಥವ ೧೫

ಉತ್ತರಿಸಿ ಯಮುನೆಯನು ಹರಿಯನು
ಹೊತ್ತುಕೊಂಡುರದೊಳಗೆ ಹೋಗಿ ಯ
ದೂತ್ತಮನು ನಟ್ಟಿರುಳು ಹೊಕ್ಕನು ನಂದಗೋಕುಲವ
ಚಿತ್ರಸಾಕ್ಷಿಯನಿರಿಸಿ ಮಾಯೆಯು
ನೆತ್ತಿಕೊಂಡನು ನಂದಗೋಪಿಯ
ಪುತ್ರಿಯನು ಮರಳಿದನು ಮಧುರಾಪುರಕೆ ವಸುದೇವ ೧೬

ದೈವವಭಿಮುಖವಾದಡೆಲ್ಲಾ
ಜೀವರಿಗೆ ಸುಖವೆಂಬುದನು ವಸು
ದೇವನಱುವವೋಲು ಕಳೆದು ವಿಪತ್ಪರಂಪರೆಯ
ದೇವದೇವನನೊಯ್ದಿರಿಸಿ ರಾ
ಜೀವಲೋಚನೆ ಚಂಡಿಕೆಯನಾ
ದೈವವಿಮುಖನು ಧರಿಸಿ ಬಂದನು ಮರಳಿ ಸೆಱೆಮನೆಗೆ ೧೭

ತೊಱೆ ಸುದುಸ್ತರವಾಯ್ತು ಕೆತ್ತವು
ತೆಱೆದ ಬಾಗಿಲು ಕಾಲಸಂಕಲೆ
ಮುಱಿದುವೇ ಬಲು ಬೆಸುಗೆವಡೆದವು ಕೂಡೆ ಕೆಲಬಲದ
ಮಱೆದೊಱಗಿದವರೆದ್ದರಂದಾ
ಸೆಱೆಯ ಕಾಪಿನ ಭಟರು ಕಂಗಳ
ನಿಱುಕಿ ಬಲಿದುದು ಕಾಳಗತ್ತಲೆ ನಿಮಿಷ ಮಾತ್ರದಲಿ ೧೮

ಹರಿದು ಕಾಪಿನ ದೂತರಱುಹಿದ
ರರಸನೆಡೆಗಾ ದೇವಕಿಯ ಶಿಶು
ವೊರಲುವಾ ದನಿಗೇಳಿ ಭಯದಲಿ ನಡುಗಿ ನಡುವಿರುಳು
ದುರುಳನಾಲಿಸುತೆದ್ದು ನಿದ್ರೆಯ
ಭರದಲಾವೆಡೆ ತನ್ನ ಗಂಟಲ
ಮುಱುವ ಮೃತ್ಯುವೆನುತ್ತ ಬಂದನು ಬಿಟ್ಟ ಮಂಡೆಯಲಿ ೧೯

ಎಡಹುತೇಳುತ ಬೀಳುತಡಿಗಡಿ
ಗೊಡಲು ಕಂಪಿಸಿ ರೋಷಭಯದು
ಗ್ಗಡದ ಕಾತರಭಾವದಲಿ ಕಂಗೆಟ್ಟು ಕಳವಳಿಸಿ
ಜಡಿದು ಜವನಂದದಲಿ ಖಳ ಧರೆ
ನಡುಗುವಂತಯಿತರಲು ದೇವಕಿ
ಹಿಡಿದಳಣ್ಣನ ಕಾಲ ಕರುಣವ ತೋಱು ಭಯದಿಂದ ೨೦

ಅಣ್ಣ ಕೊಲ್ಲದಿರಕಟ ಕಡೆಯಲಿ
ಹೆಣ್ಣು ಜನಿಸಿದುದೆನಗಭಾಗ್ಯೆಗೆ
ಪುಣ್ಯವಂತನೆ ಮುನಿಯಲಾಗದು ಸೊಸೆಯಲಾ ನಿನಗೆ
ಮಣ್ಣು ಕೂಡಿದವಾಱುಮಕ್ಕಳು
ಬಣ್ಣಿಸೆನು ತಾನದನೆನುತ್ತವೆ
ಕಣ್ಣನೀರಲಿ ಕರಗಿ ಕಾಲ್ಪಿಡಿದಿದ್ದಳಬುಜಾಕ್ಷಿ ೨೧

ಇಂತೆನುತ ತಕ್ಕಯಿಸಿ ಮಗಳನು
ಕಾಂತೆ ದೇವಕಿ ಕಂಬನಿಗಳುಗು
ವಂತೆ ಕಾರ್ಪಣ್ಯವನು ತೋಱುಯಳುತ್ತ ಬಿದ್ದಿರಲು
ಸಂತವಿರು ಸಾಕೆನುತ ತಂಗಿಯ
ನಂತಕನವೋಲೊಲೆದು ಕಾಳುರಿ
ಯಂತೆ ಕಣ್ಣುರಿ ಸೂಸೆ ಕೊಂಡನು ಸೆಳೆದು ಬಾಲಕಿಯ ೨೨

ಎರಡು ಕಾಲನು ಹಿಡಿದು ಜಡಿದಂ
ಬರಕೆ ಜಡಿದಪ್ಪಳಿಸಿ ಶಿಲೆಯಲಿ
ಶಿರವನೊಡೆದೆಲೆ ಹೊರಸೆ ಹೋಗೆನಲಭ್ರದಲಿ ಜಿಗಿದು
ಸುರರು ಜಯಜಯಯೆನಲು ನಿಂದಳು
ವರಗದಾಂಬುಜ ಶಂಖಚಕ್ರ
ಸ್ಫುರಿತ ಶರಪಾಶಾಂಕುಶಂಗಳಲಷ್ಟಭುಜೆಯಾಗಿ ೨೩

ಗರುಡ ಕಿನ್ನರ ಸಿದ್ಧ ವಿದ್ಯಾ
ಧರ ಮಹೋರಗ ಯಕ್ಷ ರಕ್ಷೋ
ವರರ ಮಂಗಳವಾದ್ಯ ಪೂಜಾಸ್ತುತಿಗಳೆಣ್ದೆಸೆಗೆ
ಭರಿತವಾಗಲು ಭಜಿಸುವಪ್ಸರೆ
ಯರ ಮಹೋತ್ಸವದೊಳಗೆ ಜಗದೀ
ಶ್ವರಿ ಕಟಾಕ್ಷಿಸಿ ಖಳನ ಜಱಿದಿಂತೆಂದಳಭ್ರದಲಿ ೨೪

ಎಲವೆಲವೊ ಖಳ ಕೇಳು ತನ್ನನು
ಮುಳಿದು ನೀ ಕೊಲುವವನೆ ಗಂಟಲೊ
ಳಿಳಿವ ತುತ್ತೇ ನಿನಗೆ ನಾನೆಲೆ ಪಾಪಿ ನಿನ್ನಸುವ
ಕಳೆವ ಕಾಲಾತ್ಮಕನು ಧರೆಯಲಿ
ಬೆಳೆವುತ್ತೈದನೆ ಬೇಗ ನಿನ್ನೀ
ತಲೆಯ ಮುಱುಯಿಸಿಕೊಳ್ಳೆನುತ್ತಡಗಿದಳು ಗಗನದಲಿ ೨೫

ಎಂದು ಸುರವರವಂದಿತಾಂಘ್ರಿ
ದ್ವಂದ್ವೆಯೆನಿಸಿ ಧರಿತ್ರಿಯಲಿ ನರ
ರಿಂದ ಪೂಜಿಸಿಕೊಳುತ ಬಹು ಗಿರಿ ಕಾನನಂಗಳಲಿ
ನಿಂದಳಗಣಿತ ನಾಮರೂಪಗ
ಳಿಂದ ಭಕುತರಿಗಿಷ್ಟಸಿದ್ಧಿಯ
ನಂದೊಲಿದು ಕರುಣಿಸುತ ದುರ್ಗೆ ದುರಂತಗುಣದುರ್ಗೆ ೨೬

ಚಂಡಿಕೆಯ ನುಡಿಗೇಳುತವೆ ಖಳ
ಮಂಡೆಯನು ಹೊಡೆದಂತೆ ನೊಂದನು
ಭಂಡು ಮಾಡಿತೆ ದೈವವೆನ್ನನು ಬಯಲ ಮಾತಿನಲಿ
ದಂಡಿಸಿದೆನಕಟಕಟ ತಂಗಿಯ
ಗಂಡನನು ತಂಗಿಯನು ಮಕ್ಕಳ
ಶಂಡವನು ತಾ ಬಱಿದೆ ಕೊಂದೆನೆನುತ್ತ ಚಿಂತಿಸಿದ ೨೭

ಏವೆನಾನಿದಕೆನುತ ಬಂದಾ
ದೇವರಿಪು ಕಾಲ್ವಿಡಿದು ವರ ವಸು
ದೇವದೇವಕಿಯರನು ನುಡಿದನು ಸಂಕಲೆಯ ಕಡಿದು
ದೇವತಾಂಶಿಗಳಲ್ಲದಿರ್ದಡೆ
ನೀವದೆಂತಾ ಹೆತ್ತಮಕ್ಕಳ
ನೀವಿರೆನಗತಿ ಪಾಪಕರ್ಮಂಗೆನುತ ಬಿಸುಸುಯ್ದ ೨೮

ಅಕಟ ತನಗೀ ಭ್ರೂಣಹತ್ಯಾ
ಪ್ರಕಟಪಾಪಿಗದಾವ ಘನ ನಾ
ರಕದ ಗತಿಯೋ ಗವ್ಯವಾಯ್ತೆಲೆ ಪುಣ್ಯವಂತರಿರ
ಸ್ವಕೃತ ಕರ್ಮದಗತಿಗೆ ನಿಮ್ಮ
ರ್ಭಕರು ಸಂದರು ದೈವಗತಿ ಬಾ
ಧಕವು ತನಗಾಯ್ತೆನುತ ಕಂಬನಿದುಂಬಿದನು ಕಂಸ ೨೯

ಈ ನಿಖಿಳಜಗವೈದೆ ದೈವಾ
ಧೀನದಲಿ ತೊಳಲುವುದು ಸುಖದುಃ
ಖಾನುಭವದಲಿ ಜನನಮರಣ ಕ್ಲೇಶಮಾರ್ಗದಲಿ
ಹಾನಿ ವೃದ್ಧಿಗಳಿಂಗೆ ಕಾರಣ
ವಾನಿದಕೆ ತಾನೆಂದೆನುತ್ತಭಿ
ಮಾನಿಸುತ ಮಮತೆಯಲಿ ಕೆಡುವುದು ಮೂಢಜನವೆಂದ ೩೦

ಭೂತನಿಕರಂಗಳಲಿ ಭೌತಿಕ
ಜಾತವೆಂತಂತಾಗಿ ಕೆಟ್ಟರೆ
ಭೂತನಿಕರಕ್ಕಂಟೆ ಭೌತಿಕದಾಗುಹೋಗುಗಳು
ಆತುಮಂಗೀ ದೇಹನಾಶವ
ನೇತಱಿಂದೇರಿಸುವರಜ್ಞರು
ಭೌತಿಕವಲಾ ದೇಹವಾತ್ಮಂಗೇನಹುದು ಯೆಂದ ೩೧

ತಾಯೆ ನೀನಳಲದಿರು ಬಱಿದೇ
ಮಾಯೆಯನು ದಿಟವೆಂದು ಚಿಂತಿಸಿ
ಕಾಯವಿದು ಕಾಲಂಗೆ ಕಟ್ಟಿದ ಬೋನವೆಂದಱಿಯ
ಕಾಯವಿರಹಿತನಾತ್ಮನೆಂತೋ
ಸಾಯಲಱಿವನು ಮನದಹಂಕೃತಿ
ನೋಯಿಸುವುದೀ ಜೀವಜಾತವನೆಂದನಾ ಕಂಸ ೩೨

ಪಾಪಿ ನಾನೆಲೆ ತಾಯೆ ಸೋದರ
ರೂಪಿನಂತಕನಕಟ ಬಿಡು ಬಿಡು
ಕೋಪವನು ಮೂಢಂಗನುಗ್ರಹಿಸುವುದು ನೀವೆನುತ
ಭೂಪನಡಿಗಡಿಗಿಂತು ಪಶ್ಚಾ
ತ್ತಾಪವನು ಮಾಡುತ್ತ ಕಾಲ್ವಿಡಿ
ದೀಪರಿಯಲನುಶೋಕಿಸಲು ವಸುದೇವನಿಂತೆಂದ ೩೩

ತಾತ ದೈವಾಧೀನವೀ ಜನ
ಜಾತ ಸುಖದುಃಖಾನುಭವಗಳಿ
ಗಾತುರಿಸಲೇಕಾವುದೈ ತಪ್ಪೀ ಚರಾಚರದ
ಭೂತನಿಕರದ ಚೇಷ್ಟೆಗೊಬ್ಬನೆ
ಹೇತುಸೂತ್ರಿಗನುಳಿಯೆ ಹಾಹೆಗ
ಳೀತೆಱಂದವೆ ಚೇಷ್ಟೆವಡೆವುವು ತಂದೆ ಹೇಳೆಂದ ೩೪

ಮಱೆದನಪರಾಧವನು ನಿನ್ನಲಿ
ಹೊಱಗೆಯಿಲ್ಲೆಲೆ ತಂದೆ ಕೊಲುವರೆ
ಮಱುಗುವರೆ ನೀನಾರು ತಾನಾರಾತ್ಮನಚಲನಲ
ಮಱೆದು ಸಂಸಾರಿಗಳು ತತ್ವದ
ನಿಱುಗೆಯನು ತೊಳಲುತ್ತಲಿಹರೆಂ
ದೆಱಗಿ ನೆಗಹಿದನಪ್ಪಿದನು ಕಂಸನನು ವಸುದೇವ ೩೫

ಬಿಟ್ಟಳಾ ದೇವಕಿ ಮನದ ಕಱೆ
ಗಟ್ಟಿದಂತರ್ವ್ಯಥೆಯನದನೊಡ
ಹುಟ್ಟಿದನ ವಿನಯವನು ಪಶ್ಚಾತ್ತಾಪವನು ಕಂಡು
ಬಿಟ್ಟು ಬಂಧನಗಿಂಧನವನೊಡ
ಗೊಟ್ಟು ಬಂಧುಸ್ನೇಹವನು ಮುಂ
ದಿಟ್ಟು ತೋಱುತ್ತಿದ್ದನಾ ಖಳತಿಲಕನವರೊಡನೆ ೩೬

ಬೀಳುಕೊಂಡಾ ಕಂಸನೆಯಿತಂ
ದಾಲಯಕೆ ಕರೆಸಿದನು ತನ್ನಯ
ಖೂಳ ಮಂತ್ರಿಪ್ರಕರವನು ಚಂಡಿಕೆಯ ನುಡಿಗೇಳಿ
ಓಲಗದಲಿಂತೆಂದನೆಲ್ಲರು
ಕೇಳಿರೈ ಹೋದಿರುಳು ಮಾಯಾ
ಬಾಲಕಿಯ ಮಾತುಗಳನೆಂದನು ಕಂಸನನಿಬರಿಗೆ ೩೭

ಹುಸಿಯ ನುಡಿವರಮರ್ತ್ಯರೆಂಬುದು
ಹೊಸತೆ ತಂಗಿಯ ಮದುವೆಯಂದಾ
ಗಸದಲೆಲೆಲೇ ಕಂಸ ನಿನಗೀ ವನಿತೆಯೆಂಟನೆಯ
ಬಸುಱಲುದಿಸಿದ ಮಗನ ದೆಸೆಯಿಂ
ದಸುವಿಗಹುದವಸಾನವೆಂದೇ
ಹುಸಿಯ ನುಡಿದುದು ದೈವವಾಕ್ಯಿದು ಚಿತ್ರವಾಯ್ತೆಂದ ೩೮

ಚಿಗಿದು ಕೈಯಿಂದಂಬರಾಗ್ರ
ಕ್ಕೊಗೆದು ಹೇಳಿದಳೆನಗೆ ತಂಗಿಯ
ಮಗಳು ಧರೆಯಲಿ ಕೇಳು ಹುಟ್ಟಿದನಂತಕನು ನಿನಗೆ
ಬಗೆಯದೆನ್ನನು ಬಱದೆ ಕೊಂದಪೆ
ಹಗೆಯೆ ನಾ ನಿನಗೆನುತ ಸುರರೋ
ಳಗಕೆ ಸರಿದಳು ಕರುಣವುಳ್ಳವಳೆಂದನಾ ಕಂಸ ೩೯

ಎನಲು ನುಡಿದರು ಜೀಯ ನಿಮ್ಮಡಿ
ಗನಿಮಿಷರು ಕುಹಕಿಗಳು ಕೇಡನು
ನೆನೆಯದಿರರಾರಱಿಯರೀ ದುರ್ಮಂತ್ರಕೋವಿದರು
ಅನುವರದ ಹಂದೆಗಳು ಕೊಡು ನ
ಮ್ಮನಿಬರೊಳು ವೀಳೆಯವನೊಬ್ಬಂ
ಗನಿಮಿಷರ ಕುಲನಾಶನಕೆ ನೋಡೆಂದರತಿಬಲರು ೪೦

ಬಿಲ್ಲ ದನಿಯನು ಕೇಳಿದರೆ ನಿಂ
ದಲ್ಲಿ ನಿಲ್ಲರು ಸುರರು ಹೆಂಡಿರ
ನೊಲ್ಲೆವೆಂಬರು ಮನೆಯ ಮಕ್ಕಳ ಮಾತದೆತ್ತಣದು
ಕೊಲ್ಲೆ ನೀನವದಿರನು ಧರ್ಮವ
ಬಲ್ಲೆಯಾಗಿ ನಿರಾಯುಧರನೆಸ
ಲೊಲ್ಲೆ ದಿಟವನ್ಯಾಯಮುಖರನು ಗೂಢವಾಹಕರ ೪೧

ಆರು ಮುನಿದೇಗುವರು ನಿಜ ಗೃಹ
ಶೂರರಮರರು ಕಾದುವರೆ ದೈ
ತ್ಯಾರಿಯಾದಡಗೋಚರನು ಮನೆ ಕಡಲ ಮಧ್ಯದಲಿ
ಮಾರರಿಪು ಮರುಳೊಡೆಯನಾ ಕಾಂ
ತಾರವನು ಹೊಕ್ಕಿಹನಹಿಂಸಾ
ಚಾರವಬುಜಭವಂಗೆ ಕಾಳಗವಾರೊಡನೆ ನಮಗೆ ೪೨

ಏಳಿ ದಿಟವಹಿತರಲಿ ಪೃಥ್ವೀ
ಪಾಲನೀತಿಯಿದಲ್ಲ ಮೂಲೋ
ನ್ಮೂಲನವ ಮಾಡುವುದು ದುರ್ಬಲರಾದರೆಯು ಸುರರ
ಸಾಲವನು ಶತ್ರುವನು ವಹ್ನಿ
ಜ್ವಾಲೆಯನು ರೋಗವನು ತತ್ತ
ತ್ಕಾಲದಲಿ ಹಱೆಗಡಿಯದಿದ್ದರೆ ಬಳಿಕಸಾಧ್ಯವಲಾ ೪೩

ಮೂಲವಮರರಿಗೆಲ್ಲ ವಿಷ್ಣುವೆ
ಮೂಲವಾ ವಿಷ್ಣುವಿಗೆ ವಿಪ್ರರು
ಮೂಲವವರಿಗೆ ವೇದಧರ್ಮತಪೋವ್ರತಾದಿಗಳು
ಮೂಲವಿನಿತಕ್ಕೆಲ್ಲ ಗೋವಿ
ಪ್ರಾಳಿಯದಱಿಂದಲ್ಲಿಗಲ್ಲಿಗೆ
ಶೀಲವಂತರನಾಯ್ದು ಕೊಲುವುದೆ ಮಂತ್ರ ರಿಪುವಧೆಗೆ ೪೪

ಎಲ್ಲಿ ವೇದಾಚಾರನಿಷ್ಠರ
ದೆಲ್ಲಿ ವೇದಾಧ್ಯಯನರತರೆ
ಲ್ಲೆಲ್ಲಿ ಧರ್ಮಪರಾಯಣರು ವಿದ್ಯಾತಪೋಯುತರು
ಎಲ್ಲಿ ದಕ್ಷಿಣೆ ಮೆಱೆವ ಮಖವೆ
ಲ್ಲೆಲ್ಲಿ ಯಾಜ್ಞಿಕರವರನಱಿತ
ಲ್ಲಲ್ಲಿಗಿರದೆಡೆಯಾಡಿ ಕೊಲುವುದು ಧರೆಯ ಭೂಸುರರ ೪೫

ತ್ರಿದಶಕುಲವನು ಕೊಲಲು ನಮಗಿಂ
ತಿದುವೆ ಮುಖ್ಯೋಪಾಯ ವಿಪ್ರರ
ಸದೆದು ಕೊಲುವುದು ಬೇಱೆ ನೋಡುವಡಿದುವೆ ನೃಪನೀತಿ
ಬದುಕಲಱಿಯನು ವಿಷ್ಣು ಕೆಡನೇ
ಪದುಮಭವನಾ ರುದ್ರನುಳಿವನೆ
ಮೊದಲ ಕಡಿದರೆ ಶಾಖೆಗಳು ಜೀವಿಸುವುವೆಂತೆಂದ ೪೬

ಎನಲಿದೇ ಲೇಸೆನ್ನಮನದಲಿ
ನೆನೆದುದನೆ ಹೇಳಿದಿರಿ ನೀವೆನು
ತನಿಬರನು ಕಳುಹಿದನು ಕದನಪ್ರಿಯರನೊಲವಿನಲಿ
ದನುಜನಾ ಗೋವಿಪ್ರವರವಧೆ
ತನಗೆ ಹಿತವೆಂದೇ ನಿರಂತರ
ನೆನೆವುತಿರ್ದನು ಮೃತ್ಯುಪಾಶಪರೀತನೆಂದೆನಿಸಿ ೪೭

ಅಸುರನಿಂತಾ ದೈತ್ಯಭಟರನು
ಬೆಸಸಿ ರಾಜಾಲಯವ ಹೊಗಲಾ
ವಿಷಮಮತಿಗಳು ಕಾಲಪಾಶಾವೃತರು ಹರಿಹರಿದು
ವಸುಧೆಯಲಿ ಖಳರಲ್ಲಿಗಲ್ಲಿಗೆ
ಶಿಶುಪಶುದ್ವಿಜಹತ್ಯೆಯನು ಸಾ
ಧಿಸುತಲಿರ್ದರು ಪುಣ್ಯಗಿರಿವನರಾಷ್ಟ್ರಪುರಗಳಲಿ ೪೮

ಹರಿವುದಾಯುಷ್ಕೀರ್ತಿಯಂಗದ
ಸಿರಿ ಕೆಡುವುದೈಶ್ವರ್ಯವಳಿವುದು
ತೆರಳುವುದು ಸೌಭಾಗ್ಯವಳಿವುದು ಧರ್ಮಸಂಗ್ರಹದ
ಹುರುಳು ಗೆಡುವುದು ಮರ್ತ್ಯರಿಂಗಿಹ
ಪರದ ಗತಿ ಕಾಳಹುದು ನರಕ
ಕ್ಕರಸ ಸಂಬಳವಹುದತಿಕ್ರಮವೆಂದನಾ ಮುನಿಪ ೪೯

ಮಹದತಿಕ್ರಮವೇನಮಾಡದು
ಮಹಿಪ ಸರ್ವಾನರ್ಥಕಾರಣ
ವಿಹಪರಕೆ ಜೀವರಿಗೆ ಭವಭಯ ದುಃಖಹೇತುವಲ
ಮಹದನುಗ್ರಹವಾದಡಾವುದು
ಮಹಿಯ ಭಕ್ತಜನರ್ಗೆ ದುರ್ಲಭ
ಮಹದುಪಾಶ್ರಯನಾದ ನಿತ್ಯಾತುಮನ ಕರುಣದಲಿ ೫೦

ನಾಲ್ಕನೆಯ ಸಂಧಿ ಮುಗಿಯಿತು

## ಐದನೆಯ ಸಂಧಿ

ಶಿಶುತನದ ನಾಟಕವನಂದಾ
ಕುಸುಮನಾಭನು ಧರಿಸಿ ಪೂತನಿ
ಯಸುವನಪಹರಿಸಿದನು ಮೆಱೆದನು ಬಾಲಕೇಳಿಯಲಿ.

ಅರಸ ಕೇಳಾ ನಂದಗೋಪನ
ಪರಮ ಭಾಗ್ಯೋದಯವನಾ ಶ್ರುತಿ
ಶಿರಕೆ ದುರ್ಗಮವಾವನಂಘ್ರಿದ್ವಯದ ಸಂಸ್ಥಾನ
ವರಮುನಿಗಳೋರಂತೆ ಮನವನು
ಬೆರಸಲಱಿಯರು ಶಿವಶಿವಾ ಗೋ
ಚರಿಸಿದನಲಾ ತಾನೆ ಸಾಕ್ಷಾದ್ವಿಷ್ಣು ಶಿಶುವಾಗಿ ೧

ಕಂದನಾದನು ತನಗೆನುತ್ತಾ
ನಂದಗೋಪನು ಮುಳುಗಿ ಪರಮಾ
ನಂದರಸಪುಳಕದಲಿ ಕರೆಸಿದನಿರುಳು ಜೋಯಿಸರ
ಮಿಂದು ಮಡಿಗಳನುಟ್ಟು ಪರಿಜನ
ವೃಂದಸಹಿತುತ್ಸವದ ಸಂಭ್ರಮ
ದಿಂದ ವಿಪ್ರೋತ್ತಮರನಾರಾಧಿಸಿದನುಚಿತದಲಿ ೨

ಸ್ವಸ್ತಿವಾಚನ ಪೂರ್ವಕದಲಖಿ
ಲೋತ್ತಮಂಗಾ ಜಾತಕರ್ಮವ
ವಿಸ್ತರಿಸಿ ವಿಪ್ರೋತ್ತಮರ ಕೈಯಿಂದ ನಿಜಸುತಗೆ
ಸ್ವಸ್ತಿಹೇತುವೆನಲ್ಕೆ ದೈವೋ
ವಾಸ್ತಿಪಿತೃಪೂಜೆಗಳ ತಾ ನಿಜ
ಹಸ್ತದಲಿ ಮಾಡಿದನು ಬಹುವಿಧ ದಾನಸಂಸ್ಥಿತಿಯ ೩

ಲಕ್ಷಧೇನುಗಳನಾ ದ್ವಿಜಾದ್ಯರಿ
ಗಕ್ಷಯನ ಜನನದಲಿ ಕೊಟ್ಟನು
ಲಕ್ಷಣಾನ್ವಿತನೊಲಿದಲಂಕಾರಿಗಳಲಿ ಮೆಱೆವ
ಲಕ್ಷ ಕರು ಸಹಿತೇನನೆಂಬೆನು
ಭಕ್ಷ್ಯಭೋಜ್ಯಾದಿಕವನಾದರ
ದಕ್ಷನಿತ್ತುಪಚರಿಸುತಿರ್ದನು ವಿದಿತ ವಿಭವದಲಿ ೪

ಏಳು ತಿಲರಾಶಿಗಳ ಗಿರಿಗಳ
ನೋಳಿವಿಡಿದರ್ಚಿಸಿ ಮಹಾಮಣಿ
ಜಾಲ ಶೋಭಿತ ಶಾತಕುಂಭಾಲಂಕೃತಂಗಳನು
ಮೇಲೆ ದಿವ್ಯಾಂಬರ ಸುವಸ್ತುವ
ಲೋಲಮತಿ ವಿಪ್ರರಿಗೆ ತನ್ನಯ
ಬಾಲಕಂಗಭ್ಯುದಯಕರವೆಂದಿತ್ತನೊಲವಿನಲಿ ೫

ಭೂತಳಾಧಿಪ ಕೇಳು ಬಂಧು
ವ್ರಾತವನು ಹೇಮಾಂಬರಾದಿ ಮ
ಹಾತಿಶಯ ವಿಭವದಲಿ ಮನ್ನಿಸಿ ಭೃತ್ಯವರ್ಗವನು
ಸೂತ ಮಾಗಧ ವಂದಿ ಜನ ಸಂ
ಘಾತವನು ಸತ್ಕರಿಸುತರ್ಥಿಜನು
ನೀತಿವಿದನಿಷ್ಟಾರ್ಥದಾನಾಭರಣ ವಸನದಲಿ ೬

ವಂದಿಗಳ ಮಾಗಧರ ಸೂತರ
ವೃಂದದುತ್ಸವದಿಕ್ಕೆಲದ ವರ
ಮಂದಿರಂಗಳ ಧೂಪದೀಪಾಂಕುರ ಫಲಾಕ್ಷತದ
ಸಂದಣಿಯ ಸೊಡರುಗಳ ಕನ್ನಡಿ
ಯಿಂದೆಸೆವ ಹೊಂಗಳಸನಿಕರದ
ಲಂದವಡೆದೊಪ್ಪಿದವು ಗೋಪಗೃಹಂಗಳೋರಣಿಸಿ ೭

ಭೂರಿ ಭೂಷಣಗಂಧಮಾಲ್ಯೋ
ದಾರವಸ್ತ್ರಂಗಳಲಿ ಗೋಕುಲ
ನಾರಿಯರು ರಂಜಿಸಿದರಂದಾ ಗೋಪಜನಸಹಿತ
ಭೇರಿಗಳ ಕೊಂಬುಗಳ ಕಹಳೆಗ
ಳಾರವದಲೆಣ್ದೆಸೆಯ ಪಲ್ಲವ
ತೋರಣಂಗಳಲೆಸೆದುದಮರಾವತಿಗೆ ಮಿಗಿಲೆನಿಸಿ ೮

ಬಳಿದು ನುಣ್ಬೆಣ್ಣೆಯನು ಮೈಯಲಿ
ತಳಿದು ಹಿಟ್ಟರಿಸಿನದ ಕುಂಕುಮ
ಜಲವ ಸಿಂಪಿಸಿ ದಿವ್ಯವಸ್ತ್ರಂಗಳಲಲಂಕರಿಸಿ
ಗಳದಲೊಪ್ಪುವ ಹೊನ್ನ ಗಂಟೆಯ
ಹಲವು ರತ್ನಾಭರಣ ನಿಕರದ
ಲೊಲಿದು ತುಱುವಿಂಡುಗಳನರ್ಚಿಸಿದರು ವಿನೋದದಲಿ ೯

ಬಂದರಾ ಗೋವಳರು ನೆರೆದಾ
ನಂದಗೋಪನ ಮನೆಗೆ ಪರಮಾ
ನಂದದಲಿ ಕರನಿಹಿತ ನಾನೋಪಾಯನಂಗಳಲಿ
ಮಿಂದು ಮಡಿಗಳನುಟ್ಟು ತೊಟ್ಟೊಲ
ವಿಂದ ಸರ್ವಾಭರಣನಿಕರದ
ಲಂದವಡೆದೈತಂದು ಕಂಡರು ಕಮಲಲೋಚನನ ೧೦

ಕೇಳಿದಾಗಳೆ ಗೋಪಿಯರು ಹೊ
ನ್ನೋಲೆ ಕಡಗಂಗಳನು ತೊಟ್ಟು ವಿ
ಶಾಲ ದಿವ್ಯಾಂಬರಗಳನು ನಿಱಿದುಟ್ಟು ನಲವಿನಲಿ
ಕಾಲ ನೂಪುರ ಝಣಕೃತಿಯು ದಿಗು
ಜಾಲದಲಿ ರಂಜಿಸಲು ಮುಡಿಯಲಿ
ಮಾಲೆ ಸೂಸಲು ಬಂದರಾ ನಂದಾಲಯಕೆ ನಲಿದು ೧೧

ಪರಿಪರಿಯ ವಸನಂಗಳಲಿ ಪರಿ
ಪರಿಯ ಮಣಿಭೂಷಣಗಳಲಿ ಪರಿ
ಪರಿಯ ಘನ ಕಸ್ತೂರಿ ಕುಂಕುಮ ಚಂದನಂಗಳಲಿ
ಕರನಿಹಿತ ಬಲಿಗಳಲಿ ಚಲಕುಚ
ಭರದ ಹಾರಂಗಳಲಿ ಮನವನು
ಹರಿಸಿದರು ಗೋಪಿಯರು ಮಾರ್ಗದಲೀಕ್ಷಿಸುವ ಜನರ ೧೨

ಹರಸಿ ಸೇಸೆಯ ತಳಿದರಂದಾ
ಸಿರಿಯರಸನಂಗದಲಿ ನಮ್ಮೆ
ಲ್ಲರನು ರಕ್ಷಿಸುವಾಳ್ದನಾಗೆಲೆ ಕಂದ ನೀನೆನುತ
ನೆರವಿಯಲಿ ಹೊಯಿದಾಡಿದರು ಕದ
ಡರಿಸಿನದ ಕುಂಕುಮದ ರಸಬಂ
ಧುರದ ನವನೀತಂಗಳಿಂದಂಗನೆಯರೋಕುಳಿಯ ೧೩

ಒಸಗೆವಱಿಗಳನೊಪ್ಪಿರಲು ಮೊಳ
ಗಿಸುವ ಕೊಂಬು ಕೊಳಲ್ಗಳನು ಬಾ
ರಿಸುತ ಬಱುದಿನ ಕಹಳೆಗಳನೋರಂತೆ ಗಜರಿಸುತ
ಹೊಸಪರಿಯ ಸಂಗೀತದಲಿ ಮೋ
ಹಿಸುವ ನಂದನ ಗುಣವ ಕೈವಾ
ರಿಸುವ ಕಳಕಳವೆಸೆದುದಾ ನಂದಗೋಕುಲದಿ ೧೪

ನಂದನಾಜ್ಞೆಯಲಂದು ರೋಹಿಣಿ
ಕಂದನೊಡನುತ್ಸವದ ಸಂತಸ
ದಿಂದ ದಿವ್ಯಾಂಬರ ವಿಭೂಷಣಗಂಧ ಮಾಲ್ಯದಲಿ
ಸಂದಣಿಯಲೊಪ್ಪಿದುದು ಗೋಕುಲ
ವಂದು ಮೊದಲುತ್ಸವಪರಂಪರೆ
ಯಿಂದೆಸೆದುದಖಿಳೇಶ್ವರನ ಸನ್ನಿಧಿಯ ದೆಸೆಯಿಂದ ೧೫

ಒಂದು ದಿನ ಗೋಕುಲದ ರಕ್ಷೆಗೆ
ಮಂದಿಯನು ಪರುಠವಿಸಿ ನಿಲಿಸುತ
ನಂದಗೋಪನು ಪಾಲು ಬೆಣ್ಣೆ ಮೊಸರ್ಗಳನು ಕೊಂಡು
ಬಂದನಾ ಮಥುರಾಪುರಿಗೆ ನಡೆ
ತಂದು ಕಂಸಂಗೆಲ್ಲವನು ನಲ
ವಿಂದ ಕೊಟ್ಟನು ನೃಪತಿಗಂದಾ ವರುಷವರ್ತನೆಯ ೧೬

ಅದನಱಿದು ವಸುದೇವನಾತನ
ವದನವನು ಕಾಂಬರ್ತಿಯಲಿ ಮನ
ದುದಿತ ಸಂತೋಷದಲಿ ಬಂದನು ನಂದನಿದ್ದೆಡೆಗೆ
ಮುದದಲಂದೊಡವುಟ್ಟಿದನ ದೂ
ರದಲಿ ಕಾಣುತ ಬೇಗದಲಿ ಬಂ
ದಿದಿರುಗೊಂಡಪ್ಪಿದನು ನಯನಾನಂದ ಬಾಷ್ಪದಲಿ ೧೭

ಹೊಂದಿದಸು ಬಂದಂತೆ ತನ್ಮೊಳ
ಗಂದು ಸಂಪ್ರೀತಿಯಲಿ ಕುಳ್ಳಿ
ರ್ದಂದನಾ ವಸುದೇವನಾ ನಂದಂಗೆ ಮನದೊಳಗೆ
ನಂದನನ ನೆನೆವುತ್ತ ಕುಶಲವೆ
ತಂದೆ ನಿನಗೆ ಸಮಸ್ತ ಬಾಂಧವ
ವೃಂದ ಗೋಧನಗಳಿಗೆ ಸುಖವೈ ಸಕಲ ಪರಿಜನಕೆ ೧೮

ಲೇಸು ನೀ ಮುಪ್ಪಿನಲಿ ಮಗನನ
ದೇಸು ಸುಕೃತಿಯೊ ಪಡೆದೆ ಘನಪರಿ
ತೋಷವಾಯ್ತೆಲೆ ತಂದೆ ತನಗದ ಕೇಳಿ ಭವದೊಳಗೆ
ಬೀಸಱಿನ ಭಯದುಃಖಘನವಾ
ರಾಸಿಯನು ನೆಱೆ ಪುತ್ರಪೌತ್ರದ
ಲೀಸುವರಲ್ಲೆ ಗೃಹದ ಭಾರವನಿರಿಸಿ ಕೇಳೆಂದ ೧೯

ತಂದೆ ಭವವಿಪಿನದಲಿ ತೊಳಲುವ
ಮಂದಮತಿಗಳಿಗೀ ಶರೀರದ
ಲೊಂದಿ ಪರವಶರಾಗಿ ನಾನಾಯೋನಿ ಮುಖಗಳಲಿ
ದಂದುಗಂಬಡುವವಗೆ ಬಾಂಧವ
ವೃಂದ ದರುಶನವೆಂಬುದಧಿಕಾ
ನಂದವಲ್ಲೈ ದೈವವಶದಲಿ ಕಂಡೆ ನಾನೆಂದ ೨೦

ಅಕಟ ಸಾಗರಮಧ್ಯ ಸಂಯಾ
ತ್ರಿಕರ ವೋಲೇಕತ್ರಸಂಸ್ಥಿತಿ
ಸುಕೃತ ದುಷ್ಕೃತ ಬದ್ಧಜೀವಾವಳಿಗೆ ದೊರಕದಲ್ಲೈ
ವಿಕಳ ಮತಿಗಳು ಮಱುಗಿ ಫಲವೇ
ನಕೃತಪುಣ್ಯರು ಕಾಲವಶದಲಿ
ಸಕಲ ಜನರಿಂತಗಲುತೊಡಗೂಡುತ್ತಲಿಹರೆಂದ ೨೧

ಆದಡೇನು ಸಮೃದ್ಧವೈ ಪ
ಶ್ವಾದಿಗಳಿಗೆಲೆ ತಂದೆ ತೃಣಜಲ
ವಾದಿಯಾದ ಸಮಸ್ತ ವಿರುಜವೆ ನಿಜಬೃಹದ್ವನಕೆ
ಪಾದಚಾರಿಯೆ ತನ್ನ ಮಗ ನಿ
ನ್ನಾದರದಲೇ ಬೆಳದು ತನ್ನುವ
ನಾದಿಯಿಂದಱಿಯನು ಭವತ್ಪಿತೃಭಾವದಿಂದೆಂದ ೨೨

ಎನಲು ಸಮಸುಖದುಃಖತನದಲಿ
ತನು ನೆನೆದು ಬಾಷ್ಪದಲಿ ವಸುದೇ
ವನನು ತಕ್ಕಯಿಸುತ್ತ ನುಡಿದನು ನಂದನನುನಯವ
ನಿನಗೆ ಮಕ್ಕಳು ಹುಟ್ಟದರೆ ಯ
ವ್ವನದ ಕೇಡಾಯ್ತಲ್ಲದೀಕ್ಷಿಸ
ಲಿನಿತುದೈವದ ಮೋಹ ಬೇಱಾಯ್ತೆನುತ ಬಿಸುಸುಯ್ದ ೨೩

ಕೆಡಿಸಿದನಲಾ ಪಾಪಿ ಕಂಸನ
ಕಡೆಯ ಕಾಣದು ದೈವವಕಟಾ
ಕಡೆಯಲೊಬ್ಬಳು ಮಗಳು ತಾನಾದವಳದೇಕಿರದೆ
ಪಿಡಿದುಹೋದಳು ನಭಕೆ ಕರ್ಮದ
ಕೆಡುಕತನವನದಾರು ಬಲ್ಲರು
ಜಡರು ನೀನಿದನಱಿಯದಾತನೆ ತಂದೆ ಹೇಳೆಂದ ೨೪

ಮಕ್ಕಳಾದವು ಮನೆಗಳಾದವು
ಮಿಕ್ಕ ಹೆಂಡತಿಯಾದಳೆಂಬಿನಿ
ತಕ್ಕೆ ನಂಬುಗೆಯುಂಟೆ ಕರ್ಮದ ಗತಿ ವಿಚಿತ್ರವಲ
ಮಿಕ್ಕಮಾತುಗಳೇಕೆ ತನ್ನೊಡ
ಲೊಕ್ಕತನವಿದು ತಾನೆ ಹುಸಿ ಮನೆ
ಮಕ್ಕಳೆಂಬೀ ವಿಷಯದಲಿ ಫಲವೇನು ಹೇಳೆಂದ ೨೫

ತನ್ನನಿಲ್ಲಿಯೆ ಕಂಡೆ ವರುಷದ
ಹೊನ್ನನರಸಂಗಿತ್ತೆ ನಿಲ್ಲದಿ
ರಿನ್ನು ನೀನಿದಱೊಳಗೆ ಹೋಗೆಲೆ ತಂದೆ ಗೋಕುಲಕೆ
ಮುನ್ನಿಸುವಡುತ್ಪಾತಶತವು
ತ್ಪನ್ನವಹುದಾ ಗೋಕುಲದಲಿದು
ತನ್ನಮಾತೆನಬೇಡ ಸುಯಿಧಾನವನು ಮಾಡೆಂದ ೨೬

ಎಂದು ಕಳುಹಿಸಿಕೊಂಡು ತನ್ನಯ
ಮಂದಿರಕೆ ವಸುದೇವನೈದಲು
ನಂದನಿತ್ತಲು ಕೇಳ್ದು ವಸುದೇವನ ತದುಕ್ತಿಗಳ
ನೊಂದು ಶಂಕಿಸಿ ಚಿತ್ತದೊಳಗೆ ಮು
ಕುಂದನನು ಮಱೆವೊಕ್ಕು ಮರಳಿದು
ಬಂದನಾ ಮುರ್ಮ್ಮಾರ್ಗದಿಂದ ನಿಜಾಲಯಕ್ಕೊಲಿದು ೨೭

ಅತ್ತಲನ್ನೆಗ ಧರೆಯ ಶಿಶುಗಳ
ನೊತ್ತರಿಸಿ ಮೋದುತ್ತ ಬಂದಳು
ಮೃತ್ಯುವನು ಕರೆವಂತೆ ಪೂತನಿ ನಂದಗೋಕುಲಕೆ
ಹೆತ್ತತಾಯಂದದಲಿ ವೇಷವ
ಹೊತ್ತು ಘೋರಾಕಾರವನು ಮಱೆ
ಸುತ್ತ ಮಾಯಾವಿದೆ ಮುನಿಪ್ರಿಯಮೂರ್ತಿಯಿದ್ದೆಡೆಗೆ ೨೮

ಲಲನೆ ಬಂದಳು ಲಕ್ಷ್ಮಿಕಾಂತನ
ಬಳಿಗೆ ಬಹವೊಲ್ಜನಮನವನಂ
ಡಲೆವುತಭಿನವ ರೂಪಗುಣ ಯವ್ವನದ ವಿಭವದಲಿ
ಚಲಕುಚದ್ವಯ ಭಾರದಲಿ ನಡು
ಬಳುಕಿ ಬಳಲುತ ಘನನಿತಂಬ
ಸ್ಥಳದ ಗರುವಿಕೆಗಲಸಿ ನಡೆವುತ ಮಂದಗಮನದಲಿ ೨೯

ಬಿಡುಮುಡಿಯ ಮಲ್ಲಿಗೆಯ ಪರಿಮಳ
ದೊಡನೆ ಬಹ ತುಂಬಿಗಳ ಕದಪಿನ
ಲಡಿಯಿಡುವ ಕುಂಡಲದ ದಿವ್ಯಾಂಬರವಿಭೂಷಣದ
ಒಡಲ ಕಾಂತಿಯಲಸುರೆ ಕಾಮಿಗ
ಳೊಡಲಲುರಿಯನು ಬಿತ್ತಿ ಬೆಳೆವುತ
ತಡೆಯದಾ ಗೋಕುಲಕೆ ನಡೆತರುತಿರ್ದಳೊಲವಿನಲಿ ೩೦

ಎಲ್ಲಿ ಹರಿಗುಣಕಥನ ಕೀರ್ತನ
ವಿಲ್ಲ ರಕ್ಷೋಘ್ನಂಗಳೆನಿಸುವ
ವಿಲ್ಲ ಕರ್ಮಂಗಳಲಿ ತತ್ಪದ ಶರಣಜನವಿಲ್ಲ
ಅಲ್ಲಗಲ್ಲಿಗೆ ಶಿಶುಗಳನು ನೆಱೆ
ಘಲ್ಲಿಸುತ ಚಳನಾರಿಯೈದಿದ
ಳಲ್ಲದಚ್ಯುತಗೋತ್ರರನು ಬಾಧಿಸುವುದರಿದೆಂದ ೩೧

ನೋಡಿಕೊಂಡಳು ಮನೆಯ ಮುಂದಣ
ಮಾಡದಲಿ ಯತಿಗುಳಿಯ ಕುಱುಹನು
ದಾಡೆಯಿಲ್ಲದ ದುಷ್ಟೆ ಹೊಕ್ಕಳು ನಂದನಾಲಯವ
ಮಾಡಹೋಗಿರೆ ತಾಯಿ ಕೆಲಸವ
ನೂಡಿ ಕೊಲುವೆನು ಶಿಶುವನೆನುತವೆ
ಮೂಡಿದೊಱೆಯ ಕಠಾರಿಯಂತೆ ಕಠೋರಭಾವದಲಿ ೩೨

ಗರುಡದೇವನನೆಬ್ಬಿಸಲು ಬಂ
ದುರಗವಧುವೋ ಹುತ್ತಿನೊಳಗಿ
ರ್ದುರಗನನು ಹೊಕ್ಕವುಕಿ ಕೊಲಬಂದಾಯುನೆಱೆದಿಲಿಯೊ
ದುರುಳೆ ಬಂದಳು ದುಷ್ಟ ರಾಕ್ಷಸ
ಮರಣಕಾರಿ ಕೃತಾಂತನಿದ್ದೆಡೆ
ಗಱಸಿಕೊಳಲೇಕೆನುತ ಮಿಗೆ ಮೋಕ್ಷವನು ಪಡೆವಂತೆ ೩೩

ಎತ್ತಿಕೊಂಡಳು ಹಾವ ನೇಣಂ
ದೆತ್ತಿಕೊಂಬಂದದಲಿ ಖಳಕುಲ
ಮೃತ್ಯುವನು ಮಾಯಾಮನುಷ್ಯಾಕೃತಿಯ ಮುರಹರನ
ಇತ್ತು ಕೊಲುವೆನೊ ವಿಷವನೊಂದೇ
ತುತ್ತುಗೊಂಬೆನೊ ಯೆನುತ ತನ್ನಯ
ಚಿತ್ತದಲಿ ನಿಶ್ಚಯಿಸುತಿತ್ತಳು ಮೊಲೆಯನರ್ಭಕಗೆ ೩೪

ಅಱಿಯದವನವೊಲಖಿಳ ಸಚರಾ
ಚರಜಗದ್ವ್ಯಾಪಕನು ಕಂಗಳ
ತೆಱೆಯದಱವಿನ ಕಣ್ ಕಟಾಕ್ಷಿಸಿ ಕಾಣದವನಂತೆ
ಮುಱವೆನೀಕೆಯ ಗೋಣನವನಿಯ
ಹೊಱೆಯ ಕಳೆವ ವ್ರತಕೆ ಮೊದಲೆನು
ತಱೆತು ಸುಮ್ಮನೆ ಮಿಡುಕದಿರ್ದನು ರಾಕ್ಷಸಿಯ ಮುಂದೆ ೩೫

ನಿಟ್ಟಿಸಿದಡೆವೆ ಸೀವ ವಿಷವನು
ದುಷ್ಟೆ ಮೊಲೆಯಲಿ ಹೂಸಿ ಶಿಶುವಿಗೆ
ಕೊಟ್ಟಳವಿನಾಶಿಗೆ ಕೃತಾಂತಕೃತಾಂತ ವಿಗ್ರಹಗೆ
ಮೆಟ್ಟ ಖಳೆಯಂಗವನು ಮುನಿ ಹೃ
ದ್ವಿಷ್ಟರಾರ್ಚಿತ ಚರಣನಸುರೆಯ
ಕೊಟ್ಟ ಮೊಲೆಗಳನೆರಡು ಕೈಯಲಿ ಹಿಡಿದು ಬಿಡದುಂಡ ೩೬

ನಸುನಗುತ ಕಡೆಗಣ್ಣಲಸುರೆಯ
ಮುಸುಡನೀಕ್ಷಿಸಿ ಕೊಂದೆಯಲ್ಲಾ
ಶಿಶುಗಳನು ತಾನಿಂದು ನಗರಗ್ರಾಮದೊಳಗೆನುತ
ಅಸುಸಹಿತ ಕೋಪದಲಿ ಹೀರಿದ
ನಸುವನಸುರಾಂತಕನು ಭರದಲಿ
ವಿಷದ ನೊರೆ ಕಡೆವಾಯಲುಕ್ಕಲು ರಕ್ಕಸಿಯ ಮೊಲೆಯ ೩೭

ಭಾವಶುದ್ಧಿಯಲೆನಗೆ ಪೂಜೆಯ
ನೀವ ಸತ್ಪುರುಷರಿಗೆ ಮುಕುತಿಯ
ನೀವುದೇನಚ್ಚರಿಯೆ ನೆಱೆ ನಂಜೂಡಿ ಕೊಲಬಂದ
ಭಾವದುಷ್ಟೆಗೆ ಹಿತದ ಮುಕುತಿಯ
ನೀವನೆಂಬುದನಱುಹುವಂತಿರೆ
ಜೀವಸಹಿತಿಕ್ಕೈಯಲುಂಡನು ಮೊಲೆಯನುಱೆ ಹಿಡಿದು ೩೮

ಲೋಕ ಶಿಶುಗಳ ಕೊಂದ ಮೊಗ್ಗೆಂ
ದಾ ಕಠೋರೆ ಕರಾಳ ವಿಷವನು
ಲೋಕನಾಥಂಗಿತ್ತಡಸುಸಹಿತುಣಲು ಬಸವಳಿದು
ಸಾಕುಸಾಕೆಲೆ ಚಿಣ್ಣ ಬಿಡುಬಿಡು
ಸಾಕು ಮಾಣೆಂದೆನುತ ರಕ್ಕಸಿ
ನೂಕಿಬಿಟ್ಟಳು ತೇಕಿದಳು ಬಿಡದೊದಱಿ ಬಾಲಕನ ೩೯

ಬಿಡು ಬಿಡೆಂದಡೆ ಬಿಡದೆ ಜೀವವ
ಕಡುಗಿ ಸೇದುತ್ತಿರಲು ಖಳೆ ಬಱ
ಸಿಡಿಲವೊಲು ಜಱುವುತ್ತ ಕೈಕಾಲುಗಳನಸಬಡಿದು
ಕೆಡೆವುತೇಳುತ ಕೂಡೆ ಮೈ ನಡ
ನಡುಗಿ ಬೆವರುತ ಬೀದಿವರಿವು
ತ್ತೊಡನೊಡನೆಯೊರಲಿದಳು ರಕ್ಕಸಿ ಬೆಟ್ಟ ಬಿರಿವಂತೆ ೪೦

ಒಡೆದುದೋ ಬ್ರಹ್ಮಾಂಡವವನಿಗೆ
ಕೆಡೆದುದೋ ಕುಲಶೈಲವೆನೆ ಮೊಳೆ
ಯಿಡುತ ಘನನಿಷ್ಠುರ ಮಹಾರವವನಿಯಂಬರವ
ಒಡನೊಡನೆ ದೆಸೆಗಳನು ನಡನಡ
ನಡುಗಿಸಿತು ನಾರಿಯರ ಬಸುಱುಗ
ಳೊಡನೆ ಸುರಿಯಲು ಧರೆಗೆ ಕೆಡೆದುದು ಸಕಲಜನನಿವಹ ೪೧

ಘೀಳಿಡುತ ಬಸವಳಿದು ತನ್ನಯ
ತೋಳುಗಳನೊಂದೆಸೆಗೆ ಹರಹುತ
ಕಾಲುಗಳನೊಂದೆಸೆಗೆ ಬೀಸಾಡುತ್ತ ಧರಣಿಯಲಿ
ಶೈಲರಾಜನವೋಲು ಸಹಜ ಕ
ರಾಳ ರೂಪವನಾಂತು ಕೆಡೆದಳು
ಕಾಳರಕ್ಕಸಿ ಭುವನ ಬೆದಱಲು ಬಿಟ್ಟ ಮಂಡೆಯಲಿ ೪೨

ದುಷ್ಟರಕ್ಕಸಿ ಯೊಡಲು ಬೀಳುತ
ನೆಟ್ಟನೊಂದರೆಗಾವುದಂತರ
ದಿಟ್ಟಿಡೆಯ ಗಿಡುಬಳ್ಳಿಮರಗಳನೊರಸಿ ವನದೊಳಗೆ
ಹುಟ್ಟಿದನಿತುವನೆಲ್ಲವನು ಹುಡಿ
ಗುಟ್ಟಿ ಬೀಳಲು ಭೂಪ ವಜ್ರದ
ಲಿಟ್ಟು ಕೆಡಹಿದ ವೃತ್ರನೊಡಲೀ ಧರೆಗೆ ಬೀಳ್ವಂತೆ ೪೩

ಕಟ್ಟಿಯುಂಡದ ಕಾಲುಗಳ ಕಿಱು
ಬೆಟ್ಟದಂದದ ತೋರ ಮೊಲೆಗಳ
ಬಿಟ್ಟ ಕಂಗಳ ಭೀಕರದ ಬಾಯ್ದೆಱೆಯ ನಿಡುಭುಜದ
ನಿಟ್ಟೆಲುಗಳಡಗೆಡೆದ ಗಿರಿಗಳ
ಬಿಟ್ಟ ಮಂಡೆಯ ಕಾಳುಱೆಯನೊಡ
ಲಿಟ್ಟ ಮೃತ್ಯುವಿನಂತೆ ಬಿದ್ದಳು ವಿಕೃತವೇಷದಲಿ ೪೪

ಎಸೆವ ಗಿರಿಕಂದರನಿಭೋಗ್ರ
ಶ್ವಸನರಂಧ್ರದ ಬಿಗಿದ ಹುಬ್ಬಿನ
ಬಸುಱು ಬತ್ತಿದ ಕೊರಳ ದಾಡೆಯ ರಾಕ್ಷಸಿಯ ಕಂಡು
ಅಸುರೆಯುರದಲಿ ಮೊಲೆವಿಡಿದು ಲಂ
ಬಿಸುವ ಶಿಶುವನು ಕಾಣುತವೆ ಕೂ
ರಸಿಯೊಡಲೊಳುಡಿದಂತೆ ಹರಿತಂದುದು ಜನಸ್ತೋಮ ೪೫

ಎತ್ತಿಕೊಂಡರು ಶಿಶುವನೇವೆನೆ
ನುತ್ತ ಚಿಂತಿಸಿ ಕಾಲಕರ್ಮವ
ನೆತ್ತಲೇನೆಂದಱಿಯದಾ ಸಾಕ್ಷಾತಸ್ವಯಂಧೃತಿಯ
ಇತ್ತರಾ ಜನನಿಗೆ ಜಗಂಗಳ
ಹೆತ್ತವನ ಗೋಪಿಯರು ತನ್ನಯ
ಪುತ್ರನೆಂದಳಲಿದಳು ನಂದನ ಕಾಂತೆ ಮುಱುಕೊಳಿಸಿ ೪೬

ಇಂದುಮುಖಿಯರು ನೆರೆದು ಗೋರಜ
ದಿಂದ ಗೋಮೂತ್ರಾಭಿಷೇಕದ
ಲಂದು ಬಳಿದೀಡಾಡಿ ಗೋಪುಚ್ಛಾದಿಕಂಗಳನು
ನಂದನಂಗನೆ ರೋಹಿಣಿಯರೊಡ
ನಿಂದಿರಾಪತಿಗಖಿಳ ಭುವನಾ
ನಂದಕಾರಣ ಮೂರ್ತಿಗೆಸಗಿದರಂದು ರಕ್ಷೆಗಳ ೪೭

ರಕ್ಷಿಸುವುದಜನಂಘ್ರಿಯನು ನೆಱೆ
ರಕ್ಷಿಸುವುದಣಿಮಾನುಜಾನುವ
ರಕ್ಷಿಸುವುದೂರುಗಳನೆರಡನು ಯಜ್ಞನಚ್ಯುತನು
ರಕ್ಷಿಸಲಿ ಕಟಿತಟಿವ ಜಠರವ
ರಕ್ಷಿಸಲಿ ಹಯಶೀರ್ಷನೀತನ
ರಕ್ಷಿಸಲಿ ಹೃದಯವನು ಕೇಶವನೆಂದರಬಲೆಯರು ೪೮

ರಕ್ಷಿಸುವ ನಿನ್ನುರವನೀಶ್ವರ
ರಕ್ಷಿಸುವುದಿನನೊಲಿದು ಕೊರಳನು
ರಕ್ಷಿಸಲಿ ತೋಳ್ಗಳನು ಭವಭಯಜಿಷ್ಣುವಹ ವಿಷ್ಣು
ರಕ್ಷಿಸಲಿ ವದನವನು ರುದ್ರನು
ರಕ್ಷಿಸಲಿ ಶಿರವನು ಮಹೇಶ್ವರ
ರಕ್ಷಿಸಲಿ ಸರ್ವಾತ್ಮಕನು ಸರ್ವಾಂಗಸಂಧಿಗಳ ೪೯

ಮುಂದಿರಲಿ ಹರಿಚಕ್ರವೀತನ
ಹಿಂದೆ ಗದೆ ರಕ್ಷಿಸಲಿ ಪಾರ್ಶ್ವ
ದ್ವಂದ್ವದಲಿ ರಕ್ಷಿಸುಗೆ ನಂದಕ ಶಾರ್ಙ್ಗವೆಂಬೆರಡು
ಸಂದ ದಿವ್ಯಾಯುಧಗಳೀ ಕುಲ
ನಂದನನವನಿಯಲಿ ವಿನತಾ
ನಂದನನು ರಕ್ಷಿಸುಗುಪೇಂದ್ರನು ಶಿಶುವನಭ್ರದಲಿ ೫೦

ಸಲೆ ವಿದಿಕ್ಕುಗಳೊಳಗೆ ರಕ್ಷಿಸು
ಗೊಲಿದು ಶಂಖಪ್ರವರ ನಿನ್ನನು
ಹಲಧರನ ರಕ್ಷಿಸುಗೆ ಸುತ್ತಲು ನೆರೆ ಹೃಷೀಕೇಶ
ಸಲಹುಗಿಂದ್ರಿಯ ನಿಕರವನು ಮುನಿ
ಕುಲವಿನುತ ನಾರಾಯಣನು ಕೋ
ಮಲನೆ ನಿನ್ನಯ ಪ್ರಾಣವನು ರಕ್ಷಿಸುಗೆ ನಲವಿನಲಿ ೫೧

ಕರಣ ನಿಕರಂಗಳನು ಯೋಗೀ
ಶ್ವರನು ರಕ್ಷಿಸುಗೊಲಿದು ಸರ್ವೇ
ಶ್ವರನು ಸರ್ವಾತ್ಮಕನು ಸರ್ವಾವಸ್ಥೆಗಳಲೊಲಿದು
ಪರಿಪರಿಯ ಬಾಲಗ್ರಹಾದ್ಯುರು
ತರದ ಶಾಕಿನಿಡಾಕಿನಿಯರು
ಬ್ಬರದ ಬಾಧೆಗಳೊಳಗೆ ನಿನ್ನನು ರಕ್ಷಿಸುಗೆ ಬಿಡದೆ ೫೨

ಇಂತು ಗೋಪಿಯರೊಸೆದು ನಂದನ
ಕಾಂತೆ ಸಹಿತುತ್ಸವದಲಾ ಗ್ರಹ
ಶಾಂತಿಯನು ನೆಱೆಮಾಡಿ ಸಂತತ ಶಾಂತವಿಗ್ರಹಗೆ
ಸಂತಸಂಬಡುತಿರ್ದರಾ ಗೃಹ
ಚಿಂತೆಯನು ನೆಱೆಮುಱಿದು ಲಕ್ಷ್ಮೀ
ಕಾಂತ ನಿತ್ಯಾತುಮನ ಶಿಶುಲೀಲೆಗಳನೀಕ್ಷಿಸುತ ೫೩

ಐದನೆಯ ಸಂಧಿ ಮುಗಿಯಿತು.

## ಆರನೆಯ ಸಂಧಿ

ಪಾಲಿತಾಖಿಳ ಭುವನನಾ ಶ್ರುತಿ
ಮೌಳಿಮಂಡಿತ ಚರಣನೆಸೆದನು
ಲೀಲೆವಿಗೆ ಶಿಶುತನದ ನಾಟಕರಚನೆಯನು ಮೆಱೆದು

ಅರಸ ಕೇಳಡಗೆಡೆದ ಪೂತನಿ
ಯುರು ಭಯಂಕರರೂಪ ಕಂಡ
ಚ್ಚರಿವಡುತ ಗೋಕುಲದ ಜನ ತಮುತಮುಗೆ ಬೆಱಗಾಗಿ
ನೆರೆದು ನೋಡುತ್ತಿರಲು ಮಧುರಾ
ಪುರದ ದೆಸೆಯಿಂದಖಿಳಪರಿಜನ
ನೆರಸಿ ಬಂದನು ನಂದಗೋಪನು ತಡೆಯದಾಕ್ಷಣಕೆ ೧

ಬಂದು ಕಂಡನು ಕೆಡೆದ ರಕ್ಕಸಿ
ಯಂದವನಿದೇನೆನುತ ನಡುಗುತ
ನಂದಗೋಪಾದಿಗಳು ಹದನನು ಕೇಳಿ ತಲ್ಲಣಿಸಿ
ಹೊಂದಿದವನಿವನೆಮ್ಮ ಭಾಗಕೆ
ಕಂದನೇ ಶಿವಯೆನುತ ಪರಮಾ
ನಂದ ಮೂರ್ತಿಯ ನೋಡಿ ಕಂಬನಿ ದುಂಬಿದನು ನಂದ ೨

ದೇವನೋ ಋಷಿಯೋ ಅನಾಗತ
ಕೋವಿದನೊ ನರನಲ್ಲ ದಿಟ ವಸು
ದೇವನಕಟಾ ಹೇಳಿದಾ ನುಡಿ ಸತ್ಯವಾದುದಲ
ಆವ ಯೋಗಿಗಳಱಿವರಿದನೀ
ಭಾವಿ ಕರ್ಮದ ಗತಿಯನೆನುತ ಜ
ನಾವಳಿಯಲಾಘೋಷಿಸಿದನಾ ನಂದನಡಿಗಡಿಗೆ ೩

ಕಡಿಕಡಿದು ನೃಪ ಕೇಳು ರಕ್ಕಸಿ
ಯೊಡಲ ಕೈಕಾಲುಗಳ ಸಂದನು
ಕೊಡಲಿ ಸವೆದವು ಹೇೞ ಬಳಲಿದವೆತ್ತು ಬಂಡಿಗಳು
ಕಡಿದು ಬಿಸುಡುವ ಮಿಂಡ ಗೋವಳ
ರೊಡಲು ಕೆಡೆದವು ಧರೆಗೆ ದುಃಖಂ
ಬಡಿಸಲೆಂದೇ ದನುಜೆ ಹುಟ್ಟಿದಳೆಂದುದಮರಗಣ ೪

ಒಟ್ಟಿದರು ದೂರದಲಿ ದನುಜೆಯ
ನಿಟ್ಟೆಲುವನುಡಿದುಡಿದು ಖಂಡಿಸಿ
ಸುಟ್ಟ ಬಱ ಯೆಲುಗಳನು ಹೊತ್ತಡಕಿದರು ತವತವಗೆ
ನಟ್ಟಡವಿ ಬಯಲಾಯ್ತು ಖಳೆಯೊಡ
ಲೊಟ್ಟಿಲನು ಕಾಷ್ಠದಲಿ ವೇಷ್ಟಿಸಿ
ಸುಟ್ಟರಾ ಸುರನಿಕರವಂಬರದೊಳಗೆ ನಲಿದಾಡೆ ೫

ಗಗನದಲಿ ದೆಸೆಗಳಲಿ ಹೊಗೆ ಮಘ
ಮಘಿಸಿದುದು ಧರಣಿಯಲಿ ಗೋವಳ
ರಗಿಲು ಧೂಪದಲೆಸೆವ ಸೌರಭವೆತ್ತಣಿಂದಾಯ್ತೊ
ಬಗೆವಡಚ್ಚರಿಯೆನುತ ತನತನ
ಗೊಗುಮಿಗೆಯ ಹರುಷದಲಿ ಬೆಱಗಿನ
ಬಿಗುವಿನಲಿ ಮರಳಿದರು ನಂದಾದಿಗಳು ಗೋಕುಲಕೆ ೬

ದುಷ್ಟಭಾವದಲಕಟ ವಿಷವನು
ಕೊಟ್ಟು ನೆಱಕೊಲ ಬಂದ ಪೂತನಿ
ಮುಟ್ಟಿ ಮುಕುತಿಗೆ ಸಂದಳಚ್ಯುತನಂಘ್ರಿ ಕಮಲವನು
ಕೆಟ್ಟಿದಘಕುಲವೆಂದು ಲೋಕಕೆ
ನೆಟ್ಟನಱುಪುತ್ತಗರು ಧೂಪವ
ಕೊಟ್ಟವೊಲು ಮಘಮಘಿಸಿತಾ ರಕ್ಕಸಿಯ ಘಟಧೂಪ ೭

ಅಚ್ಚರಿಯೆ ಮೞದೊಮ್ಮೆ ನಾಮವ
ನುಚ್ಚರಿಸೆ ಮೇಣ್ನೆನೆಯೆ ಕೇಳಿದ
ಡೊಚ್ಚಿ ವರ ಚರಿತಾಮೃತವನೀಜಗದ ಭವಬಂಧ
ಬಿಚ್ಚುವುದು ಗಡ ತನ್ನನುರದೊಳ
ಗಚ್ಚುತನನಾಂತಾ ನಿಶಾಚರಿ
ಮುಚ್ಚು ಮಱೆಯೆ ಮುಕುತಿಗೆಯ್ದಿದಳೆಂದುದಮರಗಣ ೮

ಭೂವರನೆ ಕೇಳೀ ಚರಾಚರ
ಜೀವಸಾಕ್ಷಿಗೆ ನಲಿದು ಮೊಲೆಗಳ
ನೀವ ಪುತ್ರಸ್ನೇಹದಲಿ ಲಾಲಿಸುವ ಪಾಲೆಱೆವ
ಆವುದೋ ಹೆತ್ತವರ ಸುಕೃತ ಫ
ಲಾವಲಂಬನ ಸಿದ್ಧಿ ಮೇಣಾ
ಗೋವುಗಳ ಗೋಪಿಯರ ಪುಣ್ಯಕ್ಕಾರು ಸರಿಯೆಂದ ೯

ಇತ್ತು ಮೊಲೆಗೆಳನೊಸೆದು ಸಲಹುವ
ಹೆತ್ತ ತಾಯಿಗೆ ಪಶುಗಳಿಗೆ ವಿಷ
ವಿತ್ತು ಕೊಲಬಂದಾ ನಿಶಾಚರಿಗೊಮ್ಮೆ ಮುಕುತಿಯಲಾ
ಉತ್ತಮರು ಕೆಲರಧಮರನ್ಯರು
ಮತ್ತೆ ತನ್ನವರೆಂಬ ಭೇದವ
ದೆತ್ತಣದು ಪರಿಪೂರ್ಣವಸ್ತುವಿಗೆಂದನಾ ಮುನಿಪ ೧೦

ಆವ ನೆವದಿಂದಾದಡೊಂದಿದ
ಜೀವರಿಗೆ ಸಂಸಾರ ಮೋಕ್ಷವ
ನೀವನೆಂಬಿದು ಸಿದ್ಧವಾದುದಲಾ ಮುಕುಂದನಲಿ
ಆವುದರಿಂದೆಲೆ ಭೂಪ ಮನದಲಿ
ಭಾವಿಸುವ ಭಕುತರಿಗೆ ಮುಕುತಿಯ
ನೀವುದೇನಚ್ಚರಿಯೆ ನಿಜಪದಶರಣರಿಂಗೆಂದ ೧೧

ನಂದನಾ ಪರಿಜನ ಸಹಿತ ನಿಜ
ಮಂದಿರವ ಹೊಕ್ಕಂತೆ ರಾಕ್ಷಸಿ
ಬಂದ ಪರಿಯನು ಹೊಕ್ಕಪರಿಯನು ಮಡಿದ ಪರಿಗಳನು
ಅಂದು ಕೇಳುತ್ತೆಲ್ಲನನು ತನು
ಬೆಂದವೊಲು ಬಸವಳಿದು ತನ್ನಯ
ನಂದನನನೀಕ್ಷಿಸುತಕಂಬನಿದುಂಬಿದನು ಮಗುಳೆ ೧೨

ಎತ್ತಿಕೊಂಡುರದೊಳಗೆ ತಕ್ಕಯಿ
ಸುತ್ತ ಕಂಗಳು ದಣಿಯೆ ನಡೆ ನೋ
ಡುತ್ತ ಮುದ್ದಾಡುತ್ತ ಮುಕುತರ ಮುದ್ದೆನಿಪ ಶಿಶುವ
ನೆತ್ತಿಯನು ವಾಸನಿಸಿ ದಣಿಯದೆ
ಚಿತ್ತದನುರಾಗದಲಿ ನಿಜಕೃತ
ಕೃತ್ಯತನವನು ನೆನೆದು ಹೊಂಪುಳಿಯೋದನಡಿಗಡಿಗೆ ೧೩

ಹನ್ನೆರಡು ದಿನದಂದು ವಿಪ್ರರಿ
ಗನ್ನ ಪಾನಾಂಬರ ಸುರಭಿ ಸೌ
ವರ್ನ ದಾನಂಗಳಲಿ ಬಹು ಸತ್ಕಾರ ಪೂಜೆಯಲಿ
ಮನ್ನಿಸುತ ಪುಣ್ಯಾಹವನು ಸಂ
ಪನ್ನಮತಿ ಮಾಡಿಸಿ ಮಹೋತ್ಸವ
ದುನ್ನತಿಯಲಾರಾಧಿಸಿದನಂದಖಿಳಬಾಂಧವರ ೧೪

ಕಟ್ಟೆ ಕನಕದ ಮಿಳಿಗಳಲಿ ಹೊಂ
ದೊಟ್ಟಿಲನು ಕಲ್ಪದ್ರುಮಂಗಳ
ದಟ್ಟವಿಸಿದೆಳಗಂಪು ತಂಪುಗಳೆಸೆವ ನೆಳಲೊಳಗೆ
ಕಟ್ಟೆಪಟ್ಟಾವಳಿಯ ತೆಱೆಮೇ
ಲ್ಕಟ್ಟುಗಳಲೊಪ್ಪಿರಲು ರಕ್ಷೆಯ
ಕಟ್ಟಿರಿಸಿ ಪಾಡಿದಳು ಗೋಪಿ ಮುಕುಂದನನು ನಲಿದು ೧೫

ಮುಮ್ಮನೆಯ ನೆರೆಮನೆಯ ವನಿತೆಯ
ರೊಮ್ಮೆ ಸುರಖೇಚರರ ವನಿತೆಯ
ರೊಮ್ಮೆ ಸಿರಿ ಉಮೆ ವಾಣಿ ವನದೇವತೆಯರೊಮ್ಮೊಮ್ಮೆ
ಒಮ್ಮೆ ಧರೆ ದಿಗುಪಾಲ ವನಿತೆಯ
ರೊಮ್ಮೆ ನೆರೆದು ನದೀವಧೂಜನ
ರೊಮ್ಮೆ ಜೋಗುಳವಾಡಿ ತೂಗುವರಾ ಜಗನ್ಮಯನ ೧೬

ಜೋ ಜಗತ್ಕಾರಣ ಜಗನ್ಮಯ
ಜೋಜಗನ್ಮಂಗಳ ಗುಣೋದಯ
ಜೋ ಜಗಜ್ಜನ್ಮ ಸ್ಥಿತಿ ಪ್ರಳಯಾವಹನೆ ಜೋ ಜೋ
ಜೋ ಜಗತ್ಪಾವನನೆ ಜೋಜೋ
ಜೋ ಜಗಜ್ಜೀವನನೆ ಜೋಜೋ
ಜೋ ಜಗವ್ಯಾಪಕನೆ ಜಗದ್ವಂದಿತನೆ ಜೋ ಜೋ ಜೋ ೧೭

ಜೋ ಜನಾರ್ದನ ದುರಿತಮರ್ದನ
ಜೋ ಜನಾರ್ದನ ಹರುಷವರ್ಧನ
ಜೋ ಜನಾರ್ದನ ಸನ್ನಾತಾಪದ್ಧನ ಜನಾರ್ದನನೆ
ಜೋ ಜನಾರ್ದನ ಜಿತಜನಾರ್ದನ
ಜೋ ಜನಾರ್ದನ ಜಗದಘಾರ್ದನ
ಜೋ ಜನಾರ್ದನ ಭೂಮಿಭಾರಾರ್ದನನೆ ಜೋ ಜೋ ಜೋ ೧೮

ಅಚ್ಯುತನೆ ಜೋ ಜೋ ಜಗದ್ಭಯ
ವಿಚ್ಯುತನೆ ಜೋ ಜೋ ನರಾಕೃತಿ
ಮುಚ್ಚಿಮೂಡಿದ ಗೂಢ ಚಿದಚಿದ್ರೂಪ ಜೋ ಜೋ ಜೋ
ಸಚ್ಚಿದಾನಂದಾತ್ಮಕನೆ ಜೋ
ಸಚ್ಚರಿತ ಗುಣನಿಧಿಯೆ ಜೋ ಜೋ ಜೋ
ಮುಚ್ಚರಿಪ ಸುರವೈರಿಕುಲಮರ್ದನನೆ ಜೋ ಜೋ ಜೋ ೧೯

ದೇವ ಜೋ ಜೋ ಜೋ ಸಮಾಶ್ರಿತ
ದೇವ ಜೋ ಜೋ ಜೋ ವಿನಾಶಿತ
ದೇವರಿಪು ಜೋ ಜೋ ನತಾವನಿದೇವ ಜೋ ಜೋ ಜೋ
ದೇವವಂದಿತ ದೇವ ಜೋ ಜೋ
ದೇವಕುಲ ಪಾಲಕನೆ ನಿಜಜನ
ಜೀವ ಜೋ ಜೋ ಜೋ ಮನೋಜ್ಞವಿಹಾರ ಜೋ ಜೋ ೨೦

ಜೋ ಪರಾತ್ಮ ಪರೇಶ ಜೋ ಜೋ
ಜೋ ಪರಬ್ರಹ್ಮೈಕ ವಿಗ್ರಹ
ಜೋ ಪರಂಪರಹಿತನೆ ಜೋ ಜೋ ಪರಾತ್ಪರನೆ
ಜೋ ಪರಂಜ್ಯೋತಿಯೆ ಪರಾರ್ಪಿತ
ಜೋ ಪರಾತ್ಮಜ್ಞಾನ ಪರತರ
ಜೋ ಪರಾತ್ಮಕ ಜೋ ಪರಮ ಮಂಗಳನೆ ಜೋಜೋಜೋ ೨೧

ಇಂತು ನಂದನ ಕಾಂತೆ ಗೋಕುಲ
ಕಾಂತೆಯರು ತಾವೊಮ್ಮೆ ಸುರನರ
ಕಾಂತೆಯರು ಸೌಹಾರ್ದದಲಿ ಹಿಡಿದಪ್ಪಿ ಮುಂಡಾಡಿ
ಅಂತರಂಗದಲಖಿಲ ಮುನಿಜನ
ಚಿಂತಿತಾಂಘ್ರಿಸರೋಜ ಲಕ್ಷ್ಮೀ
ಕಾಂತನನು ಪಾಡುತ್ತ ಮೆಱೆದರು ಲೋಕ ವಿಭ್ರಮವ ೨೨

ಕೇಳಲಾಗದೆ ಮುನಿಪ ಪರಮ ಕೃ
ಪಾಳುಗಳಲಾ ನೀವು ಕಾಲ
ವ್ಯಾಳ ಮುಖಸಂದಷ್ಟವಲ್ಲಾ ತನ್ನ ಜೀವವಿದು
ಶ್ರೀಲಲಾಮ ಚರಿತ್ರನೆಂಬ ರ
ಸಾಲ ಸುಧೆಯನು ಸುರಿದು ಮೂರ್ಛೋ
ನ್ಮೂಲನವ ಮಾಡುವುದೆನುತ್ತೆಱಗಿದನು ಭೂಪಾಲ ೨೩

ತೃಪ್ತಿಯಾಗದು ತನಗೆ ತನ್ನಯ
ಚಿತ್ತ ವಲ್ಲಭನಮಳಗುಣ ಚಾ
ರಿತ್ರ ಸುಧೆಯನು ಸತತ ಕರ್ಣಪುಟಂಗಳಲಿ ಸವಿಯೆ
ಮೃತ್ಯುಭಯಹರನಾತ್ಮ ಸುಖಸಂ
ಪತ್ತಿ ಕಾರಣ ಸಕಲ ದುಃಖನಿ
ವೃತ್ತಿಕರವದಱಿಂದಧಿಕವಿನ್ನಾವುದುಂಟೆಂದ ೨೪

ಆವುದನು ಕೇಳಿದರೆ ನರರಿಗೆ
ಭಾವಶುದ್ಧಿ ವಿರಕ್ತಿ ವಿಷಯ ವಿ
ಷಾವಳೀ ಸೇವೆಯಲಿ ಸಂಜನಿಸುವುದು ಹರಿಭಕ್ತಿ
ಜೀವಜಾತಕ್ಕಮಳ ವೈಷ್ಣವ
ಪಾವನಾಂಘ್ರಿಯ ಸಖ್ಯವದನೆ ಕೃ
ಪಾವಲೋಕನದಿಂದ ಕರುಣಿಸಬೇಹುದೆನಗೆಂದ ೨೫

ಧರೆಗೆ ಪಾವನವಾಗಲೆಂದವ
ತರಿಸಿ ಪುಣ್ಯಶ್ಲೋಕ ವಂದಿತ
ಚರಣನಾನಾವಂಗದಲಿ ನರಲೀಲೆಗಳಲೊಲಿದು
ಚರಿಸಿದನು ನಿಮ್ಮಡಿಗಳದನೆಲೆ
ಗುರುವೆ ಬೇಸಱದೆಲ್ಲವನು ವಿ
ಸ್ತರಿಸ ಬೇಹುದು ತನಗೆ ಶಿಷ್ಯಂಗೆಂದನವನೀಶ ೨೬

ಸಾಧುವಾಗಲಿ ಮೇಣು ಶಿಷ್ಯನ
ಸಾಧುವಾಗಲಿ ಸದ್ಗುರುವನಾ
ರಾಧಿಸುತ್ತು ಪಸನ್ನನಾದಡದಾವನಾಗಿರಲಿ
ಬಾಧಕವೆನಿಪ್ಪಖಿಳಜನದ ನಿ
ರೋಧವನು ನೆಱೆ ಕಳೆದು ಮುಕುತಿಯ
ಸಾಧಿಪರೆ ಸದ್ಗುರುವೆ ಕರುಣಿಪುದೆಂದಡಿಂತೆಂದ ೨೭

ಲೇಸನಾಡಿದೆ ಭೂಪ ವರ್ಣಿಪೆ
ವಾಸುದೇವನ ಮಹಿಮೆಯನು ಲೀ
ಲಾ ಸುಧಾ ಸಂಪನ್ನ ಸೌಖ್ಯದ ಸಾರಸಂಗತಿಯ
ಏಸು ಕಲ್ಪಾಂತರಕೆ ಹಿರಿಯರು
ಬೇಸಱುವರ್ಗೆ ತಂದೆ ಹಿರಿಯನೆ
ಬೇಸಱುವಡವನಱಿಯದವನೇ ಮಗನೆ ನೀನೆಂದ ೨೮

ಬಸುಱ ಶಿಶುವಿಂಗೆಂದು ಸುಧೆ ಸೇ
ವಿಸಿದಡೀಯದೆ ತಾಯಿಗಮರತೆ
ಯಸಮಸಿದ್ಧಿಯನಧಿಕ ಸಂತುಷ್ಟಿಯನು ಮುರಹರನ
ಒಸೆದು ಬಣ್ಣಿಪ ತನಗೆ ನಿನಗೀ
ಋಷಿಸಭೆಗೆ ಸರ್ವರಿಗೆ ಸುಖ ಸರಿ
ಹಸುಗೆ ಕಾಣಾ ಭೂಪ ಎಂದನು ಮುನಿಪನರಸಂಗೆ ೨೯

ಒಂದುದಿನ ಜನ್ಮರ್ಕ್ಷಯೋಗದ
ಲಂದವಡೆದೌತ್ಥಾನಿಕೋತ್ಸವ
ಕೆಂದು ಗೋಕುಲದವರು ನೆರೆದು ಯಶೋದೆಯರಮನೆಗೆ
ಬಂದು ಬಾಲಾಕೃತಿಯ ಹರಿಯನು
ಕಣಣಿಯೆ ನಡೆ ನೋಡಿ ಪರಮಾ
ನಂದದೊಳಗೋಲಾಡುತಿರ್ದುದು ಸಕಲಜನನಿವಹ ೩೦

ಗೀತವಾದಿತ್ರರವಗಳೆಸೆಯೆ
ಭೂತಳಾಧಿಪ ಮಂತ್ರದಿಂ ಪರಿ
ಪೂತಕಳಶೋದಕದಲಭಿಷೇಕವನು ನೆಱೆ ಮಾಡಿ
ಭೂತಭುವನಾಧಾರ ಹರಿ ನಿಜ
ಜಾತ ಶಿಶುವೆಂದೊಸೆದು ಮಂಗಳ
ಹೇತುವಹ ಕರ್ಮಂಗಳನು ಮಾಡಿಸಿದಳಂದಬಲೆ ೩೧

ಸ್ನಾನಭೂಷಣಗಳಲಿ ತನ್ನಯ
ಸೂನುವನಲಂಕರಿಸಿ ಕೊಟ್ಟಳು
ಧೇನುಮಣಿಕನಕಾಂಬರಾದಿಗಳನು ಸುವಿಪ್ರಂಗೆ
ಆ ನಿಖಿಳ ಗೋಕುಲ ನಿವಾಸದ
ಮಾನಿನಿಯರಿಗೆ ಸೂತಮಾಗಧ
ಜನಪದದ ಜನಗಳಿಗೆ ಮಾಡಿದಳುಚಿತ ಸತ್ಕ್ರಿಯೆಯ ೩೨

ದೇವಪಿತೃತರ್ಪಣವನಾ ಭೂ
ದೇವತುಷ್ಟಿಯನಾ ಯಶೋದಾ
ದೇವಿ ವಿರಚಿಸಿ ನಿಜಸುತಂಗಭ್ಯುದಯಕರವೆಂದು
ದೇವದೇವನನೊಲಿದು ಶಿಶುವಂ
ದೋವಿ ಮೊಲೆಗಳನೂಡಿ ನಿದ್ರಾ
ಭಾವಿತಾತ್ಮನನೊಯ್ಯನಿರಿಸಿದಳೊಂದು ತೊಟ್ಟಿಲಲಿ ೩೩

ಲಲನೆ ಪೊಂದೊಟ್ಟಿಲಲಿ ಭಂಡಿಯ
ಕೆಳಗೆ ಮಲಗಿಸಿ ಸಕಲ ಸಂವಿ
ದ್ಗಳಿತನಿದ್ರನ ನಿದ್ರೆಗೆಯ್ಯೆ ಯಶೋದೆ ಮೋಹದಲಿ
ಒಲಿದು ಗೋಪಿಯರಿಂಗೆ ಪೂದಂ
ಬುಲವನಿತ್ತುಪಚರಿಸುವುತ್ಸವ
ದೊಳಗೆ ಮೈಮಱೆದಿರ್ದಳಾ ಸಂಭ್ರಮದ ವಿಭವದಲಿ ೩೪

ಕೆಲಸದಲಿ ಮೈಮಱೆದು ತಾಯಿರ
ಲಳುತಳುತ ಕಂದೆಱೆದು ಕಂಬನಿ
ದುಳುಕೆ ನಡುಪುಟವೆದ್ದು ಹೊಡಕರಿಸುತ್ತ ತೊಟ್ಟಿಲಲಿ
ಹಲಗೆಗಳನೊದೆವುತ್ತ ಮೆಲ್ಲಡಿ
ಗಳನು ಬದಿರಲು ಕಡೆಯಡಿಯ ಮೆಲು
ದಳದಲರು ಸೋಂಕಲ್ಕೆ ಬಿದ್ದುದು ಭಂಡಿ ನುಗ್ಗಾಗಿ ೩೫

ಭಂಡಿ ತಳಮೇಲಾಗಿ ಬಹುರಸ
ಭಾಂಡ ವೆರಸಂಬರದೊಳಗೆ ಬ್ರ
ಹ್ಮಾಂಡ ಬಿಱಿವಂತೊದಱಿ ಬಿದ್ದುದು ನುಗ್ಗುನುಸಿಯಾಗಿ
ಕಂಡದೇನೇನೆಂದು ಸತಿಯರ
ತಂಡ ಹರಿತಂದಳುವ ಶಿಶುವನು
ಕಂಡು ನಡುಗುತ್ತೆತ್ತಿಕೊಂಡರು ಚಂಡವಿಗ್ರಹನ ೩೬

ಗಾಲಿಕೀಲುಗಳುರ್ಚಿ ತುಂಬಿದ
ಸಾಲು ಹರವಿಗಳೊಡೆದು ಧರೆಯಲಿ
ಬೀಳಲೇತಕೆ ಭಂಡಿ ಹುಡಿಹುಡಿಯಾಗಿ ಬಾಲಕನ
ಮೇಲೆ ಬೀಳದವೋಲು ನಮ್ಮ ವಿ
ಶಾಲ ದೈವವೆ ಕಾಯ್ದುದೆನುತಾ
ಲೋಲ ಮತಿಗಳು ನಂದಗೋಪಾದಿಗಳು ಹಲುಬಿದರು ೩೭

ಮಱುಗಿ ಮನದಲಿ ತಲ್ಲಣಿಸಿ ಸಿಡಿ
ಲೆಱಗಿದಂತೀ ಭಂಡಿಯೇತಕೆ
ಮುಱಿದುಬಿದ್ದುದೊ ಗ್ರಹನಿಮಿತ್ತವೊ ತಾನಿದೇನೆಂದು
ಅಱಿಯದಳಲುತ್ತಿರಲು ಮಕ್ಕಳು
ಮಱುಗಲೇಕೀ ಶಿಶುವಿನಂಘ್ರಿಯು
ಸೆಱಗು ಸೋಂಕಲು ಬಿದ್ದುದೆಂದರು ಭಂಡಿ ಧರೆಗುಡಿದು ೩೮

ಹೋಲದಿದು ಶಿಶುಪಾದಹತಿಯಲಿ
ಬೀಳಲಱುವುದೆ ಭಂಡಿ ಮಕ್ಕಳ
ಹೇಳಿಕೆಗೆ ತಾನಾವುದರ್ಥವೆನುತ್ತ ನೆರವಿಯಲಿ
ಹೇಳಿದರು ಕೆಲಕೆಲರು ಸಂಶಯ
ಲೋಲಮಾನಸರಾದರೆಲೆ ಭೂ
ಪಾಲ ಪರಮೇಶ್ವರನ ಮಹಿಮೆಯನಱಿವರಾರೆಂದ ೩೯

ಎತ್ತಿಕೊಂಡಳು ತಾಯಿ ಹರಿತಂ
ದೆತ್ತಣಿಂದೆಲೆ ಮಗನೆ ಬಂದುದು
ಮೃತ್ಯುವಿದು ನಿನಗೇವೆನಾವ ಗ್ರಹವೊ ಶಿವ ಯೆನುತ
ಸ್ವಸ್ತಿವಾಚನೆಗಳನು ವರ ವಿ
ಪ್ರೋತ್ತಮರ ಮುಖದಿಂದ ಮಾಡಿಸಿ
ಚಿತ್ತಸಾಕ್ಷಿಗೆ ಮೊಲೆಯನೂಡಿದಳಂದು ಮೋಹದಲಿ ೪೦

ಹೂಡಿದರು ಭಂಡಿಯನು ಮುನ್ನಿನ
ಪಾಡಿನಲಿ ಬಲಿಧೂಪ ದೀಪವ
ಮಾಡಿ ಮನೆ ದೇವತೆಗಳನು ಸಕಲಗ್ರಹಾವಳಿಯ
ಊಡಿಸಿದರುರು ಗಂಧ ಮಾಲ್ಯದಿ
ತೀಡುವಾವೋದದಲಿ ವಿಪ್ರರು
ಗೂಡಿ ಬಹುಮಂಗಳ ಮಹಾವಾದ್ಯಂಗಳಿಂದೆಸೆಯೆ ೪೧

ಸ್ನಾನವನು ಮಾಡಿಸಿದರಮಳ
ಜ್ಞಾನ ಮೂರ್ತಿಗೆ ಮಂತ್ರದಲಿ ಬಹು
ದಾನವನು ಮಾಡಿದರು ಗೋ ಭೂವ್ಯಂಬರಾದಿಕವ
ಸೂನುವಿಂಗಭ್ಯುದಯವೆಂದು ಕೃ
ಶಾನು ಮುಖದಲಿ ದಣಿಸಿ ಸುರರನು
ಧೇನುಗಳನರ್ಚಿಸಿದರಾ ದಂಪತಿಗಳೊಲವಿನಲಿ ೪೨

ದಣಿಸಿದರು ವರ ವಿಪ್ರರನು ಮ
ನ್ನಣೆಗಳಲಿ ಮಧುರೋಕ್ತಿಯಲಿ ದ
ಕ್ಷಿಣೆ ಸಹಿತ ದಿವ್ಯಾನ್ನ ಪಾನಂಗಳಲಿ ಸತ್ಕರಿಸಿ
ಗುಣರಹಿತ ಶಿಶುವಿಂಗೆ ಶಾಂತಿಯ
ನೆಣಿಸಿ ಮನದಲಿ ಮಾಡುತಿರ್ದರು
ಮಣಿ ಕನಕ ಭೂಷಣಗಳಲಿ ಸಂತುಷ್ಟಿಯನು ಧರೆಗೆ ೪೩

ಹರಸಿ ಸೇಸೆಯನಿಟ್ಟರಾ ದ್ವಿಜ
ವರರು ನಿಜದಿಂ ನಿತ್ಯನಾದಂ
ಗುರುತರಾಮಳ ವೇದ ಮಂತ್ರಂಗಳಲಿ ಮನವೊಲಿದು
ಪರಮಪುರುಷಂಗಾತ್ಮಮಾಯಾ
ಪರಿಗುಣಿತ ಮಹಿಮಂಗೆ ಸಚರಾ
ಚರ ಜಗಚ್ಚೈತನ್ಯಮಯ ನಿತ್ಯಾತ್ಮರೂಪಂಗೆ ೪೪

ಆರನೆಯ ಸಂಧಿ ಮುಗಿಯಿತು

# ಏಳನೆಯ ಸಂಧಿ

ನರಶಿಶುವಿನಂತಾಡುತಾಡುತ
ದುರುಳ ಕಂಸನ ಭೃತ್ಯ ವಾತಾ
ಸುರನ ಕೊರಳನು ಮುಱಿದು ಬಿಸುಟನು ಧರೆಗೆ ಮುರವೈರಿ

ಒಂದು ದಿನ ಮೊಲೆಯೂಡುತೂಡುತ
ನಂದಗೋಪಿ ಮುಕುಂದನಾನನ
ದಂದವನು ನೋಡುತ್ತ ಮುದ್ದಾಡುತ್ತ ಕುಳ್ಳಿರಲು
ಬಂದನೊಬ್ಬನು ದೈತ್ಯನಾ ಗೋ
ವಿಂದನನು ಮಥುರಾಪುರಕ್ಕೊ
ಯ್ವೊಂದು ಮನದುತ್ಸಾಹದಲಿ ನೃಪ ನಂದಗೋಕುಲಕೆ ೧

ಅದನಱಿದು ದೈತ್ಯಾರಿ ಗಿರಿಯಂ
ದದಲಿ ಗುರುತರವಾಗಲೇನೆಂ
ದಿದು ವಿಚಿತ್ರವೆನುತ್ತ ತೊಡೆಯಿಂದಿಳುಹಿ ಧರಣಿಯಲಿ
ಸುದತಿ ತನ್ನಯ ಮನೆಗೆಲಸಕ್ಕೈ
ದಿದಳು ಹರಿಯನು ನೆನೆದು ಮನದೊಳ
ಗದುಭುತದ ಶಿಶುವೆನುತ ನಂದನ ಕಾಂತೆ ಬೆಱಗಾಗಿ ೨

ಇತ್ತಲನ್ನೆಗ ಕಂಸ ಭೃತ್ಯರೊ
ಳತ್ಯಧಿಕ ತೃಣವರ್ತನೆಂಬಾ
ದೈತ್ಯನಾವರಿಸುತ್ತ ಕೆಂದೂಳಿಂದ ಗೋಕುಲವ
ಕಿತ್ತು ಗಿಡು ಮರ ಬಳ್ಳಿಗಳನಲೆ
ವುತ್ತ ವಾತಾಕೃತಿಯಲೈತಂ
ದೆತ್ತಿ ಕೊಂಡಂಬರಕೆ ಹಾಯ್ದನು ಖಳಕುಲಾಂತಕನ ೩

ಹಗಲು ಕತ್ತಲೆ ಕವಿದು ದಶ ದಿ
ಕ್ಕುಗಳನವನಿಯನಂಬರವ ಮು
ಮ್ಮೊಗದಲಾವರಿಸುತ್ತ ಕೆಡೆ ಬೀಸುತ್ತ ಬಿಱುಗಾಳಿ
ಒಗುಮಿಗೆಯ ಕೆಂದೂಳಿ ಕೆತ್ತುದು
ಜಗದ ಕಂಗಳ ಕದವನೊಬ್ಬನೆ
ಮಗನದೇನಾದನೋ ಎನುತ್ತ ಯಶೋದೆ ತಲ್ಲಣಿಸಿ ೪

ಬಂದು ಕಾಣದೆ ಶಿಶುವನೇಗುವೆ
ನೆಂದಱಿಸಿ ಮುನ್ನಿರಿಸಿದೆಡೆಯಲಿ
ಬೆಂದವೊಲ್ಬಸವಳಿದಳುತ್ತಳಲುತ್ತ ಧರಣಿಯಲಿ
ಇಂದು ಮುಖಿ ಹೊರಳಿದಳು ಕಾಣದೆ
ಕಂದಿ ಕಱುವನು ತಾಯವೋಲರ
ವಿಂದನಾಭನನಬಲೆ ಹಂಬಲಿಸುತ್ತ ದೆಸೆದೆಸೆಗೆ ೫

ಕಾಂತೆ ಮೂರ್ಛೆಯೊಳೆಚ್ಚರಿನೊಳೇ
ಕಾಂತ ಭಕ್ತರವೋಲು ಲಕ್ಷ್ಮೀ
ಕಾಂತನನು ಹಂಬಲಿಸುತತ್ತಳು ದೆಸೆಗೆ ಬಾಯ್ಬಿಡುತ
ಕಾಂತೆಯೊಱಲುವ ದನಿಗೆ ಗೋಕುಲ
ಕಾಂತೆಯರು ಹರಿತಂದು ದೆಸೆ ದೆಸೆ
ಗಂತರಾತ್ಮನನಱಸುತಿರ್ದರು ಶ್ರುತಿಗಳಂದದಲಿ ೬

ಥಟ್ಟುಗೆಡೆದಳು ಧರೆಗೆ ಸತಿ ಕಱು
ಗೆಟ್ಟ ತಾಯಂದದಲಿ ಜೀವವ
ನಿಟ್ಟಱಸಿ ಬಳಲಿದಳು ಕಾಣದೆ ಗೋಪವನಿತೆಯರು
ಕೆಟ್ಟೆವೆನುತಾ ಗೋಪಿಯಂಗದ
ಲಿಟ್ಟು ತಂತಮ್ಮಂಗವನು ಘೀ
ಳಿಟ್ಟು ಕೆಡೆದುದು ಕೂಡೆ ದೆಸೆ ಬಾಯ್ಬಿಡೆ ವಧೂನಿವಹ ೭

ನಂದ ಮೊದಲಾದಖಿಳಗೋಪರ
ವೃಂದವಾ ಗೋಪಿಯರ ಬಹುಳಾ
ಕ್ರಂದನವನಾಲಿಸುತ ಬೀಳುತ್ತೇಳುತ್ತೈತಂದು
ಕಂದನಿರವನು ಕಾಣದುರಿಯಲಿ
ನಿಂದವೊಲ್ಬಸವಳಿದರಸುವಿರೆ
ಹೊಂದಿದರು ಧರೆಗೊಬ್ಬರೊಬ್ಬರಮೇಲೆ ತನಿಗೆಡೆದು ೮

ತಡತಡವಿ ಕೈಗಳಲಿ ದೆಸೆಗಳ
ನಿಡುಮಣಲ ಕತ್ತಲೆಯೆ ದೂಳಿಯೆ
ಕಡಲಜಲಚರವಾಯ್ತು ಜನವಲ್ಲಲ್ಲಿಗೊಱಲುತ್ತ
ಮೊಡಲ ಹಮ್ಮಿನ ಯೋಗಿಗಳನವ
ಗಡಿಸಿ ಕಾಡುವ ಮಾಯೆಯಂತಿರೆ
ಕುಡುನಿರೋಧಂಬಡಿಸಿದನು ಖಳನಚ್ಯುತನ ಹಿಡಿದು ೯

ಅಂಗಣದಲಿಂತಖಿಳಗೋಕುಲ
ದಂಗನೆಯರೊಡಗೂಡಿ ಗೋಪರು
ಸಂಗಡಿಸಿ ಹಲುಬುತ್ತ ಹಂಬಲಿಸುತ್ತ ಮೂರ್ಛೆಯಲಿ
ಕಂಗೆಡುತ್ತಿರೆ ಕಮಳ ದೃಶನನು
ಹಿಂಗದಾ ಖಳನೊಯ್ದನಾ ಗಗ
ನಾಂಗಣಕೆ ಗಱಿಯಂತೆ ಶಿಶುರೂಪಿ ಜಗನ್ಮಯನ ೧೦

ಭೀಕರಾಂಗವನಾಂತು ನಭದಲಿ
ನಾಕರಿಪು ಕೊಂಡೊಯ್ವುತಿರೆ ನಿಜ
ಗೋಕುಲದ ಪರಿಭವವನಾ ಸಂಕ್ಲೇಶ ಸಂಸ್ಥಿತಿಯ
ಶೋಕವನು ಕಾಣುತ್ತ ದೈತ್ಯನ
ನೇಕೆ ಕೊಂಡಾಡುವೆನೆನುತ್ತ ಕೃ
ಪಾಕರನು ದೈತ್ಯಾಪಹರಣಕೆ ಮಾಡಿದನು ಮನವ ೧೧

ಅರಸ ಕೇಳಂಜಿದವೊಲಾತನ
ಕೊರಳನಿಕ್ಕೈಯಿಂದ ಹಿಡಿದಂ
ಬರದಲೊತ್ತಿದಡುಸುರಿಗುಬ್ಬಸವಾಗಿ ಕಂಗೆಟ್ಟು
ಗಿರಿಯವೋಲಿಳೆಗಚ್ಚುತನನಾಂ
ತುರದಲಮರಾರಾತಿ ಘೀಳಿಡು
ತಱಿಯ ಮೇಲೊಗೆದಂತೆ ಬಿದ್ದನು ಭೀಕರಾಂಗದಲಿ ೧೨

ಮಬ್ಬು ಹರೆದುದು ಮಳೆಯ ಗಾಳಿಗ
ಳುಬ್ಬಟೆಗಳಡಗಿದುವು ಗೋಕುಲ
ವೆಬ್ಬಿಸಿದವೊಲಾಯ್ತು ನಭದಿಂದಿಳೆಗೆ ಖಳ ಕೆಡೆಯೆ
ಸರ್ಬಜನ ಚೇತರಿಸಿತಾ ಕ್ಷಣ
ಕುರ್ಬಿಯಲಿ ಕೆಡೆದಸುರನೊಡಲಲಿ
ಸರ್ಬನತನಿರೆ ಕಂಡು ಹರಿತಂದುದು ಜನಸ್ತೋಮ ೧೩

ಎತ್ತಿಕೊಂಡರು ಖಳನ ಕೊರಳನು
ಸುತ್ತಿ ಕೊಲುವ ಜಗನ್ಮಯನ ನುಱಿ
ಹೆತ್ತವರು ಗೋಕುಲದ ಜನವೈದಸುವ ಪಡೆದಂತೆ
ನೆತ್ತಿಯನು ವಾಸನಿಸಿ ಹರುಷರ
ಸೋತ್ತರದ ಸುಸ್ನೇಹ ಜಲದಲಿ
ತತ್ಸವಿದರಂತಾದರಾನಂದದಲಿ ಮುಳುಗಾಡಿ ೧೪

ಎತ್ತಲೀ ಶಿಶು ಜಗವನೊಂದೇ
ತುತ್ತುಮಾಡುವ ಭೀಕರಾಂಗದ
ದೈತ್ಯನಿವನೆತ್ತಲು ನಭೋಗತಿಗೆಯ್ದುವವನೆತ್ತ
ಮತ್ತೆ ಧರೆಯಲಿ ಕೆಡೆದು ನುಗ್ಗಹು
ದೆತ್ತಲುರದಲಿ ಲಂಬಿಸುವ ಶಿಶು
ವೆತ್ತಲದುಭುತವೆನುತ ಕಂಬನಿದುಂಬಿದನು ನಂದ ೧೫

ಆವ ತಪವೋ ಪೂರ್ವದಲಿ ಮು
ನ್ನಾವ ಪೂರ್ತೇಷ್ಟಾದಿ ಘನ ಸುಕೃ
ತಾವಳಿಯೊ ನಿರ್ವ್ಯಾಥವಾದುದು ಜನ್ಮ ಶತಗಳಲಿ
ಆವ ಮುಖದಲಿ ಭಜಿಸಿದೆವೊ ಬಲು
ದೈವವನು ಶಿಶು ಸತ್ತು ಮಗುಳೆ ಸ
ಜೀವಿಸಿದುದನು ಕಂಡೆವೆಂದನು ನಂದನಡಿಗಡಿಗೆ ೧೬

ಆವ ದಿವ್ಯಜ್ಞಾನಿಯೋ ವಸು
ದೇವನಲ್ಲದಡಱಿವನೆಂತಿದ
ನೀ ವಿಚಿತ್ರೋತ್ಪಾತಗತಿಗಳ ಗಾಢಸಂಗತಿಯ
ದೇವನಾಗದೆ ಮಾಣನೆನುತ ಮ
ಹಾ ವಿರಾಗದಲಂದು ನೆರೆದಾ
ಗೋವಳರ ಮಧ್ಯದಲಿ ಕೊಂಡಾಡಿದನು ಯದುವರನ ೧೭

ಎತ್ತಿಕೊಂಡಾ ನಂದನಚಲಿತ
ಮೂರ್ತಿಯನು ಗುಣಗಂಧ ರಹಿತನ
ನೆತ್ತಿಯನು ವಾಸನಿಸಿ ನಿಜ ಪುತ್ರಾನುರಾಗದಲಿ
ಹೊತ್ತ ತನು ಪುಳಕದಲಿ ತಕ್ಕಯಿ
ಸುತ್ತ ತನ್ಮಯನಾಗಿ ಹರುಷ ರ
ಸೋತ್ತರದಲೋಲಾಡುತಿರ್ದನು ನಿಜಸುಖಾಬ್ಧಿಯಲಿ ೧೮

ಕರ್ಮವನು ಕೆಡೆಯೊದೆದು ದಾಸೋ
ಹಮ್ಮೆನುತ್ತೊಳಗಱಿಯದಾ ಕೋ
ಹಮ್ಮೆನುತ್ತಱಿ ಮರುಳೆನಿಸಿದುಪಸನ್ನ ಭಾವದಲಿ
ಬೊಮ್ಮವಿದಥಲಿ ಬಳಲಿಸದೆ ಸೋ
ಹಮ್ಮಿನಲಿ ಬೇಱೆನಿಸದಾ ಪರ
ಬೊಮ್ಮ ನಂದಯಶೋದೆಯರಿಗಪರೋಕ್ಷವಾಯ್ತೆಂದ ೧೯

ನೋಡುವರ ಕಣ್ದಣಿಯೆ ಗುಣವನು
ಪಾಡುವರು ತಕ್ಕಯಿಸಿ ಚೆಯ್ಮಂ
ಡಾಡುವರು ಕುಳ್ಳಿರಿಸಿಕೊಂಡಂಕದಲಿ ಚಿನುಮಯನ
ಕೂಡಿ ಲಾಲನ ಪೋಷಣಂಗಳ
ಮಾಡಿ ದಣಿಯರು ಜನ್ಮ ಶತದಲಿ
ಮಾಡಿದಚ್ಯುತತುಷ್ಟಿಯೆಂತುಟೊ ಭೂಪ ಕೇಳೆಂದ ೨೦

ಒಂದು ದಿನ ನಿಜಬಾಲಕನನಾ
ನಂದದಲಿ ತೆಗೆದಪ್ಪಿ ತೊಡೆಯಲಿ
ನಂದಗೋಪಿ ಮನೋನುರಾಗದಲೆಸೆಯೆ ಕುಳ್ಳಿರಿಸಿ
ಇಂದುಮುಖಿ ಮೊಲೆಯೂಡಿದಳು ಮುದ
ದಿಂದಖಿಳಭುವನಾಶ್ರಯೋದರ
ಮಂದಿರಂಗುಪಸನ್ನಜನ ನಿಜಬಂಧುವಿಂಗೊಲಿದು ೨೧

ಲೀಲೆಯಲಿ ಮೊಲೆಯುಂಡು ದಣಿದಾ
ಬಾಲಕನ ಮೊಗ ನೋಡಿ ಮುದ್ದಿಸಿ
ಸಾಲದೆನೆ ಮಗ್ಗುಲಲಿ ಮಹಿಮನನಪ್ಪಿ ಕುಳ್ಳಿರ್ದು
ಲಾಲಿಸುತ ಲಕ್ಷ್ಮೀಕರಾಂಬುಜ
ಲಾಲಿತಾಂಘ್ರಿಯ ಬಾಯಿದೆಱೆಯಲಿ
ಬಾಲೆ ಕಂಡಳು ಕಮಲಜಾಂಡಕಟಾಹಮಂಡಲವ ೨೨

ಕಂಡಳವನಿಯನಂಬರವನಾ
ಖಂಡಲಾದಿ ಸಮಸ್ತದಿವಿಜರ
ತಂಡವನು ತಾರಾಗ್ರಹಾವಳಿ ಚಂದ್ರಸೂರಿಯರ
ಮಂಡಲಂಗಳನುರುನದೀಗಿರಿ
ಖಂಡ ಸಪ್ತದ್ವೀಪ ಸಾಗರ
ಷಂಡ ಕಾನನ ದೇಶನಗರಗ್ರಾಮಜನಸಹಿತ ೨೩

ಸಕಲಸಚರಾಚರದ ಜೀವ
ಪ್ರಕರವನು ಪಶುಪಕ್ಷಿಮೃಗವನ
ನಿಕರವನು ಗೋಕುಲವನಾ ಗೋಕುಲನಿವಾಸಿಗಳ
ನಿಕರವನು ತನ್ನವನು ಬಾಯ್ದೆಱೆ
ಯಕೃತಕಬ್ರಹ್ಮನನು ಕಂಡಾ
ಸುಕೃತವೆಂತೋ ತನಗೆನುತ ತಲ್ಲಣಿಸಿ ನಡುಗಿದಳು ೨೪

ಇಂತು ತನ್ನೊಂದೇಕದೇಶದೊ
ಳಂತವಿಲ್ಲದೆ ತೋರ್ಕು ಮಾಯಾ
ಭ್ರಾಂತಿ ಜಗದಾಕಾರದಿಂದೆಂಬುದನು ತೋರ್ಪಂತೆ
ಭಾಂತಿವಿರಹಿತನಾತ್ಮವದನಾ
ಭ್ಯಂತರಾಳದೊಳಖಿಳಭುವನ
ಭ್ರಾಂತಿಯನು ತೋಱಿದನು ತಾಯಿಗೆ ನಿಜವಿನೋದದಲಿ ೨೫

ಕಂಗಳನು ನೆಱೆಮುಚ್ಚಿ ತರುಣ ಲ
ತಾಂಗಿ ಭಯದಲಿ ನಡುಗುವಂಗೋ
ಪಾಂಗದಲಿ ಕುಳ್ಳಿರಲು ಹರಿಶರಣೆನುತ ಮನದೊಳಗೆ
ಹಿಂಗಿದುದು ದೃಗ್ಭ್ರಾಂತಿ ನೆಱೆ ಬಹಿ
ರಂಗದೃಷ್ಟಿಗೆ ತೋಱಿ ತೋರ್ಕೆಯು
ಡಂಗುವುದು ನಿಜದೃಷ್ಟಿಯೊಳಗೆಂಬುದನು ತೋರ್ಪಂತೆ ೨೬

ಮಱೆದು ಮೊಲೆಯೂಡಿದಳು ಮುನ್ನಿನ
ತೆಱದಲಾಗಳೆ ಗೋಪಿ ತತ್ವವ
ನಱಿದ ಬುಧರಂತೊಬ್ಬನನೆ ಬಾಹ್ಯದಲಿ ಕಾಣುತ್ತ
ಅಱಿವುಮಱವೆಗೆ ಸಾಕ್ಷಿಯಾದಿ
ತ್ರೈಱನವೋಲಿರ್ದಳು ನಿತಂಬಿನಿ
ಕೆಱೆದುಕಾಲಾರಬ್ಧಭೋಗದ ಯೋಗಿಯಂದದಲಿ ೨೭

ಬಂದನಲ್ಲಿಗೆ ಗರ್ಗನಾನಕ
ದುಂದುಭಿಯ ಮಾತಿನಲಿ ಯಾದವ
ವೃಂದಕುಲದಾಚಾರ್ಯನಖಿಳಬ್ರಹ್ಮಕುಲವರ್ತಿ
ಇಂದುಮುಖಿ ರೋಹಿಣಿ ಯಶೋದಾ
ನಂದನರ ಸಂಸ್ಕಾರವನು ಮಾ
ಳ್ಪೊಂದು ಮನದರ್ಥಿಯಲಿ ಪೆಱರದನಱಿಯದಂದದಲಿ ೨೮

ಕಂಡು ಬರವನು ದೂರದಿಂದಲೆ
ದಂಡದಂತಿರಲೊಡಲನವನಿಗೆ
ದಿಂಡುಗೆಡಹುತ್ತಿದಿರುಗೊಂಡಾ ನಂದನುಚಿತದಲಿ
ಕಂಡೆನೆನ್ನಯ ಪುಣ್ಯಫಲ ತನು
ಗೊಂಡು ಬಹುದನು ಭಾಪೆನುತ್ತ
ದ್ದಂಡಮತಿ ಪೂಜಿಸಿದನಚ್ಯುತಬುದ್ಧಿಯಲಿ ಮುನಿಯ ೨೯

ಆಸನದ ಮೇಲೊಪ್ಪಿರಲು ಮುನಿ
ವಾಸುದೇವನ ಕುಳ್ಳಿರಿಸಿ ಗುಣ
ರಾಸಿ ಪದವನು ತೊಳೆದು ತೀರ್ಥೋದಕದಲೋಲಾಡಿ
ಶಾಸಿಸುವುದೇನಿತ್ತಲಘುಕುಲ
ನಾಶನನ ಬರವಾಯ್ತು ನಾನಿ
ನ್ನೇಸು ಧನ್ಯನೊ ಎನುತ ಬಿನ್ನವಿಸಿದನು ಮುನಿಪತಿಗೆ ೩೦

ಜ್ಞಾನವಂತನೆ ಬರವಿದಧಿಕ
ಜ್ಞಾನಿಗಳೆನಿಪ್ಪರಿಗೆ ಸಂತತ
ದೀನಮತಿಗಳಿಗಸ್ವತಂತ್ರ ಗೃಹಪ್ರವೃತ್ತರಿಗೆ
ಜ್ಞಾನಸಾಧನವಿಹಪರಾರ್ಥಸು
ಖಾನುಭವ ಸಾಧನವಲಾ ತನ
ಗೇನು ಬೆಸನೆಲೆ ಮುನಿಪ ಕರುಣಿಸಬೇಹುದೆನಗೆಂದ ೩೧

ಅನುಪಮನೆ ನಿನ್ನಿಂದತೀಂದ್ರಿಯ
ವೆನಿಸಿದೀ ಜ್ಯೋತಿರ್ಗಣಂಗಳ
ವಿನುತ ಮಾರ್ಗಜ್ಞಾನವವಗತವಾಯ್ತಲಾ ಧರೆಗೆ
ಮುನಿಪ ನಿನ್ನಂದದಲಿ ಶಿಷ್ಟರು
ಜನಿಸಲಱಿವರೆ ತನ್ನ ವಿಜ್ಞಾ
ಪನವನುರು ಕಾರುಣ್ಯದಿಂದವಧರಿಸಬೇಕೆಂದ ೩೨

ಬಾಲಕರಿಗಜ್ಞರಿಗೆ ಪರಮು ಕೃ
ಪಾಲಯನೆ ಮಾಳ್ಪದು ಪರಾರ್ಥ ಸು
ಶೀಲನಱಿಯಾ ದ್ವಿಜಕುಲದ ಸಂಸ್ಕಾರ ಕರ್ಮವನು
ಹೇಳಲೇಕೆಲ್ಲರಿಗೆ ವಿಪ್ರರು
ಮೂಲ ವಿದ್ಯಾಗುರುಗಳೆನಲಾ
ಲೋಲಮತಿಗಿಂತೆಂದನಾ ಮುನಿವರನು ನಸುನಗುತ ೩೩

ವಲ್ಲಭಾಧಿಪ ಕೇಳು ಕಾರ್ಯವೆ
ಯಲ್ಲ ತನಗಿದು ಸಕಲ ಲೋಕದೊ
ಳೆಲ್ಲ ಯಾದವವಂಶದಾಚಾರಿಯನು ತಾನೆಂದು
ಬಲ್ಲರೆನ್ನನು ನಿನ್ನ ತನಯಂ
ಗಿಲ್ಲಿ ಸಂಸ್ಕಾರವನು ಮಾಡಿದ
ರೆಲ್ಲ ದೇವಕಿಯಾತ್ಮಸಂಭವನೆನ್ನದೇ ಲೋಕ ೩೪

ಆಗದಿದು ಖಳ ಕಂಸ ಕೇಳಿದ
ಡೀಗಳೇ ಮೇಣೈತಹನೋ ಹೆ
ಣ್ಣಾಗಲಱಿಯದು ತಂಗಿಯಷ್ಟಮಗರ್ಭವೆಂದೆನುತ
ಲೋಗನೇ ವಸುದೇವ ಮಾಳ್ಪನು
ರಾಗವನು ನಿನ್ನೊಳಗೆ ತಾ ಮು
ತ್ತೀಗಳೀ ಮಾತುಗಳನಱಿತಡೆ ಕೇಡು ಬಹುದೆಂದ ೩೫

ಎಂದಡಹುದಹುದೆನ್ನವರು ಸಹಿ
ತಿಂದಿದನು ಕಾಣದವೊಲೆಲೆ ಮುನಿ
ವಂದ್ಯ ಮಾಳ್ಪುದು ಪರಿಮಿತದಲೆನ್ನಾತ್ಮಸಂಭವಗೆ
ಸಂದ ಸದ್ವಿಜ ಸಂಸ್ಕೃತಿಯನೆನು
ತಂದು ತಲೆವಾಗಿರಲು ಮುನಿ ಸಾ
ನಂದದಲಿ ನೆಗಹಿದನು ನಂದನ ಮಸ್ತಕವನೊಲಿದು ೩೬

ನೋಡಿ ಮನದಲಿ ಮುನಿಪ ತಾನೇ
ಮಾಡುವುದನಭ್ಯರ್ಥಿಸುತ ನಡೆ
ನೋಡಿ ಮಂಗಳ ಮೂರ್ತಿಯನು ಕಣ್ಣಾರ ಮನದಣಿಯೆ
ನೋಡಿ ಕಾಣರು ಮುನಿವರರು ಮಾ
ತಾಡಿ ಕಾಣರು ವೇದಶಿರವೀ
ಗೂಢ ಚಿದ್ರೂಪನನು ಲಕ್ಷಿಸುವಂದವೆಂತೆಂದ ೩೭

ನಾಮ ಕರಣವನೆಂತು ಮಾಳ್ಪೆನ
ನಾಮರೂಪಕ್ರಿಯೆಗೆ ಜಾತಿ ಜ
ರಾಮರಣರಹಿತಂಗೆ ಮಾಳ್ಪೆನದೆಂತು ಸಂಸ್ಕೃತಿಯ
ಕ್ಷೇಮಧಾಮಂಗೊದರಿಸುವುದೆಂ
ತೀ ಮನೋಜ್ಞ ಸ್ವಸ್ತಿವಾಚನ
ವೀ ಮರುಳುತನಕೇನು ಹೇಳುವೆನೆಂದನಾ ಮುನಿಪ ೩೮

ನಿತ್ಯಶುದ್ಧಂಗೀ ದ್ವಿಜಾತಿ ಕು
ಲೋಕ್ತ ಸಂಸ್ಕಾರದಲಿ ಸಿದ್ಧಿಯ
ದೆತ್ತಣದು ರವಿರಶ್ಮಿಯನು ತೊಳೆವಂತೆ ನೋಡುವರೆ
ಮತ್ತೆ ಶುದ್ಧವೆನಿಪ್ಪೊಡಲು ವೇ
ದೋಕ್ತಕರ್ಮಂಗಳಿಗೆ ಯೋಗ್ಯತೆ
ವೆತ್ತುದಾವನದೆಸೆಯಲಾತಂಗೇಕೆ ವಿಧಿಯೆಂದ ೩೯

ಎನುತ ಮನದಲಿ ಮುನಿಪ ತಾ ಪೇ
ಳ್ದನಿತು ಸಂಸ್ಕಾರಗಳನು ಸಂ
ಜನಿತವೆನೆ ವಿಸ್ತರಿಸಿ ಕೇಳೆಲೆ ನಂದ ರೋಹಿಣಿಯ
ತನಯನೆಲ್ಲರ ಮತಿಗೆ ರತಿಯನು
ಜನಿಯಿಸುವ ರಾಮಾಖ್ಯೆಯನು ಗುಣ
ವನಧಿ ಪಡೆದನು ಬಲವಿಶಿಷ್ಟತೆಯಿಂದ ಬಲನೆಂದ ೪೦

ಭಾವಿಸಲು ಯಾದವರೊಳು ಪೃಥ
ಗ್ಭಾವದಲಿ ಸಂಕರುಷಣಾಖ್ಯೆಯ
ನೀ ವಿಬುಧನುತನೆಯ್ದುವನು ನಿನ್ನಾತನೀ ಧರೆಗೆ
ಮೂವೆ ಮೂಱುಯುಗಂಗಳಲಿ ಸ
ದ್ಭಾವದಿಂದವತರಿಸಲಾದವು
ಭಾವಿಸಲು ಸಿತಪೀತರಕ್ತತ್ರಿತಯಗುಣವೆಂದ ೪೧

ವರ್ಣ ಮೂಱು ಯುಗಂಗಳೊಳಗು
ತ್ಪನ್ನವಾದುವು ಕೃಷ್ಣ ನಿಂದಿನ
ವರ್ಣವನು ಸಂಗ್ರಹಿಸಿ ಜನಿಸಿದನಾಗಿ ನಿನಗಿಂದು
ಮುನ್ನವಸುದೇವಂಗೆ ತಾನು
ತ್ಪನ್ನನಾದನು ವಾಸುದೇವನು
ನಿನ್ನಮಗನದಱಿಂದ ಸಲೆ ವಿಖ್ಯಾತನಹನೆಂದ ೪೨

ಎಣಿಕೆಯಿಲ್ಲೆಲೆ ನಂದ ನಿನ್ನೀ
ಗುಣನಿಧಿಯ ನಾಮಾಕೃತಿಗಳಿಂ
ಗಣಕವಲ್ಲಾನಱಿವವೊಲ್ಬಲ್ಲವರು ಪರರಿಲ್ಲ
ತ್ರಿಣಯನನು ಮನ್ನಿಸುವನೀತನ
ನೆಣಿಸದಿರು ನರನೆಂದು ನಾರಾ
ಯಣ ಸಮಾನೈಶ್ವರ್ಯನೀ ನಿನ್ನಾತ್ಮಭವನೆಂದ ೪೩

ಈತನಿಂದವೆ ಸಕಲಭುವನ
ಖ್ಯಾತನಹೆ ನೀನಖಿಳದುಃಖವ
ನೀತನಿಂದುತ್ತರಿಸಿ ಪಡೆವೆ ಸಮಸ್ತ ಸಂಪದವ
ಈತನಂಘ್ರಿ ಸರೋಜದಲಿ ಸಂ
ಪ್ರೀತಿಯನು ಮಾಳ್ಪೀ ಮನುಷ್ಯ
ವ್ರಾತ ಸಹಿತಿಷ್ಟಾರ್ಥ ಸಿದ್ಧಿಯ ಪಡೆವರವರೆಂದ ೪೪

ಈತನಿಂದವೆ ಮುನ್ನ ಸುಜನ
ವ್ರಾತ ರಕ್ಷಿತವಾಗಿ ದಸ್ಯು
ವ್ರಾತವನು ಕೆಡೆಯೊದೆದುದವನಿಯರಾಜಕತ್ವದಲಿ
ಈತನೊಲಿದವರಿಂಗೆ ಜಯವಹು
ದೀತನೊಲ್ಲದರಿಂಗೆ ಪರಿಭವ
ವೀತನಿದ್ದಲ್ಲಿಹಳು ಲಕ್ಷ್ಮಿ ನಿರಂತರಾಯದಲಿ ೪೫

ಅದು ನಿಮಿತ್ತೀ ಶಿಶುವ ಸುಯಿಧಾ
ನದಲಿ ರಕ್ಷಿಸೆನುತ್ತ ತನ್ನಯ
ಹೃದಯ ಕಮಲದಲಚ್ಚುತನ ಮಂಗಳ ಗುಣಾಕೃತಿಯ
ಪದವನೇ ಧ್ಯಾನಿಸುತ ಮುನಿವರ
ನುದಿತ ಸಂತೋಷದಲಿ ತನ್ನಯ
ಪದದಲೆಱಗಿದ ನಂದನನು ನೆಗಹುತ್ತ ಬೀಳ್ಕೊಂಡ ೪೬

ಮುನಿವಚೋವಿನ್ಯಾಸದಲಿ ನಿಜ
ತನಯನುನ್ನತ ಮಹಿಮೆಯನು ಸಂ
ಜನಿತ ಸಾಮರ್ಥ್ಯವನು ರೂಪೌದಾರ್ಯಗುಣಗಣವ
ನೆನೆದು ನಂದಯಶೋದೆಯರು ಸುಖ
ವನಧಿಯೊಳಗೋಲಾಡುತ್ತಿದ್ದರು
ಮುನಿವಿನುತ ನಿತ್ಯಾತ್ಮ ಶಿಶುಲೀಲೆಗಳನೀಕ್ಷಿಸುತ ೪೭

ಏಳನೆಯ ಸಂಧಿ ಮುಗಿಯಿತು

# ಎಂಟನೆಯ ಸಂಧಿ

ಪರಕೆ ಪರತರವೆನಿಪ ತನ್ನಯ
ನಿರುಪಮಿತ ಮಹಿಮೆಯನು ಬಗೆಯದೆ
ಮುರಮಥನನನುಕರಿಸುತಿರ್ದನು ಬಾಲ ಕೇಳಿಯಲಿ

ಇರಲು ಕೆಲವು ದಿನಕ್ಕೆ ಹರಿ ರಾ
ಮರು ಶಿಶುತ್ವದ ಲೀಲೆಗಳನನು
ಕರಿಸಿ ಗೋಕುಲದೊಳಗೆ ತನು ಬೆಳೆವುತ್ತ ಹೆತ್ತವರ
ಹರುಷರಸವಂಕುರಿಸಿ ನಿಜಕರ
ಚರಣಯುಗಳವನವನಿಯುಲಿ ವಿ
ಸ್ತರಿಸಿ ಹರಿಹರಿದಾಡಕಲಿತರು ನಿಜ ವಿನೋದದಲಿ ೧

ನೆರೆಯದವನಿಗೆ ತನ್ನ ಪದಸಂ
ಸ್ಪರುಶನದ ಸುಖವೆಂದು ಕೃಪೆಯಲಿ
ಕರಚರಣ ಜಾನುಗಳ ಸಂಸ್ಪರುಶನ ಮಹೋತ್ಸವವ
ಧರೆಗೆ ಸಲಿಸುತ ಸುರವರಾರ್ಚಿತ
ಚರಣನೆಸೆದನು ಗೋಕುಲದ ಲಾ
ನರಶಿಶುತ್ವದ ಲೀಲೆಗಳ ನಾಟಕವನನುಕರಿಸಿ ೨

ಹೊಂದೊಡರು ಕಿಱುಗೆಜ್ಜೆ ಘಂಟಿಗೆ
ಳಂದವಡೆದರಳೆಯ ಕುರುಳ್ಗಳ
ಕೆಂದಳಿರ ಕಾಂತಿಗಳ ಕರ್ಣಾಭರಣ ದೀಪ್ತಿಗಳ
ನಂದ ಮುದ್ರಿತ ಕಂಕಣಂಗಳ
ಗೊಂದಣದ ಭೂಷಣಗಳಲಿ ಗೋ
ವಿಂದರಾಮರು ಮೆಱೆದರಂಗಣದೊಳಗೆ ಹರಿದಾಡಿ ೩

ತೊಳಪ ಕಂಗಳ ಕದಪುಗಳ ಮಂ
ಜುಳ ಮುಖಾಬ್ಜದ ಕಾಕಪಕ್ಷದ
ತೊಳಪ ದಂತದ್ಯುತಿಯ ಬಿಂಬಾಧರ ಸುಧಾರಸದ
ಎಳನಗೆಯ ನಯನಾಭಿರಾಮೋ
ಜ್ವಳ ತರಕ್ಷುನಖಪ್ರಭಾಸಿತ
ಗಳದ ಗುಣವನಿಧಿಗಳು ಮೆಱೆದರು ರೂಪವಿಭವದಲಿ ೪

ಕರಚರಣಜಾನೂದರೋರು
ಸ್ಫುರಿತ ಘನಪಂಕಾಂಗರಾಗದ
ಸುರಿವಧರಸುಧೆಗಳನು ಸೇವಿಸಿ ಧನ್ಯೆ ತಾನೆನುತ
ಪರಮಹರುಷವ ತಳೆದ ವಿಶ್ವಂ
ಭರೆಯ ಬಹಳಾನಂದನಿಧಿಗಳು
ನೆರವಿಗಳಲೊಪ್ಪಿದರು ಗೋಕುಲದೊಳಗೆ ಹರಿಬಲರು ೫

ಶ್ವೇತನೀಲ ಮಹಾದ್ರಿಗಳು ಮನ
ವೋತು ನರಶಿಶುತನವನಾಂತೀ
ಭೂತಳದಲುದಿಸಿದವೊ ಮೇಣು ಸಿತಾಸಿತದ್ಯುತಿಯ
ಖ್ಯಾತ ರತ್ನದ್ವಯವೊ ಜಂಗಮ
ಜಾತತರುಣಸುರದ್ರುಮಂಗಳೊ
ಚೇತನಾತ್ಮಕರೆಸೆದರುಪಮಾತೀತರೆಂದೆನಿಸಿ ೬

ಜೀವಜಾತವಿದೆನ್ನ ಸೋಹಂ
ಭಾವದಲಿ ಲಕ್ಷಿಸಲು ನೆರೆಯದು
ಭಾವಶುದ್ಧಿವಿಹೀನ ವಿಷಯವಿಷಾವಗಾಹದಲಿ
ಸಾವುತಿದೆಲಾ ಯೆನುತ ಕಾರು
ಣ್ಯಾವಲೋಕನದಿಂದ ತದ್ಭಾ
ವಾವಲಂಬನನಾದವೋಲ್ಪನಮನವ ರಂಜಿಸಿದ ೭

ಖಡ್ಡರಿವರೆಂತಱಿವರೆನ್ನನು
ಜಡ್ಡಮತಿಗಳು ಮರ್ತ್ಯರಿವರೆನಿ
ಷಡ್ಡವಿಷ ಮಾಯೆಯನು ಜಱಿದು ನಿಜಾತ್ಮಧ್ಯಾನದಲಿ
ಖಡ್ಡತನವನು ಬಿಸುಟು ಬಾಹ್ಯದ
ಲಡ್ಡವಿಸಿ ಕಣುಮನಗಳಿಗೆ ಬಲೆ
ಯೊಡ್ಡಿದರು ಬಲಕೇಶವರು ದಿವ್ಯಾಕೃತೀಕ್ಷಣದ ೮

ಘೋರ ಸಂಸಾರಾರ್ಣವ ಸುಖೋ
ತ್ತಾರಕಂಗಳೆನಿಪ್ಪ ಮುನಿಹೃದ
ಯಾರವಿಂದ ದ್ಯುಮಣಿಗೆಣೆಯೆನಿಪಂಘ್ರಿಪಂಕಜವ
ಧೀರರೆಳವುತ್ತೆಳವುತವನಿಗು
ದಾರಸುಖವನು ಸಲಿಸಿ ಕರುಣಾ
ವಾರಿಧಿಗಳಾಡಿದರು ಬೀದಿಗಳೊಳಗೆ ಹರಿಬಲರು ೯

ಬೀಳುತೇಳುತ ಕೆಸಱೊಳಗೆ ಶಿಶು
ಲೀಲೆಗಳಲಾಡುತ್ತ ಕಱುಗಳ
ಬಾಲವನು ಹಿಡಿಹಿಡಿದು ಜೋಲುತ್ತಿರದೆಳಸಿಕೊಳುತ
ಕಾಲಗೆಜ್ಜೆಗಳುಲಿಯಲಂಜಿದ
ವೋಲು ಮುರಿಮುರಿದೀಕ್ಷಿಸುತ್ತಾ
ಲೋಲ ನೇತ್ರರು ಬಪ್ಪರಾ ತಾಯಿಗಳ ಕೈಯೊಳಗೆ ೧೦

ಬಂದನೆನ್ನಸು ಸಾಕ್ಷಿಯೆನ್ನಯ
ತಂದೆ ಯೆನ್ನಯ ದೈವವೆನ್ನಾ
ನಂದನಿಧಿಯೆನ್ನರಸನೆನ್ನ ಕುಲದ್ಯುಮಣಿ ಬಂದ
ಬಂದುದೈ ಮಱಿಯಾನೆ ಯೆನುತಾ
ಯಿಂದುಮುಖಿಯರು ಬಾಲಕನನಿದಿ
ರ್ಗಂದು ತೆಗೆದಪ್ಪುವರು ಮೈಗಳ ಕೆಸಱು ಹುಡಿಸಹಿತ ೧೧

ಎತ್ತಿಕೊಂಡುರದೊಳಗೆ ತಕ್ಕಯಿ
ಸುತ್ತಿರಡು ತೋಳ್ಗಳು ದಣಿಯಲಾ
ಮತ್ತಧರಸುಧೆ ಸುರಿಯೆ ತತ್ಪಂಕಾಂಗರಾಗದಲಿ
ಮೆತ್ತಿದುರದಂಪುಗಳಲೊಪ್ಪಿರೆ
ಹೆತ್ತ ತಾಯ್ಗಳು ಮುಳುಗಿ ಹರುಷರ
ಸೋತ್ತರದಲಾಡಿದರು ಮೊಲೆಗಳನಾ ಮಹಾತ್ಮಂಗೆ ೧೨

ಮೊಲೆಯನುಂಬರ್ಭಕರ ಕಟವಾ
ಯ್ಗಳ ಮೃದುಸ್ಮಿತದಂತಪಂಕ್ತಿಯ
ಲಲಿತವದನ ಶ್ರೀಯನಬುಜದಳಾಯತೇಕ್ಷಣವ
ಲಲನೆಯರು ನೋಡುತ್ತ ತನಿರಸ
ಪುಳಕದಲಿ ಮೈಮಱಿದು ನಿಜಸುಖ
ಜಲಧಿಯಲಿ ಮುಳುಗಾಡುತಿರ್ದರು ಮುನಿಗಳಂದದಲಿ ೧೩

ನೆರೆನೆರೆದು ಗೋಕುಲದ ಮುಮ್ಮನೆ
ನೆರೆಮನೆಯ ಬಹುಪುಣ್ಯವಂತೆಯ
ರರಿವಿಜಯರಾಟವನು ದಿವ್ಯಮನೋಹರಾಕೃತಿಯ
ಪರಿಪರಿಯ ಲೀಲೆಗಳಲರ್ಭಕ
ಚರಿತವನು ನೋಡುತ್ತ ಕೃತ್ಯಾಂ
ತರಗಳನು ನೆಱೆ ಮಱೆದು ನಗುತಿಸೆದಿಪ್ಪರನವರತ ೧೪

ತುಡುಕಿ ಕಿಚ್ಚನೆ ತೆಗೆವ ತೀವಿದ
ಮಡುಗಳಲ್ಲಿಗೆ ಹರಿವ ನಾಯ್ಗಳ
ಕೊಡಕೆಗಳ ಹಿಡಿದಳೆವ ಹೋರುವ ಪಶುಗಳಿದ್ದೆಡೆಗೆ
ತಡೆಯದೈದುವ ಹಾವು ಚೇಳನು
ಹಿಡಿದು ತೆಗೆವಸಿಧಾರೆಗಳ ನಿ
ಪ್ಪಿಡಿ ವಿಡಿದು ಜೋಲುವ ದುರಂತ ಚರಿತ್ರರೊಪ್ಪಿದರು ೧೫

ಎಲ್ಲಿ ಮುಳುವೇಲಿಗಳು ಹೋರುಗ
ಳೆಲ್ಲಿ ಹುಲಿಕರಡಿಗಳ ನೆರವಿಗ
ಳೆಲ್ಲಿ ಯಾಚಕಪಥಿಕ ಪಶು ಮೃಗಪಕ್ಷಿಸಂದೋಹ
ಅಲ್ಲಿಗಲ್ಲಿಗೆ ಹರಿವ ಶಿಶುಗಳ
ನಿಲ್ಲದೊಳಗೊಯ್ದಿಡಲು ಮನೆಯೊಳ
ಗುಳ್ಳ ಕೆಲಸವ ಮಾಡಲಱಿಯರು ತಾಯ್ಗಳನವರತ ೧೬

ನಡೆಯ ಕಲಿಸುವಳಗ್ರಹಸ್ತವ
ಹಿಡಿದು ತ್ರಿಭುವನ ಸೂತ್ರಧಾರಗೆ
ನುಡಿಯ ಕಲಿಸುವಳಖಿಳ ವೇದಮಯಂಗೆ ಚಿನುಮಯಗೆ
ತಡೆಯದುಣಕಲಿಸುವಳು ನಂದನ
ಮಡದಿ ಸಹಜಾನಂದ ತೃಪ್ತಂ
ಗಡಿಗಡಿಗೆ ಪಾಲ್ಬೆಣ್ಣೆಯನು ಬಾಯೊಳಗೆ ಬೆರಳಿಟ್ಟು ೧೭

ನೋಡಕಲಿಪಳನಂತಚಕ್ಷುವಿ
ಗಾಡಕಲಿಸುವಳೆರಡು ಕೈವಿಡಿ
ದಾಡಿಸುತ್ತ ಯಶೋದೆ ಮಗನನು ಲೋಕನಾಟಕನ
ಹಾಡಕಲಿಸುವಳೊಲಿದ ಜಿಹ್ವಂ
ಗೀಡಿರಿವ ತನುಪುಳಕರಸದಲಿ
ಕೂಡಿ ತಕ್ಕಯಿಸುವಳು ನಿರವಯವನನು ನಾಡೆ ಲಲಿತಾಂಗಿ ೧೮

ಏನನೆಂಬೆನು ಭೂಪ ಭಕ್ತಾ
ಧೀನ ತಾನೆಂಬುದನು ಮೆಱೆದನು
ದಾನವಾಂತಕನನುಕರಿಸಿ ಲೀಲಾಗುಣಾಕೃತಿಯ
ಧ್ಯಾನಗೋಚರಮೂರ್ತಿ ನಂದನ
ಮಾನಿನಿಗೆ ಶಿಶುವಾಗಿ ನಟಿಸಿದ
ನೀ ನಿಖಿಳ ಭವಬಂಧ ವಿಧ್ವಂಸನದ ಲೀಲೆಗಳ ೧೯

ಮತ್ತೆ ಕೆಲವು ದಿನಕ್ಕೆ ಬಲಪುರು
ಷೋತ್ತಮರು ಮುಮ್ಮನೆಯ ನೆರೆಮನೆ
ಯತ್ತಲತ್ತಲು ಕೆಳೆಯ ಗೋಪಕುಮಾರಕರು ಸಹಿತ
ಸುತ್ತಿ ಸುಳಿದಲ್ಲಲ್ಲಿಗೆಡೆಯಾ
ಡುತ್ತ ಬೀದಿಯ ಹುಡಿಗಳಲಿ ಹೊರ
ಳುತ್ತ ಮಱಿಯಾನೆಗಳವೊಲೆಸೆದರು ನಿಜೇಚ್ಛೆಯಲಿ ೨೦

ತಾನೆ ಮನೆಯಂಗಳದಲೆತ್ತಲು
ತಾನೆ ಮಕ್ಕಳ ನೆರವಿಯತ್ತಲು
ತಾನೆ ಗೋಕುಲದೊಳಗೆ ಮನೆಮನೆಗಳಲಿ ಮಂದಿಯಲಿ
ಆ ನಿಖಿಲಗೋಪಿಯರ ಹೊರೆಯಲಿ
ತಾನೆ ತಾಯಂತಿಕದಲಿತ್ತಲು
ತಾನೆ ಸರ್ವಂವಿಷ್ಣುಮಯವೆಂದೆನಲು ಕಂಜಿಸಿದ ೨೧

ನೆರೆದು ಬಂದಾ ರಾಮಕೃಷ್ಣರ
ಪರಮಮಂಗಳ ಪುಣ್ಯಚರಿತವ
ನೊರೆವ ಮನದರ್ತಿಯಲಿ ಗೋಪಿಯರೈದೆ ತಮತಮಗೆ
ಸರಭಸದಲಂದಾ ಯಶೋದೆಯ
ಹೊರೆಗೆ ನಗುತೈತಂದು ಮುದ್ದುಗ
ರಿರವನೀಕ್ಷಿಸುತೆಂದರುನ್ನತ ಬಾಲಲೀಲೆಗಳ ೨೨

ಹೊಕ್ಕು ಕಱೆಯದ ಮುನ್ನ ಕಱುಗಳ
ಮಿಕ್ಕು ಬಿಡುವರು ಜಱೆದಡಳುಕದೆ
ನಕ್ಕು ಮಱಸುವರದನು ಚತುರೋಪಾಯ ವಿಧಗಳಲಿ
ಒಕ್ಕಲಿಕ್ಕುವರೆಮ್ಮ ಮನೆಗಳ
ನೆಕ್ಕತುಳದಲಿ ತಾಯೆ ಪಡೆದೌ
ಮಕ್ಕಳನು ಭವಗೆಡಿಸಲೆಂದೇ ಸಕಲಗೋಕುಲವ ೨೩

ತಾಯೆ ನಿನ್ನಾಣೆಂದು ಮೊಸರನು
ಬಾಯಿಗೆತ್ತಿದರೆಮ್ಮ ಮಕ್ಕಳ
ಕಾಯಲರಿದಂಜುವೆವು ಬಿನ್ನಹ ಮಾಡುವಡೆ ನಿಮಗೆ
ಸ್ತ್ರೀಯಯೋಗಾಚಾರ್ಯರಿವದಿರು
ಪಾಯ ಕೋವಿದರಕಟಕಟ ನಿ
ರ್ದಾಯದಲಿ ನೆಱೆಕೆಡಿಸಿದರು ಗೋಕುಲದ ವೈಭವವ ೨೪

ಉಂಡರದಕಾರಳಲುವರು ನೆಲ
ನುಂಡು ಕೆಟ್ಟುದು ಹಾಲು ಮೊಸರನು
ಕಂಡದೆಸೆಗೀಡಾಡುವರು ನೀಡುವರು ಕಪಿಗಳಿಗೆ
ಕಂಡಿದೇನೆನಲೊಡೆವರಿವರಾ
ಭಾಂಡವನು ಧರಣಿಯಲಿ ನೆಱೆ ಗೋ
ಳುಂಡೆಗೊಳಿಸಿದರಾರು ನಿನ್ನವರಂತೆ ಗೋಕುಲವ ೨೫

ನೆಲಹುಗಳಲಿರಿಸಿದರೆ ಕೈಗಳು
ನಿಲುಕದಿರ್ದರೆ ಮನೆಯೊರಳ್ಗಳ
ನಿಳುಹಿ ಕೆಳೆಯರ ಹೆಗಲ ನೇಱಿ ದುರಂತವಿಕ್ರಮರು
ಕಳೆದು ಕೊಂಬರು ಹಾಲುಬೆಣ್ಣೆಗ
ಳುಳಿವುಪಾಯವ ಕಾಣೆವೆಮ್ಮಲಿ
ಛಲವದುಳ್ಳಡೆ ಕರೆಸಿಕೊಂಬುದು ತಮ್ಮ ಗೋಧನವ ೨೬

ಮೇಲೆ ಮತ್ತಿರಿಸಿದಡೆ ತಳವನು
ಕೋಲಲಿಱಿದೊಡ್ಡುವರು ಬಾಯನು
ಕೋಲು ನಿಲುಕದಡಿಡುವರಾ ಭಾಂಡವನು ಪಾಲ್ಮೊಸರ
ಕಾಳಗತ್ತಲೆಯೊಳಗೆ ಬೈಚಿಡೆ
ಸಾಲರತುನಾಭರಣ ಕಾಂತಿಯ
ಮೇಳವಿಸಿ ಮೇಣೊಡಲಕಾಂತಿಯ ತೋಱಿ ತರಿಸುವರು ೨೭

ದೊರಕದಿದ್ದಡೆ ಮನೆಗೆ ಕಿಚ್ಚನು
ಬರೆಯರೇಕಿದತೆನುತ ಬೈವರು
ಮಱೆದೊಱಗಿದರ್ಭಕರೆನೆಬ್ಬಿಸಿ ಕಱುಗಳನು ಬಿಟ್ಟು
ಕೆರಳಿ ಹೊಸ್ತಿಲಲುಚ್ಚೆಗೈದಿರ
ದೊರಳೊಳಗೆ ವಿಷ್ಟಿಸುವರಾವಿದ
ನೊರೆಯಲಮ್ಮೆವು ಕಳುಹಿ ನೋಡಿಸು ಕೃಷ್ಣನುಪಟಳವ ೨೮

ನುಡಿಸುವವರಾರವ್ವ ಮಾತುಗ
ಳೊಡಲ ಹುಗದೀ ರಾಮಕೃಷ್ಣರ
ತೊಡಕು ಬೇಡೆಲೆ ತಾಯೆ ಬಡವರಿಗೇಕೆ ಬಲ್ಲಿದರ
ಗಡಣ ಗಜಪತಿಯಂತೆ ಸುಮ್ಮನೆ
ಮಿಡುಕದಿದ್ದರೆ ಲೋಗರಂತೆ
ಮ್ಮಡರುಗಳಿನಿನ್ನಾರಿಂಗೆಂಬೆವದಾರು ಕೇಳುವರು ೨೯

ಎಂದು ಸಭಯಾಕುಲಿತನಹ ಗೋ
ವಿಂದನಮಳ ಶ್ರೀ ಮುಖಾಬ್ಜವ
ನಿಂದುಮುಖಿಯರು ನೋಡುವರ್ತಿಗೆ ಸಂದು ತಮತಮಗೆ
ಎಂದರಾ ಗೋಪಿಯರೊಡನೆ ಪೂ
ರ್ಣೇಂದುಮುಖಿ ನಸುನಗುತ ತಾನಿಂ
ತೆಂದಳಾ ನಿಜಬಾಲಕನ ಸಿರಿಮೊಗವನೀಕ್ಷಿಸುತ ೩೦

ಮಕ್ಕಳೊಳಿಗ ತಾಯಿಗೆಂಬುದು
ತಕ್ಕುದೈಸಲೆ ಕೇಳಿರೆಲೆ ಹೆ
ಣ್ಮಕ್ಕಳಿರ ಹೇಳುವೆನು ಕೃಷ್ಣನ ದುರುಳತನದಿರವ
ಆಕ್ಕಱುತು ಪಾಲ್ಬೆಣ್ಣೆ ಮೊಸರ್ಗಳ
ನಿಕ್ಕಿದಾದಿನವೊಲ್ಲನೂಟವ
ನೆಕ್ಕಸೆಕ್ಕದ ಮಾತು ನಿಮಗೇಕೆಂದಳಬುಜಾಕ್ಷಿ ೩೧

ತುಡುಕಿ ಬೆಣ್ಣೆಯ ಮೆಲುವ ಕೃಷ್ಣನ
ಹಿಡಿದು ತಂದೊಪ್ಪಿಸುವುದೆನಗವ
ಗಡೆಯತನವನು ಮಾಣಿಸುವೆನೆನಲಾಗಲೆಂದೆನುತ
ಮಡದಿಯರು ತಂತಮ್ಮ ಮನೆಗಳಿ
ಗಡಿಯಿಡುತ್ತಿರೆ ಮುಂದೆ ತಾ ಹೊ
ಕ್ಕೊಡನೆ ಮನೆಮನೆಯ ಪಾಲ್ಬೆಣ್ಣೆಯನು ನುಸಿದುಂಡ ೩೨

ಮತ್ತೆ ಮನೆಮನೆಗಳಿಗೆ ಬಂದಾ
ಮತ್ತಕಾಶಿನಿಯರು ಮುಕುಂದನ
ವೃತ್ತವನು ಕಾಣುತ್ತ ಪಾಲ್ಮೊಸರ್ಬೆಣ್ಣೆಯನು ತೆಗೆದು
ಹತ್ತಿ ಮೆಲುವುದ ಕಂಡು ಗಹಗಹಿ
ಸುತ್ತ ಕೈ ಬಾಯುರಗಳೆಡೆಯೊಳು
ಮೆತ್ತಿದೆಂಜಲು ಸಹಿತ ಹಿಡಿದರು ತಂತಮಗೆ ಹರಿದು ೩೩

ನೀರೆಯರು ನಯನಾಭಿರಾಮನ
ಕೋರಡಿಗತನದಿರವನೊಮ್ಮೆಯು
ದೂಱಲೆಂದೊಬ್ಬೊಬ್ಬರಱುಯದವೋಲು ಹೊಱವಂಟು
ಬೇಱೆ ಬೇಱಿರದೆತ್ತಿಕೊಂಡಾ
ಮೂಱು ಲೋಕದಧೀಶ್ವರನ ಕೈ
ಸೂಱೆಗಿದು ಕಡೆಯೆನುತ ತಂದರಾ ಗೋಪಿಯಿದ್ದೆಡೆಗೆ ೩೪

ಬಂದು ಗೋಪಿಯ ಕೈಯಲಿದ್ದ ಮು
ಕುಂದನನು ಕಾಣುತ್ತ ಬಱುಗೈ
ಯಿಂದ ತಮ್ಮಿದ್ದಿರವ ನೀಕ್ಷಿಸುತೇನಿದೇನೆನುತ
ಇಂದುಮುಖಿಯರು ನೋಡಿ ನುಡಿಯದೆ
ಮಂದಿರಂಗಳಿಗೆಯ್ದಿದರು ಗೋ
ವಿಂದನಿರವಚ್ಚರಿಯೆನುತ ತಮತಮಗೆ ಬೆಱಗಾಗಿ ೩೫

ಒಂದು ಬಾರಿ ಯಶೋದೆ ತೊಡೆಯಲಿ
ನಂದನನ ಕುಳ್ಳಿರಿಸಿಕೊಂಡಾ
ನಂದದಲಿ ಮೊಲೆಯೂಡಿ ಮುದ್ದಾಡುತ್ತ ಕುಳ್ಳಿರಲು
ನಿಂದು ಬೇಡಿದನುದಿಸಿ ಬಹ ಪೂ
ರ್ಣೇಂದುವನು ವನರಾಜಿಗಳ ಹ
ಣ್ಣೆಂದು ಕಾಡುತ ಕಮಲದೃಶನಾ ದೆಸೆಗೆ ಕೈನೀಡಿ ೩೬

ಮೂಡುವಾ ಶಶಿಮಂಡಲವನದ
ಬೇಡಿ ಕಾಡುತ್ತಿರಲು ಕಂಡಾ
ಗಾಡಿಕಾತಿ ಮುಕುಂದನನು ಲೌಕಿಕದ ಶಿಶುವೆಂದು
ಬೇಡಲೇತಕ್ಕೆಲೆ ಮಗನೆ ತನ್ನನು
ಕಾಡಲೇತಕೆ ಬಹಡೆ ನೀನೇ
ನೋಡಿ ಕೊಳ್ಳೆನುತೆರಡು ಕೈಯಲಿ ನೆಗಹಿದಳು ನಭಕೆ ೩೭

ತಿಱುದು ಕೊಳಲೇಕೊಲ್ಲೆ ಹಣ್ಣನು
ಮರುಳು ಮಗನೆಯೆನುತ್ತ ನೋಡುವ
ನೆರವಿಯೊಡನಾ ತಾಯಿ ನಗುತಿರೆ ಲೋಕಪಾಲಕರು
ನಿರುತ ತನ್ನೊಂದಾಜ್ಞೆಯಲಿ ತಾ
ನಿರಿಸಿದಂತಿಹರೆಂಬುದನು ಗೋ
ಚರಕೆ ತೋಱುವವೋಲು ಕರೆದನು ನಗುತ ಹರಿ ಶಶಿಯ ೩೮

ಇಳಿದನಂಬರದಿಂದ ಶಶಿ ಹೊಳೆ
ಹೊಳೆದು ನೋಡುವ ಜನಮನಂಗಳ
ವಳುಕೆ ನೀಡಿದ ವಿಶ್ವತೋ ಬಾಹುವಿನ ಕರತಳಕೆ
ನಳಿನಮುಖಿ ನಡನಡದೆಡುಗು
ತ್ತಳುಕಿ ಕಂಗಳ ಮುಚ್ಚಿ ಮಿಗೆ ಕಳ
ವಳಿಸಿದಳು ಕರತಳದ ಸಸಿಯನು ಕಂಡು ನಿಜಸುತನ ೩೯

ನಸುನಗುತ ಕರುಣದಲಿ ತನು ಕಂ
ಪಿಸುವ ತಾಯನು ಕಂಡು ಮಗುಳಾ
ಗಸಕೆ ಬಿಟ್ಟನು ಸಸಿಯನಸಮ ಸಮಗ್ರತೇಜನನು
ಬಿಸಜಮುಖಿ ಮಱುದಾಗಳಂತಿರೆ
ಪಸರಿಸಿದ ಪುತ್ರಾನುರಾಗದ
ಲೊಸೆದು ಮೊಲೆಯೂಡಿದಳು ಮಾಯಾಮರ್ತ್ಯವಿಗ್ರಹಗೆ ೪೦

ಒಂದು ದಿನ ಬಲಕೃಷ್ಣರಾ ಸ್ವ
ಚ್ಛಂದದಲಿ ಗೋಪಾಲ ಬಾಲಕ
ವೃಂದ ಸಹಿತಾಡುತ್ತ ಶಿಶುಲೀಲೆಗಳಲೆಸೆದಿರಲು
ಬಂದು ಗೋಪಿಗೆ ದೂಱುದರು ಗೋ
ವಿಂದನನು ಕೇಳವ್ವ ಮಣ್ಣನು
ತಿಂದನೆಮ್ಮನು ಮಾಱು ಬೇಡೆನಲೆಂದು ಬಾಲಕರು ೪೧

ಕೇಳಿದಾಗಳೆ ಕೆಟ್ಟನೆಂದಾ
ಲೋಲಲೋಚನೆ ಹರಿದು ಬಂದಾ
ಬಾಲಕನ ಕೈವಿಡಿದು ಸೆಳೆಗೊಂಡೆಲವೊ ನೀ ಮಣ್ಣ
ಹೇಳು ಮೆದ್ದೆ ಗಡೇಕೆ ಮಕ್ಕಳ
ಮೌಳಿ ರತ್ನವೆ ಸವಿಯೆ ನಿನಗೀ
ಹಾಲು ಬೆಣ್ಣೆಗಳಿಂದ ಬೀದಿಯ ಮಣ್ಣು ಮಸಿ ಮಗನೆ ೪೨

ಎನಲು ಹೇಳಿದರಾರು ನಿನಗೆಲೆ
ಜನನಿ ಜಱೆಯಲದೇಕೆ ಮಣ್ಣಿಂ
ದೆನೆ ಮಹಾದೇವಾರು ಕಂಡವರುಂಟೆ ಹೇಳೆನಲು
ತನುಜ ಕೇಳೀ ಕೆಳೆಯರನು ಭಾ
ಪೆನಗೆ ಮುನಿವವರಿವರು ನಿಮ್ಮ
ಣ್ಣನನು ಕೇಳೆನೆ ದಾಯವಾದಿಯ ಮಾತದೇಕೆಂದ ೪೩

ಕೈಯ ಮೇಲ್ಕಟವಾಯಿ ಕೆಸಱೀ
ಕಯ್ಯ ಹೇಳಿದು ಹುಸಿಯೆ ತೊಡೆದಡೆ
ಕೈಯಲಾಗದೆ ಬಾಯಲಾಗದೆ ಕೆಸಱು ನೀನಿದಕೆ
ಸುಯ್ಯಲೇತಕೆಯವ್ವ ಬಱಿದೇ
ಬೈಯಲೇಕಿದಕೆನ್ನನಂಜೆನು
ಕೈಯ ಸೆಳೆಗಿಳೆಗಳಿಗೆ ಹುಸಿ ಸೈರಿಸದು ತನಗೆಂದ ೪೪

ಅಱಿವೆ ನಾನೆಲೆ ಧೂರ್ತ ಬಾಯನು
ತೆಱೆ ನಿರೀಕ್ಷಿಪೆನೆನಲು ಕರುಣಿಸಿ
ತೆಱೆದೆನಾದರೆ ನೋಡು ಬಾಯನೆನುತ್ತ ನುಡಿಗೇಳಿ
ಎಱಗಿ ನೋಡಿದಳಂದಬಲೆ ಬಾ
ಯ್ದೆಱೆಯೊಳಗೆ ಭುವನಾವಳಿಯನಂ
ಬರವನವನಿಯನೆಂಟುದೆಸೆಗಳನೀ ಚರಾಚರವ ೪೫

ಕಂಡಳದಱೊಳು ಸಕಲ ಪೃಥ್ವೀ
ಮಂಡಲವ ತರುಗಿರಿ ನದಿಗಳನ
ಖಂಡ ಸಪ್ತ ದ್ವೀಪ ಸಾಗರ ಭುವನ ಸಂಸ್ಥಿತಿಯ
ಚಂಡ ಪವನೇಂದ್ವನಲ ಸೂರ್ಯರ
ಮಂಡಲಂಗಳನಖಿಳ ತಾರಾ
ಮಂಡಲಂಗಳನಬಲೆ ಕಂಡಳು ಬಾಯೊಳಗೆ ಮಗನ ೪೬

ಭೂತ ನಿಕರಂಗಳನು ಭೌತಿಕ
ಜಾತವನು ಮಹದಾದಿ ತತ್ವ
ವ್ರಾತವನು ತತುಹೇತು ಮಾಯಾಗುಣವಿಭಾವನನು
ಶ್ರೌತ ಭುವನಾತ್ಮನನು ಭುವನಾ
ತೀತನನು ಮಾಯಾವಿಮೋಹಾ
ತೀತ ಮಹಿಮನ ಬಾಯೊಳಗೆ ನೆಱೆ ಕಂಡಳಾ ಗೋಪಿ ೪೭

ಮತ್ತೆ ಬಹುವಿಧ ಜೀವಗುಣವೈ
ಚಿತ್ರ್ಯ ಗತಿಮತಿ ಭೇದಸುಖದುಃ
ಖೋತ್ತರದ ಸಂಸಾರಕರ್ಮಗುಣಪ್ರವಾಹವನು
ಮರ್ತ್ಯಭೇದಂಗಳನು ಸಕಲ ನಿ
ವೃತ್ತಿ ಸಿದ್ಧಜ್ಞಾನ ಸುಖಸಂ
ಪತ್ತಿಯನು ನೆಱೆ ಕಂಡು ಭಯದಲಿ ನಡುಗಿದಳು ತರಳೆ ೪೮

ಅಷ್ಟದಿಗುಪಾಲಕರನನುಪಮ
ಸೃಷ್ಟಿಕರ್ತ ನವಪ್ರಜೇಶ್ವರ
ರಷ್ಟದಿಗ್ಗಜಗಳನು ಪಾತಾಳಪ್ರಭೇದವನು
ವಿಷ್ಟಪಾಧೀಶ್ವರ ವಿರಿಂಚಿ ವಿ
ಶಿಷ್ಟಗುಣಸಂಪನ್ನರನು ನಿಜ
ದೃಷ್ಟಿಗೋಚರವಾಗೆ ಕಂಡಳು ಕಾಂತೆ ವದನದಲಿ ೪೯

ನೆಱೆ ಬೃಹದ್ವನವೆಂಬ ತನ್ನಯ
ಮೆಱೆವ ವನವನು ಗೋಕುಲವನಾ
ತುಱುಗಳನುತುಱುಗಾಱನು ನಲಿದಾಡುವ ರ್ಭಕರ
ಎಱಗಿ ನೋಡುವ ತನ್ನನಾ ಬಾ
ಯ್ದೆಱೆದ ಹರಿಯನು ಕಾಣುತವೆ ನೈ
ಮಱೆದಳಂಗನೆ ಹರಹರಾಯ ನಮಃಶಿವಾಯೆನುತ ೫೦

ಆವನೀ ಜಗದಾತ್ಮಕನು ನಿಗ
ಮಾವಳೀಪ್ರಸ್ತಾವಿತಾತ್ಮನು ಗು
ಣಾವಲಂಬನನಜಭವೇಂದ್ರ ಮುನೀಂದ್ರಸಂಚಿಂತ್ಯ
ಕೇವಲಾದ್ವಯ ತತ್ಸುಖಾತ್ಮಕ
ನಾವನಾ ಹರಿಯೊಲಿದು ದಿಟಕೀ
ಗೋವಳರ ಶಿಶುವಾಗದಿರನೆಂದಳು ಸರೋಜಮುಖಿ ೫೧

ಎನುತ ತತ್ವವನಱಿದವೋಲ್ನಿಜ
ಜನನಿಯಿರೆ ನಗೆಯೆಂಬ ಮಾಯೆಯ
ನನುಪಮನು ಬೀಸಿದನು ನಿಜಪುತ್ರಾನುರಾಗದಲಿ
ಜನನಿ ಮಱೆದೂಡಿದಳು ಮೊಲೆ
ಯನು ಕನಸ ಕಂಡೆಚ್ಚತ್ತವೊಲು
ಮುನಿಜನವಿನುತ ನಿಜನಿತ್ಯಾತ್ಮ ಕೃಷ್ಣಂಗಬಲೆ ಮೋಹದಲಿ ೫೨

ಎಂಟನೆಯ ಸಂಧಿ ಮುಗಿಯಿತು

# ಒಂಭತ್ತನೆಯ ಸಂಧಿ

ಸೃಷ್ಟಿಯಲಿ ದಿಕ್ಪಾಲತತಿಗಡಿ
ಗಟ್ಟಲಱಿಯದಪಾರಮಹಿಮನ
ಕಟ್ಟಿದಳು ದಾಬಿನಲಿ ನಂದನ ಕಾಂತೆ ಮುರಹರನ

ವೇದವೇದಾಂತಂಗಳಾವನ
ನಾದಿಯಲಿ ಬಣ್ಣಿಸಲು ನೆಱೆಯವು
ವೇದವಿತ್ತಮರಱಿಯರಾವನ ಪಾದಪಂಕಜವ
ಆ ದಯಾನಿಧಿಯೊಲಿದು ನಂದ ಯ
ಶೋದೆಯರಿಗೆಂತಾತ್ಮಸಂಭವ
ನಾದನೆಲೆ ಮುನಿನಾಥ ಕರುಣಿಪುದೆಂದನವನೀಶ ೧

ತಂದೆ ತಾಯಿಗಳಲ್ಲದಧಿಕಾ
ನಂದ ಸಿದ್ಧಿಯನೆಯ್ದಿದರಲೈ
ನಂದಗೋಪಯಶೋದೆಯರು ಮುನ್ನಾವ ಸುಕೃತಿಗಳೊ
ವಂದ್ಯಚರಣನೆ ಗೋಪಗೋಪೀ
ವೃಂದವಾಗೋವುಗಳ ಮಾಡಿದ
ಸಂದ ಜನ್ಮಾಂತರದ ಸುಕೃತವದೇನು ಹೇಳೆಂದ ೨

ಶ್ರೀಲಲಾಮನುದಾರಲೀಲಾ
ಬಾಳಕೇಳಿಯ ಸುಖವನಱಿಯದ
ಬಾಳಿಕೆಗೆ ಫಲವೇನು ದಿಟ ನೋಡುವಡೆ ಹೆತ್ತವರ
ಮೇಳವೇ ಮರ್ತ್ಯರೊಳು ಗೋಪರ
ವೋಲು ಭಾಗ್ಯಾಧಿಕರು ಬಹಳ ವಿ
ಶಾಲ ಪುಣ್ಯರದಾರೆನಲು ಮುನಿನಾಥನಿಂತೆಂದ ೩

ಅವನಿಪತಿ ಚಿತ್ತವಿಸು ಭಾಗ್ಯದ
ತವನಿಧಿಗಳೆನೆ ಗೋಕುಲೇಶ್ವರ
ರವಿರತೋನ್ನತ ಪೂರ್ವಸಂಕಲ್ಪಿತ ಮಹೋದಯವ
ಅವರು ವಸುಗಳು ದ್ರೋಣ ಧರೆಯೆಂ
ಬವರು ನಂದಯಶೋದೆಯರು ನೀ
ವವನಿಗಿಳಿವುದೆನಲ್ಕೆ ತಾವಿಂತೆಂದರಜನೊಡನೆ ೪

ಸೃಷ್ಟಿಯೊಡೆಯನೆ ಕೇಳು ಧರೆಯಲಿ
ಹುಟ್ಟಲಮ್ಮೆವು ವಿಷಮ ವಿಷಯಾ
ಕೃಷ್ಟನರರೊಳು ವಿಷ್ಣುಮಾಯಾ ಮೋಹಿತಾತ್ಮರೊಳು
ದಟ್ಟವಿಸಿದಜ್ಞಾನದಲಿ ಮತಿ
ಗೆಟ್ಟು ಹೋಗದವೋಲು ವರವನು
ಕೊಟ್ಟು ಕಳುಹುವುದೊಂದನೆಂದರು ದಂಪತಿಗಳಜಗೆ ೫

ಜನಿಸಿದೆಮಗೆಮ್ಮಖಿಳ ಬಾಂಧವ
ಜನಕೆ ತತುಪಶು ಭೃತ್ಯಸಂಶ್ರಿತ
ಜನಕೆ ಕರುಣಿಸಬೇಹುದಾ ಜಗದೇಕವಲ್ಲಭನ
ಅನುಪಮಾಂಘ್ರಿಸರೋಜದಲಿ ಸಂ
ಜನಿತ ನಿಶ್ಚಲ ಭಕುತಿಯನು ಭವ
ವನಧಿಗಂಜೆವೆನಲ್ಕೆ ನಗುತಿಂತೆಂದನವರೊಡನೆ ೬

ಅಹುದು ಬಹು ಜನ್ಮಾಂತರಾರ್ಜಿತ
ಬಹಳ ಸುಕೃತದ ಫಲದಲಲ್ಲದೆ
ವಿಹಿತವಹ ಮಾನುಷ್ಯವಿದು ಸಂಭವಿಸದದಱೊಳಗೆ
ಮಹಿಯ ಮೂಢಮನುಷ್ಯರಱಿವರೆ
ಸಹಜವೆನಿಸುವ ವಿಷ್ಣುಭಕ್ತಿಯ
ಮಹಿಮೆಯನು ಪುಣ್ಯಾತ್ಮರಿರ ನಿಮಗಿತ್ತೆ ನಾನೆಂದ ೭

ಎನೆ ಹಸಾದವೆನುತ್ತ ನಿಜಪರಿ
ಜನಸಹಿತ ಗೋಕುಲದಲಿತ್ತಲು
ಜನಿಸಿದರು ಕಮಲಜನ ನೇಮದಲವನಿತಳದೊಳಗೆ
ವಿನುತ ನಂದಯಶೋದೆಯರು ತಾ
ವೆನಿಸಿ ಪಾವನ ಚರಿತರೆಸೆದರು
ದನುಜ ಹರನ ಪದಾಬ್ಜ ಭಕುತಿಗೆ ತವರುಮನೆಯೆನಿಸಿ ೮

ಆ ಸರೋಜಾಸನನ ಪೂರ್ವಾ
ದೇಶವನು ಪಾಲಿಸಲು ನಂದಾ
ವಾಸದಲಿ ಶಿಶುವಾಗಿ ಶಾಶ್ವತ ಮಹಿಮನವತರಿಸಿ
ದೇಸಿಗರ ದೇಹಾವಲಂಬನ
ದಾಸಱಿಡಗಲು ನಿಜಚರಿತ ಪೀ
ಯೂಷ ರಸದೊಳಗದ್ದಿದನು ಗೋಕುಲವನಡಿಗಡಿಗೆ ೯

ಭೂಪ ನಂದಯಶೋದೆಯರಿಗಂ
ದಾ ಪರಮ ಪುರುಷನು ನಿಜಾತ್ಮಜ
ರೂಪಿನಲಿ ದಿನದಿನಕೆ ಪುತ್ರ ಸ್ನೇಹ ಸಂಜ್ಞಿಕದ
ಲೋಪವಿಲ್ಲದ ಭಕುತಿ ಸಂತತ
ಗೋಪ ಗೋಪೀ ಜನಕೆ ಜನಿಸಿದು
ದೀಪರಿಯ ಹರಿಮುಗ್ಧ ಶಿಶುಲೀಲೆಗಳನೀಕ್ಷಿಸುತ ೧೦

ಆರು ಸರಿ ಗೋಪರಿಗೆ ಶಿವಶಿವ
ನಾರದಾದಿ ಮುನೀಶ್ವರರ ಸಂ
ಚಾರವಾಯಿತು ಗೋಕುಲದಲನವರತ ನೋಡುವರೆ
ಪಾರಮೇಷ್ಠ್ಯದ ಪರಮವಿಭವದ
ಸಾರಭವನವದಾಯ್ತು ಕೇಳ್ಳೈ
ಧಾರುಣೀಪತಿ ಮತ್ತೆ ನಂದಯಶೋದೆಯರ ಸುಖವ ೧೧

ಶ್ರುತಿಗಳಿಗೆ ಸಂಸ್ತವದ ಗೃಹ ಮುನಿ
ತತಿಗಳಿಗೆ ಗುರುದೇವತಾಗೃಹ
ಪತಿಯಗೃಹವಾಯ್ತುಮಳಲಕ್ಷ್ಮಿಗೆ ಲೋಕಪಾಲರಿಗೆ
ಕ್ಷಿತಿಗೆ ನಿರುಪಮರಾಜಗೃಹ ಶತ
ಧೃತಿಗೆ ಸಾಕ್ಷಾದಾತ್ಮಪಿತೃಗೃಹ
ವಿತರಜನಕೆ ಶರಣ್ಯಗೃಹವಾ ನಂದಗೃಹವೆಂದ ೧೨

ಸುರರ ಸಂತತಸೇವೆಗಾ ಮುನಿ
ವರರ ನಿತ್ಯಾರ್ಚನೆಗೆ ಶ್ರುತಿಗಳ
ಶಿರಗಳೇ ಪ್ರಾಮಾಣ್ಯವಾದ ನಿವೃತ್ತಿಗಾಶ್ರಿತರ
ಶರಣು ಗತಿಗಳಗಮಲ ಲಕ್ಷ್ಮಿಯ
ನಿರುಪಮಸ್ವಚ್ಛಂದ ಚರಿತಕೆ
ನೆರೆಸುಲಭವೆನಲಧಿಕವಾಯ್ತು ವಿಕುಂಠಪುರವರಕೆ ೧೩

ಮತ್ತೆ ಕೇಳೊಂದುದಿನ ನಂದನ
ಮತ್ತಕಾಶಿನಿ ದಾಸಿಯರ ಗೃಹ
ಕೃತ್ಯದಲಿ ಬೆಸಸುತ್ತ ಸಿರಿಮಂಚದಲಿ ನಿಜಸುತನ
ಮೂರ್ತಿ ನಿದ್ರೆಯ ಭರದಲಿರೆಕಾ
ಣುತ್ತ ಮೊಸರನು ಕಡೆದಳಂದಾ
ಚಿತ್ತವಲ್ಲಭನಮಳ ಗುಣಗಣಗಳನು ಪಾಡುತ್ತ ೧೪

ನಳನಳಿಪ ತೋಳುಗಳ ನಿಜಕರ
ತಳದ ನಿಡುನೇಣುಗಳ ಮುಖದಲಿ
ಹೊಳೆಹೊಳೆವ ಹೊನ್ನೋಲೆಗಳ ನಾಸಿಕದ ಮೌಕ್ತಿಕದ
ಗಳದ ಪದಕದ ಮಥನಚಲಕುಚ
ಕಳಶಭಾರದ ಹಾರಮಣಿಮಂ
ಜುಳ ಮನೋಹರಗಾತ್ರೆಯೆಸೆದಳು ಮೊಸರ ಕಡೆವುತ್ತ ೧೫

ಉಟ್ಟ ಪಟ್ಟಾವಳಿಯ ಕನಕದ
ಕಟ್ಟದುಡಿನೇವಳದ ಜಘನದಿ
ತೊಟ್ಟಕರಕಂಕಣದ ಮಣಿಮುದ್ರಿಕೆಯನೂಪುರದ
ತುಟ್ಟಿಸುವ ಬಡನಡುವಿನಧರದ
ನಿಟ್ಟಿಸಳುಗಂಗಳ ಕುರುಳ್ಗಳ
ದೃಷ್ಟಿಮೋಹನಮೂರ್ತಿಯೆಸೆದಳು ಮೊಸರ ಕಡೆವುತ್ತ ೧೬

ಪುತ್ರ ವದನ ಪ್ರೇಕ್ಷಣನ್ನುತ
ವೃತ್ತ ಪೃಥು ಕುಚಯುಗಳದಲಿ ಕಿಱು
ಮುತ್ತುಗಳ ಪೋಲೆಸೆದ ಬಾಳದ ಬೆವರ ಬಿಂದುಗಳ
ಮತ್ತಕಾಶಿನಿ ಮೊಸರ ಕಡೆವು
ತ್ತುತ್ತಮ ಶ್ಲೋಕನನು ಪಾಡಿದ
ಳತ್ಯಧಿಕ ರವದಿಂದ ಮುಡಿ ಹೂಮಾಲೆಗಳು ಸೂಸೆ ೧೭

ಬಱಹಸುಳೆತನದಂದು ರಕ್ಕಸಿ
ಮುಱಿದು ನುಂಗಲು ಬಂದಡಸು ಸಹಿ
ತೊಱಲಿಸಿದನೀ ಸಾಹಸದ ಕಣಿ ತನ್ನ ಮಱಯಾನೆ
ಅಱವರಾರೀತನ ನಿಜದ ಬಾ
ಯ್ದೆಱೆಯೊಳಗೆ ಬ್ರಹ್ಮಾಂಡವನು ಕಱು
ತುಱುಗಳನು ಗೋಕುಲದ ಜನವನು ತೋಱಸಿದನೆನುತ ೧೮

ಮೊಲೆಗಳುತ್ತಳುತೆನ್ನ ಶಿಶುಗಳ
ತಿಲಕನೊದೆದಡೆ ಭಂಡಿ ನುಗ್ಗಾ
ಗಿಳೆಗೆ ಬಿದ್ದುದು ಮೃದುಪದಾಂಬುಜದೆರಳ ಕೊನೆ ಸೋಕಿ
ಮೊಲೆಯುಣುತ್ತುಣುತೆನ್ನ ತೊಡೆಯಲಿ
ಕುಲಗಿರಿಯ ಪೋಲಾದನೆನ್ನೀ
ಕುಲಕುಶೇಶಯ ಭಾನುವೆನುತವೆ ಪಾಡಿದಳು ಹರಿಯ ೧೯

ಗಾಳಿಗಂಬರದೊಳಗೆ ಪಾಡುವ
ಬಾಲಮೇಘವಿದೆತ್ತಲೆತ್ತಲು
ಕಾಳ ರಕ್ಕಸನೊಡಲನವನಿಗೆ ಕೆಡಹಿಲಂಬಿಸುವ
ಲೀಲೆಯೆತ್ತಲು ಮನೆಮನೆಗಳಲಿ
ಹಾಲು ಬೆಣ್ಣೆ ಮೊಸರ್ಗಳನು ಕಳು
ವೂಳಿಗವುತಾನೆತ್ತಲೆನುತವೆ ಪಾಡಿದಳು ಹರಿಯ ೨೦

ಕಣ್ಣ ಮುಂದಿಹದೆತ್ತಲೂರೊಳು
ಬೆಣ್ಣೆಗಳುವುದಿದೆತ್ತ ಬೀದಿಯ
ಮಣ್ಣುಮೆಲುವುದಿದತ್ತ ಬಾಯಲಿ ಕಮಲಜಾಂಡವನು
ಚಿಣ್ಣ ತೋಱುವುದೆತ್ತ ಶಶಿಯನು
ಹಣ್ಣೆನುತ ಕೈನೀಡಿ ತೆಗೆವ
ಗ್ರಣ್ಯವೆತ್ತಲೆನುತ್ತ ಕಡೆದಳು ಹಾಡುತವೆ ಹರಿಯ ೨೧

ಗೋಪವಧು ತಾನೆತ್ತ ಮುನಿಗಳು
ಭಾಪೆನುತ ಕೈಮುಗಿವುದೆತ್ತಲು
ತಾಪಸರು ತಾವೆತ್ತಲೀ ಗೋಕುಲದಲಿರವೆತ್ತ
ಪಾಪಕರ್ಮರ ಶಿಶುವನೇಕಾ
ಶ್ರೀಪತಿಗೆ ಸಮನೆಂಬರೆನುತಾ
ಗೋಪಿ ಕಡೆದಳು ಮೊಸರನಾ ಮುರಹರನ ಪಾಡುತ್ತ ೨೨

ಗೊರವನೇಕೀ ಶಿಶುವನೀಕ್ಷಿಸಿ
ಕರಗಿ ಕಂಬನಿದುಂಬಲೇತಕೆ
ಕರತಳದ ವೀಣೆಯಲಿ ಕೇಳಿಸಲೇಕೆ ನಿಜಶಿಶುವ
ತಿರಿವವಂಗೆನಲಿಲ್ಲದಕ್ಕಱು
ತರುಣನಲಿ ದಿನದಿನಕೆ ಮಿಗಿಲೆಂ
ತೊರೆವೆನಾನಿದನೆನುತ ಪಾಡಿದಳೀಕ್ಷಿಸುತ ಹರಿಯ ೧೩

ನೋಡಿ ದಣಿಯನು ನಿಚ್ಚನಿಚ್ಚಲು
ಪಾಡಿ ದಣಿಯನು ತನ್ನ ಮನೆಗೆಡೆ
ಯಾಡಿ ದಣಿಯನು ಮತ್ತೆ ತಾನೀ ಶಿಶುವನೇ ಕುಱಿತು
ನಾಡ ಮಾತಾಡುವನು ತೊಟ್ಟಿಲ
ಹಾಡ ಕಲಿಸುವನೆನಗೆ ಹೊಸಹೊಸ
ಗಾಡಿಗಳ ಲೀಲೆಗಳಲೆನುತವೆ ಪಾಡಿದಳು ತರಳೆ ೧೪

ಇಂತು ಪಾಡುತ ಮೊಸರ ನಂದನ
ಕಾಂತೆ ಕಡೆವುತ್ತಿರಲು ಲಕ್ಷ್ಮೀ
ಕಾಂತನೊಯ್ಯನೆ ಮೈಮುರಿದು ಸಿರಿಮುಂಚದಿಂದಿಳಿದು
ಮುಂತೆ ಕಡೆಗೋಲ್ವಿಡಿದು ತಾಯನು
ಕಂತುಪಿತನಂಡಲೆದು ಮೊಲೆಯನು
ಸಂತವಿರುತೆನಗೂಡೆನುತ ಕಾಡಿದನು ಮಿಗೆಯಳುತ ೧೫

ಎತ್ತಿಕೊಂಡಾ ಕಾಂತೆ ತೊಡೆಯಲಿ
ಚಿತ್ತಸಾಕ್ಷಿಯ ಕುಳ್ಳಿರಿಸಿಕೊಂ
ಡತ್ಯಧಿಕ ಪುತ್ರಾನುರಾಗಸ್ನುತಪಯೋಧರವ
ಇತ್ತು ಮಗ್ಗುಲಲಪ್ಪಿ ಕುಳ್ಳಿರ
ಲತ್ತಲಾ ಹಾಲೊಲೆಯ ಮೇಲು
ದ್ವೃತ್ತವಾಗಲು ಹೋದಳಾ ಮುರಹರನ ಧರೆಗಿಳುಹಿ ೧೬

ಊಡುತವೆ ಮೊಲೆಗಳನು ತೃಪ್ತಿಯ
ಮಾಡದಾ ನಿಜಜನನಿ ಹಾಲ
ಕ್ಕಾಡಿತೊಲೆಯಲೆನುತ್ತ ಹೋಗಲು ಹರಿ ಕನಲ್ದಳುತ
ಈಡಿಱಿವ ರೋಷದಲಿ ಕಚ್ಚಿದ
ನೌಡನಡಿಗಡಿಗೊಡಲು ಕಂಪಿಸಿ
ನೋಡಿದನು ಕೆಲಬಲನನಾ ದಧಿಮಥನಭಾಜನವ ೧೭

ಹೊಕ್ಕು ತೆಗೆದೊಂದಸುಬೆಗಲ್ಲನು
ಮಿಕ್ಕು ಮೀಱುವ ಕೋಪದಿಂದೆ
ತ್ರಿಕ್ಕಿದನು ಮಂಥಣಿಯ ಮೇಲಿದ್ದೆಸೆಯನೀಕ್ಷಿಸುತ
ಸಿಕ್ಕಿ ಮೊಸರಲಿ ಜಾಱಿಬೀಳುತ
ನಕ್ಕು ಬೆಣ್ಣೆಯ ಬೆರಟ ಕೈಯಲಿ
ತಕ್ಕವಿಸಿಕೊಂಡೊಯ್ಯನೋಡಿದನೋವರಿಯಮನೆಗೆ ೧೮

ಮಗನು ಕನಲದೆ ಮಾಣನೆನಗಿ
ನ್ನೆಗವೆನುತ್ತೈತಂದು ಕಂಡಳು
ಮಗನ ಕೆಲಸವನೆತ್ತಹೋದನೊ ಧೂರ್ತನೆಂದೆನುತ
ನಗುತ ಸೆಳೆಗೊಂಡೊಯ್ಯನೊಯ್ಯನೆ
ಮುಗುದೆ ನೋಡುತ ಹೆಜ್ಜೆಗೊಂಡಾ
ನಿಗಮದೂರನನಱಸಿ ಕಂಡಳು ಬೇಱೆ ಮನೆಯೊಳಗೆ ೧೯

ಕೇಣವಿಲ್ಲದೆ ನೆಲುತ ಮರ್ಕಟ
ಶ್ರೇಣಿಗೀವುತಲಿರಲು ಬೆನ್ನಲಿ
ಕಾಣದಂತೈದಿದಳು ಮಱೆಯಲಿ ಚೇತನಾತ್ಮಕನ
ಕಾಣುತವೆ ಕಡೆಗಣ್ಣಲವ್ವೆಯ
ಜಾಣತನವನು ತೀವ್ರಗತಿಯಲಿ
ಮಾಣದೋಡಿದನಂಜಿದಂತಿರಲೆಳೆದು ಮರದೊರಳ ೨೦

ಎಲವೊ ನಿಲು ನಿಲ್ಲೆನುತ ಶಿಶುವಿನ
ಬಳಿಯಲೆಯ್ದಿದಳಬಲೆ ಮುನಿಮನ
ನಿಲುಕದಾವನ ಪದಕೆ ನಿರುಪಮ ಯೋಗಮಾರ್ಗದಲಿ
ಚಲಕುಚದ್ವಯಭಾರದಲಿ ನಡು
ಬಳುಕಲೆಡಗೈಯಿಂದ ಉಡೆಮುಡಿ
ಗಳನು ಸಂವರಿಸುತ್ತ ಬಳಲುತ ಕಾಂತೆ ಸೆಳೆಗೊಂಡು ೨೧

ಮುಟ್ಟಲಱಿಯವು ಮುನಿಮನಂಗಳು
ಮುಟ್ಟಲಱಿವಳೆ ಗೋಪಿ ವಿಷಯಾ
ಕೃಷ್ಟಮತಿ ವೇದಾಂತವೇದ್ಯನನಪ್ರತರ್ಕ್ಯನನು
ನೆಟ್ಟನಾ ಜಗದಾತ್ಮಕನನೆಂ
ತಟ್ಟಿ ಹಿಡಿದಳೊ ಕಾಲಗತಿಗಡಿ
ಗಟ್ಟಿ ಮುಟ್ಟಲು ನೆಱೆಯದಾ ಪರಮಾತ್ಮನನು ತರಳೆ ೨೨

ಉಡೆಮುಡಿಯ ಕುಚಯುಗಳ ಭಾರದ
ಲಡಿಗಡಿಗೆ ಬಳುಕುತ್ತ ಬಾಡು
ತ್ತೊಡನೊಡನೆ ಬೆಂಬತ್ತುವವ್ವೆಯ ಬಳಲಿಕೆಯ ಕಂಡು
ಹಿಡಿಹುಗೊಟ್ಟನು ಭಕ್ತರಿಚ್ಛೆಯ
ಲೊಡಲುಗೊಂಡಿಹೆನೆಂಬ ಬಿರುದನು
ನಡಸಿ ತೋಱುವ ವೋಲು ಕಾರುಣ್ಯದಲಿ ಕರುಣಾಬ್ಧಿ ೨೩

ಬಳಲುವರು ಬಹುಯೋನಿಗಳಲೆ
ನ್ನೊಲವು ಸೇರದಡಖಿಳ ಜೀವರು
ಬಳಲಲಱಿವರೆ ತನ್ನೊಲವು ಸೇರಿದಡೆ ಬಳಿಕೆಂದು
ಒಲಿದು ಲೋಕಕ್ಕಱುಹುವಂತಾ
ನಳಿನನಾಭನು ನಂದಗೋಪಿಯ
ಬಳಲಿಕೆಯ ಪರಿಹರಿಸಿ ಕೈಗಳವಟ್ಟನೊಲವಿನಲಿ ೨೪

ಮುಟ್ಟ ಹಿಡಿದೆಲೆ ಮಗನೆ ಮಾಳ್ಪದು
ಕಷ್ಟತನವೇ ಯಲ್ಲದಿಲ್ಲೀ
ಸೃಷ್ಟಿಯೊಳಗೀ ನಿನ್ನ ಹೋಲುವ ಮಕ್ಕಳೀಪರಿಯ
ಹುಟ್ಟಲಱಿವರೆ ದುರುಳತನದಲಿ
ಹುಟ್ಟಿದವರುಂಟೇ ಸಮಾನರು
ಕುಟ್ಟಿದರೆ ನೀನಱಿವೆಯೆಂದಳು ಗೋಪಿ ಸೆಳೆಗೊಂಡು ೩೫

ಎನಲಳುತ್ತಳುತಂಜಿದವೊಲಾ
ನನಕೊರಸಿ ಕೈವೆರಳ ಮಱೆಯಲಿ
ಜನನಿಯನು ನೋಡುತ್ತಲಾ ನಾಡಾಡಿ ಶಿಶುವಂತೆ
ತನು ನಡುಗೆ ಕಾಡಿಗೆ ಸಹಿತ ಕಂ
ಬನಿ ಮುಖೇಂದು ಕಳಂಕವಾಗಲು
ಮುನಿಗಳನು ನಗಿಸಿದನು ನರಶಿಶುತನದ ನಟನೆಯಲಿ ೩೬

ಅಂಜಿದುದು ಮಗುವೆನುತ ಬಿಸುಟಾ
ಕಂಜಲೋಚನೆ ಕೈಯ ಸೆಳೆಯನು
ಮಂಜುಳಾರವದಿಂದ ಮೋಹದಲೊಯ್ಯನುಱೆ ಜಱೆದು
ಮಂಜರನ ಮೋಲ್ಮೊ ಸರ ಮಡಕೆಯ
ಭಂಜಿಸಿದೆ ಬೇಡೆಂದು ಹೇಳಿದ
ಡಂಜೆ ಬಡಿವೆನದೆಂತು ಹಸುಳೆಯನೆಂದಳಾ ಗೋಪಿ ೩೭

ಬಲ್ಲೆನಾನಿದಕೊಂದು ಬುದ್ಧಿಯ
ನಿಲ್ಲಿಯೇ ನೋಡೆಂದು ಮರದೊರ
ಳಲ್ಲಿ ಕಟ್ಟಿರಿಸಿದಡೆ ನಿನ್ನನು ಬಳಿಕ ಸಾಹಸವ
ಬಲ್ಲಿದನೆ ಮಾಡಾಪಡೆನುತು
ತ್ಫುಲ್ಲಮುಖಿ ತರಿಸಿದಳು ಕಡೆನೊದ
ಲಿಲ್ಲದಚ್ಯುತನುದರವನು ಬಂಧಿಸಲು ದಾಂಬುಗಳ ೩೮

ತರಿಸಿ ಮಗನುದರವನು ನೇಣೊಂ
ದಱಲಿ ಸುತ್ತಿದಳಬಲೆ ಕಟ್ಟಲು
ನೆಱೆಯದಿಬ್ಬೆರಳಿಂಗೆ ಮತ್ತದಱೊಡನೆ ಮೇಣೊಂದ
ತರಳೆ ಗಂಟಿಕ್ಕಿದಳು ನೇಣೆರ
ಡಱಲಿ ನಡುವನು ಕಟ್ಟಲದುಮಿ
ಬ್ಬೆರಳಿಗೈದಲು ನೆಱೆಯದಾದುದು ಲಲನೆ ಬೆಱಗಾಗೆ ೩೯

ಅದಱೊಡನೆ ಮತ್ತೊಂದು ನೇಣನು
ಸುದತಿ ಸಂಧಿಸಿ ಕಟ್ಟೆ ನೋಡಿದ
ಡದು ಗತೋದಕಸೇತುವಾಯ್ತಿಬ್ಬೆರಳನಂತರಕೆ
ಅದಱೊಡನೆ ಮತ್ತೊಂದ ಗಂಟ
ಕ್ಕಿದಳು ತನ್ನರ್ಭಕನ ನಡುವಿಂ
ಗದನು ಸುತ್ತಿದರಾಯ್ತು ಮತ್ತೆರಡಂಗುಲದ ಕೊಱತೆ ೪೦

ಅದಱೊಡನೆ ಮತ್ತೊಂದನಿದಿರಿ
ಕ್ಕಿದಳು ಮತ್ತದಱೊಡನೆ ಗಂಟ
ಕ್ಕಿದಳು ತಂದಿಕ್ಕಿದಳು ಮತ್ತದಱೊಡನೆ ಮತ್ತೊಂದ
ಅದಱೊಡನೆ ಮತ್ತೊಂದನಂ
ತದಱೊಡನೆ ಮತ್ತೊಂದನಂತಾ
ಸದನದೊಳಗಣ ನೇಣನೆಲ್ಲವ ತರಿಸಿದಳು ತರಳೆ ೪೧

ಹಟ್ಟಿಯೊಳಗುಳ್ಳನಿತು ನೇಣ್ಗಳು
ಕಟ್ಟ ಸವೆದವು ಕಡೆವ ಕಂಭದ
ಕಟ್ಟುನೇಣಿಗೆ ನೇಣು ಬಂದವು ಬಾಲೆಯಿದ್ದೆಡೆಗೆ
ತೊಟ್ಟಲಿಳಿದವು ಧರೆಗೆ ನೆರೆಮನೆ
ಹಟ್ಟಿಗಳು ಬಱಿದಾದವಂಗನೆ
ನಟ್ಟಕಂಗಳಲಿದ್ದಳೀಕ್ಷಿಸಿ ಬೆರಳ ಮೂಗಿನಲಿ ೪೨

ನೋಡಿ ಗೋಕುಲದೊಳಗೆ ನೆಱೆದಾ
ಗಾಡಿಕಾತಿಯರಂದು ಬೆಱಗಿನ
ಗಾಢಿಕೆಯಲೋರೊಬ್ಬಱೀಕ್ಷಿಸಿ ನೆರೆದು ನಗುತಿರಲು
ನೋಡಿ ನೆರೆಮನೆಯವರು ನೇಣ್ಗಳ
ನೀಡಿ ಬಳಲಿದರನಿತುವನು ಸತಿ
ಹೂಡಿ ಬಳಲಿದಳಾತ್ಮಸಂಭವನುದರವೇಷ್ಟನಕೆ ೪೩

ಜಗದುದರನುದರವನು ಹುಲುನೇ
ಣುಗಳು ಸುತ್ತಲು ನೆಱೆಯದಿರಲಾ
ನಗುವ ಗೋಪಿಯರೊಡನೆ ನಗುತ ಯಶೋದೆ ಬೆಱಗಾಗಿ
ಜಗುಳುವೊಡೆ ಮುಡಿಗಳಲಿ ಸತಿ ಕೈ
ದೆಗೆದು ಬಳಲುತ ನಿಂದಿರಲು ಕರು
ಣೆಗಳ ದೇವನು ಬಂಧನಕ್ಕೊಳಗಾದನಾಕ್ಷಣಕೆ ೪೪

ಏನನೆಂಬೆನು ಭೂಪ ಭಕ್ತಾ
ಧೀನ ನಾನೆಂದಖಿಳ ಲೋಕಕೆ
ತಾನೆ ತೋಱುವಂತೆ ದಿಕ್ಪಾಲಾದಿಗಳ ಹುಗದ
ಜ್ಞಾನವಿಗ್ರಹನಾತ್ಮಜನನಿಯ
ಮಾನಹಾನಿಗಳೆನ್ನದೆಂದನು
ಮಾನಿಸುತ್ತೊಳಗಾದನಾ ಬಂಧನಕೆ ಮುರವೈರಿ ೪೫

ಮೊದಲ ನೇಣೇನೆಱೆದುದಚ್ಯುತ
ನುದರಬಂಧನಕಧಿಕ ಕಾರು
ಣ್ಯದಲಿ ನೋಡಿದಡಾಕ್ಷಣವೆ ನೇಣುಗಳ ರಾಶಿಗಳು
ಇದಿರುಗೊಂಡವು ಗಿರಿಗಳನು ಕ
ಟ್ಟಿದಳುಲೂಖಲಕುಳಿದ ಸೆಱಗಿನ
ಲದನು ಕಂಡಚ್ಚರಿವಡುತ್ತಿರ್ದುದು ಜನಸ್ತೋಮ ೪೬

ಮಾಣೆ ನೀನೀ ದುರುಳತನವನು
ಮಾಣೆ ಹೇಳಿದಡಿನ್ನು ಮಾಡೆ
ಸ್ನಾಣೆ ನೋಳ್ಪೆನು ಮಾಡಲಾಪಡೆ ಸಿತಗತನಗಳನು
ಕಾಣಲೀ ಜಗವೈದೆನುತ್ತಾ
ಜಾಣೆ ಮನೆಗೆಲಸಕ್ಕೆ ಹೋಗಲು
ಕಾಣುತವೆ ಹರಿ ನೆನೆದನದ್ಭುತ ಬಾಲಲೀಲೆಗಳ ೪೭

ಮುನ್ನ ನಾರದ ಶಾಪದಿಂದವೆ
ಕಿನ್ನರೇಶ್ವರ ಪುತ್ರರಿಬ್ಬರು
ವರ್ಣಿಸಲು ನಳಕೂಬರ ಮಣಿಗ್ರೀವರೆಂಬವರು
ತನ್ನ ಮನೆಯಂಗಣದ ಕಡೆಯಲಿ
ಸನ್ನಿವೇಶವ ಹಡೆದು ಮಿಗೆ ಬೆಳೆ
ದುನ್ನತಾಗ್ರದಲವಳಿ ಮತ್ತಿಗಳಾಗಿರಲು ಕಂಡ ೪೮

ಇವರು ಧನದಾತ್ಮಜರು ಮುನಿಪುಂ
ಗವನು ತನ್ನೇಕಾಂತ ಭಕ್ತನು
ಸವನಿಸಿತ್ತಿದು ತನಗೆ ಕರ್ತವ್ಯಾಂಶವೆಂದೆನುತ
ಭವವೆ ಭವ ಬಂಧನವೆ ಬಂಧನ
ವವರ ಸುಖವೇ ತನ್ನ ಸುಖವಿಂ
ತಿವರ ಶಾಪ ವಿಮೋಕ್ಷವೇ ಋಣಮೋಕ್ಷವೆನಗೆಂದ ೪೯

ವ್ರತವಿದೇ ತನಗೆನ್ನ ಭಕುತರ
ಹಿತವೆ ಹಿತವವರಿಷ್ಟಸಿದ್ಧಿಯೆ
ಸತತವೆನಗಿಷ್ಟಾರ್ಥಸಿದ್ಧಿಯೆನುತ್ತ ಮನದೊಳಗೆ
ಯತಿಮನೋಮಂದಿರನುಭಯಹಿತ
ಕೃತಿಯನೇ ನಿಶ್ಚೈಸಿದನು ಸುರ
ತತಿವಿನುತ ನಿತ್ಯಾತ್ಮ ಕೃಷ್ಣನುದಾರ ವಿಕ್ರಮುವ ೫೦

ಒಂಭತ್ತನೆಯ ಸಂಧಿ ಮುಗಿಯಿತು.

# ಹತ್ತನೆಯ ಸಂಧಿ

ಅನಿಮಿಷರು ಭಾಪೆನಲು ಯಮಳಾ
ರ್ಜುನ ಮಹಾದ್ರುಮಗಳಿಗೆ ಮೋಕ್ಷವ
ನನುಪಮನು ಕರುಣಿಸಿದನುನ್ನತ ಬಾಲಕೇಳಿಯಲಿ

ಮುನಿಪ ಕರುಣಿಸಬೇಹುದೆಂತಾ
ಧನದನಾತ್ಮಜರೊಡನೆ ಮುನಿಪತಿ
ಮುನಿದನಾವಪರಾಧವನು ಮಾಡಿದರು ಧನದಜರು
ದನುಜಹರನ ಪದಾಬ್ಜಸಂಸ್ಪರು
ತನದ ಪುಣ್ಯೋದಯವದೆಂತೆನೆ
ಜನಪತಿಗೆ ಜಗದೇಕವಂದ್ಯ ಮುನೀಂದ್ರನಿಂತೆಂದ ೧

ಒಂದು ದಿನ ನೃಪ ಕೇಳು ಧನದನ
ನಂದನರು ಮದಿರಾಂಧರಾ ಸ್ತ್ರೀ
ವೃಂದ ಸಹಿತಾಡುತ್ತ ಕೈಲಾಸೋಪವನದೊಳಗೆ
ಬಂದು ಮಂದಾಕಿನಿಯೊಳಗೆ ಸಾ
ನಂದದಲಿ ಜಲಕೇಳಿಯಾಡುತ
ಮಂದ ಮತಿಗಳು ವಿಗತ ವಸ್ತ್ರದಲಿರ್ದರವರೆಂದ ೨

ಬಂದನಲ್ಲಿಗೆ ಸಕಲ ಸುರನರ
ವಂದ್ಯಪಾವನ ಪಾದಕಮಲ
ದ್ವಂದ್ವನಾಕಸ್ಮಿಕದಲಚ್ಯುತಗೋತ್ರ ಗುರುವರ್ಯ
ಇಂದಿರಾಪತಿ ಪಾದ ಪದುಮ
ದ್ವಂದ್ವರತಿ ಸಾಮ್ರಾಜ್ಯ ಸಹಜಾ
ನಂದರಸ ಮೂರ್ಧಾಭಿಷಿಕ್ತನು ನಾರದವ್ರತಿಪ ೩

ಕಂಡು ಸತಿಯರು ತವತವಗೆ ಭಯ
ಗೊಂಡು ಶಾಪವನೀವನೀ ಮುನಿ
ಕಂಡಡೆಮ್ಮನು ವಸ್ತ್ರಹೀನೆಯರಾಗಿ ತಾಮಿರಲು
ಭಂಡತನಬೇಡೆನುತ ಸೀರೆಯ
ಕೊಂಡು ಕೆಲಸಾರಿದರು ಮದಿರೋ
ದ್ದಂಡಮದವಿಹ್ವಲರು ಮೈಮುಚಿದಿರ್ದರುದಕದಲಿ ೪

ಮುನಿಪನವರಿಬ್ಬರನು ಧನದನ
ತನಯರೆಂಬುದನಱಿತು ತನ್ನಯ
ಮನದೊಳಗೆ ಭಾವಿಸಿದನವರೊಳನುಗ್ರಹದ ಮತಿಯ
ಧನಮದಾಂಧರು ಕುಲಮದಾಂಧರು
ತನುಬಲದ ಯೌವನಮದಾಂಧರು
ಘನತರದ ಮದಿರಾಮದಾಂಧರು ಕೆಟ್ಟರಕಟೆಂದ ೫

ಆರದೀ ತನುವಾರದೀ ಧನ
ವಾರದೀಯೈಶ್ವರ್ಯಸಂಪದ
ವಾರದಕಟಾ ನೋಡದೇಕಿಳಿದಪರಧೋಗತಿಗೆ
ಭೂರಿ ಮಮಕಾರದಲಿ ತತ್ವವಿ
ಚಾರವಿಲ್ಲದೆ ಬಱಿದೆ ವಿಷಯವಿ
ಕಾರಿಗಳು ಕೆಡುತಿಹರು ಕಂಗಾಣದೆ ಮಹೋತ್ತಮರ ೬

ಮಲದ ಮಱವಡ ಮೂತ್ರದಾಗರ
ವೆಲುತೊಗಲುನರಮಾಂಸಮಯ ಕ್ರಿಮಿ
ಕುಲದ ಜನ್ಮಸ್ಥಾನ ರಕ್ತಶ್ಲೇಷ್ಮಮಜ್ಜೆಗಳ
ಹೊಲಸಿನಂಗಡಿ ರೋಗಪೂರದ
ಕಳಜ ಕಾಯವಿದೆನ್ನದಾನೆಂ
ದಿಳಿವರೇಕಕಟಕಟ ನರಕದೊಳೆಂದನಾ ಮುನಿಪ ೭

ತಾನಿದಾರಿಂಗೊಡಲು ಭೋಜನ
ದಾನಕರ್ತಗೊ ಮೇಣು ಗರ್ಭಾ
ಧಾನಕರ್ತಗೊ ತಾಯಿತಂದೆಯರಿಬ್ಬಱಿಗೊ ಮೇಣು
ಶ್ವಾನಸೂಕರಗಳಿಗೊ ಮೇಣು ಕೃ
ಶಾನುಗೊ ಬಲ್ಲಿದಗೊ ಮಧ್ಯ
ಸ್ಥಾನಗತವಿಂತಾರಿದನು ಮಮಕರಿಸಬಹುದೆಂದ ೮

ಎಳೆದು ಬಿಸುಟಡೆ ಹುಳುವೆನಿಸಿ ನಾ
ಯ್ಗಳು ತಿನಲು ತಾ ತತ್ಪುರೀಷಾ
ವಳಿಯೆನಿಸಿ ಸುಡೆ ಭಸ್ಮವೆನಿಸುವ ದೇಹ ತಾನೆಂದು
ಅಳುಕದೆನ್ನದಿದೆಂದು ಲೋಗರ
ಕೊಲುವ ಮತ್ತಂತಕನ ಕೈಯಲಿ
ಕೊಲಿಸಿಕೊಂಬ ದುರಾತ್ಮರಿಂಗಿನ್ನೇನು ಗತಿಯೆಂದ ೯

ಏಕೆ ಮದವೀ ಕಾಲಕರ್ಮಮ
ಹಾಕುಳಿತ ಜೀವರಿಗೆ ಮತ್ಸರ
ವೇಕೆ ಮನಮುನಿಸೇಕೆ ಮಾನಸ್ತಂಭ ತಾನೇಕೆ
ಲೋಕದೊಳಗೆ ದರಿದ್ರರೇ ನಿ
ರ್ವ್ಯಾಕುಲಾಂತಃಕರಣರಾಗಿ ವಿ
ವೇಕ ಪಡೆವರು ಸಾಧುಸಂಗಾನುಗ್ರಹದಲೆಂದ ೧೦

ಧನವಿಹೀನಂಗಿಲ್ಲ ವಿಷಯದ
ಲನುಭವದ ಮನದಿಚ್ಛೆ ಪರರಿಗೆ
ತನಗೆ ಸರಿಯೆಂದಱಿವನೀ ಸುಖದುಃಖದನುಭವವ
ಧನವದಿಲ್ಲದಡಿಲ್ಲ ಮನಸಂ
ಜನಿತ ಮತ್ಸರ ಮಾನವೆಂಬಿವು
ದನುಜಹರನ ಕಟಾಕ್ಷಲಕ್ಷ್ಮಿಗೆ ಪಾತ್ರರಹರೆಂದ ೧೧

ಅಕ್ಕಟವರಿಂದೆನ್ನ ದೃಷ್ಟಿಪ
ಥಕ್ಕೆ ಬಿದ್ದುದಱಿಂದ ದುರ್ಗತಿ
ಗಿಕ್ಕಲಾಗದು ಪಾಪಕರ್ಮರಿವರ್ಗಳನು ದಿಟಕೆ
ಸೊಕ್ಕಿ ಮೈಮಱೆದಿರ್ದವರ ಪಾ
ಪಕ್ಕೆ ಹರಚಿತ ಮಾತ್ರ ಮಾಡಲು
ತಕ್ಕುದೆನುತ ಕೃಪೇಕ್ಷಣದಲಿಂತೆಂದನಾ ಮುನಿಪ ೧೨

ಮಱೆದು ಮರನಂತಿರ್ದರೇನೆಂ
ದಱಿಯದದಱಿಂದಡವಿಯಲಿ ಹೆ
ಮ್ಮರನೆನಿಸಿ ಸಂಜನಿಸಲದಱೊಳು ತನ್ನ ಕೃಪೆಯಿಂದ
ಅಱಿವು ಕೆಡದಿರಲಚ್ಯುತಾಂಘ್ರಿ
ಸ್ಪರುಶನದ ಪಾವನತೆ ಕಾಲಾಂ
ತರಕೆ ದೊರಕಲಿ ದಿವ್ಯಶತವತ್ಸರದ ಕಡೆಗೆಂದ ೧೩

ಎಂದನುಗ್ರಹಿಸುತ್ತ ಧನದನ
ನಂದನರಿಗಾ ಮುನಿಪನತಿ ಕೃಪೆ
ಯಿಂದ ಶಾಪವನಿತ್ತು ನರನಾರಾಯಣಾಶ್ರಮಕೆ
ಅಂದು ಬಿಜಯಂಗೈಯಲಿತ್ತಲು
ಮಂಡಮತಿಗಳು ಶಾಪವಶದಲಿ
ಬಂದು ಹುಟ್ಟಿದರವನಿಯಲಿ ಯಮಳಾರ್ಜುನಾಖ್ಯೆಯಲಿ ೧೪

ಹುಟ್ಟಿ ಗೋಕುಲದೊಳಗೆ ಬೆಳೆದಿರೆ
ಬೆಟ್ಟದಂತೆಲೆ ಕೊಂಬು ಕಾಯಿಗ
ಳಿಟ್ಟಡೆಯ ದೆಸೆಗಳಲಿ ತೀವಿರಲವಳಿ ಮತ್ತಿಗಳು
ಸೃಷ್ಟಿಪಾಲಕರೊಡೆಯನೀಕ್ಷಿಸಿ
ಕಟ್ಟಿ ಹೋದಾ ತಾಯ್ಗೆ ಸಂತಸ
ಹುಟ್ಟಲೆಂದಘಟಿತಪರಾಕ್ರಮಕಂದು ಮನದಂದ ೧೫

ಒರಳನೆಳೆವುತ್ತೆಳವುತೊಯ್ಯನೆ
ಹೊರಗೆ ನೋಡುತ ನಗುತ ದಾಮೋ
ದರನೆನಿಸಿಕೊಳುತವಳಿಮತ್ತಿಯ ಮರನ ಸಮ್ಮುಖಕೆ
ಕರುಣಿಗಳ ದಾತಾರನೆಯಿತಂ
ದುರವಣಿಸಿ ನುಸುಳ್ದೆರಡು ಮರನಂ
ತರದಲೆಯ್ದಿದನಡ್ಡ ಬಿದ್ದುದು ಹಿಂದೆ ಮರದೊರಳು ೧೬

ಕಡುಗಿ ತೆಗೆದರೆ ಮರದೊರಳು ಸಹಿ
ತೊಡನೆ ಧರೆ ಕಿತ್ತೆತ್ತಿ ಕುಲಗಿರಿ
ನಡುಗೆ ದೆಸೆ ಮಾರ್ಮೊಳಗೆ ಪಾತಾಳಾವಳಿಗಳೊಡನೆ
ಕಡಲು ಕದಡಲು ಬೇರು ಸಹಿತು
ಗ್ಗಡದ ಛಟಛಟರವದಲಿಳೆ ಬಾ
ಯ್ಬಿಡಲು ಬಿದ್ದುದು ಬೆಳೆದ ಹೆಮ್ಮರನೆರಡು ಧರಣಿಯಲಿ ೧೭

ಅಂಬರವನಾವರಿಸಿದೆಲೆ ಕುಡಿ
ಕೊಂಬುಗಳಸಹಿತಖಿಳಭುವನಕ
ದಂಬದವಸಾನದ ಮಹಾರ್ಣವದಂತೆ ಭೋರ್ಗರೆದು
ಇಂಬುಗೆಡಿಸಿದವಿಳೆಯನದನೇ
ನೆಂಬೆನಾ ದ್ರುಮಪಾತವನು ಕಮ
ಲಾಂಬಕನ ಕಮನೀಯ ಬಾಲಚರಿತ್ರದಘಟಿತವ ೧೮

ಹಱಿಯದುದರದ ನೇಣು ಮೇಣ್ಣಸು
ಜಱಿಯದಾಡುವ ಗೋಕುಲದ ಕಱು
ತುಱುಗಳನು ನಸುನೋಯದೆಱಗದೆ ಮಂದಿರದ ದೆಸೆಗೆ
ನೆಱೆ ಜಗನ್ಮಯನತುಳ ಲೀಲೆಯ
ನಱಿವರಾರಾ ಬಿದ್ದ ಮರಗಳ
ಮಱಿಯಲುದಿಸಿದರಿಬ್ಬರಮರಪ್ರವರರಾ ಕ್ಷಣಕೆ ೧೯

ಮಕುಟಕುಂಡಲಹಾರಮಣಿಮೌ
ಕ್ತಿಕದ ದಿವ್ಯಾಂಬರದ ಕಾಂತಿಯ
ಪ್ರಕರದಲಿ ಪಾವಕನವೊಲು ಬೆಳಗುತ್ತ ದೆಸೆದೆಸೆಯ
ವಿಕಟ ತನುಕಾಂತಿಯಲಿ ತೊಳತೊಳ
ಪಕುಟಿಲಾತ್ಮರು ಕಂಡು ಕಮಲಾಂ
ಬಕನ ಪದಕಮಲದಲಿ ಬಿದ್ದರು ಜಯತು ಜಯಯೆನುತ ೨೦

ಬಿದ್ದು ಪದದಲಿ ಮುನಿಪದಾಂಬುಜ
ಹೃದ್ಯಪದಪೀಠನನು ಕಾಣು
ತ್ತೆದ್ದು ಪುಳಕದ ಪರಮ ಸಂತೋಷಾಮೃತೇಕ್ಷಣದ
ಹೆದ್ದೊಱೆಯಲೋಲಾಡಿ ಪುನರಪಿ
ಬಿದ್ದರಂಘ್ರಿಯಲೆಱಗಿ ಕೈಮುಗಿ
ದೆದ್ದು ಸಂಸ್ತುತಿ ಮಾಡಿದರು ಧನದಾತ್ಮಸಂಭವರು ೨೧

ದೇವ ಪೊಡವಂಟೆವು ಭವತ್ಪದ
ಸೇವಕಾಧಮರಾವು ಸುರನರ
ಸೇವಿತಾಂಘ್ರಿಗೆ ಸಕಲ ಭುವನಾಧಾರ ಮೂರುತಿಗೆ
ನಾವಱಿವೆವೆಂತೀ ಚರಾಚರ
ಜೀವ ಚೇತನ ಸಾಕ್ಷಿಯನು ಮಾ
ಯಾವಿಕಾರವಿದೂರ ನಿಜ ಪರಮಾತ್ಮರೂಪನನು ೨೨

ಅಜ್ಞರಿಗೆ ಕುಲಗುರುಗಳಾವ್ನೀ
ಜ್ಞತೆಗೆ ತಜ್ಞತೆಗೆ ವೈಗೊಡ
ದಜ್ಞನಖಿಳಾಭಿಜ್ಞಯುತನೀನಖಿಳ ಕರುಣಯುತ
ಅಜ್ಞರಲಿ ತಜ್ಞರಲಿ ಸಕಲಾ
ಭಿಜ್ಞರಲಿ ನೀನೊಬ್ಬನೇ ಕ್ಷೇ
ತ್ರಜ್ಞನೆನಿಸುವ ವಸ್ತುವೆಂದರು ಭವಸಖಾತ್ಮಜರು ೨೩

ನೀನೆ ಸರ್ವಾತ್ಮಕನು ಸರ್ವಗ
ನೀನೆ ಸರ್ವಜಗತ್ಪ್ರವರ್ತಕ
ನೀನೆ ಕಾಲಾತ್ಮಕನಚಿಂತ್ಯಾತರ್ಕ್ಯನಹ ವಿಷ್ಣು
ನೀನೆ ಸತ್ವರಜಸ್ತಮೋಗುಣ
ಹೀನನಹ ಪರಮಾತ್ಮನಮಳ
ಜ್ಞಾನವಿಗ್ರಹನಖಿಳ ವೇದಾವಳಿಶಿರೋರತ್ನ ೨೪

ಆರಱಿವರೆಲೆ ದೇವ ದೇವರ
ಚಾರುಪದ ವಿನ್ಯಾಸವನು ಸವಿ
ಕಾರ ಮಾಯಾ ಗುಣಗಳುದುಭವದಿಂದ ಮುನ್ನುಳ್ಳ
ಕಾರಣತ್ರಿತಯ ಪ್ರಮಾಣವಿ
ದೂರನೆನಿಪೀ ನಿನ್ನ ಸಹಜಾ
ಕಾರವಿದು ನಿಜಲೀಲೆಯಲಿ ಮಾಳ್ಪುದು ಜಗತ್ಸ್ಥಿತಿಯ ೨೫

ಬಾವಲಿಗಳಾವೆತ್ತ ದೇವರ
ಪಾವನಾಂಘ್ರಿಸರೋಜಚಿತ್ಸೂ
ರ್ಯಾವಲೋಕನವೆತ್ತಲಿದು ಸಂಭವಿಸಿತೆಮಗಿಂದು
ದೇವಋಷಿ ನಾರದನ ಕಾರು
ಣ್ಯಾವಲೋಕನಭೂರ್ಯನುಗ್ರಹ
ಕಾವುದರಿಂದೆಲೆ ದೇವ ಯೆಂದರು ಧನದನಾತ್ಮಜರು ೨೬

ಕರುಣಿಸುವುದೆಮಗೀ ಭವತ್ಪದ
ಶರಣಜನಸಂಗವನು ಜನ್ಮಾಂ
ತರಸಹಸ್ರಂಗಳಲಿ ಸರ್ವಾತ್ಮಕನೆ ಸಕಲದಲಿ
ಭರಿತದಯೆಯನು ಮೈತ್ರಿಯನು ನಿಜ
ಚರಣಕಮಲಪರಾಗಭಕ್ತಿಯ
ಪರಮಕಾರುಣಿಕೋತ್ತಮನೆ ಬೇಡುವೆವು ಪೊಡವಂಟು ೨೭

ಕಿವಿಗಳನುದಿನ ನಿನ್ನ ಕೀರ್ತಿ
ಶ್ರವಣದಲಿ ಪೂಜೆಯಲಿ ಕೈಗಳು
ಸವನಿಸಲಿ ಸುರವಂದಿತನೆ ನಿನ್ನಂಘ್ರಿಸಂಕಜವ
ಅವಿರಳಾಲೋಕನದಲಕ್ಷಿಗ
ಳಿವು ಭವದ್ಗುಣಕಥನದಲಿ ಸಂ
ಭವಿಸಲೆಮ್ಮಾಜಿಹ್ವೆಗಳು ಬೇಡುವೆವು ಕೈಮುಗಿದು ೨೮

ದೇವದೇವರ ಚರಣಯುಗಳದ
ಸೇವೆಯಲಿ ತನುಮನ ಭವತ್ಪದ
ಭಾವನೆಯಲಿ ತಲೆಗಳಂಘ್ರಿಯುಗಪ್ರಮಾಣದಲಿ
ಜೀವಿಸುತ ನಿನ್ನವರೆನಿಸಿ ಸಂ
ಜೀವಿಸುವ ವರಗಳನು ಕರುಣದ
ಲೀವುದೆಂದೆಱಗಿದರು ಧನದಾತ್ಮಜರು ಹರಿಪದಕೆ ೨೯

ಎತ್ತಿದನು ನಸುನಗುತಲವದಿರ
ಮಸ್ತಕಂಗಳನೆರಡು ಕೈಯಲಿ
ಕೃತ್ತಿವಾಸಪ್ರಿಯಸುತರಿರಂಜದಿರಿ ನಿಮಗಂದೆ
ಇತ್ತನಭಯವನಮರಮುನಿಕೃಪೆ
ವೆತ್ತು ಶಾಪವ್ಯಾಜದಲಿ ಸುಮು
ಹೋತ್ತಮಾಂಘ್ರಿಯ ದರುಶನವೆ ಭವಮೋಕ್ಷಕರವೆಂದ ೩೦

ಎನ್ನವರ ದರುಶನವೆ ಸಂಸಾ
ರಾರ್ಣವದ ಕಡುಜೀವಜಾತ
ಕ್ಕೆನ್ನವರನುಗ್ರಹವೆ ಮಾಳ್ಪುದು ತನ್ನನುಗ್ರಹವ
ಎನ್ನವರೊಳಾನೆನ್ನೊಳೆನ್ನವ
ರನ್ಯರಲ್ಲೆಂದಱಿದು ಸಂಪ್ರತಿ
ಪನ್ನ ಬುದ್ಧಿಗಳಾಗಿಹುದು ನೀವೆಂದು ನೇಮಿಸಿದ ೩೧

ಕಂಗಳಿಗೆ ರವಿಯುದಯ ತಿಮಿರವ
ಭಂಗಿಸದೆ ಬೆಳಸುವುದೆ ನಿಜಜನ
ಸಂಗ ಸಂಸಾರಿಗಳ ಘನಸಂಸಾರ ಬಂಧನವ
ಭಂಗಿಸದೆ ಮಾಂಬುದೆ ಮಹಾತ್ಮರ
ಸಂಗದಿಂದವೆ ನಿಜಪದಾಬ್ಜದ
ಸಂಗವಿದು ದೊರೆಕೊಂಡುದಲ್ಲದಡಹುದೆ ನಿಮಗೆಂದ ೩೨

ಭಾಗವತರೆಂದೆನಿಸಿ ತನ್ನವ
ರಾಗಿ ಹೋಗಿಯೆನುತ್ತ ಕರುಣಾ
ಸಾಗರನು ಬೀಳ್ಕೊಡಲು ಹರಿಯನು ಮೂವೆ ಬಲವಂದು
ಭೋಗಿಶಯನನ ಚರಣದಲಿ ತಲೆ
ವಾಗಿ ಪರಿತೋಷದಲಿ ಪುಳಕಿತ
ರಾಗುತವೆ ಬೀಳ್ಕೊಂಡರಳಕಾಪುರಿಗೆ ಧನದಜರು ೩೩

ಅತ್ತಲಾ ನಂದಾದಿಗೋಪರ
ಮೊತ್ತವೀ ಪ್ರಳಯದ ಮಹಾಧ್ವನಿ
ಯೆತ್ತಲೇನೇನೆನುತ ಹರಿತಂದವಳಿ ಮತ್ತಿಗಳು
ಕಿತ್ತುಬಿದ್ದಿರೆ ಕಂಡು ತಮ್ಮನೆ
ಕುತ್ತಿ ಕೆಡಹಿದವೋಲು ನಡುನಡು
ಗುತ್ತ ಬಿದ್ದುದು ಮೂರ್ಛೆಯಲಿ ಗೋಕುಲದಲಾಕ್ಷಣಕೆ ೩೪

ಬೀಳಲೇಕೀ ಹೆಮ್ಮರಂಗಳು
ಗಾಳಿಯಿಲ್ಲದೆ ಪ್ರಳಯಕಾಲದ
ಗಾಳಿಗೀ ಮರ ಕೀಳಲಱುವುವೆ ಕಾಲಭೈರವನ
ತೋಳುಗಳವೋಲಿವೆ ಯೆನುತ್ತಾ
ಲೋಲಮತಿಗಳು ಹರಿದು ಬಂದಾ
ಬಾಲಕನನಾ ಮರಗಳೆಡೆಯಲಿ ಕಂಡರಚ್ಯುತನ ೩೫

ಹಳಹಳಿಪ ಕುರುಳುಗಳ ಮಱೆಯಲಿ
ತೊಳಪ ಕಂಗಳಲೀಕ್ಷಿಸುತ ಕೆಲ
ಬಲದ ನೆರವಿಯನೊಯ್ಯನಾ ಮರದೊರಳನೆಳೆವುತ್ತ
ಮೆಲುನಗೆಯಲಾಡುವ ಮುಕುಂದನ
ಲಲಿತ ವದನ ಸ್ವೇದಜಲಪರಿ
ಲುಳಿತ ಮೂರ್ತಿಯನೀಕ್ಷಿಸುತ ಬೆಱಗಾದುದಖಿಳಜನ ೩೬

ಎತ್ತಲೀ ಶಿಶು ಹೆಮ್ಮರಂಗಳಿ
ವೆತ್ತ ಬೇರ್ವೆರಸಿಳೆಗೆ ಬೀಳುವು
ದೆತ್ತಲಾಕಸ್ಮಿಕವಿದಾವುದೊ ಹಾ ಮಹಾದೇವ
ಮೃತ್ಯುವಿನ ದಾಡೆಗಳವೋಲೀ
ಕಿತ್ತು ಬೀಳುವ ಮರಗಳೆಡೆದೆಱ
ಹೆತ್ತಲಕುತೋಭಯದಲಾಡುವ ಬಾಲನಿವನೆತ್ತ ೩೭

ಭೂತಳವ ನಡುಗಿಸುವ ಬಹಳೋ
ತ್ಪಾತವಾಗದೆ ಮಾಣದೆನುತತಿ
ಕೌತುಕದಲೆಯ್ತರಲು ನುಡಿದರು ನೆರೆದ ಬಾಲಕರು
ಕಾತರಿಸದಿರಿ ಕೃಷ್ಣನೇ ತರು
ಘಾತಕನು ಮರದೊರಳು ಸಿಲುಕಿದ
ಡೀತನೆಳೆಯಲು ಬಿದ್ದುದಿದ ನಾವ್ಕಂಡೆವೆಂದೆನುತ ೩೮

ಹೋಲದಿದು ಹೆಮ್ಮರಗಳನು ಶಿಶು
ಕೀಳಲಱುವನೆ ಕಂಡೆವೆಂಬೀ
ಬಾಲಕರನೇನೆಂಬೆವಘಟಿತವೆಂದರದಱೊಳಗೆ
ಲೋಲಮಾನಸರೆಂದರೆಲ್ಲಾ
ಬಾಲಕರ ಪರಿಯಲ್ಲ ಕೃಷ್ಣನ
ಲೀಲೆ ಕೌತುಕವೆನುತ ತೆತ್ತರು ಸಂಶಯಕೆ ಮನವ ೩೯

ಮಕ್ಕಳನು ಮರದೊರಳಲೀ ಪರಿ
ಸೊಕ್ಕಿ ಕಟ್ಟಿದರುಂಟೆ ನಡುವಿಂ
ಗಕ್ಕಟಕಟಾ ಕಟ್ಟಿನೀ ಹೆಂಗಸಿನ ದೆಸೆಯಿಂದ
ಮಕ್ಕಳೆಂದೇನೊಡಲ ಕೇಡಿನ
ಮಕ್ಕಳೀ ತನ್ನಾನೆ ಮೂಜಗ
ಕಕ್ಕಜದ ಶಿಶುವೆನುತ ಕಂಬನಿದುಂಬಿದನು ನಂದ ೪೦

ಅಳುತ ಬರಲೇಕೀಗಳುದರದ
ತಳದ ತಾಡನವೇಕೆ ಬೆಣ್ಣೆಯ
ನೆಲೆಗೆ ನಿನ್ನೆದೆಗೊತ್ತಿಕೋ ಸೈರಿಸಲಿ ಮನದಳಲು
ಮುಳಿದು ಮಕ್ಕಳ ಮಾಣಿಕವನೆ
ನ್ನೊಳಗಿರದ ಜೀವವನು ಮರನ
ಪ್ಪಳಿಸಿದಡೆ ಮುಗುಳೇಗುವೆನು ತಾನೆಂದು ಬಿಸುಸುಯ್ದ ೪೧

ಪ್ರಾಣವುಳಿದುದು ತನಗೆ ಶಿಶುವನು
ಕಾಣಪಡೆದೆನು ತನ್ನ ಮಕ್ಕಳ
ಮಾಣಿಕವೆ ಬಾ ತಂದೆ ಬಾ ತನ್ನಾನೆ ಬಾಯೆನುತ
ಜಾಣೆ ಕಟ್ಟಿದಳೆನುತ ಜಠರದ
ನೇಣನೀಡಾಡುತ್ತ ಮುದದಲಿ
ಮಾಣದಪ್ಪಿದನೆರಡು ಕೈಗಳು ದಣಿಯಲಚ್ಯುತನ ೪೨

ಆಯುವಂತನೆ ಮರನ ಬಳಿಯಲಿ
ಸಾಯದೆನ್ನಯ ಪುಣ್ಯವಶದಲಿ
ನೋಯದಿಂತಾಡುತ್ತಲಿಹ ತನ್ನಾನೆಯನು ಕಾಂಬ
ದಾಯವೆಂತೊಡಗೂಡಿತೆನಗೆನು
ತಾ ಯಶೋದೆ ನಿಜಾತ್ಮಭವನನು
ಮಾಯೆ ಮಿಗೆ ತಕ್ಕವಿಸಿ ಕಂಬನಿದುಂಬಿದಳು ತರಳೆ ೪೩

ಏಕೆ ತನಗೆ ಕುಬುದ್ಧಿ ಮರದೊರ
ಳೇಕೆ ಕಟ್ಟಲದೇಕೆ ನಿನ್ನನು
ಸೌಕುಮಾರ್ಯದ ಕಣಿಯೆ ಈ ಮರನೇಕೆ ತಾನೇಕೆ
ನೂಕಿ ಬೀಳಲದೇಕೆ ನಿನ್ನನು
ಸೋಕದಿರಲೇಕುಳಿದುದಿದು ಜಗ
ದೇಕನಾಥನ ಕರುಣವೆಂದು ಯಶೋದೆ ಹಲುಬಿದಳು ೪೪

ಇಂತು ಗೋಕುಲದೊಳಗೆ ಲಕ್ಷ್ಮೀ
ಕಾಂತನಘಟಿತ ಬಾಲಕೇಳಿಯ
ಕಂತುಪಿತನನುಕರಿಸಿ ಲೋಕಾನುಗ್ರಹಾರ್ಥದಲಿ
ಮಂತ್ರಮೂರುತಿ ಕೆಳೆಯರೊಡನೆ ದು
ರಂತ ವಿಕ್ರಮನಖಿಳ ಗೋಕುಲ
ಕಾಂತೆಯರ ಕಂಗಳಿಗೆ ಬೀಱುತ್ತಿದ್ದನುತ್ಸವವ ೪೫

ಒಂದು ದಿನ ಹಗಲೂಟ ತಳುವಿದು
ದೆಂದು ಕರೆದಡೆ ಬಾರದಿರೆ ಗೋ
ವಿಂದ ರಾಮರು ಮಕ್ಕಳೊಡನಾಡುತ್ತ ಬೀದಿಯಲಿ
ಇಂದುಮುಖಿ ರೋಹಿಣಿ ಯಶೋದೆಗೆ
ನಂದನರನೊಡಗೊಂಡು ಬಾ ಹೋ
ಗೆಂದು ಕಳುಹಿದಡಬಲೆ ಬಂದಳು ಕರೆತವುತವೆ ಮಗನ ೪೬

ತಂದೆ ಬಾ ತನ್ನಾನೆ ಬಾ ಗೋ
ವಿಂದ ಬಾ ಗೋಕುಲದೊಡೆಯ ಬಾ
ಕಂದ ಬಾ ಕಮನೀಯ ಮೂರ್ತಿಯೆ ಬಾ ಹರಿಯೆ ಬಾರ
ಮಂದಜಾಯತನಯನ ಬಾರ ಮು
ಕುಂದ ಬಾರ ಮುರಾರಿ ಬಾರ ಮ
ಹೇಂದ್ರವಂದ್ಯನೆ ಬಾರ ಭುವನಾಧೀಶ್ವರನೆ ಬಾರ ೪೭

ಬಾರ ಬಾಲಶಿರೋಮಣಿಯೆ ಸುಕು
ಮಾರರರಸನೆ ಹಸಿದು ಬಿಸಿಲೊಳಿ
ದಾರು ಕಲಿಸಿದರಾಡುವೀ ಬುದ್ಧಿಯನು ಹುಡಿಯೊಳಗೆ
ಬಾರ ಸಾಕಿನ್ನಾಟ ತನ್ನಯ
ಭೂರಿ ಭಾಗ್ಯದ ನಿಧಿಯೆ ತನ್ನ ಮ
ನೋರಥಾಂಬುಧಿ ಪೂರ್ಣಚಂದ್ರನೆಯೆಂದಳಬುಜಾಕ್ಷಿ ೪೮

ಬಾರ ತನ್ನಯ ಮೊಲೆಯನುಣ್ಣಾ
ಹಾರವನು ತಾನೊಲ್ಲದಾ ದಾ
ಶಾರುಹನು ಬಾ ಕುಳ್ಳಿತೈದನೆ ಬರವ ಹಾರುತ್ತ
ಭೂರಿ ಸಂತೋಷವನು ತಮಗೆಲೆ
ವೀರ ಮಾಡೀ ಮಕ್ಕಳೆಲ್ಲರು
ಬಾರ ಹೋಗಲಿ ಮನೆಮನೆಗಳಿಂಗೆಂದಳಾ ಗೋಪಿ ೪೯

ತಂದೆ ಬಾ ಜನ್ಮರ್ಕ್ಷದಿನ ನಿನ
ಗಿಂದು ವಿಪ್ರರಿಗಾಕಳನು ಕೊಡು
ಕಂದ ನೀ ಬಾ ನೋಡು ನಿನ್ನೊಡನಾಡಿ ಬಾಲಕರ
ಮಿಂದು ಮಡಿಗಳನುಟ್ಟದೇ ಸ್ವ
ಚ್ಛಂದದಿಂದಾಡುವರನಧಿಕಾ
ನಂದ ಭೋಜನತೃಪ್ತರನು ಭೂಷಣವಿಭೂಷಿತರ ೫೦

ನೋಡು ನೋಡೆಲೆ ಮಗನೆ ನಿನ್ನೊಡ
ನಾಡಿ ಮಕ್ಕಳು ತಾಯಿತಂದೆಗ
ಳೂಡಿಯುಡಿಸಿ ವಿಚಿತ್ರ ದಿವ್ಯಾಂಬರವಿಭೂಷಣವ
ಮಾಡೆ ಸಂತೋಷದಲಿ ನಿನ್ನೊಡ
ನಾಡುತಿದ್ದರೆ ನೀನು ಹಸಿದಿಂ
ತಾಡುವೈ ನೆಱೆ ಧೂಳಿದೂಸರಿತಾಂಗನೆಂದೆನಿಸಿ ೫೧

ಬಾ ಮಗನೆ ಬಾ ರಾಮು ಬಾ ಸು
ತ್ರಾಮವಂದ್ಯನೆ ತನ್ನ ಸಹಜ
ಪ್ರೇಮನಿಧಿ ಬಾ ನಿನ್ನ ತಮ್ಮನನೀಗಳೊಡಗೊಂಡು
ಸೋಮಸನ್ನಿಭವದನ ಸನ್ನುತ
ಕಾಮಧೇನುವೆ ಬಾರ ಹೊತ್ತಱು
ಜಾವದೂಟದಲಾಗದೇ ಹಸಿವೆಂದಳಬುಜಾಕ್ಷಿ ೫೨

ಈ ಪರಿಯಲಂದಬಲೆ ಮುನಿಹೃದ
ಯೋಪವನ ಖದ್ಯೋತಮಣಿ ನಿ
ರ್ಲೇಪ ನಿತ್ಯಸುಖಸ್ವರೂಪನ ತನ್ನ ಮಗನೆಂದು
ಗೋಪಿ ಬಲಕೃಷ್ಣರನು ಕೈವಿಡಿ
ದಾ ಪರಮ ಸಂತೋಷದಲಿ ಜಿತ
ತಾಪರನು ತಂದಳು ಯಶೋದೆ ನಿಜಾಲಯಕ್ಕೊಲಿದು ೫೩

ನಿತ್ಯಶುದ್ಧನೆನಿಪ್ಪ ಮಗನನು
ಮತ್ತ್ರಕಾಶಿನಿ ಮೈದೊಳೆದು ಕೃತ
ಕೃತ್ಯನನು ಕೃತ್ಯದಲಿ ನೇಮಿಸಿ ಬಾಲದೊಡಿಗೆಗಳ
ಮತ್ತೆ ತೊಡಿಸಿ ಮನೋನುರಾಗದ
ಲಿತ್ತು ಮೃಷ್ಟಾನ್ನವನು ನಿಜಸುಖ
ತೃಪ್ತನನು ಮನ್ನಿಸುತಲಿದ್ದಳು ವಿವಿಧ ಸೌಖ್ಯದಲಿ ೫೪

ಆಡು ಕೃಷ್ಣಯೆನಲ್ಕೆ ಕೈಪಱಿ
ಗಾಡಿ ಲೌಕಿಕ ಶಿಶುವಿನಂತೆಲೆ
ಪಾಡು ಕೃಷ್ಣಯೆನಲ್ಕೆ ಗೋಪಿಯರಿಚ್ಛೆಯಲಿ ಪಾಡಿ
ಆಡಿಸುವ ಬೊಂಬೆಯೊಲು ಮಾಯೆಯ
ನಾಡಿಸುವ ಪರಮಾತ್ಮನೆಂದಂ
ತಾಡುತಿರ್ದನು ಮಣೆವೊರನ ಪಾದುಕೆಗಳನೆ ಪೊತ್ತು ೫೫

ಅತ್ತಲಱಿಸುವ ನಿಗಮ ನಿಚಯಕೆ
ತತ್ವನಿಶ್ಚಯವಿಲ್ಲ ಮುನಿಗಳ
ಚಿತ್ತದೇಕಾಗ್ರತೆಗೆ ನಸು ಮೈಗೊಡದೆ ಪರಮಾತ್ಮ
ಇತ್ತಲೀ ಗೋಪಿಯರ ವಶದಲಿ
ವರ್ತಿಸುವನೆನೆ ಬಲ್ಲರಾರು ನೃ
ಪೋತ್ತಮನೆ ನಿತ್ಯಾತ್ಮ ಕೃಷ್ಣನುದಾರ ಲೀಲೆಗಳ ೫೬

ಹತ್ತನೆಯ ಸಂಧಿ ಮುಗಿಯಿತು.

# ಹನ್ನೊಂದನೆಯ ಸಂಧಿ

ಕೊಂಬು ಕೊಳಲುಗಳೆಸೆಯಲಮರ ಕ
ದಂಬವಭ್ರದಲುಲಿಯೆ ಗೋಪಕ
ದಂಬ ನಡೆದುದು ಕೂಡೆ ವೃಂದಾವನ ವನಾಂತರಕೆ

ಭೂತಳಾಧಿಪ ಕೇಳು ಗೋಪ
ವ್ರಾತವಿಂತು ಬೃಹದ್ವನದಲು
ತ್ಪಾತವನು ಕಾಣುತ್ತ ನೆರೆದೊಂದಾಗಿ ತಮ್ಮೊಳಗೆ
ಹೇತುವನು ನಿಶ್ಚಯಿಸಲಱಿಯದೆ
ಕಾತರಿಸಿ ಮಱುಗಿದರು ಋಷಿಕುಲ
ಜಾತನಾ ವಸುದೇವನಕಟಕಟೆನುತ ಮಱುಕೊಳಿಸಿ ೧

ಸಾಕು ನಮಗೀ ವನದಲಿರವಿ
ನ್ನೇಕೆ ಶಿಶು ಪಶು ವೃದ್ಧವನಿತಾ
ನೀಕ ಕಂಗೆಡಲೇಕೆ ಬಹುಳೋತ್ಪಾತನಿಕರವಿದು
ಔಕಿ ಕೊಲ್ಲದ ಮುನ್ನ ವಿಪಿನವಿ
ವೇಕವುಳ್ಳರೆ ಹೇಳಿ ಯೆನಲಾ
ಲೋಕಿಸುತ ನೆರವಿಗಳಲುಪನಂದಾಖ್ಯನಿಂತೆಂದ ೨

ಎಲವೊ ಹಿತವನು ಬಯಸುವಡೆ ಗೋ
ಕುಲಕೆ ಶಿಶುಪಶು ವೃದ್ಧವನಿತಾ
ವಳಿಗೆ ನಮ್ಮೆಲ್ಲರಿಗೆ ಸುಖದಲಿ ಜೀವಿಸುವ ಮತಿಯ
ಒಲುವಡೇಳಿಲ್ಲಿಂದ ನೀವಿರ
ದಳಲಿದಡೆ ಫಲವೇನು ನಮ್ಮಸು
ಗಳನು ಕೊಳ್ಳದೆ ಬಱದೆ ಹೋಹುತ್ಪಾತವಲ್ಲೆಂದ ೩

ಉಳಿದನೆಂತಕಟಕಟ ಮಕ್ಕಳ
ತಿಲಕನೀ ಬಾಲಕನು ರಕ್ಕಸಿ
ಕೊಲುವೆನೆಂದೇ ಬಂದು ನುಂಗಿದಡೀಶ್ವರೇಚ್ಛೆಯಲಿ
ಮಳಲ ಗಾಳಿಗೆ ಹಾಱಿ ಗಗನಾಂ
ಗಣಕೆ ಕೊಂಡೊಯ್ದಸುರ ತಾನೇ
ಕೊಲಿಸಿಕೊಂಡನು ಪುಣ್ಯದಲಿ ಶಿಶು ಜೀವಿಸಿದನೆಂದ ೪

ಎತ್ತಲಾ ಪೆರ್ಬಂಡಿ ಬೀಳುವು
ದೆತ್ತಲೀತನ ಮೇಲೆ ಬದುಕುವು
ದೆತ್ತಲೀ ಶಿಶು ಪರಮಪುರುಷನ ಕೃಪೆಯದಲ್ಲದಡೆ
ಕಿತ್ತು ಬೀಳುವ ಹೆಮ್ಮರಂಗಳಿ
ನೆತ್ತಲವಱಡಿಗಿದ್ದು ಬದುಕುವು
ದೆತ್ತಲೀ ಶಿಶುಪಶುಗಳೇಗುವೆವೆಂದನುಪನಂದ ೫

ಸಾಯದೀ ಉತ್ಪಾತಶತದಲಿ
ನೋಯದಾಗಲೆ ಮುನ್ನ ಗಮನೋ
ಪಾಯವನು ನಿಶ್ಚಯಿಸಿ ನೀವಿಂದೇ ವನಾಂತರಕೆ
ಬಾಯಬಿಡುವೀ ವೃದ್ಧತರುಣನಿ
ಕಾಯ ಕಱುತುಱು ಸಹಿತ ಹೊಱವಂ
ಟಾಯುವಂತರೆ ಇಲ್ಲಿ ನಾವಿಹುದುಚಿತವಲ್ಲೆಂದ ೬

ಒಂದು ವನವಿಹುದಳ ಖಗಮೃಗ
ವೃಂದಸೇವಿತವಮರವನಿತಾ
ವೃಂದ ನಿತ್ಯೋತ್ಸವವಿವರ್ಧನವೆನಿಸಿ ಧರಣಿಯಲಿ
ನಂದನಕ್ಕೊರೆ ಮಿಗಿಲು ಶಿಶುಪಶು
ವೃಂದಸೇವ್ಯಸ್ಥಾನ ಸುರತರು
ವೃಂದವಿಪುಳಚ್ಛಾಯೆಯಲಿ ಫಲಪುಷ್ಪ ಭರಗಳಲಿ ೭

ಪುಣ್ಯಗಿರಿತರುವೀರುಧಂಗಳು
ಪುಣ್ಯ ತೃಣ ಜಲನದಿಗಳದಱೊಳು
ಪುಣ್ಯ ಕಲ್ಪಲತಾವಿತಾನಚ್ಛನ್ನ ಭೂಮಿಗಳು
ಪುಣ್ಯ ಜನ ಸಂಕೀರ್ಣವವಿರಳ
ಪುಣ್ಯ ಖಗ ಮೃಗನಿವಹ ಸೇವಿತ
ಪುಣ್ಯವದು ವೃಂದಾವನಾಹ್ವಯವಧಿಕತರವೆಂದ ೮

ವಸುಧೆಗನುಪಮವದಱೊಳಗೆ ಶಿಶು
ಪಶುಗಳಿಂಗಿರೆ ಲೇಸು ತಾ ಬ
ಣ್ಣಿಸುವಡಱಯೆನು ಹೋಗಿ ನೋಳ್ಪುದು ಮಾತು ಸೊಗಸುವರೆ
ಉಸುರದೀಕ್ಷಣದೊಳಗೆ ಸರಕುಗ
ಳೆಸೆಯೆ ಹೂಡಲಿ ಬಂಡಿಗಳು ಬಾ
ರಿಸಲಿ ಡಂಗುರವೈದೆ ಗೋಕುಲವೀಥಿಗಳಲೆಂದ ೯

ಎಂದಡುಪನಂದೋಕ್ತಿಯನು ಸಾ
ನಂದದಲಿ ಕೇಳುತ್ತಾ ಗೋಪರ
ವೃಂದ ಬರೆ ಲೇಸೀಗಳಿಂತಿರೆ ಹೋಗಬೇಕೆನುತ
ಅಂದಿನಾ ದಿನವಾ ಮುಹೂರ್ತದ
ಲಂದವಿಟ್ಟೊಳು ಭಂಡಿಗಳ ಭರ
ದಿಂದ ಹೂಡಿದರಡಕಿದರು ಮನೆಸರಕು ಬರಕುಗಳ ೧೦

ಏಱಿದರು ಬಂಡಿಗಳನಾ ತುಱು
ಗಾಱರಾಸ್ತ್ರೀಬಾಲ ವೃದ್ಧರು
ಮೀಱಿದರು ಕೆಲಬಲಕೆ ಕಿತ್ತಾಯುಧದ ಗೋವಳರು
ಸಾಱಿದರು ಕೊಂಬುಗಳು ಕೊಳಲುಗ
ಳೋಱುಗುಡಿಸಿದುದವನಿತಳ ಕೈ
ಮೀಱಿ ನಡೆದುವು ಕೂಡೆ ತುಱುವಿಂಡುಗಳು ಸಂದಣಿಸಿ ೧೧

ಮುಂದೆ ಸನ್ನೆಯ ಗೋಪರವರಿಂ
ಹಿಂದೆ ತುಱುವಿಂಡುಗಳು ತುಱುಗಳ
ಹಿಂದೆ ನೆಱೆವೊಳು ಭಂಡಿಗಳು ಸಾಲೆಸೆಯೆ ಥರಥರಕೆ
ನಂದಗೋಪಾದಿಗಳು ಪಾರ್ಶ್ವ
ದ್ವಂದ್ವದಲಿ ಗೋವಳರು ಭಂಡಿಯ
ಹಿಂದೆ ಸಂದಣಿಸಿದುವು ತಲೆಹೊಱೆ ಹೇಱನೆತ್ತುಗಳು ೧೨

ಹರಿಬಲರು ಸಹಿತೊಂದು ಭಂಡಿಯ
ಲಿರೆ ಯಶೋದಾರೋಹಿಣಿಯರಾ
ನೆರವಿಗಳ ಮಧ್ಯದಲಿ ಗೋಪಾಂಗನೆಯರಿಕ್ಕೆಲಕೆ
ಪರಮಪುರುಷನ ಪುಣ್ಯಚರಿತವ
ನಿರದೆ ಪಾಡುತ್ತಿರಲು ಕೇಳುತ
ಕರಗುತಿರ್ದರು ತಾಯಿಗಳು ಪುತ್ರಾನುರಾಗದಲಿ ೧೩

ಭೂರಿ ಕಹಳಾರವವನಾ ಗಂ
ಭೀರ ಭೇರೀ ರವವನಾ ಶೃಂ
ಗಾರವವನಾ ವೇಣುವೀಣಾವಾದ್ಯ ನಿಸ್ವನವ
ಮೀಱಿದುದು ಗೋಪಿಯರು ಬಲ ದೈ
ತ್ಯಾರಿಗಳನೊಪ್ಪಿರಲು ಪಾಡುವ
ಚಾರುತರ ಸಂಗೀತದಾ ರವವೆಂಟು ದಿಕ್ಕಿನಲಿ ೧೪

ಮೇಲೆ ಸುರವನಿತಾವಿಮಾನ ವಿ
ಶಾಲ ಸಂಸ್ತುತಿಗಳನು ನಾರದ
ನೋಲಗದ ಸಂಭ್ರಮವನಾ ದಿಗುಪಾಲರವನತಿಯ
ಆಲಿಸುತ ಕೆಲ್ಲವಿಸಿ ಗೋಪೀ
ಜಾಲ ಸಂಗೀತವನು ಲಕ್ಷ್ಮೀ
ಲೋಲರಾಮರು ಮೆಱೆದರಾ ಗೋಕುಲದ ಮಧ್ಯದಲಿ ೧೫

ಚಳದಳಕರಾಜಿಗಳ ಮುಕ್ತಾ
ವಳಿ ಮೃದುಸ್ಮಿತ ದಂತಪಂಕ್ತಿಯ
ತೊಳಪ ಕಂಗಳ ಕಾಂತಿಗಳ ಕರುಣಾರಸೇಕ್ಷಣದ
ಹೊಳೆವ ಮಣಿಕುಂಡಲದ ಗಂಡ
ಸ್ಥಳದ ಸರ್ವಾಭರಣ ಕಾಂತಿಯ
ಲಲಘುಮಹಿಮರು ಹರಿಸಿದರು ನೋಡುವರ ಕಣುಮನವ ೧೬

ತನುತನುಗೆ ಬಲಕೃಷ್ಣರಾನನ
ಕಮಲವನು ನೋಡುತ್ತ ಗೋಪಿಯ
ರಮಲ ಲೀಲಾ ಚರಿತಗೀತಂಗಳನು ಕೇಳುತ್ತ
ಅಮಮ ಮಱೆದರು ಬಹಳ ಮಾರ್ಗ
ಶ್ರಮವನದನನವರತ ತಮಗೀ
ಗಮನವೇ ಲೇಸೆನುತಲಿರ್ದುದು ಸಕಲ ಜನನಿವಹ ೧೭

ಹೊಕ್ಕರಾ ವೃಂದಾವನದ ಸಿರಿ
ಸಿಕ್ಕಿ ಕಣುಮನವ ಹರುಷವ
ಸೊಕ್ಕಿಸಿತು ತರುಗಿರಿತೃಣಾಮಲಜಲಸಮೃದ್ಧಿಯಲಿ
ಜಕ್ಕುಲಿಸಿದುದು ಝಳನನಾರ್ತಿಯ
ನಕ್ಕುಳಿಸಿ ಬಲಕೃಷ್ಣರಿಂಗಿರ
ತಕ್ಕುದೀ ವನವೆನಿಸಿಕೊಂಡುದನನ್ಯವಿಭವದಲಿ ೧೮

ಸಿದ್ಧಿಕರವೀ ವನವೆನುತ ಹರು
ಷೋದ್ಧತರು ಮಾಡಿದರು ವಸತಿಯ
ನರ್ಧಚಂದ್ರಾಕಾರದಲಿ ಗೋಧನ ಮನುಷ್ಯರಿಗೆ
ವೃದ್ಧಬಾಲವಧೂಜನರು ಸಹಿ
ತಧ್ವಗಮನಶ್ರಮವನುಳಿದು ನಿ
ಬದ್ಧವೆನೆ ಮನೆಮಾಡಿದರು ವೃಂದಾವನಾಂತದಲಿ ೧೯

ಆಧಿಗಳ ಭಯವಿಲ್ಲ ಬಹಳ
ವ್ಯಾಧಿಗಳ ಭಯವಿಲ್ಲ ಖಗಮೃಗ
ಬಾಧೆಗಳ ಭಯವಿಲ್ಲ ತೃಣಜಲರಹಿತ ಭಯವಿಲ್ಲ
ಸಾಧುಸಜ್ಜನರಹುದೆನಲು ಬಲ
ಮಾಧವರ ಕಾರುಣ್ಯಗುಣ ವನ
ಸಾಧನದ ಗುಣದಿಂದಲಾ ವನಭೂಮಿ ರಂಜಿಸಿತು ೨೦

ಜನಪ ಕೇಳಾ ಬಹಳ ವೃಂದಾ
ವನದ ಸಿರಿಯನು ಮೆಱೆವ ಗೋವ
ರ್ಧನ ಗಿರಿಪ್ರಾಂತವನು ಯಮುನಾ ಪುಳಿನಲಕ್ಷ್ಮಿಯನು
ದನುಜಹರ ಬಲರಾಮರೀಕ್ಷಿಸಿ
ಮನದಲಧಿಕ ಪ್ರೀತಿಯನು ತಾ
ಳ್ದನುಪಮರು ರಂಜಿಸಿದರುನ್ನತ ಬಾಲಕೇಳಿಯಲಿ ೨೧

ಇರಲಿರಲು ಕಳ ಮಧುರ ಲುಪ್ತಾ
ಕ್ಷರದಲೊಪ್ಪುವ ಮುದ್ದು ನುಡಿಗಳ
ಲರಿವಿಜಯರಾಡುತ್ತ ಬಹುವಿಧ ಬಾಲಕೇಳಿಯಲಿ
ಧರೆಗೆ ಪರಮಾನಂದವನು ವಿ
ಸ್ತರಿಸುತವೆ ಕಱುಗಾಹಿತನವನು
ಧರಿಸಿದರು ಹರಿರಾಮರಾ ವ್ರಜಬಾಲಕರು ಸಹಿತ ೨೨

ನೆಱೆ ಚತುರ್ದಶಭುವನ ಕರ್ತುಗ
ಳಱಿಯದರ್ಭಕರಂತೆ ಕಾವುತ
ಕಱುಗಳನು ಕಱುಗಾಹಿತನದಂದದಲಿ ಮೆಱೆವುತ್ತ
ಅಱೆವ ಹೊಲದೊಳಗೊಯ್ಯನೊಯ್ಯನೆ
ಕಱುಗಳನು ಮೇಯಿಸುತ ಬಪ್ಪರು
ಮರಳಿ ಮಧ್ಯಾಹ್ನಕ್ಕೆ ಗೋವಳರೊಡನೆ ಗೋಕುಲಕೆ ೨೩

ಉದಯದಲಿ ಕಱುಗಾಹಿಗಳು ಸಹಿ
ತದಟರುಂಡುತ್ಸವದಲಖಿಳಾಂ
ಗದಲಿ ಹೊಂಗಿಱುಗೆಜ್ಜೆಯಂದುಗೆ ಬಾಲದೊಡಿಗೆಗಳ
ಕದನಗಲಿಗಳು ತೊಟ್ಟು ಯಮುನಾ
ನದಿಯ ಮೆಱೆವಿತ್ತಡಿಯ ಹಸಲೆಯೊ
ಳೊದವಿ ಕಱುವಿಂಡುಗಳನಾಡಿಸುತಿಪ್ಪರಾಡುತ್ತ ೨೪

ಒಮ್ಮೆ ಕೊಳಲನು ಬಾಱಿಸುತೊ
ಮ್ಮೊಮ್ಮೆ ಕೊಂಬನು ನುಡಿಸಿ ಕೇಳು
ತ್ತೊಮ್ಮೆ ಕುಣಿಕುಣಿದಾಲಿಸುತ ಕಿಱುಗೆಜ್ಜೆಗಳ ರವವ
ಒಮ್ಮೆ ಬಸವನ ತೆಱದಿ ಕೆಲೆವು
ತ್ತೊಮ್ಮೆ ಕೃತ್ರಿಮಗೋ ವೃಷಂಗಳೊ
ಳೊಮ್ಮೆ ತಮ್ಮೊಳು ಹೋರಿಸುತ್ತಾಡುವರು ವನದೊಳಗೆ ೨೫

ಒಮ್ಮೆ ಕವಣೆಯ ಕಲ್ಲುಗಳಲಿಡು
ತೊಮ್ಮೆ ಮಲ್ಲರ ತೆಱದಿ ಹೋರು
ತ್ತೊಮ್ಮೆ ಕಱುಕಱುಗಳನು ಕಾದಿಸುತೊಮ್ಮೆ ಮಾಣಿಸುತ
ಒಮ್ಮೆ ಕೋಗಿಲೆಯಂತೆ ಪಾಡು
ತ್ತೊಮ್ಮೆ ಕಪ್ಪೆಗಳಂತೆ ಒಱಲು
ತ್ತೊಮ್ಮೆ ಕಪಿಚೇಷ್ಟೆಗಳನನುಕರಿಸುತ್ತಲಿಹರೊಮ್ಮೆ ೨೬

ಒಂದು ದಿನ ಕಱುಗಾಹಿಗಳ ವಿಧ
ದಿಂದ ಗೆಳೆಯರು ಸಹಿತ ಪರಮಾ
ನಂದ ಮೂರ್ತಿಗಳಾಡುತಿರೆ ಕಱುಗಳನು ಕಾವುತ್ತ
ಬಂದನಲ್ಲಿಗೆ ಕಂಸನಾಜ್ಞೆಯ
ಲಂದು ದುರ್ಮತಿ ದೈತ್ಯನೊಬ್ಬನು
ಕೊಂದು ಬಲ ಕೃಷ್ಣರನು ನುಂಗುವೆನೆನುತ ಕಡುಮುನಿದು ೨೭

ಬೆರಸಿದನು ಕಱುಗಳಲಿ ಕಱುಗಳ
ಪರಿಯಲೇ ಮೈಗರೆದು ಸುರ ಕುಲ
ಗಿರಿ ವಿದಾರಣ ವಜ್ರಸನ್ನಿಭ ದೈತ್ಯನೆಯ್ತಂದು
ನಿರುತ ತನ್ನನು ಕೊಲುವ ಭರದಿಂದಿ
ರಲು ಕಾಣುತ್ತಣ್ಣ ದೇವಂ
ಗೊರೆದನಾ ಕಡೆಗಣ್ಣಲೀಕ್ಷಿಸುತಸುರರಿಪು ನಗುತ ೨೮

ಅಯ್ಯ ನೋಡೀಕಱುವಿದೆಂದಿನ
ಮೆಯ್ಯ ಬಣ್ಣಗೆಯಲ್ಲ ತನ್ನನು
ಬೈಯಬೇಡದ್ಭುತವ ತೋರ್ಪೆನು ನೋಡಿ ನೀವೆನುತ
ಮೈಯ್ಯನೊರಸುತ್ತೊರಸುತಸುರನ
ನೊಯ್ಯನೊಯ್ಯನೆ ಚಪ್ಪರಿಸುತಿ
ಕ್ಕೈಯಲಾ ಹಿಂಗಾಲ್ಗಳನು ಹಿಡಿದಿಟ್ಟನಂಬರಕೆ ೨೯

ಹಾಱಿತಸುರನ ಜೀವವೊಡಲನು
ಮಿಱಿ ತಿರುಹಿದಡಭ್ರದಲಿ ಮೈ
ದೋಱಿದನು ಖಳನಂತ್ಯಕಾಲದಲಾತ್ಮವಿದರಂತೆ
ಓರುಗುಡಿಸಿದುದಿಳೆಗೆ ಕಪಿತ್ಥವ
ತೋಱಿ ಬೀಸಾಡಿದರೆ ಮರ ಸಹಿ
ತೂಱಿ ಬಿದ್ದನು ಧರೆಗೆ ದುರ್ಭರ ಭೀಕರಾಂಗದಲಿ ೩೦

ಬಿಡುದಲೆಯ ಬೆಂಡೆದ್ದ ಕಂಗಳ
ಜಡಿವ ನಿಡುದಾಡೆಗಳ ಹುಬ್ಬಿನ
ಕುಡುತೆಗಳ ಕಡುಗಚ್ಚಿದೌಡಿನ ಜರಿವ ತೋಳುಗಳ
ಉಡಿದ ಕಾಲ್ಗಳ ಕಟ್ಟೆಗಳ ಹೇ
ರೊಡಲ ಹೊಲಸಿನ ಹರಿಬವೆಂತುಟೊ
ನಡುಗಿಸಿತು ನಿರ್ಜೀವದಲಿ ಖಳನೊಡಲು ಸುರಕುಲವ ೩೧

ಸುರಿದರಮರರು ಪೂಮಳೆಯನ
ಚ್ಚರಿಯೆನುತ್ತ ವಿಮಾನದಲಿ ಖೇ
ಚರರು ಜಯ ಜಯಯೆನುತ ಕೈವಾರಿಸುತ ಹರಿಗುಣವ
ಹಿರಿದು ವಿಸ್ಮಿತರಾಗಿ ತವತವ
ಗಿರದೆ ಹರಿತಂದಪ್ಪಿದರು ಕೆಳೆ
ಯರು ಸುಬಲ ಮುಖ್ಯರು ಮಝು ಭಾಪೆನುತ ತವಕದಲಿ ೩೨

ಮಡಿದ ದೈತ್ಯನ ಹೇರೊಡಲನಾ
ಮಡುಹಿದಸುರಾಂತಕನನೀಕ್ಷಿಸು
ತಡಿಗಡಿಗೆ ಬೆಱಗಾಗಿ ನರನೋ ಮೇಣು ಸುರವರನೋ
ಜಡೆಯ ಗೊರವನ ಮಾತ ಕೇಳದೆ
ಕೆಡುವೆವೈ ನಾವಕಟೆನುತ್ತೊಡ
ನೊಡನೆ ಬಡಯೋಗಿಯುವೊಲಿದ್ದರು ತಿಳಿವು ಮರವೆಯಲಿ ೩೩

ಮರಳಿ ನಡುಹಗಲಾಯಿತೆನುತ್ತ
ಬ್ಬರದ ಕೊಂಬು ಕೊಳಲ್ಗಳೆಸೆಯಲು
ಹರಿಬಲರು ಸಹಿತಖಿಳ ಗೋಪ ಕುಮಾರರೊಲವಿನಲಿ
ಉರವಣಿಸಿ ಕಱುವಿಂಡುಗಳನೂ
ರ್ಗಿರದೆ ಮರಳಿಚಿ ತಂದರಂದ
ಚ್ಚರಿಯೆನಲು ಹೇಳಿದರು ವತ್ಸಾಸುರ ವಿಭಂಜನವ ೩೪

ಆ ವನದಲಲ್ಲಿದ್ದ ಡೀ ಶಿಶು
ಸಾವನುತ್ಪಾತಂಗಳಹವೆಂ
ದೀವನಕ್ಕೈತಂಡಡೀ ಹದವಾಯ್ತಲಾ ತಮಗೆ
ಓವೊ ವಿಧಿಯೇ ಯೆನುತ ತೀವ್ರ ಮ
ನೋ ವಿಷಾದದಲಪ್ಪಿ ಹರಿಯನು
ಗೋವಳರು ಗೋಪಿಯರು ಮುಳುಗಿದರಶ್ರುಪೂರದಲಿ ೩೫

ಅರಸ ಕೇಳೊಂದು ದಿನ ಮಕ್ಕಳು
ವೆರಸಿ ಕಱುಗಾವುತ್ತ ಭುವನೇ
ಶ್ವರರು ಯಮುನಾ ತೀರವನ ಪಸಲೆಗಳಲಾಡುತ್ತ
ಇರಲು ಬಂದನು ದೈತ್ಯನೊಬ್ಬನು
ಹರಿಬಲರನಾ ಕಂಸನಾಜ್ಞೆಯ
ಲೊರಸಿ ನುಂಗುವೆನೆನುತ ಬಕನೆಂಬವನು ವೈಗರೆದು ೩೬

ತೊಱೆಯ ತಡಿಯಲಿ ಗಿರಿಯವೊಲುಹೆ
ಮ್ಮರನ ಕೊಂಬನಡರ್ದು ವಿಶ್ವಂ
ಭರನನಂತರ್ಭಾವದಲಿ ಭಾವಿಸುತ ಮುನಿಯಂತೆ
ಇರಲು ನೀರಡಿಸಿದವು ಕಱುಗಳು
ಬರಲಿ ನೀರಿಂಗೆನುತ ಹೊಡೆದ
ಬ್ಬರಿಸಿ ಹುಗಿಸಿದರುದಕವನು ಕಱುಗಾಹಿಗಳು ಬಿಡದೆ ೩೭

ಮರಳಿದವು ಕಱುವಿಂಡು ಶಿಶುಗಳು
ಮರಳಿದುವು ನೀರ್ಗುಡಿದು ಬಲಕೃ
ಷ್ಣರು ತೊಳೆದು ಕಾಲ್ಮೊಗವನಾ ಶೀತ ಜಲಾಂತದಲಿ
ಇರಲು ಭೋಂಕನೆ ಹಾಯ್ದು ನುಂಗಿದ
ನುರವಣಿಸಿ ಬಕನಚ್ಚುತನಂ
ಬರದಲಮರರು ಬಾಯಿ ವಿಡಲುದ್ದಂಡ ತುಂಡದಲಿ ೩೮

ದುಷ್ಟ ಖಗ ನುಂಗಿತ್ತು ಕೃಷ್ಣನ
ಕೆಟ್ಟೆವೇವೆವೆನುತ್ತ ಧರೆಯಲಿ
ಥಟ್ಟುಗೆಡೆದರು ಮೂರ್ಛೆಯಲಿ ಗೋಪಾಲ ಬಾಲಕರು
ಹೊಟ್ಟೆಯನು ಹುಗದವನ ಗಂಟಲ
ಸುಟ್ಟಡಾಯೆಂದೊದಱಿ ಹರಿಯನು
ತೊಟ್ಟನುಗುಳ್ದನು ಬಿದಿರಿ ಖಳ ತುಂಡವನು ಹಾಯೆನುತ ೩೯

ಕೊಂದು ನುಂಗುವೆನೆನುತ ತನ್ನಯ
ಮುಂದೆ ನಿಂತಿದ್ದಚ್ಯುತನನಾ
ಮುಂದನುತಿ ಸಿಡಿಲಂತೆ ಮುತ್ತಿಱಿಗಿದರೆ ತುಂಡದಲಿ
ಇಂದಿನಲಿ ಸುರರಳಲ ತೀರ್ಚುವೆ
ನೆಂದು ದೈತ್ಯಾರಾತಿ ಲೀಲೆಯ
ಲಂದು ಹಿಡಿದನು ಖಳನ ತುಂಡವನೆರಡು ಕೈಗಳಲಿ ೪೦

ಅಸುರನಾಸ್ಯವನೆರಡು ಕೈಯಲಿ
ಹಸಿಯ ಹುಲ್ಲನು ಸೀಳುವಂತಾ
ಗಸದಲಮರರು ಭಾಪೆನಲು ಸೀಳಿದನು ಮೇದಿನಿಗೆ
ಅಸುರರಿಪು ಬೀಸಾಡೆ ದೈತ್ಯನ
ಹೊಸದು ಹೋಳ್ಗಳನೆರಡನಿತ್ತಲು
ಕುಸುಮ ದೃಷ್ಟಿಗಳಿಳಿದವಚ್ಯುತಗುತ್ತಮಾಂಗದಲಿ ೪೧

ಪ್ರಾಣ ಬರಲಿಂದ್ರಿಯಗಳಂತಿರೆ
ಕಾಣುತವೆ ಕಮಲಾಕ್ಷನನು ಸ
ಪ್ರಾಣಿಸುತ ಗೋವಳರು ಬಂದಪ್ಪಿದರು ಹರುಷದಲಿ
ಮಾಣದಮರರು ಕಱೆವ ಪುಷ್ಪ
ಶ್ರೇಣಿಗಳ ಗಂಧರ್ವ ಕಿನ್ನರ
ಗಾನಗೀತವ ಕೇಳಿ ವಿಸ್ಮಿತರಾದರಡಿಗಡಿಗೆ ೪೨

ಹೇಳಿದರು ಗೋಕುಲಕೆ ಬಂದಾ
ಬಾಲಕರು ಬಕಭಂಜನದ ಹರಿ
ಲೀಲೆಯನು ಸುರಸಿದ್ಧ ಕಿನ್ನರ ಗೀತದುತ್ಸವವ
ಕೇಳಿದಾಗಳೆ ನೆರೆದುದಾ ಸ್ತ್ರೀ
ಬಾಲ ವೃದ್ಧರು ಸಹಿತ ಗೋಪರ
ಜಾಲ ಜಾತಮನೋನುರಾಗದಲಪ್ಪಿದರು ಹರಿಯ ೪೩

ಸತ್ತು ಬದುಕಿದನಕಟಕಟ ಬಲು
ಮೃತ್ಯುಗಳ ಮುಖದಿಂದ ಶಿಶುಗಳ
ಕೌಸ್ತುಭನು ಕೃತಪುಣ್ಯರೋನಾವಾವ ಭವಭವದ
ಮೃತ್ಯುಮೃತ್ಯುವೆ ಮಗನೆನಿಸಿ ಸಂ
ವೃತ್ತನಾದನೊ ಭಾಪು ಭಾಗ್ಯವೆ
ಹೆತ್ತವರು ದೈವಜ್ಞರೆಂದುದು ಸಕಲ ಗೋಪಜನ ೪೪

ಮುನ್ನ ಪರರಿಗೆ ಪೀಡೆಯನು ಸಂ
ಪನ್ನಮತಿ ತಾ ಮಾಡದದಱಿಂ
ದುನ್ನತಾಮಳಕೀರ್ತಿ ಬದುಕಿಯೆ ಬಂದನೆಡರ್ಗಳಲಿ
ಅನ್ಯರಿಂಗಹಿತವನು ಬಗೆದೇ
ಬನ್ನಬಡುವುದು ಲೋಕವೆನುತು
ತ್ಪನ್ನಮತಿಗಳು ಹೊಗಳುತಿದ್ದರು ಕೃಷ್ಣನುರುಗುಣವ ೪೫

ಸಾಧು ಸಜ್ಜನರಿಂಗೆ ಮಾಡಿ ವಿ
ರೋಧವನು ಬದುಕುವರೆ ದುರ್ಜನ
ರೀಧರಿತ್ರಿಯಲಕಟ ಕಂಡೆವಲ್ಲೈ ದುರಾತ್ಮಕನು
ಬಾಧಿಸಲು ಬಂದೆಮ್ಮ ವಂಶ ಯ
ಶೋಧರನನೀ ಕೃಷ್ಣನನು ದೈ
ತ್ಯಾಧಮರು ನೆಱೆ ತಾವೆ ಕೆಟ್ಟರು ತಮ್ಮ ಪಾಪದಲಿ ೪೬

ಗರ್ಗಮುಹಋಷಿಯೆಂದ ಮಾತುಗ
ಳೊಗ್ಗಿದುವು ಮಝುಭಾಪು ಬಹು ವಿಧ
ದುರ್ಗಮವ ನೀವ್ಕಳಿವಿರೀತನ ದೆಸೆಯಲೆಂದೆಂಬ
ಮುಗ್ಗಿದವು ದಂದುಗಂಗಳುರಿಯಲಿ
ಮುಗ್ಗುವಂತಿರೆ ದಾನವರು ಹಲ
ರ‍್ಗಗ್ಗಳೆಯನಹನವನಿ ಸುರವರವೆಂದನಾ ನಂದ ೪೭

ಎನುತ ಹರಿಮಹಿಮೆಯನು ವರ್ಣಿಸು
ತನವರತ ಭಾವಿಸುತ ನೋಡು
ತ್ತನುಪಮನ ಮೂರ್ತಿಯನು ಕೀರ್ತಿಯನೊಲಿದು ಕೇಳುತ್ತ
ತನುವ ಮಱೆದರು ಗೋಪ ಗೋಪೀ
ಜನರು ಪರಮಾನಂದದಲಿ ಮು
ನ್ನೆನಿತು ಜನ್ಮದ ಸುಕೃತಿಗಳೊ ನಿತ್ಯಾತ್ಮಬಾಂಧವರು ೪೮

ಹನ್ನೊಂದನೆಯ ಸಂಧಿ ಮುಗಿಯಿತು.

# ಹನ್ನೆರಡನೆಯ ಸಂಧಿ

ಸುರವರಾರ್ಚಿತ ಚರಣನರ್ಭಕ
ಚರಿತಲಂಪಟನಖಿಳಮುನಿ ಹೃ
ತ್ಸರಸಿರುಹ ಸಂಚಿಂತ್ಯನಪಹರಿಸಿದನಘಾಸುರನ

ಒಂದು ದಿನ ವನಭೋಜನಕೆ ಮನ
ಬಂದು ಕೊಂಬು ಕೊಳಲ್ಗಳನು ಗೋ
ವಿಂದರಾಮರು ಕೊಂಡು ಗೋಪಕುಮಾರಕರು ಸಹಿತ
ಎಂದಿನಂತಿರೆ ಕಱುಗಳನು ಮುದ
ದಿಂದ ಹೊಱವಡಿಸುತ್ತ ಗೋಕುಲ
ದಿಂದ ಹೊಱವಂಟರು ಮಹೋತ್ಸವವೆಸೆಯಲನುಪಮರು ೧

ಒಡಲ ಕಾಂತಿಯಲೊಪ್ಪುತಿಹ ಹೊಂ
ದೊಡಿಗೆಗಳ ನವರತ್ನನಿಕರದ
ಬಡನಡುವಿಗಳವಟ್ಟ ಕಿಱುಪೊಂಬಟ್ಟೆಯುಡಿಗೆಗಳ
ಜಡಿವ ಹೊಂಗಿಱುಗೆಜ್ಜೆಯಂದುಗೆ
ತೊಡಱುಗಳ ಸೆಳೆಗೊಂಬು ಕೊಳಲ್ಗಳ
ಗಡಣದಲಿ ಹೊಱವಂಟರೊಪ್ಪಿರೆ ರಾಮಕೇಶವರು ೨

ಕೇಳುತವೆ ಹರಿಬಲರ ಸನ್ನೆಯ
ಸೂಳುಗಾಳೆಯ ದನಿಯನಾ,ಗೋ
ಪಾಲಬಾಲವ್ರಾತ ಹೊಱವಂಟುದು ತತುಕ್ಷಣಕೆ
ಕೊಳ ಕಲ್ಲಿಯ ಕೊಂಬು ಕೊಳಲಿನ
ಮೇಳವದ ಮೈ ಸಿಂಗರದ ರ
ತ್ನಾಳಿಗಳ ಗುಂಜಾಭರಣ ಕಿಱುಗೆಜ್ಜೆಗಳು ಮೆಱೆಯೆ ೩

ಗೊಂದಣದ ಕಱುವಿಂಡು ನಡೆಯಲು
ಮುಂದೆ ಶತಸಾವಿರದ ಸಂಖ್ಯೆಯ
ಲಂದು ತಮತಮಗೆಲ್ಲರಾ ಹರಿಬಲರ ಕಱುಗಳಲಿ
ಒಂದುಗೂಡಿ ನಗುತ್ತ ಬಾಲರ
ವೃಂದ ನಡೆದುದು ವಿವಿಧ ಲೀಲೆಗ
ಳಿಂದ ನೋಳ್ಪರ ಕಂಗಳಿಗೆ ಕೌತುಕವ ಬೀಱುತ್ತ ೪

ಹೊಕ್ಕರಾ ವೃಂದಾವನವ ಕೈ
ಮಿಕ್ಕರೋರೊರ್ವರನು ದೆಸೆಗಳ
ನೊಕ್ಕಲಿಕ್ಕಿದರೊಲಿದು ಲೀಲೆಯಲಾಡಿ ಮಾತಾಡಿ
ಜಕ್ಕುಲಿಸಿದರು ಜಗದ ಕಂಗಳ
ಗಕ್ಕಜವನೇ ಮಾಡಿ ಗೋಪರ
ಮಕ್ಕಳಾಮುನಿವಂದ್ಯನಂಘ್ರಿಯ ಬಲುಹನಾಶ್ರಯಿಸಿ ೫

ಕೆಲರ ಕೊಂಬುಕೊಳಲ್ಗಳನು ಕೆಲ
ಕೆಲರು ಕದ್ದೋಡುತ್ತ ಕಂಡರೆ
ಘಳಿಲನೀಡಾಡುತ್ತ ಮತ್ತಲ್ಲಿಂದ ಕೆಲಕೆಲರು
ಕಳೆದುಕೊಂಡೋಡುತ್ತ ಮತ್ತದ
ನೊಲಿದು ಬೀಸಾಡುತ್ತ ಕೈಗಳಿ
ಗಳವಡದೆ ತೊಳಲುತ್ತಲಿದ್ದರು ಕೂಡೆ ವನದೊಳಗೆ ೬

ದೃಷ್ಟಿಗೋಚರನಂದದಲಿ ಯಾ
ಸೃಷ್ಟಿ ಪಾಲಕನೊಡೆಯನಿರೆ ಕೈ
ದಟ್ಟಿ ಕಲಿಗಳು ತನ್ನೊಳಗೆ ನಾ ಮುನ್ನ ತಾಮುನ್ನ
ಮುಟ್ಟಿದೆವೆನುತ್ತೈದಿ ಹರಿಯನು
ಮುಟ್ಟುವರು ಹರಿಹರಿದು ಶಿವಶಿವ
ಮುಟ್ಟಲಱಿಯವು ಮುನಿಮನಂಗಳು ಭೂಪ ಕೇಳೆಂದ ೭

ಕೆಲರು ಕೊಳಲನು ಬಾಱಿಸುತ ಕೆಲ
ಕೆಲರು ಕೊಂಬನು ಮೊಳಗಿಸುತ
ಕೆಲರು ತುಂಬಿಗಳೊಡನೆ ಪಾಡುತ ಕೋಗಿಲೆಯ ದನಿಯ
ಕೆಲರು ಬಳಿಸಲಿಸುತ್ತ ಹಂಸೆಗ
ಳೊಳು ನಡೆಯ ಕಲಿವುತ್ತ ಹದ್ದಿನ
ನೆಳಲೊಳಗೆ ತೊಳಲುತ್ತಲಿರ್ದರು ಕೂಡೆ ಕೆಲಕೆಲರು ೮

ಕೆಲರು ಕಪಿಗಳ ಬಾಲವನು ಹಿಡಿ
ದೆಳೆದು ಜೋಲುತ್ತವಱೊಡನೆ ಮರ
ಗಳನು ಬಿಡದಡಱುತ್ತ ಕಪ್ಪೆಗಳಂತೆ ಲಂಘಿಸುತ
ಜಲದೊಳಗೆ ಬೀಳುತ್ತಲೇಳು
ತ್ತೆಳಲತೆಯ ಹಿಡಿಹಿಡಿದು ಜೋಲುತ
ಕೆಲರು ಕುಳ್ಳಿರ್ದರು ಬಕಂಗಳವೋಲು ಮೋನದಲಿ ೯

ಕೆಲರು ನವಿಲುಗಳೊಡನೆ ಪೆಕ್ಕಣ
ಗಳನು ನಲಿದಾಡುತ್ತ ಮತ್ತಾ
ಕೆಲರು ಹುಲ್ಲೆಗಳೊಡನೆ ಹರಿಹರಿದು ಹಾರುತ್ತ
ಕೆಲರು ಮಾರ್ದನಿಯೊಡನೆ ಬೈ ಬೈ
ದಲಸಿ ಮುನಿದೇಡಿಸುತ ನಿರ್ಭಯ
ರೊಲಿದು ಲೀಲೆಯಲಾಡುತಿದ್ದರು ಗೋಪ ನಂದನರು ೧೦

ತೀದು ಮುಟ್ಟಿಯನಿಡುತ ನೊಸಲಲಿ
ಚ್ಛಾದನಿಡುವರು ಬೆನಕನೆಂದೊಲಿ
ದಾದರಿಸುವರು ಮಳಲ ಮುದ್ದೆಯ ಮಾಡಿ ಕೆಲ ಕೆಲರು
ಬೂದಿಯನು ಹಣೆತುಂಬ ತೊಡೆದಾ
ರಾಧ್ಯರೆಂಬರು ಭಕ್ತರವರೆಂ
ದಾದರಿಸಿ ಪೊಡೆವಡುತಲಿರ್ದರು ಮತ್ತೆ ಕೆಲಕೆಲರು ೧೧

ಕೆಲರು ಕರ್ಣಾಭರಣ ಕಂಕಣ
ಗಳನು ಭಾರವಿದೆಂದು ಬಿಸುಟಿಳೆ
ದಳಿರುಗಳನೊಳು ಹೂಗಳನು ಮಂಡೆಗಳಲಿಂಡೆಗಳ
ತಳಿದು ಧರಿಸುವರಮಳ ರತ್ನಾ
ವಳಿಯೊಡನೆ ಗುರುಗುಂಜಿ ಕಾಯ್ಪ
ಣ್ಗಳನು ಭೂಷಣ ಮಾಳ್ಪರಚ್ಚರಿಯೆನಲು ಕೆಲಕೆಲರು ೧೨

ತೆಂಗುಗಳನಡಱುತ್ತ ಬಾಳೆಯ
ಹಣ್ಗೊನೆಗೆ ನಿಲುಕುತ್ತ ಖರ್ಜೂ
ರಂಗಳನು ತಿಱುವುತ್ತ ಬಹಳ ದ್ರಾಕ್ಷೆಗಳ ವನವ
ವಂಗಡದಲೆಯ್ದುತ್ತ ಫಲ ಪು
ಷ್ಪಂಗಳನು ಕೊಯ್ಯುತ್ತ ನಾನಾ
ಭಂಗಿಗಳಲಾಡುತ್ತಲಿದ್ದರು ನಿಜ ವಿನೋದದಲಿ ೧೩

ಇಂತೊಲಿದು ಸಾಕ್ಷಾತು ಲಕ್ಷ್ಮೀ
ಕಾಂತನೊಡನಾಡಿಗಳೆನಿಸಿ ನಿ
ಶ್ಚಿಂತೆಯಿಂದಾಡುತ ನಿರಂತರ ಖೇಳ ಮೇಳದಲಿ
ಎಂತುಟೋ ಗೋಪಾರ್ಭಕರ ಜ
ನ್ಮಾಂತರಾರ್ಜಿತ ಸುಕೃತ ಶಿವಶಿವ
ಚಿಂತಿಸುವ ಮುನಿ ಮನುಗಳಱಿಯರದಾವನಂಘ್ರಿಗಳ ೧೪

ಹಲವು ಜನ್ಮಾಂತರದ ಯೋಗಾ
ವಳಿಗಳಿಂದಾವನ ಪದಾಬ್ಜವ
ನೊಲಿಸಲಱಿಯರು ಯೋಗಸಿದ್ಧರೆನಿಪ್ಪ ಯೋಗಿಗಳು
ಒಲಿದು ವೇದ ಪುರಾಣತತಿ ಪಡಿ
ಸಲಿಸಿ ನೆಲೆಗಾಣಿಸಲು ಸುಕೃತದ
ಬೆಳೆಸಿರಿಯ ಸೌಭಾಗ್ಯವೆಂತುಟೊ ಗೋಪ ನಂದನರ ೧೫

ಬಂದನಲ್ಲಿಗೆ ದೈತ್ಯನೊಬ್ಬನ
ಮಂದ ಭುಜಬಲ ಜಿತ ಸುರಾಸುರ
ವೃಂದನಗ್ಗದ ಕಂಸ ಭೃತ್ಯನಘಾಖ್ಯನಾ ವನಕೆ
ಸಂದ ಪೂತನಿ ಬಕರೆನಿಪ್ಪವ
ರಿಂದ ಕಿಱಿಯನುದಾರ ವಿಕ್ರಮ
ನಿಂದು ಬಾಲಕರಾಟವನು ಮಾಣಿಸುವೆನೆಂದೆನುತ ೧೬

ಇವನೆ ತನ್ನೊಡಹುಟ್ಟಿದರ ಕೊಂ
ದವನಕಟಕಟ ಸತ್ತರೇ ತ
ನ್ನವರು ವಾಯಕ್ಕೀ ಹಸುಳೆ ಕೊಂದುದು ವಿಚಿತ್ರವಲ
ಜವನ ಜಕ್ಕುಲಿಸುವ ಬಲಾಢ್ಯರಿ
ಗಿವನ ಕೈಯಲಿ ಸಾವು ದಿಟ ಸಂ
ಭವಿಸಿತೆಂಬೀ ಮಾತು ಧರೆಯಲಿ ಹರೆದುದೆಂತೆಂದ ೧೭

ಕೊಲಲಿ ಮಾಣಲಿ ಮಾತು ಹರೆದುದು
ಕೆಲ ನಗುವುದೆನ್ನೊಡೆಯನಾಜ್ಞೆಯ
ಸಲಿಸದೀ ಶಿಶುಗಳನು ಕರುಣಿಸಿ ಬಿಟ್ಟರೆನ್ನವರ
ಕೊಲೆಯ ಮಾತಿನ ಹರಿಬವನು ತಾ
ಕಳೆವೆನಿಬ್ಬರ ಬಳಿಯಲೀ ಗೋ
ಕುಲವನೀ ಶಿಶುಸಹಿತ ಕಳುಹುವೆನೆನುತ ಖತಿಗೊಂಡ ೧೮

ಅಂದೆ ಸತ್ತವರಿವರು ತಾ ಮು
ನ್ನಂದು ತನ್ನವರಿಗೆ ತಿಲೋದಕ
ದಿಂದ ಮಾಡಿದೆ ನೌರ್ಧ್ವ ದೈಹಿಕನು ಮೃತಾತ್ಮರಿಗೆ
ಇಂದು ಪರಿಯಂತೆನ್ನುಪೇಕ್ಷೆಗೆ
ಸಂದು ಬದುಕಿದರೆನುತವಜಗರ
ದಂದವನು ಕೈಕೊಂಡು ಬಿದ್ದನು ಬಟ್ಟೆಗಿದಿರಾಗಿ ೧೯

ದೇವರಿಪು ಮುಮ್ಮಾರ್ಗದಲಿ ಹೆ
ಬ್ಬಾವಿನಾಕೃತಿಯಾಗಿ ಯೊಂದರೆ
ಗಾವುದಗಲಕೆ ಹರಹಿದನು ಭೀಕರವೆನಿಪ್ಪೊಡಲ
ಓವೊ ಖಳನಾ ಕಱುಗಳನು ಕಱು
ಗಾವವರನಾ ರಾಮಕೃಷ್ಣರ
ನೋವದೊಮ್ಮೆಯೆ ನುಂಗುವಭಿಲಾಷೆಯಲಿ ನಿಂದಿರ್ದ ೨೦

ಒಂದು ತುಟಿಯನು ಧರೆಗೆ ಹಾಸಿದ
ನೊಂದನಂಬರತಳಕೆ ನೆಗಹಿದ
ನಂದು ಭೀಕರವದನ ಕುಹರಾವರ್ತದಲಿ ಗಿರಿಯ
ಕಂದರವನೇಡಿಸುತ ಸುರನರ
ವೃಂದಸಹಿತೀ ಜಗವನೊಳಕೊಂ
ಬಂದದಲಿ ದೈತ್ಯೇಂದ್ರನಿದ್ದನು ಬಟ್ಟೆಗಿದಿರಾಗಿ ೨೧

ಇರಲು ಗೋಪ ಕುಮಾರಕರು ವನ
ಸಿರಿಯಿದೀಪರಿ ನೋಡು ನೋಡ
ಚ್ಚರಿಯೆನುತ ಖಳನೊಡಲನದನೊಂದೊಂದು ಪರಿಯಲಿರೆ
ಬರೆದರುಪಮಿಸಿ ಕೆಡೆದ ಸರ್ಪನ
ಪರಿಯಲಿರ್ದುದು ಪರ್ವತನ ನೈ
ಸಿರಿಯೆನುತ ನಡೆತಂದರಸುರನ ಬಾಯ ಸಮ್ಮುಖಕೆ ೨೨

ಇತ್ತ ನೋಡಿರೆ ಸಖಿಗಳಿರ ಬಲು
ಮೃತ್ಯು ಬಾಯ್ದೆಱೆದಂತೆ ಗಿರಿಗುಹೆ
ಕತ್ತಲಿಸಿ ನಮ್ಮನಿಬರನು ನೆಱೆ ನುಂಗುವಂದದಲಿ
ಉತ್ತರೋಷ್ಠದವೋಲು ರವಿಕರ
ರಕ್ತಘನವಿದೆ ತತ್ಪ್ರತಿಚ್ಛವಿ
ವೆತ್ತ ತಳವಧರೋಷ್ಠದಂತಿರೆ ಎಂದರರ್ಭಕರು ೧೩

ಮೂಡುವಿಬ್ಬರು ರವಿಗಳೆಡಬಲ
ದಾಡುವಕ್ಷಿಗಳಂತೆ ಹಾವಿನ
ದಾಡೆಗಳವೋಲಿವೆ ಭಯಂಕರವೆನಿಸಿ ಗಿರಿಶೃಂಗ
ಕೋಡುಗಲ್ಲುಗಳೊದವಿದಾಮಿಷ
ತೀಡುತಿದೆ ದುರ್ಗಂಧವನು ತರಿ
ಗೊಂಡ ಮಾಂಸದ ಗವಲಿದೆಂದರು ಗೋಪನಂದನರು ೧೪

ಬಾಲಕರಿರಾ ನೋಡಿ ಬನ್ನಿ ವಿ
ಶಾಲಮಾರ್ಗವಿದಹಿಯ ರಕ್ತದ
ನಾಲಿಗೆಯ ವೋಲಿದೆ ತದಂತಶ್ವಾಸ ವಾಯುವನು
ಹೋಲುತಿದೆ ದಾವಾಗ್ನಿಲುಳಿತ ಕ
ರಾಳ ವದನವೆನುತ್ತ ತದ್ವನ
ಶೈಲ ವೈಭವವೆಂದು ಬಗೆದರು ದೈತ್ಯನಿದ್ದಿರವ ೧೫

ಎಲವೊ ಹೊಗದಿರಿ ಸರ್ಪಮುಖವಿದು
ತೊಲಗಿ ಸಾಯದಿರೆಂಬರದಱೊಳು
ಕೆಲರು ಫಡಫಡ ನುಂಗಿದರೆ ಕೆಡನೇಕೆ ಬಕನಂತೆ
ಮುಳಿದು ಕೊಲ್ಲನೆ ಕೃಷ್ಣನೇತ
ಕ್ಕಳುಕುವಿರಿ ನೂಕೆನುತ ನಿಜಕರ
ತಳರವದಲಬ್ಬರಿಸಿ ಹೊಕ್ಕರು ಮಕ್ಕಳುರವಣಿಸಿ ೧೬

ಎಲೆಲೆ ಹೊಗದಿರಿ ಹೊಗದಿರೆಲೆ ಮ
ಕ್ಕಳಿರ ಮೂಢಾತ್ಮರಿರ ಕಾಣುತ
ಕೊಲಿಸಿ ಕೊಂಬ ದುರಾತ್ಮರಿರ ಕಾಳೋರಗನ ಮುಖವ
ತೊಲಗಿಸಾ ಕಱುಗಳನು ಹೊಡೆಹೊಡೆ
ಕೆಲಕೆನುತ ಹರಿಬಲರು ಹಿಂದಿ
ದ್ದುಲಿಯೆ ಹೊಕ್ಕರು ಕೇಳದಾ ಕಱುವಳರು ಕಱುಸಹಿತ ೧೭

ಹೊಕ್ಕರಂತರ್ಜಠರವನು ಕೈ
ಮಿಕ್ಕರಚ್ಯುತರಾಮರನು ಸಲೆ
ಸಿಕ್ಕಿದುವು ಕಱುವಿಂಡುಗಳು ಖಳನುದರ ಮಧ್ಯದಲಿ
ನಕ್ಕನಸುರನ ಕೃತಿಗೆ ಮಾಡಿದ
ಮಕ್ಕಳಱೆ ಮುಗ್ಧತೆಗೆ ಮಾಡಲು
ತಕ್ಕುದನು ಮನದೊಳಗೆ ನಿಶ್ಚಯಿಸಿದನು ಮುರವೈರಿ ೧೮

ಎಂತು ತಾನೀ ಖಳನ ಜೀವನ
ನಂತಕಂಗಟ್ಟುವೆನು ಸಲಹುವೆ
ನೆಂತು ತಜ್ಜಠರಾಂತರಿತ ಗೋವತ್ಸ ಬಾಲಕರ
ಎಂತು ತನ್ನವರಿಂಗ ಭಯವಹು
ದಂತು ಮಾಳ್ಪುದೆ ಕೃತ್ಯವೆನಗೆಂ
ದಿಂದು ನಿಶ್ಚಯದಿಂದ ಹೊಕ್ಕನು ಕೂಡೆ ಖಳನೊಡಲ ೧೯

ಬಾಯ ಬಿಟ್ಟುದು ಮೇಲೆ ವಿಬುಧ ನಿ
ಕಾಯ ಓಯೆಂದೊಱಲಿ ದೈತ್ಯನ
ಬಾಯ ಹೊಗುವಸುರಾರಿಯನು ಕಂಡಕಟ ಮೃತ್ಯುವಿನ
ಬಾಯೊಳಗೆ ತಾ ಹೊಕ್ಕು ಬದುಕುವು
ಪಾಯವೇನೇನೆನುತ ತಂತ
ಮ್ಮಾಯುಷದ ಹೊಣೆಗಾಱನಳಿವಿಂಗಳಲಿದರು ಕೂಡೆ ೨೦

ದಿವದ ಕೋಲಾಹಳದ ಹಾಹಾ
ರವವನದನಾಲಿಸುತ ಕಂಸಾ
ದ್ಯವನಿಕಂಟಕರುಬ್ಬಿದರು ದಾನವರು ಪುಳಕದಲಿ
ನವಗೆ ಜಯವನು ಮಾಳ್ಪುದಿದು ನ
ಮ್ಮವರ ಕೆಲಸವಿದೆನುತ ಹರುಷಾ
ರ್ಣವದಲೋಲಾಡುತ್ತಲಿರ್ದರು ನಿಮಿಷಮಾತ್ರದಲಿ ೨೧

ಅದನಱಿದು ಸರ್ವಾತ್ಮಕನು ಖಳ
ವದನದಲಿ ತಾ ಸಹಿತ ತನ್ನುದ
ರದ ಸಮಸ್ತರನೊಮ್ಮೆ ಕೊಲುವೆನೆನುತ್ತ ಖಳನಿರಲು
ಸದೆದು ಕೊಂದರೆ ಸಾವರೆನ್ನವ
ರಿದುವೆ ಮಂತ್ರವೆನುತ್ತ ತತ್ಕಂ
ಠದಲಿ ಬೆಳೆದನು ಮನುವಿನಂಜುಳಿಯೊಳಗೆ ಬೆಳೆದಂತೆ ೨೨

ಬೆಳೆದನಸುರಾರಾತಿ ದೈತ್ಯನ
ಗಳದೊಳಗೆ ಗಳರೋಗದಂತು
ಚ್ಚಳಿಸಲಾಱದೆ ಪವನನುಬ್ಬಸವೆತ್ತುವಂದದಲಿ
ಬಳಲಿದನು ಬಾಯ್ದೆಱೆದು ಬಸುಱ
ಕ್ಕುಳಿಸಿ ಯುಗುಳಲು ನುಂಗಲಾಱದೆ
ತಳಪಟವ ಮಾಡಿದನು ತದ್ವಿಪಿನಾಂತರವನಸುರ ೨೩

ಶ್ವಾಸರೋಧದಲಸುರನಸು ಹೊಱ
ಬೀಸಿದುದು ನೆತ್ತಿಯಲಿ ಗಗನಕೆ
ಭಾಸುರ ಪ್ರಭೆಯಿಂದ ಬೆಳಗುತ ಸೂರ್ಯಕೋಟಿಗಳ
ಘಾಸಿಗೊಳಿಸಿದನೇನನೆಂಬೆನು
ವಾಸುದೇವನ ಬರವ ಹಾರುತ
ದೇಶಿಗನವೋಲಿರ್ದುದಭ್ರದಲಪ್ರತಿಷ್ಠೆಯಲಿ ೨೪

ಇತ್ತಲಸುರಾರಾತಿ ಖಳನೊಡ
ಲತ್ತಲಸು ಹೋಗಿರ್ದ ಶಿಶುಗಳ
ಮೊತ್ತವನು ತಱುಗಳನು ನೆಱೆ ಕಾರುಣ್ಯದಲಿ ನೋಡಿ
ಎತ್ತಿ ಮಗುಳವರೊಡನೆ ಕಱುಗಾ
ವುತ್ತ ಗೋಕುಲದಿಂದ ಕೊಳಲೂ
ದುತ್ತ ಹೊಱವಡುವಂತೆ ಹೊಱವಂಟನು ವಿನೋದದಲಿ ೩೫

ಆ ತತುಕ್ಷಣವಾ ಅಘಾತ್ಮ
ಜ್ಯೋತಿ ಬೆಳಬೆಳಗುತ್ತ ಭುವನ
ವ್ರಾತವನು ಕರ್ಮಾವಸಾನದಲಾತ್ಮವಿದರಂತೆ
ಭೂತಳೇಶ ಮುಕುಂದನಲಿ ಜನ
ಜಾತವೀಕ್ಷಿಸುತಿರಲು ಬೆರಸಿದು
ದೇತರತಿಶಯ ಪುಣ್ಯವಂತನೊ ಎಂದುದಮರಗಣ ೩೬

ಜನಪ ಕೇಳಾವನ ಪದಾಬ್ಜವ
ಮನದೊಳಗೆ ಮಱೆದೊಮ್ಮೆ ಭಾವಿಸಿ
ನೆನೆಯಬಲ್ಲರೆ ತನ್ನನೀವನೆನಲ್ಕೆ ತಾ ಬಂದು
ದನುಜನೊಳಗಿರಲಂತ್ಯಕಾಲದ
ಲೆನಿತು ಸುಲಭವೊ ಮುಕುತಿ ತತ್ಪದ
ವನಜಸಂಗಪವಿತ್ರನಾದಂಗೆಂದನಾ ಮುನಿಪ ೩೭

ಹೂಮಳೆಗಳೋರಣದಲಿಳಿದವು
ದೇವದೇವನ ಶಿರದಲೊಪ್ಪಿರೆ
ದೇವಿಯರು ಪಾಡಿದರು ಪೆಕ್ಕಣವೆಸೆಯಲಭ್ರದಲಿ
ದೇವರಿಪುವಿನ ಮರಣವಿತ್ತುದು
ಜೀವವನು ದಿವಿಜರಿಗೆ ನರರಿಂ
ಗಾವ ಘನವಿಕ್ರಮ ವಿಶಿಷ್ಟನೊ ದೈತ್ಯನವನೆಂದ ೩೮

ಅರಸ ಕೇಳಭ್ರದಲಿ ನೆರೆದುದು
ಗರುಡ ಕಿನ್ನರ ಸಿದ್ಧ ವಿದ್ಯಾ
ಧರ ಮಹೋರಗ ಯಕ್ಷ ಗಂಧರ್ವರ ವಿಮಾನಚಯ
ಭರಿತವಾದುದು ಸನ್ನುತಸ್ತುತಿನಿಜ
ಚರಿತಗೀತಸುವಾದ್ಯರವ ವಿ
ಸ್ತರ ವಿಭಾಡಿಸಿತಬುಜಜಾಂಡ ಕಟಾಹ ಮಂಡಲವ ೩೯

ಕೇಳಿದೇನಚ್ಚರಿಯೆನುತ್ತ ಮ
ರಾಳವಾಹನನಿಳಿದನಾ ಮುನಿ
ಜಾಲ ನಾರದ ಕಪಿಲಸನಕಸನಂದನರು ಸಹಿತ
ಬಾಲ ಭಾವದ ಪರಮ ಪುರುಷನ
ಲೀಲೆಯನು ನೋಡುತ್ತ ಬೆಱಗಿನ
ಲಾಳುತೇಳುತ್ತಿರ್ದನಭ್ರದಲಖಿಳ ಜನ ಹೊಗಳೆ ೪೦

ಭಾಪು ವೇದ ಪುರಾಣ ಶಾಸ್ತ್ರ ಕ
ಳಾಪವೈದದಪಾರ ಮಹಿಮನೆ
ಭಾಪು ತನ್ನರ್ಥಿಗೆ ಗೃಹೀತ ಮನುಷ್ಯವಿಗ್ರಹನೆ
ಭಾಪು ಕಾರುಣ್ಯಾಬ್ಧಿಯೇ ನಿ
ರ್ಲೇಪ ನಿತ್ಯ ನಿಜಸ್ವರೂಪನೆ
ಭಾಪು ಭುವನಾಧೀಶ್ವರನೆಯೆನುತಿರ್ದನಬುಜಭವ ೪೧

ಇಂತಘಾಸುರ ಮೋಕ್ಷವನು ಸುರ
ಸಂತತಿಗಳೀಕ್ಷಿಸಲು ಕರುಣಿಸಿ
ಕಂತುಪಿತನರ್ಭಕರೊಡನೆ ನಿಜಲೀಲೆಗಳಲೊಲಿದು
ಸಂತಸವನೀವುತ್ತ ತನ್ನೇ
ಕಾಂತ ಭಕ್ತಜನಕ್ಕೆ ಲಕ್ಷ್ಮೀ
ಕಾಂತ ನಿತ್ಯಾತುಮನು ಮೆಱೆದನುದಾರ ಮಹಿಮೆಗಳ ೪೨

ಹನ್ನೆರಡನೆಯ ಸಂಧಿ ಮುಗಿಯಿತು.

# ಹದಿಮೂರನೆಯ ಸಂಧಿ

ಕಮಲಭವನಂದಾತ್ಮ ಮಾಯೆಯ
ನಮಿತ ಮಾಯಾಧೀಶನಲಿ ನಿ
ರ್ಗಮಿಸಲಱಿಯದೆ ತನ್ನ ಮಾಯೆಗೆ ತಾನೆ ಗುಱಿಯಾದ

ಅರಸ ಕೇಳಘನಸುವನಂಗೀ
ಕರಿಸಿ ಕಱು ಕಱುಗಾಹಿಗಳನತಿ
ಕರುಣದಲಿ ಕೈಗಾಯ್ದು ನಯನಾಪಾಂಗದಲಿ ನೋಡಿ
ಸುರನಿಕರವಭ್ರದಲಿ ನಿಜಗುಣ
ಚರಿತವನು ಪಾಡುತ್ತ ಹೊಗಳು
ತ್ತಿರಲು ಯಮುನಾ ಪುಳಿನದೆಡೆಗೈತಂದನಸುರಾರಿ ೧

ಎಂದನಾ ಕೆಳೆಯರಿಗೆ ನೋಡಿರೆ
ತಂದೆಗಳಿರೀ ಪುಳಿನಲಕ್ಷ್ಮಿಯ
ನಂದವಡೆದಿದೆ ಕಣು ಮನಂಗಳಿಗಧಿಕ ಸೇವ್ಯವಲೆ
ಮಂದ ಮಾರುತ ವೀಜಿತದ್ರುಮ
ವೃಂದ ಸುಮನೋನಿಕರ ಪರಿಮಳ
ದಿಂದ ದೆಸೆ ಕಂಪಿಡುವ ವನವೈಭವನಿದೇ ಎಂದ ೨

ಫಲಿತ ವನವನು ತುಱುಗಿ ತೂಳುವ
ಗಿಳಿಗಳಲಿ ಪೂತೆಸೆವ ವನಕ
ಪ್ಪಳಿಪಳಿವ್ರಾತದಲಿ ಚೂತಪ್ರಸವ ನಿಕರದಲಿ
ಸುಳಿವ ಕೋಗಿಲೆವಿಂಡುಗಳೆಳ
ಗುಳಿಗೊಳುತ್ತಿದೆ ನಮ್ಮ ಕಣುಮನ
ಗಳನು ನೋಡಿರೆ ಪುಳಿನವನ ವಿಭವವನು ನೀವೆಂದ ೩

ಕೆಳೆಯರಿರ ಕಂಗಳಿಗೆ ಹಬ್ಬವ
ನೊಲುವಡಿದೆ ನೋಡಿತ್ತ ತಾವರೆ
ಗೊಳದಲಾಡುವ ರಾಜಹಂಸಾವಳಿಯ ಕಳಗತಿಯ
ಮೆಲು ಮಳಲ ಮೌಕ್ತಿಕದ ಕಾಂತಿಯ
ಕಳೆವ ಪುಳಿನಶ್ರೀಯನೀ ಶೀ
ತಳ ತರುಚ್ಛಾಯೆಯನಶೋಕಾವನದ ವೈಭವವ ೪

ಹೇಳಲೇನಿದು ನಮಗೆ ಭೋಜನ
ಲೀಲೆಗುಚಿತ ಸ್ಥಾನವಿದು ಸುವಿ
ಶಾಲವತಿ ರಮಣೀಯವೀ ವನಭೂಮಿಯೊಳಗೆಲ್ಲ
ಬಾಲರಿರ ಹಗಲಾಯ್ತು ಹಸಿದಿರಿ
ಸಾಲದೇ ನಿಮಗಾಟ ಕಱುಗಳ
ಜಾಲವನು ನೀರೂಡಿ ನಿಲಿಸಿ ಎನುತ್ತ ನೇವಿಸಿದ ೫

ಎನಲು ಗೋಪಕುಮಾರಕರು ತನ
ತನಗೆ ಲೇಸೆಂದೆನುತ ಕಱುಗಳ
ನನಿತುವನು ನೀರ್ಗುಡಿಸಿ ನಿಲಿಸಿದರೆಸೆವ ನೆಳಲೊಳಗೆ
ಅನಿಬರಾ ವೊಂದೆಡೆಯಲೊಪ್ಪಿರೆ
ಮನವೊಲಿದು ಕುಳ್ಳಿರ್ದರಭ್ಯಾ
ನನರು ಕಲಸೋಗರದ ಕಲ್ಲಿಗಳೆಸೆಯೆ ಥರಥರಕೆ ೬

ಬಿಟ್ಟು ಕಲ್ಲಿಗಳನಿತುಮನು ಮುಂ
ದಿಟ್ಟು ಕಂಬಳಿಗಳಲಿ ಮಂಡಿಸಿ
ಪಟ್ಟೆಗಳಲೆಲೆಗಳಲಿ ಪಲ್ಲವಪುಷ್ಪ ಫಲಗಳಲಿ
ಇಟ್ಟು ಕಲಸೋಗರವನಸುರಘು
ರಟ್ಟನಭಿಮುಖಕನಿಬರತಿ ಸಂ
ಹೃಷ್ಟವದನರು ಬಾಲಕರು ಕುಳ್ಳಿರ್ದರೊಪ್ಪದಲಿ ೭

ಎಸಳುಗಳವೋಲಾಕುಮಾರರ
ವಿಸರ ಮಧ್ಯದ ಕರ್ಣಿಕೆಯ ವೋ
ಲಸುರರಿಪು ಭೋಜನದ ಮಂಡಲ ಕಮಲದಂತಿರಲು
ನಸುನಗೆಯ ಮಧುರೋಕ್ತಿಮಧುರಸ
ವೊಸರೆ ನೋಳ್ಪರ ಕಂಗಳಳಿಕುಲ
ವಿಸರದಂತಿರೆ ಮೆಱೆದುದೊಪ್ಪಿರೆ ವನದ ಮಧ್ಯದಲಿ ೮

ಅನಿಬರಿಗೆ ಹರಿ ವಿಶ್ವತೋಮುಖ
ನೆನಿಸಿ ಭೋಜನಮಂಡಲದ ನಡು
ವನಿಬರಭಿಮುಖನೆನಿಸಿ ತನ್ನಿಕಟಸ್ಥನೆಂದೆನಿಸಿ
ಅನಿಮಿಷರು ಭಾಪೆನಲು ಕರುಣಾ
ವನಧಿ ಭಕ್ತಾಧೀನಲೀಲೆಯ
ನನುಕರಿಸುತುಣುತಿರ್ದನನಿಬರ ಮಧ್ಯದಲಿ ನಲಿದು ೯

ಉಡಿಯ ತೊಂಗಲ ಪೊಂಗೊಳಲ ನಿಱಿ
ವಿಡಿದ ಪೀತಾಂಬರದ ಕಂಕುಳ
ಲಡಸಿದೊಳು ಸೆಳೆಗೊಂಬುಗಳ ಬಲಗೈಯ ತುತ್ತುಗಳ
ಎಡದ ಕೈ ಕಲಸೋಗರದ ಬೆಳ
ಲೆಡೆಗಳುಪ್ಪಿನ ಕಾಯ್ಗಳಲಿ ಜಗ
ದೊಡೆಯನೆಸೆದನು ಭೋಜನದ ಮಂಡಲದ ಮಧ್ಯದಲಿ ೧೦

ನಗುತ ನಗಿಸುತ ಕೆಳೆಯರನು ತು
ತ್ತುಗಳ ಸವಿದೋಱುತ್ತ ಕರುಣಾ
ಳುಗಳರಸನಡಿಗಡಿಗೆ ತಾನವರ ತುತ್ತುಗಳ
ತೆಗೆದು ಸವಿ ನೋಡುತ್ತ ಹಾಸ್ಯೋ
ಕ್ತಿಗಳಲನಿಬರ ಮುಂದೆ ನಿಜ ಲೀ
ಲೆಗಳಲೊಬ್ಬನೆ ವಿಶ್ವತೋಮುಖನಾಗಿ ರಂಜಿಸಿದ ೧೧

ತೋಱಿ ತೋಱಿಯುಣುತ್ತ ಗೋಪಕು
ಮಾರರಿಗೆ ಕೈದುತ್ತುಗಳ ಕೈ
ಯಾರೆ ತಾನೇ ಕೆಲರ ಬಾಯೊಳಗಿಡುತ ನಂಬಿಸುತ
ಚಾರು ನಯನಾಪಾಂಗ ಧಾರಾ
ಸಾರ ಪೀಯೂಷದಲಿ ಲೀಲೋ
ದಾರನಿಧಿ ಮೆಱೆಸುತ್ತಲಿರ್ದನು ಭೋಜನದ ಸವಿಯ ೧೨

ಅಚ್ಚರಿಯೆ ಮಱೆದೊಮ್ಮೆ ಮಹಿಮೆಯ
ನುಚ್ಚರಿಸೆ ಲೀಲಾವತಾರದ
ಸಚ್ಚರಿತ ಪೀಯೂಷವನು ಕರ್ಣಾಂಜಲಿಯಲಾಂತು
ಮೆಚ್ಚಿದವರಿಹಪರದ ಸೌಖ್ಯವ
ನೊಚ್ಚತುಳಿವರೆನಲ್ಕೆ ಸಾಕ್ಷಾ
ತಚ್ಯುತನೆ ಗೋಚರಿಸೆ ಕಂಗಳಿಗಾವುದರಿದೆಂದ ೧೩

ಪ್ರತಿಮೆಗಳಲಾವಾಹಿಸುತ್ತ
ಚ್ಯುತನಿವೇದ್ಯವಿದೆಂದು ನಿರ್ಮಳ
ಮತಿಗಳುಂಡು ಕೃತಾರ್ಥರೆನಿಸುವರೆಂದಡವನಿಯಲಿ
ಕ್ಷಿತಿಪ ಸಾಕ್ಷಾದಚ್ಯುತನ ಮುನಿ
ತತಿ ಮನೋಜ್ಞ ಮುಖಪ್ರಸಾದವ
ನತಿಶಯವನೇನೆಂಬೆನುಂಬರ್ಭಕರ ಧನ್ಯತೆಯ ೧೪

ಇಂತುಣುತ್ತುಣುತರ್ಭಕರು ನಿ
ಶ್ಚಿಂತೆಯಲಿ ಮೈಮಱೆದು ಲಕ್ಷ್ಮೀ
ಕಾಂತನುರು ಲೀಲಾಮೃತಾಸ್ವಾದನದ ಸೌಖ್ಯದಲಿ
ಸಂತವಿರೆ ಕಱುವಿಂಡುಗಳು ವಿಪಿ
ನಾಂತರಕೆ ತೆರಳಿದವು ನೃಪ ಕೇ
ಳಂತರಾಯದವೋಲು ಭೋಜನ ವೈಭವದ ಸಿರಿಯ ೧೫

ಕಾಣದಾ ಕಱುಗಳನು ಬಾಲ
ಶ್ರೇಣಿ ಬೆದಱಿತು ಭೋಜನವನಿದು
ಮಾಣಲೆಂದಿರೆ ಕಂಡು ಹೋಹೋ ಬಾಲಕರಿರೂಟ
ಮಾಣಲಾಗದು ಕಱುಗಳನು ತ
ನ್ನಾಣೆ ನೀವೇಳದಿರಿ ತಂದಪೆ
ನೂಣೆಯವ ಮಾಡದಿರಿಯೆನುತಸುರಾರಿ ಹೊಱವಂಟ ೧೬

ಜನಪ ಕೇಳಱಸುತ್ತ ಕಱುಗಳ
ನನಿತು ಗಿರಿವನ ಕಂದರಂಗಳ
ಲನಿತು ಪುಳಿನಸ್ಥಳಗಳೊಳು ಬಹುಹಳ್ಳಕೊಳ್ಳದೊಳು
ದನುಜಹರನೆಡಗೈಯ ಕಬಳದ
ಕನಕವಸನದ ಪೊಂಗೊಳಲ ಸಂ
ಜನಿತ ಸಹಜಾಕಾರದಲಿ ತೊಳಲಿದನು ಕಾನನವ ೧೭

ಅಱಸಿ ಕಾಣರು ಮುನಿಗಳಾವನ
ನಿಱುಗೆಯನು ವೇದಾಂತಕೋಟಿಗ
ಳೊಱಲಿ ಕಾಣಿಸಲಱಿಯವಾವನ ಪಾವನಾಂಘ್ರಿಗಳ
ಅಱಸುತಿತ್ತಲು ಕಱುಗಳನು ವನ
ದುಱುಗಳೊಳು ಬೆಟ್ಟದೊಳು ಘಟ್ಟದೊ
ಳಿಱುಬುಗಳ ಹೊಗುತಿರ್ದನಾ ಜಗದೀಶ್ವರೇಶ್ವರನು ೧೮

ಆ ಸಮಯದಲಿ ಭೂಪ ಕೇಳಬು
ಜಾಸನನು ಮುನಿನಿಕರ ಸಹಿತಾ
ಕಾಶದಲಿ ನಿಂದಿರ್ದಘಾಸುರ ಮೋಕ್ಷವನು ಕಂಡು
ಲೇಸೆನುತ ತಲೆದೂಗಿ ಮತ್ತೆ ವಿ
ಶೇಷ ಲೀಲೆಯನೆನ್ನ ಮಾಯೆಯ
ಬೀಸಿ ನೋಡುವೆನೆನುತ ನಿಶ್ಚಯಿಸಿದನು ಮನದೊಳಗೆ ೧೯

ಅತ್ತಲಾಡುವ ಕಱುಗಳನು ಮ
ತ್ತಿತ್ತಲುಂಬರ್ಭಕರ ಮಱೆ ಮಾ
ಡುತ್ತ ಕಾಣದವೋಲು ತನ್ನಯ ಮಾಯೆಯನು ಕವಿಸಿ
ಸತ್ಯಲೋಕ ನಿವಾಸಿಗಳು ಸಹಿ
ತತ್ತಲಿರಲಭ್ರದಲಿ ಕಮಲಜ
ನಿತ್ತನಚ್ಯುತನಱಸಿದನು ಕಱುವಿಂಡುಗಳ ಪಥವ ೨೦

ಅಱಸಿ ಕಾಣದೆ ಪುಳಿನದೆಡೆಗೈ
ತರುತ ಭೋಜನಮುಂಡಲದರ್ಭ
ಕರ ಕಾಣದೆ ಕಱುಗಳಱಕೆಗೆ ಹೋದರಕ್ಕೆನುತ
ಅಱಸುತಿತ್ತಂಡವನು ದಿಟ ತಾ
ನಱಿಯದನವೋಲಖಿಳಸಚರಾ
ಚರ ಜಗನ್ಮಯನೆಸೆದನಾ ವೃಂದಾವನ ವನಾಂತದಲಿ ೨೧

ಹೋದವೆತ್ತಲು ಕಱುಗಳಿವರೇ
ನಾದರೋ ಹಾಯೆನುತ ಮನದೊಳ
ಗಾದರಿಸಿ ನಿಜದೃಷ್ಟಿಯಲಿ ಕಂಡಱಿದನಬುಜಜನ
ಭೇದ ಬುದ್ಧಿಗೆ ತನ್ನೊಳಗೆ ತೆಱ
ಹಾದುದೇ ತಪ್ಪೇನೆನುತ್ತಬು
ಜೋದರನು ತಲೆದೂಗುತಘಟಿತಲೀಲೆಯನು ನೆನೆವ ೨೨

ಮಗನ ಹಂಗನು ಕೊಳ್ಳದೀ ಗೋ
ವುಗಳಿಗೀ ಗೋಪರಿಗೆ ನಿಜ ಪದ
ಯುಗಳ ಸಂಪ್ರೀತರಿಗೆ ಸಂತಸ ಮಾಳ್ಪೆನೆಂದೆನುತ
ನಗುತ ತುರು ಕರುಗಾಹಿನವರನು
ನಿಗಮನುತನನುಕರಿಸಿ ಕರುಣಾ
ಳುಗಳರಸ ಮರಳಿದನು ಮಗುಳಾ ನಂದಗೋಕುಲಕೆ ೨೩

ಎನಿತು ತುರು ಕರು ಗಾಹಿಗಳು ಮ
ತ್ತೆನಿಬರೆನಿತೆನಿತವರವರ ಕೊಳ
ಲೆನಿತು ಕೊಂಬುಗಳೆನಿತು ಕಲ್ಲಿಗಳೆನಿತು ಸೆಳೆಯೆನಿತು
ಎನಿತು ಶೀಲಗುಣಾಕೃತಿಗಳೆನಿ
ತನಿತರೊಡೆಯರೊಡಂಬಡುವವೋ
ಲನುಕರಿಸಿ ತತ್ತತ್ಸ್ವರೂಪಂಗಳನು ಕೈಕೊಂಡ ೨೪

ಉಲಿವ ತಿತ್ತಿರಿ ಗಾಳೆಗಳ ಪೊಂ
ಗೊಳಲುಗಳ ಕೊಂಬುಗಳ ಕೋಳಾ
ಹಳದ ರಭಸದ ಕರುಗಳಲಿ ಕರುಗಾಹಿಗಳು ಸಹಿತ
ನಳಿನನಾಭನು ಬಂದನಾ ಗೋ
ಕುಲಕೆ ನಿಚ್ಚಕಿನಂದದಲಿ ಮುನಿ
ಕುಲ ಮನೋಹರಮೂರ್ತಿ ಮೋಹಿಸಿದನು ಜಗತ್ರಯವ ೨೫

ಕೊಳಲ ದನಿಗಿದಿರ್ವಂದು ತುರುಕುರು
ವಳರು ನೆರೆ ತಂತಮ್ಮ ತುರು ಕರು
ವಳರೆನುತ ಸಾಕ್ಷಾತ ಹರಿಯನು ಪುತ್ರಮೋಹದಲಿ
ಒಲಿದು ತಕ್ಕವಿಸುತ್ತ ಕರುಗಳು
ನಲಿದು ನುಂಗುವವೋಲು ನಕ್ಕುತ
ಮೊಲೆಯನೂಡುತ್ತಿದ್ದವಾ ತಂತಮ್ಮ ಕರುವೆಂದು ೨೬

ಎಂತುಟೋ ಗೋವುಗಳ ಬಹುಜ
ನ್ಮಾಂತರಾರ್ಜಿತ ಸುಕೃತ ಫಲವಿ
ನ್ನೆಂತುಟೋ ಗೋಕುಲನಿವಾಸಿಗಳಾರ್ಜಿಸಿದ ಸುಕೃತ
ಎಂತುಟೋ ಗೋಗೋಪ ಗೋಪಿಯ
ಸಂತತಿಗಳಲಿ ಹರಿಯ ಕೃಪೆ ಭೂ
ಕಾಂತ ಸಂಭವಿಸಿತ್ತದೆಂತುಟೊ ಶಿವಶಿವಾ ಎಂದ ೨೭

ಅವರವರ ಮೊಲೆಗಳನು ಮೇಣವ
ರವರ ಮನೆ ಮನೆಗಳಲಿ ಬೆಣ್ಣೆಯ
ನವ ಘೃತ ಕ್ಷೀರಾಧಿಕವನೆಳೆದುಂಡು ಕದ್ದುಂಡು
ಸವೆಯದನುರಾಗದಲಿ ಮತ್ತವ
ರವರಿಗರ್ಭಕ ವತ್ಸರೂಪವ
ನೆವದಲಾಂತನು ಭಕ್ತಸಂಸಾರಿಕನು ಕೇಳೆಂದ ೨೮

ನೋಡಿ ದಣಿಯವು ಕರುಗಳನು ಮೊಲೆ
ಯೂಡಿ ದಣಿಯವು ನಿಚ್ಚ ನಿಚ್ಚಲು
ಕೂಡೆ ಪೈಗಳ ನಕ್ಕಿ ದಣಿಯವು ತುರುಗಳಡಿಗಡಿಗೆ
ರೂಢಿಯಲಿ ಮುನ್ನಾವ ಸುಕೃತವ
ಮಾಡಿದವೊ ಮಝು ಭಾಪು ತಪವನು
ಮಾಡಿದವರಿಂಗುಂಟೆ ಪಶುಗಳ ಪುಣ್ಯಲವಲೇಶ ೨೯

ಉಡಿಸಿ ದಿವ್ಯಾಂಬರಗಳನು ನೆರೆ
ತೊಡಿಸಿ ದಿವ್ಯ ವಿಭೂಷಣಂಗಳ
ನಡಿಗಡಿಗೆ ಪಾಲ್ಬೆಣ್ಣೆಯನು ಮೃಷ್ಟಾನ್ನವನು ಬಡಿಸಿ
ಒಡನೆ ಕುಳ್ಳಿರ್ದುಂಬ ಮಗ್ಗುಲ
ಲೊಡನೆ ಮಲಗಿಸಿಕೊಂಬ ಗೋಪರ
ಮಡದಿಯರ ಪುಣ್ಯಕ್ಕೆ ದೊರೆ ಸರಿಯಾರು ಹೇಳೆಂದ ೩೦

ಆವ ದೇವೋತ್ತಮರಿಗಿಪ್ಪದ
ದಾವ ಮುನಿಸತ್ತಮರಿಗಿಹುದೆಲೆ
ಭೂವರನೆ ಗೋಗೋಪ ಗೋಪೀಜನದ ಸೌಭಾಗ್ಯ
ಪಾವನತೆ ಧನ್ಯತೆ ಕೃತಾರ್ಥತೆ
ದೇವ ದೇವೋತ್ತಮನ ಕಾರು
ಣ್ಯಾವಲೋಕನ ಸಿದ್ಧಿ ಸನಕಾದಿಗಳಿಗಿಲ್ಲೆಂದ ೩೧

ಸುಲಭವೆಂತುಟೊ ಭಕ್ತರಿಗೆ ನೃಪ
ಕೊಳಲು ಕೊಂಬುಗಳೈದೆ ಹರಿಮಯ
ಸಲೆ ಕುಮಾರರು ಕರುಗಳಾ ಹರಿಮಯವದೆಂದೆನಲು
ನಿಳಯ ನಿಳಯದಲೈದೆ ಹರಿಮಯ
ವೊಳಗು ಪೊರಗು ಸಮಸ್ತ ಗೋ ಗೋ
ಕುಲವೆ ಹರಿಮಯವಾಯ್ತು ಧರಣೀಪಾಲ ಕೇಳೆಂದ ೩೨

ವಿಶ್ವತೋಮುಖನಾಗಿ ತಾನೇ
ವಿಶ್ವತೋ ವಿಗ್ರಹನು ತಾನೇ
ವಿಶ್ವತೋಭುವನಾತ್ಮಕನು ವಿಶ್ವಾತ್ಮಕನು ತಾನೇ
ವಿಶ್ವವೆನ್ನಿಂದನ್ಯವಿಲ್ಲೇ
ವಿಶ್ವದೊಳು ತಾನಲ್ಲದಿಲ್ಲೇ
ವಿಶ್ವಮಯ ತಾನೆಂದು ತಜ್ಞರಿಗರುಹುವಂತಿರ್ದ ೩೩

ಇರಲಿರಲು ದಿನದಿನಕೆ ತುರುಗಾ
ಹಿರಿಗೆ ತುರುಗಳಿಗರ್ಭಕರೊಳಾ
ತುರುಗಳೊಳು ಹೆಚ್ಚಿದುದು ಪುತ್ರಸ್ನೇಹಮಯಪಾಶ
ನಿರುಪಮಿತವಾಗಿರಲು ಕಂಡ
ಚ್ಚರಿಯಿದೇನಿಂದೆನುತ ಮನದಲಿ
ಪರಿಕಿಸುತ ಬೆಸಗೊಂಡನಾ ಬಲಭದ್ರನಚ್ಯುತನ ೩೪

ಎಂದಡೇಕಾಂತದಲಿ ರಾಮಂ
ಗೆಂದನಿದನೆಲೆಯಣ್ಣ ಕಮಲದ
ನಂದನನು ಕೇಳೇನಮಾಡಿದನೆಂದು ತನ್ನೊಡನೆ
ಮಂದಮತಿ ಹುರುಡಿಸುತ ಕೆಳೆಯರ
ವೃಂದವನು ಕಱುಗಳನು ಮಾಯೆಯ
ಲಂದವಿಡಲಾನಾದೆನವರವರಾಕೃತಿಯಲೆಂದ ೩೫

ಹಂಗು ಭಕ್ತರಲಲ್ಲದನ್ಯರ
ಹಂಗು ತನಗಿಲ್ಲಣ್ಣ ಕಮಲಭ
ವಂಗೆ ಸಂತಸವಾಗಲೀ ಗೋ ಗೋಪ ಜನಗಳಿಗೆ
ಸಂಗಸುಖವನು ಸಲಿಸುವರೆ ತ
ನ್ನಂಗವಾಯ್ತಿದು ಕಮಲಭವನವ
ರಿಂಗೆ ಹಿತಕರನಾದೆನೆಂದನು ನಗುತ ಮುರವೈರಿ ೩೬

ಎನಲು ನಕ್ಕನು ರಾಮನಾಹಾ
ಯಿನಿತು ಸಾಹಸ ಕಮಲಭವನಲಿ
ಜನಿಸಿತೇ ತಪ್ಪೇನು ಸಚರಾಚರ ಜಗನ್ಮಯಗೆ
ನಿನಗಸಾಧ್ಯವದೇನು ಸುರ ಪಿತೃ
ಮನುಗಳಾ ಕಮಲಭವಾದ್ಯರು
ಜನಿಸಿ ತೋಱುವರಾರ ಮಾಯಾ ಮಾತ್ರದೊಳಗೆಂದ ೩೭

ಅಂತು ತಮ್ಮೊಳು ತಾವೆ ರಮಿಸುತ
ನಂತ ಕೇಶವರಾಡುತಿರೆ ವಿಪಿ
ನಾಂತರದಲಾ ಕಱುಗಳಾ ಕಱುಗಾಹಿಗಳು ಸಹಿತ
ಅಂತರಿಕ್ಷವನಿಳಿದನಬುಜಜ
ನೆಂತು ಹರಿಯಾಡಿದಪನೀಕ್ಷಿಪೆ
ನೆಂತು ಕಱುಕಱುಗಾಹಿಗಳು ಹೊಱತಾಗಿ ತಾನೆನುತ ೩೮

ಲವನಿಮಿಷದಂತೆನಗಿದೇ ಮಾ
ನವರಿಗೊಂದೇ ವರುಷವಾದುದು
ದಿವಸವೈದಾಱುಳಿಯೆ ಸರಸವಿದಾಯ್ತಲಾ ವಿರಸ
ಶಿವಶಿವೆನಗೀ ಬುದ್ಧಿಯೇತಕೆ
ಭವಿಸಿದುದು ಮಝುಭಾಪು ಪಿತ್ರದ
ಭವಣೆ ತಲೆಗೇಱಿತ್ತಲಾ ಹಾಯೆಂದನಬುಜಭವ ೩೯

ಕಂಡನಾ ಕಮಲಾಕ್ಷನನು ಕಱು
ವಿಂಡುಗಳನಾಡುವ ಕುಮಾರರ
ತಂಡವನು ಮುನ್ನಿನವೊಲಾಡುತ್ತಿರೆ ವನಾಂತದಲಿ
ಕಂಡಿದೇನೆತ್ತಣದು ಮುನ್ನಿನ
ತಂಡವೋ ನಿಜಮಾಯೆಯೊಳಗದೆ
ಕಂಡಱೆನೆನುತಿರಿಸಿದಂತಿರಲಲ್ಲಿಯೇ ಕಂಡ ೪೦

ಆವುದೋ ದಿಟವೆರಡು ತಂಡದೊ
ಳಾವುದೋ ಹುಸಿ ತನ್ನ ಮಾಯೆಯ
ಕಾವಳದ ಕಱುವಳರು ಕಱುಗಳು ಮುನ್ನಿನಂತಿವೆಲ
ಈವೆನೆಂತಾನಿವರನವರಿಂ
ಗಾವುದೋ ಗತಿ ಕೃತ್ಯವೆನಗಿ
ನ್ನಾವುದೆಂದಾನಱಿಯೆನೆಂದನು ನಡುಗಿ ಕಮಲಭವ ೪೧

ಒಪ್ಪುಗೊಂಬನೊ ಮೇಣು ತನ್ನಲಿ
ತಪ್ಪುಗೊಂಬನೊ ತನ್ನ ಮತಿಗೀ
ಮುಪ್ಪು ಬಂದುದಿದೇಕೆ ತೆನ್ನಾ ಪ್ರಾಣನಾಥನಲಿ
ಕುಪ್ಪಳಿಸಿತೆನ್ನಱಿತವಕಟಕಟ
ತಪ್ಪಡಿಗನಂತಾದೆನೆನುತಜ
ನಿಪ್ಪಡಿಯಲೊತ್ತಿದನು ಬಸುಱನು ನೋಡಿ ಬಿಸುಸುಯ್ದು ೪೨

ಕಡಲ ನೆಲೆಯನು ಕಾಣಲಱಿವುದೆ
ಕುಡಿತೆ ನೀರಿಂಗೇನನೆಂಬೆನು
ತೊಡಱುವರೆ ಖದ್ಯೋತವಿನಮಂಡಲದ ತೇಜದಲಿ
ಜಡನಲಾ ಜಗದೇಕನಾಥನ
ತೊಡಱು ತನ್ನೀ ಮಾಯೆಯಲಿ ಜಯ
ವಡೆವೆನೆಂಬಜ್ಞನಿಗೆ ತನಗಿನ್ನಾರು ಸರಿಯೆಂದ ೪೩

ಎಂದು ನಿಜಮಾಯೆಯನು ಮೆಱೆದು ಮು
ಕುಂದನನು ಮೋಹಿಸಲು ಬಂದಾ
ಮಂದಜಾಸನ ತನ್ನ ಮಾಯೆಗೆ ತಾನೆ ಗುಱಿಯಾಗಿ
ನಿಂದು ಬೆಱಗಾಗುತ್ತಿರಲು ಗೋ
ವಿಂದನೊಡನೆಯು ಕಱುಗಳರ್ಭಕ
ವೃಂದವಾಕ್ಷಣದಲಿ ಚತುರ್ಭುಜರಾಯ್ತು ನಿಮಿಷದಲಿ ೪೪

ಮಕುಟಕುಂಡಲಹಾರ ಮಣಿ ಮೌ
ಕ್ತಿಕ ವರಾಂಗದ ಕಂಕಣಂಗಳ
ನಿಕರ ಪೀತಾಂಬರ ಚತುರ್ಭುಜ ಕೌಸ್ತುಭದ್ಯುತಿಯ
ಪ್ರಕೃತಿಮಯ ಪುರುಷಪ್ರಪಂಚ
ಪ್ರಕರ ಸೇವಿತರಾಗಿ ವಿಶ್ವಾ
ತ್ಮಕರೆನಿಸಿ ರಂಜಿಸಿದರನಿಬರು ಬಹಳ ತೇಜದಲಿ ೪೫

ಬೇಱೆ ಬೇಱೆ ಗದಾಬ್ಜ ಶಂಖೋ
ದಾರ ಚಕ್ರಾಯುಧಗಳೆಸೆಯಲು
ಬೇಱೆ ಬೇಱೆ ಸುರೇಂದ್ರ ಮುನಿಜನಸೇವ್ಯರೆಂದೆನಿಸಿ
ಬೇಱೆ ಬೇಱಗಣಿತಚರಾಚರ
ಭೂರಿ ಭುವನಜನೌಘಸೇವಿತ
ಚಾರು ಚರಣಸರೋಜರೆಸೆದರು ವಿದಿತವಿಭವದಲಿ ೪೬

ಎತ್ತ ನೋಡಿದಡೊಲೆವ ಚಾಮರ
ಸತ್ತಿಗೆಯ ಝುಲ್ಲರಿಯ ಸಂಭ್ರಮ
ವೆತ್ತ ನೋಡಿದಡಜಭವೇಂದ್ರಸ್ತುತಿನಮಸ್ಕಾರ
ಎತ್ತ ನೋಡಿದಡೆಸೆವ ಜಯರವ
ವೆತ್ತ ನೋಡಿದಡಮರವನಿತಾ
ನೃತ್ಯಗೀತಸುವಾದ್ಯ ವಿಸ್ತಾರಂಗಳೊಪ್ಪಿದವು ೪೭

ಇರಲಿರಲು ಸಾಕ್ಷಾತ ಸಚ್ಚಿ
ತ್ಪರಮಸುಖಪರಿಪೂರ್ಣರಾದರು
ತರಣಿ ಕೋಟಿಪ್ರಭೆಯನೇಕಾಂಗದಲಿ ನಿರ್ಮಿಸುತ
ದರುಶನಾದಿ ಕ್ರಿಯೆಗಳಿಗೆ ಗೋ
ಚರಿಸದಖಿಳಾಮ್ನಾಯ ಮಸ್ತಕ
ಪರಿಗಣಿತ ಮಹಾತ್ಮಕರೆನಿಸಿದರೊಂದು ನಿಮಿಷದಲಿ ೪೮

ಜೀವಪರಮಾತ್ಮರಿಗೆ ಭೇದವು
[1] ತಾವಿದದು ನೀವೆನಿಪ ಭೇದವಿ
ಭಾವನೆಗಳಳಿವಂತೆ ಶುದ್ಧಾದ್ವೈತ ಸಿದ್ಧಿಸಲು
ಕೇವಲಾತ್ಮನು ತಾನೆ ತನ್ನೊಳ
ಗಾವತೆಱದಲಿ ಜಗವ ತೋಱುವ
ನೀ ವಿಶೇಷವ ನಿರ್ವಿಶೇಷದಿ ಕಂಡನಾ ಪರಿಯ ೪೯

ಹೊಳಹನೀಕ್ಷಿಸಲಾರದಜನ
ಕ್ಕಳಿಸಿದನು ಕಂಗಳನು ಮಿಗೆ ಪು
ತ್ಥಳಿಯವೋಲೆಂದಱಿಯ ಕೋಟೀಂದು ಪ್ರಕಾಶದಲಿ
ಕಳೆಯ ಹಿಡಿದೊತ್ತಿದವೊಲಚ್ಯುತ
ನೊಳಗೆ ತಾ ಬೇಱೊಂದನಱಿಯದೆ
ತುಳುಕಿ ತೂಗಾಡಿದನು ನಿತ್ಯಾತುಮ ಸುಖಾಬ್ಧಿಯಲಿ ೫೦

ಹದಿಮೂರನೆಯ ಸಂಧಿ ಮುಗಿಯಿತು.

# ಹದಿನಾಲ್ಕನೆಯ ಸಂಧಿ

ವರ್ಣಿಸಿದನಜನಪ್ರಮೇಯ ಗು
ಣಾರ್ಣವನನಾಮ್ನಾಯ ಮಸ್ತಕ
ವರ್ಣನೀಯ ಚರಿತ್ರನನು ಸಾಷ್ಟಾಂಗದಲಿ ನಮಿಸಿ

ಅರಸ ಕೇಳಜನಿಂತು ಲೋಕೋ
ತ್ತರವೆನಿಪ್ಪ ಪರಾಪರದ ವಿ
ಸ್ತರದ ತೇಜೋವಾರಿಧಿಯ ಕಿಗ್ಗಡಲ ತೆಱೆಗಳಲಿ
ಕರಣ ಚೇಷ್ಟೆಗಳಡಗಿ ಭರದಲಿ
ಧರೆಗೆ ಮೈಯಿಕ್ಕುತ್ತ ಚಾಮೀ
ಕರದ ಪುತ್ಥಳಿಯಂತೆ ಬೆಱಗಾಗಿರ್ದನಳವಳಿದು ೧

ಭೀತಿಯಲಿ ಮೈ ನಡುಗಿ ನಯನ
ಪ್ರೀತಿಯಲಿ ಮನ ನೆನೆದು ಪುಳಕ
ದ್ಯೋತಿತಾಂಗ ಸ್ವೇದಸಾಂದ್ರವಿಷಾದ ವೀಚಿಯಲಿ
ಚೇತರಿಸುತಡಿಗಡಿಗೆ ಪುನರಪಿ
ಕಾತರಿಸುತಜನೆಂಬಹಂಕಾ
ರಾತಿಶಯ ಪರ್ವತವನಿಳಿದವಗತಿಯುಳಿಸೆದಿರ್ದ ೨

ಇರಲು ಕಾಣುತ ತನಗಿದೇಕೀ
ಮರುಳು ಮಗನಲಿ ಬಸುಱ ಹೂವಿನ
ಹೊರದ ಹುಳುವಿನಲಾಟವೀ ಗುಣದೋಷದಲಿ ನೋಡ
ತರಳನೆನ್ನಯ ಪಾದ ಪಂಕಜ
ಶರಣನೆನುತ ನಿಜಾತ್ಮ ರೂಪವ
ಭರಿತ ತೇಜವ ಮಱಸಿದನು ನಿಜಯೋಗಮಾಯೆಯಲಿ ೩

ಸತ್ತು ಹುಟ್ಟಿದವೋಲು ಚೇತರಿ
ಸುತ್ತ ಕಮಲಜನೊಯ್ಯನಿಂದ್ರಿಯ
ವೃತ್ತಿಗಳು ಪ್ರಸರಿಸಿದವಿದಿರಲಿ ನಿಂದು ಕಂದೆಱೆದು
ಇತ್ತಲೇತಕೆ ಬಂದೆನಿನ್ನೆಗ
ವೆತ್ತಣಿಂದ ಪರಾತ್ಮ ತೇಜದ
ಮೊತ್ತವನು ಕಂಡಂತೆ ಕಾತರಿಸಿದೆನಿದೇಕೆಂದ ೪

[1] ತಾವು, ಇದು, ಅದು, ನೀವು, ಎನಿಪ

ದೆಸೆಗಳನು ನೋಡುತ್ತ ಮುಂದಿ
ರ್ದೆಸೆವ ವೃಂದಾವನವನಾ ತರು
ವಿಸರವನು ತನ್ನುವನು ಮುಂದಿದ್ದರ್ಾ ಮುರಾಂತಕನ
ಎಸೆವ ಮಂಗಳ ಮೂರ್ತಿಯನು ಕಂ
ಡಸುವ ಹದುಳಿಸಿಕೊಂಡು ನಡುಗುತ
ಬಿಸಜ ಸಂಭವನಿದ್ದನುಱಿ ಬೆಱಗಾಗಿ ಭೀತಿಯಲಿ ೫

ಉಟ್ಟ ಪೀತಾಂಬರದ ಹಣೆಗಳ
ವಟ್ಟ ತಿಲಕದ ಚಂದನದ ಮುಡಿ
ಗಟ್ಟನೊಳು ಮಲ್ಲಿಗೆಯ ಕುಂತಳದೆಸೆವ ಲೋಚನದ
ತೊಟ್ಟ ಭೂಷಣದೆಡದ ಕೈಯೊಳ
ಗಿಟ್ಟ ಕಲಸೋಗರದ ಕಬಳದ
ದೃಷ್ಟ ಮೋಹನ ಮೂರ್ತಿ ಮುಂದಿರೆ ಕಂಡನಬುಜಭವ ೬

ಅಱಸುತಱಸುತ ಮುನ್ನಿನಂತಿರೆ
ಕಱುಗಳನು ಕಱುಗಾಹಿಗಳನದ
ನಱಿಯದವನಂದದಲಿ ವೃಂದಾವನದ ಮಧ್ಯದಲಿ
ಉಱುವ ದೈವದ ದೈವವನು ಕಂ
ಡೊಱೆವ ಕಂಗಳ ಬಾಷ್ಪದಲಿ ಸರ
ಸಿರುಹ ಸಂಭವನೊಡಲನೀಡಾಡಿದನು ಚರಣದಲಿ ೭

ಬಿದ್ದು ಪದದಲಿ ದಂಡದಂತಿರ
ಲೆದ್ದು ನಿಂದಿರ್ದಚ್ಯುತನ ಮುನಿ
ಹೃದ್ಯ ಮೂರ್ತಿಯ ನೋಡಿ ಪುಳಕಾಮೃತದಲೋಲಾಡಿ
ಬಿದ್ದು ಪುನರಪಿ ಪೂರ್ವ ದೃಷ್ಟಾ
ವದ್ಯ ವಿರಹಿತ ಸಚ್ಚಿದಾನಂ
ದಾದ್ವಯ ಬ್ರಹ್ಮನನು ನೆನೆವುತ್ತಿರ್ದನಡಿಗಡಿಗೆ ೮

ಹೊರಳಿ ಪದದಲಿ ಸುರಿವ ಸುಖಜಲ
ಶರಧಿಯೊಳಗದ್ದಿದನು ಹರಿಪದ
ಸರಸಿರುಹಯುಗಳವನು ತದ್ಗತ ಭಾವ ಭಕುತಿಯಲಿ
ಕರಗಿ ಕೈಗಳ ಮುಗಿದು ವದನಾಂ
ಬುರುಹವನು ನೋಡುತ್ತ ವಿಶ್ವಂ
ಭರನನಭಿವರ್ಣಿಸಿದನಜನಷ್ಟಾಂಗದಲಿ ನಮಿಸಿ ೯

ಜಯ ನಮೋ ನೀಲಾಭ್ರನಿಭ ಮೂ
ರ್ತಿಯೆ ನಮೋ ದುರಿತೌಘ ಹರ ಕೀ
ರ್ತಿಯೆ ನಮೋ ಧೃತ ಬ್ರಹ್ಮ ಗುಂಜಾಭರಣ ಭೂಷಿತನೆ
ಜಯ ಕರೋಧೃತಕಬಳ ಲಕ್ಷ್ಮೀ
ಪ್ರಿಯನೆ ಪೀತಾಂಬರನೆ ಕರುಣಾ
ಲಯನೆ ಪಶುಪಾಲಾಂಗ ಜಯ ಜಯ ಜಯ ನಮೋಯೆಂದ ೧೦

ಅಱೀವು ಹುಗದಾನಂದಮಯವೆನಿ
ಪುಱುವ ನಿನ್ನ ನಿಜಸ್ವರೂಪವ
ನಱೀವೆನಾನೆಂತೆಲೆ ಮುಕುಂದ ಭವತ್ಪದಾಂಬುಜದ
ಮಱೆಯಲುದಿಸಿದ ಮಾಯೆಯಲಿ ಮತಿ
ಮಱೆದು ದೇಹಾಹಂ ಮಮತೆಯಲಿ
ನೆಱೆ ಸಿಲುಕಿದಜ್ಞಾನಿ ತಾನೆಂದನು ಸರೋಜಭವ ೧೧

ಅದರ ಮಾತಂತಿರಲಿ ಲೀಲಾ
ಸ್ಪದವೆನಿಪ್ಪೀ ಮೂರ್ತಿಯನು ನಿಜ
ಪದಸಮಾಶ್ರಿತರಕ್ಷೆಗಂಗೀಕರಿಸಿ ವರ್ತಿಸುತ
ಸದಮಳ ಜ್ಞಾನಾಂಬುಧಿಯೆ ನಿ
ನ್ನುದಿತ ಮಾಯಾವಿಗ್ರಹನ ಸಂ
ಪದವನಱೀವವರಾರು ಭೌತಿಕವಲ್ಲದುದನೆಂದ ೧೨

ಆಯಸವನುಳಿದಿತರದಲಿ ಭವ
ದೀಯ ಜನಸಂಗದಲಿ ನಿನ್ನ ಕ
ಥಾ ಯಥಾಮೃತ ನದಿಯಲೋಲಾಡುತ್ತ ಹರುಷದಲಿ
ಕಾಯವಡೆದಿಹ ಸುಕೃತಿಗಳಿಗೆ ನಿ
ರಾಯಸವಲಾ ಮೋಕ್ಷ ಯೋಗಿ
ಧ್ಯೇಯ ಪದಪಂಕಜನೆ ನಿಜಪದ ಶರಣರಿಂಗೆಂದ ೧೩

ಅಲ್ಲದೆಲೆ ದೇವ ಭವತ್ಪದ
ಪಲ್ಲವದ ಸಂಪನ್ನ ಭಕ್ತಿಯ
ನೊಲ್ಲದಾತ್ಮಜ್ಞಾನಸಿದ್ಧಿಗೆ ಬಳಲುವಜ್ಞರಿಗೆ
ಎಲ್ಲಿಯದು ಸಂಕ್ಲೇಶವೇ ತಮ
ಗಲ್ಲದಹುದೇ ಮೋಕ್ಷ ಧಾನ್ಯವ
ನೊಲ್ಲದುಯ್ಯನು ಕುಟ್ಟಿ ಪಡೆವರೆ ತಂಡುಲವನೆಂದ ೧೪

ಮುನ್ನ ಹಲಬರು ಯೋಗಿಗಳು ಸಂ
ಪನ್ನ ನಿಜಪದ ಸೇವೆಯಿಂದು
ತ್ಪನ್ನ ಭಕ್ತಿಯ ನಾವೆಯಲಿ ಸಂಸಾರ ಸಾಗರವ
ನನ್ನಿ ನೆಱಿ ವಿಸ್ತರಿಸೆ ಬಹಳ ಕೃ
ಪಾರ್ಣವನೆ ನಿನ್ನಂಘ್ರಿಕಮಲದ
ಸನ್ನಿಧಿಯನೈದಿದರನಾಯಾಸದಲಿ ತಾವೆಂದ ೧೫

ತನುಮನೋವಚನಂಗಳಿಂದೆಲೆ
ಮುನಿಮನೋಜ್ಞಚರಿತ ಸಲೆ ನಿ
ನ್ನನೆ ನಮಸ್ಕರಿಸುತ್ತ ನೆನೆವುತ್ತೊಲಿದು ಕೀರ್ತಿಸುತ
ತನು ಮನೋವಚನಾದಿ ಚೇಷ್ಟಾ
ಜನಕ ನೀನೆಂದಱಿದು ಜೀವಿಸು
ವನೆ ಸುಭಾಗ್ಯನು ದಾಯಿಗನು ನಿಜಮುಕುತಿಪದಕೆಂದ ೧೬

ಏನನೆಂಬೆನು ದೇವ ತನ್ನ
ಜ್ಞಾನವನು ಪರಮೇಷ್ಠಿತನದಭಿ
ಮಾನದುದ್ರೇಕವನು ಭುವನಾಧೀಶ್ವರೇಶ್ವರನ
ಆನು ಮೋಹಿಸಲೆಂದು ಮಾಯಾ
ಧೀನಮತಿ ನಿಜಮಾಯೆಯಿಂದನು
ಮಾನಿಸಿದೆನೆನ್ನಂತೆ ಶಿವಶಿವ ಮೂಢರಾರೆಂದ ೧೭

ನೀನಲಾ ಪರಮಾತ್ಮ ನಿನ್ನಾ
ಧೀನವಲ್ಲಾ ಮಾಯೆ ಮಾಯಾ
ಧೀನ ನಾನಖಿಳೇಶ್ವರನು ನೀನಿಂಗಿತಜ್ಞನಲ
ತಾನದೆಂತೋ ನಿನ್ನೊಡನೆ ಮತಿ
ಹೀನತನದಲಿ ನೆನೆದೆನೇಕೆ ಸ
ಮಾನಬುದ್ಧಿಯನಕಟಕಟ ಕಡುಪಾಪಿ ನಾನೆಂದ ೧೮

ತಂದೆಯೆಂಬುದನಱಿಯದಿರ್ಪುದ
ದೊಂದು ಘನತರ ಪಾಪವಲ್ಲಾ
ತಂದೆಯೊಳು ಸಮಬುದ್ಧಿ ಸುಮಹತ್ತರದ ಪಾಪವಲ
ತಂದೆಯೊಳು ಹುರುಡಿಸುವಘಾತ್ಮಂ
ಗಿಂದು ಸರಿಯಿನ್ನಾರು ಶಿವಶಿವ
ಮಂದಮತಿ ಶಿಶುತನದಲಿ ವೃಥಾ ಕೆಟ್ಟೆ ತಾನೆಂದ ೧೯

ನೋಡದೆನ್ನನದೇಕೆ ಮಗನೆಂ
ದಾಡುವುದು ಜಗ ಬಸುಱ ಹೂವಿನ
ಕೀಡಿಯನು ಭವದೀಯ ಮಾಯಾಮೂಢಬುದ್ಧಿಯನು
ನಾಡಮಾತಿನ ಹರದ ವಾರ್ತೆಗೆ
ಹೂಡಿತೆನಗೀ ಗರ್ವ ಪರ್ವತ
ಕೇಡನೇ ನಿಶ್ಚಯಿಸಿ ಶಿವಶಿವ ಶಿವಶಿವಾ ಎಂದ ೨೦

ಧರಣಿ ಜಲಪಾವಕ ಸಮೀರಾಂ
ಬರ ಗುಣಾಹಂಕಾರ ಮಹದು
ತ್ತರದ ಸಪ್ತಾವರಣಗಳ ಜಗದಂಡಕೋಟಿಗಳು
ನಿರುತ ನಿನ್ನಯ ರೋಮರೋಮಾಂ
ತರದಲಾಡುವುದೆತ್ತಲೊಂದಱೊ
ಳುರುಳುತಿಹ ಹುಳು ತಾನದೆತ್ತಲು ಗರ್ವಿಸುವಡೆಂದ ೨೧

ಕ್ಷಮಿಸುವುದು ದೇವೇಶ ದೇವೋ
ತ್ತಮ ರಜೋಗುಣಸಂಗ ಮಾಯಾ
ಭ್ರಮಿತನಪರಾಧವನು ನಿನ್ನವನೆಂದು ನೀನೊಲಿದು
ಕುಮತಿ ತಾನೀ ಭುವನ ಸೃಷ್ಟಿ
ಕ್ಷಮನೆನುತ ನಿಂದಿರಲಾ ನೊ
ಬ್ಬಮರಪತಿಯೆಂದೇಕೆ ಗರ್ವಿತನಾದೆನಕಟೆಂದ ೨೨

ಆರನೈ ಕಂಗೆಡಿಸದಿನ್ನಾ
ರಾರನಳಲಿಸದಕಟ ಗರ್ವವಿ
ಕಾರ ಕೆಡಹದು ನರಕದುಃಖ ಮಹಾರ್ಣವಂಗಳಲಿ
ಆರುಮಿಲ್ಲದನಾಥ ನಾನಿ
ನ್ನಾರೆನಗೆ ಗತಿ ದೇವ ದೇವರು
ದಾರ ಕರುಣೇಕ್ಷಣದಲಭಯವನೀವುದೆನಗೆಂದ ೨೩

ಬಸುಱೊಳಗೆ ಶಿಶುವಿರ್ದು ಪೈಯನು
ಮಸಗಿದರೆ ತಾಯಾರೊಡನೆ ಕೋ
ಪಿಸುವಳೆಲೆ ಜಗದೀಶ ಜಗದಾತ್ಮಕ ಜಗನ್ಮಯನೆ
ನುಸಿಗಳೆನ್ನಂದದವರೆನಿತೋ
ಬಿಸಕುಸುಮ ಕೀಟಕಗಳೆನಿತೋ
ನೊಸಲ ಕಣ್ಣ ಮಹೇಶ್ವರರು ನಿನ್ನುದರದೊಳಗೆಂದ ೨೪

ಆರಱಿವರೀ ನಿನ್ನ ಮಹಿಮೋ
ದಾರ ವಾರ್ಧಿಯ ನೆಲೆಯನೆಂತೀ
ಭೂರಿ ಭುವನಕದಂಬವೀ ಸಚರಾಚರವ್ರಾತ
ತೋಱಿ ತೋಱಿಯಡಂಗುವುವು ಡಿಂ
ಡೀರ ನಿಕರದವೋಲು ನಿಜಮಾ
ಯೋರು ವೀಚಿಭುಜಂಗ ಮಹದಾವರ್ತದೊಳಗೆಂದ ೨೫

ಮೊದಲೊಳರ್ಭಕ ವತ್ಸಮಯ ರೂ
ಪದಲಿ ಕಂಡೆನು ನಿನ್ನ ಮಾಯಾ
ವಿದಿತ ವಿಭವವ ಮತ್ತೆ ತದನಂತರ ಚತುರ್ಭುಜದ
ಹೊದಱುಗಳ ತೇಜವನು ಮತ್ತಂ
ತುದಿತ ಸತ್ಯ ಜ್ಞಾಪ್ತಿ ಸುಖಮಯ
ಪದದಲಿರೆ ಕಾಣಿಕೆಗೆ ನೆಱೆ ಕಲ್ಪಾಂತವಾಯ್ತೆಂದ ೨೬

ಅಱಿವು ಹುಗದಜ್ಞಾನ ವಾರ್ತೆಗೆ
ತೆಱವು ಗುಡದಾನೆಂಬ ಹಮ್ಮಿನ
ಹೊಱಗೆಗೊಳಗಾಗದ ಪರಾನಂದೈಕ ವಿಗ್ರಹನ
ನಿಱುಗೆ ತನ್ನೀ ಮೂಢಮತಿಗೆಂ
ತಱಿಯಬಹುದೆಲೆ ತಂದೆ ಮಾಯೆಯ
ಮಱಮಗನ ಮೌಢ್ಯವನು ನೋಡದೆ ಕೃಪೆಯ ಮಾಡೆಂದ ೨೭

ಸೃಜಿಸು ಜಗವನೆನುತ್ತ ತನ್ನನು
ಸೃಜಿಸಿದೆಯಲ್ಲೈ ಸಕಲ ಭುವನ
ಪ್ರಜೆಗಳಿಗೆ ಪರಮೇಷ್ಠಿತನದೈಶ್ವರ್ಯವನು ಸಲಿಸಿ
ಭಜಕರೊಳಗಾನೊಬ್ಬನೆನಗಾ
ಧ್ವಜನೆನಿಪ್ಪಭಿಧಾನವದಱಿಂ
ಮಜಡನಾದೆನು ನಿನ್ನ ಮಾಯೆಯ ಗುಣದಲಾನೆನ್ನ ೨೮

ಸೃಷ್ಟಿಗಾನಧಿಕಾರಿ ಜಗದಲಿ
ಸೃಷ್ಟಿಗೀಶ್ವರನಖಿಳಲೋಕದ
ದುಷ್ಟನಿಗ್ರಹ ಶಿಷ್ಟಜನರಕ್ಷಾ ವಿಧಾನದಲಿ
ಅಷ್ಟದಿಗಧೀಶ್ವರರು ನಿನ್ನಲಿ
ಶಿಷ್ಟಮೂರ್ತಿಗಳಾಗಿ ನಿಯಮಾ
ವಿಷ್ಟರಾಗಿಹೆವಿಂತು ನಿನ್ನೊಂದಾಜ್ಞೆಯೊಳಗೆಂದ ೨೯

ಬಯಲನಾಟಕವೆನಿಸಿ ಭುವನ
ತ್ರಯವಿದೆಲೆ ಜಗದೀಶ ನಿಜ ಮಾ
ಯೆಯಲಿ ತೋರ್ಪುದು ರಜ್ಜು ಸರ್ಪನವೋಲು ನಿನ್ನೊಳಗೆ
ಲಯವಹದು ನೀನೊಲಿದು ನಿಜ ದೃ
ಷ್ಟಿಯಲಿ ನೋಡಲು ಭಕ್ತ ಹೃದಯ
ಪ್ರಿಯನೆ ಬಳಿಕನರಂಜುವರೆ ನಿಜಶರಣರೀ ಭವಕೆ ೩೦

ಅನ್ನೆವರ ಭವಬಂಧ ಜೀವರ
ಬೆನ್ನ ಬಿಡದೋರಂತೆ ದುಃಖ ಮ
ಹಾರ್ಣವದಲದ್ದುವುದು ತಾಪತ್ರಯದ ಬೇಗೆಯಲಿ
ಬನ್ನ ಬಡಿಸುವುದಸ್ಮದಾದ್ಯರ
ನುನ್ನತಾಹಂಕಾರ ಮೂಢರ
ನಿನ್ನವರ ನೀ ನೋಡೆ ಕಾರುಣ್ಯೇಕ್ಷಣದಲೆಂದ ೩೧

ಎನ್ನೆವರ ಗೃಹವೆಂಬ ಸೆಱೆಮನೆ
ಯೆನ್ನೆವರ ರಾಗಾದಿ ವೈರಿಗ
ಳೆನ್ನೆವರ ಧನಪುತ್ರಮಿತ್ರ ಕಳತ್ರವೆನಗೆಂಬ
ಅನ್ನೆವರವೇ ಕಾಲಸಂಕಲೆ
ಬನ್ನ ಬಡಿಸುವುವೆನ್ನನಕಟಾ
ನಿನ್ನವರು ತಾವೆನಿಸಲಱಿಯರು ಮೂಢಜನವೆಂದ ೩೨

ಬೇಡ ತನಗೆಲೆ ದೇವ ನಿಮ್ಮಡಿ
ಮಾಡಿದೀ ಪರಮೇಷ್ಠಿತನದಿರ
ವಾಡಲಮ್ಮೆನು ಬಿನ್ನಹವ ಚಿತ್ತೈಸುವಡೆ ಕೃಪೆಯ
ಮಾಡುವುದು ನಿನ್ನಂಘ್ರಿ ಸೇವೆಯ
ಮಾಡುವವರಮಳಾಂಘ್ರಿ ಸೇವೆಯ
ಮಾಡುವೊಂದು ಸುಭಾಗ್ಯ ಜನ್ಮವ ಕರುಣಿಸುವುದೆಂದ ೩೩

ಒಲ್ಲೆನೀ ಲೋಕಾಧಿಪತ್ಯವ
ನೊಲ್ಲೆನೀ ವಿಬುಧಾಧಿಪತ್ಯವ
ನೊಲ್ಲೆನೀ ದ್ವಿಪರಾರ್ಧಸಂಖ್ಯಾಯುಷ್ಯಸಂಪದವ
ಒಲ್ಲೆ ನೇನುವನೀ ಭವತ್ಪದ
ಪಲ್ಲವೈಕಪರಾಯಣರ ಪದ
ಪಲ್ಲವದಸಮುಸಂಗಸುಖವೇ ಸಾಕು ತನಗೆಂದ ೩೪

ಆವನೊಬ್ಬನ ತೃಪ್ತಿಗೀ ಯ
ಜ್ಞಾವಳಿಗಳೈದವು ಸಮಸ್ತ ಸು
ರಾವಳಿಗಳಾವಱಿಯೆವೀ ಸಹಭೋಜನದ ಸುಖವ
ಗೋವಳರ ಭಾಗ್ಯವನು ಬಣ್ಣಿಪ
ನಾವನೀ ನಿಮ್ಮಡಿಯೊಡನೆ ಭು
ಕ್ತಾವಶೇಷವನುಂಬ ನೆಱೆ ಸುಪ್ರೀತಿಯನು ಮಾಳ್ಪ ೩೫

ನಿಗಮ ದೂರನೆನಿಪ್ಪ ನೀನೇ
ಮಗನೆನಿಸಿ ಕಱುವೆನಿಸಿ ಮೊಲೆ
ವಾಲುಗಳನೊಲಿದುಂಡವರ ಮಗ್ಗುಲಲಿ ಪವಡಿಸುವ
ಅಗಣಿತಾಮಳ ಸೌಖ್ಯವಿದು ಯೋ
ಗಿಗಳಿಗುಂಟೇ ಗೋಪಿಯರ ಗೋ
ವುಗಳ ಭಾಗ್ಯೋದಯವನಭಿವರ್ಣಿಸುವರಾರೆಂದ ೩೬

ಏನನೆಂಬೆನು ಗೋಪಜನದ ನ
ವೀನ ಭಾಗ್ಯವ ಸಿರಿಯದಂತಿರ
ಲಾನು ಮೊದಲೆನೆ ತತ್ತದಿಂದ್ರಿಯ ಕರಣ ಪಾತ್ರದಲಿ
ದಾನವಾಂತಕ ನಿಜ ಪದಾಬ್ಜ ನ
ವೀನ ಸುಧೆಯನು ಸವಿವ ತದಧಿ
ಷ್ಠಾನ ದೇವತೆಗಳ ಸುಭಾಗ್ಯಕದಾರು ಸರಿಯೆಂದ ೩೭

ಅದು ನಿಮಿತ್ತೆಲೆ ದೇವ ಕರುಣಾ
ಸ್ಪದನೆ ಕರುಣಿಪುದೆನಗೆ ಗೋಪರ
ಪದಪಯೋಜ ಪವಿತ್ರ ಜನ್ಮವನೊಂದನಿದಱೊಳಗೆ
ಸದಮಳನೆ ಬೇಡುವೆನು ಸಕಲ
ಪ್ರದನೆ ಸಕಲಾತ್ಮಕನೆ ತನ್ನೀ
ಮದಮುಖನ ಮೌಢ್ಯವನು ನೋಡದೆ ಕೃಪೆಯ ಮಾಡೆಂದ ೩೮

ಎಂದು ಪುಳಕಾಶ್ರುಗಳು ಸಹಿತರ
ವಿಂದಭವನೆಡೆಗೆಡೆದು ಚರಣ
ದ್ವಂದ್ವದಲಿ ಹೊರಳುತ್ತ ಹೊಗಳುತ್ತಿರಲು ಭಕ್ತಿಯಲಿ
ಮುಂದಹಾಸದಲೆತ್ತಿದನು ಕೃಪೆ
ಯಿಂದ ಮೈಯನು ತಡವಿ ಪರಮಾ
ನಂದನಿಧಿ ನಸುನಗೆಯಲಭಯವನೀವುತಿಂತೆಂದ ೩೯

ಕ್ಷಮಿಸುವುದು ತಾನೇನನಾವ
ಕ್ರಮವ ಮಾಡಿದೆ ಹೇಳು ಭಿನ್ನ
ಭ್ರಮೆಯ ಬಳಕೆಯ ಮಾತದೇತಕೆ ಹೇಳು ನಿನ್ನನಾರೆಂದು
ಸುಮತಿ ನೋಡದಹಂಕರಿಸುವ
ಕ್ರಮವಿದೇ ತಪ್ಪಲ್ಲದನಹ
ಮ್ಮಮತೆಯಲಿ ಭಜಿಸುತ್ತಿಹುದು ಸುಖಿಯಾಗು ಹೋಗೆಂದ ೪೦

ಗರ್ವವೆಂಬೊಂದಧಿಕತರವಹ
ಪರ್ವತಾಗ್ರವನೇಱದೆನ್ನನು
ಸರ್ವ ಲೋಕಾಧೀಶ್ವರೇಶ್ವರನೆಂಬುದನು ತಿಳಿದು
ನಿರ್ವಹಿಸುತೆನ್ನೊಳಗೆ ಮತಿಯನು
ದುರ್ವಿಷಯವಲಿ ಬಿಡದೆ ಭಾವಿಸೆ
ಸರ್ವಗತ ನಾನೆನ್ನವನು ನೀನಂಜಬೇಡೆಂದ ೪೧

ಮೆಚ್ಚಿದೆನು ನೀ ಮಾಳ್ಪ ಸಂಸ್ತುತಿ
ಗುಚ್ಚರಿಪನಿದನಾವನಾತನೆ
ನಚ್ಚಿನೆನ್ನಯ ಭಕ್ತನೀವೆನಭೀಷ್ಟ ಸಂಪದವ
ಸಚ್ಚರಿತ ನೀನೆನ್ನ ಮಾಯೆಗೆ
ಬೆಚ್ಚದಿರು ಬೆದಱದಿರು ತನ್ನನು
ನಚ್ಚಿ ನೆನೆವುತ್ತಿಹುದು ಮಱೆಯದೆನುತ್ತ ಬೀಳ್ಕೊಟ್ಟ ೪೨

ಎನೆ ಹಸಾದ ಭವತ್ಯಪೇಕ್ಷಣ
ವನುಪಮಾನುಗ್ರಹವಿದುಳ್ಳಡೆ
ತನಗೆ ಮಱವೆಯದೇಗುವುದು ದೇವೆನುತ ಕೈಮುಗಿದು
ವನಜ ಭವನಚ್ಯುತನ ಪದಯುಗ
ವನಜದಲಿ ತಲೆವಾಗಿ ಕೈಮುಗಿ
ದೆನಗೆ ಗತಿಮತಿ ನೀನೆನುತ ಬಿದ್ದಿರ್ದನಿದಿರಿನಲಿ ೪೩

ಸನಕ ನಾರದ ಮುಖ್ಯ ಸುರಮುನಿ
ಜನಸಹಿತ ಬಲವಂದು ಕರುಣಾ
ವನಧಿಯನು ಬೀಳ್ಕೊಂಡು ಮಂಗಳ ದಿವ್ಯ ಮೂರ್ತಿಯನು
ಮನದೊಳಗೆ ಭಾವಿಸುತ ಬಣ್ಣಿಸು
ತನುಪಮನ ಮಾಹಾತ್ಮ್ಯವನು ಸಂ
ಜನಿತ ಪರಮೋತ್ಸವದಲಂದಜನೈದಿದನು ದಿವವ ೪೪

ನಳಿನಭವನನು ಬೀಳುಕೊಟ್ಟಾ
ನಳಿನನಾಭನು ನಗುತ ಮುನ್ನಿನ
ಪುಳಿನದೆಡೆಗೈತಂದನಾ ಕಱುವಿಂಡುಗಳ ಸಹಿತ
ಕೆಳೆಯರಚ್ಚರಿವಡುತ ವರುಷದ
ಕಳಿವನಱಿಯದೆ ತೀವ್ರ ಗತಿಯಲಿ
ತಳುವದೆಂತೈ ಬಂದೆಯೆಂದರು ನಗುತ ತವತವಗೆ ೪೫

ತಂದೆ ಕಱುಗಳನೆಲ್ಲಿ ಕಾಣಿಸಿ
ತಂದೆ ನಿಮಿಷಾರ್ಧಾರ್ಧವಿನ್ನೂ
ಸಂದುದಿಲ್ಲೊಡನುಣ್ಣು ಬಾ ಬಳಲಿದೆಯೆನುತ್ತೊಲಿದು
ಸಂದ ಸುರಮುನಿವರರು ಭಾಷೆನ
ಲಂದು ಗೋಷ್ಠಿಯಲೂಟವನು ಮುದ
ದಿಂದ ಮಾಡಿದರಚ್ಯುತನನೊಡಗೊಂಡು ಬಾಲಕರು ೪೬

ಬಳಿಕ ಕಱುವಿಂಡುಗಳನೂರ
ತ್ತಲು ಸರೋರುಹ ಮಿತ್ರನಿಳಿದನು
ಜಲಧಿಗೆಲವೋ ಮರಳಿಸೆನುತಚ್ಯುತನು ನಿಂದಿರಲು
ಕೊಳಲು ಕೊಂಬುಗಳೆಸೆಯಲೊಪ್ಪಿರೆ
ಕೆಳೆಯ ಗೋಪಕುಮಾರಕರು ಕಳ
ಕಳದ ಸಡಗರವೆಸೆಯೆ ಮುಗುಚಿದರೂರ ಸಮ್ಮುಖಕೆ ೪೭

ಆಡುತಾಡುತ್ತಘನ ಚರ್ಮವ
ನೋಡುತದಱೊಳು ಹೊಕ್ಕು ಮಿಗೆ ಮಾ
ತಾಡಿ ಕೂಗುತ್ತಬ್ಬರಿಸುತಾನಂದ ಲೀಲೆಯಲಿ
ನೋಡುವರ ಕಂಗಳಿಗೆ ಹಬ್ಬವ
ಮಾಡುವಂಗ ವಿಭೂಷಣದ ಹೊಸ
ಗಾಡಿಗಳ ಗುಣನಿಧಿಗಳೈತಂದರು ನಿಜಾಲಯಕೆ ೪೮

ಪೂತನೀ ಭಂಜನದ ವಾರ್ತ್ಯಾ
ಘಾತನದ ಯಮಳಾರ್ಜುನ ದ್ರುಮ
ಪಾತನದ ಬಕ ವತ್ಸ ದೈತ್ಯ ಪ್ರಾಣ ನಾಶನದ
ಖ್ಯಾತ ವಿಕ್ರಮಗಳಲಘಾಂತ
ಜ್ಯೋತಿಗೆಡೆಗುಡುವಚ್ಯುತನ ವೀ
ರ್ಯಾತಿಶಯವನು ಹೊಗಳುತೈತಂದರು ಸರಾಗದಲಿ ೪೯

ಎಸೆವ ಕತ್ತುರಿವೀಲಿಗಳ ರಂ
ಜಿಸುವ ಗುಂಜಾಭರಣದೊಪ್ಪವ
ನೊಸಲ ತಿಲಕದ ಕತ್ತುರಿಯ ಚಂದನದ ಪರಿಮಳದ
ಎಸಳುಗಂಗಳ ಮಂಗಳಾನನ
ವಿಸರುಹದ ವಿಶ್ವಾಧಿಪತಿ ಮೋ
ಹಿಸಿದನೀಕ್ಷಿಸುವಖಿಳ ಸುರ ಮುನಿಜನದ ಕಣ್ಮನವ ೫೦

ಕೊಳಲು ಕೊಂಬುಗಳುಲಿವ ಕಳರವ
ದೊಳಗೆ ನಡೆಯಲು ಮುಂದೆ ಕಱುಗಳು
ಕೆಳೆಯರೈತರೆ ಹಿಂದೆ ದಕ್ಷಿಣ ವಾಮ ಪಾರ್ಶ್ವದಲಿ
ನೆಲನನುಗ್ಗಡಿಸುತ್ತ ಮಹಿಮೆಯ
ನೊಲಿದು ಪಾಡುತ ಹೊಗಳುತಮರಾ
ವಳಿಗಳಭ್ರದಲುಲಿಯೆ ಗೋಕುಲದರಸನೈತಂದ ೫೧

ಪೊಂಗೊಳಲ ಕೊಂಬುಗಳ ದನಿಗೀ
ರಂಗ ಬಂದನೆನುತ್ತಲಾ ಗೋ
ಪಾಂಗನೆಯರೆಲ್ಲವರು ನೆರೆದಾ ಮಾರ್ಗದಿದ್ದೆಸೆಗೆ
ಕಂಗಳಲಿ ಕಮನೀಯ ಮೂರ್ತಿಯ
ಮಂಗಳಾನನ ಕಮಲ ಮಧುವನು
ಹಿಂಗದಾಸ್ವಾದಿಸುತ ಪಡೆಯರು ದಣಿವುಗಳನೆಂದ ೫೨

ಹೊಕ್ಕನಾ ಗೋಕುಲವನೊಡನೆಯ
ಮಕ್ಕಳನು ಮನೆಗಳಿಗೆ ಕಳುಹು
ತ್ತಿಕ್ಕೆಲದ ಗೋಪಿಯರ ಕಂಗಳು ಕಳುಹುತ್ತೈತರಲು
ಅಕ್ಕಱುತು ಕಡು ಮೋಹದಲಿ ತನು
ಸೊಕ್ಕಿ ಸುತರತ್ನವನು ಮೊಲೆತೊಱೆ
ದುಕ್ಕಲಪ್ಪಿದಳಿದಿರುವಂದು ಯಶೋದೆ ನಲವಿನಲಿ ೫೩

ಹೇಳಿದರು ತಂತಮ್ಮ ಮನೆಯಲಿ
ಬಾಲಕರು ತಾವಿಂದು ಕಱುಗಳ
ಪಾಲಿಸುತ ಬಲಕೃಷ್ಣರೊಡನಾಡುತ್ತ ವನದೊಳಗೆ
ಲೀಲೆಯಿಂದಿರೆ ನುಂಗಿತೊಂದು ಕ
ರಾಳಫಣಿ ಧರೆಗೆಡೆಗೆಡೆದ ಸುರ
ಶೈಲದಂದದ ದೇಹದಲಿ ಕಱುಸಹಿತ ಕಱುವಳರ ೫೪

ಏನನೆಂಬೆವು ಸರ್ಪಜಠರ ಕೃ
ಶಾನುವಿಂಗಾಹುತಿಗಳಾದೆವು
ದಾನವಾಂತಕ ಕೃಷ್ಣನಂನೆಗ ಫಣಿಯ ಗಂಟಲಲಿ
ದಾನಿಗಳ ದಾತಾರ ಬೆಳೆದರೆ
ಭಾನುವಿನ ವೋಲವನ ಮೂರ್ಧ್ನಿ
ಸ್ಥಾನದಲಿ ಹೊಱವಂಟುದಸು ದೆಸೆದೆಸೆಗೆ ಬೆಳಗುತ್ತ ೫೫

ಕೂಡೆ ಹೋದವು ತಮ್ಮಸುಗಳದ
ನಾಡಲಱಿಯೆವು ಕೃಷ್ಣನೊಮ್ಮೆಗೆ
ನೋಡಿದಡೆ ಕಾರುಣ್ಯದೃಷ್ಟಿಯಲ್ಸೈದೆ ಮನ ಮುರಿದು
ಖೇಡನಾದನು ಮೃತ್ಯು ಮಕ್ಕಳ
ಬೀಡು ಬೊಬ್ಬಿಱಿವುತ್ತ ಹೊಱವಡೆ
ಕೂಡಿತಾತನ ಜೀವ ಕಂಡೆವು ಕೃಷ್ಣನುದರದಲಿ ೫೬

ಬಳಿಕ ವನಭೋಜನವನಿಂದೀ
ನಳಿನನಾಭನ ಕೂಡೆ ಪರಿಮಂ
ಡಲವೆನಲು ಕುಳ್ಳಿರ್ದು ಕೃಷ್ಣನ ಬಾಯತುತ್ತುಗಳ
ನಲಿದು ಸವಿ ನೋಡುತ್ತ ಉಂಡೆವು
ಸಲಹಿದೊಡೆಯನು ಕೃಷ್ಣ ನಮ್ಮಸು
ಗಳಿಗೆ ಪರಮಸ್ವಾಮಿಯೆಂದರು ಗೋಪನಂದನರು ೫೭

ಕೇಳಿದಚ್ಚರಿವಟ್ಟರಂದಾ
ಬಾಲಕರ ನುಡಿಗಳನು ವರುಷದ
ಕೀಳು ಪೋಗಿನ ಮಾತಿದಿಂದಿನದಾಯ್ತು ಶಿವಯೆನುತ
ಲೋಲಮತಿಗಳು ನೋಡಿ ಕೃಷ್ಣನ
ಲೀಲೆ ಚಿತ್ರವೆನುತ್ತ ನೆಱೆ ಗೋ
ಪಾಲಕರು ನೆಲೆಗೊಂಡರಾ ನಿತ್ಯಾತ್ಮ ಸುಖದೊಳಗೆ ೫೮

ಹದಿನಾಲ್ಕನೆಯ ಸಂಧಿ ಮುಗಿಯಿತು.

# ಹದಿನೈದನೆಯ ಸಂಧಿ

ಸುರರು ಭಾಪೆನೆ ತಾಳವನವನು
ಬೆರಸಿ ಮುಱಿದರು ಬಾಲ ಕೇಳಿಯ
ಪರಿಣತರು ಧೇನುಕನನಚ್ಯುತರಾಮರುರವಣಿಸಿ

ಕೇಳು ಪಾಂಡವ ಧರಣಿಪತಿಕುಲ
ಪಾಲಕನೆ ಹರಿರಾಮರರ್ಭಕ
ಲೀಲೆಯನು ಮೋಹನ ಮನೋಜ್ಞವೆನಿಪ್ಪ ಶಿಶುತನವ
ಬೀಳುಕೊಟ್ಟರು ಗೋಕುಲದಲು
ದ್ವೇಲ ವಿಕ್ರಮರೆಸೆದರಂದಾ
ಱೇಳು ವರುಷದ ಹರೆಯದಲಿ ಪಶುಪಾಲರೆಂದೆನಿಸಿ ೧

ತುಱುಗಳನು ಕರೆವುತ್ತ ಭುವನೇ
ಶ್ವರರು ವೃಂದಾವನಕೆ ತುಱುಗಾ
ಱರುಸಹಿತ ಹೊಱವಂಟರುತ್ಸವದಿಂದ ಗೋಕುಲವ
ಸುರನಿಕರವಭ್ರದಲಿ ಜಯ ಜಯ
ಪರಮಪುರುಷಯೆನುತ್ತ ನಿಜಗುಣ
ಚರಿತವನು ಪಾಡುತ್ತ ಕೈವಾರಿಸಲು ವಿನಯದಲಿ ೨

ಅಂಕುಶಧ್ವಜ ವಜ್ರಯವಲತೆ
ಪಂಕಜಂಗಳೆನಿಪ್ಪ ನಿಜಪದ
ಪಂಕಜಂಗಳ ಶುಭತಳದ ರೇಖೆಗಳು ಧರಣಿಯಲಿ
ಅಂಕಿಸಲು ಗೋಪಾಲ ಬಾಲಕ
ರಂಕಮಾಲೆಯ ಹೊಗಳುತೆಡಬಲ
ವಂಕದಲಿ ಮೋಹರಿಸುತಯಿತಂದರು ವನಾಂತರಕೆ ೩

ಪಾಡುತಿರೆ ಗಿಳಿವಿಂಡು ತುಂಬಿಗ
ಳಾಡುತಿಹ ಕೊಳಗಳಲಿ ಪರಿಮಳ
ತೀಡುವೊಲು ಪಸರಿಸುವ ಹೂತವನಾಂತರದ್ರುಮದ
ಕೂಡೆ ತಂಗಾಳಿಯಲಿ ಮಿಗೆ ತೂ
ಗಾಡುವೆಳದಳಿರುಗಳ ಝಳವನು
ಝಾಡಿಸುವ ನೆಳಲೆಸೆವ ಬೃಂದಾವನಕೆ ನಡೆತಂದ ೪

ಫಲ ಕುಸುಮ ಪಲ್ಲವದ ಭಾರದ
ಲಿಳೆಗೊಱಗಿ ಶೋಭಿಸುವ ಶಾಖಾ
ವಳಿಯ ತರುನಿಕರವನು ನೋಡಿ ಮನೋನುರಾಗದಲಿ
ನಳಿನ ದೃಶನಣ್ಣಂಗೆ ತರುಲತೆ
ಗಳಿಗನುಗ್ರಹಿಸುತ್ತ ಕರುಣಾ
ಜಲಧಿ ಕಾರುಣ್ಯೇಕ್ಷಣದಲಿಂತೆಂದನೊಲವಿನಲಿ ೫

ನೋಡು ನೀನೆಲೆಯಣ್ಣ ತರುಗಳು
ಮಾಡುವುಪಚಾರವನು ಮನುಜರು
ಮಾಡಲಱವರೆ ನಿಜ ಫಲಾವಳಿ ಪುಷ್ಪನಿಕರವನು
ನೀಡಿ ಕಾಣಿಕೆಗಳನು ಹರುಷದ
ಗಾಢಿಕೆಯ ಪುಳಕಾಂಕುರಂಗಳು
ಕೂಡೆ ತಲೆವಾಗಿವೆ ಮಹೋತ್ತಮರಂತೆ ನೋಡೆಂದ ೬

ಮುನ್ನ ಮಾಡಿದ ಪಾಪದಿಂದು
ತ್ಪನ್ನವಾದವು ಮೂಢ ಯೋನಿಯೊ
ಳಿನ್ನು ಬರಲಾರೆವು ಭವಾರ್ಣವದೊಳಗೆ ತಾವೆಂದು
ನಿನ್ನ ಸಿರಿ ಪದ ಕಮಲ ಯುಗಳಕೆ
ನನ್ನಿನೆಱೆ ತಲೆವಾಗಿ ಪಾಪ ಮ
ಹಾರ್ಣವನನುತ್ತರಿಸುತಿವೆ ತರುನಿಕರ ನೋಡೆಂದ ೭

ಭಾವಿಸಲು ನೋಡಣ್ಣ ಮುನಿಗಳೊ
ದೇವನಿಕರವೊ ಪಾಡುವೀ ಭೃಂ
ಗಾವಳಿಗಳಖಿಳಾಘಹರವಹ ನಿನ್ನ ಚರಿತವನು
ನಾವು ವನದೊಳಗಿರ್ದಡೆಯು ನಿಜ
ದೈವವನು ಬಿಡುವರೆ ಮಹೋತ್ತಮ
ರೀ ವಿಪಿನದಲಿ ಗೂಢಚಾರಿಗಳಾಗದಿರರೆಂದ ೮

ಯೋಗಿ ಚೇತೋದೂರನಹ ನಿ
ನ್ನಾಗಮನವಾಯ್ತೆಂದು ಮುದದಲಿ
ಸೋಗೆಗಳು ನೋಡುತ್ತ ನೃತ್ಯವ ಮಾಡುತಿವೆ ನಲಿದು
ಭಾಗವತರಂದದಲಿ ಹರುಷದ
ಸಾಗರದಲೋಲಾಡಿ ಪಾಡುವ
ಕೋಗಿಲೆಯ ಗೀತವನು ಕೇಳು ಮನೋಜ್ಞವಿದೆಯೆಂದ ೯

ಧನ್ಯೆಯಲ್ಲಾ ಧರಣಿ ನೆಱೆಈ
ನಿನ್ನ ಪದಲಾಂಛನಗಳಲಿ ನೆಱೆ
ಧನ್ಯವೀ ಗಿರಿನದಿ ತೃಣಾದಿಯನಿತ್ತು ನವಗಿಂದು
ಧನ್ಯವೀ ತರುವೃಂದ ಫಲಕುಸು
ಮೋನ್ನತಚ್ಛಾಯಾದಿ ಸೌಖ್ಯವ
ನಿನ್ನವರಿಗೊಲಿದೀವವಾಗಿ ಜಗತ್ರಯದಲೆಂದ ೧೦

ಇಂತನುಗ್ರಹಿಸುತ್ತ ಲಕ್ಷ್ಮೀ
ಕಾಂತನಾ ವೃಂದಾವನದ ತರು
ಸಂತತಿಗೆ ಖಗ ಮೃಗ ನದೀವನ ಗಿರಿಗಳಿಂಗೊಲಿದು
ಅಂತವಿಲ್ಲದ ಕೃಪೆಯನಾತ್ಮ
ಸ್ವಾಂತದಲಿ ನೆಱೆ ತಳೆದು ಸಲೆ ನಿ
ಶ್ಚಿಂತೆಯಿಂದಾಡುತ್ತಲಿರ್ದನು ವಿವಿಧ ಲೀಲೆಯಲಿ ೧೧

ನೋಡು ನೆರೆದಿಹ ಹರಿಣವಧುಗಳು
ನೋಡುತಿವೆ ಗೋಪಿಯರು ನಿನ್ನನು
ನೋಡಿ ದಣಿಯದವೋಲು ಮಧುರಸ್ಮಿತ ಕಟಾಕ್ಷದಲಿ
ತೀಡುತಿದೆ ಪರಿಮಳದ ವನದಲಿ
ಕೂಡೆ ಮಂದಾನಿಲನು ಹರುಷವ
ಮಾಡುವಂತೆಲೆಯಣ್ಣ ವಿಪಿನಾಭ್ಯಾಗತರಿಗೆಂದ ೧೨

ಒಮ್ಮೆ ತುಂಬಿಗಳೊಡನೆ ಪಾಡುವ
ನೊಮ್ಮೆ ಹಂಸೆಯ ಗತಿಯಲಾಡುವ
ನೊಮ್ಮೆ ನವಿಲುಗಳೊಡನೆ ತಾ ನಿಂದಿರ್ದು ಪೆಕ್ಕಣವ
ಒಮ್ಮೆ ನಲಿದಾಡುವನು ಗಿಳಿಯಂ
ತೊಮ್ಮೆ ನಗುತೋಡುವನು ಪಾಡುವ
ನೊಮ್ಮೆ ಕೋಗಿಲೆಯಂತೆ ಹರಿ ಬಲಬಾಲಕರು ಸಹಿತ ೧೩

ಒಮ್ಮೆ ಹುಲ್ಲೆಗಳಂತೆ ಹರಿವು
ತ್ತೊಮ್ಮೆ ಗಜಪತಿಯಂತೆ ಹರಿಯಂ
ತೊಮ್ಮೆ ಹಕ್ಕಿಗಳಂತೆ ತತ್ತಜ್ಜಾತಿ ಚೇಷ್ಟೆಯಲಿ
ಒಮ್ಮೆ ನಾನಾವಿಧ ವಿಹಾರದ
ಲೊಮ್ಮೆ ಮಲ್ಲರವೋಲು ಕಾದು
ತ್ತೊಮ್ಮೆ ತುಱುಗಾವುತ್ತಲಿರ್ದರು ವನವನಾಂತದಲಿ ೧೪

ದೂರ ವನದಲಿ ತುಱುಗಳಾಡುತ
ಬಾರದಿರೆ ತಾನೊಮ್ಮೆ ಘನಗಂ
ಭೀರರವದಲಿ ಸಕಲಲೋಕಮನೋಜ್ಞಸೂಕ್ತಿಯಲಿ
ಧಾರುಣೀಪತಿ ಕೇಳು ಪಶುಗಳ
ಭೂರಿಭಾಗ್ಯನನೊಲಿದು ಕರೆದನು
ದಾರವಹ ತತ್ತದ್ಗುಣಾಂಕಿತ ವರ್ಣಸಂಜ್ಞೆಯಲಿ ೧೫

ಹಲವು ವಿಧಲೀಲೆಗಳಲಿಂತಿಂ
ತೊಲಿದು ಗೋಪಕುಮಾರಕರು ಸಹಿ
ತಲಘುವಿಕ್ರಮನಾಡಿ ಬಳಲಿದು ತಳಿರ ಹಾಸಿನಲಿ
ಮಲಗಿದನು ಮುನಿಹೃದಯ ಪಂಕಜ
ಲಲಿತ ಶಯ್ಯೆಯಲೆಸೆವ ಕರುಣಾ
ಜಲಧಿ ಗೋಪರ ತೊಡೆಯ ತಲೆಗಿಂಬಿನಲಿ ಮನವೊಲಿದು ೧೬

ಇಳೆಗಧೀಶ್ವರ ಕೇಳು ಪುಣ್ಯದ
ಫಲದ ಪರಿಣತಿಯೆಂತುಟೋ ಗೋ
ವಳರು ಕೆಲರಾ ಹರಿಯ ಮೃದುತರ ಪಾದಪಂಕಜವ
ಮೆಲುವಳದಲೊತ್ತುವರು ತಂತ
ಮ್ಮೊಳುದೊಡೆಗಳಿಗೆ ತೆಗೆದು ಯೋಗಾ
ವಳಿಸಮಾಹಿತಮತಿಗಳಱಿಯದ ಹೆಜ್ಜೆಗಳನೆಂದ ೧೭

ಕೆಲರು ಹರಿಪದಕಮಲಯುಗಳವ
ನಳುಕುಗೊಂಡೊಯ್ಯೊಯ್ಯನೊತ್ತುವ
ರೊಲಿದು ಕೆಲರೆಳೆದಳಿರ ಬಿಜ್ಜಣಿಗೆಯಲಿ ಬೀಸುವರು
ಕೆಲರು ಪುಣ್ಯ ಚರಿತ್ರ ಬಿರುದಾ
ವಳಿಗಳನು ಪಾಡುತ್ತ ಹೊಗಳುತ
ಕಳೆವರವ ಮಱೆದರು ತದಾತ್ಮಕರಾದ ಬುಧರಂತೆ ೧೮

ಈ ಪರಿಯಲಾಡುತ್ತ ಮಾಯಾ
ಗೋಪಿತಾತ್ಮಕನಾಗಿ ಸಂವಿ
ದ್ರೂಪನೆಸೆದನು ಗೋಪರೂಪದ ನಾಟಕವ ಧರಿಸಿ
ಭೂಪ ಭಕ್ತರ ಭಾಗ್ಯನಿಧಿ ಲೋ
ಕೋಪಕಾರಚರಿತ್ರನೊಡೆಯನು
ಗೋಪಬಾಲಕರಿಗೆ ನಿಜಾಂಘ್ರಿಯ ಸನ್ನಿಧಿಯನಿತ್ತು ೧೯

ಇರಲಿರಲು ಶ್ರೀದಾಮನೆಂಬನು
ಪರಮ ಸಖ ಹಿತಕಾರಿ ಬಲ ಕೃ
ಷ್ಣರಿಗೆ ತಾನಿಂತೆಂದನಾ ಗೋಷ್ಠಿಯಲಿ ಕುಳ್ಳಿರ್ದು
ಸರಸ ಮಿಗಲಾ ಸಕಲ ಗೋಪಾ
ಲರಿಗೆ ನಿರುಪಮವೆನಿಪ ವಿಪಿನಾಂ
ತರವನೊರೆವುತ ಪಕ್ವಫಲ ಭೋಜನದ ವೇಳೆಯಲಿ ೨೦

ಕೇಳು ಕೇಳೆಲೆ ಕೃಷ್ಣ ದುರ್ಜನ
ಕಾಲ ಕಲ್ಪಮಹಾಭುಜನೆ ರಿಪು
ಜಾಲ ಸೌಖ್ಯವಿರಾಮ ಕೇಳೆಲೆ ರಾಮ ಚನ್ನಿಪವ
ಕೇಳಿ ಕೆಳೆಯರಿರೊಂದು ವನವಿಹು
ದಾಲಿಸುವಡಳವಲ್ಲ ಸನಿಹದ
ತಾಳವನ ನತಪಕ್ವಫಲಭರ ಶೋಭಿತವದೆಂದ ೨೧

ಎಂಬೆನೇನನು ಪಕ್ವ ಫಲಭರ
ವಂಬರವನಳ್ಳಿಱಿಯೆ ದೆಸೆಗಳ
ನಿಂಬುಗೊಂಡಿದೆ ಪರಿಮಳದ ಪವಮಾನಸೀ ವನವ
ತಿಂಬ ಭಾಗ್ಯಾಧಿಕರ ಕಾಣೆನು
ಹಂಬಲಿಸಬೇಡದನು ಧೇನುಕ
ನೆಂಬವನು ಕಾದಿಹನು ದೈತ್ಯನ ನೋಡಲರಿದೆಂದ ೨೨

ಕತ್ತಲಿಸಿಕೊಂಡಿಹುದು ವನವದು
ಕತ್ತೆಯಾಕೃತಿಯಾಗಿ ತಾನಿಹ
ನತ್ಯಧಿಕ ಬಲವೀರ್ಯಗರ್ವಿತನವನ ಪರಿವಾರ
ಕತ್ತೆಗಳು ದಾನವರ ವನವದು
ಮೃತ್ಯುವಿನ ಬೀಡಿಕೆ ಮಹಾಹಿಯ
ಹುತ್ತಹೊಗಲರಿದೆಮರರಿಗೆ ಸಹಿತವರ ದೆಸೆಗೆಂದ ೨೩

ಸಾಯರೇ ಹುಟ್ಟಿದವರಿದ್ದಿ
ತ್ತಾಯುವಂತರಿರಿಪ್ಪ ಸಿದ್ಧಿಯ
ದಾಯವಾದರೆ ಸಾಕು ಕಲ್ಪಾಂತರ ತರುಗಳಂತೆ
ಕಾಯವಿಡಿದಿದ್ದೇನು ಫಲ ನಿ
ರ್ನ್ಯಾಯತಿಕೆಯೆಂತೆನಲು ಬಲನಾ
ರಾಯಣರು ನಡೆ ತೋಱಸೆಂದರು ದೈತ್ಯನಿಹ ವನವ ೨೪

ಹೊಕ್ಕರಮರಾರಿಗಳ ವನವನು
ಮಿಕ್ಕರೋರೊಬ್ಬರನು ಮಿಗೆ ಹಿಂ
ದಿಕ್ಕಿ ಬೊಬ್ಬಿಱಿದಾರ್ದು ಗೋಪಕುಮಾರಕರು ನಲಿದು
ಸೊಕ್ಕಿದಾನೆಯ ಮಱಿಗಳಂತಿರ
ಲೊಕ್ಕಲಿಕ್ಕಿದರಲ್ಲಿಗಲ್ಲಿಗೆ
ಜಕ್ಕಲಿಸಿದರು ತಾಳವನವನು ತುಱುಗಳನು ಹೊಗಿಸಿ ೨೫

ಬಾಲಕರ ಹಿಂದಿಕ್ಕಿ ಹೊಕ್ಕಾ
ತಾಳಕೇತನನೆರಡು ಕೈಯಲಿ
ತಾಳಮರಗಳನಲುಗಿ ಕೆಡಹಿದನಾನೆವರಿವರಿದು
ತಾಳತರು ಫಲನಿಕರವನು ಹೇ
ರಾಳವೆನೆ ಕೈ ವೀಸಿದನು ಗೋ
ಪಾಲ ಬಾಲಕರಿಂಗೆ ತಾನಿಹೆನಂಜಬೇಡೆನುತ ೨೬

ಹಬ್ಬವನು ಮಾಡಿದರು ಹರಿಬಲ
ರೊಬ್ಬರೊಂದೊಂದೆಸೆಗೆ ಹರಿಹರಿ
ದುಬ್ಬಿ ಕಂಟಕರೊಡಲಲಂತಸ್ತಾಪವಡಿಗಡಿಗೆ
ಉಬ್ಬಲಬ್ಬರಿಸಿದರು ಗೋಪರು
ದುರ್ಬಲರು ಹರಸಿದರು ಹರಿಯನು
ಸರ್ಬಲೋಕಾಧೀಶನಾಗೆಮಗಾಳ್ದನಾಗೆನುತ ೨೭

ಏನಿದೆತ್ತಣ ರಭಸವೆನ್ನೀ
ಕಾನನಕೆ ಬಹರಾರು ಭಾಪವ
ಸಾನಕಾಲವದಾರಿಗೋ ಕೈಗೂಡಿತಿಂದಿನಲಿ
ಬೋನವಾಯಿತ್ತೆನ್ನ ಪುಣ್ಯಾವ
ನೇನನೆಂಬೆನೆನುತ್ತ ಜಡಿದಾ
ದಾನವಾಧಿಪನೆದ್ದನವನಿಯನೊದೆದು ಬೊಬ್ಬಿಱಿದು ೨೮

ಅವನಿ ಕಂಪಿಸೆ ಕುಲಗಿರಿಗಳವ
ಯವದ ಗತಿಗಾಡಿದವು ಬೊಬ್ಬೆಗೆ
ದಿವವನುಳಿದರು ಸುರರು ಸಾಗರವೇಳು ಸೊಸಿದವು
ಜವಗೆ ನೂರ್ಮಡಿಯಾಗಿ ರಣರೌ
ದ್ರವನು ತಳೆದಮುರಾರಿ ಬಲಮಾ
ಧವರಿಗಭಿಮುಖನಾಗಿ ಬಂದನು ಬಹಳ ರೋಷದಲಿ ೨೯

ಬಂದು ದಾನವಕತ್ತೆ ಘನರವ
ದಿಂದೊದಱೀ ಜಗವನೆಲ್ಲವ
ನೊಂದು ಹಿಡಿಯಲಿ ತಳೆದ ಬಲರಾಮಂಗೆ ಕಡುಮುಳಿದು
ಹಿಂದುಮುಂದೆನೆ ನಿಂದು ಹಿಂಗಾ
ಲಿಂದೊದೆದು ವಕ್ಷಸ್ಥಳವನಾ
ಯೆಂದೊದಱಿ ಹಿಮ್ಮೆಟ್ಟಿ ಪುನರಪಿ ತಾಗಿದನು ಬಲನ ೩೦

ಮತ್ತೊದೆವ ಖಳನೆರಡು ಕಾಲ್ಗಳ
ನೊತ್ತರಿಸಿ ಹಿಡಿದಭ್ರದಲಿ ಬೀ
ಸುತ್ತ ಬೀಸಾಡಿದನು ಗಗನಾಂಗಣಕೆ ಬಲಭದ್ರ
ಹಸ್ತವೊಂದಱಲೇನನೆಂಬೆನು
ಮರ್ತ್ಯನಾಟಕದನುಗುಣದ ಲೀ
ಲೋತ್ತರದ ಮಹಿಮೆಯನು ಬಣ್ಣಿಸಬಲ್ಲರಾರೆಂದ ೩೧

ಬೀಸುವಾಗಳೆ ಖಳನ ತನು ಹೊಱ
ಬೀಸಿತಸುರನ ಹೆಣನನುತ್ಕಟ
ರೋಷದಲಿ ತಿರುಹಿಟ್ಟನೊಪ್ಪುವ ಹನೆಯ ಕೊನೆಗಳಿಗೆ
ಘಾಸಿಯಾಯಿತು ತಾಳವನಪರಿ
ವೇಷದಾ ದ್ರುಮನಿಕರವವನಿಗೆ
ಹಾಸಿ ಕೆಡೆದವು ಮರಮರನನೊಂದೊಂದನಂಡಲೆದು ೩೨

ಖಳನೊಡಲು ಕರಚರಣ ಹತಿಯಲಿ
ಸುಲಿಗೆವಡೆದುದು ವಿಪಿನ ಭುವನ
ಪ್ರಳಯದಂದಿನ ಪವನನಟ್ಟಿದವೋಲು ತನಿಗೆಡೆದು
ಭಳಿರೆ ಭಾಪುರೆ ದೈತ್ಯ ಕದಳೀ
ಕುಲ ಕಲ್ಪಸವಿಾರ ಮಲೆವರ
ಕುಲಕುಠಾರ ಯೆನುತ್ತ ಹೊಗಳುತ್ತಿರ್ದುದಖಿಳ ಜನ ೩೩

ಮತ್ತೆ ಕವಿದುದು ಮೇಲೆ ದೈತ್ಯರ
ಕತ್ತೆಗಳ ಕಡಲೇನನೆಂಬೆನು
ಮುತ್ತಿಗೆಯನದನುರಿವ ಕಿಚ್ಚನು ಶಲಭಸಂದೋಹ
ಮುತ್ತುವಂದದಲನಿತುವನು ಕೈ
ವರ್ತಿಸಿದರಂತಕಗೆ ತಿರುಹಿಡು
ತುತ್ತಮರು ಬಲಕೃಷ್ಣರಾ ಹಿಂಗಾಲ್ಗಳನು ಹಿಡಿದು ೩೪

ಏನನೆಂಬೆನು ಸುರಕುಲದ ಸು
ಮ್ಮಾನವನು ಬಱದಾಯ್ತು ದೇವೋ
ದ್ಯಾನವೆನೆ ಮಂದಾರದರಲ್ಗಳ ಮಳೆ ಮಹೀತಳಕೆ
ಜೇನ ಮಳೆಗಳವೋಲು ತುಂಬಿಗ
ಳಾನುತಿಳಿವುತ್ತಿರಲು ಸುರಿದವು
ದಾನವಾಂತಕ ಹಲಧರರ ಕಾನನದ ಸರಿಸದಲಿ ೩೫

ಬಿದ್ದೊಡೆದ ಪರಿಪಕ್ವ ಫಲದಲಿ
ಗರ್ದಭಂಗಳ ಹೆಣನ ರಕುತದ
ಹೆದ್ದೊಱೆಯ ಹೊನಲಿನಲಿ ತಣಿದುದು ಕೂಡೆ ವನಭೂಮಿ
ರೌದ್ರವನು ವನದೊಳಗೆ ಹರಿಬಲ
ಭದ್ರರಿಂತೆಸಗಿರಲು ತಾವರೆ
ನಿದ್ರೆಗಭಿಮುಖವಾಯ್ತು ನಿರ್ದೆಶೆಯಾಯ್ತು ರವಿದೀಪ ೩೬

ಎಂಬೆನೇನನು ದೈತ್ಯಮಥನಕ
ರಾಂಬುಜಸ್ಪರ್ಶನಹತಾಘರ
ನಂಬುಜಪ್ರಿಯನೂರ್ಧ್ವಗತಿಗೈದಿಸುತ ನಿಜಕರವ
ಅಂಬರಕೆ ನೆಗಹಿದನೊ ತದ್ರುಧಿ
ರಾಂಬುಸಂಸ್ಪೃಷ್ಟವನು ಹೇಳೆನೆ
ಹೊಂಬಿಸಿಲು ರಂಜಿಸಿತು ಗಗನಾಂಗಣವನಾವರಿಸಿ ೩೭

ಮರಳಿದವು ತುಱುವಿಂಡು ಬಲಕೃ
ಷ್ಣರ ಕೊಳಲ ದನಿಗೇಳುತೂರಿಗೆ
ತೊರೆದ ಕೆಚ್ಚಲ ಭಾರದಲಿ ತೊನೆವುತ್ತ ಸಂದಣಿಸಿ
ಖರಖುರಾಗ್ರದಲವನಿಯನು ಗ
ಬ್ಬಱಿಸಿ ಗಜಱುವ ವೃಷಭತತಿ ಮೋ
ಹರಿಸಿ ನಡೆದವು ದೆಸೆದೆಸೆಗೆ ಕೆಂದೂಳಿ ಪಲ್ಲವಿಸೆ ೩೮

ಹಿಂದೆ ಗೋಪಕುಮಾರಕರು ಬರೆ
ಸಂದಣಿಸಿ ಹೊಂಗೊಳಲು ಕೊಂಬುಗ
ಳಿಂದೆಸೆಯೆ ಪೊಗಳುತ್ತ ತನ್ನೆಡಬಲದಲುರವಣಿಸಿ
ಮುಂದೆ ತುಱುಗಳು ನಡೆಯಲೊಪ್ಪಿರೆ
ಮಂದಗಮನದಲಚ್ಯುತನು ನಡೆ
ತಂದನಂಬರತಳದಲಮರರು ಜಯತುಜಯಯೆನಲು ೩೯

ನಗೆಮೊಗದ ಕಿಱುಬೆಮರ ಕೆಂದೂ
ಳಿಗಳಲೊಪ್ಪಂಬಡೆದ ಸುಳಿಗುರು
ಳುಗಳ ಕತ್ತುರಿವೀಲಿಗಳ ಮುಡಿಗಂಟಿನೊಳು ಮೆಱೆವ
ಮಘಮಘಿಪ ಮಲ್ಲಿಗೆಯಲರ್ಗಳ
ದೃಗುಯುಗಳ ದೀಧಿತಿಯ ಸುಲಿಪ
ಲ್ಲುಗಳ ಮೋಹನಮೂರ್ತಿ ಬಂದನು ನಂದಗೋಕುಲಕೆ ೪೦

ಕೊಳಲದನಿಗೀಬಂದನಿಗೊ ಗೋ
ಕುಲದರಸನೀ ಬಂದನೆನುತಾ
ಲಲನೆಯರು ತಂತಮ್ಮ ಗೃಹಕೃತ್ಯಂಗಳನು ಬಿಸುಟು
ನಳಿನನಾಭನನೀಕ್ಷಿಸುವ ಮನ
ದೊಲವಿನಲಿ ಹರಿತಂದು ನೆರೆದಿ
ಕ್ಕೆಲದಲೀಕ್ಷಿಸುತಿರ್ದರಚ್ಯುತನಾನನಾಂಬುಜವ ೪೧

ಅಂಗನೆಯರಚ್ಯುತನ ಮಧುರಾ
ಪಾಂಗಸುಧೆಯನು ನೀಲಮೇಘನಿ
ಭಾಂಗಸೌಂದರ್ಯಾಮೃತವನೋರಂತೆ ಕುಡಿಕುಡಿದು
ಕಂಗಳಲಿ ನೆಱೆ ದಣಿವ ಹಡೆಯರ
ನಂಗಶರಭಗುನೆಯರು ನವಚಿ
ತ್ರಂಗಳಂತೆಸೆದಿರ್ಪರಿಕ್ಕೆಲದಲಿ ಮಹಾತ್ಮೆಯರು ೪೨

ನೋಡುತೆಡಬಲವಂಕವನು ಮಾ
ತಾಡುತವರವರಿಚ್ಛೆಯನು ಕೈ
ಗೂಡಿಸುತ ಸುಸ್ನೇಹ ಕರುಣಾಪಾಂಗದೃಷ್ಟಿಯಲಿ
ನೀಡಿ ಭುಜವನು ಕೆಳೆಯರನು ಮಿಗೆ
ಯಾಡಿಸುತ ಬಲಗೈಯಲೊಪ್ಪಿರೆ
ಕೂಡೆ ಲೀಲಾಕಮಲವದು ನಡೆತಂದನೊಲವಿನಲಿ ೪೩

ಹಿಂದೆ ಕೆಳೆಯರು ಬಾಲಚರಿತವ
ನಂದೊಲಿದು ಪಾಡುತ್ತ ಮಾಗಧ
ರಂದದಲಿ ಹೊಗಳುತ್ತ ಬರೆ ಬಹುವಿಧವಿನೋದದಲಿ
ಇಂದುವದನೆಯರಿಕ್ಕೆಲದಲೊಲ
ವಿಂದ ಭಜಿಸುತ್ತಿರೈತರಲು ಗೋ
ವಿಂದನಾ ಗೋಕುಲವ ಹೊಕ್ಕನು ವಿಧಿತ ವಿಭವದಲಿ ೪೪

ಗೋಪಿಯರು ಗೋವಿಂದಮೂರ್ತಿಯ
ರೂಪಸುಧೆಯನು ಸವಿದು ವಿರಹದ
ತಾಪವನು ಕಂಗಳಲಿ ಕಳೆದರು ಕಮಲವದನೆಯರು
ಆ ಪರಮ ಪೂರುಷನ ಕೃಪೆಯನು
ಭೂಪ ಹವಣಿಸಲರಿದು ನಿಗಮು ಕ
ಲಾಪವೆತ್ತಲುಕಾಣದಾವನ ಪಾದರೇಣುಗಳ ೪೫

ಬಂದುದೈ ತನ್ನಾನೆ ತನ್ನಸು
ಬಂದುದೆನ್ನ ಕುಲಾತ್ಮದೇವರೆ
ಬಂದನೆನ್ನ ಸ್ವಾಮಿಯೆನ್ನಾನಂದ ನಿಧಿ ಬಂದ
ಎಂದು ರೋಹಿಣಿಸಹಿತ ಮುದದಲಿ
ನಂದ ಗೋಪಿ ಸಭಾಗ್ಯೆ ಬಲಗೋ
ವಿಂದರನು ಬಂದಿದಿರುಗೊಂಡೊಯ್ದಳು ನಿಜಾಲಯಕೆ ೪೬

ಮೈಯ ಹುಡಿಯನು ತೊಡೆದು ತೈಲವ
ನೊಯ್ಯನಂಗದಲೊತ್ತಿ ಮುದದಲಿ
ಮಾಯಲೆಱೆದುಷ್ಣೋದಕವನುದ್ವರ್ತನವ ಮಾಡಿ
ಮೈಯನುಂಪಿಕ್ಕಿದಳು ಮಾನಿನಿ
ತುಯ್ಯಲನು ತನ್ನಂಗಿ ತನ್ನಯ
ಕೈಯಲೇ ಬಡಿಸಿದಳು ಹೊಸ ತುಪ್ಪವನು ಷಡ್ರಸವ ೪೭

ಹಾಲು ಸಕ್ಕರೆಸಹಿತ ನಂದನ
ಲೋಲಲೋಚನೆಯುಣಬಡಿಸಿ ಸಿರಿ
ಲೋಲ ರಾಮರಿಗಿತ್ತು ವರ ಕಪ್ಪುರದ ವೀಳೆಯವ
ಬಾಲೆ ಸಿರಿಮಂಚದಲಿ ನಿದ್ರಾ
ಲೋಲರನು ಮಲಗಿಸಲು ಪರಮಕೃ
ಪಾಳು ನಿತ್ಯಾತುಮನು ನಿದ್ರೆಗೆ ಮಾಡಿದನು ಮನವ ೪೮

ಹದಿನೈದನೆಯ ಸಂಧಿ ಮುಗಿಯಿತು

# ಹದಿನಾರನೆಯ ಸಂಧಿ

ವಿಷದ ಮಡುವನು ಕಲಕಿ ಕಾಳಿಯ
ವಿಷಧರೇಂದ್ರನ ಮದವನುದ್ವ
ರ್ಶಿಸಿ ಸುರಾವಳಿವಂದ್ಯನೆಬ್ಬಟ್ಟಿದನು ವಾರಿಧಿಗೆ

ಹರಿದುದಂಧ ತಮಿಸ್ರ ಹರಿಪದ
ದರುಶನದಲೀ ಸಕಲ ಜೀವರ
ಭರಿತ ಹೃದಯಗ್ಲಾನಿಯೀ ಪರಿ ಹರಿವುದೆಂಬಂತೆ
ತರಣಿ ಯುದಯದಲಕ್ಷ್ಣಿಗಳಗವ
ಸರದ ಹದನಾಯ್ತಾತ್ಮ ವಿದ್ಯಾ
ಪರಿಹೃತಗ್ಲಾನಿಯಲಿ ನಿಜವನು ಬುಧರು ತಿಳಿವಂತೆ ೧

ಹರಿನಯನ ಸರಸಿರುಹಸಿರಿನಿಜ
ಸಿರಿಯ ಕದ್ದಿರುಳೊಯ್ಯೆ ವಿರುತಾ
ವರೆಗಳಾದವೊ ಸರಸಿಜಶ್ರೀ ಕೋಶಗೃಹವೆನಲು
ಅರಳಿದವು ತುಂಬಿಗಳ ವಶದಲಿ
ಪರಿಮಳದ ಮೃಷ್ಟಾವಶಿಷ್ಟದ
ಸರಕು ಸೇರಿದವೆನಲು ಮೆರೆದುದು ದಿವಸಕರನುದಯ ೨

ಮುಗಳ ಮೈಯಲಿ ಹೊತ್ತ ದೋಷವ
ತೆಗೆವುದೊಡೆಯರೆನುತ್ತ ಕಿರಣಾ
ಳಿಗಳನಟ್ಟಿದವೋಲು ರವಿ ರಾಜೀವಲೋಚನಗೆ
ತೆಗೆದು ನಿಂದುದುತಿಮಿರ ಕರುಣಾ
ಳುಗಳ ದೇವನು ಮೈಮುರಿದು ದೃಗು
ಯುಗಳ ಕಾರುಣ್ಯೇಕ್ಷಣದ ಮುದ್ರೆಯಲಿ ಭಾವಿಸಿದ ೩

ಸತಿಗಳೊಪ್ಪುವ ನಯನ ಛಾಯಾ
ರತಿಗೆಳಸೆಯಲು ಜನನಿ ಮಂದ
ಸ್ಮಿತವದನ ಲಕ್ಷ್ಮೀ ನಿರೀಕ್ಷಣದರ್ಥಿಯಿಂದೊಲಿದು
ಸುತನೆ ಬೆಳಗಾಯ್ತೆನ್ನ ಜೀವ
ಸ್ಮಿತನೆ ಬೆಳಗಾಯ್ತೆನಲು ಮುನಿಜನ
ಮತಿವಿದೂರನು ನಗುತ ಕಣ್ದೆಱೆದೆದ್ದನೊಲವಿನಲಿ ೪

ಎದ್ದು ಕಾಲ್ಮೊಗದೊಳೆದು ಮುನಿಜನ
ಹೃದ್ಯನಾರೋಗಿಸಿದನಮೃತಾ
ಸ್ವಾದ್ಯವನು ಷಡ್ವಿಧ ರಸಾಯನ ಭಕ್ಷ್ಯ ಭೋಜ್ಯವನು
ಅದ್ವಯನು ಹೊಂದೊಡಿಗೆ ತೊಟ್ಟನ
ವದ್ಯನಮಳಾಂಬರವನುಟ್ಟನು
ಭದ್ರಭೂಷಣ ಮೂರ್ತಿ ಮಾನುಷ್ಯದಲಿ ರಂಜಿಸಿದ ೫

ಮತ್ತೆ ಗೋಪ ಕುಮಾರಕರ ಸಹಿ
ತುತ್ತಮಾಮಳ ಕೀರ್ತಿ ತುಱುಗಳ
ವೊತ್ತ ಸಹಿತಾಡುತ್ತ ವೃಂದಾವನ ವನಾಂತರಕೆ
ತತ್ವನಿಧಿ ಗೋಪಿಯರ ಕಂಗಳು
ಚಿತ್ತವೃತ್ತಿಗಳೊಡನೆ ಕಳು
ಹುತ್ತ ಬರೆ ಕರುಣಾಳು ಬಿಜಯಂಗೆಯ್ದನೊಲವಿನಲಿ ೬

ಹಿಂದಿರಿಸಿ ಬಲರಾಮನನು ಗೋ
ವಿಂದನಾಡುತ ತುಱುಸಹಿತ ಮ
ಧ್ಯಂದಿನದ ವೇಳೆಯಲಿ ನಲಿದಾ ಗೋವಳರ ಸಹಿತ
ಬಂದನಾ ಕಾಳಿಯ ಮಹೋರಗ
ಮಂದಿರದ ದುಸ್ಸಹವೆನಿಪ ಕಾ
ಳಿಂದಿಗಾಗಿತ್ತಡಿಯ ವಿಷದಿಂದುರಿವ ಜಲದೆಡೆಗೆ ೭

ಬಿಸಿಲ ಝಳದಲಿ ನೀರಡಸಿ ಪಶು
ವಿಸರ ನೂಕಿತ್ತುರಗ ರಾಜನ
ವಿಷದ ಮಡುವಿನ ದೆಸೆಗೆ ಗೋಪಕುಮಾರಕರು ಸಹಿತ
ಅಸುರರಿಪುವಿನ ಕೃಪೆಯನವರೀ
ಕ್ಷಿಸುವವೋಲುದಕವನು ಕುಡಿಕುಡಿ
ದಸುವ ನೀಗಿದರರ್ಭಕರು ತುಱುವಿಂಡುಗಳು ಸಹಿತ ೮

ಮೇಲೆ ಹಾಱುವ ವಿಹಗ ವಿಷದಾ
ಜ್ವಾಲೆಯಲಿ ಗಱಿಸೀದು ಜಲದಲಿ
ಬೀಳುವುವು ತತ್ತೀರ ವನತರುನಿಕರವುರಿಹೊಯ್ದು
ಹೇಳಲೇನೊಣಗಿಹುದ ನೋಡದೆ
ಬಾಲಕರು ತುಱುವಿಂಡು ಸಹಿತ ಕ
ರಾಳವಿಷ ಜಲಪಾನ ಮೂರ್ಛಿತರಾದರಾ ಕ್ಷಣಕೆ ೯

ಕಂಡನಾ ಕೋಲಾಹಲದ ತುಱು
ವಿಂಡುಗಳ ನಾಶವನು ಗೋಪರ
ತಂಡದಸು ಸಂಕ್ಷಯವನಕಟಕಟೆದೇನೆನುತ
ಕಂಡು ನಿಜದೃಷ್ಟಿಯಲಿ ಕಾಲನ
ದಂಡಿಯೀ ಜಲವಾಯ್ತು ಜೀವವ
ಕೊಂಡುದಿದೆಲಾ ಹಾಯೆನುತ ನೋಡಿದನು ಕರುಣದಲಿ ೧೦

ನೋಡಿದಾಗಳೆ ಶಿಶುಪಶುಗಳಸು
ಕೊಡೆ ಪಸರಿಸಿ ಬಿಗಿದ ನಿದ್ದೆಯ
ಕೇಡಿನಲಿ ಮೈಮುರಿದು ಕಂದೆಱೆವಂತೆ ತಮತಮಗೆ
ಆಡುತಿದ್ದರು ತುಱು ಸಹಿತ ದಿಟ
ನೋಡಿದಡೆ ಬ್ರಹ್ಮಾಂಡ ಕೋಟಿಯ
ಮಾಡಳೀ ಮಝು ಮಾಯೆಯಾತನ ನಯನ ಸಂಜ್ಞೆಯಲಿ ೧೧

ಕೆಟ್ಟುದೀ ನದಿಯಕಟಕಟ ಗಡಿ
ಗೆಟ್ಟ ಜಲಚರ ನಿಕರವನು ನೆಱೆ
ಸುಟ್ಟುದೀ ವನತರುಗಳುರಿವುತ್ತಿವೆ ವಿಷಾಗ್ನಿಯಲಿ
ಮುಟ್ಟಿದವರಿಂಗೀ ಹದನ ಕೈ
ಯಟ್ಟುತಿದೆಲಾ ಭಾಪಿವನನೆ
ಬ್ಬಟ್ಟದಲ್ಲದೆ ನದಿಯ ಜಲವಿದು ಸೇವ್ಯವಲ್ಲೆಂದ ೧೨

ಮಜ್ಜನನವಿದು ಸಕಲ ಲೋಕದ
ಸಜ್ಜನಾನುಗ್ರಹಕೆ ಕಾರಣ
ದುರ್ಜನರ ನಿಗ್ರಹಕೆ ಕಾರಣವಾಗಿ ಮತ್ತಿಂದು
ವರ್ಜಿಸಿದಡಿದನಾರು ಮಾಡುವ
ಸಜ್ಜನಾನುಗ್ರಾಹಕರು ದಿಟ
ಕಬ್ಜಜಾದಿ ಮಹೇಶರಿದಕೆ ಸಮರ್ಥರಲ್ಲೆಂದ ೧೩

ಎನುತ ಮನದಲಿ ನೋಡಿ ಕರುಣಾ
ವನಧಿ ಪೀತಾಂಬರದ ಸೆಱಗನು
ಕನಕ ರಸನಾಬದ್ಧದಲಿ ಸಂಧಿಸಲು ಬಿಗಿದುಟ್ಟು
ದನುಜರಿಪು ಕುರುಳೋಳಿಗಳನೊ
ಯ್ಯನೆ ತೆಗೆದು ಬಿಗಿದೊಸೆವ ಮುಡಿ
ಗಟ್ಟಿನಲಿ ನೇವರಿಸಿದನು ಮಿಗೆ ಮುಂಗೈಯ ಕಂಕಣವ ೧೪

ವಿಷಜಲಾಶಯದಂತಿಕದಲೊಂ
ದೆಸೆವ ಕಡಹದ ತರುವು ಮುಗಿಲು
ದ್ದ ಸಮನೆನೆ ಪಲ್ಲವಿಸಿ ನೆರೆ ಕಂಗೊಳಿಸಿ ಬೆಳೆದಿರಲು
ಅಸುರರಿಪು ನಗುತಡರಿದನು ಪದ
ವಿಸರುಹಂಗಳು ಕೆಂಪಡರಲಾ
ಗಸದಲಮರಾವಳಿಯುಘೇಯೆನಲಾ ಮಹಾದ್ರುಮನ ೧೫

ಗಂಡುಗಲಿಗಳ ದೇವನೊದರಿಸಿ
ದಂಡೆಯನು ಬೊಬ್ಬಿಱಿದು ಮರದಿಂ
ದಿಂಡುಪಾಯ್ದನು ದುರ್ನಿರೀಕ್ಷ್ಯವೆನಿಪ್ಪ ಮಡುವಿನಲಿ
ಕಂಡು ಸುರರಂಬರದಲದನಾ
ಖಂಡಲಾದ್ಯರು ತಮತಮಗೆ ಭಯ
ಗೊಂಡು ನಡುಗಿದರಱಿಯದವರನುಪಮನ ಮಹಿಮೆಗಳ ೧೬

ಕೇಱ್ ಹಾಯ್ದರೆ ವಿಷದ ಮಡುವದು
ನೂಱು ಬಿಲ್ಲಂತರದಳತೆ ನೀ
ರೇಱಲುಕ್ಕಿತು ಬಹಳತರ ನಿರ್ಘೋಷದಲಿ ಜಡಿದು
ಕಾಱಿದನೊ ಕಡುಗನಲಿದಹಿಪತಿ
ಘೋರ ವಿಷವನು ಭುವನ ಜನ ಸಂ
ಹಾರ ಸಮಯವಿದಾಯ್ತೆನಲು ಬೆದಱಿಸಿತು ಮೂಜಗವ ೧೭

ಮತ್ತಗಜದಂದದಲಿ ತೋಳ್ಗಳ
ನೆತ್ತಿ ಹೊಡೆಯುತ್ತಡಿಗಡಿಗೆ ಕಲ
ಕುತ್ತ ಮಂದರದಂತೆ ಮಂದರಧಾರಿ ಮುರಿ ಮುರಿದು
ಸುತ್ತಿ ಸುಳಿವುತ್ತಿರಲು ಕಾಳಿಯ
ನೆತ್ತಣದು ಘನರಭಸವೆನುತು
ದ್ವೃತ್ತ ಫಣಿ ಮಂಡಲದಲಾಲಿಸಿದನು ಮಹಾರವವ ೧೮

ನೋಡಲರಿದಮರರಿಗೆ ತನ್ನಯ
ಬೀಡನಿದನಾ ವಿಹಗಪತಿ ಮಾ
ತಾಡಲಮ್ಮನು ಮಿಕ್ಕ ನರರೀ ವಿಷದ ಮಡುವಿನಲಿ
ಕೂಡಲಮ್ಮುವರುಂಟೆ ಹೊಕ್ಕೋ
ಲಾಡಲಾಪವರಾರೊ ದುರಾತ್ಮ
ನೋಡುವೆನು ತಾನೊಮ್ಮೆ ಯೆನುತುರಗೇಂದ್ರನೆಯಿತಂದ ೧೯

ಕ್ಷೀರವಾರಿಧಿಶಯನನಾ ವಿಷ
ವಾರಿ ಕೇಳಿಯಲಿರಲು ಕಾಣುತ
ಚಾರು ಚರಣಾಂಬುಜದ ತಳವನುದಾರ ರೇಖೆಗಳ
ವೀರಬಾಲಕನಾರೆನುತ ಕಾ
ಳೋರಗನು ಕಮನೀಯ ಮೂರ್ತಿಯ
ಭೂರಿ ತೇಜವನಾವರಿಸುತೆಯಿತಂದನುರೆ ಮುನಿದು ೨೦

ಊರಿ ಮರ್ಮಂಗಳನು ಭುವನಾ
ಧಾರ ಮೂರ್ತಿಯನೊಂದಧಿಕವಹ
ನೂಱು ಮುಖದಲಿ ಸುತ್ತಿಕೊಂಡೊಳಗಿಕ್ಕಿ ತೆಕ್ಕೆಯಲಿ
ತೋಱಿದನು ನಿಜವಿಷದ ವೀರ್ಯದ
ಸಾರತರ ಸಾಮರ್ಥ್ಯವನು ದೊ
ರಾರನಖಿಳೇಶ್ವರನೊಡನೆ ನಾಗೇಂದ್ರನುಱೆ ಮುನಿದು ೨೧

ಇತ್ತಲುರಗನ ಬಂಧದಲಿ ಹರಿ
ಮೂರ್ತಿ ಮುಳುಗಿರೆ ಕಾಣದಾ ತಡಿ
ಯತ್ತಲಾ ಕೆಳೆಯರು ನಿಜಾತ್ಮ ಪ್ರಾಣನಾಥನನು
ಎತ್ತಲೇನಾದನೊ ಯೆನುತ ಮೊಗ
ವೆತ್ತಿ ನೋಡುತ ನೋಡುತವನಿಯಲಿ
ಲತ್ತು ಕೆಡೆದರು ಮೂರ್ಛೆಯಲಿ ಗೋಪಾಲ ಬಾಲಕರು ೨೨

ಏನನೆಂಬೆನು ಭೂಪ ಘನ ದು
ಮ್ಮಾನದಲಿ ಪಶುಗಳು ಸಹಿತ ಕೃ
ಷ್ಣಾನನಾರ್ಪಿತ ದೃಷ್ಟಿಯಲ್ಲೊಗುವಶ್ರುಪೂರದಲಿ
ಕಾನನದ ಚಿತ್ರದವೊಲುತ್ಕಟ
ದೀನಭಾವವ ತಳೆದು ಮೂರ್ಛಾ
ಧೀನ ವೃತ್ತಿಗಳಾಗಿ ಮಿಡುಕದೆ ನಿಂದರೀಕ್ಷಿಸುತ ೨೩

ತೋಱದವು ಗೋಕುಲದಲತ್ತಲು
ಮೂಱು ತೆಱದುತ್ಪಾತವವನಿಯ
ನೋಱುಗುಡಿಸುವವೋಲು ನಭದಲಿ ದೆಸೆಯಲಾತ್ಮನಲಿ
ದೂಱದವು ಕಾನನವನೊಬ್ಬನೆ
ಬೇಱೆ ರಾಮನನುಳಿದು ಹರಿ ತುಱು
ಗಾಱರೊಡನೈದಿದುದನಱಿದಳಲಿದುದು ಜನನಿವಹ ೨೪

ಪ್ರಳಯದುತ್ಪಾತಂಗಳಾರಿಂ
ಗಳಿವ ತಂದುದೊ ಹಾಯೆನುತ ಗೋ
ಕುಲದ ಜನ ತನತನಗೆ ವಿಗತಪ್ರಾಣರಾದಂತೆ
ನಿಳಯವನು ಹೊಱವಂಟು ಹರಿಯಳಿ
ದುಳಿವರಾವಲ್ಲೆನುತ ಹೊಱವಂ
ಟಳುತ ನಡೆದುದು ಕೂಡೆ ವೃಂದಾವನಕೆ ಕಳವಳಿಸಿ ೨೫

ಮುಂದೆ ತುಱುಗಳ ಹಜ್ಜೆವಿಡಿದಾ
ನಂದಗೋಪಾದ್ಯಖಿಳ ಗೋಪರ
ವೃಂದವಾ ಗೋಪಾಂಗನೆಯರಾ ಬಾಲ ವೃದ್ಧಜನ
ಸಂದಣಿಸಿ ನಡೆತಂದುದಾ ಕಾ
ಳಿಂದಿಗೇಳುತ ಬೀಳುತಾ ಗೋ
ವಿಂದ ಮೂರ್ತಿಯನೀಕ್ಷಿಸುವ ಮನದೊಂದು ತವಕದಲಿ ೨೬

ಅಲ್ಲಿಗಲ್ಲಿಗೆ ಮೆಱೆವ ಹರಿಪದ
ಪಲ್ಲವದ ವಜ್ರಾಂಕುಶಧ್ವಜ
ಸಲ್ಲಲಿತ ರೇಖೆಗಳ ಹಜ್ಜೆಗಳಲ್ಲಿ ಹೊರಳುತ್ತ
ನಿಲ್ಲದೈದಿದರಱುಸುತಱುಸುತ
ಹಳ್ಳಿಯವರಾಮ್ನಾಯ ದೂರನ
ಬಲ್ಲಿರೆಂದಾ ವನದ ತರುಲತೆಗಳನು ಬೆಸಗೊಳುತ ೨೭

ಬೇಗೆಯಲಿ ಬಿದ್ದಂತೆ ಜನ ನದಿ
ಗಾಗಿ ಹರಿತಂದಾ ಜಲಾಂತದ
ಭೋಗಿ ಭೋಗ ಪರೀತನಾಗಿಹ ಕೃಷ್ಣನನು ಕಂಡು
ನೀಗಿದರು ಜೀವವನು ಜಾತ ವಿ
ಯೋಗದಲಿ ಗೋ ಗೋಪಸನಿಕರದ
ಸಾಗರದ ಸಂಕ್ರಂದನವನಾಲಿಸುತ ಮೂರ್ಛೆಯಲಿ ೨೮

ಗೋಪಿಯರು ಗೋವಿಂದ ಮೂರ್ತಿಯ
ರೂಪಗುಣಸೌಂದರ್ಯ ಮಧುರಾ
ಳಾಪವನು ನೆನೆವುತ್ತ ಕಂಬನಿಗಡಲಲಾಳುತ್ತ
ತಾಪತಪ್ತೆಯರಾಗಿ ಭುವನಕ
ಳಾಪ ಹಾಳಾಯ್ತೆನುತ ಕಂಡಾ
ಶ್ರೀಪತಿಯ ದುಸ್ಥಿತಿಗೆ ಮಱುಗಿದರಂದು ಮಱುಕೊಳಿಸಿ ೨೯

ಬಾಯಬಿಡುತೈತಂದರಂದಾ
ಸ್ತ್ರೀಯರಳಲುವ ನಂದಗೋಪಿಯ
ಕಾಯದಲಿ ಕಾಯವನು ಕೆಡಹಿ ಸಮಾನದುಃಖದಲಿ
ಬೇಯಲೊಡನೊಡನೆ ಮೂರ್ಛಾ
ಪಾಯದಲಿ ಹಲುಬುತ್ತ ಹರಿಯನು
ಸಾಯಲನುಗೈಯುತ್ತಲಿರ್ದುದು ಸಕಲಜನನಿವಹ ೩೦

ಏಕೆ ಜೀವನವಪ್ಪ ನಮಗಿ
ನ್ನೇಕೆ ನಮಗೀ ವಿಭವ ಸಾಕಿ
ನ್ನೇಕೆ ಗೋಕುಲ ಕೃಷ್ಣನೆಂಬಸು ಹೋಗಿ ನಾವೇಕೆ
ಏಕೆ ಲೋಕವಿದಿನ್ನು ಕೃಷ್ಣ ವಿ
ಲೋಕವೇ ನಿಜಲೋಕವೆಮಗೆಂ
ದಾಕುಳೆಯರಳವಳಿದು ಬಿದ್ದರು ಧರೆಗೆ ಮೂರ್ಛೆಯಲಿ ೩೧

ಇರಲು ಕಾಣುತ ಕೃಷ್ಣನಾ ನಿಜ
ಶರಣಜನದಾಯಾಸ ಪಾರಂ
ಪರೆಯನಾ ಗೋಕುಲದ ದುಸ್ಸಹವೆನಿಪ ದುಸ್ಥಿತಿಯ
ನರರ ಲೀಲೆಯ ನಾಟಕವನನು
ಕರಿಸಿ ಮೈಮಱೆದಂತೆ ನಿಮಿಷಾಂ
ತರಕೆ ಮೈಮುರಿದೆದ್ದನುಗ್ರೋರಗನ ಬಂಧದಲಿ ೩೨

ಅಸುರರಿಪು ಮೈಮುರಿಯಲಾ ಶಿಶು
ಪಶುಗಳಸುಗಳು ಸಹಿತ ಗೋಕುಲ
ದಸು ಮುರಿದುದೊಡಲೊಳಗೆ ಮುಸಗಿದುದೊಡನೆ ಮುಸಗಿದನು
ನಸುನಗುತ ಹರಿ ನೋಡಲಾನನ
ವಿಸರ ವಿಕಸಿತವಾಯ್ತು ಜೀವ
ಪ್ರಸರ ಚೇತನಮೂರ್ತಿ ಹರಿಯೆಂಬುದನು ತೋರ್ಪಂತೆ ೩೩

ಜರಿದು ಹರಿ ಮೈಮುರಿದು ನಿಲೆ ಬಿರಿ
ದುರಗನೊಡಲಿನ ಬಂಧವನು ಬಿಡೆ
ಬಿರಿದು ಬಿಸುಟಳಲುತ್ತಕಟ ಕಡುನೊಂದು ಹೆರಸಾರ್ದು
ಉರುಹುವಂತೀರೇಳು ಜಗವನು
ಥರಥರದ ನೂಱೊಂದು ಮುಖದಿಂ
ದುರಗನುರಿಯುಗುಳುತ್ತಲಿದ್ದನು ಹಲವು ಕಂಗಳಲಿ ೩೪

ಕೆರಳಿ ನೋಡುತ್ತುರಗಪತಿ ಮೋ
ಹರದ ಹೆಡೆಗಳನೆತ್ತಿ ಪುನರಪಿ
ಹರಿಯನೊಳಕೊಂಬೊಂದು ಮನದ ಸರೋಷದುಬ್ಬಿನಲಿ
ಹರಿದು ಬರೆ ಸಮ್ಮುಖಕೆ ನಾಗನ
ಕೆರಳಿಸುತ ಬಳಲಿಸುತ ತಪ್ಪಿಸಿ
ಮುರಿ ಮುರಿದು ಮುರವೈರಿ ಸುಳಿದಾಡಿದನು ಮಡುವಿನಲಿ ೩೫

ಅದ್ದಲೊಡನಾಳುತ್ತ ಮುರಹರ
ನೆದ್ದರೊಡನೇಳುತ್ತ ತಿರುಗಿದ
ನದ್ವಯನ ಬೆಂಬಳಿಯ ಬಿಡದೋರಂತೆ ತಿರುಗುತ್ತ
ಹೊದ್ದಲಾರದೆ ತನ್ನ ಕಟವಾ
ಯಿದ್ದೆಸೆಯ ನೋಡುತ್ತ ಘನತರ
ರೌದ್ರಮುಖನುಗುಳುತ್ತಲಿರ್ದನು ರೋಷಪಾವಕನ ೩೬

ಕಾದ ಮಡಕೆಗಳಂತೆಸೆವ ನಾ
ಸಾಧರದ ವಿಷವೀರ್ಯ ದುಸ್ಸಹ
ವಾದ ಕಂಗಳ ಸುಯ್ಯಹೊಗೆಗಳ ಭೀಕರಾನನದ
ಹಾದಿಯನು ಹತ್ತಿಸುತ ಬಹ ಕಾ
ಳೋದರುರುಗನ ಕಡುಹು ತಳ ಮೇ
ಲಾದುದೆಯ್ದಲು ನೆಱೆಯದಾ ವೇದಾಂತ ವಿಶ್ರುತನ ೩೭

ಬಳಲಿದನು ನಾಗೇಂದ್ರನೊಡಲಾ
ರ್ಪುಳಿದು ತನ್ನಯ ಮುಂದೆ ರೋಷಾ
ಕುಳಿತನೆಯ್ತರೆ ಮೆಟ್ಟಿ ಹೆಡೆಗಳ ಮೇಲೆ ನಿಂದಿರ್ದು
ತುಳಿದನುರಗನ ಮಸ್ತಕದ ಮಂ
ಡಲವನರುಣತರಾಂಘ್ರಿ ಪಂಕಜ
ತಳದ ರೇಖೆಗಳೆಸೆಯಲನುರಾವಳಿಯುಘೋಯೆನಲು ೩೮

ಮೆಟ್ಟದನು ಮುನಿದಂತೆ ದೈತ್ಯಘ
ರಟ್ಟನುರಗಾಧಿಪನ ಹೆಡೆಗಳ
ಘಟ್ಟುಗಳನೊಡನೊಡನೆ ಹೆಡೆವಣಿನಿಕರ ರಂಜಿಸಲು
ಸೃಷ್ಟಿಪಾಲಕರೊಡೆಯನುದರನಿ
ವಿಷ್ಟ ಜಗದ ಮಹಾಗುರುತ್ವದ
ಲಷ್ಟ ದಿಗಧೀಶ್ವರರು ಭಾಪೆನೆ ವಿವಿಧ ಲೀಲೆಯಲಿ ೩೯

ತಾಳ ಮದ್ದಳೆ ಶಂಖ ಪಟಹ ಸ
ಮೇಳವದ ಸಂಗೀತ ಸುಮನೋ
ಜಾಲ ವೃಷ್ಟಿಗಳಿಂದ ಗಂಧರ್ವಾಪ್ಸರಾನೀಕ
ಮೇಲೆ ಸಂಸ್ತುತಿ ಜಯರವಂಗಳ
ಲೋಲಗಿಸುತಾ ಹರಿಯ ನೃತ್ಯದ
ಲೀಲೆಗನುಗುಣವೆನಲು ಮುಸುಕಿತು ಗಗನಮಂಡಲವ ೪೦

ವ್ಯೋಮತಳವೆಡೆಗೆಡಲು ವಿಬುಧ
ಸ್ತೋಮ ನೆರೆದೋಲಗಿಸಲಾತ್ಮಾ
ರಾಮರರಸನನಂತ ಭುವನಾಧಾರನಂಘ್ರಿಗಳ
ತಾಮರಸದಳ ತಾಡನದಲು
ದ್ದಾಮದರ್ಪವನುಳಿದು ವಿಗತ
ಕ್ಷೇಮ ಜೀವಿತನಾದನುರಗಾಧೀಶನಾಕ್ಷಣಕೆ ೪೧

ಮೂಗು ಬಾಯಿಗಳಿಂದ ನೆತ್ತರ
ನಾಗನುದ್ಗಾರಿಸುತ ವಿಹ್ವಲ
ನಾಗಿ ವಿಶ್ವಾಧೀಶನಂಘ್ರಿ ಕ್ಷೇಪದುರವಣೆಗೆ
ಬಾಗಿ ಹೆಡೆಗಳನಸುವಿಗುಬ್ಬಸ
ವಾಗಿ ಕಳವಳಿಸಿದನು ದೇಹ
ತ್ಯಾಗವನು ಮಾಳ್ಪಂತೆ ಮೂರ್ಛಿತನಾದನಡಿಗಡಿಗೆ ೪೨

ಕೆಟ್ಟೆವೆನುತಾ ನಾಗಪತ್ನಿಯ
ರುಟ್ಟುದನು ಸಂವರಿಸುತೊಡಲನು
ಕುಟ್ಟಿಕೊಳುತ ದವಾಗ್ನಿಯಲಿ ನಿಂದಂತೆ ಬಸವಳಿದು
ತುಟ್ಟಸುತ ಮಱಿ ಮಕ್ಕಳನು ಮುಂ
ದಿಟ್ಟುಕೊಂಡೊಱಲುತ್ತ ಬಿದ್ದರು
ಸೃಷ್ಟಿಪಾಲಕನಂಘ್ರಿಗಾಳ್ದನನೀವುದೆಂದೆನುತ ೪೩

ಜಯ ನಮೋ ಜಗದೀಶ ಜಗದಾ
ಶ್ರಯನಮೋ ಜಗದಾತ್ಮ ಲಕ್ಷ್ಮೀ
ಪ್ರಿಯ ನಮೋ ಲಾವಣ್ಯ ಕಾರುಣ್ಯೈಕ ವಾರಿಧಿಯೆ
ಜಯನಮೋ ಭುವನೈಕ ಕರ್ತುವೆ
ಜಯ ನಮೋ ಭುವನೈಕ ಭರ್ತುವೆ
ಜಯನಮೋ ಎನುತೊಡಲನೀಡಾಡಿದರು ಹರಿಪದಕೆ ೪೪

ದೇವದೇವರ ದರುಶನವಿದೆಂ
ತಾವ ಪುಣ್ಯದ ಫಲವೊ ಬಹುಯೋ
ಗಾವಳೀ ಸಿದ್ಧಂಗೆ ದೊರಕದುದೆಂತು ತನುಗಾಯ್ತು
ಈ ವಿಷಮುಮತಿ ತಪ್ಪಿದಡೆ ಕರು
ಣಾವನಧಿ ತಪ್ಪುವುದೆ ನಿಮ್ಮಡಿ
ಜೀವದಾನವನೀವುದೆಮಗೆಂದುದು ವಧೂನಿವಹ ೪೫

ಎಸೆವ ದೇವರ ಕೋಪವಿದು ತಾ
ಮಸರೆನಿಪ್ಪೆಮಗಾಯ್ತನುಗ್ರಹ
ವಿಷಧರಾಕೃತಿಯಾಗಿ ನಿರ್ಮಿಸಿ ನೀನೆ ಮತ್ತಿಂದು
ಹೊಸತಲಾ ಮುನಿವುದು ಚರಾಚರ
ವಿಸರ ಚೈತನ್ಯಾತ್ಮಕನು ಕೋ
ಪಿಸುವೊಡನ್ಯವದಾವುದೆಂದರು ನಾಗಪತ್ನಿಯರು ೪೬

ಆವಯೋಗದ ಸಿದ್ಧಿಯೋ ತಮ
ಗಾವ ತಪದ ಸಮೃದ್ಧಿಯೋ ಸ
ದ್ಭಾವ ಸಂಚಿತ ಸಾರಸುಕೃತೋದಯವೊ ನಿಜಪತಿಗೆ
ದೇವ ನಿಮ್ಮಡಿಯಂಘ್ರಿರಜವನ
ದಾವನೈ ಧರಿಸುವನು ತಾಮಸ
ಜೀವಿ ತಾನಿವಗೆಂತು ಲಭಿಸಿದುದೆಂದರಬಲೆಯರು ೪೭

ಪಾವನಾಂಘ್ರಿರಜಕ್ಕೆ ಲಕ್ಷ್ಮೀ
ದೇವಿಯರು ನೋನುವರು ಗಡ ನಾ
ನಾವಿಧ ವ್ರತನಿಷ್ಠೆಯಲಿ ವಿವಿಧ ಪ್ರಕಾರದಲಿ
ಸೇವಕರು ಸುರಮುನಿವರರು ರಾ
ಜೀವ ಭವಭವ ಮುಖ್ಯರರ್ಥಿಸಿ
ಠಾವನಱಿಯರು ಭಾಪು ಕರುಣಾನಿಧಿಯೆ ನಿರವಧಿಯೆ ೪೮

ಬಲ್ಲರೀ ಪದರಜವ ಪಡೆದವ
ರುಳ್ಳಡಜರುದ್ರಾಮರೇಶ್ವರ
ರುಲ್ಲಸಿತ ಪದವನು ರಸಾತಳವನು ಧರಾತಳವ
ಒಲ್ಲರನುಪಮ ಸುಖವೆನಿಪ ಕೈ
ವಲ್ಯವನು ಬೇಱೊಂದನಾವುದ
ನೊಲ್ಲರಾರು ಸನಾಥರೆಮ್ಮಂತಿರೆ ಧರಿತ್ರಿಯಲಿ ೪೯

ಕೀರ್ತಿಸಿದಡೊಲಿದೊಮ್ಮೆ ನಾಮವ
ಕೂರ್ತು ನೆನೆದೊಡೆ ಸಕಲ ಸಂಸಾ
ರಾರ್ತಿಗಳು ಹಿಂಗುವುವು ಗಡ ನಿನ್ನನೇ ಸಮಕ್ಷದಲಿ
ಮೂರ್ತಿಗೊಂಡಿರೆ ಕಂಡ ತಮಗಿ
ನ್ನಾರ್ತಿಯೆತ್ತಣದಕಟ ಭಯದುಃ
ಖಾರ್ತೆಯರಿಗಬಲೆಯರಿಗೆಂದರು ನಾಗಪತ್ನಿಯರು ೫೦

ಚಲ್ಲ ಮಾರಿಗೆ ಕುಱಿಗಳಿಂಗಸು
ದಲ್ಲಣವನೀವಂತೆ ಲಕ್ಷ್ಮೀ
ವಲ್ಲಭನೆ ನಿಜಲೀಲೆ ಕೊಳುತಿದೆ ಕದ್ರುಸುತನಸುವ
ವಲ್ಲಭನ ಜೀವವನು ದಯೆಗೈ
ಬಲ್ಲೆ ನೀನೇ ಯೆನುತ ಪದಯುಗ
ಪಲ್ಲವದಿ ಚಾಚಿದರು ಕಾಂತೆಯರು ಕಳೇವರವ ೫೧

ದಾಸಿಯರು ನಿಮ್ಮಡಿಗೆ ಕರುಣಾ
ರಾಶಿ ನೀನೆನುತಂಘ್ರಿ ಯುಗದಲಿ
ಹಾಸಿ ಕೆಡಹಿದರೊಡಲನಶ್ರುಜಲಾಬ್ಧಿಯಲಿ ಮುಳುಗಿ
ಬೀಸರಕೆ ಬೆದಱುವ ವಧೂಜನ
ದಾಸಱಿಡಗಲು ಮೃದುವಚನ ಪೀ
ಯೂಷದಲಿ ನಗುತಿಂತೆಂದನಸುರಾರಾತಿ ಕರುಣದಲಿ ೫೨

ಏಳಿ ನೀವಂಜದಿರಿ ಮತವನು
ಪಾಲಿಸಿದೆನೆನ್ನವರೆನುತ್ತಾ
ಬಾಲೆಯರನೆತ್ತಿದನು ಕಾರುಣ್ಯೇಕ್ಷಣದಲೊಲಿದು
ಆಲಿಸುತ ನಿಂದಿರಲು ಕರಪುಟ
ಮೇಳವಿಸಿ ನೈಯಿಕ್ಕಿ ಪರಮ ಕೃ
ಪಾಳುವಿಗೆ ಬಿನ್ನಯಿಸಿದನು ಹದುಳಿಸುತ ನಾಗೇಂದ್ರ ೫೩

ಚಿತ್ತವಿಸು ಕೋಪವದು ತನಗಾ
ತ್ಪತ್ತಿಕದ ಗುಣವದನು ಮಿಱುವ
ದೆತ್ತಲಾನೆಲೆ ದೇವ ಸಹಜಗುಣ ಸ್ವಭಾವವಲ
ಕೃತ್ಯವಾವುದು ತನಗೆ ನೇಮುವ
ನಿತ್ತು ರಕ್ಷಿಪುದಂಘ್ರಿಕಮಲದ
ಭೃತ್ಯ ಭೃತ್ಯನು ತಾನೆನುತ್ತೆಱಗಿದನು ಪದಯುಗಕೆ ೫೪

ನಾಗ ನದಿಯುದಕದಲಿ ನೀನಿರ
ಲಾಗದಿನ್ನಿದಱೊಳಗೆ ಶಿಶುಪಶು
ಭೋಗಿಸಲಿ ಜಲವಿದನು ನಿನ್ನ ಕುಟುಂಬ ಜನಸಹಿತ
ಸಾಗರಕೆ ನಡೆ ಮಗನೆ ದುಃಖಿತ
ನಾಗದಿರು ತನ್ನಂಘ್ರಿ ಕಮಲ ಪ
ರಾಗಲಾಂಛಿತ ನಾದವಂಗಿನ್ನಿಲ್ಲ ಭಯವೆಂದ ೫೫

ಕೇಳುವನು ತಾನಾವನಿದನೀ
ಲೀಲೆಯನು ನಿನ್ನುವನು ಮರ್ದಿಸಿ
ಬೀಳುಕೊಟ್ಟೀ ಕಥೆಯನಭಿವರ್ಣಿಸುವ ಸುಕೃತಿಗಳ
ವ್ಯಾಳಕುಲಜರು ಮುಟ್ಟಲಾಗದು
ಕೇಳೆಲವೊ ತನ್ನಾಜ್ಞೆಯೆನುತವೆ
ಬೀಳುಕೊಳಿಸಿದನಾ ರಮಾಪತಿಯಾ ಬಿಲೇಶಯನ ೫೬

ನಿನ್ನ ಶಿರದಲಿ ಕಂಡಡಿದನೀ
ನನ್ನ ಪದಲಾಂಛನವನಹಿರಿಪು
ಮನ್ನಿಸುವನಂಜದಿರೆನುತ್ತ ಕೃಪಾಳು ನೇಮಿಸಲು
ಪನ್ನಗನು ಪರಿತೋಷ ರಸದ ಮ
ಹಾರ್ಣವದಲೋಲಾಡಿ ಪರಮ ಕೃ
ಪಾರ್ಣವನನರ್ಚಿಸಿದನುನ್ನತ ಭಾವಭಕ್ತಿಯಲಿ ೫೭

ದಿವ್ಯಗಂಧಾಭರಣನಿಕರವ
ದಿವ್ಯ ರತ್ನಾಂಬರವನನ್ನುತ
ದಿವ್ಯ ಪುಷ್ಪಂಗಳನು ದಿವ್ಯಾನ್ನಾದಿಕಂಗಳನು
ದಿವ್ಯ ವನಮಾಲೆಗಳನಿತ್ತಿ
ತ್ರ್ಯವ್ಯಯನನುಪಚರಿಸಿ ಸಜ್ಜನ
ಸೇವ್ಯನನು ಸತ್ಕರಿಸಿದನು ನಾಗೇಂದ್ರನೊಲವಿನಲಿ ೫೮

ಮೂವೆ ಬಲವಂದೆಱಗಿ ನಾಗಕು
ಲಾವಳಿಗಳೊಡಗೂಡಿ ಹರಿಕರು
ಣಾವಲೋಕನದನುಪಮಾನುಗ್ರಹಕೆ ನೆಲೆಯೆನಿಸಿ
ದೇವತತಿ ಭಾಪೆನಲು ಬೀಳ್ಕೊಂ
ಡಾವನಧಿಗುರಗೇಂದ್ರನತ್ತಲು
ಜೀವದಾನವ ಬೇಡಿಕೊಂಡೈದಿದನು ಹರುಷದಲಿ ೫೯

ರಮಣಕಾಖ್ಯದ್ವೀಪವನು ಭೂ
ರಮಣ ಕೇಳುರಗೇಂದ್ರನಾ ಶ್ರೀ
ರಮಣನನು ನೆನೆವುತ್ತ ನಡೆದನು ಸತಿಸುತರು ಸಹಿತ
ಪ್ರಮಿತದೂರ ಚರಿತ್ರರಭ್ರದ
ಲಮರರಾಯೆನೆ ಬಹಳ ಪುಳಕೋ
ದ್ಗಮವನಿತ್ತನು ಬಂದು ನಿತ್ಯಾತ್ಮನುನು ನಿಜಜನಕೆ ೬೦

ಹದಿನಾರನೆಯ ಸಂಧಿ ಮುಗಿಯಿತು.

# ಹದಿನೇಳನೆಯ ಸಂಧಿ

ಕಾಳಗಿಚ್ಚನು ನುಂಗಿ ಗೋಗೋ
ಪಾಲರನು ನೆಱೆಕಾಯ್ದು ಪರಮಕೃ
ಪಾಳು ಬಿಜಯಂಗೈದನಂದಾ ನಂದಗೋಕುಲಕೆ

ಕರುಣಿಸೆಲೆ ಮುನಿನಾಥ ರಮಣಕ
ದಿರವನುಳಿದಾ ನಾಗಪತಿ ಮಂ
ದಿರವ ಮಾಡಿದನೇಕೆ ಕಾಳಿಂದೀಜಲಾಂತದಲಿ
ಗರುಡದೇವನ ಭೀತಿ ನಾಗೇ
ಶ್ವರರೊಳೊಬ್ಬಂಗಾಯ್ತು ಮಾಡಿದ
ದುರುಳತನವೇನೆನಲು ನಗುತಿಂತೆಂದನಾ ಮುನಿಪ ೧

ಭೂತಳಾಧಿಪ ಕೇಳು ಕೃತಸಂ
ಪ್ರೀತಿಯಲಿ ನಾಗಾಧಿಪರು ವಿನ
ತಾತನೂಜಂಗೊಂದು ಸಮಯವ ಮಾಡಿ ಬಲಿಗಳನು
ಓತು ತಿಂಗಳು ತಿಂಗಳಿಗೆ ಸಂ
ಕೇತವೆನೆ ತಾನೊಂದು ಮರದಲಿ
ಕಾತರಿಸಿ ಕೈಗಾವುದೆಮ್ಮನೆನುತ್ತ ಸಲಿಸಿದರು ೨

ಪರ್ವ ಪರ್ವಂಗಳಲಿ ನೆರೆದಾ
ದರ್ವಿಕರತತಿ ತಪ್ಪದೀವುತ
ಸರ್ವತೋ ಭಯಹೀನರಾಗಿರಲೊಂದು ದಿವಸದಲಿ
ದುರ್ವಿನೀತನೆನಿಪ್ಪ ಕಾಳಿಯ
ನೊರ್ವನದನಾಕ್ರಮಿಸಿ ವಿಷಮದ
ಗರ್ವಿತನು ತೆಗೆದುಂಡನಾ ವಿಹಗಾಧಿಪನ ಬಲಿಯ ೩

ಎನ್ನವರು ತಾವಾಗಿ ಮಾಳ್ಪರೆ
ಪನ್ನಗರು ಪೂಜೆಯನು ನಾನಿರೆ
ತನ್ನ ಹಗೆಗಾ ಗರುಡನೆಂಬವನಾರು ದಿಟ ಬಲಿಗೆ
ಮನ್ನಿಸದೆ ತಾನುಣಲು ಕೇಳ್ದಾ
ಪನ್ನಗಾರಿ ಕನಲ್ದು ಕಾಳಿಯ
ಕುನ್ನಿ ತಿಂದನೆ ಕೂಳನೆನುತೆಯ್ತಂದನುಱೆ ಮುಳಿದು ೪

ತುತ್ತುಗೊಂಬೆನೆನುತ್ತ ವಿನತಾ
ಪುತ್ರನೆಯ್ತರೆ ಕಂಡು ಹೆಡೆಗಳ
ನೆತ್ತಿ ಕಾಳಿಯನುಗ್ರ ವಿಷವೀರ್ಯದಲಿ ಮದವೇಱಿ
ಹತ್ತಿ ಹಳಚಿದನತುಳ ವಿಷವನು
ಬಿತ್ತಿದನು ವರ್ಮಸ್ಥಳಂಗಳ
ಲತ್ಯಧಿಕ ರೋಷದಲಿ ಕಚ್ಚಿ ಕರಾಳ ಮುಖಗಳಲಿ ೫

ತೊಡಱಿದನೆ ತನ್ನೊಡನೆ ಕದ್ರುವಿ
ನೊಡಲ ಹುಳು ತಪ್ಪೇನು ತಪ್ಪೇ
ನಡಬಳಿಗನಹೆ ನೋಡು ಸಮರದ ಸವಿಯನೆಂದೆನುತ
ಎಡದ ಪಕ್ಷದ ಕೊನೆಯಲುರಗನ
ಹೊಡೆದರುರುಳಿದನವನಿಗಾತನ
ತೊಡಕು ಬೇಡೆನಗೆನುತ ಹಾಯ್ದನು ಹಮುಳಿಸುತ್ತಸುವ ೬

ಓಡಿ ಕಂಗೆಟ್ಟುರಗಪತಿ ರಣ
ಹೇಡಿತನದಲಿ ಮಱುಗಿ ಮನದಲಿ
ನೋಡಿ ಬದುಕುವುಪಾಯವನು ನಿಶ್ಚಯಿಸಿ ತನ್ನೊಳಗೆ
ಬೀಡು ಸಹ ಕಾಳಿಂದಿಯಲಿ ಮನೆ
ಮಾಡಿ ಮಡುವಿನೊಳುರಗರಿಪುವಿಗೆ
ನೋಡಬಾರದ ನೆಲೆಯಲಿರ್ದನು ಬಂಧುಜನ ಸಹಿತ ೭

ಒಂದು ದಿನ ಖಗರಾಜನಾ ಕಾ
ಳಿಂದಿಯಲಿ ಮುನ್ನೊಮ್ಮೆ ಬಲು ಮಿ
ನೊಂದ ಮೆದ್ದರೆ ಹಸಿದು ಬೇಡೆನೆ ಸೌಭರಿಯ ಮಾತ
ಹಿಂದುಗಳೆಯಲು ಶಾಪವನು ಮುನಿ
ವಂದ್ಯನಿತ್ತನು ವಿಹಗಪತಿಯಿಂ
ದಿಂದ ಮೇಲಿದ ಮಾಡಿದಡೆ ಖಗ ಸಾಯಲೆಂದನುತ ೮

ಬಲ್ಲನದನಾ ಕಾಳಿಯೋರಗ
ನಲ್ಲದುಳಿದವರದನಱಿಯರವ
ನಲ್ಲಿ ನೆಲೆಗೊಂಡಿರ್ದನಕುತೋಭಯದ ಸೌಖ್ಯದಲಿ
ಬಲ್ಲಿದರದಾರರಸ ಲಕ್ಷ್ಮೀ
ವಲ್ಲಭನ ಭಯವಾಯ್ತುಲ್ಯೆ ಜಗ
ದಲ್ಲಿ ನಿರ್ಭಯರಾದ ಜೀವರ ಕಾಣೆ ನಾನೆಂದ ೯

ಮತ್ತೆ ಕರುಣಿಸಿ ಚರಣಮುದ್ರೆಯ
ನೊತ್ತಿ ಶರಣಾಗತನನಾ ಪುರು
ಷೋತ್ತಮನು ಬೀಳ್ಕೊಳಿಸಲಭಯವನಿತ್ತು ರಮಣಕಕೆ
ಅತ್ತಲುರಗನು ಗಮಿಸಲೀ ತಡಿ
ಗಿತ್ತಲಾ ಸಂತಾಪ ಪಾವಕ
ತಪ್ತರಲ್ಲಿಗೆ ಬಂದನಾ ನಿಜಬಾಂಧವರ ಹೊರೆಗೆ ೧೦

ಬಂದನೈ ಬಲ್ಲಹರ ದೇವನು
ಬಂದನೈ ಜಿತನಾಗರಾಜನು
ಬಂದನೈ ಭುವನಾಧಿಪತಿವಂದಿತ ಪದಾಂಬುಜನು
ಬಂದನೈ ನಮ್ಮಂತರಾತ್ಮನು
ಬಂದನೈ ಯೆನುತಖಿಳ ಗೋಪರ
ವೃಂದವೆದ್ದುದು ಕಾಣುತಸು ಬಂದಂತೆ ತವತವಗೆ ೧೧

ದಿವ್ಯಗಂಧಾಂಬರ ವಿಭೂಷಣ
ದಿವ್ಯಜಾಂಬೂನದವಿರಾಜಿತ
ದಿವ್ಯ ಮಾಲ್ಯ ಮನೋಭಿರಾಮ ಮನೋಜ್ಞ ವಿಗ್ರಹನ
ದಿವ್ಯ ಮೂರ್ತಿಯನೀಕ್ಷಿಸುತ ವಿರ
ಹವ್ಯಥೆಯನೀಡಾಡಿ ತಮತಮ
ಗವ್ಯಯನನಪ್ಪಿದರು ಪುಳಕಾಶ್ರುಗಳ ಪೂರದಲಿ ೧೨

ಹೆತ್ತವರ ಹರುಷವನು ತಾನದ
ವಿಸ್ತರಿಪೆನಿನ್ನೆಂತು ತುಱುಗಳ
ನೊತ್ತ ಮುಸುಕಿದವಧಿಕ ಹರುಷದಲಾ ಮುರಾಂತಕನ
ಸುತ್ತಿ ನಿಂದಿದ್ದೀಕ್ಷಿಸುತ ಪರಿ
ವೃತ್ತ ಲೋಚನಗಳಲಿ ಮೋಹನ
ಮೂರ್ತಿಯನು ಮಿಕ್ಕವರ ಹರುಷವನಾಡಲೇಕೆಂದ ೧೩

ತೊರೆದ ಮೊಲೆಯಲಿ ತಾಯಿ ಬಂದಾ
ಪರಮ ಪುರುಷನನಪ್ಪಿದಳು ಮೈ
ಮುರಿಯಲೀಯದೆ ನಂದನೊಡನೊಡನಪ್ಪಿದನು ಬಿಡದೆ
ಹರಹರಾ ಗೋಪಿಯರ ಹರುಷಾಂ
ಕುರಿತ ಪುಳಕದ ಪರಮ ಸುಖಸಾ
ಗರ ಸಮೃದ್ಧಿಯನಱಿವರಾರೆಲೆ ಭೂಪ ಕೇಳೆಂದ ೧೪

ಪ್ರಾಣವೈತರಲಖಿಳ ಕರಣ
ಶ್ರೇಣಿ ಚೇಷ್ಟಿಸುವಂತೆ ಭುವನ
ಪ್ರಾಣ ಚೇತನ ಸಾಕ್ಷಿ ಬರಲಾ ವಿಷದ ಮಡುವಿಂದ
ಕಾಣುತವೆ ಗೋ ಗೋಪ ವನಿತಾ
ಪ್ರಾಣವೇ ಪರ್ಯಾಪ್ತವೆನೆ ಸ
ಪ್ರಾಣಿಸಿದರೇನೆಂಬೆನಾ ಸಂಜಾತ ಸಂಭ್ರಮವ ೧೫

ನಗುತ ಬಂದಪ್ಪಿದನು ಬಲನಾ
ಜಗದ ಪತಿಯನು ಕೃಷ್ಣನುರು ಮಹಿ
ಮೆಗಳನಾ ಮೂರ್ತಿಯನು ಬಲ್ಲ ಮಹಾತ್ಮನಾರಿದನು
ಮುಗಿಲ ವೋಲ್ಗರ್ಜಿಸುತ ವೃಷಭಾ
ಳಿಗಳು ಕವಿದವು ಹರಿಯನಮರರು
ಗಗನದಲಿ ಭಾಪೆನುತ ಕಱೆದರು ಪುಷ್ಪವೃಷ್ಟಿಗಳ ೧೬

ಭೂಸುರರು ಭೂಸುರರ ವಧುಗಳು
ಲೇಸೆನುತ ನಂದನನು ಘನಪರಿ
ತೋಷದಲಿ ರೋಹಿಣಿ ಯಶೋದಾ ದೇವಿಯರು ನಲಿದು
ಏಸು ಧನ್ಯರೊ ನೀವು ಭುವನವಿ
ನಾಶ ತತ್ಕೃತವೆನಿಪ ಸರ್ಪನ
ವಿಾಸಲಿನ ಶಿಶು ಬಹುದ ಪಡೆದಿರೆನುತ್ತ ಹೊಗಳಿದರು ೧೭

ಎಲವೊ ನಡೆಯಲಿ ಮರಳಿ ಕಱುತುಱು
ಗಳಿವು ವನಿತಾ ವೃದ್ಧಜನ ಗೋ
ಕುಲಕೆ ಯೆನುತಾ ನಂದ ಗೋಪಾದಿಗಳು ಕೈವೀಸೆ
ತೊಲಗಿಸಿದನಾ ರವಿ ನಿಜಾತ್ಮಜೆ
ಗೊಲಿದು ರಥವನು ಮಱಿಗೆ ಹರಿ ಗೋ
ಕುಲಕೆ ಮಗಳನು ಬಿಟ್ಟು ಹೋದಪನೆಂದು ಮಿಗೆ ಮಱುಗಿ ೧೮

ಅಂದಿನಾ ರಾತ್ರಿಯನು ವನದಲಿ
ಹಿಂದುಗಳೆದರು ಗುರುತರಾಶ್ರಮ
ದಿಂದ ಬಳಲಿದು ಬಾಲವನಿತಾ ವೃದ್ಧಜನ ಸಹಿತ
ಸಂದ ಗೋರಸಪಾನ ಭೋಜನ
ದಿಂದ ವಿಗತಶ್ರಮರೆನಿಸಿ ಸುಖ
ದಿಂದ ಗೋಪರು ನಿದ್ದೆಗೈದರು ಹರಿಬಲರು ಸಹಿತ ೧೯

ಮತ್ತೆ ಬಂದುದು ಗೋಕುಲಕೆ ಬಲು
ಮೃತ್ಯು ಬಾಯ್ದೆಱೆದಂತೆ ಸುಟ್ಟುರು
ಹುತ್ತ ಸೂಸುವ ಕರ್ಬೊಗೆಯ ಕೆಂಗಿಡಿಯ ಗಡಣದಲಿ
ಸುತ್ತ ಕವಿದುದು ಕಾಳಗಿಚ್ಚೊಂ
ದುತ್ತರಿಸಲರಿದೆನಲು ಕಾನನ
ಹೊತ್ತಿ ಹೊಗೆಯಲು ಭೂರಿ ಭುವನ ಪ್ರಳಯದಂದದಲಿ ೨೦

ಭುಗು ಭುಗಿಲು ಭುಗಿಲೆಂದು ಕೇಸುರಿ
ತಗುಳಿದುದು ಜಗದಂಡಮಂಡಲ
ಸೆಗಳಿಕೆಯನೋಕರಿಸಿ ಕೋ ಎಂದೊಂದಱೆ ಗೋವಳರು
ಬಿಗಿದ ನಿದ್ದೆಯ ಪಾರವಶ್ಯದ
ಬಗೆಯ ಭೀತಿಯಲ್ಯೆದೆ ಹರಿಪದ
ಯುಗಳವನು ಮಱೆವೊಕ್ಕರಾ ಕಾಳುರಿಗೆ ಕಳವಳಿಸಿ ೨೧

ದೇವ ರಕ್ಷಿಸು ರಕ್ಷಿಸವನತ
ದೇವ ರಕ್ಷಿಸು ರಕ್ಷಿಸೈ ಧೃತ
ದೇವ ರಕ್ಷಿಸು ರಕ್ಷಿಸೆಮ್ಮನು ಕರುಣದಿಂದೆನುತ
ಗೋವಳರು ಗೋವಿಂದನಂಘ್ರಿಗೆ
ಜೀವರಕ್ಷೆಯ ಬೇಡಿ ಬಿದ್ದರೆ
ಗೋವುಗಳು ಮುಸುಕಿದವು ಮುತ್ತಿದವಚ್ಯುತನ ಬಳಸಿ ೨೨

ಕೆಲರು ನಂದಿಸಲೆಂದು ಹರಿದರು
ಕೆಲರು ಕೆಲಸಾರಿದರು ಧೂಮ
ಜ್ವಲನನಾಟೋಪಕ್ಕೆ ಸೈರಿಸಲಱಿಯದಳವಳಿದು
ಕೆಲರು ಗತಿಯಾಗೆನುತ ಕೃಷ್ಣನ
ಕೆಲರು ಸತ್ತರೆ ಮುಕುತಿಯುಂಟೆಂ
ದಳುಕದಚ್ಯುತನಂಘ್ರಿಯಲಿ ಬಿದ್ದಿರ್ದರೊಡಲಿಟ್ಟು ೨೩

ಕೆಲರು ಸತ್ತರೆ ಮುಕುತಿ ಯೈಸಲೆ
ಸುಲಭವದು ನೆನೆವರಿಗೆ ನಮ್ಮಾ
ಚೆಲುವ ಕೃಷ್ಣನ ಚರಣಸೇವಾಸೌಖ್ಯವದಕುಂಟೆ
ಸಲಹಿಕೋ ಸರ್ವಾತ್ಮಕನೆ ನಿ
ನ್ನೊಲವಿನಂಘ್ರಿಯ ದಾಸರಾವೆನೆ
ನಳಿನನಾಭನು ನಗುತ ನೆಗಹಿದನಭಯ ಕರತಳವ ೨೪

ಅಂಜದಿರಿ ಗೋವಳರು ಗೋಪಿಯ
ರಂಜದಿರಿ ಶಿಶುಪಶುಗಳೇತ
ಕ್ಕಂಜುವಿರಿ ನಾಸಿಹೆನು ನಿಮ್ಮಸುವಿಂಗೆ ಹೊಣೆಯೆನುತ
ಕಂಜನಾಭನು ನಗುತಭಯಕರ
ಕಂಜವನು ನೆಗಹುತ್ತ ಕರುಣಾ
ರಂಜಿತೇಕ್ಷಣನೀಕ್ಷಿಸಿದನಾ ನಿಖಿಳ ಪರಿಜನವ ೨೫

ತಿರುಗಿ ನೋಡಿನಬ್ಬರದ ಕಾ
ಳುರಿಯನಂಗೈದೋಱಿ ನಗುತಾ
ಕರುಷಿಸಲು ಮದವುಡುಗಿ ಬಂದುದು ಕಿಚ್ಚು ಕರತಳಕೆ
ಇರದೆ ಜನ್ಮಸ್ಥಾನದಲಿ ಲಯ
ಮರುತಸಖಗೆಂಬಂತೆ ಕುಡಿದನು
ಕರತಳದ ಕಾಳುರಿಯನಾ ಗೋಪಜನ ನಲಿಯೆ ೨೬

ಭಾಪು ಗೋಕುಲ ಜೀವದೊಡೆಯನೆ
ಭಾಪು ಗೋಕುಲದಸುವೆ ಗೋಕುಲ
ದೀಪ ಭಾಪುರೆ ಭಾಪು ಗೋಕುಲ ಜನ ಮನೋರಥವೆ
ಭಾಪೆನುತ ತವತವಗೆ ಬಂದಾ
ಗೋಪಜನವಪ್ಪಿದುದು ನೆರೆದಾ
ಗೋಪಿಯರು ಪಾಡಿದರು ಹರಿಗುಣ ಚರಿತವನು ನಲಿದು ೨೭

ನುಂಗಿದನು ಪಾವಕನನೆನ್ನನು
ನುಂಗದಿರನೆಂದಂಜಿ ಕತ್ತಲೆ
ಹಿಂಗಿತಾಕ್ಷಣದೊಳಗೆನುತ್ತಾ ಪಾವಕನ ಸಾಲ
ಹಿಂಗದಾರೈವಂತೆ ರವಿ ಗಗ
ನಾಂಗಣಕೆ ಬರೆ ಕಂದೆಱೆದು ಸಿರಿ
ರಂಗನುಪ್ಪವಡಿಸಿದನೆದ್ದುದು ಸಕಲ ಗೋಪಜನ ೨೮

ಎತ್ತಿ ನಡೆದುದು ಬೀಡು ಗೋಕುಲ
ದತ್ತ ಸನ್ನೆಯ ಕೊಂಬು ಕೊಳಲುಗ
ಳೊತ್ತಲಾ ಬಲ ಕೃಷ್ಣರನು ಹೊಗಳುತ್ತ ಹರುಷದಲಿ
ಸುತ್ತಿ ಸುರರಂಬರದಲೋಲಗಿ
ಸುತ್ತ ಬರೆ ಗೋಪಿಯರು ಕೃಷ್ಣ ಚ
ರಿತ್ರವನು ಪಾಡಿದರು ಪರಮೋತ್ಸವದಲಂದೊಲಿದು ೨೯

ಚಾರುಗಾತ್ರದ ಸುಪ್ರಸನ್ನ ಮು
ಖಾರವಿಂದದ ಚಪಲನಯನ
ಸ್ಮೇರ ದಂತಾಧರ ಕಪೋಲದ ಕರ್ಣಕುಂಡಲದ
ಭೂರಿ ತೇಜದ ಭುವನ ಮೋಹನ
ಸಾರ ಸೌಭಾಗ್ಯದಲಿ ಬಲ ದೈ
ತ್ಯಾರಿಗಳು ರಂಜಿಸಿದರಾ ಜನನಿವಹ ಮಧ್ಯದಲಿ ೩೦

ನೀಲ ಪೀತಾಂಬರಗಳಲಿ ಜಿತ
ನೀಲ ನೀರದನಿಭ ಮನೋಜ್ಞ ವಿ
ಶಾಲ ತನುಕಾಂತಿಗಳಲೊಪ್ಪಿರೆ ರಾಮಕೇಶವರು
ಬಾಲೆಯರ ಕಡೆಗಣ್ಣಲೆಸೆವ ನಿ
ವಾಳಿಗಳ ಕೈಕೊಳುತ ಪರಮು ಕೃ
ಪಾಳುಗಳು ನೋಡುತ್ತ ಹೊಕ್ಕರು ನಂದಗೋಕುಲವ ೩೧

ಅಱಸಿ ಕಾಣರು ಮುನಿಗಳಾವನ
ಸಿಱುಗೆಯನು ತತ್ವಂ ಪರಾರ್ಥದ
ನೆಱವಣಿಗೆಯುಳ್ಳಾತ್ಮ ತತ್ತ್ವಜ್ಞಾನ ಮಾರ್ಗದಲಿ
ಒಱಲಿ ಕಾಣವದಾವನಱಿವಿನ
ಸೆಱಗನಾಮ್ನಾಯೌಘ ಕೃಷ್ಣನ
ನಱವರಾರನುಕರಿಸುತಿರ್ದನು ಮರ್ತ್ಯಲೀಲೆಗಳ ೩೨

ಅತ್ತಲಜಭವ ಮುಖ್ಯರಾವನ
ನೆತ್ತಲೇನೆಂದಱಿಯರೀ ಶ್ರು
ತ್ಯುಕ್ತದಲಿ ಭಾವಿಸುವರಂತರ್ಭಾವದಲಿ ಪದವ
ಇತ್ತಲಾ ಗೋಕುಲದೊಳಗೆ ನಿಜ
ಚಿತ್ತೆನಿಪ ನಿತ್ಯಾತ್ಮನೆಂತುಟೊ
ಭಕ್ತವಶ್ಯತೆ ಮೆಱೆವುತಿರ್ದನು ಬಾಲಕೇಳಿಗಳ ೩೩

ಹದಿನೇಳನೆಯ ಸಂಧಿ ಮುಗಿಯಿತು.

# ಹದಿನೆಂಟನೆಯ ಸಂಧಿ

ಮುಷ್ಟಿಘಾತದಲಾ ಪ್ರಲಂಬನ
ನಟ್ಟಯನು ಕೆಡೆಯೊದೆದು ಕಾಲಂ
ಗಟ್ಟಿದನು ಕಂಸಾಸುರನ ಭೃತ್ಯನನು ಬಲಭದ್ರ

ಅರಸ ಕೇಳಾ ರಾಮಕೃಷ್ಣರು
ಪರಿಪರಿಯ ಲೀಲೆಗಳಲೀ ಪರಿ
ನರಶಿಶುತ್ವದ ನಾಟಕವನನುಕರಿಸಿ ಗೋಕುಲದ
ಧರೆಯಲೆಸೆದಿರಲೋಲಗಿಸಲೆಂ
ದಿರದೆ ಧರೆಗಾ ಗ್ರೀಷ್ಮಋತುವವ
ತರಿಸಿದನು ನಿಜಕಾಲಗುಣ ವೈಭವದಲಂದೆಸೆಯೆ ೧

ಎಳೆದು ಬಿಸುಟನು ಶಿಶಿರ ಋತುವನು
ಕಳಲೆ ಬಡಿದು ವಸಂತನನು ಬಲು
ಝುಳದ ಝಾಡಿಯನಟ್ಟಿದನು ದೆಸೆದೆಸೆಗೆ ಧಾವಿಸುವ
ನೆಳಲು ಹೊಗಿಸಿದನೆಲ್ಲರನು ಜ
ಕ್ಕುಲಿಸಿ ಜಗವನು ಸುರಿದು ಬಿಸಿಲನು
ಬೆಳೆಯಿಸಿದನಾ ಗ್ರೀಷ್ಮಋತು ಬೆದಱಿಸಿ ಜಗತ್ರಯವ ೨

ಕೊಡಿಸಿದನು ಪಾರ್ವರಿಗೆ ಧನಿಕರ
ಗಡಣದಿಂ ಪಾರ್ವಕರಿಗೊಪ್ಪುವ
ಕೊಡೆ ಕೆರಹುಗಳನುನ್ನತ ಛಾಯಾದ್ರುಮಂಗಳನು
ಇಡಿಸಿದನು ನಿರ್ಜಲ ನಿರಾಶ್ರಯ
ದೆಡೆಯಲಱವಟ್ಟಿಗೆಯನುಱೆ ನೀ
ರಡಿಕೆ ಮಾಡಿದನು ಸಚರಾಚರದ ಜೀವರಿಗೆ ೩

ಆ ಸುದುಸ್ತರವೆನಿಪ ಬೇಗೆಯ
ಬೇಸಗೆಯ ಬಲುಬಿಂಕ ಗೋಕುಲ
ವಾಸಿಗಳಿಗಾ ಪಶುಗಳಿಗೆ ಮಳೆಗಾಲದಂಪದಲಿ
ವಾಸುದೇವ ಕೃಪೇಕ್ಷಣದ ಪೀ
ಯೂಷರಸ ಸೇಕದಲಿ ತದ್ವನ
ದೇಶಗಣ ವೈಭವದಲೆಸೆದುದು ಭೂಪ ಕೇಳೆಂದ ೪

ಹರಿವ ನಿರ್ಜರವಾರಿಗಳ ಪ
ರ್ಜರಿತ ಪವನೋದ್ಗೀರ್ಣ ಘನಸೀ
ಕರದ ಯಮುನಾ ಘನತರಂಗಸ್ಫುರಿತ ಕಾನನದ
ತರುನಿಕರಪಲ್ಲವ ಪಲಾಶೋ
ತ್ಕರ ಫಲಚ್ಛಾಯಾ ನಿವಾರಿತ
ಕರಮರೀಚಿಮರೀಚಿಗಳಲೊಪ್ಪಿದುದು ವನಭೂಮಿ ೫

ನೆಳಲು ನೀರುಗಳಿಂದ ಮಿಗೆ ಕ
ತ್ತಲಿಸಿ ಕಾನನಭೂಮಿ ನೆಱೆ ಶಾ
ಡ್ವಲಿತವಾಗಿರಲಲ್ಲಿಗಲ್ಲಿಗೆ ಮೆಱೆವ ತರುಲತೆಯ
ಛಳಯದಲಿ ರವಿ ರಶ್ಮಿಯೊಳು
ಚ್ಚಳಿಸಿದನು ದಿನ ನಡುಹಗಲು ಸೀ
ತಳವೆನಿಸಿ ವೃಂದಾವನಾಂತದ ಲಕ್ಷ್ಮಿರಂಜಿಸಿತು ೬

ಮೊರೆವ ತುಂಬಿಯ ಕೋಗಿಲೆಯ ಸು
ಸ್ವರದ ಶುಕಸಾರಸ ಮಯೂರೋ
ತ್ಕರದ ಕೋಳಾಹಳದ ಕಂಪಿತ ಪುಷ್ಪ ಪರಿಮಳದ
ಪರಿಪರಿಯ ತರುಗಳಲಿ ಖಗಮೃಗ
ಭರಿತ ವನವಿಭವವನು ನೋಡುವ
ಭರದಲಾ ಬಲ ಕೃಷ್ಣರೆಯ್ತಂದರು ವನಾಂತರಕೆ ೭

ಪೊಂಗೊಳಲ ಬಾಜಿಸುತ ವನವಿಭ
ವಂಗಳನು ನೋಡುತ್ತ ಗೋಪರ
ವಂಗಡದ ಮೇಳದಲಿ ಮೋಹನ ಮೂರ್ತಿಗಳು ನಗುತ
ಸಂಗಡಿಸಿ ಪಸಲೆಗಳಲಾ ತುಜು
ಜಂಗುಳಿಯನಾಡಿಸುತ ನಿಜಪದ
ಸಂಗಸುಖವನು ಸಲಿಸಿದರು ವೃಂದಾವನಸ್ಥಳಕೆ ೮

ಆಡುವರು ಲತೆಯುಯ್ಯಲನ ಜೋ
ಲಾಡುವರು ಲತೆಗಳನು ಮಿಗೆ ಮಾ
ತಾಡುವರು ಮಾರ್ದನಿಯೊಡನೆ ಸಂಗೀತ ರಸವೆಸೆಯೆ
ಪಾಡುವರು ನವಿಲಂತೆ ನೃತ್ಯವ
ನಾಡುವರು ತಮ್ಮೊಳಗೆ ಯುದ್ಧವ
ಮಾಡುವರು ಮಿಗೆ ಮಲ್ಲರಂತಿರೆ ಕೆಳೆಯರೊಡನೊಲಿದು ೯

ಜನಪ ಕೇಳುತ್ಕ್ಷೇಪ ತಳತಾ
ಡನ ವಿಕರ್ಷಣ ಜಾಲನೋಲ್ಲಂ
ಘನ ಭುಜಾಸ್ಫೋಟನ ವಿಬಂಧನ ಚಿತ್ರಗತಿಗಳಲಿ
ತನತನಗೆ ಗೋವಳರು ಮಲ್ಲರ
ನನುಕರಿಸಿ ತಿವಿದಾಡುವರು ಬಲ
ದನುಜಹರರೊಡನಾಡಿಗಳು ತಾವಾಗಿ ವಿಪಿನದಲಿ ೧೦

ಆಡುವರು ತಾವೊಮ್ಮೆ ಗೋಪರ
ನೋಡಿ ಭಾಪೆಂದೊಸೆದು ಕರತಳ
ತಾಡನದಲಾ ಕೊಂಬು ಕೊಳಲ ವಿಶಾಲರವವೆಸೆಯೆ
ಪಾಡುವರು ನೃತ್ಯಾನುಗುಣವೆನೆ
ನೋಡುವರು ಮತ್ತೊಮ್ಮೆ ಕೆಳೆಯರ
ನಾಡಿಸುತ ಸಂಗೀತ ನಿಜಕರತಾಡನಂಗಳಲಿ ೧೧

ಹೊಗಳುವನು ಗೋವಳರನಾಡಿಸಿ
ನಗುತ ಮೆಚ್ಚಿ ಮನೋನುರಾಗದ
ಲಗಣಿತಾಮಳ ಕೀರ್ತಿ ತೆಗೆದಪ್ಪುವನು ಮನವೊಲಿದು
ಹೊಗಳಲಜಿಯವು ವೇದವಾವನ
ಬಗೆಯನಪ್ಪಲು ನೆಜಿಯರಾ ಯೋ
ಗಿಗಳು ಗೋಪರ ಪುಣ್ಯವೆಂತುಟೊ ಭೂಪ ಕೇಳೆಂದ ೧೨

ಅಂದಣವನೇಜಿಸಿ ಕುಮಾರರ
ವೃಂದ ಚಮರಚ್ಛತ್ರ ವೈಭವ
ದಿಂದ ಪರಮೋತ್ಸವದಲಲ್ಲಿಗೆ ವನವನಾಂತದಲಿ
ಸಂದ ಬಿರುದಾವಳಿಗಳನು ಸಾ
ನಂದದಲಿ ಹೊಗಳುತ್ತ ಹರಿಯನು
ವಂದಿಗಳವೋಲವನಿಪತಿಯನು ಮಾಡಿ ತಿರುಗುವರು ೧೩

ದನುಜವೈರಿಯ ತೋಟಿ ಯಮಳಾ
ರ್ಜುನ ವಿಘಾತಿಯ ತೋಟಿ ಬಕಭಂ
ಜನ ಮುರಾರಿಯ ತೋಟಿ ವತ್ಸವಿದಾರಣನ ತೋಟಿ
ಕನಲುವಘ ಧೇನುಕ ಬಕಾಹಿತ
ವನಕೃಶಾನುವ ತೋಟಿ ಬೇಡೆಂ
ದೆನುತ ಕೊಲ್ಲಣಿಗೆಯಲಿ ನಡೆದರು ವಹಿಸಿ ದಂಡಿಗೆಯ ೧೪

ಕಾಳಿಯಾಖ್ಯ ಮಹಾ ವಿಷೋಗ್ರ
ವ್ಯಾಳ ವಿಷಹರ ಬಂದನಿದೆ ಸುರ
ಪಾಲರೋಲಗಿಸುವ ಮಹೋತ್ತಮ ಬಂದನಿದೆ ಬಂದ
ಕಾಳಗಿಚ್ಚನು ಕುಡಿದು ಭಕ್ತರ
ಪಾಲಿಸಿದ ಪರದೈವ ಪರಮ ಕೃ
ಪಾಳು ವಿದೆಯಿದೆ ಬಂದನಸುರಕುಲಾಂತಕನು ಬಂದ ೧೫

ಎಂದು ಕೆಲರುಗ್ಘಡಿಸುತೊಪ್ಪಿರೆ
ಮುಂದೆ ನಡೆದರು ಕೆಲರು ವಹಿಸುವ
ರಂದಣವನಾ ವನವನಾಂತರಗಳಿಗೆ ಮುರಹರನ
ಹಿಂದೆ ಕಟ್ಟೆಗೆ ಕೈದುಕಾಜಿರ
ಛಂದದಲಿ ಪತಿಕರಿಸಿ ಸಡಗರ
ದಿಂದ ಬಹರೆಡಬಲದಲೋಲಗಿಸುತ್ತ ಗೋವಳರು ೧೬

ಎತ್ತಲೀ ನರಲೀಲೆ ದಿಟ ತಾ
ನೆತ್ತ ಹರಹರ ಮಾಯೆ ಮಝು ಮನೆ
ದೊತ್ತು ಪದಯುಗಪದ್ಮಪರಿಚಾರಕಿ ಮಹಾಲಕ್ಷ್ಮಿ
ಕೃತ್ತಿವಾಸ ವಿರಿಂಚಿ ಸಕಲ ಸು
ರೋತ್ತಮರು ಸೇವಕರು ತನಗೀ
ಕೃತ್ರಿಮದ ನೃಪಲೀಲೆ ಪರಿಜನ ಗೋಪಜನವೆಂದ ೧೭

ಆಡುವಳು ಗಡ ಮಾಯೆ ನೆನೆದಂ
ತಾಡುವುದು ಜಗವಾವನಿಚ್ಛೆಯ
ಲಾಡುವರು ಕಮಲಜ ಭವಾದ್ಯರು ನಯನ ಸಂಜ್ಞೆಯಲಿ
ಆಡುವುದು ತಾನಿತ್ತಲರ್ಭಕ
ರಾಡಿಸಿದವೊಲಾವ ಸುಕೃತವ
ಮಾಡಿ ಜನಿಸಿದರೆಂತೊ ಮಝು ಗೋಪಾಲ ಬಾಲಕರು ೧೮

ಇರೆ ನೃಪೋತ್ತಮ ಕೇಳು ಕಂಸಾ
ಸುರನ ಬೆಸನಿಂದೊಬ್ಬನಾ ಗೋ
ಪರನು ಕೊಂದಾ ರಾಮಕೃಷ್ಣರ ಸಹಿತ ಗೋಧನವ
ಪುರಕೆ ಹೊಡೆಸುವೆನೆನುತ ರೋಷಾ
ತುರನು ಬಂದನು ದೈತ್ಯನಂಗೀ
ಕರಿಸಿ ಗೋಪಾಕೃತಿಯನಾ ಗೋಪಾಲರಿದ್ದೆಡೆಗೆ ೧೯

ಮಂಜು ಮೈದೋಱುವುದೆ ಜಗದಲಿ
ಕಂಜಸಖನೈತರಲು ಗೋವಳ
ರಂಜುವರು ಸಹಜಾಕೃತಿಯನಿದ ಕಂಡರೆಂದೆನುತ
ರಂಜಿಸುವ ತದ್ರೂಪದಲಿ ತನು
ರಂಜಿಸಲು ಬೆರಸಿದನು ದಾನವ
ಭಂಜನನ ಭಂಜನಕೆ ಮನವನು ಮಾಡಿ ಸುರವೈರಿ ೨೦

ಇರೆ ಚರಾಚರಚಿತ್ತಸಾಕ್ಷಿಕ
ನಱಿತನಾಲಿಸುತಾ ಪ್ರಲಂಬಾ
ಸುರನು ಬಂದುದನೊಡನೆ ಬೆರಸಿರ್ದುದನು ಗೋಪರಲಿ
ಬರಲಿ ತಪ್ಪೇನೆನುತ ತಾನದ
ನಱಿಯದವನಂದದಲಿ ಗೋಪಾ
ಲರಿಗೆ ಬಹುದೊಂದಾಟವಿಹುದಾಡುವೆವು ನಾವೆಂದ ೨೧

ಹೊಸಪರಿಯಿದೆಂದಿನವೊಲಲ್ಲೀ
ಕ್ಷಿಸುವುದೀಗಳೆ ಕೆಳೆಯರಿರ ತೋ
ಱಿಸುವೆನಾಟವನೊಂದನೆಲ್ಲರು ಬನ್ನಿ ನೀವೆನುತ
ಎಸೆಯಲಣ್ಣನು ಸಿಲಲಿ ತಾನೊಂ
ದೆಸೆಗೆ ನಿಲುವೆನು ಬನ್ನಿ ಗೋಪ
ಪ್ರಸರವಿತ್ತೆಱನಾಗಿ ಗಿರಿಯಾಚಾಟವುಂಟೆಂದ ೨೨

ಎನಲು ಕರಲೇಸೆನುತ ಗೋಪರು
ತನತನಗೆ ಮುಖ್ಯರನು ಮಾಡಿದ
ರನುಪಮರನಾ ರಾಮಕೃಷ್ಣರನೆರಡು ತಂಡದಲಿ
ದನುಜಹರನವರಾಗಿ ಕೆಲಬರ
ನೆನಿಸಿ ಕೆಲರಾ ರಾಮನವರೆಂ
ದೆನಿಸಿ ವಾಹಕವಾಹ್ಯ ಲಕ್ಷಣವೆಸೆಯೆ ಮಾಡಿದರು ೨೩

ಸೋತವರು ವಹಿಸುವರು ಕೃತಸಂ
ಕೇತದಲಿ ಗೆದ್ದವರನಂತಾ
ತಾತಗಳು ಭಾಂಡೀರಕಾಖ್ಯ ವಟಪ್ರದೇಶವನು
ಓತು ಗುತ್ತನು ಮಾಡಿ ಗೋಪ
ವ್ರಾತವೈದಿದುದೇನನೆಂಬೆನು
ಸೋತುದಚ್ಯುತವರ್ಗ ಗೆಲಿದುದು ರಾಮಪರಿವಾರ ೨೪

ಮುನ್ನವೇ ಖಳನಱಿತು ಹರಿವಧೆ
ತನ್ನ ವಶವಹುದಾಗದೆಂದು
ತ್ಪನ್ನ ಸಂಶಯನಾಗಿ ಬಲರಾಮನನು ಕೊಲಲೆಂದು
ತನ್ನೊಳಗೆ ನಿಶ್ಚಯಿಸಿ ದಾನವ
ಕುನ್ನಿ ಕೃಷ್ಣನ ಪಕ್ಷವನು ಸಾ
ರ್ದುನ್ನತಾಭಿಪ್ರಾಯನಿದ್ದನು ಮನದ ಕಡುಹಿನಲಿ ೨೫

ರಾಮ ಪಕ್ಷಾಶ್ರಿತರು ಗೆಲಿದರು
ಭೂಮಿಪತಿ ಕೇಳ್ ಕೃಷ್ಣ ಪಕ್ಷವ
ನಾ ಮಹಾತ್ಮರು ಹೊತ್ತುನಡೆದರು ಬಳಿಕ ಬಲನವರ
ಶ್ರೀಮುಕುಂದನ ಬೆನ್ನನಾ ಶ್ರೀ
ದಾಮನೇಱಿದನಡಱಿದನು ಸಂ
ಗ್ರಾಮಜಿತನಾ ಭದ್ರಸೇನನ ಬೆನ್ನನಾ ವೃಷಭ ೨೬

ಹೊತ್ತನಾ ಬಲರಾಮನನು ದೈ
ತ್ಯೋತ್ತಮನು ಪರಿಭವಕೆ ನೆಲೆಯಾ
ಗುತ್ತ ಗುತ್ತಿಂಗತುಳಬಲ ಬಲವಂತರರಸನನು
ಮೃತ್ಯುವನು ಕಂಸಾಸುರಂಗೊ
ಯ್ದಿತ್ತು ಕೊಲಿಸುವೆನೆನುತ ತನ್ನಯ
ಚಿತ್ತದಲಿ ನೆನೆವುತ್ತ ನಡೆದನು ಮೀಱಿ ವಟಕುಜವ ೨೭

ಇಳುಹದಲ್ಲಿಂದತ್ತಲಾ ಖಳ
ತಿಳಕನೈದಿದನೇನನೆಂಬೆನು
ಹಲಧರನ ಮೂರ್ತಿಯನು ಹೆಗಲಲಿ ಧರಿಸಿ ತಾ ನಡೆಯೆ
ಇಳುಹಿಳುಹು ಹೋಗದಿರು ಹೋಗದಿ
ರೆಲವೊ ಫಡ ನಿಲ್ಲೆನುತ ಗೋವಳ
ರಳುಕಿ ಬೊಬ್ಬಿಡೆ ಹಾಯ್ದನಂಬರತಳವನಾಕ್ರಮಿಸಿ ೨೮

ಮೂಡಿದವು ದಾಡೆಗಳು ಕಂಗಳು
ಕೂಡೆ ಕಿಡಿಕಿಡಿಯೋಗಲಭ್ರವ
ತೋಡಿ ನಿಲಿಸಿದವೊಲು ಗಗನಾಂಗಣಕೆ ತನಿನೆಗೆದು
ಓಡುವಸುರನ ಭೀಕರಾಂಗವ
ನೋಡಿ ಮುಗಿಲುದ್ದದಲಿ ತಾನಿರ
ಲೀಡಿಱಿದುದೊಡಲೊಳಗೆ ಭೀತಿ ಸಿತೇತರಾಂಬರನ ೨೯

ನಡುಗಿದನಿದೇನೆತ್ತಲೀ ಹೇ
ಱೊಡಲ ಖಳನಿವನಾರು ತಾನಾ
ರೊಡನೆಯಾಡುವ ಗೋಪನಲ್ಲಾ ತನ್ನ ಹೊತ್ತವನು
ಬಿಡುದಲೆಯ ಕೇಸುರಿಸು ಹುಬ್ಬಿನ
ಮಿಡುಕುವಧರದ ಬಿಟ್ಟ ಕಂಗಳ
ದಡಿಗನಿವನೆಲ್ಲಿಂದ ಮೂಡಿದನೆಂದು ಖತಿಗೊಂಡ ೩೦

ಬಿಟ್ಟವನು ಬಲವೈರಿ ವಜ್ರದ
ಲಿಟ್ಟವೋಲಾ ಖಳನ ತಲೆಯನು
ಮುಷ್ಟಿಯಲಿ ಬಲಭದ್ರನೆಱಗಿದನೊಡನೆ ಮುತ್ತೊದಱೆ
ಅಟ್ಟಿಯಲಿ ತಲೆಯಾಳಲವನಸು
ಬಿಟ್ಟುಕೊಂಡುದು ಕಾಯವವನಿಗೆ
ಥಟ್ಟುಗೆಡೆದುದು ಕೂಡೆ ಧುಮ್ಮಿಕ್ಕಿದನು ಬಲಭದ್ರ ೩೧

ಆಯೆನುತ ಸುರರಭ್ರದಲಿ ನಾ
ರಾಯಣಾಗ್ರಜನತುಳ ಮಹಿಮೆಯ
ಬಾಯಿದಣಿಯಲು ಪೊಗಳಲಿಳಿದವು ಪುಷ್ಪ ವೃಷ್ಟಿಗಳು
ಜೀಯ ಮಝು ಬಲ್ಲಾಳೆ ಭಾಪಹು
ದೋಯೆನುತ ಗೋವಳರು ಹರಿತಂ
ದಾಯುವಂತನನಪ್ಪಿದರು ಹರುಷದಲಿ ಹರಿಸಹಿತ ೩೨

ಬಿಟ್ಟ ಕಂಗಳ ಬಿಡುದಲೆಯ ನೆಲ
ಗಟ್ಟನಂದದ ಪೇಱುರದ ಬಿಱ
ದಟ್ಟಿಯಲಿ ತನು ಮುಡಿದು ನಾಸಿಕವೊಡೆದು ಕರುಳುಡಿದು
ಥೊಟ್ಟನಲು ಬಕುಳದ ಮುಡಿಕೆ ಹುಡಿ
ಗುಟ್ಟದವೊಲರುಣಾಂಬು ನೆಱಿ ಕಡ
ಲಿಟ್ಟು ಹರಿಯಲು ತಳೆದುದತಿ ರೌದ್ರವನು ರಣಭೂಮಿ ೩೩

ಸತ್ತು ಬದುಕಿದವೋಲು ನಿರ್ಜಿತ
ದೈತ್ಯನನು ನಿರ್ಮುಕ್ತ ಸುರಕುಲ
ಮೃತ್ಯುವನು ಬಂದಪ್ಪಿ ಹರುಷಾಂಬುಧಿಯಲೋಲಾಡಿ
ಉತ್ತಮರು ಬಲಭದ್ರನನು ಹೊಗ
ಳುತ್ತ ಕೈವಾರಿಸುತ ಪುಣ್ಯ ಚ
ರಿತ್ರನನು ಕೊಂಡಾಡಿದರು ಹರುಷದಲಿ ತಮತಮಗೆ ೩೪

ಅತ್ತಲಾ ಗೋಪಾಲ ಬಾಲರ
ವೊತ್ತವಾ ಕೋಲಾಹಳದಲಿರ
ಲಿತ್ತಲಾಡುವ ಗೋವುಗಳು ತಮ್ಮಿಚ್ಛೆಯಲಿ ಹರಿದು
ದುಸ್ತರದ ಘನವಿಪಿನದಲಿ ಮೇ
ವುತ್ತ ತೃಣಲೋಭದಲಿ ಸಂಚರಿ
ಸುತ್ತ ಹೊಕ್ಕವು ಘೋರ ಗಿರಿಕಾನನದ ಗಹ್ವರವ ೩೫

ಸಿಕ್ಕಿದವು ತುಱುವಿಂಡುಗಳು ಕೈ
ಮಿಕ್ಕು ಗುಂಜಾಟವಿಯೊಳತ್ತಲು
ಹೊಕ್ಕು ಹೋಱವಡಬಾರದಿಱುಬಿನಲೈದೆ ಹೊಲಬಳಿದು
ಅಕ್ಕಟೆನುತಱಸುತ್ತ ಗೋಪರ
ಮಕ್ಕಳೈತಂದೊಡನೆ ಹುಗುವುದ
ಶಕ್ಯವೆನುತೊಂದೆಸೆಯಲಿದ್ದರು ಕೂಡೆ ವಶವಳಿದು ೩೬

ಕೆಟ್ಟೆವೆಂದಱಸುತ್ತ ಮಿಗೆ ಕಂ
ಗೆಟ್ಟು ತುಱುಗಳು ಹೋದ ಹಜ್ಜೆಯ
ಬಟ್ಟೆಗಾಣದೆ ಶಿಖರ ವನ ಗಹ್ವರ ತೃಣಂಗಳಲಿ
ಭ್ರಷ್ಟತೇಜರು ಮರಳಿ ಬಂದಾ
ವಿಷ್ಟರಶ್ರವಗೈದೆ ಬಾಯನು
ಬಿಟ್ಟರೆಲೆಯೆಲೆ ದೇವ ರಕ್ಷಿಸು ರಕ್ಷಿಸೆಂದೆನುತ ೩೭

ಕಂಗೆಡದಿರೆಲವೆಲವೊ ತುಱುಗಳ
ಭಂಗವೆನ್ನದು ಸೈರಿಸೆನುತಾ
ರಂಗನೇಱಿದನೊಂದು ಮರವನು ಮೇಲೆ ನಿಂದಿರ್ದು
ಗಂಗೆ ಬಾರೆಲೆ ಗೌರಿ ಬಾ ತಾ
ತುಂಗೆ ಬಾಯೆನ್ನೊಡತಿ ಬಾ ಎನು
ತಂಗಲಕ್ಷ್ಮಿಯ ತೋಱೆ ಕರೆದನು ಬೇಱೆಬೇಱೆಲಿದು ೩೮

ಕೇಳರಸ ಗೋವುಗಳ ಬಹಳ ವಿ
ಶಾಲ ಭಾಗ್ಯೋದಯವನಾ ದನಿ
ಗೇಳುತವೆ ಮುರಿಮುರಿದು ಹರಿಯಾನನವನೀಕ್ಷಿಸುತ
ಬಾಲದತ್ತಲು ಮೊಗವನಿಟ್ಟೀ
ರೇಳುವೆನು ಹುಂಬಾರವದ ಹೇ
ರಾಳದನಿದೋಱಿದುವು ದೆಸೆ ಮಾರ್ಮೊಳಗುವಂದದಲಿ ೩೯

ಬಂದುದಾ ಸಮಯದಲಿ ಕಾಳ್ಗಿ
ಚ್ಚೊಂದು ಕಲ್ಪಾಂತರ ದವಾನಳ
ನಂದದಲಿ ನೆಱೆ ಸುತ್ತಿ ಮುತ್ತಿತು ಶೈಲಕಾನನವ
ನಂದ ಗೋಪರು ಗೋವುಗಳು ಭಯ
ದಿಂದ ನಡುಗಲು ಹೊಗೆಯ ಹೊರಳಿಗ
ಳಿಂದ ಹೂಳುತ್ತೆಂಟು ದಿಕ್ಕಿನಲೈದೆ ಮೋಹರಿಸಿ ೪೦

ವೆಂಠಣಿಸಿ ದೆಸೆಗವಿವ ಕಿಡಿಗಳ
ಕುಂಠಿಣಿಯು ಪವಮಾನನೆಂಬುದ
ನಂಟಿನಲಿ ನಯವಡೆದ ನಾಲಿಗೆಗಳ ಸಮಗ್ರತೆಯ
ಉಂಟು ಮಾಡುತ್ತುಬ್ಬೆಯನು ನೆಱೆ
ಪಂಠಿಸುತ ಸಚರಾಚರಂಗಳ
ಲೆಂಟು ದೆಸೆಯಲಿ ಬಂದುದೊಂದೇ ಪರಿಯಲುರವಣಿಸಿ ೪೧

ಛಿಳಿ ಛಿಳಿಲು ಛಿಟಿ ಛಿಟಿಲು ಘುಳು ಘುಳು
ಘುಳಿಸಿ ಕಾಳುರಿ ಕಾನನವನ
ವ್ವಳಿಸುತೈತರೆ ಕಂಡುದಾ ಗೋಪಾಲ ಬಾಲಕರು
ಘಳಿಲನೆದ್ದರು ಮುನ್ನ ಬಂದಾ
ಬಳಲಿಕೆಯನೀಕ್ಷಿಸದೆ ಜೀವದ
ಕಳಕಳದಲೈತಂದು ಹೊಕ್ಕರು ಮುರಹರನ ಮಱೆಯ ೪೨

ರಕ್ಷಿಸೆಲೆ ಜಗದೀಶ್ವರೇಶ್ವರ
ರಕ್ಷಿಸಾನತ ಕಮಲ ಭಾಸ್ಕರ
ರಕ್ಷಿಸೆಲೆ ಸುರಪಾಲ ರತ್ನಾಮಣಿಯೆ ಗುಣನಿಧಿಯೆ
ರಕ್ಷಿಸೈ ದಾವಾಗ್ನಿ ನಿನ್ನ ಕೃ
ಪೇಕ್ಷಣದ ದಾಸರನು ನಮ್ಮನು
ಭಕ್ಷಿಸುತ್ತಿದೆಯೆನುತ ಕರುಣವ ತೋಱಿದರು ಹರಿಗೆ ೪೩

ರವಿಯು ಕಾಹಿನ ಕಮಲವನಕಂ
ಘವಿಸುವುದೆ ಕತ್ತಲೆ ನಿಜಾಶ್ರಿತ
ನಿವಹವನು ನೆಱೆ ನಿನ್ನ ಕಾರುಣ್ಯೈಕರಕ್ಷಿತರ
ತ್ರಿವಿಧವಹ ಘನತಾಪ ಮುಟ್ಟದು
ದವಶಿಖಾವಳಿ ತಾಪವಿದು ಸಂ
ಭವಿಸಲಱಿವುದೆ ನಿನ್ನವರಿಗೆನುತೆಱಗಿದರು ಪದಕೆ ೪೪

ಹೋದವತ್ತಲು ತುಱುಗಳೆಮಗಳಿ
ವಾದುದಿತ್ತಲು ಕೃಷ್ಣ ನಿನ್ನೀ
ಪಾದವೇ ಗತಿಯೆನುತ ಮೂರ್ಛಿತರಾಗೆ ಭೀತಿಯಲಿ
ಆದರಿಸಿ ತನ್ನಂಘ್ರಿಕಮಲವ
ನಾದಿ ಮೂರುತಿ ತನ್ನವರಿಗಂ
ದಾದ ಭಂಗವ ನೋಡಿ ನೆಱೆ ತಲೆದೂಗುತಿಂತೆಂದ ೪೫

ಉಂಟು ತನ್ನವರಹಿರಿ ನಿಮಗಾ
ನೆಂಟು ಮಡಿ ಹಂಗಿಗನು ಹೋ ನಿ
ಷ್ಕಂಟಕರು ನೀವಂಜಬೇಡಿ ನಿಜಾಶ್ರಿತಾಶ್ರಿತರ
ಬಂಟ ನಾನೆಲೆ ತಂದೆಗಳಿರಿದ
ನುಂಟು ಮಾಡಿಯೆ ತೋರ್ಪೆನೀಗಳೆ
ನೆಂಟರಿರ ನಿಮಗೆನುತ ನೆಗಹಿದನಭಯ ಕರತಳವ ೪೬

ಕಿಚ್ಚಿಗಂಜುವರೈದೆ ಕಂಗಳ
ಮುಚ್ಚಿಕೊಳ್ಳಿಯೆನುತ್ತ ನೇಮಿಸ
ಲಚ್ಯುತನ ನುಡಿಗೇಳಿ ಬಲು ಲೇಸೆನುತ ಕಂಗಳನು
ಮುಚ್ಚಿರಲು ಗೋ ಗೋಪರನು ತಂ
ದೊಚ್ಚತೊಯ್ದಿರಿಸಿದನು ನೃಪ ಕೇ
ಳಚ್ಚರಿಯನಾ ಗೋಕುಲ ಪ್ರಾಂತದಲಿ ಕೇಳೆಂದ ೪೭

ತುಱುಗಳನು ತುಱುಗಾಹಿಗಳನೆ
ಲ್ಲರನು ನುಂಗುವವೋಲು ಬಹ ಕಾ
ಳುರಿಯನಾಕ್ಷಣವೆ ನುಂಗಿ ನಿಜಪ್ರಭಾವದಲಿ
ತೆಱೆಯಿ ಕಂಗಳನೆನಲು ಗೋಪರು
ತೆಱೆದು ಕಂಡರು ತಮ್ಮಿರವಿನ
ಚ್ಚರಿಯೆನುತ ಭಾಂಡೀರಕಾಖ್ಯ ವನಾಂತಿಕದಲಂದು ೪೮

ಏನಿದೆತ್ತಣ ನಮ್ಮಿರವು ಘನ
ಕಾನನವದೇನಾಯ್ತು ಬಹಳ ಕೃ
ಶಾನುವಿನ ಭಯವೆತ್ತಲಾ ಗೋವುಗಳ ಕಡುಗೇಡು
ಸ್ಥಾನಪಲ್ಲಟವೆತ್ತಲಿದು ಕೃ
ಷ್ಣಾನುಭಾವದ ಮಹಿಮೆಯನು ತಾ
ಧ್ಯಾನಿಸುತ ಬೆಱಗಾಯ್ತು ಗೋಪವ್ರಾತವಡಿಗಡಿಗೆ ೪೯

ಬಂದು ಗೋಕುಲಕಾ ಕುಮಾರರ
ವೃಂದವಾ ವೃತ್ತಾಂತವನು ಮುದ
ದಿಂದ ವಿವರಿಸಲೈದೆ ಕೇಳ್ದಾನಂದದಲಿ ಹರಿಯು
ಕಂದಣಿಯೆ ನಡೆ ನೋಡಿ ತವತವ
ಗಂದು ತಕ್ಕಯಿಸುತ್ತ ತಮ್ಮೊಳ
ಗೆಂದರಾ ಗೋಕುಲದವರು ಗೋವಿಂದನ ಸ್ಥಿತಿಯ ೫೦

ನರರ ಪರಿಯಲ್ಲಾ ಯಶೋದಾ
ವರಸುತನ ಮೆಯ್ಸಿರಿ ಪರಾಕ್ರಮ
ದಿರವು ದುಸ್ತರಲೀಲೆ ದೈತ್ಯನಿಕಾಯಭಂಜನದ
ಉರಿಯ ಮಧ್ಯದ ಗೋಕುಲವನು
ದ್ಧರಿಸಬಲ್ಲ ಸಮರ್ಥರಾರ
ಚ್ಚರಿಯೆನುತೋರಂತೆ ಕೊಂಡಾಡಿದರು ಹರುಷದಲಿ ೫೧

ಗೋಪಿಯರು ಗೋವಿಂದನೊಪ್ಪುವ
ರೂಪು ಗುಣಲಾವಣ್ಯ ಸುಧೆಯನು
ತಾಪತಪ್ತೆಯರಕ್ಷಿಗಳಲೋರಂತೆ ಕುಡಿ ಕುಡಿದು
ಭೂಪ ಮಱೆದರು ತನುವನನ್ಯಾ
ಳಾಪರಹಿತೆಯರೊಂದು ನಿಮಿಷ ಯು
ಗೋಪಮವಲಾ ಕಾಣದಿರ್ದಡೆ ಕೃಷ್ಣನಂಘ್ರಿಗಳ ೫೨

ಅಗಲಿದಪನಬುಜಾಕ್ಷಿಯರನೆಂ
ದೊಗುಮಿಗೆಯ ಕರುಣದಲಿ ನಿಳಯವ
ಹೊಗಿಸಿ ಹರಿಯನು ಮುಗುಳೆ ಹೊಱವಡದಂತೆ ಕತ್ತಲೆಯ
ಬಿಗಿದನಬುಜಪ್ರಿಯನದಕೆ ನಭ
ನಗುವವೋಲೋರಂತೆ ತಾರಾ
ಳಿಗಳು ತೊಳ ತೊಳಗಿ ಮೆಱೆಯಲು ಸಂಜೆ ರಂಜಿಸಿತು ೫೩

ಬಳಿಕ ಗೋಪಿಯ ನಯನ ಭೃಂಗಾ
ವಳಿನಿಷೇವಿತ ವದನ ಕಮಲೋ
ಜ್ವಲ ಮಧುಸ್ಮಿತ ಮುದ್ರಿತಾಪಾಂಗೇಕ್ಷಣದಲೆಸೆಯೆ
ನಳಿನನಾಭನು ನಿಜಪದಾಶ್ರಿತ
ರೊಳಗೆ ಮತಿಯಿಟ್ಟೊಲಿದು ನಿದ್ರಾ
ಲಲನೆಗಭಿಮುಖನಾಗಿ ನಿತ್ಯಾತುಮನು ಪವಡಿಸಿದ ೫೪

ಹದಿನೆಂಟನೆಯ ಸಂಧಿ ಮುಗಿಯಿತು.

# ಹತ್ತೊಂಬತ್ತನೆಯ ಸಂಧಿ

ಮಳಲ ಗೌರಿಯನೋತು ಕೃಷ್ಣನ
ಚೆಲುವ ಮೂರ್ತಿಗೆ ಸೋತು ವರಗೋ
ಕುಲದ ಕನ್ಯೆಯರೈದೆ ಪಡೆದರು ನಿಜ ಮನೋರಥವ

ನಳಿನ ಸಖನಿರದೂದಿ ಕಗ್ಗ
ತ್ತಲೆಯ ಕೊಂದನು ಪೂರ್ವಸಂಧ್ಯಾ
ಲಲನೆಗೊಪ್ಪಿರೆ ತೊಡಿಸಿದನು ದಿಗ್ವಳಯ ಭೂಷಣವ
ಹೊಳೆವ ಹೊಸ ಹೊಂಬಿಸಿಲ ತೇಜವ
ತಳೆದುದಂಬರವಂಬರವನಾ
ನಳಿನಸಖನುಡಲಿತ್ತು ಕಳುಹಿದವೋಲು ಕೃಷ್ಣಂಗೆ ೧

ಉಪ್ಪವಡಿಸಿದನುಭಯ ಕವಿಮುಖ
ದರ್ಪಣೋಚಿತ ಕೀರ್ತಿ ಜಿತಕಂ
ದರ್ಪಕೋಪಮ ಕೀರ್ತಿ ಕಾರುಣ್ಯದಲಿ ಕಂದೆಱೆದು
ದರ್ಪಣವ ನೋಡಿದನು ನಿಜಮುಖ
ದರ್ಪಣನು ಸನ್ನುತ ಮನೋರಥ
ತರ್ಪಣನು ನುತಭೂಷಣಂಗಳನೊಪ್ಪಿರಲು ಮಾಡಿ ೨

ಇಂತು ಗೋಕುಲದರಸನಾ ಶ್ರೀ
ಕಾಂತನೆಸೆದಿರಲಮರಮುನಿಸಂ
ಚಿಂತ್ಯಮಾನಪದಾಬ್ಜನಾ ಗೋಕುಲದ ಮಧ್ಯದಲಿ
ಸಂತಸದಲಿರೆ ಸಕಲಜೀವರ
ತಿಂಥಿಣಿಯ ತಾಪವನು ಕೆಡಿಸುವ
ನಂತಪದನಿಷ್ಠೆಯಲಿ ಮೆಱೆದವು ಮೇಘ ಸಂದೋಹ ೩

ಬಿಸಿಲ ಬಿಂಕವನೊದೆದು ಹರಿಪದ
ಬಿಸರುಹಕೆ ಶೈತ್ಯವನು ಬೀಱುತ
ಬಸವನಂತೊದಱುತ್ತ ಘನ ಗಂಭೀರನಾದದಲಿ
ದೆಸೆದೆಸೆಗೆ ದಾಕ್ಷಿಣ್ಯದಲಿ ವರು
ಷಿಸುತ ಜಲವನು ಜೀವಜಾತ
ಕ್ಕಸು ಸಮೃದ್ಧಿಯನಿತ್ತುದುತ್ತಮರಂತೆ ವರುಷರುತು ೪

ಹೊಳೆದು ಹೋದವು ಮಿಂಚುಗಳು ಪುಂ
ಶ್ಚಲಿಯರಂತಿರೆ ಗುಣಪದಭ್ರಗ
ಳೊಳಗೆ ನಿಲ್ಲದೆ ಲೋಕಬಂಧುಗಳಲಿ ನಿರಂತರಕೆ
ತೊಲಗಿದವು ಹಂಸೆಗಳು ನೆಱೆ ತಿಳಿ
ಗೊಳನ ಕಾಣದೆ ಸಲೆ ಕುಟುಂಬಾ
ಕುಳರವೋಲಾ ಶ್ರಾಂತಕೃತ್ಯದಲೀಕ್ಷಿಸದೆ ಸುಖವ ೫

ಸೋಗೆಗಳು ನೃತ್ಯವನು ಘನಮೇ
ಘಾಗಮದಲಾಡಿದವು ಮಮತೆಯ
ಬೇಗೆಯಲಿ ಬಳಲುವ ಗೃಹಸ್ಥರು ತಮ್ಮ ಮನೆಗಳಿಗೆ
ಭಾಗವತರೈತರಲು ಹರುಷದ
ಸಾಗರದಲೋಲಾಡಿ ಮನದನು
ರಾಗದಲಿ ಕುಣಿವಂತೆ ಕೇಕಾರವದ ಸೂಕ್ತಿಯಲಿ ೬

ಕದಡಿದರೆ ಕಾಹುರಕೆ ನದಿಗಳು
ಕದಡಿದವು ತಮ್ಮೊಳಗೆ ನೆಱೆ ಕೂ
ಡಿದರೆ ಹೆಚ್ಚದೆ ಕೂಡದಿದ್ದರೆ ಕುಂದದಂದದಲಿ
ಉದಧಿಯಿದ್ದುದು ಪೂರ್ಣ ನಿಜ ಸಂ
ಪದದಲನ್ಯಾಪೇಕ್ಷೆಯನು ಕೆಡೆ
ಯೊದೆದು ನಿಜಪದದೊಳಗೆ ನಿಂದ ಮಹಾತ್ಮರಂದದಲಿ ೭

ದನುಜಹರನೀಕ್ಷಿಸಲು ವೃಂದಾ
ವನದ ಸಿರಿಯನು ಗೋಪ ಜನ ಗೋ
ಧನಸಹಿತ ಹೊಱವಂಟು ಯಮುನಾ ನದಿಯನುತ್ತರಿಸಿ
ಅನಿಮಿಷಾರ್ಚಿತನೆಸೆದನಾ ವನ
ವನಗಳಲಿ ಫಲ ಮೂಲ ವಿಹಿತಾ
ಶನನೆನಿಸಿ ಗಿರಿ ಗುಹೆಗಳನು ಮನೆಮಾಡಿ ವಿಭವದಲಿ ೮

ಒಡೆದು ಹರಿದವು ಕಟ್ಟೆಗಳನು
ಗ್ಗಡದ ನದಿಗಳು ವರುಷಜಲ ಸಂ
ಗಡಿಸೆ ಯವ್ವನದುಬ್ಬಿನಲಿ ಧಿಕ್ಕರಿಸಿ ಸತ್ಪಥವ
ಸೆಡೆವ ದುರ್ಜನರಂತೆ ಮುಗಿಲಿನ
ಗಡಬಡೆಯ ಕೇಳುತ್ತ ಕಪ್ಪೆಗ
ಳೊಡನೊಡನೆ ದನಿದೋಱಿದವು ವಿಫಲೋಕ್ತಿ ನರರಂತೆ ೯

ಒಮ್ಮೆ ಮಳೆ ಘನವಾದಡಾ ಪರ
ಬೊಮ್ಮ ಮೂರುತಿ ಗೋಕುಲಕೆ ಬರ
ಲಮ್ಮದುಂಬನು ತರಿಸಿ ಕಟ್ಟೋಗರವ ವನದೊಳಗೆ
ಒಮ್ಮೆ ತುಱುಗಳ ಹಾಲಕಱೆದೊ
ಮೊಮ್ಮೆ ವರಖರ್ಜೂರ ಜಂಬೂ
ನಿರ್ಮಿತಾಹಾರದಲಿ ಕಳೆವನು ವನದೊಳಗೆ ದಿನವ ೧೦

ಹೆಚ್ಚಿದಲ್ಲಿಯ ಹುಲ್ಲ ಮೇದರೆ
ಮುಚ್ಚಿ ಕಂಗಳನೊಯ್ಯನೊಯ್ಯನೆ
ಕೆಚ್ಚಲನು ತೂಗುತ್ತ ಮೆಲುಕಿಕ್ಕುತ್ತ ಗೋಕುಲಕೆ
ನಿಚ್ಚ ನಿಚ್ಚಲು ಬಪ್ಪ ತುಱುಗಳ
ನಚ್ಯುತನು ನಡೆನೋಡಿ ಮನದಲಿ
ಮೆಚ್ಚುವನು ಮಿಗೆ ವರುಷರುತುವಿನ ದಿನದ ವೈಭವಕೆ ೧೧

ಇರೆ ಶರತ್ಕಾಲದ ಮಹೋದಯ
ದಿರವನದನೇನೆಂಬೆನಾವಿ
ಷ್ಕರಿಸಿದುದು ಹರಿಚರಣಕಮಲದ ಸೇವೆಯನು ಮಾಳ್ಪ
ಭರದಲಾಕಾಶವನು ನೆಲವನು
ನಿರುತ ಜಲವನು ಕೂಡೆ ಶುದ್ಧೀ
ಕರಿಸುತಾಶ್ರಮಗಳನು ಹರಿಪದಭಕ್ತಿಯಂದದಲಿ ೧೨

ವಿಮಳವಾದುದು ಸಕಲಯೋಗ
ಕ್ರಮವಿದರ ಮತಿಯಂತೆ ನಿರಹ
ಮ್ಮಮರವೋಲಭ್ರಂಗಳುಳಿದವು ಸಲಿಲ ಸಂಭ್ರಮವ
ಸ್ತಿಮಿತವಾಯ್ತು ಸಮುದ್ರ ಶರದಾ
ಗಮನದಲಿ ನಿಜಲಾಭವನು ಪಡೆ
ದಮಳಹೃದಯರವೋಲು ಸಕಲಾಗಮ ನಿವೃತ್ತಿಯಲಿ ೧೩

ಕಟ್ಟೆಗಳಲುದಕವನು ಮುನ್ನಿನ
ಬಟ್ಟೆಯಲಿ ಕೆಡದಂತೆ ಕೃಷಿಕರು
ಕಟ್ಟಿದರು ತಂತಮ್ಮ ಕೆಯ್ ಮನೆಗಳಿಗೆ ಕಾಲದಲಿ
ಕೆಟ್ಟ ವಿಷಯಕ್ಕೆಱಗಿ ಯೋಗ
ಭ್ರಷ್ಟರಾದರೆ ಮಗುಳೆ ಕಾಲವಿ
ಶಿಷ್ಟತೆಯನೈದುವವೊಲಚ್ಯುತಭಕ್ತರೆಂದೆನಿಸಿ ೧೪

ಮಳೆಯ ನೀರದು ನಿತ್ಯವೆಂದೇ
ಜಲಚರಂಗಳು ನಚ್ಚಿ ನಿಜವಹ
ಜಲವನೈದದೆ ನೋಡದಾ ತಜ್ಜಲದ ಸಂಕ್ಷಯವ
ಸುಳಿವುತಿರ್ದವು ಬಹು ಕುಟುಂಬಾ
ಕುಳರೆನಿಸಿ ಮೈಮಱೆದು ನಿಜವನು
ತಿಳಿಯದಜ್ಞರವೋಲು ನಿಶ್ಚಯವೆಂದು ಗೃಹಧನವ ೧೫

ಅಱಿತವಾ ಶರದರ್ಕ ಬಿಂಬದ
ಬಿಱುಬಿಸಿಲ ಸಂತಾಪವನು ಮೇ
ಗೆಱೆಯ ಜಲದೊಳಗಿರ್ದ ಜಲಚರನಿಕರವಡಿಗಡಿಗೆ
ನೆಱೆ ಕುಟುಂಬಾಸಕ್ತರಾತ್ಮನ
ನಱಿಯದೀ ಸಂಸಾರ ತಾಪವ
ನಱಿವವೋಲಧ್ರುವವೆನಿಪ ದೇಹಾತ್ಮಬುದ್ಧಿಯಲಿ ೧೬

ಮಿಗೆ ಬಿಸಿಲ ಬೇಗೆಯನು ಬಱಗೋ
ಡಿಗಳ ಮೀನ್ಗಳು ದಿನ ದಿನಕೆ ಮೈ
ದೆಗೆಯದನುಭವಿಸುತ್ತ ಕುದಿಕುದಿಕುದಿದು ಮಗ್ಗಿದವು
ಬಗೆಯದಾತ್ಮನ ಗತಿಯನಜ್ಞಾ
ನಿಗಳು ದೇಹಕಳತ್ರ ಪುತ್ರಾ
ದಿಗಳ ಮಮತಾ ಕ್ಲೇಶದಲಿ ಕುದಿಕುದಿದು ಕೆಡುವಂತೆ ೧೭

ಘೋರತರ ಶರದರ್ಕ ತಾಪ ನಿ
ವಾರಣವನೀ ಸಕಲ ಲೋಕಕೆ
ಶಾರದೇಂದು ಪ್ರಭೆ ಸಮರ್ಥಿಸಿ ವಿಷ್ಣುಪದದೊಳಗೆ
ಬಾರಿಸಿದುದುಬ್ಬರದ ಘನ ಸಂ
ಸಾರತಾಪವನಾತ್ಮತತ್ವ ವಿ
ಚಾರಮತಿ ಪರಿಹರಿಸುವಂದದಲಖಿಳ ಜೀವರಿಗೆ ೧೮

ಆ ಶರತ್ಸಮಯಾಭ್ರರಹಿತಾ
ಕಾಶವೆಸೆದುದು ವಿಮಳ ತಾರಾ
ರಾಶಿಗಳಲಖಿಳಾಗಮಜ್ಞರ ಹೃದಯದಂದದಲಿ
ನೇಸಱೆಡೆಯಾಡಿದುದು ಸಲೆ ದಿ
ಗ್ದೇಶ ಶುದ್ಧೀಕರಣದಲಿ ಹರಿ
ದಾಸರಂತಿರೆ ತಾಮಸವನಪಹರಿಸುತವನಿಯಲಿ ೧೯

ತೊಳ ತೊಳಗಿ ಪೂರ್ಣೇಂದು ನಭದಲಿ
ಬೆಳಗಿದನು ಪೀಯೂಷ ರಸವನು
ತಳೆದು ಪರಮಾನಂದವನು ಮಾಡುತ್ತ ಮೂಜಗಕೆ
ನಳಿನಲೋಚನನಖಿಳ ಗೋಕುಲ
ಲಲನೆಯರಿಗಾನಂದವನು ನೆಱೆ
ಸಲಿಸುವಂತಿರಲೊಲಿದು ಕರುಣಾಪಾಂಗದೃಷ್ಟಿಯಲಿ ೨೦

ಸಂಗಡಿಸಿ ಧೇನುಗಳನಾ ವೃಷ
ಭಂಗಳನುಗಮಿಸಿದುವು ಸತ್ಕ
ರ್ಮಂಗಳಿಗೆ ಫಲನಿಕರವನುಗಮನವನು ಮಾಳ್ಪಂತೆ
ಹಿಂಗದಖಿಳ ಹಿತಕ್ಕೆ ರವಿ ಗಗ
ನಾಂಗಣಕೆ ಬರೆ ಮುಸುಕಿದವು ಕುಮು
ದಂಗಳಚ್ಯುತಬಾಂಧವರು ಬರಲಜ್ಞರಂದದಲಿ ೨೧

ಇಂತು ಶಾರದಲಕ್ಷ್ಮಿ ಲಕ್ಷ್ಮೀ
ಕಾಂತ ಪದಯುಗ ಸೇವೆಯನು ಮಾ
ಳ್ಪಂತೆ ಮೆಱೆವುತ್ತಿರಲು ಸಹಜ ಮನೋಜ್ಞವಿಭವದಲಿ
ಕಂತುಪಿತನದನೀಕ್ಷಿಸಲು ವಿಪಿ
ನಾಂತರಶ್ರೀಗಳಿಗೆ ನಿಯತೇ
ಕಾಂತವಹ ವೃಂದಾವನಕ್ಕೈತಂದನೊಲವಿನಲಿ ೨೨

ಅಳಿಕುಲದ ಸಾಮ್ರಾಜ್ಯಸೌಖ್ಯಾ
ವಳಿಗೆ ನೆಲೆಯಹ ಪುಷ್ಪಿತ ದ್ರುಮ
ಕುಲದ ಮತ್ತಮಯೂರ ನೃತ್ಯದ ಪಿಕದ ಸುಸ್ವರದ
ಲಲಿತ ಶುಕಸಾರಸ ಕುಲೋನ್ನತ
ಕಳರವದ ಕಮನೀಯ ವನಸಿರಿ
ಗಳನು ನಡೆ ನೋಡುತ್ತ ಗೋಪರಸಹಿತ ನಡೆತಂದ ೨೩

ಪೊಂಗೊಳಲಲೊಪ್ಪಿರಲು ಗೋಪುರ
ವಂಗಡದ ಮೇಳದಲಿ ಬಾಜಿಸು
ವಂಗಜನ ಪಿತನಖಿಳ ಸಮ್ಮೋಹನದ ಲೀಲೆಗಳ
ಅಂಗವನು ನೆನೆ ನೆನೆದು ಗೋಕುಲ
ದಂಗನೆಯರಾ ಕೃಷ್ಣ ವರಚರಿ
ತಂಗಳನು ಪಾಡುತ್ತ ಮಱೆದರು ದಿವಸವಿಭ್ರಮವ ೨೪

ಪೊಂಗೊಳಲ ನಾದದಲಿ ಸಕಲ ಜ
ಗಂಗಳನು ಮೋಹಿಸುತ ಹೊಸ ಪರಿ
ಯಂಗಭೂಷಣವೆಸೆಯೆ ವನ್ಯಪ್ರಸವ ನಿಕರದಲಿ
ಕಂಗೊಳಿಸುವಡವಿಯನು ನಿಜಪದ
ಸಂಗದಲಿ ಪಾವನವ ಮಾಡುತ
ಭೃಂಗಗೀತ ಶ್ರವಣಲೋಲುಪನೈದಿದನು ವನಕೆ ೨೫

ಕೇಳು ತಾಯೆ ಯಶೋದೆ ನಿಜಸುತ
ನೇಳಿಗೆಯ ವೈಸಿರಿಯ ಕತ್ತರಿ
ವೀಲಿಯನು ತಲೆಸುತ್ತಿ ಕಿವಿಯಲಿ ಕೊಸಕಿಲನು ಧರಿಸಿ
ಲೋಲತರ ನವ ವೈಜಯಂತೀ
ಮಾಲೆ ಪೀತಾಂಬರಗಳೆಸೆಯಲು
ನೀಲ ಮೇಘಶ್ಯಾಮ ತಾ ಹೋದನಿದೆ ವನಾಂತರಕೆ ೨೬

ಕೆಳೆಯರಿಂದೊಪ್ಪಿರಲು ಹೊಗಳಿಸಿ
ಕೊಳುತ ನಡೆವವರಂಗದಲಿ ಕಂ
ಗೊಳಿಸುವಭಿನವ ವೇಷದಲಿ ಮೋಹಿಸುತ ಮೂಜಗವ
ಸುಳಿವ ಸೊಬಗನ ಕಂಡಡೀ ಕಂ
ಗಳಿಗೆ ಫಲವೆಲೆ ತಾಯೆ ಹೋಲುವ
ಚಲುವರಾರೀ ಕೃಷ್ಣನೇಕಾಂಗದ ಸಮಗ್ರತೆಗೆ ೨೭

ಕೆಳದಿಯರಿರಾ ಕೃಷ್ಣನಂಗೈ
ತಳದಲೊಪ್ಪುವ ವೇಣು ಮಾಡಿದ
ಹಲವು ಜನ್ಮಾಂತರದ ಸುಕೃತವದಾವುದೋ ಬಳಿಕ
ಒಲಿದು ಪಾವನಮಾಳ್ಪ ಸೌಖ್ಯದ
ಸುಲಭತೆಯದಾರ್ಗಹುದು ಲಕ್ಷ್ಮೀ
ಲಲನೆ ತದ್ಭುಕ್ತಾವಶೇಷವನಕಟ ಬಯಸುವಳು ೨೮

ಧರೆಗೆ ಕೀರ್ತಿಯನಧಿಕವೆನೆ ವಿ
ಸ್ತರಿಸುತಿದೆ ವೃಂದಾವನದ ಸಿರಿ
ಪರಮ ಪುರುಷ ಪದಾಬ್ಜ ಲಾಂಛನಗಳನು ನೆಱೆ ಧರಿಸಿ
ಸರಸಿಜೋದ್ಭವ ಶಕ್ರ ಮುಖ್ಯಾ
ಮರರು ಮುನಿಗಳದಾವನೊಬ್ಬನ
ಚರಣರಜವನು ಕಾಣಲಱಿಯರು ಗಡ ಸಮಾಧಿಯಲಿ ೨೯

ಆವ ಸುಕೃತಿಗಳವ್ವ ವರ ವೃಂ
ದಾವನದ ತರುನಿಕರವಾ ವಿಹ
ಗಾವಳಿಗಳಾ ಮೃಗಕುಲಂಗಳು ಕೃಷ್ಣನಂಘ್ರಿಗಳ
ಸೇವಕೋತ್ತಮರಂತೆ ತನು ಪುಳ
ಕಾವಳೀ ನಯನಾಂಬು ತದ್ಗತ
ಭಾವದಲಿ ಪರಿವರಿಸಿ ನೋಡುತ್ತಿರ್ಪರನವರತ ೩೦

ಎಂತುಟೋ ಪುಳಿಂದೆಯರ ಪೂರ್ವ ಭ
ವಾಂತರಾರ್ಜಿತ ಸುಕೃತ ಲಕ್ಷ್ಮೀ
ಕಾಂತನಂಘ್ರಿ ಸರೋಜ ನವಕುಂಕುಮ ಪರಾಗವನು
ತಂತಮಗೆ ತೆಗೆ ತೆಗೆದು ತೃಣದಲಿ
ಸಂತತ ವರಾನನ ಕುಚಗಳ
ಲುಂತೆ ತೊಡೆ ತೊಡೆವುತ್ತ ಮಱೆದರು ಮನ್ಮಥವ್ಯಥೆಯ ೩೧

ಚಿತ್ತವಿಸಿ ಕೆಳದಿಯರಿರಾ ಪುರು
ಷೋತ್ತಮಾಂಘ್ರಿ ಸ್ಪರ್ಶ ಸುಖಲಾ
ಭೋತ್ಕರದ ಸಿದ್ಧಿಯಲಿ ಹರ್ಷಿತನಾಗಿ ತನಗುಳ್ಳ
ಮತ್ತೆ ತೃಣಜಲಕಂದಮೂಲವ
ನಿತ್ತು ದಣಿಯನು ನಿಚ್ಚಲಕಟಾ
ವುತ್ತಮಾಚ್ಯುತ ಭಕ್ತನೀ ಗಿರಿರಾಜನವನಿಯಲಿ ೩೨

ಏನನೆಂಬೆನು ಕೃಷ್ಣನನತುಳ ಮ
ಹಾನುಭಾವವನಖಿಳವಾತ್ಮಾ
ಧೀನವೀ ಜಗವೆಂದು ತೋಱಿಸುವಂತೆ ಪೊಂಗೊಳಲ
ಗಾನರಸದಲಿ ತರುಗಳಿಗೆ ಪುಳ
ಕಾನುಬಂಧವನಖಿಳ ಖಗ ಮೃಗ
ಮಾನವಾದಿಗಳಿಂಗೆ ಮಾಳ್ಪನು ತರುಗಳ ಸ್ಥಿತಿಯ ೩೩

ಎನುತ ಕೃಷ್ಣನ ಲೀಲೆಯನು ನೆನೆ
ನೆನೆದು ಲಜ್ಜಿಸುತಖಿಳ ಗೋಕುಲ
ವನಿತೆಯರು ತಮ್ಮೊಳಗೆ ತದ್ಗತಭಾವ ಭಕುತಿಯಲಿ
ತನುವ ಮಱೆವರು ಗದ್ಗದಾಕ್ಷರ
ಜನಿತ ತಾದಾತ್ಮ್ಯದಲಿ ಗೋಪೀ
ಜನದ ಭಾಗ್ಯದ ಸಿರಿಯನಭಿವರ್ಣಿಸುವರಾರೆಂದ ೩೪

ಇಂತು ಶಾರದದಿವಸಸಿರಿ ಸಿರಿ
ಕಾಂತನನು ನಿಜಸಮಯ ಸೌಖ್ಯದ
ಸಂತತಿಗಳಿಂದೋಲಗಿಸುತಿರುತಿರಲು ದಿನಗಳಿಗೆ
ಅಂತುಕನನಿಕ್ಕಿದನು ವಿಧಿ ತನ
ಗಂತಳಲೊಳೈತಂದುದಾ ಹೇ
ಮಂತಋತು ರಾಜೀವಲೋಚನನಂಘ್ರಿದರ್ಶನಕೆ ೩೫

ವಿದಿತವಾ ಹೇಮಂತಋತುವಿನ
ಮೊದಲ ತಿಂಗಳು ಕೃಷ್ಣಪದ ಸಂ
ಗದ ಮಹಾಭಾಗ್ಯಕ್ಕೆ ತಮ್ಮೊಳಗೋತು ಮನಸೋತು
ಪದುಮಮುಖಿಯರು ಗೋಪ ಕನ್ನೆಯ
ರುದಿತವಿಭವದಲಂದು ಶೌರಿಯ
ಪದವ ಪೂಜಿಸಲೆಂದು ತೊಡಗಿದರಾ ಮಹಾವ್ರತವ ೩೬

ಅರುಣನುದಿಸದ ಮುನ್ನವೇ ಎ
ದ್ದರಿಶಿನವನಕ್ಷತೆಯನಮಳಾಂ
ಕುರಫಲಪ್ರಸವಂಗಳನು ಬಲಿ ಬಾಗಿನಂಗಳನು
ಧರಿಸಿದಾ ಶ್ರೀಹಸ್ತದಲಿ ಕರೆ
ಕರೆದು ನೆರೆಮನೆಮುಮ್ಮನೆಯ ಸಖಿ
ಯರನು ನೆರೆದೈತಂದರಾ ಯಮುನಾಜಲಾಂತಿಕಕೆ ೩೭

ಹೊಳೆವ ಕಂಗಳ ಕಾಂತಿ ಥಳಥಳ
ಥಳಿಪ ದಂತಾಧರದ ಮುಕ್ತಾ
ಫಲ ಪರಿಸ್ಫುರದರುಣತರ ಪಲ್ಲವಪದದ್ಯುತಿಯ
ತೊಳಪ ಕದಪಿನ ಕಂಬುಕಂಠದ
ಸೆಳೆನಡುವಿನೋರೊಬ್ಬರಂಗೈ
ತಳನಿಬಂಧದ ತೋಳ್ಗಳಲಿ ರಂಜಿಸಿದರಬಲೆಯರು ೩೮

ಮನ್ನಿಸುತ್ತಿಳೆಗಿಳಿದ ಕಿನ್ನರ
ಕನ್ನೆಯರೊ ಹರಿಗಳುಪಿದಚ್ಚರ
ಕನ್ನೆಯರೊ ತನುವೆತ್ತ ನೈಗಮಕನ್ನೆಯರೊಯೆನಲು
ಚೆನ್ನೆಯರು ಗೋಕುಲದ ಗೋಪರ
ಕನ್ನೆಯರು ಸೌಂದರ್ಯಗುಣ ಸಂ
ಪನ್ನೆಯರು ಪಾಡುತ್ತ ಹರಿಯನು ಬಂದರಾ ನದಿಗೆ ೩೯

ಬಂದು ಗೋಕುಲ ಕನ್ನೆಯರು ಕಾ
ಳಿಂದಿಯಲಿ ತವತಮಗೆ ಸತಿಯರು
ಮಿಂದು ಮಡಿಗಳನುಟ್ಟು ನಿರ್ಮಿಸಿ ಮಳಲಗೌರಿಯನು
ವಂದಿಸುತ ವಿಪ್ರಾಂಗನೆಯರಂ
ದಂದದಲಿ ತದ್ವಿಧಿವಿಧೇಯರಾ
ನಂದದಲಿ ಪೂಜಿಸಿದರಾ ಜಗದೀಶ್ವರೇಶ್ವರಿಯ ೪೦

ಜನನಿ ಜಗದೀಶಾನೆ ಕಾತ್ಯಾ
ಯಿನಿ ಕಪರ್ದಿಪ್ರಿಯೆ ಮಹಾಮಾ
ಯಿನಿ ಮಹೇಶ್ವರಿ ವಾಂಛಿತಾರ್ಥಪ್ರದೆ ಮಹಾದೇವಿ
ಎನಗೆ ಕೊಡು ಗಂಡನನು ನಂದನ
ತನಯನನು ಸುರನರರೊಳತಿ ಚೆಲು
ವನನು ಬೇಡುವೆವವ್ವ ನಿನ್ನಂಘ್ರಿಯಲಿ ಪೊಡವಂಟು ೪೧

ಎನುತ ಮಂತ್ರವನುಚ್ಚರಿಸುತಾ
ವನಿತೆಯರು ದೂರ್ವಾಕ್ಷತಾಂಕುರ
ವಿನುತಫಲಪುಷ್ಪಂಗಳನು ಬಲಿಬಾಗಿನಂಗಳನು
ತನತನಗೆ ಪೂಜಿಸುತ ತ್ರಿಜಗ
ಜ್ಜನನಿಯನು ನೆಱೆ ಬೇಡಿಕೊಂಡಂ
ಗನೆಯರೊಪ್ಪಿರೆ ಪಾಡುತೈತಂದರು ನಿಜಾಲಯಕೆ ೪೨

ಒಂದು ದಿನ ನೆರೆದಾಕುಮಾರೀ
ವೃಂದ ಮುನ್ನಿನ ಪರಿಯಲೇ ಗೋ
ವಿಂದನನು ಪಾಡುತ್ತ ದೆಸೆದೆಸೆಗಳನು ಮೋಹಿಸುತ
ಬಂದು ಸೀರೆಯನೆಲ್ಲವನು ತಾ
ವೊಂದು ಠಾವಿನಲಿರಿಸಿ ಬತ್ತಲೆ
ಮಿಂದು ಬಹೆವೆನುತಿಳಿದರಾ ಕಾಳಿಂದಿಯುದಕದಲಿ ೪೩

ಪಾಡುತದಱೊಳು ಕೃಷ್ಣನನು ತುಳು
ಕಾಡುತುದಕವನೊಬ್ಬರೊಬ್ಬರ
ನೋಡಿ ನಗುತಬಲೆಯರು ವಿಹರಿಸುತಿರೆ ವಿನೋದದಲಿ
ಮಾಡುವಾ ವ್ರತಕಿಂದೆ ಸಿದ್ಧಿಯ
ಮಾಡಿದಪೆ ನಾನೆನುತ ಕನ್ನೆಯ
ರಾಡುವೆಡೆಗೈತಂದನಾ ಗೋವಿಂದನಾಕ್ಷಣಕೆ ೪೪

ಯೋಗಮಾಯಾಧೀಶ್ವರನು ತನ
ಗಾಗಿ ನೋಡುವ ಕನ್ನೆಯರನನು
ರಾಗವನು ಕಾಣುತ್ತ ಕೆಳೆಯರು ಸಹಿತ ಹರಿತಂದು
ಬೇಗದಲಿ ಸೀರೆಗಳನೆಲ್ಲವ
ನಾ ಗುಣಾಂಬುಧಿ ಕೊಂಡು ಕರುಣಾ
ಸಾಗರನು ಕಾಡಿದನು ನಿತ್ಯಾತುಮನು ವನಿತೆಯರ ೪೫

ಹತ್ತೊಂಬತ್ತನೆಯ ಸಂಧಿ ಮುಗಿಯಿತು.

# ಇಪ್ಪತ್ತನೆಯ ಸಂಧಿ

ವಸ್ತ್ರವನು ಕೊಂಡಿರದೆ ಮರವನು
ಹತ್ತಿದರೆ ಕುಮುದಾಕ್ಷಿಯರು ಪುರು
ಷೋತ್ತಮನ ಹೊಗಳಿದರೆ ಮೆಚ್ಚಿಯೆ ಕೊಟ್ಟನಭಿಮತವ

ಬಂದು ಸೀರೆಯನೆಲ್ಲವನು ಗೋ
ವಿಂದನೊಯ್ಯುತ್ತಿರಲು ಕಾಣು
ತ್ತಿಂದುಮುಖಿಯರು ನಡುಗಿ ಲಜ್ಜಾ ಭಾರದಲಿ ನಾಚಿ
ಎಂದರೆಲೆಯೆಲೆ ಕೃಷ್ಣ ನಿನಗೇ
ಕಿಂದು ನಮ್ಮೊಳು ಸರಸ ಸುವ್ರತ
ದಿಂದ ಕರ್ಷಿತೆಯರಿಗೆ ಕೊಡು ಹೋಗದಿರು ಸೀರೆಗಳ ೧

ಹೇಳುವೆವು ಕೊಡದಿರ್ದಡೀ ನಿ
ನ್ನೊಳಿಗವನಾ ನಂದಗೋಪಿಗೆ
ಮೇಳವೇ ವ್ರತನಿಷ್ಠೆಯರ ಕೂಡಕಟಕಟ ನಿನಗೆ
ಕಾಲ ಪಿಡಿವೆವು ಕಾಡದಿರು ಕೊಡು
ಬಾಲೆಯರಿಗೆಮ್ಮಾಣೆಯೆನೆ ಸಿರಿ
ಲೋಲನಡಱಿದನೊಂದು ತೋಱಮತ್ತಿಯನು ತವಕದಲಿ ೨

ಎಲೆಲೆ ಮರದಲಿ ಬೊಮ್ಮರಕ್ಕಸ
ಕೊಲುವನೇಱಿದ ಮಾನವರ ನೀ
ನಿಳಿ ನಿರರ್ಥಕ ಸಾಯದಿರು ನೀನೆನಲು ನಸುನಗುತ
ಕೊಲುವನೈಸಲೆ ಮಾನವರನೆನ
ಗಳಲುವಿರಿ ನೀವೇಕೆ ಮರನಿಂ
ದಿಳಿವವನು ತಾನಲ್ಲ ಸಾಯೆನು ಚಿಂತೆ ಬೇಡೆಂದ ೩

ಚೋರರಪಹರಿಸಿದರೆ ಸೀರೆಯ
ನಾರು ಕೊಡುವರು ಹೇಳುವುದು ನಿ
ಮ್ಮೂರ ತಳವಾರರಿಗೆ ನಿಮ್ಮರಸಿಂಗೆ ನೀವಿದನು
ನೀರೆಯರಿರೇಕಳಲುವಿರಿ ಹೊಸ
ಸೀರೆ ಮನೆಗಳಲುಂಟು ತನ್ನ ವಿ
ಚಾರವಿದು ಬಳಿಕಹುದು ಹೋಗಿಯೆನುತ್ತ ನೇಮಿಸಿದ ೪

ಕದ್ದರೊಡೆಯರು ಹುಯ್ಯಲನು ಕೆಲ
ಕಿದ್ದವರಿಗಿಟನು ಫಲ ಜಗ
ದಾದ್ಯನಹ ಪರದೈವ ನೀನೊಡೆಯರಿಗೆ ಕಟ್ಟೊಡೆಯ
ಕದ್ದರಾರು ವಿಚಾರಿಸುವ ನೃಪ
ರಿದ್ದರಾದಡೆ ಹೇಳು ಕೈತವ
ವಿದ್ಯೆಯಿದು ನಮ್ಮೊಡನೆ ಯೋಗ್ಯವೆಯೆಂದರಬಲೆಯರು ೫

ಎಂದಡೆಂದನು ನಗುತ ನೀರಲಿ
ನಿಂದು ಸೀರೆಯನುಡಲದೇತಕೆ
ಬಂದು ಬೇಗದೊಳೀಸಿಕೊಳ್ಳಿ ನಿಜೇಚ್ಛೆಯಲಿ ನೀವು
ಇಂದುಧರನಾಣೆಲ್ಲ ಹುಸಿ ತ
ನ್ನಿಂದ ಹುಟ್ಟದು ವೇಣು ಗೋಪರ
ವೃಂದವನು ನೀವ್ ಕೇಳಿ ತನ್ನಯ ಸತ್ಯಸಂಸ್ಥಿತಿಯ ೬

ಅಹುದಹುದು ಹುಸಿಹುಟ್ಟಲಱಿವುದೆ
ಸಹಜ ಸಂವಿತ್ಸತ್ಯ ಸುಖ ವಿ
ಗ್ರಹನಲಾ ವೇದಾಂತಸಿದ್ಧವಿದಕಟ ನಿಮ್ಮೊಳಗೆ
ಇಹಳು ಮಾಯೆಯದಾರ ವಶದಲಿ
ಸಹಚರರ ಮಾತೇಕೆ ಸನ್ನುತ
ಮಹಿಮ ಕೊಡು ಕಾಡದಿರು ಸೀರೆಯ ಕೊಡುವುದೆಮಗೊಲಿದು ೭

ಬಲ್ಲಿರಾದಡೆ ಬಹುದು ಮಾಯೆಗೆ
ವಲ್ಲಭನು ತಾನಹೆನು ಸಂಶಯ
ವಿಲ್ಲದೂರಿಗೆ ಹೋಗಿ ಏತಕೆ ಹಲವು ಮಾತುಗಳು
ಸಲ್ಲವೆನ್ನಲಿ ಕೊಡುವವನು ತಾ
ನಲ್ಲ ಕಾಡುವಡೂರ ಜಟ್ಟಿಗ
ನಲ್ಲ ಜಾಣೆಯರಾದಿರೆಂದನು ನಗುತ ಮುರವೈರಿ ೮

ಕುಹಕಿ ಕೊಡು ಸೀರೆಯನು ತೊತ್ತಿಯ
ರಹೆವು ನಿನಗಾವೆಲ್ಲರೆಂದುದ
ನಹಹ ಮಾಳ್ಪೆವು ಕೊಲ್ಲದಿರು ಹಿಮಜಲನಿವಾಸಿಗಳ
ಅಹುದು ತೊತ್ತಿಯರಾಗಿಯಾದಂ
ತಿಹರೆ ನೀರೊಳಗಿರದೆ ತಡಿಗೈ
ತಹುದು ಬಳಿಕುಡಲೀವೆನೆಂದನು ನಗುತ ಸತಿಯರಿಗೆ ೯

ಎಂದಡಾ ನುಡಿಯೆಂಬ ಬಲೆಯೊಳ
ಗಿಂದುಮುಖಿಯರು ಸಿಲುಕಿ ಮದನನ
ಮಂದಿರವ ಮುಱಿಗೈದು ಕರದಲಿ ಕುಚವ ತೋಳ್ಗಳಲಿ
ಹಿಂದೆ ಬಿಡುಮುಡಿಗಳಲಿ ಕಟಿತಟ
ದಂದವನು ಮುಱಿಮಾಡಿ ತಮ್ಮೊಳ
ಗೊಂದು ಮೊತ್ತವೆನಲ್ಕೆ ಹೊಱವಂಟರು ಜಲಾಶಯವ ೧೦

ಬಿಸಲತೆಗಳೋ ಮೇಣು ಮನುಮಥ
ನಸಿಲತೆಗಳೋ ಜಗದ ಮೋಹನ
ದಸಮ ಜಲದೇವತೆಗಳೋ ಹರಿಮೂರ್ತಿಗುಱೆ ಸೋತು
ವಸುಧೆಗೈತಂದಮರಕನ್ಯಾ
ವಿಸರವೋ ಕಾಮಾಂಧವಿಸ್ಮೃತ
ವಸನೆಯರೊ ಹೇಳೆನಲು ರಂಜಿಸಿತಾ ವಧೂನಿವಹ ೧೧

ಇರಲು ಸತಿಯರ ಮುಗ್ಧತೆಗೆ ನಗು
ತಿರಿಸಿ ವಸನಂಗಳನು ತತ್ತ
ತ್ತರುವರಸ್ಕಂಧದಲಿ ತೆಗೆದೊಂದೊಂದನವರೊಡನೆ
ಸರಸದಿಂದಿಂತೆಂದನೀವುತ
ಪರಮ ಪುರುಷನು ಬತ್ತಲಿಳಿವರೆ
ಸರಸಿಯಲಿ ನಿಯಮವಿದು ನಿಷ್ಫಲವಾಯ್ತು ನಿಮಗೆಂದ ೧೨

ಬತ್ತಲುದಕವನಿಳಿದುದಕೆ ಕೈ
ಯೆತ್ತಿ ಸುರರಿಗೆ ಪೊಡಮಡುವುದೆನು
ತುತ್ತಮಾಮಳ ಕೀರ್ತಿ ತನುಗಾಜ್ಞಾಪಿಸಲು ಕೇಳಿ
ಚಿತ್ತದಲಿ ಬಾಲಕಿಯರುಱೆ ನಡು
ಗುತ್ತ ಚರಿತವ್ರತ ವಿನಾಶವಿ
ಹಸ್ತೆಯರು ಪೊಡವಂಟರೊಂದೇ ಕೈಯಲಮರರಿಗೆ ೧೩

ಅಕಟ ನಿಮಗಾರೆಂದರೆಲೆ ಬಾ
ಲಕಿಯರಿರ ನಿಮಗೀ ವಿಧಾನದ
ಭಕುತಿಯಲಿ ಪೊಡಮಡುವಿರಾರಿಂಗೊಂದು ಹಸ್ತದಲಿ
ಸುಕೃತವಹಡಂಜಲಿಗಳೊಳು ಕರ
ಮುಕುಳವನು ಮಸ್ತಕದಲಿಡುವುದು
ಸಕಲ ಸುರಗಣ ತುಷ್ಟಿಕರವೆಂದಸುರರಿಪು ನುಡಿದ ೧೪

ಎನಲು ಲಜ್ಜಾಭಾರದಲಿ ವರ
ವನಿತೆಯರು ತಲೆವಾಗಿ ಮದನನ
ಮನೆಯ ಮುದ್ರಿಸಿ ತೊಡೆಗಳಲಿ ತಂತಮ್ಮ ಕರಪುಟವ
ವಿನಯದಲಿ ಹಣೆಗಾಗಿ ನೆಗಹಿದ
ರನುಪಮೆಯರಂದವನು ಕಾಣು
ತ್ತನಿವಿಷಾರಾಧಿತನು ಕೊಟ್ಟನು ಸೀರೆಗಳನೊಲಿದು ೧೫

ಬೇಱೆ ಬೇಱೊಂದೊಂದನವರಿಗೆ
ತೋಱೆ ಬಿಸುಟನು ಧರೆಗೆ ಮನವನು
ಮಾಱುಗೊಂಡನು ವಸ್ತ್ರದಲಿ ನಿಜರೂಪ ವಿಭವದಲಿ
ನೀಱೆಯರು ಮನ್ಮಥನ ಕೃತಕವ
ದೂಱುವಂತಿರೆ ಚಪಲೆಯರು ಮೈ
ದೋಱೆ ನಿಂದರು ವಿಧೃತ ವಸ್ತ್ರೆಯರಾಗಿ ಹರುಷದಲಿ ೧೬

ರೂಹುದೋಱದ ಬಲೆಗೆ ನಾರೀ
ವ್ಯೂಹ ಬಿದ್ದುದು ಮಿಗೆ ತದುದ್ಭವ
ದಾಹದಲಿ ಬಸವಳಿದು ಶಿವಶಿವ ಲಜ್ಜೆಗಳನುಳಿದು
ದಾಹಗೊಂಡಕ್ಷಿಗಳು ತ್ರಿಜಗ
ನ್ಮೋಹನನಮಳ ಮೂರ್ತಿಯನು ಕಂ
ಗಾಹಿಗಳು ತಾವಾಗಿನಿಂದಿರೆ ಕಂಡರಬಲೆಯರು ೧೭

ಲಲನೆಯರ ಮನದಿಷ್ಟವನು ನೆಱೆ
ಸಲಿಸುವುದೆ ಕರ್ತವ್ಯವೆನಗೆಂ
ದೊಲಿದು ಕರುಣಾಸಿಂಧು ದೀನಾನಾಥ ಜನಬಂಧು
ಇಳಿದು ಮರದಿಂದಿಳೆಯೊಳಾ ಕೋ
ಮಳೆಯರೊಳಗೆ ಮನೋನುರಾಗದ
ಲಲಘು ಮಧುರಸ್ಮಿತ ಕಟಾಕ್ಷ ಮನೋಜ್ಞದಲಿ ನೋಡಿ ೧೮

ಎಂತು ತಮ್ಮನು ಕಾಡಿದಡೆ ಮೇ
ಣೆಂತು ನಾಣ್ಗೆಡಿಸಿದಡೆ ಗೋಕುಲ
ಕಾಂತೆಯರು ಕೃಷ್ಣನಲಿ ನೆನೆಯರಸೂಯೆಯನು ಮನದ
ಚಿಂತಿತಾರ್ಥದ ಬುದ್ಧಿ ಲಕ್ಷ್ಮೀ
ಕಾಂತನೊಲವಿದೆನುತ್ತ ಸತಿಯರು
ತಂತಮಗೆ ಪರಿವರಿಸಿ ನಿಂದರು ಪರಮಪೂರುಷನ ೧೯

ಎಂದನವರಿಂಗೆನ್ನ ನೀವ್ ಮನ
ಸಂದು ದೇವೀವ್ರತವ ಚರಿಸಿದಿ
ರಿಂದುಪರಿಯಂತೀ ಮನೋಭಾವಗಲಿ ಮೆಚ್ಚಿದೆನು
ಸಂದುದಾಗಲಿ ಬಯಕೆ ಭಕ್ತರ
ಕುಂದು ತನ್ನದೆನುತ್ತ ಬಳಲಿದಿ
ರೆಂದು ಬೋಳೈಸಿದನು ಕೈವಿಡಿದಾ ಕುಮಾರಿಯರ ೨೦

ಮನವನೆನ್ನೊಳಗಿರಿಸಬಲ್ಲೆ
ನ್ನನುಪಮಾಮಳ ಭಕ್ತರಿಂದ್ರಿಯ
ಜನಿತ ಲೌಲ್ಯಕ್ಕಂಜುವರೆ ನೆಱೆ ಹುರಿದ ಬೀಜದಲಿ
ನೆನೆದಡಂಕುರವಹುದೆ ತನ್ನವ
ರೆನಿಸಿದಂದೇ ಸಕಲ ಸುಖ ಭಾ
ಜನರು ನಿಮಗಾನಹೆನು ವಲ್ಲಭನಂಜಬೇಡೆಂದ ೨೧

ಕಾಮದಲಿ ಕನ್ನೆಯರಿರೆನ್ನನ
ಕಾಮದಲಿ ಮೇಣೊಲಿದು ಭಜಿಸುವ
ಭೂಮಿಪಾವನ ಮೂರ್ತಿಗಳಿಗಿಹಪರಗಳೆರಡಜಲಿ
ಕ್ಷೇಮವಲ್ಲಾ ದಿಟಕೆ ಕಾಮವ
ಕಾಮವದು ನೋಳ್ಪಡೆ ತದೀಯ
ಪ್ರೇಮ ಪರಿಣತ ಚಿತ್ತರಿಗೆ ಭಯವಿಲ್ಲ ಬಳಿಕೆಂದ ೨೨

ಸತಿಯರಿರ ತನಗೋತು ಚರಿತ
ವ್ರತೆಯರಾದಿರಿ ಸಲಿಸಿದೆನು ವಾಂ
ಛಿತವನೆನ್ನೊಡನಿಹುದು ನೀವೀರಾತ್ರಿಗಳಲೆನುತ
ಶತಮುಖಾರ್ಚಿತ ಚರಣನಿಂತೀ
ಸ್ಮಿತ ಮಧುರ ಸೂಕ್ತಿಯಲಿ ಬೆಸಸಿದ
ಡತನುಶರಪರವಶತೆಯಲಿರ್ದರು ಕೇಳುತವೆ ನುಡಿಯ ೨೩

ಹೋಗಿ ನೀವ್ ಗೋಕುಲಕೆ ನಿಮ್ಮನು
ರಾಗವನು ತಾನಱಿವೆನೆನುತಾ
ಯೋಗಮಾಯೇಶ್ವರನು ಬೆಸಸಿದಡಬಲೆಯರು ಕೇಳಿ
ನೀಗಿ ಮನದರ್ತಿಯನು ವಿರಹದ
ಬೇಗೆಯಲಿ ಬೆಂಡಾಗಿ ಕರುಣಾ
ಸಾಗರನ ನೆನೆವುತ್ತಲೈದಿದರವರು ಗೋಕುಲಕೆ ೨೪

ಎಂತುಟೋ ಕೃಪೆ ಭೂಪ ತನ್ನೇ
ಕಾಂತ ಭಕ್ತರೊಳಕಟ ಲಕ್ಷ್ಮೀ
ಕಾಂತನೊಲಿದಿಷ್ಟಾರ್ಥವನು ಸಲಿಸಿದನು ಸತಿಯರಿಗೆ
ಮಂತ್ರಮೂರುತಿ ಗೋಪಕನ್ಯಾ
ಸಂತತಿಗೆ ಹರಹರ ಸುಲಭವಿ
ನ್ನೆಂತುಟೋ ನಿತ್ಯಾತ್ಮಕೃಷ್ಣನಚಿಂತ್ಯಗುಣವನಧಿ ೨೫

ಇಪ್ಪತ್ತನೆಯ ಸಂಧಿ ಮುಗಿಯಿತು.

# ಇಪ್ಪತ್ತೊಂದನೆಯ ಸಂಧಿ

ಸನ್ನುತಾಮಳ ಕೀರ್ತಿ ಪರಮ ಕೃ
ಪಾರ್ಣವನು ವಿಮಳಾಂಗಿರಸ ಯ
ಜ್ಞಾನ್ನಯಾಚಕನಾದನಸುರಾರಾತಿ ನಲವಿನಲಿ

ಒಂದು ದಿನ ಗೋವಳರು ಸಹಿತ ಮು
ಕುಂದನೈದಿದನಾ ವನಶ್ರೀ
ಯಂದವನು ನೋಡುತ್ತ ದೂರಾರಣ್ಯಮಾರ್ಗವನು
ಮುಂದೆ ಮೆಱೆವ ಮಹಾಲತಾದ್ರುಮ
ವೃಂದವನು ಪರಹಿತಕೆ ಜೀವಿಸು
ವಂದವನು ಕರುಣದಲನುಗ್ರಹಿಸುತ್ತ ಗೋಪರಿಗೆ ೧

ಬಿಸಿಲು ಬೆಳತುದು ಬೀದಿವರಿದುದು
ತೃಷೆ ತಟಾಕವ ಸಾರಿದುವು ಪಶು
ವಿಸರವಾ ಗೋಪಾಲಕರು ನೀರ್ಗುಡಿದು ಕುಳ್ಳಿರ್ದು
ಹಸಿದೆವೆಂದೆಲ್ಲವರು ಹರಿಗಾ
ವೃಷಭ ಸುಬಲ ವುಜಸ್ವಿ ಮುಖ್ಯರು
ಬಸುಱುಗಳ ತೋಱುತ್ತ ಬಿನ್ನವಿಸಿದರು ವಶವಳಿದು ೨

ದೇವ ಕರುಣಿಸು ಕೃಷ್ಣ ಸನ್ನುತ
ಜೀವರಕ್ಷಾಮಣಿಯೆ ಸುರಮುನಿ
ಸೇವಿತಾಂಘ್ರಿಯೆ ರಾಮಭಾಜೀವಾಯತೇಕ್ಷಣನೆ
ಬೇವುತಿದೆ ನಮ್ಮೊಡಲು ಜಠರದ
ಪಾವಕನ ಪರಿಗತಿಯಲೆಲೆ ರಾ
ಜೀವಲೋಚನ ಕರುಣಿಸೆನ್ನವನೆಂದುದಖಿಳಜನ ೩

ಎನಲು ನಸುನಗುತಸುರಕುಲಮ
ರ್ದನನು ಮನದಲಿ ನೋಡಿ ವಿಪ್ರರ
ವನಿತೆಯರ ಪುಣ್ಯೋದಯವನಾಲಿಸುತನುಗ್ರಹಿಸಿ
ನೆನೆದು ನುಡಿದನು ಗೋಪರಿಗೆ ನೀ
ವಿನಿಬರಾಂಗಿರಸಾಖ್ಯಮಖವಿದೆ
ಸನಿಹದಲಿ ಹೋಗೀಸಿ ತಹುದೋಗರವನೆಮಗೆಂದ ೪

ಎಂದಡಾ ಗೋವಳರು ಕರಲೇ
ಸೇಂದೆನುತ ತಮುತಮುಗೆ ರಾಮ ಮು
ಕುಂದರಾಜ್ಞೆಯ ಮೇಲೆ ಸತ್ರದ ಶಾಲೆಗೈತಂದು
ವಂದಿಸುತ ವಿಪ್ರರಿಗೆ ಕೈ ಮುಗಿ
ದೆಂದರಶನಾರ್ಥಿಗಳು ಹರಿಬಲ
ರಿಂದು ಕಳುಹಿದರೆಮ್ಮನೆಂದರು ವಿನಯಪರರಾಗಿ ೫

ಕುಮತಿಗಳು ಕರ್ಮೈಕನಿಷ್ಠರ
ತಿಮದಮಾನೋದ್ಧತರು ಲಕ್ಷ್ಮೀ
ರಮಣನಭ್ಯರ್ಥಿಸಿದಡಾ ಗೋವಳರ ಮುಖದಿಂದ
ಭ್ರಮಿತರಿದ್ದರು ಕೆಪ್ಪುಗೇಳು
ತ್ತಮಮು ಸಾಕ್ಷಾದ್ಯಜ್ಞಪುರುಷನ
ನಮರ ಸೇವಿತ ಚರಣನನು ನರನೆಂದು ಧಿಕ್ಕರಿಸಿ ೬

ಏನನೆಂಬೆನು ಗೋಪರಿಂತವ
ಮಾನಭಾಜನರಾಗಿ ಮಗುಳಾ
ದಾನವಾಂತಕನೆಡೆಗೆ ಬಳಲುತ ಬಂದು ತಮಗಾದ
ಮಾನಭಂಗಸ್ಥಿತಿಯನಧಿಕವ
ಮಾನವನವರು ಬಿನ್ನವಿಸಲನು
ಮಾನಿಸುತ್ತಿಂತೆಂದನಸುರಾರಾತಿ ನಸುನಗುತ ೭

ಅಕಟವಾಯಾಭ್ರಮಿತವೀ ಲೌ
ಕಿಕದ ಗತಿ ವಿಪರೀತವಿದು ಡಾಂ
ಭಿಕರು ತಾವಿನ್ನೇನು ನಿಶ್ಚಯಿಸಿದರೊ ಪರಗತಿಯ
ಸುಕೃತಹೀನರು ಕರ್ಮಜಡರವ
ರುಕುತಿ ಸಾಕಾ ವಿಪ್ರಪತ್ನೀ
ನಿಕರಕೆನ್ನೀಹೆಸರ ಹೇಳಿಯೆ ಈಸಿ ತಹುದೆಂದ ೮

ಅವರವೋಲಲ್ಲವರ ಪತ್ನೀ
ನಿವಹವೆನ್ನೇಕಾಂತ ಭಕ್ತೆಯ
ರವರು ನಿಮಗೀವರು ಸುಮೃಷ್ಟಾನ್ನವನು ಹೋಗಿಯೆನೆ
ತವತವಗೆ ಗೋವಳರು ಮನದು
ತ್ಸವದಲಾ ದ್ವಿಜಪತ್ನಿಯರ ಭವ
ನವನು ಭುವನಾಧೀಶನಾಜ್ಞೆಯಲೈದಿದರು ಮಗುಳೆ ೯

ವಿನಯದಲಿ ಪೊಡವಂಟು ವಿಪ್ರರ
ವನಿತೆಯರಿಗಿಂತೆಂದರಜಭವ
ಮನುಸುರೇಂದ್ರಾರಾಧಿತಾಂಘ್ರಿಯೆನಿಪ್ಪ ಹರಿಯೊಲಿದು
ವನದಲಿದೆ ಬಂದೈದನಾಶ್ರಿತ
ಜನ ಮನೋರಥಕಾರಿ ಕರುಣಾ
ವನಧಿ ಕೃಷ್ಣನ ವರ್ಗವನಧರಿಸುವುದು ಬಿನ್ನಹವ ೧೦

ಹಸಿದು ವಿಪಿನವಿಹಾರದಲಿ ಸುರ
ವಿಸರವಂದಿತನುಣಲೆಳಸಿ ನಿಜ
ವಸತಿಗಟ್ಟಿದನೆಮ್ಮನಶನವನೀಸಿ ತಹುದೆಂದು
ಶಶಿವದನೆಯರಿರೀವುದನ್ನವ
ನೊಸೆದು ನಿಜ ಸುಖ ಪೂರ್ಣಲಾಭಂ
ಗಸವು ಸೌಭಾಗ್ಯೋದಧಿಗೆ ನೀವೆಂದರಭಿನಮಿಸಿ ೧೧

ಕೇಳುತವೆ ಕಮಲಾಕ್ಷಿಯರು ಸಿರಿ
ಲೋಲನಾಗಮನವನು ದರ್ಶನ
ಲೋಲೆಯರು ತಕ್ಷಣವೆ ಪೂರ್ಣಮನೋರಥೆಯರಾಗಿ
ತೂಳುವುತ್ಸವದುಬ್ಬರದ ಪುಳ
ಕಾಳಿಗಳ ಸಾನಂದದಲಿ ಲೀಲೋ
ನ್ಮೀಲಿತಾಕ್ಷಿಯರೆದ್ದರಧಿಕ ಮನೋನುರಾಗದಲಿ ೧೨

ಬಯಸಿ ಕಾಣರು ಬಹಳ ವೇದ
ಕ್ರಿಯೆಗಳಲಿ ಯಾಜ್ಞಿಕರು ವೇಣ
ಕ್ಷಯತಪೋವ್ರತನಿಷ್ಠರಜಿಯರದಾವನಂಘ್ರಿಗಳ
ನಯನ ಗೋಚರನಹನೆ ನಮಗಬ
ಳೆಯರಿಗಕೃತಾನೇಕ ಭವ ಸುಕೃ
ತೆಯರಿಗೆನುತೋರಂತೆ ಸಂಭ್ರಮಿಸಿತು ಸತೀನಿವಹ ೧೩

ನಿತ್ಯತೃಪ್ತನು ಹಸಿದ ಗಡ ನಾ
ವೆತ್ತಣನ್ನವನೀವೆವೌ ಶ್ರುತಿ
ಮಸ್ತಕಾಮಳರತ್ನವೈತಂದುದು ಗಡೀ ಧರೆಗೆ
ಕೃತ್ಯವಾವುದು ನಮಗೆನುತ್ತಾ
ಮತ್ತಕಾಶಿನಿಯರು ಚತುರ್ವಿಧ
ದುತ್ತಮಾನ್ನವನೈದೆ ಕೊಂಡರು ವಿವಿಧ ಪಾತ್ರೆಯಲಿ ೧೪

ಸದನವನು ಹೊಱವಂಟರಂದಾ
ಸುದತಿಯರು ಹರಿಗಾಂಬ ತವಕದ
ಲೊದೆದು ಮನೆ ಮನೆವಾರ್ತೆಯನು ನಿಜಬಂಧುವರ್ಗವನು
ಉದಧಿಯನು ನೆಱೆಕೂಡಲೈದುವ
ನದಿಗಳಂತಿರಲಾ ಮುಕುಂದನ
ಪದಕಮಲಸನ್ನಿಧಿಗೆ ನಡೆತಂದರು ಮನೋಜ್ಞೆಯರು ೧೫

ವಾರಿ ಪತಿ ಪಿತೃ ಮಾತೃ ಬಾಂಧವ
ಭೂರಿ ನಿರ್ಬಂಧವನು ನಡೆದರು
ನಾರಿಯರು ನಯನಾಮೃತಾನಂದಾಬ್ಧಿಯಿದ್ದೆಡೆಗೆ
ತಾರತಮ್ಯವನುಳಿದು ಜೀವರ
ಭೂರಿ ಚೈತನ್ಯಾತ್ಮಕನು ತಾ
ನಾರು ತತ್ಸನ್ನಿಧಿಗೆ ಬರಲಪರಾಧವೇನೆನುತ ೧೬

ಬಂದು ಕಂಡರು ಬಹಳ ತೇಜೋ
ವೃಂದದಲಿ ವಿಭ್ರಾಜಿತನನಾ ಗೋ
ವಿಂದನನು ಗೋಗೋಪಜನಸುರಸೇವಿತಾಂಘ್ರಿಯನು
ಇಂದುಮುಖಿಯರು ಮುನ್ನ ಕೇಳ್ದುದ
ಱಿಂದ ಮಿಗಿಲು ಸಹಸ್ರಗುಣವದ
ಱಿಂದವಡೆದಭಿರಾಮಮೂರ್ತಿಯನಾಲಿಗಳು ದಣಿಯೆ ೧೭

ಎಳಲತೆಯನಾಡಿಸುವ ಮಂದಾ
ನಿಳನ ತಂಪಿನ ಕಂಪಿನಸುಕೆಯ
ತಳಿರುಗಳ ಯಮುನೋಪವನಭೂಮಿಯಲಿ ರಂಜಿಸುವ
ನಳಿನನಾಭನ ಮೂರ್ತಿಯನು ಕಂ
ಗಳಲಿ ಸಾಕ್ಷಾತ್ಕರಿಸಿ ಶಿವ ಶಿವ
ನಳಿನಮುಖಿಯರು ಮುಂದೆ ಕಂಡರು ಮುನಿಮನೋರಮನ ೧೮

ನೀಡಿ ವಾಮಕರಾಂಬುಜವನೊಡ
ನಾಡಿಯಂಗದ ಮೇಲೆ ಕಮಲವ
ನಾಡಿಸುತ ಬಲಗೈಯಲೆಸೆವ ಕೃಪಾಕಟಾಕ್ಷದಲಿ
ನೋಡುತೆಡಬಲವಂಕವನು ಮಾ
ತಾಡಿಸುತ ಕೆಳೆಯರನು ನಿಂದಿರೆ
ಗಾಡಿಕಾಱರ ದೇವನಿರವನು ಕಂಡರಬಲೆಯರು ೧೯

ತೊಟ್ಟ ಮಣಿಭೂಷಣದ ಕನಕದ
ಕಟ್ಟಿದುಡಿಲೇವಳದ ಹೊಸ ಹೊಂ
ಬಟ್ಟೆಯುಡಿಗೆಯ ಮೆಱೆವ ಧಾತುವಿಚಿತ್ರಕಾಂತಿಗಳ
ದೃಷ್ಟಿಮೋಹನ ಮೂರ್ತಿಯನು ನಿಜ
ದೃಷ್ಟಿಗಳಲೀಕ್ಷಿಸುತ ಸತಿಯರು
ತುಷ್ಟಿವಡೆಯದ ಕರುಣರಸದೊಳಗದ್ದರಡಿಗಡಿಗೆ ೨೦

ಕೇಳಿ ಕೇಳಿ ಮುಕುಂದನುನ್ನತ
ಬಾಲಕೇಳೀಸುಧೆಗಳನು ಮನ
ಸೋಲುತಿರ್ದರು ಮುನ್ನವೇ ಹರಿಪದವ ದೃಷ್ಟಿಯಲಿ
ಆಲಿಗಳಲಪ್ಪಿದರು ಬಳಿಕಾ
ಲೋಲಲೋಚನೆಯರು ನಿರಂತರ
ಬೀಳುಕೊಟ್ಟರು ಬಹಳ ಪೂರ್ವಾರ್ಜಿತಮನೋವ್ಯಥೆಯ ೨೧

ಅರ್ಪಿಸಿದರಬುಜಾಕ್ಷಿಯರು ಕಂ
ದರ್ಪಕಮನೀಯಾಂಘ್ರಿಗಾತ್ಮ ಸ
ಮರ್ಪಣವ ಮಾಳ್ಪಂತೆ ಪರಮಾನ್ನವನು ಮನವೊಲಿದು
ಸರ್ಪರಾಜ ಮಹಾಶಯನ ಸಂ
ತರ್ಪಿತೇಂದ್ರಿಯ ವೃತ್ತಿಗಳು ಚಿ
ತ್ರಾರ್ಪಿತಾಕೃತಿಗಳವೊಲಿರ್ದರು ಬಿಗಿದ ಬೆಱಗಿನಲಿ ೨೨

ಕಂಗಳಲಿ ಸವಿಸವಿದು ಸಲೆ ಸ
ರ್ವಾಂಗಸೌಂದರ್ಯಾಮೃತಾಬ್ಧಿಯ
ನಂಗನೆಯರಳವಳಿದು ಪರವಶತೆಯಿಂ ವೈಮಱೆದು
ಹೊಂಗಿ ತನುಪುಳಕದಲಿ ನಿಜಪದ
ಸಂಗಕಾಂಕ್ಷೆಯಲಿರಲು ಕರುಣಾ
ಪಾಂಗದಲಿ ನೋಡುತ್ತ ನಗುತಿಂತೆಂದನಸುರಾರಿ ೨೩

ಬಂದಿರೌ ಸತಿಯರಿರ ಹಸಿದಾ
ನಿಂದು ಕಳುಹಿದಡನ್ನವನು ನೀವ್
ತಂದಿರೌ ಲೇಸಾಯ್ತು ಕುಳ್ಳಿರಿ ಬಳಲಿದಿರಿ ನಿಮಗೆ
ಇಂದು ಮಾಡುವುದೇನು ಕಾಣಲು
ಬಂದಿರೇಕೆನ್ನನು ನಿಮಗೆಯು
ಸಂದುದೀ ಸಂಪ್ರೀತಿ ತನಗಿದು ಸುದಿನವಾಯ್ತೆಂದ ೨೪

ಬಯಸುವರು ನಿಮ್ಮಂತೆ ಲೋಕ
ಪ್ರಿಯತಮನು ತಾನಾಗಿ ತನ್ನನು
ನಿಯತದಿಂದೀ ಜೀವರೆಯಿದೆ ನಿಜಾತ್ಮರೂಪನನು
ನಯನಗೋಚರಮೂರ್ತಿ ಲೀಲಾ
ಮಯನಿದನು ನಚ್ಚದಿರಿ ಸಕಲೇಂ
ದ್ರಿಯಮನೋಬ್ಧಿಗೆ ಸಾಕ್ಷಿ ಚಿತ್ತ್ರೈಸೆನ್ನ ಮನವೆಂದ ೨೫

ಸತಿಸುತಪ್ರಿಯ ಬಾಂಧವಾದ್ಯರು
ಹಿತವರೆಂಬುವರ್ರೈದೆ ನಿಜ ಸಂ
ಸ್ಥಿತಿನಿಮಿತ್ತದೆ ಸುಖಕೆ ಸಾಧನದಂತೆ ತೋಱುವದು
ಸತತ ನಿಜ ತಾನಲ್ಲದಿರ್ದಡೆ
ವಿತತವಿತರಸ್ನೇಹವದಱಿಂ
ದತಿಶಯವದಿನ್ನೆಂತುಟೋ ಸ್ವಸುಖಾನುಭವವೆಂದ ೨೬

ನಿಜಸುಖವೆ ಸುಖದಂತೆ ತೋರ್ಕೆಯ
ನಿಜದುಳುಮೆ ಬೇಱುಳುಮೆಯಂತಿರೆ
ನಿಜದಱಿವೆ ಮತಿವೃತ್ತಿಯಲಿ ತೋರ್ಕಱಿವಿನಂದದಲಿ
ನಿಜವೆ ತಾನಿದಿರೆನಿಸಿ ಮತ್ತಾ
ನಿಜವೆ ಜಗದಾಕಾರದಂತಿರೆ
ನಿಜದಲಳಿವುದು ತೋಱಲಱಿಯದ ನಿಜವೆ ತಾನೆಂದ ೨೭

ಕನಸಿನೊಳು ಮಿಗೆ ಸುಖಕೆ ವೈ ಚೇ
ತನಕೆ ನಿಜ ತಾನಾದವೋಲೀ
ನೆನಸುವೆಲ್ಲಾ ವಿಕೃತಿಗಳಿಗೆ ವಿಚಿತ್ರಗತಿಗಳಿಗೆ
ಜನನವೆನ್ನೇಕಾಂಶ ಜೀವಾ
ತ್ಮನ ಪ್ರಕಾಶದಲೆಂದು ತಿಳಿವುದು
ವನಿತೆಯರಿರೆನ್ನಿಂದ ಬೇಱಹ ವಸ್ತುವಿಲ್ಲೆಂದ ೨೮

ಎನ್ನೊಳಗೆ ನೀವ್ನಿಮ್ಮ ಮತಿಯಲಿ
ಸನ್ನಿಹಿತ ನಾನನವರತ ನಿಮ
ಗನ್ಯ ನಾನಲ್ಲೆನಗೆ ನೀವನ್ಯೆಯರು ದಿಟಕಲ್ಲ
ಭಿನ್ನಭಾವನೆ ಬೇಡ ನಡೆವುದು
ಜನ್ನಶಾಲೆಗೆ ನೀವೆನುತ ಕರು
ಣಾರ್ಣವನು ಬೆಸಸಲ್ಕೆ ಮುಗುಳಿಂತೆಂದರಬಲೆಯರು ೨೯

ಬೇಡಿ ನಿನ್ನೇಕತೆಯ ನಾವೀ
ಡಾಡಿ ನಿಜಜನನಿಕರವನು ನೆಱೆ
ಕೂಡಿ ನಿನ್ನಲಿ ಬದುಕುವರ್ಥಿಗೆ ಸಂದು ನಾವಿಂದು
ನಾಡಱೆಯಲ್ಕೈತಂದೆವೆಮ್ಮೊಡ
ನಾಡದಿರು ನಿಷ್ಠುರವನಳಲಿಸಿ
ಕಾಡದಿರು ಕಾರುಣ್ಯನಿಧಿ ನೀವೆಂದರಬಲೆಯರು ೩೦

ಮನವಚನ ಗೋಚರಕೆ ಬಾರದ
ಚಿನುಮಯನು ನೀನೊಲಿದು ಧರೆಯಲಿ
ತನುವಿಡಿದಡಿನ್ನಾರು ಬಿಡುವರು ನಿಜಸುಖಾತ್ಮನನು
ಸನಕ ನಾರದ ಮುಖ್ಯ ಮುನಿಜನ
ರನುವನಱೆಯರೆ ಕೃಷ್ಣ ಕರುಣಾ
ವನಧಿಯೇ ಕೃಪೆ ಮಾಳ್ಪುದೆಮಗೆಂದುದು ವಧೂನಿವಹ ೩೧

ಏಕೆ ಕಾಡುವೆ ಕೃಷ್ಣ ನಮ್ಮನು
ನೂಕದಿರು ನಿನ್ನಂಘ್ರಿ ಕಮಲ ಯು
ಗ್ಮೈಕದಾಸಿಯರಾಗಿ ಬದುಕುವೆವೆಂದು ಬಂದವರು
ಲೋಕವೆರಡರ ಮಾತು ತನುಗಿ
ನ್ನೇಕೆ ಚರಣದ ತುಲಸಿಯನು ಕರು
ಣಾಕರನೆ ಕರುಣಿಸುವುದೆಂದರು ಯಜ್ಞಪತ್ನಿಯರು ೩೨

ಅಲ್ಲದಿರ್ದಡೆ ಗತಿಯದಾವುದು
ವಲ್ಲಭನೆ ನೀನೊಲ್ಲೆ ಮೇಣೊಳ
ಗೊಳ್ವರೇ ಪಿತೃಮಾತೃಪತಿಪುತ್ರಾದ್ಯರೆಮ್ಮುವನು
ಬಲ್ಲೆ ನೀನೀ ನಿನ್ನ ಸಿರಿಪದ
ಪಲ್ಲವವೆ ಗತಿಯೆನುತ ಸತಿಯರು
ತಲ್ಲಣಿಸಲಿಂತೆಂದನವರಿಂಗಭಯವನು ಕೊಡುತ ೩೩

ಎನ್ನನೊಲುವರನೊಲಿವುದೀ ಜಗ
ವೆನ್ನನೊಲ್ಲದಡೊಲ್ಲದದಱಿಂ
ದೆನ್ನೊಲವು ಸುರಪಿತೃಗಳೊಲವು ಸಮಸ್ತಜನದೊಲವು
ಮನ್ನಿಸುವರಂಜದಿರಿ ನಿಮ್ಮನು
ಮುನ್ನಿನಂತತಿಶಯವೆನಲು ಸಂ
ಪನ್ನ ಪತಿ ಪಿತೃ ಬಾಂಧವಾದ್ಯರು ಪುತ್ರಜನವೆಂದ ೩೪

ಅಂಗಸಂಗಸುಖಕ್ಕೆ ಬಱದೇ
ಕಂಗೆಡದೆ ಕರಣೇಂದ್ರಿಯದ ವಿಷ
ಯಂಗಳಿವು ಕಡು ತುಚ್ಛವತಿ ಚಂಚಲವಿದೆಂದಱಿದು
ಹಿಂಗದೆನ್ನಲಿ ಮನವ ನಿಲಿಸಿ ನಿ
ಜಾಂಗಭೂತೆಯರಾಗಿ ಕೂಡಿದಿ
ರಂಗನೆಯರಿರ ತಡೆಯದೆನ್ನನು ಚಿಂತೆ ಬೇಡೆಂದ ೩೫

ಹೋಗಿ ನೀವೆಂದೆನಲು ಕರುಣಾ
ಸಾಗರನ ಪದಯುಗಳ ಕಮಲ ಪ
ರಾಗವನು ಬಲವಂದು ಧರಿಸಿ ನಿಜೋತ್ತಮಾಂಗದಲಿ
ತ್ಯಾಗಕಾತರೆಯರು ತದಾತ್ಮೆಯ
ರಾಗಿ ತದ್ದರುಶನ ಕೃತಾರ್ಥೆಯ
ರಾಗಿ ಮರಳಿದರಬಲೆಯರು ತಂತಮ್ಮ ಮನೆಗಳಿಗೆ ೩೬

ಅತ್ತಲಾ ದ್ವಿಜವರರು ನಿಜ ದು
ರ್ವೃತ್ತವನು ನಿಜವನಿತೆಯರ ಸ
ದ್ವೃತ್ತವನು ಸಾಕ್ಷಾನ್ಮುಕುಂದಪದೈಕನಿಷ್ಠೆಯನು
ಮತ್ತೆ ನೆನೆದೀಕ್ಷಿಸುತ ನುಡಿದರು
ಚಿತ್ತದನುತಾಪದಲಿ ಧಿಕ್ಕರಿ
ಸುತ್ತ ತಮ್ಮನು ತಾವು ಮಾಡಿದ ದುರ್ವಿದಗ್ಧತೆಗೆ ೩೭

ಶಿವಶಿವೆತ್ತಣ ವಿಪ್ರಕುಲಸಂ
ಭವವಿದೆತ್ತಣ ವೇದಶಾಸ್ತ್ರ
ಶ್ರವಣವೆತ್ತಣ ದ್ವಿಜವಿಹಿತಸಂಸ್ಕಾರಪರಿನಿಷ್ಠೆ
ತ್ರಿವಿಧಜನ್ಮಗಣಂಗಳೆತ್ತಣ
ವಿವಿಧಯಜ್ಞಕ್ರಿಯೆಯಿದೆತ್ತಣ
ಭುವನದಧಿದೇವತೆಯವಜ್ಞೆಯಿದೆತ್ತಣದು ನಮಗೆ ೩೮

ಯಜ್ಞವಿದು ತಾನಾರಿಗೋಸುಗ
ಯಜ್ಞಮುಖದೇವತೆಗಳಾವನ
ಸಂಜ್ಞೆ ಸಾಂಗೋಪಾಂಗ ನಾಮವಿಭೇದಮೂರ್ತಿಗಳು
ಯಜ್ಞಫಲದಾಯಕರದಾರೀ
ಯಜ್ಞಮೂರ್ತಿಯದಾರು ಮಾಡಿದ
ವಜ್ಞೆಯಿದು ಮತ್ತಾರೊಡನೆ ನಮಗೆಂದರಾ ದ್ವಿಜರು ೩೯

ಆರು ಗೆಲುವರು ವಿಷ್ಣುಮಾಯೆಯ
ಭೂರಿ ಮಾಹಾತ್ಮೆಯನು ಯೋಗ ವಿ
ಶಾರದರನೊಳಗಾಗಿ ಮೋಹಿಸುವಳು ಮಹಾತ್ಮರನು
ಧಾರುಣಿಗೆ ನಾವ್ ಗುರುಗಳಧಿಕಾ
ಚಾರನಿಷ್ಠರು ಸಕಲ ಲೋಕಾ
ಧಾರ ವಿಷ್ಣುವನಱಿಯೆವಕಟಕಟೆಂದು ಮಱುಗಿದರು ೪೦

ಅಱಿಯದಜ್ಞರು ತಮ್ಮನಿಂದೆ
ಚ್ಚಱಿಸಿದನು ಗೋವಳರ ಕೈಯಲಿ
ಕುಱುಬರಿಂದತ್ಯಧಿಕರಾದೆವು ಮೂರ್ಖವಿದ್ಯೆಯಲಿ
ಅಱಿಯೆವೆಂಬಡೆ ಗೋಕುಲದಲವ
ತರಿಸಿದನು ಸಾಕ್ಷಾತ ಹರಿಯೆಂ
ದಱಿವೆವೈ ನಾವ್ ಮುನ್ನ ಕೇಳ್ದು ತದೀಯ ಗುಣಗಣವ ೪೧

ಇಲ್ಲ ಸಂಸ್ಕಾರಾದಿ ಸತ್ಕ್ರಿಯೆ
ಯಿಲ್ಲ ವೇದಾಧ್ಯಯನ ಸುಚರಿತ
ವಿಲ್ಲ ಗುರುಕುಲವಾಸ ಶೌಚಾಚಮನ ದೀಕ್ಷೆಗಳು
ಇಲ್ಲ, ಜಪತಪವಿಧಿಗಳೇನೂ
ಇಲ್ಲವೀ ಸ್ತ್ರೀಯರಿಗೆ ಹರಿಪದ
ಪಲ್ಲವಾಶ್ರಿತ ಭಕ್ತಿ ದೊರಕೊಂಡುದು ಮಹಾದೇವ ೪೨

ಆವ ಕರುಣಾಸಿಂಧುವೋ ಮೇ
ಣಾವ ಸಜ್ಜನಬಂಧುವೋ ರಾ
ಜೀವನಾಭನು ಶಿವಶಿವಾ ತದನುಗ್ರಹಾರ್ಥದಲಿ
ಗೋವಳರನಟ್ಟಿದನು ಪಾತಕ
ಜೀವಿಗಳ ಹೊಱಗೆಗಕಟ ಕಾರು
ಣ್ಯಾವಲೋಕನದಿಂದನುಗ್ರಹಿಸುತ್ತ ನಿಜಪದವ ೪೩

ಅಲ್ಲದಿರ್ದಡೆ ನಿತ್ಯ ತೃಪ್ತಂ
ಗೆಲ್ಲಿಯದು ಹಸಿವಕಟ ಲಕ್ಷ್ಮೀ
ವಲ್ಲಭಂಗೆ ವಿರಿಂಚಿಸುರಮುನಿದುರ್ಲಭಂಗಿಂದು
ಇಲ್ಲದುದನೀವವರು ನೀವ್ನಿ
ನ್ನಲ್ಲಿ ದಿಟ ಯಾಚಕನು ಗಡ ಕೈ
ವಲ್ಯನಾಥನು ನಾವಲಾ ಅವಮಾನ ಕರ್ತೃಗಳು ೪೪

ಸತಿಯರಿಗೆ ಹರಿಭಕುತಿ ದೊರಕೊಂ
ಡತುಳ ಪುಣ್ಯದ ಫಲವೊ ಮೇಣ
ಚ್ಯುತ ಮುಖಾಹುತಿ ಹವ್ಯ ಸಂಪತ್ಫಲವೊ ನಮಗಿಂದು
ಮತಿಯಿದಳಿವಟ್ಟುದು ಕೃತಾಘ
ಸ್ಮೃತಿಯಿದೆಂತಹುದೆನುತ ನೆರೆದಾ
ಕ್ಷಿತಿಸುರರು ಸುರವಂದ್ಯನನು ನೆನೆನೆನೆದು ಮಱುಗಿದರು ೪೫

ಅತ್ತಲಾ ದ್ವಿಜ ಸಮಿತಿ ಮಾಡುವ
ಚಿತ್ತದುಪಚಾರವನು ಕೈಕೊಳು
ತಿತ್ತಲವರಂಗನೆಯರಿತ್ತಮೃತಾನ್ನ ಭೋಜನವ
ಚಿತ್ತವಿಸಿ ಚತುರಾಸ್ಯನುತ ಚ
ರಿತ್ರನಾ ಗೋಕುಲಕೆ ಮಂಗಳ
ಮೂರ್ತಿ ನಿತ್ಯಾತುಮನು ಬಿಜಯಂಗೈದನೊಲವಿನಲಿ ೪೬

ಇಪ್ಪತ್ತೊಂದನೆಯ ಸಂಧಿ ಮುಗಿಯಿತು.

## ಇಪ್ಪತ್ತೆರಡನೆಯ ಸಂಧಿ

ಯಜ್ಞಭಾಗಭ್ರಾಂಶ ಜಿತಶತ
ಯಜ್ಞನೆಸೆದನು ಧರಿಸಿ ಸುಜನ ಮ
ನೋಜ್ಞ ವಾಮ ಭುಜಾಗ್ರದಲಿ ಗೋವರ್ಧನಾಚಲವ

ಒಂದು ದಿನ ನೃಪ ಕೇಳು ನೆರೆದಾ
ನಂದಗೋಪಾದಿಗಳು ತಮ್ಮೊಳ
ಗಿಂದ್ರಯಾಗೋದ್ಯೋಗದಲಿ ಸಂಭ್ರಮಿಸುತಿರೆ ಕಂಡು
ಎಂದನಖಿಳಾಧ್ಯಕ್ಷನಱಿಯದ
ನಂದದಲಿ ವೃತ್ತಾಂತವನು ಗೋ
ವಿಂದನಱಿವಿಚ್ಛೆಯಲಿ ನಗುತಲಿ ಗೋಪ ವೃದ್ಧರಿಗೆ ೧

ಹೇಳಿ ನಿಮಗಿಂದೇನು ಸಂಭ್ರಮ
ಕೇಳಲಾಗದೆ ತಾನಿದನು ಮಖ
ದೇಳಿಗೆಗೆ ಫಲವೇನು ದೇವತೆಯಾರು ವಿಧಿಯೇನು
ಮೂಲಕಾರಣವಾವುದೇತಕೆ
ಮೇಳವಿಸುವಿರಿ ಸಾಧ್ಯಸಾಧನ
ಜಾಲ ವಿವರ ವಿವೇಕವನು ವಿಸ್ತರಿಪುದೆನಗೆಂದ ೨

ಎಂದಡೆಂದನು ನಂದನಾ ನಿಜ
ನಂದನಂಗೆಲೆ ಮಗನೆ ಮಖಕೆ ಪು
ರಂದರನೆ ಪತಿ ವೃಷ್ಟಿ ಫಲವೀ ಮಖಕೆ ವೃಷ್ಟಿಯಲಿ
ಸಂದ ಸಚರಾಚರಕೆ ಜೀವನ
ವೆಂದು ವೇದ ಪುರಾಣ ಮತವೆಲೆ
ತಂದೆ ತಾತ್ಪರ್ಯವನು ತಿಳಿಯದಡಱುತುಕೊಳ್ಳೆಂದ ೩

ಹೇಳು ಕಥೆಯನು ಗ್ರಾಮ ಶಾಂತಿಗೆ
ಬೋಳಿಸುವನೇ ಮಂಡೆಯನು ತಳ
ವಾರನಾರಿಂಗೋಸುಗಿಂದ್ರನು ಮಳೆಗಳನು ಕಱೆವ
ಬಾಳುವುದು ಜನವಾರಿಗೋಸುಗ
ಹೇಳಿದವರಾರಿದನು ನಿನಗೈಕ್ಯ
ಪಾಳುತನದಲಿ ನಿನ್ನನೊಬ್ಬನೆ ಕಂಡೆ ನಾನೆಂದ ೪

ಮಗನೆ ನಗೆಯಲ್ಲಿದು ನಮಗೆ ಗೋ
ವುಗಳಿಗಭ್ಯುದಯಾರ್ಥ ಮಾಳ್ಪದು
ಜಗಕಿದನು ತಾನೊಬ್ಬನಲ್ಲ ಮಹೇಂದ್ರಮುಖಕರ್ತೃ
ನಿಗಮಚೋದಿತ ಕರ್ಮವಿದು ಮೂ
ಜಗದೊಡೆಯನಮರೇಂದ್ರನಾತನ
ಬಗೆಗೆ ತುಷ್ಟಿಪ್ರದವಿದೇ ಕರ್ತವ್ಯ ತಮಗೆಂದ ೫

ಅರಸುಗಳಿಗಿದು ಧರ್ಮ ಸಚರಾ
ಚರಕೆ ನಾವಲ್ಲೊಡೆಯರಿದ ನಾ
ಚರಿಸುವೊಡೆ ಬಲವೈರಿ ಮಖವಿದು ಮಾನ್ಯವೈ ನಮಗೆ
ಧರೆಯೊಳಗೆ ನಾವಾರು ವನಭೂ
ಚರರು ತರುಗಿರಿತೃಣಜಲಂಗಳು
ನಿರುತ ನಮಗೀ ಜೀವವೀ ಪಶುಶಿಶುಗಳಿಂಗೆಂದ ೬

ಆರಿಗಾವ ಕ್ರಿಯೆಗಳೊಳಗಧಿ
ಕಾರವಾರಿಂಗಾವುದುಕ್ತಾ
ಚಾರವದನಾಚರಿಸುವುದು ತತ್ತದ್ಗುಣಾನ್ವಿತರು
ಆರಿಗೀ ವಿಧಿ ವಿಹಿತವೆಂದು ವಿ
ಚಾರಿಸದೆ ಮಾಡಿದಡೆ ತತ್ಫಲ
ಸೇರಲಱಿವುದೆ ತಂದೆ ನಮಗಿದು ವಿಹಿತವಲ್ಲೆಂದ ೭

ಅಱಿದು ಮಾಳ್ಪರು ಕೆಲರು ಕರ್ಮವ
ನಱಿಯದದನೇ ಕೆಲರು ಮಾಳ್ಪರು
ನೆಱೆ ವಿಚಾರಿಸಲದಱೊಳಱಿತರೆ ಕರ್ಮಫಲ ಸಿದ್ಧಿ
ಅಱಿತು ಮಾಳ್ಪರಿಗಹುದು ಕರ್ಮವ
ನಱಿಯದಾಚರಿಸುವವರಿಗಾಗದು
ಬಱಿದೆ ಬಿಸುಡದಿರುರಿಯೊಳಗೆ ಸಂಪನ್ನ ಸಾಧನವ ೮

ಲೌಕಿಕವೊ ವೈದಿಕವೊ ನಿಮ್ಮ ವಿ
ವೇಕವಾವುದು ಮಾಳ್ಪುದಿಂದೀ
ಪಾಕಶಾಸನ ಮಖವಿದಾರಿಗೆ ಹಿತ ಧನಕ್ಷಯವ
ಏಕೆ ಮಾಡುವೆ ತನ್ನ ನುಡಿ ಕಿವಿ
ಯೋಕರಿಸದನುಕೂಲವಹಡ
ವ್ಯಾಕುಳರು ನೀವಿದನು ಮಾಡುವುದುಚಿತವಲ್ಲೆಂದ ೯

ರಾಗಲೋಭದಲಿಂದು ಪೂರ್ವ ಕು
ಲಾಗತಕ್ರಮವಿದನು ಸುರಪನ
ಯಾಗವನು ಮಾಡದಡೆ ದೇವವಿರೋಧಗತಿ ನಮಗೆ
ಆಗದಿಹುದೈ ಮಗನೆ ನಿನ್ನ ಮ
ನೋಗತವಿದೇನೆನಲು ಕರುಣಾ
ಸಾಗರನು ತಾ ನಗುಳೆ ನುಡಿದನು ತಂದೆಗುತ್ತರವ ೧೦

ಕರ್ಮದಿಂದಲೆ ಜನಿಸುವುದು ಜಗ
ಕರ್ಮದಿಂದವೆ ಬೆಳೆದು ನಗುಳಾ
ಕರ್ಮವಶದಲಿ ಲಯವಹುದು ಸಲೆ ಸಕಲ ಲೋಕವಿದು
ಕರ್ಮವೇ ಸುಖದುಃಖ ಕಾರಣ
ಕರ್ಮವೇ ಭವ ಬಂಧ ಕಾರಣ
ಕರ್ಮವೇ ಮೋಕ್ಷಕ್ಕೆ ಕಾರಣ ತಂದೆ ಕೇಳೆಂದ ೧೧

ಮಾಡುವರನೇ ದೈವಗತಿ ನೆಱೆ
ಕಾಡುವುದು ಸಹಜೋಪಚಾರವ
ಮಾಡದವರನು ಕಾಡಲಱಿವುದೆ ಕರ್ತೃವಲ್ಲದೊಡೆ
ಮಾಡುವುಪಚಾರದ ನಿವೃತ್ತಿಯ
ಮಾಡುವುದು ವೈರವನು ಮುನ್ನವೆ
ಮಾಡಿದವರಿಗೆ ಮುನಿವರಾರೆಲೆ ತಂದೆ ಹೇಳೆಂದ ೧೨

ನಮಗೆ ಮಾಳ್ಪಡೆ ದೈವವೀ ಗಿರಿ
ನಿವಹವೀ ವನರಾಜಿ ತೃಣಜಲ
ವಿವಿಧ ಕಂದಫಲ ಪ್ರಸೂನ ಪ್ರಕರ ದಾನದಲಿ
ಭವನವಾದುದರಿಂದ ಮಾಳ್ಪುದು
ಸವನವನು ಗೋವರ್ಧನಾದ್ರಿಗೆ
ದಿವಿಜಪತಿಗೇನೆಂದು ಮಾಳ್ಪುದು ಮುಖವನಿದನೆಂದ ೧೩

ವೇದದಲಿ ವಿಪ್ರರಿಗೆ ವರ್ತನೆ
ಮೇದಿನಿಯ ರಕ್ಷೆಯಲಿ ನೃಪರಿಗೆ
ಪಾದಜರಿಗಾ ದ್ವಿಜಕುಲದ ಶುಶ್ರೂಷೆಯಲಿ ವೃತ್ತಿ
ಭೇದಿಸಲು ವಾಣಿಜ್ಯ ಗೋ ರ
ಕ್ಷಾದಿ ವೈಶ್ಯರಿಗೀ ಚತುರ್ವಿಧ
ವಾದುದಂತದಱೊಳಗೆ ಗೋವೃತ್ತಿಗಳು ನಾವೆಂದ ೧೪

ಸತ್ವರಜತಮವೆಂಬ ತ್ರಿಗುಣಾ
ವೃತ್ತಿಯಲಿ ಸಂಸ್ಥಿತಿ ಸಮುದ್ಭವ
ಮೃತ್ಯುಗಳು ಸೇರುವುವು ಸಚರಾಚರದ ಜೀವರಿಗೆ
ಕೃತ್ಯವಾವುದು ಸುರಪತಿಗೆ ನಾ
ವೆತ್ತಣವರೀ ಮುಗಿಲು ಮಳೆಗಳ
ನಿತ್ತು ಸಲಹುವುದಾ ರಜೋಗುಣದಾಜ್ಞೆಯಲಿ ಜಗವ ೧೫

ಈವುದುಪಹಾರವನು ಧರಣೀ
ದೇವರಿಗೆ ಜೀವನವೆನಿಪ್ಪೀ
ಗೋವುಗಳಿಗಾವಾಸವಹ ಗೋವರ್ಧನಾಚಲಕೆ
ದೇವರಾಜ ಮಖೋಕ್ತ ಸಂಭಾ
ರಾವಳಿಗಳೀ ಮಖಕೆ ನೆಱಿ ಸಂ
ಭಾವಿಸಲಿ ಸುರರಾಜನಿಂದಹ ಸಿದ್ಧಿ ಯೇನೆಂದ ೧೬

ಕ್ಷಿತಿಸುರರು ಹೋಮಿಸಲಿ ಬೇಳಲಿ
ಹುತವಹನನಾರಾಧಿಸಲಿ ದೇ
ವತೆಗಳನು ದೂರ್ವಾಕ್ಷತಾಗರುಗಂಧ ಮಾಲ್ಯದಲಿ
ಘೃತ ದಧಿ ಕ್ಷೀರಾಮೃತಾನ್ನಾ
ದ್ಯತಿಶಯದಲುರುಗುಣ ಸುಶೀಲಾ
ನ್ವಿತ ಸುಗೋಧನದಲ್ಲಿ ಮನ್ನಿಸುವುದು ಮಹೀಸುರರ ೧೭

ಧಾರುಣೀಸುರರಿಂಗೆ ಸವೆಯಲಿ
ಭೂರಿ ಭೋಜನ ಸಾಧನದ ವಿ
ಸ್ತಾರ ಪಾಯಸ ಪಳಿದ್ಯ ಪಸುರ್ಗಱು ವಿವಿಧ ಫಲ ಶಾಕ
ಹೂರಿಗೆಯ ಮಂಡಿಗೆಯ ಚಕ್ಕುಲಿ
ಗಾರಿಗೆಯ ಸೇವಗೆಯ ಬಹುವಿಧ
ಗೋರಸದ ಸಂವರಣೆ ಸವನಿಸಲೀ ಕ್ಷಣದಲೆಂದ ೧೮

ಆಶ್ವ ಚಂಡಾಲಾದಿ ತನು ಭೃ
ದ್ರಾಸಿಗಳಿಗನ್ನವನು ನೆಱಿ ಗೋ
ಗ್ರಾಸವನು ಸಂಪಾದಿಸುವುದೀವುದು ಮಹಾಬಲಿಯ
ಲೇಸೆನಲು ಗಿರಿವರಗೆ ಬಳಿಕ ಹು
ತಾಶನ ದ್ವಿಜ ಗಿರಿಗಳು ವಿಹಿ
ತಾಶನರು ಬಲವಂದು ಪೊಡಮಡುವುದು ಜನಸ್ತೋಮ ೧೯

ಮನಕೆ ಬಹಡಿದು ತನ್ನ ಮತ ನಿ
ಮ್ಮನಿಬರಿಗೆ ಹಿತವೆನಗೆ ಗೋ ದ್ವಿಜ
ಜನಕೆ ಪರಮ ಪ್ರೀತಿಕರವೀ ಮಖವಿದೆಂದೆನಲು
ತನತನಗೆ ಬರೆ ಲೇಸು ಕಾರ್ಯವಿ
ದೆನುತ ಕೃಷ್ಣನ ವಚನವನು ಕೇ
ಳ್ದನಿಬರೊಬ್ಬುದ್ಧಿಯಲಿ ತೊಡಗಿದರಾ ಮಹಾಮಖವ ೨೦

ಹೂಡಿದರು ಭಂಡಿಗಳನೊಪ್ಪಿರೆ
ಮಾಡಿದಡಿಗೆಯನಾ ಮಹಾನ್ನವ
ಕೂಡೆ ತುಂಬಿಸಿ ಘೃತ ದಧಿ ಕ್ಷೀರೋದನಂಗಳನು
ಜೋಡಿಸಿದರಾ ಗಿರಿಗೆ ಮಖವನು
ಮಾಡಿಸೀ ದ್ವಿಜತುಷ್ಟಿಯನು ಹರಿ
ಗೂಡಿ ಬಲವಂದೆಱಗಿದರು ಬಲಸಹಿತ ಗಿರಿವರಗೆ ೨೧

ಹಱಿ ಕೊಳಲು ಕೊಂಬುಗಳು ಮೆಱೆವ
ಬ್ಬರದ ಬಿರುದಿನ ಕಹಳೆಗಳ ಗಾ
ವರದ ರವಗಳ ಗಿರಿಗೆ ಪೂಜೆಯಮಾಡಿ ಬಲಿಗೊಟ್ಟು
ಕರವ ಮುಗಿಯಲು ಮುಂದೆ ರೂಪಾಂ
ತರದಲಾ ಗೋವಳರು ನೋಡಲು
ಗಿರಿಶಿರದಲಸುರಾರಿ ಕುಳ್ಳಿರ್ದುಂಡನಾ ಬಲಿಯ ೨೨

ಇತ್ತ ನೋಡಿರೆ ಶೈಲರಾಜನ
ಚಿತ್ತದೊಲವನು ಪರಮ ಕಾರುಣಿ
ಕೋತ್ತಮನಲಾ ಕೊಟ್ಟ ಬಲಿಯನು ಕಂಗಳಿದಿರಿನಲಿ
ತುತ್ತುಗೊಳುತ್ತೈದಾನೆ ಮಱು ಬಲ
ಶತ್ರುವಿನ ಪರಿಯಲ್ಲ ನೆಱಿ ಕೃತ
ಕೃತ್ಯರಾದೆವು ಪೊಡಮಡುವುದೆಂದನು ಮುರಧ್ವಂಸಿ ೨೩

ಎಂದು ಗೋಪರು ಸಕಲ ಗೋಧನ
ವೃಂದಸಹಿತಾ ಪರ್ವತವ ಬಲ
ವಂದು ಶಿಶು ಪಶು ವೃದ್ಧ ವನಿತಾಕ್ಷೇಮವನು ನಮಗೆ
ತಂದೆ ಕರುಣಿಸೆನುತ್ತ ಸಲೆ ಗೋ
ವಿಂದನಂದಾ ತನಗೆ ತಾನೇ
ವಂದಿಸುತ ವೈಯಿಕ್ಕಿದನು ಗಿರಿರಾಜನಿದಿರಿನಲಿ ೨೪

ಕಾವನೀತನು ತನಗೆ ಬಲಿಗಳ
ನೀವ ಮನುಜರನೀಯದಿರ್ದಡೆ
ಜೀವ ಧನ ಮರ್ತ್ಯರನು ಸಿಂಹವ್ಯಾಘ್ರರೂಪಿನಲಿ
ಜೀವಹರಣವ ಮಾಳ್ಪನೀ ಗಿರಿ
ದೇವನನು ನೀವ್ ನುಡಿಸಿ ಕೇಳಿ ಕೃ
ಪಾವನಧಿ ಮಾತಾಡುವನು ಸಂದೇಹವಿಲ್ಲೆಂದ ೨೫

ಎನಲು ಕೃಷ್ಣನ ನುಡಿಗೆ ಗೋಪರು
ತನತನಗೆ ನಿಜಜನಮನೋರಥ
ವೆನಿತನಿತನೆಲ್ಲವನು ಪೊಡವಂಟನಿಬರರ್ಥಿಸಲು
ವಿನಯಪರರಿಂಗೀವೆನಿಷ್ಟವ
ನೆನುತ ಮೊಳಗುವ ಮುಗಿಲವೊಲು ಕರ
ವನಜವನು ನೆಗಹಿದನು ನುಡಿನನು ಶೈಲರೂಪದಲಿ ೨೬

ಅತ್ತಲುಂಡನು ಹವಿಗಳನು ಗಿರಿ
ಮಸ್ತಕವನಾಕ್ರಮಿಸಿ ಕುಳ್ಳಿ
ರ್ದಿತ್ತಲುಣಬಡಿಸಿದನು ತಾನೇ ತನಗೆ ಭಕ್ತಿಯಲಿ
ಮತ್ತೆ ಭೋಜನ ಭೋಜ್ಯ ಭೋಜಕ
ತೃಪ್ತನೆಂಬೀ ತ್ರಿವಿಧ ತಾನೇ
ತತ್ವದಿಂದೆಂಬುದನು ತಜ್ಞರಿಗಱುಪುವಂತಿರ್ದ ೨೭

ಏಡಿಸುವವೋಲ್ಸುರಪನನು ಬಾ
ಯಾಡಿಸುತ ಬಣ್ಣಿಸುತ ಕೈಗಳ
ನೀಡಿ ಬಹುವಿಧ ಭಕ್ಷ್ಯ ಭೋಜ್ಯಂಗಳನು ಜಠರದಲಿ
ಕೂಡಿದನು ಗೋಪರಿಗೆ ಹರುಷವ
ಮಾಡಿದನು ಗೋಪಿಯರು ಕೃಷ್ಣನ
ಪಾಡಿದರು ಪರಮೋತ್ಸವದ ಸಂತೋಷದುಬ್ಬಿನಲಿ ೨೮

ಅತ್ತಲಮರಾಧೀಶನುದರದ
ಲೆತ್ತಿದುದು ಘನತಾಪ ಮನದಲಿ
ಹೊತ್ತಿದುದು ತನು ಸಾವಿರಾಲಿಗಳುರಿಗಳನು ಕೆದಱಿ
ಕೆತ್ತಿದವು ಮೀಸೆಗಳು ಹಲು ಮೊಱಿ
ವುತ್ತ ಗೋಪಪ್ರಳಯ ಸಮಯದ
ಕೃತ್ತಿವಾಸನವೋಲು ತಳೆದನು ರೌದ್ರಮಯ ರಸವ ೨೯

ಅಕ್ಕಟಕಟಾ ನೋಡಿ ಗೋಪರ
ಸೊಕ್ಕನಿದನೇನೆಂಬೆನೆನ್ನನು
ಧಿಕ್ಕರಿಸಿ ಗಿರಿಗಿತ್ತರೇ ತನ್ನರಿಗೆ ಪೂಜೆಯನು
ಹೆಕ್ಕಳಿಸಿ ಬಲ ಕೃಷ್ಣರೆಂಬಾ
ಮಕ್ಕಳಾಟಿಕೆ ಮಾರಿ ಯಾಯಿ
ತ್ತಕ್ಕುವುದೆ ನಿಜಪೂಜೆ ಪರ್ವತಗೆಂದು ಖತಿಗೊಂಡ ೩೦

ಮಱಿದರೆನ್ನನು ಭಾಪು ತಮ್ಮಂ
ತರವನಱಿಯದೆ ಕೃಷ್ಣನೆಂಬಾ
ಬಱಿ ಮನುಷ್ಯನ ಬಲವ ನಚ್ಚಿ ನಿಜೋಪಹಾರವನು
ಸುರಿದರೇ ಗಿರಿಗಹುದು ತಪ್ಪೇ
ನಱಿವೆನಿನ್ನು ಮದಾಂಧರನು ಹೆ
ದ್ದೊಱಿಯಲದ್ದುವೆನೀ ಕ್ಷಣವೆ ಗೋಕುಲವನಿದನೆಂದ ೩೧

ಸಂಕಲೆಯ ಕಡಿ ಪುಷ್ಕಳನ ಹೊಱ
ಯಿಂಕೆ ಬಿಡಿ ಸಂವರ್ತನನು ಬಲ
ವಂಕದಲಿ ತಾನಿಹೆನು ಕರೆ ಕರೆ ಮೇಘನಿಕರವನು
ಲೆಂಕರೊಡನೊಡೆಯಂಗೆ ಸವನಿಸಿ
ತಂಕ ನಾಚಿಕೆಯಾಯಿತೆನುತವೆ
ಹೂಂಕರಿಸುತಮರೇಂದ್ರನಾನೆಯನೇಱಿ ಹೊಱವಂಟ ೩೨

ಮೇಳವಿಸಿತೆಡಬಲದಲಾ ದಿಗು
ಪಾಳಕರು ಸಂಗ್ರಾಮ ಗಡೆ ಗೋ
ಪಾಲರೊಡನೊಡೆಯಂಗೆ ನೋಳ್ಪೆವೆನುತ್ತ ಗಗನದಲಿ
ತೂಳಿತಮರಾನೀಕ ದೆಸೆಗಳ
ಮೂಲೆ ಬಿರಿಯಲು ಬಂದನಾನೆಯ
ಮೇಲೆ ಸುರಪತಿ ಸುತ್ತ ಕವಿದುದು ಮೇಘ ಸಂದೋಹ ೩೩

ಆಡಿದುವು ಮಿಂಚುಗಳು ನಭದಲಿ
ಕೂಡೆ ಕತ್ತಲಿಸಿತ್ತು ಕಲ್ಪದ
ಕೇಡಿನಂದದವೋಲು ಗೋಕುಲದೆಂಟು ದಿಕ್ಕಿನಲಿ
ಜೋಡಿಸಿದುದಭ್ರದಲಿ ಬಲು ಗಾ
ಳೀಡಿಱಿದುದೋರಂತೆ ಸಲೆ ಹೊಡೆ
ದಾಡಿದುವು ಬಱಸಿಡಿಲು ಸುರಿದುದು ವೃಷ್ಟಿ ಭೂತಳಕೆ ೩೪

ನೆಟ್ಟ ಕಂಬದವೋಲು ಧಾರಾ
ವೃಷ್ಟಿಕೀಲಿಸಿತಿಳೆಯನಭ್ರವ
ನಿಟ್ಟಳಿಸಿ ಕೀಳುವ ತೆಱದಿ ಗಿಡ ಬಳ್ಳಿ ಮರಗಳನು
ನಿಟ್ಟಿಸುವಡರಿದಾಯ್ತು ಮಿಗೆ ಕಂ
ಗೆಟ್ಟ ಗೋಕುಲವೈದೆ ನೀರೊಳ
ಗಿಟ್ಟ ಮೃತ್ತಿಕೆಯಂತೆ ನೆನೆದುದು ನಿಮಿಷಮಾತ್ರದಲಿ ೩೫

ಸಿಡಿಲು ಮಳೆ ಗಾಳಿಗಳ ಬಾಧೆಗೆ
ಸಿಡಿದು ಶಿಶು ಪಶು ವೃದ್ಧ ವನಿತೆಯ
ರೊಡಲು ಕಂಪಿಸಿ ಬೆಡಗುಗೊಂಡೀಡಾಡಿ ಮನೆಗಳನು
ಒಡೆಯರಾರೆಮಗಿನ್ನು ಕೃಷ್ಣನೆ
ಕೆಡಿಸಿದನು ಕೈಗಾಯ ಹೇಳೆನು
ತಡಿಗಡಿಗೆ ಗೋಳಿಡಲು ಮಳೆ ಮುದ್ರಿಸಿತು ಗೋಕುಲವ ೩೬

ಎತ್ತಣದು ಬಾಯ್ಬಿಡದಿರೆಲವೊ ಯೆ
ಪತ್ತು ನಮಗೀ ಕೃಷ್ಣನಿರಲಿದ
ತುತ್ತುಗೊಳ್ಳನೆ ಕಾಳುರಿಗೆ ಘನವೇ ಜಲಾಸಾರ
ಉತ್ತಮನನಾಶ್ರಯಿಸಿ ಬನ್ನಿ ಎ
ನುತ್ತ ಗೋಕುಲಜನ ಜಲವನೀ
ಸುತ್ತ ಬಂದುದು ಬಳಲುತವೆ ಗೋವಿಂದನಿದ್ದೆಡೆಗೆ ೩೭

ಕಱುಗಳನು ಮುಂದಿಟ್ಟು ಮೋಱಿಯ
ಮುಱುಹಿ ಕೋಡ್ಗಳನೊಡ್ಡಿ ಹಲುಗಿಱಿ
ಗಿಱಿದು ಬಾಲವನೆತ್ತಿ ಬಹಳಾಸಾರದಲಿ ನಡುಗಿ
ಅಱಸುತಚ್ಯುತನಂಘ್ರಿ ಕಮಲದ
ಮಱಿಯ ಹೊಕ್ಕವು ಕಾಲ ಕರ್ಮಾಂ
ತರದವೋಲಳವಳಿದು ತುಱುವಿಂಡುಗಳು ಸಂದಣಿಸಿ ೩೮

ರಕ್ಷಿಸೆಲೆ ಗೋವಿಂದ ಗೋಕುಲ
ರಕ್ಷಕನೆ ತ್ರೈಲೋಕ ರಕ್ಷಾ
ರಕ್ಷಕನೆ ರಕ್ಷಿಸು ದುರಂತ ಮದಾಂಧ ಶಿಕ್ಷಕನೆ
ಅಕ್ಷಯನೆ ಶರಣಾಗತಾರ್ತಿ ಕು
ಲಕ್ಷಯನೆ ಕಾರುಣ್ಯ ರಸ ಜ
ನ್ಮಾಕ್ಷಯನೆ ಶರಣಾಗೆನುತ್ತಿರ್ದುದು ಜನಸ್ತೋಮ ೩೯

ಅಂಜದಿರಿ ಗೋವಳರು ಗೋಪಿಯ
ರಂಜದಿರಿ ಗೋವುಗಳಿಗಾನಿಹೆ
ನಂಜಬೇಡಮರೇಂದ್ರನಾಟೋಪಕ್ಕೆ ಬೆದಱದಿರಿ
ಅಂಜುವರಿಗಭಯವನು ಗಿರಿವರ
ನಂಜದಿರಿ ನಿಮಗೀವನೆನುತವೆ
ಕಂಜನಾಭನು ಕರವ ನೆಗಹಿದನಖಿಳ ಪರಿಜನಕೆ ೪೦

ಉಂಬೆ ಗಂಡೂರವರ ಬಲಿಗಳ
ನಿಂಬುಗೊಡು ಗೋಕುಲಕೆ ಬಳಲಿಸ
ದಂಬುಧಿಯ ಮಧ್ಯದಲಿ ಮುಳುಗುತ್ತೇಳುತಿದೆ ನೋಡಾ
ನಂಬಿದವರನು ಕಾವುದೆನುತ ಕ
ರಾಂಬುಜವ ನೆಗಹಿದನು ನಸುನಗು
ತಂಬುಜಾಕ್ಷನು ನೋಡಿ ಗೋವರ್ಧನ ಮಹಾಚಲಕೆ ೪೧

ಎಡದ ಕೈಯನು ನೀಡಿ ಗಿರಿಯನು
ತುಡುಕಿ ನೆಗಹಿದನೇನನೆಂಬೆನು
ಕೊಡೆಯ ನೆಗಹುವವೋಲು ಖಗಮೃಗನಿಕರಗಳ ಸಹಿತ
ಹಿಡಿದು ಗೋಪರಿಗೆಂದನೆಲ್ಲರು
ತಡೆಯದಿತ್ತಲು ಬನ್ನಿ ನೀವೊ
ಗ್ಗೊಡೆಯದೆಲ್ಲರು ಶಿಶು ಪಶು ಪ್ರಿಯ ಬಾಂಧವರು ಸಹಿತ ೪೨

ಬೀಳದೀ ಗಿರಿ ತನ್ನ ಕೈಯಿಂ
ದೇಳದಿಟವನು ಮಾಡದೆಲ್ಲರು
ಶೈಲವಾಸದಲಿಹುದು ಮಳೆ ತೆಗೆವನ್ನಬರವೆನಲು
ಕೇಳುತವೆ ಗೋವಳರು ಕಡು ಹೀ
ಹಾಳಿ ಮಿಗೆ ಹರುಷದಲಿ ತಂತ
ಮ್ಮಾಲಯವ ಹೊಗುವಂತೆ ಹೊಕ್ಕರು ಸಕಲ ಜನಸಹಿತ ೪೩

ಹೊಕ್ಕ ಕಱು ತುಱು ಸರಕುಗಳು ಸಹಿ
ತಿಕ್ಕೆ ಹಕ್ಕೆಯ ಮಾಡಿ ಗಿರಿಯಲಿ
ಶಕ್ರನನು ನಗುವಂತೆ ನಿಶ್ಚಿಂತೆಯಲಿ ಗೋವಳರು
ಇಕ್ಕೆಲದ ಮೇಘಾಳಿ ಸಿಡಿಲನು
ಮಿಕ್ಕು ಹರಿ ಮೂರ್ತಿಯನು ತಾವೆವೆ
ಯಿಕ್ಕದೀಕ್ಷಿಸುತ್ತಿರ್ದರಿತರದ ಚಿಂತೆಯನು ಮಱೆದು ೪೪

ವನದ ಖಗಮೃಗನಿಕರವಾ ತ
ದ್ವನ ಪುಳಿಂದ ಪುಳಿಂದೆಯರು ಸಹಿ
ತಿನಿತು ಜನವಾನಂದದಲಿ ಗಿರಿಪಾದ ಸದನದಲಿ
ಅನಿಮಿಷಾಕ್ಷಿಗಳಾಗಿ ಕೃಷ್ಣಾ
ನನ ಸರೋಜವನೀಕ್ಷಿಸುತ ಸಂ
ಜನಿತ ಸುಖದಲಿ ಮಱೆದರಾ ದಿವರಾತ್ರಿ ವಿಭ್ರಮವ ೪೫

ಹಸಿವು ತೃಷೆಗಳ ಮಱೆದುದಾ ಜನ
ವಿಸರ ಕೃಷ್ಣನ ಮೂರ್ತಿಸುಧೆಯನು
ಶಶಿಮುಖಿಯರೊಪ್ಪಿರಲು ಪಾಡುತ ಕೃಷ್ಣಗೀತವನು
ಒಸೆದು ಕಣ್ಗೆವಿ ಕುಡಿತೆಯಲಿ ಸೇ
ವಿಸುತ ಪುಳಕಾಭಿನ್ನ ನೇತ್ರ
ಪ್ರಸರದಲಿ ಸುಖವ ಸವಿದರು ನಿತ್ಯಾತ್ಮ ಭಾವದಲಿ ೪೬

ಇಪ್ಪತ್ತೆರಡನೆಯ ಸಂಧಿ ಮುಗಿಯಿತು.

## ಇಪ್ಪತ್ತಮೂರನೆಯ ಸಂಧಿ

ನತಸುರೋತ್ತಮ ಮೌಳಿಮಣಿ ಮಂ
ಡಿತ ಪದಾಬ್ಜನಖೇಂದು ಮಣಿ ನಿ
ರ್ಜಿತ ನಿಜಾಶ್ರಿತ ತಾಪನೆಸೆದನು ಕೃಷ್ಣನವನಿಯಲಿ

ಕೇಳು ನೃಪ ಕಮಲಾಕ್ಷನರ್ಭಕ
ಲೀಲೆಯನು ಸುರಪತಿಯ ಗರ್ವವ
ಕೀಳುವಂತಿರೆ ಕಿತ್ತು ವಾಮಭುಜಾಗ್ರದಲಿ ಗಿರಿಯ
ಏಳು ದಿನ ಪರಿಯಂತ ಚಲಿಸದೆ
ಗಾಳಿ ಮಳೆ ಸಿಡಿಲುಗಳ ಭಯದಲಿ
ಪಾಲಿಸಿದನಾತ್ಮಾಶ್ರಿತರನಂದಖಿಳ ಗೋಕುಲವ ೧

ಅರಸ ಕೇಳಮರೇಂದ್ರನಮರರು
ವೆರಸಿ ಗಗನಾಂಗಣದಲಂಬರ
ಚರ ವಧೂ ಪರಿಗೀಯಮಾನ ಚರಿತ್ರನೊಲವಿನಲಿ
ಪರಮ ವಿಭವದಲೆಸೆದಿರಲು ದಿ
ಕ್ಕರಿಯ ಮೇಲೋಲಗವನಿತ್ತಾ
ದರದಲಭ್ರದ ಡಾಳಿಯನು ಮುನ್ನಟ್ಟಿ ಗೋಕುಲಕೆ ೨

ಸವೆದವಾ ಕಲ್ಪಾಂತ ಘನ ವಾ
ಸವ ಸ್ತ್ರೀಧನ ಜನಕೆ ನೆಱೆ ಪರಿ
ಭವದ ಕೈ ಬೆಳೆವಂತೆ ಧಾರಾವೃಷ್ಟಿಯನು ಸುರಿದು
ಭುವನವಳಿದರು ಕೃಷ್ಣನವರಿಗೆ
ಸವನಿಸದು ಲಯವೆಂದು ಸಲೆ ಸಾ
ಱುವವೊಲೆಱಗಿದವು ಸಿಡಿಲುಗಳು ವಿಫಲ ಪ್ರಯತ್ನದಲಿ ೩

ನೋಡಿ ತಲೆದೂಗಿದನಿದೆತ್ತಣ
ಕೇಡು ತನಗೀ ಪರಿಯ ಮೇಘದ
ಮೂಡಿಗೆಯ ಮಳೆಗೀಗಲೀ ಜಗವೇಳು ಕದಡುತಿವೆ
ಆಡಲೇತಕೆ ಪರ್ವತವ ಮಱೆ
ಮಾಡಿ ಮಾಮಾ ರಕ್ಷೆಯನು ನೆಱೆ
ಮಾಡಿದನು ಗೋಕುಲಕೆ ಗೋವಳನೊಬ್ಬನಕಟೆಂದ ೪

ಕೇಳಿ ದಣಿಯವು ಕಿವಿಗಳಿದನಿಂ
ತಾಲಿಗಳು ಕಂಡಱಿಯವದುಭುತ
ದೇಳಿಗೆಯನೇನೆಂಬೆನಿತ್ತುದು ಮಾನಭಂಗವನು
ತೋಳಬಲುಹಿನ್ನೆಂತುಟೋ ನರ
ನೇಳುದಿನ ಪರಿಯಂತ ಗಿರಿಯನು
ತಾಳುವರ್ಭಕನಾತನಾರೋ ಶಿವಶಿವಾಯೆಂದ ೫

ಅಱೆತೆ ನಾನೆಲವೆಲವೋ ಕೃಷ್ಣನ
ನಿಱುಗೆಯನು ಸಾಕ್ಷಾತು ನಮ್ಮೆ
ಲ್ಲರನು ಸಲಹುವ ವಿಷ್ಣುವೇ ನರನಾದ ಗಡ ಧರೆಯ
ಹೊಱೆಯನಿಳುಹಲು ತೆಗೆಯು ಹೇಳೋ
ಸೆಱೆಮನೆಗೆ ಮೇಘವನು ತಾ ಮತಿ
ಮಱೆದೆನಕಟಾ ಕೆಟ್ಟೆನೆಂದನು ಮರುಗಿ ದೇವೇಂದ್ರ ೬

ಹರೆದುದಭ್ರಸ್ತೋಮವಮರೇ
ಶ್ವರನಹಂಕೃತಿಯೊಡನೆ ಸಿಡಿಲುಗ
ಳುರವಣೆಗಳುಪಶಮಿಸಿದುವು ವಂದಿಗಳ ರವದೊಡನೆ
ಧರೆಯ ದುರ್ದಿನವಡಗಿದುದು ದು
ರ್ಧರವೆನಿಪ ಗೋಕುಲ ವಿಪತ್ಸಾ
ಗರದೊಡನೆ ನಿಮಿಷಾರ್ಧದಲಿ ನರನಾಥ ಕೇಳೆಂದ ೭

ಬಿಂಕ ಬೀತುದು ಮಳೆಗಳಿಗೆ ನಿ
ಷ್ಪಂಕವಾಯ್ತಿಳೆ ಗೋಪರಿರಾ ನಿ
ಶ್ಶಂಕೆಯಲಿ ಹೊಱವಡುವುದಂಜದೆ ಗುಹಾಂತರವ
ಮುಂಕೊಳಿಸಿ ಗೋಧನವನೆಂದಾ
ಪಂಕಜಾಕ್ಷನು ನಗುತ ನಿಜಕರ
ಪಂಕಜ ಧೃತಗೋತ್ರನೆಂದನು ಗೋಪವೃದ್ಧರಿಗೆ ೮

ಅಱಿಯರಾ ಮಳೆ ಗಾಳಿ ಸಿಡಿಲ
ಬ್ಬರಣೆಯನು ಭಯದುಃಖವನು ಕಂ
ದೆಱೆದು ಕೃಷ್ಣನ ಮೂರ್ತಿಯನು ಮುಕ್ಕುಳಿಸಿ ವೈವುಱೆದು
ನೆಱೆ ತದಾತ್ಮತೆವೆತ್ತು ಸುಖ ಸಾ
ಗರದಲೋಲಾಡುತ್ತ ವಿಶ್ವಂ
ಭರನ ನುಡಿಗೆಚ್ಚತ್ತರೊಬ್ಬರನೊಬ್ಬರೀಕ್ಷಿಸುತ ೯

ಉಲಿವ ಕಱುತುಱುಗಳಲಿ ಕೋಲಾ
ಹಲದ ಕೊಂಬು ಕೊಳಲ್ಗಳಲಿ ಗೋ
ಕುಲವ ಹೊಱವಡುವಂತೆ ಗಿರಿವಿವರವನು ಹೊಱವಂಟು
ಕೆಲರು ಸುರಪನನೇಡಿಸುತ ಕೆಲ
ಕೆಲರು ಕೃಷ್ಣನ ಬಣ್ಣಿಸುತ ನಂ
ಗಳದಲಾ ಗೋಕುಲಕೆ ಬಂದುದು ಗೋಪಜನ ನಿವಹ ೧೦

ಇಳುಹಿದನು ಸುರಪತಿಯ ಗರ್ವವ
ನಿಳುಹುವಂತಿಗಲದ್ರಿಯನು ತ
ನ್ನೊಳಗೆ ಕುಳಿತವರುಗಳಲೊಡಂಬಟ್ಟುವು ಸುರೇಂದ್ರನಲಿ
ನಳಿನನಾಭನ ಚಿತ್ರದೊಲವಿಂ
ತಳವಡವುದೆಂಬಂತೆ ಹರಿ ಗೋ
ಕುಲವ ಹೊಕ್ಕನು ನೆನೆವವರ ಹೃದಯವನು ಹೊಗುವಂತೆ ೧೧

ಉಲಿವ ಸುರದುಂದುಭಿಯ ಕಹಳಾ
ವಳಿಯ ತುಂಬುರ ನಾರದರ ನಂ
ಗಳ ಸುಗೀತದ ಸುರವಧೂ ವಿಭ್ರಮದ ತಾಂಡವದ
ಕಳಕಳದ ಸುರವೃಷ್ಟಿ ಕುಸುಮಾ
ವಳಿಯ ಗೋಪೀ ಗೋಪ ಜನ ಸಂ
ಕುಲದಲೈತಂದು ಹೊಕ್ಕನು ನಂದಗೋಕುಲವ ೧೨

ಮುಂದೆ ತುಱುಧೂಳಿಗಳಲೊಪ್ಪಿರ
ಲಂದವಡದಳಕಾವಳಿಯ ಚೆಂ
ಬೊಂದುಡಿಗೆಗಳ ದಿವ್ಯ ಪೀತಾಂಬರ ಘನದ್ಯುತಿಯ
ಮಂದಹಾಸದ ನಯನ ದೀಧಿತಿ
ಯಿಂದೆಸೆವ ಮಂಗಳ ಮುಖಾಬ್ಜದ
ವಂದ್ಯ ಶರಣರ ದೇವನೈತಂದನು ನಿಜಾಲಯಕೆ ೧೩

ವಾಮಭಾಗ ಭುಜಾಗ್ರವಾ ಶ್ರೀ
ಧಾಮನಂಸದಲೆಸೆಯೆ ಕಮಲ
ಭ್ರಾಮಣದಲೊಂದೆಸೆಯಲಂಘ್ರಿ ಸರೋಜ ಯುಗಳದಲಿ
ಭೂಮಿಗೊನಂದವನು ಕೊಡುತು
ದ್ದಾಮಗೋಪೀನಯನ ಭೃಂಗ
ಸ್ತೋಮ ಸೇವಿತ ಮೂರ್ತಿ ಬಿಜಯಂಗೈದನೊಲವಿನಲಿ ೧೪

ಅತ್ತಲಮರಾಧೀಶ್ವರನ ತನು
ಹೊತ್ತಿ ಹೊಗೆದುದು ಮುಸುಡು ಮಾಡಿದ
ಕೃತ್ಯದನುತಾಪದಲಿ ಸುಯ್ದುಳಲುತ್ತ ಮನದೊಳಗೆ
ಎತ್ತಣದು ತನಗೀ ಮತಿಭ್ರಮೆ
ಕೆತ್ತುದಱವನ ಕದವೆನುತ್ತ ನಿ
ರಸ್ತ ಮಾನಸ್ತಂಭನಾದನು ನಿಮಿಷಮಾತ್ರದಲಿ ೧೫

ಮಂದಮತಿ ತಾನೆಂದನೇಗುವೆ
ನಿಂದು ತನಗಾರೆನುತಲಾ ಗೋ
ವಿಂದನಭಿಮುಖಕಂಜಿ ಬರಲಮ್ಮದೆ ಕೃತಘ್ನತೆಗೆ
ಸಂದನಜಲೋಕಕ್ಕೆ ಭಯದಲಿ
ನಿಂದು ಜಯಜಯಯೆನುತ ಚರಣ
ದ್ವಂದ್ವದಲಿ ಮೈಯಿಕ್ಕಿ ಬಿನ್ನಹಮಾಡಿದನು ಹದನ ೧೬

ಕೇಳಿದನು ಬಿನ್ನಹವನೆಲವೋ
ಕಾಳು ಮಾಡಿದೆ ಕೃಷ್ಣನಾರೆಂ
ದಾಲಿಸದೆ ನರನೆಂದು ಗೋವಳನೆಂದು ಗರ್ವದಲಿ
ಹೇಳನವನಾಚರಿಸಿ ತನಗಿದ
ಹೇಳಬಂದೈ ಕಥೆಯನಗ್ಗದ
ಖೂಳರರಸನು ನೀನೆನುತ ಜಱೆದನು ಸರೋಜಭವ ೧೭

ಭಾರ ಹೆಚ್ಚಿದಡವನಿ ಸೈರಿಸ
ಲಾಱೆನೆಂದೊಱಲಿದರೆ ನಾವಂ
ದಾರನಭ್ಯರ್ಥಿಸಿದಡಭಯವನಾರು ನಮಗಂದು
ಸೈರಿಸುತ ಮಾಡಿದವರಾರವ
ತಾರವನು ಮತ್ತಿಂದು ನಿನ್ನ ವಿ
ಕಾರವಾರೊಡನಕಟ ಸ್ವಾಮಿದ್ರೋಹವಾಯ್ತೆಂದ ೧೮

ಆಹ ಸಾಕಿನ್ನೇನು ಸ್ವಾಮಿ
ದ್ರೋಹ ಹೋಗಾಶ್ರಿತ ಕೃಪಾನಿ
ರ್ವಾಹಕನ ನಿಜಭಕ್ತಕುಲಬಾಂಧವನ ಮಱೆಹೊಕ್ಕು
ದ್ರೋಹವನು ಪರಿಹರಿಸು ನಿಷ್ಪ್ರ
ತ್ಯೂಹದಲಿ ಜೀವಿಸುವುದೆಲೆ ದು
ರ್ಮೋಹಿಗಳ ದಾತಾರ ಹೋಗಿದಕಂಜಬೇಡೆಂದ ೧೯

ಸುರಭಿ ಸಹಿತೆಲೆ ಮಗನೆ ಹೋಗೆ
ನ್ನರಸನೆಡೆಗೆನ್ನಾಳ್ದನೆಡೆಗೆ
ನ್ನರುದಯಾ ಸಿಧಿಯೆಡೆಗೆ ತನ್ನಯ ತಂದೆಯಿದ್ದೆಡೆಗೆ
ಇರದೆ ಹೋಗೀ ಕ್ಷಣವೆ ಪದಸರ
ಸಿರುಹದಲಿ ಮೈಯಿಕ್ಕು ಮುನಿನುತ
ಚರಣನೊಲವನು ಪಡೆವೆ ಹರಿ ಕರುಣಾಳು ಹೋಗೆಂದ ೨೦

ಕ್ಷಮಿಸುವನು ಕರುಣಾಳು ನಿನ್ನ
ಕ್ರಮವನವನತಬಂಧು ಲಕ್ಷ್ಮೀ
ರಮಣನಂಜದಿರೆಂದು ನೆರೆದೋಲಗದ ಮಧ್ಯದಲಿ
ಕಮಲಭವನಾಜ್ಞಾಪಿಸಲು ಪದ
ಕಮಲದಲಿ ತಲೆವಾಗಿ ಬೀಳ್ಕೊಂ
ಡಮರಪತಿ ಸುರಧೇನು ಸಹಿತಿಳಿತಂದನೀ ಧರೆಗೆ ೨೧

ಪರಿಮಿತದಲೈತಂದು ಕೃಷ್ಣನ
ಚರಣದಲಿ ಪೊಡವಂಟು ನತಮಣಿ
ಕಿರಣ ಕೀರ್ಣನಖೇಂದು ಮಂಡಿತ ಮೌಳಿಯೆಂದೆನಿಸಿ
ಕರಯುಗವ ಮುಗಿದೆದ್ದು ಲಜ್ಜಿಸಿ
ಶಿರವೆಱಗಿ ವಿಹಿತಾಪರಾಧ
ಸ್ಮರಣೆ ಮನದಲಿ ಮೂರ್ತಿಸಲು ಸುರನಾಥನಿಂತೆಂದ ೨೨

ಶುದ್ಧ ಸತ್ವಾತ್ಮಕನೆ ಸತ್ವಸ
ಮೃದ್ಧ ಗುಣಸೇವಿತನೆ ತತ್ಪ್ರತಿ
ಸಿದ್ಧ ರಾಜಸ ತಾಮಸಾಖ್ಯ ಗುಣೋರುವಿಗ್ರಹನೆ
ಶುದ್ಧ ಸಾತ್ವಿಕ ಭಕ್ತ ಕರುಣಾ
ಬದ್ಧ ಹೃದಯನೆ ರಕ್ಷಿಸೆನ್ನನು
ಶುದ್ಧ ಚಿತ್ತನೆ ಬುದ್ಧಿಹೀನನನೆಂದನಮರೇಂದ್ರ ೨೩

ಸತ್ವಗುಣ ನಿಧಿಯೆನಿಪ ನಿನ್ನೊಳ
ಗೆತ್ತಣದು ಕೇಳಿತರಗುಣ ದು
ರ್ವೃತ್ತಿಗಳು ಲೋಭಾದಿಗಳು ನಿರ್ದ್ವಂದ್ವರೂಪನಲಿ
ಚಿತ್ತವಿಸು ಮನ್ಮಖವಿನಾಶನ
ವೃತ್ತಿಯಿದು ಮದನುಗ್ರಹಾರ್ಥ ಮ
ಹೋತ್ತಮನೆ ಶರಣಾಗು ಕರುಣಾನಿಧಿಯೆ ತನಗೆಂದ ೨೪

ಮತ್ತ ನಾನು ಮದಾಂಧ ಶಿಕ್ಷಾ
ವೃತ್ತ ನೀನು ದುರಂತ ಮೋಹೋ
ದ್ವೃತ್ತ ನಾನು ವಿಮೋಹನಾಶನು ವಿಮಲಗುಣ ನೀನು
ಉತ್ತಮರಿಗಧಿದೈವ ನೀನಘ
ವೃತ್ತರಿಗೆ ಕುಲದೈವ ನಾನೆಲೆ
ಭಕ್ತವತ್ಸಲ ದೇವ ಶರಣಾಗೆಂದನಮರೇಂದ್ರ ೨೫

ದೇವ ಯಾಗಂಗಳಲಿ ಹವಿಗಳು
ದೇವರಂಗೋಪಾಂಗವೆಂದೇ
ಭಾವಿಸುತ ಯಜಮಾನನಿತ್ತುದನುಂಡು ಜಗವಱಿಯೆ
ಜೀವಿಸುವ ನಿನ್ನಂಘ್ರಿಕಮಲದ
ಸೇವಕರು ನಾವೆತ್ತ ನಿನಗೆ ಕೃ
ತಾವಮಾನದ ಪಾಪಕಾರಿಗಳೆತ್ತಲಕಟೆಂದ ೨೬

ಒಡೆಯ ನೀ ನಮಗೆಲ್ಲರಿಗೆ ನಿ
ಮ್ಮಡಿಯ ಸೇವೆಯ ಮಾಳ್ಪ ಸಲುಗೆಯ
ಪಡೆದೆವೆಂದುಬ್ಬರಿಸಿ ಪೃಥಗೀಶಾಭಿಮಾನದಲಿ
ಒಡೆಯನನು ಕಂಗಾಣದೀಪರಿ
ಕೆಡುವ ಪಾಪಿಗಳಾವು ದೇವರ
ಬಡಿಗೆಗಲ್ಲದೆ ಬಾಗಲಱಿಯದು ಬಿಂಕವೆನುಗೆಂದ ೨೭

ತಪ್ಪಿದೆನು ತಾನೊಡೆಯನಂಘ್ರಿಗೆ
ದರ್ಪ ವಿಕಳತೆಯಿಂದ ಮಱವೆಯ
ಕಪ್ಪಿನಲಿ ಕಂಗೆಟ್ಟೆ ಕೆಟ್ಟೆನನಾಥನೆಂದೆನಲು
ತಪ್ಪಿದಡೆ ಶಿಶು ತಾಯ್ಗೆ ಶಿಶುವಿಗೆ
ತಪ್ಪುವಳೆ ಕಾರುಣ್ಯನಿಧಿ ನೀ
ತಪ್ಪ ಹಾರುವಡುಂಟೆ ಬೇಱನ್ನೆನಗೆ ಗತಿಯೆಂದ ೨೮

ಅಂಗಿಗಂಗ ಕೃತಾಪರಾಧದ
ಭಂಗದಲಿ ಮಾನಚ್ಯುತಿಯೆ ಸ
ರ್ವಾಂಗಿಯಹ ನಿನ್ನಂಗವಲ್ಲಾ ಸುರನರೋರಗರು
ಜಂಗಮ ಸ್ಥಾವರಗಳಿಂದಹ
ಭಂಗವಾವುದು ಭಾಪು ಕರುಣಾ
ಪಾಂಗ ಸಂಸಾರಿಕನೆ ಶರಣಾಗೆಂದನಮರೇಂದ್ರ ೨೯

ಎಂದು ಚರಣದಲೆಱಗಿ ಕರುಣಿಸು
ತಂದೆ ಕೃಷ್ಣ ಕೃಪಾನಿಧಿಯೆ ಗೋ
ವಿಂದ ಗೋಕುಲರಕ್ಷಕನೆ ತ್ರಿಮದಾಂಧ ಶಿಕ್ಷಕನೆ
ಇಂದಿರಾವಲ್ಲಭನೆ ದೇವ ಮು
ಕುಂದ ರಕ್ಷಿಸೆನುತ್ತಿರಲು ನಗು
ತೆಂದನಸುರಾರಾತಿ ಘನ ಗಂಭೀರ ವಚನದಲಿ ೩೦

ಮಱೆದು ನೀನಿರಲಾಗದೆಂದೆ
ಚ್ಚಱಿಸಲೋಸುಗ ಮಗನೆ ಮಖವನು
ನೆಱೆ ವಿಭಾಡಿಸಿದೆನು ಮಹೇಂದ್ರ ಶ್ರೀಮದಾದ್ಯರನು
ಮುಱನನು ಗ್ರಹಿಸಿದೆನು ಮನದಲಿ
ಕೊಱತೆಯನು ತಾಳದಿರು ತನ್ನುವ
ನಱಿಯಲೀಯದಲೈ ಮದಾಂಧತಮಿಸ್ರವೀ ಜಗದ ೩೧

ಮತ್ತರಿಂಗೆನ್ನಲ್ಲಿ ಮತಿ ನಿ
ವರ್ತಿಸದು ತನಗಾ ಮದಾಂಧರ
ಮೊತ್ತದಲಿ ಕೃಪೆ ಸೇರಲಱಿಯದು ಕೇಳು ನಿಜಮತವ
ಕತ್ತಲೆಗೆ ಬೆಳಕಿಂಗೆ ಸೇರುವೆ
ಯೆತ್ತಣದು ನೀನಂಜದಿರು ನಿಜ
ಭೃತ್ಯನಲ್ಲಾ ಯೆನುತ ಮೈದಡವಿದನು ಸುರಪತಿಯ ೩೨

ಹೋಗು ಮಗನೆ ಮದಾಂಧತನಕೊಳ
ಗಾಗದೆನ್ನಾಜ್ಞೆಯನು ಮಾಡುವ
ನಾಗಿ ನಿನ್ನಧಿಕಾರದಲಿ ನೀನಿಹುದು ಗರ್ವಿಸದೆ
ಲೋಗರಂತಿರೆ ವಿಷಯನಿಸ್ಪೃಹ
ನಾಗಿ ವಿಶ್ವಾಸವನು ಮಾಡದೆ
ಯೋಗ ಸುಖ ಸಂಪನ್ನನಾಗಿಹುದೆನುತ ನೇಮಿಸಿದ ೩೩

ಬಂದು ಪಾದಾವನತನಾದ ಪು
ರಂದರಂಗಭಯವನು ಕೊಡುತ ಮು
ಕುಂದನಾ ಸುರಭಿಯನು ಮನ್ನಿಸುತುಚಿತ ವಚನದಲಿ
ತಂದೆ ಕೃಷ್ಣ ಕೃಪಾನಿಧಿಯೆ ಗೋ
ವಿಂದ ಗೋಕುಲದರಸ ಮುನಿಜನ
ವಂದ್ಯ ಚಿತ್ತಯಿಸುವುದು ಬಿನ್ನಪವೆಂದಳಾ ಸುರಭಿ ೩೪

ವಿಕ್ರಮ ಶ್ರೀ ಮದದಲೊಡೆಯಂ
ಗಕ್ರಮವನಾಚರಿಸಿ ಭಯದಲು
ಪಕ್ರಮಿಸಲಜನಲ್ಲಿಗಾಜ್ಞಾಪಿಸಿದನಜನೆನಗೆ
ಶಕ್ರ ಸಹಿತಲೆ ತಾಯೆ ಕೃಷ್ಣಂ
ಗಕ್ರಿಯಂಗಭಿಷೇಕವನು ಜಿತ
ವಿಕ್ರಮಂಗಾಚರಿಸಿ ಬಹುದು ಮನುಷ್ಯ ವಿಗ್ರಹಗೆ ೩೫

ಎಂದಡಜನಾಜ್ಞೆಯಲಿ ತಾನೈ
ತಂದೆನಭಿಷೇಕವನು ಮಾಡಿಸ
ಲಿಂದನುಜ್ಞೆಯನೀವುದೆನಗೆಲೆ ದೇವ ಗೋಕುಲಕೆ
ಇಂದ್ರನಾದುದಱಿಂದ ನೀ ಗೋ
ವಿಂದನಾಗಲೆವೇಳ್ಕೆನುತ ಸಾ
ನಂದದಲಿ ಬೇಡಿದಳನುಜ್ಞೆಯನಮರಕುಲಧೇನು ೩೬

ಪಾಕಶಾಸನನಕ್ರಮವ ಜಗ
ದೇಕನಾಥನು ಮಱೆದು ಮಗುಳಭಿ
ಷೇಕಕಿತ್ತನನುಜ್ಞೆಯನು ಬಹುದೆಂದು ಡಂಗುರವ
ನಾಕಪತಿಯವರೆಸಗಲೆಲ್ಲಾ
ಲೋಕಪಾಲರು ಸಹಿತ ಭುವನಾ
ನೀಕ ಜನವೈತಂದುದೊಂದೇ ನಿಮಿಷ ಮಾತ್ರದಲಿ ೩೭

ಬಂದುದಜಭವಮುಖ್ಯ ಸುರಮುನಿ
ವೃಂದವಾ ಲೋಕಾಧಿಪತಿಗಳ
ವೃಂದವಾ ಗಂಧರ್ವ ಕಿನ್ನರ ಸಿದ್ಧ ಜನವೃಂದ
ಸಂದ ಚಾರಣ ಯಕ್ಷ ರಾಕ್ಷಸ
ವೃಂದವೊಪ್ಪಿರಲಮರವನಿತಾ
ವೃಂದವಾ ವೃಂದಾವನಾಂತರಕಂದು ನಲವಿನಲಿ ೩೮

ವಿಷ್ವರಶ್ರವಗೆಂಟು ದಿಕ್ಕಿನ
ಲಷ್ಟ ದಿಗ್ಗಜಗಳು ಕರಾಗ್ರೋ
ತ್ಕೃಷ್ಟ ತೀರ್ಥಜಲಂಗಳಲಿ ಪಂಚಾಮೃತಂಗಳಲಿ
ತುಷ್ಟಿವಡಿಸಿದರಚ್ಯುತನನುಪ
ವಿಷ್ಟ ಮಾರ್ಗ ಮಹಾಭಿಷೇಕ ವಿ
ಶಿಷ್ಟ ಮಂತ್ರಗಳಲಿ ವಿಪ್ರೋತ್ತಮರು ವಿವರಿಸಲು ೩೯

ಪಾಡಿದರು ಗಂಧರ್ವರೊಪ್ಪಿರ
ಲಾಡಿದರು ದೇವಿಯರು ನೃತ್ಯವ
ನೀಡಿಜೀವ ನವ ಗುಣ ರಸಾಲಂಕಾರ ರಂಜಿಸಲು
ತಾಡಿಸುವ ಬಹು ವಿಧದ ವಾದ್ಯದ
ಜೋಡಣೆಯ ಮಂಗಳತೆ ಮೆಱೆಯಲು
ಮಾಡಿದರು ಮುರವೈರಿಗಭಿಷೇಕದ ಮಹೋತ್ಸವವ ೪೦

ಆದುದಭಿಷೇಕದ ಮಹಾ ಸಂ
ಪಾದನದ ಮಂಗಳತೆ ಮಿಗೆ ದಾ
ಮೋದರಗೆ ಬ್ರಹ್ಮಾಂಡ ನಿಕರ ನಿವೇಶಿತೋದರಗೆ
ವೇದ ವೇದ್ಯಂಗಜಭವೇಂದ್ರ ಸು
ರಾದಿ ವಂದ್ಯಂಗನುಪಮ ಗುಣಾಂ
ಬೋದಧಿಗೆ ಕೃಷ್ಣಂಗೆ ನಿಜಸುಖಪೂರ್ಣಕೃಷ್ಣಂಗೆ ೪೧

ಮಲ್ಲಿಗೆಯ ಮಳೆ ಸುರಿದುದಂಬರ
ವೆಲ್ಲ ತನ್ಮಯವೆನಲು ಸುರವರ
ವಲ್ಲಭೆಯರಂಜಲಿ ಪುಟಾಭ್ರನಿಕಾಯದಿಂದಿಳಿಗೆ
ಫುಲ್ಲನಾಭನನಮಳ ಲಕ್ಷ್ಮೀ
ವಲ್ಲಭನನೋರಂತೆ ಪೊಗಳುವ
ಸಲ್ಲಲಿತ ಮೂರ್ತಿಯನು ವಿಸ್ತರಿಸುವವರೊಪ್ಪಿದರು ೪೨

ಸುರಭಿ ನಿಜ ಪಂಚಾಮೃತದಲಂ
ಬುರುಹನಾಭನ ದಣಿಸಿ ದಣಿದುದು
ಸುರನರೋರಗ ವೃಂದಸಹಿತ ಚರಾಚರವ್ರಾತ
ಕರಣ ನಿರ್ಮಳವಾಯ್ತು ಕಾಪುರು
ಷರಿಗೆ ದುಃಖಿಗಳೆಲ್ಲ ನಿಜಸುಖ
ಭರಿತರಾದರು ಪಾಪಿಗಳು ಪುಣ್ಯಾತ್ಮರೆನಿಸಿದರು ೪೩

ಸರ್ವಗತನಭಿಷೇಕದಲಿ ಸಲೆ
ಸರ್ವ ಭೂತನಿಕಾಯ ನಿರ್ಜಿತ
ಗರ್ವಮದಮತ್ಸರಗಳಾದವು ಜಾತಿವೈರವನು
ನಿರ್ವಹಿಸದೊಂದೊಂದಜಲಿ ಚಾ
ತುರ್ವಿಧ ಪ್ರಾಣಿಗಳು ಪರಮ ಸು
ಪರ್ವಪದ ಪರಿವಿಷ್ಟವಾದುವು ನರಕಿಗಳು ಸಹಿತ ೪೪

ತರುಗಳಲಿ ಮಧುಧಾರೆಗಳು ಗಿರಿ
ಗಿರಿಗಳಲಿ ರತ್ನಾವಳಿಯು ಸರ
ವರಗಳಲಿ ಮುತ್ತುಗಳು ನದಿ ನದಗಳಲಿ ರಸಭೇದ
ಧರೆಗಳಲಿ ರಾಜಾನ್ನ ಸರ್ವೋ
ರ್ವರೆಗಳಲಿ ಬಿತ್ತದೆ ಸುಧಾನ್ಯೋ
ತ್ಕರಗಳುದುಭವಿಸಿದವು ಪೃಥ್ವೀಪಾಲ ಕೇಳೆಂದ ೪೫

ಕಮಲಭವಭ ವಮುಖ್ಯ ವಿಬುಧೋ
ತ್ತಮರು ಸನಕಾದ್ಯಖಿಳ ಮುನಿಸ
ತ್ತಮರು ನಾರದ ಮುಖ್ಯ ಭಾಗವತೋತ್ತಮೋತ್ತಮರು
ಕಮಲನಾಭನ ದಿವ್ಯ ಗುಣಗಣ
ವಿಮಳ ಸುಧೆಯನು ಮೂರ್ತಿ ಲಕ್ಷ್ಮಿಯ
ನಮನು ಬಣ್ಣಿಸಿ ಮಾಣದೋಲಾಡಿದರು ಹರುಷದಲಿ ೪೬

ಬೀಳುಕೊಂಡರು ಮನೆಗಳಿಗೆ ಜನ
ಜಾಲವಾ ಕೃಷ್ಣನನು ಮನದಲಿ
ನಾಲಗೆಗಳಲಿ ಬೀಳುಗೊಳಲಱಿಯದೆ ತದಾಕೃತಿಯ
ಆಲಿಸುತ ಬಣ್ಣಿಸುತ ತಂತ
ಮ್ಮಾಲಯಕೆ ನಿತ್ಯಾತ್ಮನುನ್ನತ
ಲೀಲೆಯನು ಸಂತೋಷದಲಿ ಪಾಡುತ್ತ ತಮತಮಗೆ ೪೭

ಇಪ್ಪತ್ತ ಮೂರನೆಯ ಸಂಧಿ ಮುಗಿಯಿತು.

# ಇಪ್ಪತ್ತನಾಲ್ಕನೆಯ ಸಂಧಿ

ವರುಣಪುರಯಾತ್ರೆಯನು ವಿಶ್ವಂ
ಭರನು ವಿರಚಿಸಿ ತಂದೆಯನು ಮಂ
ದಿರಕೆ ಮಗುಳೊಡಗೊಂಡು ಬಿಜಯಂಗೈದನಸುರಾರಿ

ನಂದನೊಂದೇಕಾದಶಿಯಲಾ
ನಂದದಿಂದುಪವಾಸವನು ನಲ
ವಿಂದ ವಿರಚಿಸಿ ವಿಷ್ಣುಚರಿತ ಕಥಾ ಪ್ರಸಂಗದಲಿ
ಮಿಂದು ಬಹೆನಿನನುದಯವಾಯ್ತಿದೆ
ಯೆಂದಪರರಾತ್ರೆಯಲಿ ಬರೆ ಕಾ
ಳಿಂದಿಗೊಯ್ದರು ವರುಣದೂತರು ವರುಣನಿರ್ದೆಡೆಗೆ ೧

ಬಂದು ನೀರೊಳು ಮುಳುಗಲಂದಾ
ನಂದನನು ಗೋವಳರು ಕಾಣದೆ
ಹೊಂದಿದನೆನುತ್ತೈದೆ ತಮತಮಗಱಸಿ ಕರೆಕರೆದು
ತಂದೆ ಹಾಹಾ ಕೃಷ್ಣ ಹಾ ಗೋ
ವಿಂದ ಗೋಕುಲದರಸ ಹಾಹಾ
ಯೆಂದೆನುತ ಕಂಗೆಟ್ಟು ಕಳವಳಿಸಿತ್ತು ಜನನಿವಹ ೨

ಆ ದನಿಯನಾಲಿಸುತ ಬಂದಾ
ಮಾಧವನು ಮನದೊಳಗೆ ಕಾಲ ವಿ
ರೋಧ ಕೃತಕವಿದಾದುದಾಸುರ ವೇಳೆಯದಱಿಂದ
ಸಾಧಿಸಿದರೈ ವರುಣಭೃತ್ಯರು
ಬಾಧಿಸದೆ ತಂದೆಯನು ತಪ್ಪೇ
ನಾಧಿಕಾಱಿರು ಜಲಕೆ ನೀವಿದಕಂಜಬೇಡೆಂದ ೩

ಚಿಂತೆ ಬೇಡಿದೆ ಬಹೆನು ವರುಣ ಪು
ರಾಂತಿಕಕೆ ತಾ ಹೋಗಿ ಬಪ್ಪಂ
ಗಂತಕನ ಭಯವಿಲ್ಲ ಬಾಹಿರವಲ್ಲ ನಿಜವಚನ
ಸಂತವಿರಿ ನೀವೆನುತ ಲಕ್ಷ್ಮೀ
ಕಾಂತನಾ ಗೋಕುಲದ ಜನವನು
ಸಂತವಿಸಿ ವರುಣಾಲಯಕೆ ವರದೇವನೈತಂದ ೪

ದೇವ ದೇವನ ಬರವನಾ ಯಾ
ದೋವಿಶೇಷಾಧಿಪನು ಕೇಳುತ
ಜೀವವೇ ಬಂದಂತೆ ಬಹಳಾನಂದದಲಿ ಮುಳುಗಿ
ಆವ ಧನ್ಯನೊ ತಾನೆನುತ ಸದು
ಭಾವಭಯಭಕ್ತಿಯಲಿ ನಿಜಜನ
ದೇವಜನಸಹಿತಿದಿರುಗೊಂಡನು ವಿದಿತ ವಿಭವದಲಿ ೫

ಒಸಗೆವಱೆಯಲಿ ಬಹಳ ಕಹಳಾ
ವಿಸರದಲಿ ಕೊಂಬುಗಳ ಶಂಖ
ಪ್ರಸರರವದಲಿ ಕಳಶ ಕನ್ನಡಿ ತೋರಣಂಗಳಲಿ
ಮಿಸುಪ ಕಂಗಳ ಕಮಲಮುಖಿಯರ
ವಿಸರದಲಿ ಕೃಷ್ಣನನು ಚಮರೋ
ಲ್ಲಸಿತ ಧವಳಚ್ಛತ್ರದಲಿ ನಡೆತಂದನಿದಿರಾಗಿ ೬

ಪಾಶಿ ಪರಮೋತ್ಸವದಲಂದಾ
ವಾಸುದೇವನನೆಸೆವ ನಿಜ ಸಿಂ
ಹಾಸನದಲೊಪ್ಪಿರಲು ನಂದನ ಕೂಡೆ ಕುಳ್ಳಿರಿಸಿ
ಏಸು ಜನ್ಮಾಂತರದ ಸುಕೃತದ
ರಾಶಿಯೋ ದೇವರ ಪದಾಬ್ಜವಿ
ಳಾಸ ಲಕ್ಷ್ಮಿಯ ದರುಶನವ ಮಾಡಿಸಿತು ನನಗೆಂದ ೭

ಸಕೃತು ನಿನ್ನಂಘ್ರಿಯನು ಯೋಗ
ಪ್ರಕೃತಿಗಳು ಕಾಣಿಸರು ನಿಗಮ
ಪ್ರಕರ ಮಸ್ತಕ ನಿಕರವೈದವು ಪಾದರೇಣುಗಳ
ಅಕಟ ತನಗಿನ್ನಾವ ಜನ್ಮ
ಪ್ರಕರಯೋಗದ ಸಿದ್ಧಿಯೋ ಸ
ಮ್ಮುಖಕೆ ತಂದುದು ದೇವರಂಘ್ರಿದ್ವಯವನಿದನೆಂದ ೮

ಚಿತ್ತವಿಸು ನನಗಿಂದು ದೇಹವ
ಹೊತ್ತುದಕೆ ಫಲವಾಯ್ತು ದೇವರು
ಚಿತ್ತವಿಸಿದಧಿಕಾರವಿಂದಿನಲಿಷ್ಟವಾಯ್ತೆನಗೆ
ಎತ್ತಲಾನಮರಾಧಮಾಧಮ
ನೆತ್ತಲೀ ಭವದೀ ಸುರಾರ್ಚಿತ
ಚಿತ್ರ ಮಂದಿರ ಚರಣ ಯುಗಳ ಸಮಕ್ಷವೆನಗೆಂದ ೯

ಸ್ತುತಿಸುವೆನು ತಾನೆಂತು ನಿಗಮ
ಸ್ತುತಿ ವಿದೂರನನೆಂತು ಪೂಜಿಸಿ
ಮತಿಗೆ ತುಷ್ಟಿಯ ಮಾಳ್ಪೆನಖಿಳ ಚರಾಚರಾತ್ಮಕನ
ಕ್ರತುಮಯನೆ ತದ್ರವ್ಯ ಮಂತ್ರ
ಶ್ರುತಿಮಯನೆ ತದ್ದೇವತಾಸ
ನ್ಮತಿಮಯನೆ ಸರ್ವಾತ್ಮಕನೆ ಪೊಡವಂಟೆ ನಾನೆಂದ ೧೦

ದೇವ ಭಕ್ತಕೃತಾಪರಾಧದ
ಪಾವಕನ ಬೇಗೆಯಲಿ ತನ್ನೆದೆ
ಬೇವುತಿದೆ ನಿಮ್ಮಯ್ಯನನು ತಂದರು ಮದಂತಿಕಕೆ
ಕಾವುದೆನ್ನನು ಪರಮ ಕಾರು
ಣ್ಯಾವಲೋಕನ ದೃಷ್ಟಿಯಲಿ ರಾ
ಜೀವಲೋಚನ ಯೆನುತ ಬಿನ್ನಹ ಮಾಡಿದನು ವರುಣ ೧೧

ನೆವದಲೆನಗೆಲೆ ದೇವ ದೇವ
ಪ್ರವರ ಪದಯುಗದರುಶನದ ಭಾ
ಗ್ಯವನು ಪಡೆದನು ಪರಮ ಕಾರುಣಿಕೋತ್ತಮನೆ ಪಿತನ
ಅವನಿಗೊಯ್ಯುವುದು ದೇವ ನಿಜಜನ
ನಿವಹ ದಾಸರ ದಾಸನೆಂದೆ
ನ್ನುವನು ಕರುಣದಲೀಕ್ಷಿಸುವುದೆನುತೆಱಗಿದನು ಪದಕೆ ೧೨

ಎತ್ತಿದನು ವೈದಡವಿ ವರುಣನ
ನೆತ್ತಿಯಲಿ ಕೈಯಿಟ್ಟು ಬೆದಱದಿ
ರುತ್ತಮೋತ್ತಮ ದಾಸನೆನಗಂಜದಿರು ನೀನಿದಕೆ
ಚಿತ್ತದಲಿ ಮಱೆಯದಿರು ತನ್ನನು
ನಿತ್ಯವಲ್ಲೀ ವಿಭವ ಮಂಜಿನ
ಮೊತ್ತ ಮೆಱೆವ ಮಹೇಂದ್ರಜಾಲವಿದೆಂದನಸುರಾರಿ ೧೩

ಅಱಿತಡಿಲ್ಲಪರಾಧವೆನ್ನನು
ಮಱದಡಪರಾಧಿಗಳು ನಿಮಗಿಂ
ದುಱುವ ಜಗದೀಶ್ವರನು ಜಗದಧಿದೈವ ತಾನೆಂದು
ಮಱೆಯದಿರು ನೀನೆನ್ನ ನೆನುತೆ
ಚ್ಚಱಿಸಿ ನಿಜವನು ವರುಣನನು ಪದ
ಕೆಱಗಲೆತ್ತಿದನಪ್ಪಿದನು ಕರುಣದಲಿ ತಲೆದಡವಿ ೧೪

ಎಂದು ಕಳುಹಿಸಿಕೊಂಡು ತನ್ನಯ
ತಂದೆ ಸಹಿತನುಗತ ಸುರೋತ್ತಮನು
ವೃಂದವನು ಬೀಳ್ಕೊಳಿಸಿ ಸತ್ಕೃತನಾಗಿ ಗೋಕುಲಕೆ
ಬಂದನಪಗತ ಜೀವನೈತ
ಪ್ಪಂದದಲಿ ನಿಜಜನಕೆ ಪರಮಾ
ನಂದವನು ಮಾಡುತ್ತ ಗೋಕುಲದರಸನೊಲವಿನಲಿ ೧೫

ಹೊಂದಿದಸು ಬಂದಂತೆ ಬಂದಾ
ನಂದ ಗೋಪನನಪ್ಪಿ ಗೋಪರ
ವೃಂದವಾ ಗೋವಿಂದನನು ತಕ್ಕವಿಸಿ ವೈದಣಿಯೆ
ಕಣ್ದಣಿಯೆ ಕಮನೀಯ ಮೂರ್ತಿಯ
ನಂದು ನಡೆ ನೋಡುತ್ತ ಮುನಿಜನ
ದಂದದಲಿ ಮುಳುಗಾಡಿದರು ನಿಜಸುಖ ರಸಾಬ್ಧಿಯಲಿ ೧೬

ತನ್ನ ಮಗನಾ ವಿಷ್ಣುವೆಂಬುದ
ನನ್ಯ ಮುಖದಿಂದಱಿತು ವರುಣನ
ಮನ್ನಣೆಯನಖಿಳಾಮರರ ಸೇವಾ ಮಹೋತ್ಸವವ
ತನ್ನ ಮನದಲಿ ನೆನೆನೆನೆದು ಸಂ
ಪನ್ನನತಿ ಬೆಱಗಾಗಿ ಭಕುತಿ ಸು
ಧಾರ್ಣವದಲೋಲಾಡುತಿರ್ದನು ನಂದನಡಿಗಡಿಗೆ ೧೭

ದಣಿಸಿ ಗೋದ್ವಿಜ ದೇವ ಸಂತ
ರ್ಪಣ ಮುಖದಲಖಿಲರನು ಸುಖಪಾ
ರಣೆಯ ಮಾಡಿದನಖಿಳ ಜಗದಾತ್ಮಕನನೊಡಗೊಂಡು
ತೃಣವಲಾ ನಂದಂಗೆ ಮಝು ಭಾ
ಪೆಣಿಸುವರೆ ಕೈವಲ್ಯ ಸುಖ ಧಾ
ರುಣಿಯಲಾರು ಕೃತಾರ್ಥರಾ ಗೋಕುಲದ ಜನರಂತೆ ೧೮

ನಂದ ಹೇಳೇನಾಯ್ತು ನಿನಗೆ
ಲ್ಲಿಂದ ದಿವ್ಯಾಂಬರ ವಿಭೂಷಣ
ವೃಂದವೀ ವರಗಂಧ ಮಾಲ್ಯಾಲಂಕರಣನಿಚಯ
ಬಂದವಿವು ಭಾಪುರೆ ಸಭಾಗ್ಯರ
ತಂದೆಯಲ್ಲಾ ಹೇಳು ತನುಗಿದ
ನೆಂದೆನಲು ಗೋವಳರಿಗಂದಾ ನಂದನಿಂತೆಂದ ೧೯

ಕೇಳಿರೈ ದಿಟ ಕೃಷ್ಣನನು ಗೋ
ಪಾಲನೆಂದೇ ಬಗೆದು ನಿಮ್ಮೊಳ
ಗೇಳಿದಿಕೆಯನು ಮಾಡದಿರಿ ಹೇಳುವೆನು ನಿಮಗೊಂದ
ಭೂಲಲನೆ ಭಾರದಲಿ ಕುಸಿದಡಿ
ಗಾಳುತಿರೆ ಹೆಣ್ಬುಯ್ಯಲನು ತಾ
ಕೇಳಿ ಸಾಕ್ಷಾದ್ವಿಷ್ಣು ಬಂದವತರಿಸಿದನು ಧರೆಗೆ ೨೦

ವರುಣಪುರಕಾ ಹೋದೆನೆನ್ನನು
ಪರಮ ದಿವ್ಯಾಸನವನಿತ್ತಾ
ದರಿಸಿ ನಿಜದೂತರನು ಜಱಿದು ದುರಾತ್ಮರೆಂದೆನುತ
ಕರಯುಗವ ಮುಗಿದೆನಗೆ ಸುರನುತ
ಚರಣನುಪಚರಿಸಿದನು ತಾನದ
ನೊರೆಯಲಱಿಯೆನು ನೋಡಿ ಮಿಗೆ ಬೆಱಗಾದೆ ನಾನೆಂದ ೨೧

ಈತ ಕಾಣಿರೆ ನಮ್ಮೊಡೆಯ ಸಾ
ಕ್ಷಾತ ಸಕಲ ಜಗಚ್ಚರಾಚರ
ಚೇತನಾತ್ಮಕ ವಿಷ್ಣುವಿದೆ ಪಿತನಾದ ಗಡ ನಮಗೆ
ಈತನೇ ಸಾಕ್ಷಾತು ಹರಿಯೆಂ
ದೋತು ತನ್ನನು ಸಕಲ ವಿಬುಧ
ವ್ರಾತವದು ಬೆಱಗಾಗಲೋಲೈಸಿದನು ನಿಜಪದವ ೨೨

ಬರಲು ಬಳಿಕೀ ಕೃಷ್ಣನನು ವಿ
ಸ್ತರದ ವಿಭವದಲಿದಿರುಗೊಂಡುಪ
ಚರಿಸಿ ಕುಳ್ಳಿರ್ದೆನ್ನ ದಿವ್ಯೋತ್ತಮ ವರಾಸನದ
ಹೊರೆಯಲೇ ಕುಳ್ಳಿರಿಸಿ ಸಕಲಾ
ಮರರು ಸಹಿತರ್ಚಿಸುತ ಹೊಗಳಿದ
ನುರುತರಾಮಳ ಮೂರ್ತಿಯನು ತಲೆವಾಗಿ ವಿನಯದಲಿ ೨೩

ನೀನು ಸಾಕ್ಷಾದ್ವಿಷ್ಣುವೆಂದೇ
ಸೂನುವನು ಕೃಷ್ಣನನು ಮನ್ನಿಸಿ
ಮಾನನೀಯ ಚರಿತ್ರನನು ಮಿಗೆ ಭಕ್ತಭಾವದಲಿ
ಏನು ಬೆಸನೇನೆನುತ ವರುಣನು
ಮಾನವರ ಶಿಶು ಕೃಷ್ಣನಂಘ್ರಿಗೆ
ತಾನೆಱಗಿ ಕೈವಾರಿಸಿದನೇನೆಂಬೆನದುಭುತವ ೨೪

ವರುಣನೆನಗೊಲಿದಿತ್ತ ವಸ್ತ್ರಾ
ಭರಣವಿವು ವರಗಂಧಮಾಲ್ಯೋ
ತ್ಕರವಿದಕೆ ಸಂದೇಹವಿಲ್ಲೀ ಕೃಷ್ಣನಾರೆಂದು
ನರರು ತಾವಿದನಱಿಯರಿಂತ
ಚ್ಚರಿಯಲಾ ಗೋವರ್ಧನಾದ್ರಿಯ
ಧರಿಸಿ ನಿಲುವ ಸಮರ್ಥರಾರು ಮನುಷ್ಯರೊಳಗೆಂದ ೨೫

ಗರ್ಗನೆನಗೇಕಾಂತದಲಿ ಮುನಿ
ವರ್ಗವಂದ್ಯನು ಕರುಣಿಸಿದನಪ
ವರ್ಗಮೂರುತಿ ವಿಷ್ಣುವೆಂದೇ ಕೃಷ್ಣನನು ಮುನ್ನ
ವರ್ಗಿಸುತನಾಮಂಗಳನು ಮುನಿ
ನಿರ್ಗಮಿಸಲಲ್ಲಿಂದ ನನಗಾ
ಸ್ವರ್ಗದಿರವಿಂದಧಿಕವಹ ಸುಮ್ಮಾನವಾಯ್ತೆಂದ ೨೬

ಹೇಳಿದರು ದಿಟ ನಾರದಾದ್ಯರು
ಕೇಳಿರೈ ನೀವಿದನು ಲಕ್ಷ್ಮೀ
ಲೋಲನಹ ಸಾಕ್ಷಾತ ವಿಷ್ಣುವೆ ಕೃಷ್ಣನೆಂಬುದನು
ಹೇಳಲಮ್ಮೆನು ಕಾಳಿಯೋಗ್ರ
ವ್ಯಾಳನನು ದಮಿಸಿದ ಕರಾಗ್ರದ
ಲೀಳುದಿನ ಗಿರಿಧಾರಣವ ಮಾಳ್ಪವರದಾರೆಂದ ೨೭

ಮಾತು ಹಲವರಲೇನುಫಲ ಸಂ
ಜಾತಶಿಶು ಮೊಲೆಯುಂಡು ಕಳೆಯನೆ
ಪೂತನಿಯ ಜೀವವನು ತೊಟ್ಟಿಲ ತಳದ ಭಂಡಿಯನು
ಘಾತಿಸನೆ ಮೃದುತಳ ಪದಾಗ್ರ ವಿ
ಘಾತಿಯಲಿ ಕೃಷ್ಣನನು ನರನೆಂ
ದೇತಱಿಂದಾವೆಂಬೆವೀತನನೆಂದನಾ ನಂದ ೨೮

ದೃಷ್ಟವಲ್ಲಾ ಮನೆಯ ದಾಮವು
ಕಟ್ಟಲೈದವು ನಡುವನೊರಳಲಿ
ಕಟ್ಟುವಡೆದವರಾರು ಬಳಿಕಾ ಮೊದಲ ದಾಂಬಿನಲಿ
ಕಟ್ಟುವಡೆದವನೆತ್ತ ಮರಗಳ
ಥಟ್ಟುಗೆಡಹುವುದೆತ್ತ ಹೊಗಳಲು
ಭಟ್ಟನೇ ತಾನೆನುತ ಪೊಂಪುಳಿಯೋದನಾ ನಂದ ೨೯

ಕಾಲುವಿಡಿದೀಡಾಡಿ ವತ್ಸನ
ಸೀಳಿ ಬಕನನು ಫಣಿಯೊಡಲ ಗೋ
ನಾಳಿಯಲಿ ತನುವೆಳದು ಧೇನುಕನನು ಸಬಾಂಧವರ
ಕಾಲನನು ಕಾಣಿಸಿದ ತನ್ನೀ
ಬಾಲಕನ ವಿಕ್ರಮವನೇನನು
ಹೇಳುವೆನು ದಿಟ ವಿಷ್ಣುವಾಗದೆ ಮಾಣನಿವನೆಂದ ೩೦

ನರರ ಶಿಶು ಗಡ ವರುಣಪುರದೆ
ನ್ನಿರವನಱಿವುದದೆತ್ತ ಸುರರಾ
ದರಿಸಿ ಪೂಜಿಪುದೆತ್ತಲೀ ಕೃಷ್ಣಂಗೆ ಕೈಮುಗಿದು
ಶಿರವನೆಱಗುವುದೆತ್ತಲಮರೇ
ಶ್ವರರು ಶಿಶುವಿನ ವಿಷ್ಣುಮಾಯಾ
ಚರಿತ ಪರಮರಹಸ್ಯ ಮುದ್ರೆಯನಱಿವರಾರೆಂದ ೩೧

ಎಂದಡೆಂದರು ಗೋಪರೆಲೆಯೆಲೆ
ನಂದ ಸಂಶಯವಿಲ್ಲ ನೀನೀ
ಗೆಂದ ನುಡಿ ಹುಸಿಯಲ್ಲ ಕಾರಣಮೂರ್ತಿಯೀ ನಿನ್ನ
ಕಂದನಿಂದೀ ವರಣಪುರವನು
ತಂದೆ ತೋಱಿಸಿದಂತೆ ತನ್ನಯ
ಮಂದಿರವ ತೋಱಿಸನೆ ನಿಜ ವೈಕುಂಠ ಪುರವರವ ೩೨

ಅದನಱಿತು ಮುರವೈರಿ ಕಾರು
ಣ್ಯದಲಿ ತನ್ನೊಳಗೆಂದನೀ ಭವ
ದೊದವಿದೀ ತಾಪತ್ರಯದ ಬೇಗೆಯಲಿ ಬೆದೆಬೆಂದು
ಕುದಿವ ಮರ್ತ್ಯರಿಗೆನ್ನ ನಿಜವಹ
ಪದವ ತೋಱಿ ಪರಾಮೃತಾನಂ
ದದಲಿ ಮುಳುಗಿಸದಿದ್ದಡಿಲ್ಲವಸಾನವಿದಕೆಂದ ೩೩

ಊರ ಸುಖವನು ಬಲ್ಲರೇ ಕಾಂ
ತಾರ ಪಥಿಕರು ಬಲ್ಲರೇ ಸುರ
ವೀರ ಸೌಖ್ಯವನೇನ ಬಲ್ಲರು ನರಕವಾಸಿಗಳು
ಪಾರಮೇಷ್ಟ್ಯದ ತನ್ನ ನಿಜಪದ
ಸಾರಸುಖವಜ್ಞಾನ ಮೂಢ ಶ
ರೀರಿಗಳಿಗಳವಡದೆನುತ ಮನದೊಳಗೆ ಕರುಣಿಸಿದ ೩೪

ದೇವ ತಿರ್ಯಙ್ಮರ್ತ್ಯಯೋನಿ ಶ
ತಾವಳಿಗಳೊಳು ನೆಱೆಮಱೆದು ನಿಜ
ಭಾವವನು ಕಂಗೆಟ್ಟು ಹುಟ್ಟುತ ಸಾವುತಡಿಗಡಿಗೆ
ನೋವ ನಾನಾ ಕರ್ಮಕಾಲತ
ಮೋವಿಮೂಢಾತ್ಮರಿಗೆ ತನ್ನೀ
ಕೇವಲಾನಂದಾನುಭವವೆಂತಳವಡುವುದೆಂದ ೩೫

ಎಂದು ಮನದಲಿ ತಿಳಿದು ಗೋವಳ
ರಂದು ನೆನೆದುದನಕಟ ತನ್ನವ
ರೆಂದುದನೆ ಮಾಡುವುದು ನೆಱೆ ಕರ್ತವ್ಯವೆಂದೆನುತ
ಅಂದು ನಿಜ ವೈಕುಂಠವನು ಗೋ
ವಿಂದನಾ ಗೋ ಗೋಪ ಗೋಪೀ
ವೃಂದ ನಯನಂಗಳಿಗೆ ಗೋಚರವಾಗಿ ತೋಱಿಸಿದಾ ೩೬

ಕೋಟಿ ಸೂರ್ಯ ಸಹಸ್ರದೀಪ್ತಿ ಕ
ವಾಟವನು ತೆಱೆದಂತೆ ತನುವನು
ತಾಟಿಸುವ ತನುವೆಳಗಿನುಱುಳಿಯ ಕಾಲವಿಕ್ರಮದ
ಆಟವಿಲ್ಲದ ದೇಹಧರ್ಮದ
ಕೂಟವಿಲ್ಲದ ತತ್ವಮಸಿಯೆಡೆ
ಯಾಟವಿಲ್ಲದ ಪದವ ತುಱುಗಾಱರಿಗೆ ತೋಱಿಸಿದಾ ೩೭

ಚಾರು ದಿವ್ಯ ಚತುರ್ಭುಜದ ಸುಕು
ಮಾರ ಗಾತ್ರದ ಲೋಲತರ ಸರ,
ಸೀರುಹಾಕ್ಷದ ಮೆಱೆವ ಭಾಳದ ಹೊಳೆವ ಕುಂತಳದ
ನೀರದಾಭದ್ಯುತಿಯ ವಿಮಳೋ
ದಾರ ಪೀತಾಂಬರದ ಪರಿಜನ
ಪೌರ ಜನದಲಿ ಮೆಱೆವ ವೈಕುಂಠವನು ತೋಱಿಸಿದ ೩೮

ಮುಕುಟ ಕುಂಡಲ ಹಾರಮಣಿ ಮೌ
ಕ್ತಿಕ ಕನತ್ಕೇಯೂರ ಕಂಕಣ
ನಿಕರ ಕಾಂಚೀರಣಿತ ಚರಣಾಭರಣ ದೀಪ್ತಿಗಳ
ಪ್ರಕಟ ಸಾಕ್ಷ್ಯ ಸರೂಪ್ಯ ಸಾಮೀ
ಪ್ಯಕದ ಸಾಲೋಕ್ಯಾದಿ ಮುಕ್ತ
ಪ್ರಕರವೆಸೆವ ವಿಕುಂಠಪುರವನು ಕಂಡುದಖಿಳಜನ ೩೯

ಮೂಱು ಗುಣವನು ಕಳೆದು ಹಗೆಗಳ
ನಾಱಿಸೊಡೆಹೊಯ್ದೂರ್ಮಿಷಟ್ಕವ
ಮೀಱಿ ಷಡ್ಭಾವವನು ಷಟ್ಕೋಶಕದ ತನು ಧರ್ಮ
ತೋಱಿದಾನಂದಾನುಭವದೊಳ
ಗೋಱು ಗುಡಿಸುವ ಪರಮ ಮುಕ್ತರ
ತೋಱುಥಟ್ಟಿನಲೆಸೆವ ಹರಿಪುರ ಕಣ್ಗೆ ರಂಜಿಸಿತು ೪೦

ಅದಕೆ ಪರಮಸ್ವಾಮಿ ಲೋಕಾ
ಭ್ಯುದಯ ಕಾರಣಮೂರ್ತಿ ಲಕ್ಷ್ಮೀ
ಹೃದಯ ಸಂಕ್ಷೋಭಣಸಮರ್ಥ ನಿಜಾಂಘ್ರಿಯುಗಲಕ್ಷ್ಮಿ
ಪದುಮಭವಭವ ಶಕ್ರ ಮುಖ್ಯ
ತ್ರಿದಶಜನದುರ್ಧರ್ಷ ಮಾಯಾ
ಸ್ಪದವೆನಿಪ ಕೃಷ್ಣನನು ಕಂಡರು ವಿಷ್ಣುಪಾರ್ಶ್ವದಲಿ ೪೧

ಬ್ರಹ್ಮಪೂಜಿತನು ಸಗುಣ
ಬ್ರಹ್ಮಲಕ್ಷಿತ ವಿಗ್ರಹನ ಸು
ಬ್ರಹ್ಮ ಸೂಕ್ತ ಸಹಸ್ರಸಂಕೀರ್ತಿತಯಶೋನಿಧಿಯ
ಬ್ರಹ್ಮ ಕುಲದೈವವನು ಸಾಕ್ಷಾ
ದ್ಬ್ರಹ್ಮವಹ ಕೃಷ್ಣನನು ಕಂಡಾ
ಬ್ರಹ್ಮ ಪದದಲಿ ಮಱೆದರೀಸಂಸಾರ ವಿಭ್ರಮವ ೪೨

ಯೋಗಮಾಯಾಧೀಶ್ವರನು ನಿಜ
ಯೋಗ ಸಾಮರ್ಥ್ಯದಲಿತೋಱಿಸಿ
ಯೋಗಗಮ್ಯವೆನಿಪ್ಪ ನಿಜವೈಕಂಠ ಪುರವರವ
ಆಗಳಂತಿರೆ ಗೋಪಜನ ಬೆಱ
ಗಾಗಲುಪಸಂಹರಿಸಿ ಕರುಣಾ
ಸಾಗರನು ನಟಿಸಿದನು ನರಶಿಶುತನದ ನಾಟಕವ ೪೩

ಕನಸೊ ಮೇಣೀ ಕಂಡುದಿದು ಸಂ
ಜನಿತ ದೃಷ್ಟಿ ಭ್ರಮೆಯೋ ಹರಹರ
ನೆನಹು ನೆಗ್ಗದ ವಸ್ತು ಗೋಚರಿಸಿತ್ತು ಕಂಗಳಿಗೆ
ಇನಿತಕಾವು ಸಮರ್ಥರೇ ಕೃ
ಷ್ಣನ ಮಹಿಮೆ ತಾನಾಗದಿರದೆಂ
ದನಿತು ಜನ ಮುಳುಗಾಡಿದುದು ನಿತ್ಯಾತ್ಮ ಸುಖದೊಳಗೆ ೪೪

ಇಪ್ಪತ್ತನಾಲ್ಕನೆಯ ಸಂಧಿ ಮುಗಿಯಿತು.

# ಇಪ್ಪತ್ತೈದನೆಯ ಸಂಧಿ

ಗೋಪಿಯರು ಗೋವಿಂದನಗ್ಗದ
ರೂಪಗುಣ ವೈಭವಕೆ ಮದನೋ
ದ್ದೀಪಿತಾತ್ಮೆಯರೈದಿದರು ಕಾನನಕೆ ವಶವಳಿದು

ಮೂಡಿದನು ಶಶಿ ಮೂಡದೆಸೆಯಲಿ
ಕೂಡೆ ಕಿರಣವ ಕೆದಱಿ ತಮವನು
ತೋಡಿ ತೆಗೆದನು ಸಕಲ ಸಚರಾಚರ ಜಗದ್ಧಿತವ
ಮಾಡಿದನು ಮೇದಿನಿಯ ತಾಪವ
ಝಾಡಿಸುತ ಸತ್ಪುರುಷರಂದದ
ಲೀಡಿಱಿವ ಘನ ಶೈತ್ಯದಲಿ ಜನಮನವ ರಂಜಿಸಿದ ೧

ಪಂಕಜದ ಮನೆಗಳನು ಮುದ್ರಿಸಿ
ಮುಂಕೊಳಿಸಿ ತುಂಬಿಗಳ ರಥವನು
ಪಂಕದಲಿ ನೈದಿಲಿನ ವೈದೇಱಿಂಗೆ ಪರುಠವಿಸಿ
ಸಂಕಲೆಗೆ ನೂಕಿದನು ವರ ಚ
ಕ್ರಾಂಕಯುಗಳವನಭ್ರದೊಳಗೆ ಶ
ಶಾಂಕ ನೃಪನೋಲಗವನಿತ್ತನು ರಾಜತೇಜದಲಿ ೨

ಕೆಲಬರಿಗೆ ಹಿತನೆನಿಸಿ ನಯನೋ
ಜ್ವಲನೆನಿಸಿ ಸಚರಾಚರಕೆ ಶೀ
ತಳನೆನಿಸಿ ತಾನಿಲ್ಲದಿರ್ದರೆ ದುಃಖಕರವೆನಿಸಿ
ಕೆಲಬರಿಗೆ ಬೇಡೆನಿಸಿ ಜಾರಾ
ವಳಿ ರಥಾಂಗ ವಿಯೋಗಿ ಕಮಲಾ
ವಳಿಗೆ ಅಪ್ರಿಯವೆನಿಸಿ ರಾಜೋದಯವು ರಂಜಿಸಿತು ೩

ಲೋಕಹಿತಕರನಾಗಿ ವಿಷ್ಣುಪ
ದೈಕ ಸಂಶ್ರಿತನೆನಿಸಿ ಭುವನಾ
ನೀಕ ಪಾವನನಾಗಿ ಶೀತಳ ದೃಷ್ಟಿಯೆಂದೆನಿಸಿ
ಆ ಕೃತಿ ಪ್ರಿಯನಾಗಿ ಪೀಯೂ
ಷಾಕರನು ಬುಧರಂತೆಯಿರಲಾ
ಲೋಕಿಸುತ ಗೋವಿಂದನೈದಿದನಾವನಾಂತರವ ೪

ಓತವರಿಗೆನ್ನಂಗ ಲಕುಮಿಗೆ
ಸೋತವರಿಗಂದೊಲಿದು ಗೌರಿಯ
ಸೋತವರಿಗಿದು ಸಮಯವಿಷ್ಟಾರ್ಥವನು ಮಾಡುವರೆ
ಮಾತು ಮೈಲಿಗೆಯಹುದು ಮಱೆದಡೆ
ಘಾತಿಸುವನೀ ಕಾಮನೀ ತುಱು
ಗಾತಿಯರನೆಂದಸುರರಿಪು ವನಕೇಳಿಗೈತಂದ ೫

ಸಂಗಡಿಸಿ ಸಪ್ತಸ್ವರದ ಸಹ
ಜಂಗಳೆಸೆಯಲು ನಗುತ ನಿಂದು ತ್ರಿ
ಭಂಗಿಯಲಿ ಕಲ್ಪದ್ರುಮದ ಮಣಿಮಂಟಪದ ಮೇಲೆ
ಅಂಗನೆಯರನು ಸುರನರರ ಭುವ
ನಂಗಳನು ಮೋಹಿಸುತ ಬಹುರಾ
ಗಂಗಳನು ಪೊಂಗೊಳಳಲಸುರಾಂತಕನು ಬಾಱಿಸಿದ ೬

ಕೇಳುತವೆ ಸಂಗೀತವನು ಜಗ
ವಾಲಿಗಲ್ಲಾಯ್ತೇನನೆಂಬೆನು
ಬಾಲೆಯರ ಭಾವೋದಯೋದ್ದ್ಯೋತಿತ ಮನೋವ್ಯಥೆಯ
ಹೇಳಲೇನನುಗತ ಚರಾಚರ
ಜಾಲಚೇತೋ ಭಂಗಿಯನು ಹರಿ
ಲೀಲೆ ಮಿಗೆ ಲಾವಣಿಗೆಗೊಂಡನು ಲೋಕಜನಮನವ ೭

ಆ ಪರಮ ಪೂರುಷನ ಜನ ಹೃದ
ಯೋಪರಂಜನ ವೇಣು ಗೀತಾ
ಳಾಪ ಸಾರಸುಧಾರಸಾಸ್ವಾದನಸುಖಾಬ್ಧಿಯಲಿ
ಗೋಪಿಯರು ಮನಮುಳುಗಿ ಮದನೋ
ದ್ದೀಪಿತೆಯರೈದಿದರು ಗೋಕುಲ
ದೀಪ ಗೋಪೀನಾಥನಂಘ್ರಿ ಸರೋಜ ಸನ್ನಿಧಿಗೆ ೮

ಮಸಗಿದರು ಗೋಪಿಯರು ಮನೆಗಳ
ಬಿಸುಟು ಪತಿಪಿತೃ ಮಾತೃ ಬಾಂಧವ
ವಿಸರವನು ಬೀಸಾಡಿ ಮಮತಾಪಾಶವನು ಹಱಿದು
ಕುಸುಮಶರ ಸುಪ್ರೌಢಶರಪರ
ವಶೆಯರಚ್ಯುತಸಂಗ ಸುಖಲಾ
ಲಸೆಯರೈದಿದರಿರದೆ ನಿಜವಲ್ಲಭನ ಸನ್ನಿಧಿಗೆ ೯

ತೊಱೆದು ಲೋಕದ್ವಯದ ಕೀರ್ತಿಯ
ಜಱೆದು ನಿಜಬಾಂಧವರ ಮಾತನು
ಮುಱಿದು ಸಹಜ ಕುಲಾಭಿಮಾನ ಪರಂಪರೆಯ ಪದವ
ಕಱೆವ ಕಂದಲ ಹಾಲು ಕೊಡದೆಯೆ
ನೆಱೆಯುಡಿದು ಜೋಲಾಡುವುಟ್ಟುದ
ಮಱೆದು ಓಡುತ್ತಕಟ ಸಂಭ್ರಮಿಸಿತು ವಧೂನಿವಹ ೧೦

ಕೆಲರು ಪತಿಪರಿಚರ್ಯೆನು ಕೆಲ
ಕೆಲರು ತತ್ಪಿತೃ ಮಾತೃ ಸೇವಾ
ವಳಿಗಳನು ಕೆಲಕೆಲರು ಮನೆ ಮನೆವಾರ್ತೆಗಳನುಳಿದು
ಕೆಲರು ಶಿಶುಗಳಿಗೂಡುತಾ ಮೊಲೆ
ಗಳನು ಪಾಲ್ಬೆಣ್ಣೆಯನು ಮಿಗೆ ಕಳ
ವಳಿಸಿದರು ಗೋಪಿಯರು ತತ್ತತ್ಕ್ರಿಯೆಗಳನು ಮಱೆತು ೧೧

ನೂಕಿದರು ಪತಿಗಳನು ಮಕ್ಕಳ
ನೇಕೆ ತಮಗಿವರೆನುತ ಜಱೆದು ನಿ
ರಾಕರಿಸಿ ಕುಲಧರ್ಮವನು ಧಿಕ್ಕರಿಸಿ ಪರಿಜನವ
ಸೋಕಿದವರನು ಕೃಷ್ಣನೆಂದು ವಿ
ವೇಕಿಸದೆ ತಕ್ಕವಿಸುತಬಲೆಯ
ರಾಕುಳೆಯರಾದರು ಮುಕುಂದನ ಕೊಳಲದನಿಗೇಳಿ ೧೨

ಉಟ್ಟುದನು ಬೀಸಾಡಿ ಮುಡಿಗಳ
ವಟ್ಟ ಹೂ ಮಾಲೆಗಳನುಡಿಯಲಿ
ಕಟ್ಟ ಕಿವಿಗಳಲೊಪ್ಪವಿಟ್ಟರು ಕೈಯ ಕಂಕಣವ
ಹಟ್ಟಿಗಳು ಮನೆಯೆಂದು ಮನೆಗಳು
ಹಟ್ಟಿಯೆಂದೈದುವರು ಕೆಲಸಕೆ
ಅಟ್ಟುದನೆ ಮಗುಳಡುತಲಿರ್ದರು ಮಱೆದು ಕೆಲಕೆಲರು ೧೩

ಒಂದ ಹೇಳಿದರಬಲೆಯರು ಮ
ತ್ತೊಂದನೇ ಮಾಡುವರು ಕೆಲಸವ
ನೊಂದ ನೆನೆವರು ವಚನದಲಿ ಹೇಳುವರು ಮತ್ತೊಂದ
ತಂದೆ ಬಾರೈ ತಮ್ಮ ಬಾರೈ
ಯೆಂದು ಪತಿಗಳ ಕರೆದು ಕೇಳ್ ಅವ
ರಿಂದುಮುಖಿಯರು ಭಾವಿಸದೆ ಹರಿ ವಿರಹ ವಿಕಳೆಯರು ೧೪

ನಗಿಸಿಕೊಂಡರು ಕೆಲರ ಕೈಯಲಿ
ಮುಗಿಸಿಕೊಂಡರು ಕೈಗಳನು ಮರು
ಳುಗಳು ಕೆಲರಿಂಗೆನಿಸಿದರು ಕೆಲರಿಗೆ ಮಹಾತ್ಮೆಯರು
ಬಗೆಯದಿಹಪರ ಲೋಕವೆರಡರ
ಬಗೆಯ ಬಯಕೆಯನೈದೆ ಮರಯೋ
ಗಿಗಳವೋಲೀಡಾಡಿ ಹೊಱವಂಟರು ಜಗದ್ಭ್ರಮೆಯ ೧೫

ಕೆಲರು ಹೋಱವಡಲಱಿಯದಾ ಮನೆ
ಗಳಲಿ ಮನಗಳಲಾ ಮುಕುಂದನ
ಚೆಲುವ ಮೂರ್ತಿಯನಪ್ಪಿ ಸಂಚಿತ ಸುಕೃತ ದುಷ್ಕೃತವ
ಕಳೆದು ಕೃಷ್ಣಧ್ಯಾನ ಸುಖದಲಿ
ಮುಳುಗಿ ವಿರಹಾನಳನ ಬೇಗೆಗೆ
ಕಳೆವರವನೀಡಾಡಿ ಸಂದರು ಮುಕುತಿಗಬಲೆಯರು ೧೬

ಬೊಡ್ಡಿ ಹೋದಪೆ ನೀನದೆಲ್ಲಿಗೆ
ಬಡ್ಡಿಗೆನ್ನನು ಕೊಳ್ಳದೆನುತಿಡಿ
ಗಡ್ಡವನು ಕೆದಱುತ್ತ ಹಿಡಿದರೆ ಕಾಂತೆ ವಶವಳಿದು
ಅಡ್ಡವಿಸಿದರೆ ಪತಿಗೆ ತನುವನು
ಬಡ್ಡಿ ಸಹಿತೊಪ್ಪಿಸಿದಳಕಟಾ
ಖಡ್ಡತನಬೇಡೆನುತಲಿದ್ದುದು ಸಕಲ ಜನನಿವಹ ೧೭

ಅಂಗನೆಯರಿಂತುಳಿದು ಗೃಹಕೃ
ತ್ಯಂಗಳನು ಸಂಸಾರ ವಿಷಯದ
ಸಂಗವನು ನೆರೆ ತೊಱೆದು ಪರಮಾರೂಢರಂದದಲಿ
ರಂಗನಾಥನ ಮಧುರತರವಹ
ಪೊಂಗೊಳಲ ನಾದವನು ಕೇಳುತ
ನಂಗಶರಪರವಶೆಯರೆಯ್ದಿದರಾ ವನಾಂತರಕೆ ೧೮

ಚಲ ಕುಚದ್ವಯ ಭಾರದಲಿ ನಡು
ಬಳುಕೆ ಬಹಳ ನಿತಂಬ ಭಾರ
ಕ್ಕಳಸಿ ಕೃಷ್ಣಧ್ಯಾನ ಪರವಶೆಯರು ವನಾಂತರಕೆ
ಲಲಿತ ಕಂಕಣ ಹಾರ ಮಣಿ ಕುಂ
ಡಲಗಳೆಸೆಯಲು ಸಂದರಾ ಪೊಂ
ಗೊಳಲ ನಾದವನಾಲಿಸುತ ಬಳಿವಿಡಿದು ಬಾಲೆಯರು ೧೯

ಬಂದ ಗೋಪೀ ಜನವನಾ ಗೋ
ವಿಂದನೀಕ್ಷಿಸಿ ನುಡಿಯ ಬಲ್ಲರ
ತಂದೆ ಕಾಣುತ ಕಮಳೆಯರ ನಾದವನು ತಾ ತಿಳಿದು
ಎಂದನೇತಕೆ ಸತಿಯರಿರ ನೀವ್
ಬಂದಿರಿತ್ತಲು ರಾತ್ರಿಯಲಿ ಭಯ
ವೆಂದು ನೋಡದೆ ಘೋರ ಸರ್ಪನಿಷೇವಿತಸ್ಥಳಕೆ ೨೦

ಏನಿದೆತ್ತಲು ನೆರೆದು ಬಂದಿರಿ
ಮಾನಿನಿಯರಚ್ಚರಿಯಲಾ ತಾ
ನೇನು ಮಾಡುವ ಕಾರ್ಯವುಳ್ಳಡೆ ಪೇಳುವುದು ತನಗೆ
ದಾನವರ ಭಯವಿಲ್ಲಲೇ ಕಮ
ಲಾನನೆಯರಿರ ಗೋಕುಲಕೆ ಬರ
ಲೇನು ಕಾರಣವಿಂದು ವಿಪಿನಾಂತರಕೆ ನೀವೆಂದ ೨೧

ಹೋಗಿ ನೀವ್ ಗೋಕುಲಕೆ ವನಭೂ
ಭಾಗವರಿದಿದಱೊಳಗೆ ನೀವಿರ
ಲಾಗದೆನ್ನನು ಬಱಿದೆ ಭಾವಿಸುವರು ದುರಾತ್ಮಕರು
ರಾಗಿಯೆಂದೇ ತಂದೆ ತಾಯ್ಮೊದ
ಲಾಗಿ ಬಾಂಧವರೈದೆ ನಿಮ್ಮನು
ಬೇಗೆಗೊಂಡಱಸುತ್ತಲೈದರೆ ಹೋಗಿ ನೀವೆಂದ ೨೨

ನೋಡ ಬಂದಿರೆ ವನದ ಸಿರಿಯನು
ನೋಡಿ ಹೂತೊಪ್ಪುವುದು ಸಂಪಗೆ
ಪಾಡುವೆಳಕೋಗಿಲೆಗಳಲಿ ರಂಜಿಸುವುದೀ ಚೂತ
ತೀಡುವೀ ತಣ್ಣೆಲರಿನಲಿ ತೂ
ಗಾಡುವುದು ಸುರಲತೆ ಧರಿತ್ರಿಗೆ
ಬೇಡಿದಿಷ್ಟವನೀವುದೀ ಕಲ್ಪದ್ರುಮಗಳೆಂದ ೨೩

ಫಲದ ಭರದಲಿ ಮುಂದೆ ತೋರ್ಪುದು
ಹಲಸು ಸುಜನರವೋಲು ಕುಜನರ
ಬಳಕೆಯಂತೊಪ್ಪುವುದು ಶಾಲ್ಮಲಿ ವಿಫಲ ಪುಷ್ಪದಲಿ
ಕೆಲದಲಾ ಕಿತ್ತೀಳೆ ತಲೆಗಳ
ನೊಲೆವುತಿರಲಾ ತೆಂಗುಗಳು ಬಹು
ಫಲ ಭರಿತ ಪೀಯೂಷರಸದಲಿ ಸಾಧುಜನದಂತೆ ೨೪

ಬಾಳೆಗಳು ಪರಿಪಕ್ವ ಫಲಗಳ
ಜಾಲವೆಸೆಯಲು ಪರಮ ಯೋಗಿಯ
ವೋಲು ಪರಹಿತನಿಷ್ಠೆಯಲಿ ನೋಡಿರೆ ದಿಗಂತದಲಿ
ತಾಳವನವಿದೆ ನೋಡಿ ಪೂಗವಿ
ಶಾಲವನವಿದೆ ನೋಡಿ ಮೆಱೆವ ರ
ಸಾಲವನವಿದೆ ನೋಡಿ ನೀವಿತ್ತಿತ್ತಲಿವೆಯೆಂದ ೨೫

ಇದೆ ಸರೋವರ ಪರಿಮಳಿತ ಘನ
ಪದುಮ ವನವಿದೆ ಮಲ್ಲಿಗೆಯ ವನ
ವಿದೆ ಲತಾಮಂಟಪ ಮನೋಜ್ಞ ವಿಹಾರವನಭೂಮಿ
ಇದೆ ಮರುಗ ಸೇವಂತಿ ಪಾದರಿ
ಯಿದೆ ಮೆಱೆವ ಕೇತಕಿಯ ಕಾನನ
ವಿದೆ ಲತಾವಳಿ ವೇಷ್ಟಿತದ್ರುಮನಿಕರವಿದೆಯೆಂದ ೨೬

ಇವೆ ನದೀ ಪುಳಿನಸ್ಥಳಂಗಳು
ವಿವಿಧ ಖಗ ಮೃಗ ಭೃಂಗಕುಲ ಕಲ
ರವದಲತಿ ರಮಣೀಯವಿಂತಿದೆ ನೋಡಿ ವನಲಕ್ಷ್ಮಿ
ಯುವತಿಯರಿರಿನ್ನೇನ ಕಂಡಿರಿ
ನಿವಗಭೀಷ್ಟವೆನಿಪ್ಪ ವನವನು
ವಿವರಿಸಿದೆನಿನ್ನಿಲ್ಲಿ ನೀವಿಹುದುಚಿತವಲ್ಲೆಂದ ೨೭

ಹೋಗಿ ನೀವೆನಗೊಲಿದು ಬಂದರೆ
ಲೋಗರಾ ತಪ್ಪೇನು ನಿಮ್ಮಂ
ತಾಗಳೂ ಕಾಣದರೆ ಮಱುಗುವುದೆನ್ನ ನೀಲೋಕ
ಆಗಲದಕೇನಿಲ್ಲಿ ನೀವಿರ
ಲಾಗದೆಂದೇ ತನ್ನ ಮನದಭಿ
ಯೋಗವೇತಕೆ ಬಂದಿರಿನ್ನೇನಿಲ್ಲಿ ನಿಮಗೆಂದ ೨೮

ಪತಿಗಳಿಗೆ ಶುಶ್ರೂಷೆ ಮಾಳ್ಪುದು
ಸತಿಯರಿಗೆ ಸದ್ಧರ್ಮ ಪರದಲಿ
ಮತಿಯ ಮಾಡದೆ ಬಾಂಧವರಿಗಿಷ್ಟರಿಗೆ ನೆಂಟರಿಗೆ
ಹಿತವನಱಿದಾಚರಿಸುವುದು ನಿಜ
ಪತಿಯ ಮತವೆನೆ ನಡೆವುದಂತಿದು
ಸತತ ವೇದ ಪುರಾಣ ಮತವಿದೆಯೆಂದನಸುರಾರಿ ೨೯

ಅಳಿಸದಿರಿ ಮಕ್ಕಳನು ಕಾಣದೆ
ಕಳವಳಿಸುತವೆ ಬಂಧುಜನವು
ಮ್ಮಳಿಸುತಿದೆ ಪಿತೃ ಮಾತೃ ಬಾಂಧವ ವರ್ಗವೀ ನಿಮ್ಮ
ಲಲನೆಯರಿಗಿನ್ನೇನು ನಿವಗಿದ
ಱೊಳಗೆ ಕರ್ತವ್ಯಾಂಶವೆನ್ನನು
ಬಳಲಿಸದೆ ಬೇಗದಲಿ ಬಿಜಯಂಗೈವುದಕಟೆಂದ ೩೦

ಬಡವನಾಗಲಿ ಮೇಣು ಪತಿ ಮು
ಪ್ಪಡಸಿದವನಾಗಲಿ ಸುದುರ್ಭಗ
ಜಡ ಬಧಿರ ಮೂಕಾಂಧನತಿ ದುಶ್ಶೀಲನಾಗಿರಲಿ
ಬಿಡುವುದುಚಿತವೆಯಲ್ಲ ಪತಿಯನು
ಮಡದಿಯರು ಲೋಕದ್ವಯವನೊಡ
ಬಡುವಡಕೃತ ಮಹಾಘರಾಗಿರಲೆಂದನಸುರಾರಿ ೩೧

ನಿಂದ್ಯವದು ಲೋಕಕ್ಕಕೀರ್ತಿಗೆ
ಮುಂದಿರವು ಭಯಹೇತು ಪಾತಕ
ವೃಂದ ಕಾಪಥವೆನಿಪುದನ್ಯರ ಸಂಗ ಸತಿಯರಿಗೆ
ಎಂದಿದನು ನೀವಱಿತು ತನ್ನನು
ಬಂದಿವಿಡಿದಿರಿ ಸಾಕದೇತಕೆ
ಬಂದ ಬಟ್ಟೆಯಲಕಟ ಮರಳಿದಡೆನಗೆ ಹಿತವೆಂದ ೩೨

ಮನದಲೆನ್ನನು ನೆನೆವುದಲ್ಲದೆ
ತನುವಿನಲಿ ಫಲವೇನು ಸಂಗಿಸಿ
ವನಿತೆಯರಿರಾನಾಗಲಱಿಯಿರಿ ದೇಹಸಂಗದಲಿ
ನೆನೆವ ಕೇಳುವ ಕೀರ್ತಿಸುವ ಬಿಡ
ದನುಭವಿಸುವಾನಂದವದು ಸಂ
ಜನಿಸಲಱಿಯದು ತನುಗಳಲಿ ಸಾಯುಜ್ಯಪದವೆಂದ ೩೩

ಹೋಗಿ ನೀವಂಜದಿರಿ ಭವಭಯ
ಸಾಗರಕೆ ತನ್ನಂಘ್ರಿ ಕಮಲಪ
ರಾಗ ಚಿಂತಾಪ್ಲೋತವೇ ಪರಿಯಾಪ್ತವೆಂದನಲು
ನಾಗಶಯನನ ನುಡಿಯ ಬಿಱುಗಣೆ
ತಾಗಿ ಥಟ್ಟಗಿದೊಡಲು ಕಂಪಿಸಿ
ಬಾಗಿ ನಿಂದರು ತಲೆಗಳನು ಕಾಂತೆಯರು ಕಳವಳಿಸಿ ೩೪

ಕೇಳುತವೆ ಕಂಬನಿಗಳೊಸರಿದ
ವಾಲಿಗಳಲೋರಂತೆ ಕಾಡಿಗೆ
ಮೇಳವಿಸಲಾನನದಲಧರದಲಗ್ರಕುಚಗಳಲಿ
ಬೀಳುತಿರಲಾ ಮುಂದೆ ಬಹಳ ವಿ
ಶಾಲ ಭೋಗಸ್ಥಾನವೆಂಬುದ
ನಾಲಿಸುತ ಲಚ್ಚಣಿಸಿತೋಱಿಸುವಂತೆ ಬಿಂದುಗಳು ೩೫

ಕರತಳದ ಕದಪಿನಲಿ ಸತಿಯರು
ಶಿರವೆಱಗಿ ಕೇಳುತ್ತ ಕೃಷ್ಣನ
ಬಿಱುನುಡಿಯ ಲೆಕ್ಕವನು ಬರೆವಂದದಲಿ ಮೇದಿನಿಯ
ಚರಣದುಂಗುಟದಲ್ಲಿ ಬರೆವುತ
ಸರಸಿಜಾಕ್ಷಿಯರೆಸೆದರೆವ್ವಾ
ಶಿರದ ಬರೆಹವಿದೆಂದು ಸಂಜ್ಞೆಯ ಮಾಡಿ ತೋರ್ಪಂತೆ ೩೬

ಹೃದಯದಂತಸ್ತಾಪದಲಿ ಕೋ
ಳ್ಗುದಿಗುದಿವ ಸುಯ್ಲುಗಳಲೊಣಗಿದ
ವದನ ಕಮಲದ ಬಾಡಿದಧರದ ಬಾಷ್ಪಬಿಂದುಗಳ
ಕದಡಿ ಹರಿವ ಕುಚಾಗ್ರಕುಂಕುಮ
ವಿದಿತ ಸಿರಿಗಂಧದ ಸರೋರುಹ
ವದನೆಯರು ಮಾತಾಡದಿರ್ದರು ತೀವ್ರದುಃಖದಲಿ ೩೭

ಸುರಿವ ಕಂಗಳ ಬಾಷ್ಪವನು ನಿಜ
ಕರತಳದೊಳೊರಸುತ್ತ ಕೃಷ್ಣನ
ಸಿರಿಮೊಗವ ನೋಡುತ್ತ ಹದುಳಿಸಿಕೊಳುತ ಮನದೊಳಗೆ
ಸರಸಿಜಾಕ್ಷಿಯರೆಂದರಂದಂ
ಬುರುಹನಾಭನ ನುಡಿಗೆ ಮಾಱು
ತ್ತರವನೊಯ್ಯನೆ ಗದ್ಗದಾಕ್ಷರವೆಸೆವ ವಚನದಲಿ ೩೮

ಒಡೆಯ ನಿಷ್ಠುರವೇಕೆ ತೊತ್ತಿಯ
ರೊಡನೆ ಯೋಗ್ಯವೆ ಕೃಷ್ಣ ನಿನಗೀ
ನುಡಿ ನಿಜೋಕ್ತಿಯ ಸತ್ಯವನು ಪಾಲಿಸುವುದೆಮಗಿಂದು
ಬಿಡುವೆಪಾವೆಂತೊಪ್ಪುವೀ ಮೆ
ಲ್ಲಡಿಗಳನು ಲಕ್ಷ್ಮೀಕುಚಾಗ್ರದ
ತೊಡವುಗಳ ದಾಸ್ಯವನು ಕರುಣಿಪುದೆಂದರಬಲೆಯರು ೩೯

ಬಿಟ್ಟು ನಿಜ ಪಿತೃ ಮಾತೃ ಪತಿಗಳ
ನಿಷ್ಟರನು ನಂಟನು ಸುತರನು
ಸೃಷ್ಟಿಪಾಲಕರೊಡೆಯ ನಿನ್ನನೆ ನಂಬಿ ಮನಮೆಚ್ಚಿ
ಬಿಟ್ಟೆವಿಹಪರಲೋಕ ದೃಷ್ಟಾ
ದೃಷ್ಟ ಭೋಗಂಗಳನು ತಮ್ಮನು
ಬಿಟ್ಟರಿನ್ನಾರೆಮಗೆ ಗತಿಯೆಂದರು ಮೃಗಾಕ್ಷಿಯರು ೪೦

ಪತಿ ಸುತ ಪ್ರಿಯ ಬಂಧುಗಳಿಗತಿ
ಹಿತವೆನಿಪ್ಪನುವೃತ್ತಿ ಧರ್ಮ
ಸ್ಥಿತಿಯಿದನೆ ನಿಜಧರ್ಮವೆಂದೆನುಗೆಂದೆ ಸತಿಯರಿಗೆ
ವಿತಥವೆನ್ನೆವು ತತ್ತ್ವದಖಿಳಾ
ಕೃತಿಗಳಿಗೆ ಪರಮಾತ್ಮ ನೀನಿರ
ಲಿತರ ಜೀವಭ್ರಾಂತ ಭಕುತಿಯಲೇನು ಫಲವೆಮಗೆ ೪೧

ಪ್ರಿಯರೆನಿಪ್ಪವರೆಲ್ಲ ಮಗುಳ
ಪ್ರಿಯರೆನಿಪರಂತಿರಲಿ ನಿತ್ಯ
ಪ್ರಿಯನಲಾ ನೀನಖಿಳಸಚರಾಚರದ ಜೀವರಿಗೆ
ನಯವಿದನೆ ಕಾಡದಿರು ಕರುಣಾ
ಶ್ರಯನೆ ತಮಗಿನ್ನೇಕೆ ಬಂಧು
ಪ್ರಿಯರೆನಿಪ ದುಃಖಪ್ರದರು ದುಃಖೈಕವಿಗ್ರಹರು ೪೨

ಅಱಿಯರೇ ಮುನಿಮುಖ್ಯರೆಲ್ಲವ
ತೊಱೆದು ನೀನೇ ಗತಿಯೆನುತ್ತ
ಕ್ಕಱಿತು ಹೃದಯಸರೋಜದಲಿ ನಿಜಪಾದಪಂಕಜವ
ಸೆಱೆವಿಡಿದು ಸಂಸಾರದುಃಖವ
ನುಱಿದರೆನಲೇತಕಿನ್ನಗ
ಕುಱಿಯ ಕಾದೆವೆ ಕೃಷ್ಣ ಕಾಡದಿರೆಂದರಬಲೆಯರು ೪೩

ಚಿತ್ತ ನಿನ್ನಲಿ ಚಲಿಸದಿದೆ ಗೃಹ
ಕೃತ್ಯವನು ಮಾಡುವರೆ ಮನೆಯಲ್ಲಿ
ಚಿತ್ತ ಬೇಱೊಂದುಂಟೆ ಭಾವುಕರರಸ ನೀನಿರಲು
ಚಿತ್ತವಿಸಲೇಕೊಲ್ಲೆ ಮಾಡುವ
ಕೃತ್ಯವಾವುದು ಕೈಗಳಿಗೆ ನಿಜ
ಚಿತ್ತಸಾಕ್ಷಿಯೆನಿಪ್ಪ ನಿನ್ನ ಪದಾಂಬುಜವನುಳಿದು ೪೪

ಮಿಡುಕಲೊಲ್ಲವು ಕೃಷ್ಣ ಕರುಣಿಗ
ಳೊಡೆಯ ಕಾಲ್ಗಳಿವೇಗುವವು ಮೆ
ಲ್ಲಡಿಯ ಸನ್ನಿಧಿಯಿಂದ ಗಮನಕ್ಕೊಂದು ಹೆಜ್ಜೆಯನು
ಬಿಡದೆ ಕಾಡುವೆ ಕರಣನಿಕರದ
ಗಡಣವನು ನಿರ್ಬಂಧವುಳ್ಳಡೆ
ಕಡಿದು ಬೀಸಾಡೆಮ್ಮನೂರಿಂಗೆಂದರಬಲೆಯರು ೪೫

ಮೆಲುನಗೆಯ ಮಂಜುಳ ಕಟಾಕ್ಷದ
ಲಲಿತ ವೇಣುನಿನಾದದಿಂದು
ಜ್ವಲಿಸುತಿದೆ ಕಾಮಾಗ್ನಿ ಸುಡುತಿದೆ ತನ್ನು ದೇಹವನು
ತಳಿದು ನಂದಿಸು ನಿನ್ನಧರಸುಧೆ
ಗಳನು ಮೇಣಲ್ಲದಿರೆ ಕಾಯವ
ನುಳಿದು ಕೊಡುವೆವೊಪ್ಪುವೀ ನಿನ್ನಂಘ್ರಿಗಳ ಪದವ ೪೬

ಇಂದಿರೆಗೆ ದತ್ತಾವಸರವಹ
ವಂದ್ಯವಹ ನಿನ್ನಂಘ್ರಿ ಕಮಲ
ದ್ವಂದ್ವ ಸಂಸ್ಪರ್ಶನದ ಪರಮಾನುಗ್ರಹದ ಸಿದ್ಧಿ
ಎಂದೆಮಗೆ ದೊರಕೊಂಡುದಂದಿಂ
ದಿಂದುತನಕೆಲೆ ದೇವ ಲೋಗರ
ಮುಂದೆ ನಿಲೆ ಮನವಿಲ್ಲ ನೀನಿರೆ ಹಿತ ಧರಿತ್ರಿಯಲಿ ೪೭

ದಿವಿಜಪತಿಗಳನೊಲ್ಲದಂಬುಜ
ಭವೆ ಭವತ್ಪದವೆಂಬ ತುಳಸಿಯ
ಭವನವನು ಕಾಮಿಸುವಳುರದಲಿ ಬೇಱೆ ಮನೆಮಾಡಿ
ಶಿವ ಶಿವಾನತಭೃತ್ಯ ಸುರಮುನಿ
ನಿವಹ ಸೇವಾಸೌಖ್ಯ ಪರಮೋ
ತ್ಸವಕಳುಪಿ ಸುರವರ ಸಮಾರಾಧಿತ ನಿಜಾಂಘ್ರಿಯುಗ ೪೮

ಕರುಣಿಸುವುದೆಮಗೊಡೆಯ ನಿನ್ನೀ
ಚರಣವನು ಮಱೆಯೊಕ್ಕೆವೀ ನಿ
ನ್ನುರು ಮನೋಜ್ಞ ಸ್ಮೇರನಯನಾಪಾಂಗವೀಕ್ಷಣವ
ಉರಿಯಲದ್ದುದು ದೇಹವೆಮಗೆಲೆ
ಕರುಣೆಗಳ ದಾತಾರನೆಂಬೀ
ಬಿರುದು ಗಡ ದಾಸಿಯರನೀಕ್ಷಿಸನಾಥೆಯರನೊಲಿದು ೪೯

ಪೊಂಗೊಳಲ ಗೀತಾಮೃತಂಗಳ
ತುಂಗ ತ್ರಿಜಗನ್ಮೋಹನದ ನಿ
ನ್ನಂಗ ಕಾಂತಿಯ ಸೌಷ್ಠವವನಿದನೊನ್ಮೆ ಕಿವಿಗಳಲಿ
ಕಂಗಳಲಿ ಸೇವಿಸಿದರಕಟಾ
ವಂಗನೆಯರಳವಳಿಯದ್ದೈದಿ ಪ
ಥಂಗಳನು ಬಿಡದವರು ಹೇಳಲಿ ಮೂಱು ಲೋಕದಲಿ ೫೦

ತರುಗಳಿಗೆ ತನುಪುಳಕವೆನಲಿ
ನ್ನರಿದೆ ಪಶು ಮೃಗ ಪಕ್ಷಿಗಳಿಗೀ
ನರರಿಗೆಂತುಟೊ ವಿಕೃತಿ ವಿವರಿಸಬಲ್ಲರಾರಿದನು
ಪರಿಕಿಸಲು ನಿನಗಿಲ್ಲ ನಿನ್ನೀ
ಪರಮ ಸೌಭಾಗ್ಯಾನುಭವವೆಲೆ
ಕರುಣೆಗಳ ಬಲ್ಲಹನೆ ಕರುಣಿಸು ದಾಸ್ಯವನು ತಮಗೆ ೫೧

ಬಲ್ಲೆವಾವ್ ಸಾಕ್ಷಾತು ಲಕ್ಷ್ಮೀ
ವಲ್ಲಭನು ಭೂಭಾರ ಹರಣವ
ನಲ್ಲಿಯೇ ನಿಶ್ಚಯಿಸಿ ರಕ್ಷಿಸಲೆಂದು ಸುಜನರನು
ಬಲ್ಲಹನೆ ಬಂದೇಕೆ ನಮ್ಮನು
ಕೊಲ್ಲಲೇತಕೆ ಕೊಲದೆ ನಿಜಕರ
ಪಲ್ಲವವನಿರಿಸೆಮ್ಮ ಶಿರದಲಿ ಕುಚಭರಂಗಳಲಿ ೫೨

ಎಂದು ಸತಿಯರು ಕರಗಿ ಕಂಬನಿ
ಯಂದಿಳಿಯೆ ಮೇದಿನಿಗೆ ಕಾಣುತ
ಮುಂದಹಾಸದಲೆಸೆವ ನಿಜ ಕರುಣಾಕಟಾಕ್ಷದಲಿ
ನಿಂದಿರಲು ನಳಿನಾಕ್ಷಿಯರು ಗೋ
ವಿಂದನೊಲವನು ಕಂಡು ತನು ತನು
ಗಂದು ತೆಗೆದಪ್ಪಿದರು ನಿತ್ಯಾತುಮನನೊಲವಿನಲಿ ೫೩

ಇಪ್ಪತ್ತೈದನೆಯ ಸಂಧಿ ಮುಗಿಯಿತು.

# ಇಪ್ಪತ್ತಾರನೆಯ ಸಂಧಿ

ಗರ್ವವನು ಸೈರಿಸೆನು ತಾನೆಂ
ದುರ್ವಿಗುಪದೇಶಿಸುವ ನೆವದಲಿ
ಸರ್ವಗತನಡಗಿದನು ಗೋಪೀಜನಕೆ ವೈಗುಡದೆ

ಕ್ಷಿತಿಪ ಕೇಳು ಮುಕುಂದನಾಡುವ
ಕೃತಕ ವಚನಂಗಳಿಗೆ ಮನದಲಿ
ಸತಿಯರುಮ್ಮಳಿಸುತ್ತ ವಿರಹಕೃಶಾನುತಾಪದಲಿ
ಗತಿಗೆಡುತ್ತಿರೆ ಕಂಡು ಮಂದ
ಸ್ಮಿತ ಮಧುರ ಪೀಯೂಷರಸಸರಂ
ಜಿತ ಕಟಾಕ್ಷದ ಮಳೆಗಱೆದನಂಗನೆಯರಂಗದಲಿ ೧

ಜಾಣೆಯರು ಜಗದೀಶನೊಲವಿನ
ಕೇಣವನು ಕಾಣುತ್ತ ಭುವನ
ಪ್ರೀಣನೋದ್ಯತ ಬಹಳ ಕಾರುಣ್ಯಾಮೃತೇಕ್ಷಣದ
ಏಣಧರನುದಯದಲಿ ಕುಮುದ
ಶ್ರೇಣಿ ಚೇಷ್ಟಿಸುವಂತೆ ಸಲೆ ಸ
ಪ್ರಾಣಿಸಿದರಪ್ಪಿದರು ಮಿಗೆ ಕಂಗಳಲಿ ಮೈಗಳಲಿ ೨

ಸಿಲುಕಿದುದು ಗೋಪಾಂಗನಾ ಮೃಗ
ಕುಲ ಮುಕುಂದೋದಾರ ಮಧುರೋ
ಜ್ವಲ ಮೃದುಸ್ಮಿತವದನ ನಯನಾಪಾಂಗ ವಿಭ್ರಮದ
ಬಲೆಗೆ ಭಾಪಚ್ಚರಿಯೆ ಭುವನಾ
ವಳಿಯದಾವನ ಮಾಯೆಯಲಿ ನೆಱೆ
ಸಿಲುಕಿ ತೊಳಲದೆ ಕಮಲಭವ ರುದ್ರಾದಿಗಳು ಸಹಿತ ೩

ಉರಿಗೆ ತುಪ್ಪವ ತೋಱಿದಂತಾ
ತರುಣಿಯರ ಕಾಮಾಗ್ನಿ ಕೃಷ್ಣನ
ಚರಣ ಸಂಸ್ಪರ್ಶನದ ಪರಮಾನಂದ ಲಾಭದಲಿ
ಭರಿತವೆನಲಂಕುರಿಸಿ ಮಗುಳಾ
ವರಿಸಿತಿಂದ್ರಿಯ ವೃತ್ತಿಗಳನುದು
ಗರಿಸುತಿರ್ದುದು ಬಹಳ ಚಾಪಲ್ಯದ ಚಮತ್ಕೃತಿಯ ೪

ಸೂಱೆಯೋದನು ಕೃಷ್ಣನವರಿಗೆ
ಮಾಱುವೋದರು ಮಾನಿನಿಯರಾ
ಮೂಱು ಲೋಕದಧೀಶ್ವರಗೆ ಮಾಯಾಮಹೇಶ್ವರಗೆ
ನೀಱೆಯರು ಲೋಕಕ್ಕೆ ಮದನನ
ದೂಱುವಂತಿರೆ ಲಜ್ಜೆಯನು ಸಲೆ
ಮೀಱಿದರು ತೋಱಿದನು ಹರಿ ಲೋಕದ ವಿಟಭ್ರಮೆಯ ೫

ಬಳಿಕ ಗೋಪೀಜನಸಹಿತ ಗೋ
ಕುಲದರಸನಾಡುತ್ತ ಯಮುನಾ
ಪುಳಿನದಲ್ಲಿಗೆ ಮೆಱೆವ ವನಮಲ್ಲಿಗೆಯ ಮಂಟಪಕೆ
ಒಲಿದು ಬಿಜಯಂಗೈದನೊಪ್ಪುವ
ಮೆಲುಮಳಲ ಮುಕ್ತಾಪ್ರಕೀರ್ಣ
ಸ್ಥಲಕೆ ಬಹುವಿಧ ಕುಸುಮ ಸೌರಭ ರಂಜಿತಸ್ಥಳಕೆ ೬

ಆ ಮನೋಜ್ಞಸ್ಥಳದಲಂದಾ
ಭಾಮೆಯರ ಮನದಣಿಯಲಾತ್ಮಾ
ರಾಮನಾಡಿದನಾತ್ಮವಶ್ಯೇಂದ್ರಿಯನು ತಾನಾಗಿ
ಭೂಮಿಪತಿ ಕೇಳಮರ ವನಿತಾ
ಸ್ತೋಮವಾ ಲೀಲೆಗಳನೀಕ್ಷಿಸಿ
ಕಾಮಶರ ಮೂರ್ಛಿತೆಯರಾದರು ಮೇಲೆ ಗಗನದಲಿ ೭

ಸರಸವಚನದ ಸುಸ್ಮಿತೇಕ್ಷಣ
ದುರುತರದ ವಿಭ್ರಮದ ನಖಸಂ
ಸ್ಪರುಶನದ ಕುಚಯುಗಳನಿಷ್ಪೀಡನದ ಚುಂಬನದ
ಕರತಳದ ಸಮ್ಮೇಳದಿತರೇ
ತರ ದೃಢಾಲಿಂಗನದ ಮನುಮಥ
ಚರಿತೆಗಳ ಚಾತುರಿಯ ನಿಧಿ ರಮಿಸಿದನು ರಮಣಿಯರ ೮

ಚೆಚ್ಚುವಂಗದಲಂಗ ಮನ ಮನ
ಬೆಚ್ಚಿದವು ಮದನಾಸ್ತ್ರಹತಿಗಳು
ಮುಚ್ಚಿದವು ಮೂಡಿದವು ಕರಣಾನೀಕ ತಮ್ಮೊಳಗೆ
ಕಚ್ಚಿದಧರದ ತಳಿತ ಕಣುಮನ
ದೆಚ್ಚಱಿನ ಕಾಂತೆಯರು ಮುಳುಗಿದ
ರಚ್ಯುತಾಶ್ಲೇಷಾಧಿಕಾನಂದಾಮೃತಾಬ್ಧಿಯಲಿ ೯

ಇಂತು ರತಿಲೀಲೆಯಲಿ ಲಕ್ಷ್ಮೀ
ಕಾಂತನೆಮಗೊಳಗಾದನೆಂದಾ
ಕಾಂತೆಯರು ಕೃಷ್ಣಾಂಘ್ರಿಸಂಸ್ಪರುಶನದ ಸೌಖ್ಯದಲಿ
ಸಂತವಿರದೀ ಸುರನರೋರಗ
ಕಾಂತೆಯರೊಳೆಮ್ಮಿಂದಧಿಕ ಗುಣ
ವಂತೆಯರದಾರೆನುತ ಗರ್ವಿಸಿದರು ಲತಾಂಗಿಯರು ೧೦

ಕತ್ತಲೆಗೆ ಬೆಳಗಿಂಗೆ ಬೆಸುಗೆಯ
ದೆತ್ತಣದು ಗರ್ವಕ್ಕೆ ತವೆಮ್ಮೊಳ
ಗೆತ್ತಣದು ಸಮ್ಮೇಳ ಸಾಕಿನ್ನಿವರ ಗರ್ವವನು
ಕಿತ್ತು ಕಳೆವೆನೆನುತ್ತ ತನ್ನಯ
ಚಿತ್ತದಲಿ ಗೋವಿಂದನಱಿದಾ
ಮತ್ತಕಾಶಿನಿಯರಿಗೆ ಮಾಡಿದನಂದನುಗ್ರಹವ ೧೧

ಸರಸಿಜಾಕ್ಷಿಯರೆನ್ನ ಸನ್ನಿಧಿ
ಯಿರವಿನಲಿ ಗರ್ವಿಸಿದರೆನ್ನಯ
ವಿರಹವೇ ವರವೈದ್ಯವಿವರಿಂಗೆನುತ ಮನದೊಳಗೆ
ಪರಮಪುರುಷೋತ್ತಮನು ನಿಮಿಷಾಂ
ತರದೊಳಡಗಿದನಾಗಳಂತಿರೆ
ತರುಣಿಯರು ತೇಕಿದರು ತಳವೆಳಗಾದರಳವಳಿದು ೧೨

ನೋಡಿದರು ದೆಸೆದೆಸೆಗೆ ಸತಿಯರು
ಕೂಡೆ ಹಂಬಲಿಸುತ್ತ ತಾವ್ ಮು
ನ್ನಾಡಿದೆಡೆಗಳಲಱಸಿ ಕೃಷ್ಣನ ಕಾಣದಳವಳಿದು
ಪಾಡುತಚ್ಯುತಲೀಲೆಗಳನೆಡೆ
ಯಾಡುತಿದ್ದರು ಕಾನನದಲೊಡ
ಗೂಡಿ ತದ್ಗತಚಿತ್ತೆಯರು ಪುತ್ಥಳಿಗಳಂದದಲಿ ೧೩

ಉರ್ವಿಪತಿ ಕೇಳಱಸಿ ಕಾಣದೆ
ಸರ್ವಗತನನು ವನದ ತರುಲತೆ
ಪರ್ವತಂಗಳನಳಿನಿಕರ ಖಗ ಮೃಗ ಕುಲಂಗಳನು
ನಿರ್ವಿಶೇಷದಲೈದೆ ಬೆಸಗೊಳು
ತುರ್ವಹಂಕೃತಿಗಿದುವೆ ಫಲವೆನು
ತುರ್ವಿಗುಪದೇಶಿಸುವವೋಲ್ತೊಳಲಿದರು ವನದೊಳಗೆ ೧೪

ತರುಗಳಿರೆ ತೋಱಿರೆ ಮುರಾಂತಕ
ನಿರವನೆಲೆಯಲೆ ಚೂತ ಚಂಪಕ
ಕುರವಕಾಶ್ವತ್ಥಾದಿ ಪರಹಿತಜೀವಿಗಳಿರೆಮಗೆ
ಮರುಗ ಮಲ್ಲಿಗೆ ಮೊಲ್ಲೆ ಪಾದರಿ
ವರಲತೆಗಳಿರ ಮೆಱೆವ ಕಮಲಾ
ಕರಗಳಿರ ತೋಱಿರೆ ಹಿತಾರ್ಥ ಮುಕುಂದನಿದ್ದೆಡೆಯ ೧೫

ಕೊಂದು ಹೋದನು ಕೃಷ್ಣನೆಮ್ಮನು
ಮಂದಮಾರುತ ಕೇಳೆಲಿಗೆ ಕಾ
ಳಿಂದಿ ಕೇಳೆಲೆ ತಾಯೆ ತುಲಸಿ ಮುಕುಂದಪದನಿಳಯೆ
ನಂದಸುತನೊಲವುಂಟು ಗಡ ತೋ
ಱಿಂದು ತಮಗಚ್ಯುತನ ಚರಣ
ದ್ವಂದ್ವವನು ಧರಿಸಿಹನಲಾ ನಿನ್ನನು ಸರಾಗದಲಿ ೧೬

ಆವ ತಪವನು ಮುನ್ನವೆಲೆ ಭೂ
ದೇವಿ ಮಾಡಿದೆ ತಾಯೆ ಕೃಷ್ಣನ
ಪಾವನಾಂಘ್ರಿಸ್ಪರ್ಶಪುಳಕಿತೆಯಾದೆ ನೀನಿಂದು
ಆವ ಮೋಹನ ಸಂಗವೋ ಮೇ
ಣಾ ವಿಶಿಷ್ಟ ತ್ರಿವಿಕ್ರಮಾಂಘ್ರಿಯ
ಸೇವೆಯೊ ಪುಳಕಕ್ಕೆ ಕಾರಣವಾವುದೌ ನಿನಗೆ ೧೭

ಮೃಗ ವನಿತೆ ನೀನಾರ ನೋಡುವೆ
ದೃಗುಯುಗಳವೇಕರಳಿದುವು ತುಂ
ಬಿಗಳಿರಾ ಕಂಡಿರೆ ಮುಕುಂದನ ಮೂರ್ತಿಯನು ನೀವು
ಮುಗಿವಿರಾರಿಗೆ ಕೈಯ ಕಮಲಾ
ಳಿಗಳಿರುಪಚಾರವನು ಬಲ್ಲನೆ
ಮುಗುದರರಸನು ಕೃಷ್ಣನಲ್ಲದಡೀ ವಿಧಿಯೆ ನಮಗೆ ೧೮

ಲಲನೆಯರು ನೋಡಿತ್ತಲಿದೆ ಗೋ
ಕುಲದರಸನ ವರಾಂಗನಾಕುಚ
ಲಲಿತ ಕುಂಕುಮ ಗಂಧ ಮಿಶ್ರಿತ ವೈಜಯಂತಿಗಳ
ಲಲಿತ ಗಂಧದ ಗಂಧವಹನಿ
ಳ್ಕುಳಿಗೊಳುತ್ತಿದೆ ನಾಸಿಕವನಾ
ಲಲನೆ ಯಾವಳೊ ಕೃಷ್ಣನೊಡನೈದಿದವಳತಿಮಾನ್ಯೆ ೧೯

ನೀಡಿ ಭುಜವನು ವನಿತೆಯಂಸದ
ಲಾಡಿಸುತ ಕಮಲವನು ಹರಿ ಸುಳಿ
ದಾಡಿದೆಡೆಯಿದು ರಮ್ಯತರವಾ ಗಿರಿವನೋದ್ದೇಶ
ಪಾಡುವಳಿಗೀತವನು ಕೇಳು
ತ್ತಾಡುತಿವೆ ನವಿಲುಗಳು ನೃತ್ಯವ
ನೋಡುತ ಹೋದನೇ ಮನೋಜಯನೀ ವನಾಂತರಕೆ ೨೦

ಇಂತು ವನ ವನದೊಳಗೆ ಗೋಕುಲ
ಕಾಂತೆಯರು ತೊಳಲುತ್ತ ಲಕ್ಷ್ಮೀ
ಕಾಂತನನು ಕಾಣರು ಚರಾಚರ ಜೀವಭರಿತನನು
ತಂತಮಗೆ ತರುಣಿಯರು ಕೃಷ್ಣನ
ಚಿಂತೆಯಲಿ ಲೋಕಕ್ಕೆ ಮರುಳಾ
ದಂತೆ ತದ್ಭಾವದಲಿ ನೆಱೆ ವೇಷ್ಟಿಸಿದರಬಲೆಯರು ೨೧

ನೋಡುತ್ತೈದನೆ ಕೃಷ್ಣನೆಂದರ
ಳಾಡುವಂಬುಜದೆಡೆಗೆ ಹರಿ ಮಾ
ತಾಡುತ್ತೈದನೆಯೆಂದು ಘನಗಂಭೀರರವದೆಡೆಗೆ
ಪಾಡುವಳಿಗಳಿಗೈದುವರು ಹರಿ
ಪಾಡುತ್ತೈದನೆಯೆಂದು ಸತಿಯರು
ಕೂಡೆ ಹಂಬಲಿಸಿದರು ಕೃಷ್ಣನ ಪದವ ದೆಸೆದೆಸೆಗೆ ೨೨

ಪರಿಮಳವ ಹಿಡಿ ಹಿಡಿದು ಹರಿವರು
ತರುಣಿಯರು ಕೃಷ್ಣಾಂಗರಾಗದ
ಸರಸತರ ಪರಿಮಳವಿದೆಂದೇ ಕಮಲವನದೆಡೆಗೆ
ಕರಿಯ ಕಬ್ಬಿನ ಬನಕೆ ಕೃಷ್ಣನ
ನಿರುಪಮಿತ ತನು ಕಾಂತಿಯೆನುತಂ
ಬುರುಹಮುಖಿಯರು ಬೀದಿವರಿದರು ಕೂಡೆ ವನದೊಳಗೆ ೨೩

ಮಱೆದು ತಾವಾರೆಂಬುದನು ಮಿಗೆ
ಚರಿಸಿ ವನದೊಳಗಾ ಮುಕುಂದನ
ಚರಿತ ಲೀಲೋದಾರ ಹಾಸ ಕಟಾಕ್ಷ ವೀಕ್ಷಣದ
ಪರಿಪರಿಯ ಸರ್ವೋಕ್ತಿಗಳ ಬಂ
ಧುರ ವಿಹಾರಂಗಳನು ನೆನೆದಂ
ಬುರುಹಮುಖಿಯರು ತಾಳಿದರು ಕೃಷ್ಣಾತ್ಮ ಭಾವನೆಯ ೨೪

ಆನು ಪೂತನಿಯೆಂದಳೊಬ್ಬಳು
ದಾನವಾಂತಕನಾದಳಾ ಸ್ತನ
ಪಾನವನು ಮಾಡಿದಳು ಬಿದ್ದಳು ಕಾಂತೆ ನಶವಳಿದು
ತಾನು ತೊಟ್ಟಿಲ ಕೃಷ್ಣನೆಂದನು
ಮಾನಿಸುತ ಮತ್ತೊಬ್ಬಳಾ ಶಕ
ಟಾನುಕಾರದ ಕಾಂತೆಯನು ಕೆಡೆಯೊದೆದಳಂಬರಕೆ ೨೫

ಲಲನೆಯೊಬ್ಬಳು ಕೃಷ್ಣ ತಾನೆಂ
ದಿಳೆಯೊಳಿರೆ ಗಿರಿಯಂತೆ ಹೊತ್ತೊ
ಯ್ದಳು ಮಹಾ ವಾತಾಕೃತಿಯಲೊಬ್ಬಳು ನಭಸ್ಥಳಕೆ
ಉಲಿವ ಗೆಜ್ಜೆಯ ಕಾಲನಂಗಳ
ದೊಳಗೆಳೆದು ಸುಳಿದಾಡುತಂಜಿದ
ವೊಲು ಯಶೋದೆಯ ಕೈಗೆ ಮಿಗೆ ಹರಿತಪ್ಪಳಾಕ್ಷಣಕೆ ೨೬

ಹಾಲು ಬೆಣ್ಣೆ ಮೊಸರ್ಗಳನು ನಿಜ
ಬಾಲಕನು ಕದ್ದುಂಡನೆಂದೊ
ಯ್ದಾಳಿಗವನಾಡುವರು ನೆರೆದು ಯಶೋದೆಗೈತಂದು
ಹೇಳುವಳು ಮತ್ತೊಬ್ಬಳಂಜಿಸಿ
ಕೋಲುಗೊಂಡರೆ ಕಾಣುತೊಬ್ಬಳು
ಲೋಲಲೋಚನೆ ಕೃಷ್ಣ ನಾನೆಂದಳುವಳನುಕರಿಸಿ ೨೭

ಬೆಣ್ಣೆಗಳವನು ಮಾಣಿಸುವೆನೀ
ಚಿಣ್ಣನನು ಕಟ್ಟಿರಿಸಿ ತಾರಾ
ಕಣ್ಣೆಗಳನೆಂದೊಬ್ಬಳೊಬ್ಬಳ ನಡುವನುರೆ ಬಿಗಿದು
ಪುಣ್ಯನಿಧಿ ಕಟ್ಟುವಳು ಕರೆದೆಲೆ
ಯಣ್ಣ ಬಾ ಎನ್ನರಸ ಬಾರೆಲೆ
ಯಣ್ಣ ಬಾ ನಿಮ್ಮಯ್ಯನೊಡನೆಂದೆಂಬಳಬುಜಾಕ್ಷಿ ೨೮

ಕಱುಗಳಾದರು ಕೆಲರು ಕೆಲಬರು
ತುಱುವಳರು ತಾವಾಗಲೊಬ್ಬಳು
ಮಱಿಸಿ ಕೃಷ್ಣನ ಕೊಲುವ ವತ್ಸಾಸುರನು ತಾನಾಗಿ
ಬೆರಸಿದಳು ಮತ್ತೊಬ್ಬಳಾಕೆಯ
ನಱಿಸಿ ಹಿಂಗಾಲ್ಪಿಡಿದು ಗಗನಾಂ
ತರಕೆ ಬೀಸಾಡಿದಳುಘೇ ಎಂದುದು ವಧೂನಿವಹ ೨೯

ಬಕನೆನುತ ಕುಳ್ಳಿರ್ದಳೊಬ್ಬಳು
ಬಕವಿದಾರಣನೆಂದಳೊಬ್ಬಳು
ಸುಕೃತವೆಂತುಟೊ ಶಿವಶಿವಾ ಗೋಪಾಂಗನಾಜನದ
ವಿಕಟ ಭುಜಬಲ ದೈತ್ಯಪತಿ ಧೇ
ನುಕನು ತಾನೆಂಬಳನು ನೀಳಾ
ಳಕಿಯರೈದಿದರಾಹವಕೆ ಬಲಕೃಷ್ಣರಾವೆನುತ ೩೦

ಹೋಗು ನೀನಿನ್ನೀ ನದಿಯಲಿರ
ಲಾಗದೆನುತ ಲತಾಂಗಿ ಕಾಳಿಯ
ನಾಗನಾದವಳುತ್ತಮಾಂಗವನೇಱಿ ನಿಂದಿರ್ದು
ಬಾಗಿ ಕುಣಿದಳು ನಾಗಪತ್ನಿಯ
ರಾಗಿ ಕೆಲರೈತಂದು ಕರುಣಾ
ಸಾಗರನೆ ಕೈಗಾಯಬೇಕೆಂದೆಱಗಿದರು ಪದಕೆ ೩೧

ಎಲೆಲೆ ಕಿಚ್ಚೋ ಕಿಚ್ಚು ಹುಗುಹುಗು
ನಳಿನನಾಭನ ಮಱೆಯನೆನಲಾ
ಕಳಕಳವ ಮಾಣ್ಮಾಣು ತಾನಿಹೆನಂಜಬೇಡೆನುತ
ತಳವನೊಡ್ಡಿದಳಬಲೆ ನೋಡಿರೆ
ಚೆಲುವ ಮೂರ್ತಿಯನೆನುತಲೊಬ್ಬಳು
ಮೆಲುನಗೆಯೆ ಕುಡಿನೋಟದಲಿ ರಂಜಿಸಿದಳಬುಜಾಕ್ಷಿ ೩೨

ಗಾಳಿ ಮಳೆಗಂಜುವರೆ ಬನ್ನೀ
ಶೈಲರಾಜ ನಿವಾಸವಿದೆ ಗಿರಿ
ಬೀಳುಗೆಂದಂಜದಿರಿ ಯೆನುತೈತಂದ ಸತಿಯರಿಗೆ
ಮೇಲುದುವನಂಬರಕೆ ನೆಗಹಿ ವಿ
ಶಾಲಲೋಚನೆ ನಿಂದಳೊಬ್ಬಳು
ಬಾಲೆಯರ ಕೃತಪುಣ್ಯವೆಂತುಟೊ ಭೂಪ ಕೇಳೆಂದ ೩೩

ಇಂತು ಕೃಷ್ಣವಿಯೋಗ ಚಿತ್ತ
ಭ್ರಾಂತೆಯರು ತೊಳಲುತ್ತ ಗೋಕುಲ
ಕಾಂತೆಯರು ದೆಸೆದೆಸೆಗೆ ಹಂಬಲಿಸುತ್ತ ಹಲುಬುತ್ತ
ಮುಂತೆ ಕಂಡರು ಬರುತ ಲಕ್ಷ್ಮೀ
ಕಾಂತ ಕೃಷ್ಣನ ಹಜ್ಜೆಗಳನವ
ರಂತರಂಗದಲಾ ವರಾಂಗನೆ ಯೆಸೆವ ಹಜ್ಜೆಗಳ ೩೪

ಇತ್ತಲಿವೆ ಇವೆ ನೋಡಿ ನಮ್ಮಸು
ಹತ್ತಿಸುವ ಹಜ್ಜೆಗಳು ನಸುಗೆಂ
ಪೊತ್ತಿ ಮಿಗೆ ರಂಜಿಸುವ ಪಂಕಿಲ ಕುಂಕುಮಾಂಕಿತದ
ಉತ್ತಮ ಧ್ವಜ ವಜ್ರರೇಖೆಗ
ಳಿತ್ತಲಿವೆ ಮಾನಿನಿಯ ಹಜ್ಜೆಯೆ
ನುತ್ತ ಹೊರಳಿದರವನಿಯಲಿ ಕೃಷ್ಣನನು ಕರೆಕರೆದು ೩೫

ಆವ ಚೆಲುವೆಯೊ ಶಿವಶಿವಾ ಮು
ನ್ನಾವ ಪರಿಯಲಿ ಭಜಿಸಿದಳೊ ಬಲು
ದೈವವನು ಪೂರ್ತೇಷ್ಟದಾನವ್ರತಶತಂಗಳಲಿ
ನಾವುಳಿಯಲೊಬ್ಬಳನು ದಿಟ ವಸು
ದೇವನಂದನನೊಯ್ದನೌ ಎನು
ತಾ ವನಿತೆಯರು ಹಜ್ಜೆಗೊಂಡಱಸಿದರು ಹರಿಪದವ ೩೬

ಕದ್ದು ಹೋಗುತ್ತಿದಱೊಳಗೆ ಕು
ಳ್ಳಿರ್ದನಿದೆ ಕಾಮಿನಿಗೆ ಹೂಗಳ
ನದ್ದಯನು ತುಱುಬಿಸುತ ರಮಿಸಿದನಾತ್ಮರತನಿಲ್ಲಿ
ಅದ್ದು ಹೋಗಿವೆ ಹಜ್ಜೆಗಳು ದಿಟ
ಭದ್ರಗಾತ್ರೆಯ ವಹಿಸಿ ನಡೆದನ
ವಿದ್ಯಮಾನಾಂಘ್ರಿಯೆನುತಾ ಯೆಂದಳಲಿದರು ನೋಡಿ ೩೭

ಇಲ್ಲಿ ಹೂಗಳ ಕೊಯ್ದನಿದೆಯಿದೆ
ಯಿಲ್ಲಿಯೇ ತುದಿಗಾಲ ಹಜ್ಜೆಗ
ಳಿಲ್ಲಿಳುಹಿದನು ಸತಿಯ ಕುರುಳನು ಬಿಡಿಸಿದೆಡೆಗಳಿವೆ
ಇಲ್ಲಿ ನಕ್ಕರೆ ಬಾಯ ತಂಬುಲ
ಚೆಲ್ಲಿದೆಡೆಯಿದೆ ನೋಡಿ ತುಱುಗಿದ
ಮಲ್ಲಿಗೆಗಳಿವೆ ಯೆನುತ ಬೆಂಬತ್ತಿದರು ಹಜ್ಜೆಗಳ ೩೮

ಇಂತು ಕೃಷ್ಣನನಱಸುತಾ ಶ್ರುತಿ
ಕಾಂತೆಯರವೋಲಖಿಳ ಗೋಕುಲ
ಕಾಂತೆಯರು ತೊಳಲುತ್ತ ವಿಪಿನಾಂತರದಲೈತರಲು
ಮುಂತೆ ಕೃಷ್ಣನ ಕೂಡೆ ಬಂದಾ
ಕಾಂತೆ ನೆನೆದುದನಕಟಕಟ ಭೂ
ಕಾಂತ ಕೇಳು ದುರಾತ್ಮೆಯಲ್ಲಿಂತೆಂದಳಾ ವನಿತೆ ೩೯

ಸತಿಯರೊಳಗೆನ್ನಂತೆ ರೂಪಾ
ನ್ವಿತೆಯರಖಿಳ ಗುಣಾನ್ವಿತೆಯರಾ
ರಿತರ ನಾರಿಯರೆಲ್ಲರನು ಬಿಸುಟೆನ್ನನೊಬ್ಬಳನು
ರತಿವಿದನು ವಹಿಸಿದನಲಾ ಪರಿ
ಮಿತ ವನಸ್ಥಳಗಳಲಿ ಯೆನುತಾ
ಸತಿ ಮುಕುಂದಂಗೆಂದಳೊಯ್ಯನೆ ನಿಂದು ಮುಱುಕಿಸುತ ೪೦

ಮಿಡುಕಲಾಱೆನು ಕೃಷ್ಣ ಮುಂದೊಂ
ದಡಿಯಿಡಲು ಸೈರಿಸವು ಕಾಲ್ಗಳು
ಹುಡಿಗಳಿಗೆ ಹುಲುವಟ್ಟೆಗಳಿಗೀ ಯೆಡೆಯ ಪಥಗಳಿಗೆ
ನಡುವೆ ನೀನಿನ್ನೆತ್ತಲಿಲ್ಲಿಗೆ
ನಡೆದು ಬಳಲಿದೆ ನಾನು ಕಾಮಿಸಿ
ದೆಡೆಗೆ ಹೊತ್ತೊಯ್ಯಿ ತನ್ನನೆಂದಳು ಕಾಂತೆ ಬಸವಳಿದು ೪೧

ಎನಲು ನಕ್ಕನು ಕಾಂತೆ ಕೆಡಿಸಿದೆ
ತನಗೆ ಹೇಳದೆ ಬಱಿದೆ ಬಳಲಿದೆ
ವನಿತೆ ಕುಳ್ಳಿರು ಹೆಗಲ ಮೇಲಿನ್ನಾದಡೆಂದೆನುತ
ದನುಜಹರನಿರೆ ಸಂವರಿಸುತಂ
ಗನೆ ಸಮಾಹಿತೆಯಾದಳೇನೆಂ
ಬೆನು ವಿಚಿತ್ರವನಡಗಿದನು ಕಮಲಾಕ್ಷನಾಕ್ಷಣಕೆ ೪೨

ಬಿಟ್ಟು ಹೋದರೆ ಕಾಂತೆ ಕಾಣದೆ
ಕೆಟ್ಟೆನೆನುತಾಕ್ಷಣವೆ ಮಿಗೆ ಕಂ
ಗೆಟ್ಟು ಹೊರಳಿದಳವನಿಯಲಿ ಹಾ ರಮಣ ಹಾ ಯೆನುತ
ನಟ್ಟಡವಿಯೊಳಗೆನ್ನನೊಬ್ಬಳ
ಬಿಟ್ಟರುಳಿವೆನೆ ಹಾ ಯೆನುತ ಬಾ
ಯ್ಬಿಟ್ಟಳಬಲೆ ವನಾಂತರದಲೋರಂತೆ ಕಾತರಿಸಿ ೪೩

ಹಾ ರಮಣ ಹಾ ನಾಥ ಕರುಣಾ
ವಾರಿಧಿಯೆ ಹಾ ಕಾಂತ ಕೃಷ್ಣನೆ
ನೀರ ಹರಿ ಕಮನೀಯಮೂರ್ತಿಯೆ ವಿಮಳಕೀರುತಿಯೆ
ತೋಱು ನಿನ್ನನನಾಥೆಗೆನುತಾ
ನಾರಿ ಬಾಯ್ಬಿಡೆ ಕೇಳಿ ಗೋಕುಲ
ನಾರಿಯರು ಹರಿತಂದು ಕಂಡರು ಕಾಂತೆಯಳುತಿರಲು ೪೪

ಕೆಳದಿ ನಿನಗೇನಾಯ್ತದಾರಿಂ
ಗಳುವೆ ರಮಣನದಾರು ನೀನೀ
ಹಳುವದೊಳಗೇಕಿದ್ದೆ ಹೇಳೊಬ್ಬಳೆ ದುರಾಗತವ
ತಿಳುಹು ಸಾಕಳಬೇಡೆನುತ್ತಾ
ಲಲನೆಯರು ಸಂತಯಿಸಲೊಯ್ಯನೆ
ಬಳಲುತಾತ್ಮಕೃತಾಪರಾಧವನೆಂದಳವರೊಡನೆ ೪೫

ನಿಲ್ಲು ಸಾಕದನೇನ ಹೇಳುವೆ
ಕಳ್ಳನಾಚರಣೆಯನು ಕಲ್ಪಿಸ
ಲಿಲ್ಲ ಗುಣವಾತನಲಿ ವಿಗಡರ ದೇವನೀ ಪರಿಯ
ಕೊಲ್ಲನೇ ನಮ್ಮನು ನಿರರ್ಥಕ
ಬಲ್ಲೆನೆಂದಾಶ್ರಯಿಸಿದವರನು
ಬಲ್ಲಿದನ ಕೂಡೇವುದೆಂದರು ಕಾಂತೆಯರು ಮಱುಗಿ ೪೬

ಬಳಿಕ ಸತಿಯರು ದೆಸೆದೆಸೆಗೆ ಹಂ
ಬಲಿಸುತಡವಿಯೊಳಲ್ಲಿಗಲ್ಲಿಗೆ
ತೊಳಲಿದರು ಬೆಳುದಿಂಗಳುಳ್ಳನ್ನೆಕ ವನಾಂತದಲಿ
ನಳಿನಮುಖಿಯರು ಕೃಷ್ಣ ಚಿಂತಾ
ಕುಳಿತೆಯರು ಪಾಡುತ್ತ ಹೊಗಳು
ತ್ತಳಲುತೋರಂತಾಲಿಸುತ ಬೆಸಗೊಳುತ ಗಿಡುಮರನ ೪೭

ನೆರೆದ ವಿರಹಾಂಧತೆಗೆ ಕತ್ತಲೆ
ನೆರವು ಬರೆ ಗೋಪಿಯರು ಕೃಷ್ಣನ
ಚರಣವನು ನೆನೆಯುತ್ತ ಹಂಬಲಿಸುತ್ತ ಬಣ್ಣಿಸುತ
ತರಣಿಯುದಯವನಿರದೆ ಹಾಱುವ
ಸರಸಿಜಾವಳಿಯಂತೆ ಪರಮೇ
ಶ್ವರನೊಲವ ಹಾಱುತ್ತ ಕುಳ್ಳಿರ್ದರು ವನಾಂತದಲಿ ೪೮

ಕಾಂತೆಯರು ವನದೊಳಗೆ ಲಕ್ಷ್ಮೀ
ಕಾಂತನನು ನೆನೆಯುತ್ತ ಸುಜನ್ನೈ
ಕಾಂತ ಶರಣನನಪ್ರತಿಮನನನಂತ ವಿಗ್ರಹನ
ತಂತಮಗೆ ತದ್ಗುಣ ಚರಿತ್ರೋ
ದಂತ ಸುಧೆಯಲಿ ಮುಳುಗಿ ವಿಮಳ
ಸ್ವಾಂತೆಯರು ಪಾಡಿದರು ನಿತ್ಯಾತುಮನ ಗುಣಗಣವ ೪೯

ಇಪ್ಪತ್ತಾರನೆಯ ಸಂಧಿ ಮುಗಿಯಿತು.

# ಇಪ್ಪತ್ತೇಳನೆಯ ಸಂಧಿ

ಸಲೆ ನಿಜಾಶ್ರಿತ ಭಕ್ತರಿಗೆ ತಾ
ಸುಲಭನೆಂಬುದ ಮೆಱೆದು ಕರುಣಾ
ಜಲಧಿ ಪೈದೋಱಿದನು ಗೋಪೀಜನಕೆ ಮನವೊಲಿದು

ನಂದನಂದನ ನೀನುದಿಸಿದಂ
ದಿಂದ ಮೇಲಮರಾವತೀ ಪುರ
ದಿಂದಧಿಕ ವಿಭವದಲಿ ಗೋಕುಲವೆಸೆದುದಿನ್ನೆಬರ
ಇಂದಿರೆಗೆ ನೆಲೆಯಾಯ್ತಲಾ ಗೋ
ವಿಂದ ಗೋಕುಲದರಸ ಗೋಪೀ
ವೃಂದವಲ್ಲಭ ಕೃಷ್ಣ ಕರುಣಾನಿಧಿಯೆ ಪೈದೋಱು ೧

ಶಾರದೇಂದೀವರದಳಾಭೋ
ದಾರ ನಯನಾಪಾಂಗದಿಂದೆಲೆ
ಧೀರ ಕೊಲುವುದು ಪಂಥವೇ ನೀ ಬಿಟ್ಟ ತೊತ್ತಿಯರ
ಕೂರಲಗುಗೊಂಡಿಱಿಯಲಾಗದೆ
ಹಾ ರಮಣ ಹಾ ನಾಥ ಹಾ ಲ
ಕ್ಷ್ಮೀರಮಣ ಪೈದೋಱು ಪೈದೋಱಬಲೆಯರಿಗೆಮಗೆ ೨

ವಿಷಜಲಾಶಯ ಸರ್ಪಮುಖ ರಾ
ಕ್ಷಸ ಮಹಾಶನಿ ವೃಷ್ಟಿ ವಾತ್ಯಾ
ವ್ಯಸನದಲಿ ವೃಷ ಮಯಸುತಾದಿ ಕೃತಾಪರಾಧದಲಿ
ಅಸುಗಳೊಡೆಯನೆ ರಕ್ಷಿಸಿದೆ ತ
ಮ್ಮಸುಗಳನು ಗುಱಿಮಾಡಿ ಮನಸಿಜ
ನೆಸುಗೆಗೇಕೆಡೆಗೊಡುವೆ ಕೃಷ್ಣ ಕೃಪಾರಸಾಂಬುಧಿಯೆ ೩

ನಂದಗೋಪಿಯ ಮಗನೆ ಹುಸಿ ಗೋ
ವಿಂದನೀ ಸಾಕ್ಷಾತು ಸುರಮುನಿ
ವೃಂದವಂದಿತ ವಿಷ್ಣು ನೀ ಸಚರಾಚರಾತ್ಮಕನು
ಮುಂದುಗೆಟ್ಟಮರೌಘಸಹಿತರ
ವಿಂದಭವನಭ್ಯರ್ಥಿಸಿದರೆ ಮು
ಕುಂದ ಜನಿಸಿದೆ ಜಗವ ರಕ್ಷಿಸಲೆಂದು ಧರಣಿಯಲಿ ೪

ತರುಣಿಯರ ಪಾಣಿಗ್ರಹಣ ಮಾ
ಳ್ಪರುತರದ ಸಂಸಾರ ಭಯದಲಿ
ಶರಣುವೊಕ್ಕರಿಗಭಯವನು ಕೊಡುವೊಪ್ಪುವೀ ನಿನ್ನ
ಕರಸರೋಜವನೊಡೆಯ ತಮ್ಮಯ
ಶಿರದಲಿಡು ಶಾಶ್ವತನೆ ಕರುಣಾ
ಕರನೆ ಸನ್ನತಜೀವರಕ್ಷಾಕರನೆ ಸುಖಕರನೆ ೫

ಅನತರ ಪಾಪವನು ಕೆಡಿಸುವ
ಧೇನುಗಳ ಬಳಿ ಸಲುವ ಲಕ್ಷ್ಮೀ
ಸ್ಥಾನ ಶೋಭಿತವಪ್ಪ ಕಾಳಿಯ ಮಸ್ತಕದಲೆಸೆವ
ಧ್ಯಾನ ಮಂಗಳವಪ್ಪ ನಿಜ ಮುನಿ
ಮಾನನೀಯ ಪದಾಂಬುಜವ ನೀ
ಮಾಣದೀ ಕುಚಗಳಲಿರಿಸು ಭಂಗಿಸು ಮನೋವ್ಯಥೆಯ ೬

ಬುಧಮನೋಜ್ಞವೆನಿಪ್ಪ ಸಂತತ
ಮಧುರತರವೆನಿಸಿಪ್ಪ ವಾಕ್ಯದ
ನಿಧಿಯೆನಿಸಿ ರಂಜಿಸುವ ನಿಜವಾಗಮೃತಸೇವೆಯಲಿ
ಅಧಿಕತರ ಮೂರ್ಛಿತೆಯರಾದೆವು
ವಿಧುವದನ ವಿಭ್ರಾಜಿತನೆ ನಿ
ನ್ನಧರಸುಧೆಯಲಿ ಕಾಂತ ಸಂಜೀವನವ ಮಾಡೆಮಗೆ ೭

ಸತ್ವಜೀವನನಾಗಿ ಕವಿ ವಾ
ಗ್ವೃತ್ತಿಗಾಶ್ರಯವೆನಿಸಿ ಪಾಪ ನಿ
ವೃತ್ತಿಕರವಹ ಕೇಳಿದಡೆ ಮಂಗಳತೆಯನು ಮಾಳ್ಪ
ಮುಕ್ತಿಲಕ್ಷ್ಮಿಗೆ ನೆಲೆಯೆನಿಸಿ ಸ
ರ್ವತ್ರ ಸುಲಭವೆನಿಪ್ಪ ನಿನ್ನ ಚ
ರಿತ್ರವನು ಪೇಳ್ದರು ಸಮಸ್ತವನಿತ್ತವರು ಧರೆಗೆ ೮

ನೋಟವನು ನಗೆಗಳನು ನಿನ್ನೆವೆ
ಯಾಟವನು ನೆನೆವವರ ದುರಿತ ಕ
ವಾಟ ಭಂಜನವನು ಮನೋಜ್ಞವೆನಿಪ್ಪ ಪರಿಮಿತದ
ಕೂಟವನು ಕಮಲೇಕ್ಷಣನೆ ಮಾ
ತಾಟವನು ನೆನೆವೆಮ್ಮ ಹೃದಯದ
ಕೋಟರಕ್ಷೋಭಣವ ಮಾಳ್ಪವು ನಿನ್ನ ಲೀಲೆಗಳು ೯

ಗೋವುಗಳ ಬಳಿಸಂದು ನೀ ವೃಂ
ದಾವನಕೆ ಬಂದಿರಲು ಮನದಲಿ
ನೋವೆವಾವೆಲೆ ಕಾಂತ ಕಲು ನೆಲ ತಾಗಿದರೆ ನಿನ್ನ
ನೋವುವಂಘ್ರಿಗಳೆಂದು ನಿನ್ನಲಿ
ಜೀವವನು ತತ್ತ್ವವಿಸಿ ನಿರ್ಗತ
ಜೀವರಾದಂತಿಹೆವು ಮನೆಯಲಿ ಡಿಂಬ ಮಾತ್ರದಲಿ ೧೦

ಮತ್ತೆ ದಿನದವಸಾನದಲಿ ಕುರು
ಳೊತ್ತುಗಳ ಕೆಱು ಬೆಮರ ಭಾಳದ
ಸುತ್ತುವೀಲಿಯ ಮೆಱೆವ ತುಱುದೂಳಿಗಳ ಸಿರಿವೊಗದ
ಇತ್ತು ನಿಜಮುಖದರುಶನದ ಸೌ
ಖ್ಯೋತ್ತರದ ಸಿದ್ಧಿಯನು ನಮಗೆಲೆ
ಚಿತ್ತವಲ್ಲಭ ಮಾಳ್ಪೆ ಮನದಲಿ ಕಾಮ ಸಂಭ್ರಮವ ೧೧

ಕಾನನಕೆ ತುಱುಗಾಯ ಹೋಗಿರ
ಲೇನ ಹೇಳುವೆವೆಡೆಯಲಿರುವ್ವ ಕೃ
ಶಾನುವನು ತೃಟಿಕಾಲ ಯುಗದಂತಿಹುದು ನೀನುಳಿಯೆ
ಆನತಾಳಕ ನಿಚಯವಹ ನಿ
ನ್ನಾನನವನೀಕ್ಷಿಸುವಡೆವೆಗಳ
ವೇನ ಮಾಡಿದನಕಟ ವಿಧಿ ಬಲ್ಲವನೆ ಪರಸುಖವ ೧೨

ಪತಿಸುತ ಪ್ರಿಯ ಬಾಂಧವಾದ್ಯರ
ನತಿಗಮಿಸಿ ವೇಣುವಿನ ಗೀತಾ
ಮೃತಕೆ ಮನ ಮರುಳಾಗಿ ಬಂದೆವು ಬಲ್ಲೆ ನೀನೆಂದು
ಗತಿವಿದನೆ ನಾರಿಯರು ಬರೆ ಪರಿ
ಮಿತಕೆ ಬಿಡುವರೆ ರಾತ್ರಿಯಲಿ ವರ
ಯತಿಲಲಾಮನೆ ಕೃಷ್ಣ ನೀ ನೈದೋಱು ಸತಿಯರಿಗೆ ೧೩

ಪ್ರಣತ ಜನದಿಷ್ಟಾರ್ಥವನು ಕೊಡು
ವಣಕಿಸುವರಸುಗೊಂಬನಂತನ
ಫಣದಲೊಪ್ಪುವ ಕಮಲಭವ ಭವಮುಖ್ಯರರ್ಚಿಸುವ
ಖಣಿಯೆನಿಸುವಾಪನ್ನರಿಗೆ ಧಾ
ರುಣಿಗೆ ತೊಡವಹ ನಿನ್ನ ಚರಣವ
ನೆಣಿಸಲೇಕಿಡು ತಮ್ಮ ಕುಚಗಳಲಳಿ ಮನೋವ್ಯಥೆಯ ೧೪

ವೃಜಿನಹರನೆಂದೆನಿಪ ನಿನ್ನಯ
ನಿಜವನೆಮಗಿಂದೊಲಿದು ವಿಪಿನ
ವ್ರಜನಿನಿವಾಸಿಗಳಿಂಗೆ ತೋಱದೆ ನೀನೆ ಕರುಣದಲಿ
ಸುಜನ ಹೃದಯವ್ಯಾಧಿ ಗುರು ಭೇ
ಷಜವಲಾ ನಿನ್ನೊಲವು ಚರಣಾಂ
ಬುಜವನೇತಕೆ ಮತ್ತೆ ತೋಱಿಸಲೊಲ್ಲೆ ನೀನೆಮಗೆ ೧೫

ಮೊಲೆಗಳಲಿ ತೆಗೆದಪ್ಪಲಮ್ಮೆವು
ಚೆಲುವ ನಿನ್ನ ಪದಾರವಿಂದದ
ಮೆಲುದಳಿರು ಮೈಯುಷ್ಣ ಕಠಿಣತೆಗಳುಕುಗೆಂದಂಜಿ
ಕಲುನೆಲದಲೆಂತಳುಕದೀ ಬಲು
ಹಳುವದಲಿ ಸಂಚರಿಸಲೆಂದು
ಮ್ಮಳಿಸುತಿಹೆವೆಲೆ ಕೃಷ್ಣ ಕರುಣಾನಿಧಿಯೆ ನೈದೋಱು ೧೬

ಎನುತೆನುತ ಹಲವಂಗದಲಿ ಕೃ
ಷ್ಣನನು ಪಾಡುತ ಹಲುಬುತಾ ವ್ರಜ
ವನಿತೆಯರು ಹಂಬಲಿಸಿ ದೆಸೆಗಳ ನೋಡಿ ಬಾಯ್ಬಿಡುತ
ವನದೊಳಗೆ ಧೃತಿಗೆಟ್ಟು ನಿಜ ಕಾಂ
ತನನು ಕಾಣದೆ ಕರಗಿ ಸಲೆ ಕಂ
ಬನಿಗಳಲಿ ಹೊರಳುತ್ತ ಧರಣಿಯಲತ್ತರೊಡಲೊಡೆಯೆ ೧೭

ಹಾ ರಮಣ ಹಾ ಕಾಂತ ಹಾ ಲ
ಕ್ಷ್ಮೀರಮಣ ಹಾ ಕೃಷ್ಣ ಹಾ ಕರು
ಣಾರಸಾಂಬುಧಿ ಹಾ ಮುಕುಂದ ಮನೋಜ್ಞ ಮೂರುತಿಯೆ
ನಾರಿಯರು ತನಗಿದಿರೆ ನಮ್ಮಲಿ
ವೈರವೇಕೈ ಕೃಷ್ಣ ನೀ ವೈ
ದೋಱದರೆ ನಾವುಳಿಯಲಾಱೆವೆನುತ್ತ ಹಲುಬಿದರು ೧೮

ದೇವ ನೀನೊಲ್ಲದೊಡೆ ನಿನ್ನೀ
ಭಾವವೇ ಸಾಕೆಮಗೆ ನಿನ್ನಲಿ
ಜೀವವನು ಬೆರಸುವೆವು ತನು ವಿರಹಾಗ್ನಿ ತಾಪದಲಿ
ಬೇವುದೈಸಲೆ ಎನುತ ಮಿಗೆ ತ
ದ್ಭಾವದಲಿ ಮೂರ್ಛಿತೆಯರಾಗಿರೆ
ದೇವಕೀನಂದನನು ವೈದೋಱಿದನು ಸತಿಯರಿಗೆ ೧೯

ನಗೆಮೊಗದ ನಯನಾರವಿಂದದ
ಲೊಗುವ ಕಾರುಣ್ಯಾಮೃತದ ವೀ
ಚಿಗಳ ವಿಶದದ್ಯುತಿಯ ದಂತಾವಳಿಯ ಮೌಕ್ತಿಕದ
ಮೃಗಮದದ ಪರಿಮಳದ ಕುರುಳೋ
ಳಿಗಳ ಕಮನೀಯಾಂಗರಾಗದ
ಜಗದ ಸೊಬಗಿನ ದೇವ ವೈದೋಱಿದನು ಸತಿಯರಿಗೆ ೨೦

ಉಟ್ಟ ಪೀತಾಂಬರದ ತೋಳ್ಗಳ
ಲಿಟ್ಟ ಮಣಿ ಕಂಕಣದ ಕೊರಳಲಿ
ತೊಟ್ಟ ವನಮಾಲೆಗಳ ಕೌಸ್ತುಭ ಮಕರ ಕುಂಡಲದ
ಇಟ್ಟೆಡೆಯ ತನು ಸಿಂಗರದಲೊಡ
ಲಿಟ್ಟ ಕಾಮನ ಗರ್ವವನು ಕೆಡೆ
ಮೆಟ್ಟಿ ಮೆಱೆವಂಗದಲಿ ವೈದೋಱಿದನು ಸತಿಯರಿಗೆ ೨೧

ಅಂದು ನವನಾವಸ್ಥೆಯರು ಮನ
ಸಂದು ಕೃಷ್ಣಧ್ಯಾನ ಸುಖದೊಳ
ಗಿಂದುಮುಖಿಯರು ಕಾಣದಿತರವ ಮಱೆದು ಕುಳ್ಳಿರಲು
ನಿಂದು ದನಿದೋಱಿದನು ಪೊಂಗೊಳ
ಲಿಂದ ವಿವಿಧ ಶ್ರುತಿಗಳಲಿ ಗೋ
ವಿಂದನಾಪ್ಯಾಯನವ ಮೊಳ್ಪಂತಿರೆ ವಧೂಜನಕೆ ೨೨

ಕೊಳಲ ನಾದವ ಕೇಳುತವೆ ಕೋ
ಮಳೆಯರೆದ್ದರು ಕೃಷ್ಣ ಕರುಣಾ
ಜಲಧಿಯಾವೆಡೆ ಕಾಂತನೀನಾವೆಡೆಯೆನುತ್ತೈದಿ
ಪುಳಕಿತಾಂಗೆಯರಪ್ಪಿದರು ಕಂ
ಗಳಲಿ ನಳಿತೋಳ್ಗಳಲಿ ಹೋದಸು
ಗಳನು ಪಡೆದಂತೇನನೆಂಬೆನು ಹರುಷದುತ್ಸವವ ೨೩

ಲಲನೆಯೊಬ್ಬಳು ಕೃಷ್ಣನಂಗೈ
ತಳವ ಪಿಡಿದಳು ತನ್ನೆಸೆವ ಕರ
ತಳದಲೊಪ್ಪುವ ಚಾರುಚಂದನವೆಸೆವ ಹರಿಭುಜವ
ತಳೆದು ನಿಂದಳು ತನ್ನ ಹೆಗಲಲಿ
ಕಳೆದುಕೊಂಡಳು ಕಾಂತೆ ಮತ್ತೊ
ಬ್ಬಳು ಮುಕುಂದನ ಬಾಯ ತಂಬುಲವನು ಕರಾಗ್ರದಲಿ ೨೪

ಒಬ್ಬಳೆಡವಂಕದಲಿ ಭಜಿಸಿದ
ಳೊಬ್ಬಳಿರೆ ಬಲವಂಕದಲಿ ಮ
ತ್ತೊಬ್ಬಳಪ್ಪಿದಳುರದೊಳಗೆ ಹರಿಪಾದಪಂಕಜವ
ಒಬ್ಬಳೆವೆಯಿಕ್ಕದೆ ನಿರೀಕ್ಷಿಸಿ
ಸರ್ಬಲೋಕೇಶ್ವರನ ವದನವ
ನುಬ್ಬಿದಳು ಪುಳಕದಲಿ ನಯನಾನಂದ ಬಾಷ್ಪದಲಿ ೨೫

ಒಬ್ಬಳೀಕ್ಷಿಸಿದಳು ಸರೋಷದ
ಲೊಬ್ಬಳೌಕಿದಳಧರವನು ಮ
ತ್ತೊಬ್ಬಳುಱೆ ಚುಂಬಿಸಿದಳೆಸೆವ ಕದಂಪನೋರಂತೆ
ಒಬ್ಬಳುಱೆ ನಡೆ ನೋಡಿ ಕೃಷ್ಣನ
ಸರ್ಬಲೋಕದ ಚೆಲುವ ಮೂರ್ತಿಯ
ತಬ್ಬಿದಳು ತನ್ನಂತರಂಗದಲಪ್ಪಿ ವೈಮಱೆದು ೨೬

ಇಂದುವದನೆಯರಚ್ಯುತನನೊಂ
ದೊಂದು ಪರಿಯಲಿ ಭಜಿಸಿ ವಿರಹದ
ದಂದುಗವನೀಡಾಡಿ ನಿಮಿಷಾರ್ಧ ಪ್ರಸಂಗದಲಿ
ಸಂದಣಿಸುವುತ್ಸವದ ಪರಮಾ
ನಂದರಸ ಪುಳಕಂಗಳಲಿ ಗೋ
ವಿಂದನನು ಪರಿವರಿಸಿ ನಿಂದರು ಕೂಡೆ ಸಮತಳಿಸಿ ೨೭

ಅರಸ ಕೇಳೊಪ್ಪಿದುದು ಪರಮೇ
ಶ್ವರನ ಮಂಗಳ ಮೂರ್ತಿ ತಾರಾ
ಪರಿವೃತೇಂದುವಿನಂತೆ ತನ್ವಂಗಿಯರ ಮಧ್ಯದಲಿ
ಸರಸಿರುಹದಳನಿಕರ ಮಧ್ಯ
ಸ್ಫುರಿತ ಕರ್ನಿಕೆಯಂತೆ ಸೊಬಗಿನ
ಪರಿಮಳದ ಸಂಪನ್ನಗುಣ ತೇಜೋವಿಶೇಷದಲಿ ೨೮

ಬಳಿಕ ಕರಿಣೀಯೂಥ ಮಧ್ಯದ
ಬಲುಗಜೇಂದ್ರನವೋಲು ಗಗನಾ
ವಳಿಯ ಪರಿವಾರದಲಿ ಪರಮೇಶ್ವರನು ರಂಜಿಸುತ
ನೆಲವು ಮಿಗಲೈತಂದನೊಪ್ಪುವ
ಪುಳಿನದೆಡೆಗುತ್ಸಹಿಸಿ ಕುಮುದಾ
ವಳಿ ವಿಶಾಲಿತ ಪುಷ್ಪಸಂತತಿ ಸೌರಭಸ್ಥಳಕೆ ೨೯

ನಿಗಮ ಮಸ್ತಕಗಳಲಿ ಮುನಿಗಳ
ಬಗೆಯ ಬೈಸಿಕೆಗಳಲಿ ರಂಜಿಸು
ವಗಧರಂಗಾಸನವನುರದಪ್ಪಿನಲಿ ಶೋಭಿಸುವ
ಸೊಗಯಿಸುವ ತಂತಮ್ಮ ಕುಚಪ
ಟ್ಟಿಗಳಲೊಪ್ಪಿರಲಿಕ್ಕಿ ವನಿತೆಯ
ರಗಣಿತಾಮಳ ಮಹಿಮನನು ಕುಳ್ಳಿರಿಸಿದರು ನಡುವೆ ೩೦

ಪಂಕಜಾಕ್ಷನು ನಗುತ ವರಕುಚ
ಕುಂಕುಮಾರುಣ ಪಟ್ಟಿಕಾಪರಿ
ಯಂಕದಲಿ ಕುಳ್ಳಿರ್ದನಭಿನವ ರೂಪವಿಭವದಲಿ
ಅಂಕದಲಿ ತೆಗೆದನುಪಮನ ಪದ
ಪಂಕಜವನಾದರದಲೊತ್ತುತ
ಪಂಕಜಾಕ್ಷಿಯರೆಂದರಿಂತನ್ಯಾಪದೇಶದಲಿ ೩೧

ಭಜಿಸುವರನೇ ಭಜಿಸುವರು ಕೆಲ
ರಜಿತರನೆ ಭಜಿಸುವರಲೈ ನೆಱೆ
ಭಜಿಸುವರು ಕೆಲರಾರುವನು ಕೆಲರೊಲ್ಲರುಭಯವನು
ಸುಜನರಾರಿನಿಬರೊಳು ಭಾವದ
ನಿಜವ ಹೇಳೆಲೆ ಕೃಷ್ಣ ತಮಗೆನೆ
ತ್ರಿಜಗದಾರಾಧಿತನು ನಗುತಿಂತೆಂದನವರೊಡನೆ ೩೨

ಭಕುತರನೆ ಭಜಿಸುವರಲೇ ಸಾ
ಧಕರು ನಿಜಕಾರ್ಯದ ಕೃತಿಜ್ಞರು
ಭಕುತರನು ಭಜಿಸುವವರಾತ್ಮಜ್ಞಾನಪಂಡಿತರು
ವಿಕಳಮತಿಗಳು ಕೇಳು ಸಲೆ ಬಾ
ಲಕರು ಭಕುತಾಭಕತರೆನ್ನದೆ
ಸುಕೃತಿಗಳು ಭಜಿಸುವರು ಪರಮಕೃಪಾಳುವನು ಧರೆಗೆ ೩೩

ಇನಿಬರೊಳಗಾನಾರುವಲ್ಲೆಲೆ
ವನಿತೆಯರಿರಾ ಸ್ವಾರ್ಥ ಸಾಧಕ
ತನವೆನಗೆ ಮುನ್ನಿಲ್ಲ ವೇಣು ಕೃತಿಜ್ಞ ತಾನಲ್ಲ
ನೆನೆವ ಭಕುತರ ಭಜಕ ನಾನೆ
ನ್ನನುವನಱಿಯರಲಾ ನಿಜಾಶ್ರಿತ
ಜನಪರಾಯಣನೆಂಬ ಬದ್ಧವ್ರತನು ತಾನೆಂದ ೩೪

ಧನವಿಹೀನನು ಲಬ್ಧಧನದಳ
ಲಿನಲಿ ತುಳಿದನ್ಯೋಪಭೋಗದ
ಮನವನಳಿವಂತೆನ್ನ ಕಾಣದಡಕಟ ನಿಮಗಿಂದು
ಘನತರ ಸ್ನೇಹಾನುಬಂಧದ
ಮನವಿದೆನ್ನಲಿ ತೀವ್ರತರವಹು
ದೆನುತಡಂಗಿದೆನಬಲೆಯರಿರನ್ಯಾಯವೇನೆಂದ ೩೫

ಇಲ್ಲ ನಿಮಗೆನ್ನಂದದತಿಶಯ
ವಲ್ಲಭರು ನಿಮ್ಮಂದದವರೆನ
ಗಿಲ್ಲ ಸದ್ಭಕ್ತೆಯರು ವಲ್ಲಭೆಯರು ವಿಚಾರಿಸಲು
ಬಲ್ಲೆ ನಾನುಪಕಾರವನು ಗುಣ
ದಲ್ಲಿ ದೋಷವನೀಕ್ಷಿಸದಿರೆ
ನಿಲ್ಲಿ ನಿಮ್ಮನುರಾಗವಿದು ದುರ್ಭೇದ್ಯವಾಯ್ತೆಂದ ೩೬

ತೊಱೆದಿರೆನಗೋತಿಹಪರವನುಱೆ
ಮಱೆದಿರಾತ್ಮಕುಲಾಭಿಮಾನವ
ನುಱುವ ಗೃಹ ಪತಿ ಭೃತ್ಯಪುತ್ರ ಸಹಾಯ ಬಾಂಧವರ
ಎಱಕವಡೆದಿರಿ ತನ್ನಲಾತ್ಮನ
ನಱಿದ ಬುಧರಂತಾವ ಕಾಲಕೆ
ಮಱೆವೆ ತಾನಿದನೆನುತ ನಿತ್ಯಾತುಮನು ನೇಮಿಸಿದ ೩೭

ಇಪ್ಪತ್ತೇಳನೆಯ ಸಂಧಿ ಮುಗಿಯಿತು.

# ಇಪ್ಪತ್ತೆಂಟನೆಯ ಸಂಧಿ

ಆಡಿದನು ಮನವೊಲಿದು ರಾಸ
ಕ್ರೀಡೆಯನು ಗೋಪಾಂಗನೆಯರೊಡ
ಗೂಡಿ ಗೋಪೀನಾಥನಾನತ ಸಕಲ ಸುರನಾಥ

ಕೇಳು ನೃಪ ಕಮಲಾಕ್ಷಿಯರು ಸಿರಿ
ಲೋಲನಾಶ್ರಿತ ಭಕ್ತವಶ್ಯ ವಿ
ಶಾಲ ಕಾರುಣ್ಯಾಮೃತರಸಾಸಾರಸೂಕ್ತಿಗಳ
ಆಲಿಸುತ ತದ್ವಿರಹವಹ್ನಿ
ಜ್ವಾಲೆಯನು ಸಂತೋಷರಸದಲಿ
ಬೀಳುಕೊಟ್ಟರು ಬಾಲೆಯರು ನಿಮಿಷಾರ್ಧಮಾತ್ರದಲಿ ೧

ಅಲ್ಲಿ ರಾಸಕ್ರೀಡೆಯನು ನಿಜ
ವಲ್ಲಭೆಯರೊಡಗೂಡಿ ಲಕ್ಷ್ಮೀ
ವಲ್ಲಭನು ತೊಡಗಿದನು ಗೋಪೀಜನಮನೋರಥವ
ಭುಲ್ಲವಿಸಲನ್ಯೋನ್ಯಯುತಕರ
ಪಲ್ಲವದ ಕದಪುಗಳ ತೋಳ್ಗಳ
ಪಲ್ಲಟದ ಪರಿರಂಭಣಾದಿ ವಿಚಿತ್ರಗತಿಗಳಲಿ ೨

ಚಲದಳಕರಾಜಿಗಳ ಕರ್ಣೋ
ಜ್ವಲದ ಬಹಳ ಸ್ವೇದಜಲಪರಿ
ಲುಳಿತ ತಿಲಕದ ಹೊಳೆವ ಮಣಿಕುಂಡಲದ ಕದಪುಗಳ
ಎಳನಗೆಯ ಸುಪ್ರೇಮವೀಕ್ಷಣ
ದಲಸಗಮನದ ವಿಭ್ರಮದ ಹರಿ
ಸಲಿಸಿದನು ಮನವನು ಸರಾಗದ ರಾಸ ಗೋಷ್ಠಿಯಲಿ ೩

ಚಲಕುಚದ್ವಯಭಾರದಲಿ ನಡು
ಬಳುಕಿ ಬಹಳ ನಿತಂಬ ಭಾರ
ಸ್ಖಲಿತ ಪದವಿನ್ಯಾಸೆಯರು ಸಂಗಾಭಿಲಾಷೆಯರು
ಬಳಲಿದಂತಚ್ಯುತನ ತೋಳ್ಗಳ
ಮಲಗಿ ಮುಡಿದೊಳುಮಲ್ಲಿಗೆಗಳಳಿ
ಗಿಳಿಯುಲಾಡಿದರಾಳ್ದನೊಳು ಗುಣಗಣವ ಪಾಡುತ್ತ ೪

ಕಾಲಲೊಪ್ಪುವ ನೂಪುರದ ನಳಿ
ತೋಳುಗಳ ಕಂಕಣದ ಕಟಿತಟ
ಲೋಲ ಕಾಂಚೀಗುಣದ ಮಣಿಮುದ್ರಿಕೆಯ ಬೆರಳುಗಳ
ಮೇಲೆ ಬಿದ್ದರೆ ವಿಟರೆದೆಯನಿ
ಪ್ಪೋಳುಗಳನುಗುರುಗಳ ಬಿಂಕದ
ಬಾಲೆಯರು ಬಳಸಿದರು ಬಹು ವಿಭ್ರಮದಲಚ್ಯುತನ ೫

ಕರಕಮಲ ವಿಧೃತಿಗಳ ಕಂಕಣ
ವಿರಣಿತದ ನೂಪುರ ಝಣತ್ಕೃತಿ
ಮೆಱೆವ ಪಾದ ಪ್ರಾಸಗತಿಗಳ ಸುಸ್ಮಿತೇಕ್ಷಣದ
ಸರಸ ವಚನದ ಸಕಲ ಲೋಕಾ
ಕರುಷಣ ಧೃತಿವಿಭ್ರಮದ ಸರ
ಸಿರುಹ ಮುಖಿಯರು ಸೂಱೆಗೊಂಡರು ಜನದ ಕಣ್ಮನವ ೬

ಆಡಿದರು ಮನದಣಿಯೆ ಹರಿಯನು
ಪಾಡಿದರು ಮನವೊಲಿದು ಸತಿಯರು
ಕೂಡಿದರು ಸೋಪಾಧಿಕದ ಸಾಯುಜ್ಯ ಸಂಪದವ
ಮೂಡಿದವು ಕಿಱು ಬೆಮರು ಮುಖದಲಿ
ನೋಡಿ ಕರುಣಾವನಧಿ ತೊಡೆದನು
ಕೂಡೆ ಕಾಲ ಶ್ರಮ ಭಯಾಪಹ ನಿಜ ಕರಾಗ್ರದಲಿ ೭

ತೋಳುಗಳ ತಕ್ಕವಿಸಿ ಬಳಲಿದು
ಬಾಲೆಯರು ವಶವಳಿದು ತನ್ನಯ
ಮೇಲೆ ಬೀಳುತ್ತಿರಲು ಕರುಣಾವನಧಿ ಸಂತೈಸಿ
ಏಳಿ ರಾಸಶ್ರಮಕೆ ಕಡೆ ಜಲ
ಕೇಳಿಯೇ ಕರ್ತವ್ಯವೆನುತಾ
ಲೋಲದೃಶೆಯರು ಸಹಿತ ಬಿಜಯಂಗೈದನೊಲವಿನಲಿ ೮

ಬರೆ ಸರೋರುಹನೇತ್ರನನು ಪಂ
ಕರುಹ ಮುಕುಳಿತ ಹಸ್ತ ಕೈರವ
ಪರಿಮಳದ ಕಾಣಿಕೆಯನಿತ್ತಳಿಗೀತದಲಿ ಪಾಡಿ
ಭರಿತ ಪವನ ವ್ಯಜನ ಹಂಸೋ
ತ್ಕರದ ಚಾಮರಗಳಲಿ ಮಿಗೆ ಸತು
ಕರಿಸಿ ಸರಸೀ ನಾರಿ ಮನ್ನಿಸಿದಳು ಮುರಾಂತಕನ ೯

ಸರಸಿ ಸಜ್ಜನ ಹೃದಯದಂತಿರೆ
ಪರಿಹೃತಾಖಿಳ ಕಲುಷಿತೆಯರಂ
ಬುರುಹ ಮುದ್ರಿತ ಭೃಂಗದಲಿ ಕೃಷ್ಣಾತ್ಮರಂತಿರಲು
ಸರಸಿಜಾಕ್ಷಿಯರೀಳಿದರದಜೊಳು
ಪರಿಹರಿಸಲೆಂದಾ ರತಿಶ್ರಮು
ದುರವಣೆಯನಚ್ಯುತನ ಬಳಿಯಲಿ ವಿಮಲ ಸಲಿಲದಲಿ ೧೦

ಇಳಿದು ಕಲಕಿದರಾ ಸರೋವರ
ಕಲಕದಣುಸಂಕ್ಷೋಭವಿಲ್ಲದೆ
ಚಲಿಸದಿರ್ದುದು ಚಪಳೆಯರ ಘೆಲ್ಲಣೆಯ ಗಜಬಜಕೆ
ಸಲಿಲ ಸಂಪನ್ನತೆಯಲಿಂತಿಂ
ತೊಳಗೆ ಸಾಕ್ಷಾದ್ವಿಷ್ಣುವಿರೆ ಕಳ
ವಳಿಸುವರೆ ಬಲ್ಲವರು ವಿಷಯಭ್ರಾಂತಿಗೆಂಬಂತೆ ೧೧

ಚೆಲ್ಲಿದರೆ ಜಲವಾ ಸರೋವರ
ದಲ್ಲಿಯೇ ಸೂಸಿದುವು ಬಹಳತೆ
ಯುಳ್ಳ ಕಾರಣದಿಂದ ಕರಣೇಂದ್ರಿಯದ ವೃತ್ತಿಗಳು
ಎಲ್ಲರೊಳು ತಾವೆಂದು ಕಂಡವ
ರಲ್ಲಿ ಲಯವಹವಿತರ ದೋಷವ
ನೆಳ್ಳನಿತ ಸಂಗ್ರಹಿಸನೆಂದೆಂಬುದನು ತೋರ್ಪಂತೆ ೧೨

ಕಳೆದನರೆ ನಿಮಿಷದಲಿ ಲಲನಾ
ವಳಿಯ ರಾಸಶ್ರಮುವನಂದಾ
ಸಲಿಲ ಕೇಳಿ ನಿಜಾತ್ಮ ತತ್ವ ಜ್ಞಾನ ವಿಭವದಲಿ
ಬಳಲಿಕೆಯ ಕಳೆವಂತೆ ಕರುಣಾ
ಜಲಧಿ ತುಳುಕಾಡಿದನು ಸರಸೀ
ಸಲಿಲ ಸಮ್ಮೇಳದಲಿ ಕಾಮಿನಿ ಜನದ ಮೋದದಲಿ ೧೩

ಶ್ರಮ ಸಮೂಹ ನಿವಾರಣೈಕ
ಕ್ಷಮವಲಾ ಜಲಕೇಳಿ ಮಗುಳಾ
ಶ್ರಮುವನೀಯದು ಬನ್ನಿಯೆನುತಾಡಿದನು ಹರಿಯೊಲಿದು
ಭ್ರಮ ನಿಬಂಧನ ಸಕಲ ದುಃಖ
ಶ್ರಮ ನಿವಾರಣವೆನಿಪ ಗುರುಪದ
ಕಮಲ ಭಕ್ತಿ ಶ್ರಮದಪೋಲೆಂಬುದನು ತೋರ್ಪಂತೆ ೧೪

ಹಂಸನೈತರೆ ಸರಸಿಯೊಳಗಣ
ಹಂಸತತಿ ಹಾಱಿದುವು ಭಯದಲಿ
ಹಂಸನಾಸಾತ್ಮವನು ಸೈರಿಸನೆಂದು ತೋರ್ಪಂತೆ
ಕಂಸರಿಪು ಕಮಲಾಸನೆಯರಿದಿ
ರಂಸೆಯುಡಗಲು ಸಕಲ ದುಃಖ
ಧ್ವಂಸನದ ಜಲಕೇಳಿಯನು ನಲಿದಾಡಿದನು ಬಿಡದೆ ೧೫

ಜನಪ ಕೇಳಾಡಿದನು ಗೋಪೀ
ಜನ ಮನೋವಲ್ಲಭನು ಜಲ ಸಂ
ಜನಿತ ಕೇಳಿಯಲಿಂತು ಹೂಮಳೆಗಱೆದು ಗಗನದಲಿ
ಅನಿಮಿಷರು ಭಾಪೆನಲು ಸೇವಕ
ಜನ ಮನೋರಥಕಾರಿ ತಾನೆಂ
ದೆನಿಸಿ ಸಲಿಸಿದಸಿರದೆ ಗೋಪಾಂಗನೆಯರಭಿಮತವ ೧೬

ಲತೆವನೆಯಲಾಡುತ್ತ ವನ ತರು
ತತಿಗಳನು ತೋಱುತ್ತ ಭೃಂಗ
ಶ್ರುತಿ ಮನೋಹರ ಗೀತವನು ಕೇಳುತ್ತ ಪಾಡುತ್ತ
ಸತಿಯರನು ಪಾಡಿಸುತ ತಕ್ಕೈ
ಸುತ ನಿಜ ಪ್ರೇಮದಲಿ ಮನಸಾ
ರತಿಕಳಾ ಸರ್ವಸ್ವ ಸಂಪತ್ತಿಯನು ತೋಱಿಸಿದ ೧೭

ಹೇಳಿದೆಯೆಲ್ಯೆ ಮುನಿಪ ಧರ್ಮವ
ಹೇಳುವಾತನು ಜಗಕೆ ಧರ್ಮವ
ಪಾಲಿಸುವ ಲಾಲಿಸುವ ತದನುಷ್ಠಾತೃವೆಂದೆನಿಪ
ಶ್ರೀಲಲಾಮ ಪದಾಬ್ಜ ನೆಂತೈ
ಮೇಳವಾಡಿದನಾ ಪರಸ್ತ್ರೀ
ಜಾಲದೊಡನೆ ವಿಚಿತ್ರವಾಯ್ತೆನಲೆಂದನಾ ಮುನಿಪ ೧೮

ಅರಸ ಕೇಳನ್ಯಾಯವೇನಂ
ಬುರುಹನಾಭಂಗಖಿಳ ಸಚರಾ
ಚರ ಜಗಚ್ಚೈತನ್ಯ ರೂಪಂಗದ್ವಿತೀಯಂಗೆ
ನಿರುತ ಲೋಕಕೆ ವಿಧಿ ನಿಷೇಧನ
ಬರೆದು ತಲೆಯಲಿ ಕಟ್ಟಿ ನಡಿಸುವ
ಪರಮ ಪುರುಷಂಗುಂಟೆ ವಿಧಿಕಿಂಕರತೆ ಹೇಳೆಂದ ೧೯

ನುಡಿಯ ಸತ್ಯವ ನೋಳ್ಪುದಲ್ಲದೆ
ನಡೆಯ ನೋಳ್ಪಾ ಮಗನೆ ವಿಷವನು
ಕುಡಿದನೀಶ್ವರನೆಂದಡೆಲ್ಲರಿಗಹುದೆ ಪತಿಗಳಿಗೆ
ಒಡನಿಹರು ಗೋಪಿಯರು ಮನೆಯಲಿ
ಬಿಡದೆ ತನ್ನಂತಿಕದಲಿಹರಾ
ಗೊಡರಿಸುವುದೀ ಶಕ್ತಿಯೆಂದನು ಮುನಿ ನೃಪಾಲಂಗೆ ೨೦

ಹೇಳಿದಡೆ ಕೇಳಿದಡೆ ಪಾಪೋ
ನ್ಮೂಲನವ ಮಾಡುವುದು ಕೃಷ್ಣನ
ಲೀಲೆ ಗೋಪೀಜಾರನೆಂದಡೆ ಭೂಪ ಮೂಜಗಕೆ
ಹೇಳಲೇಕಘಹರವಲ್ಯೆ ಸುವಿ
ಶಾಲ ಪುಣ್ಯಪ್ರದವಿದಿಂತಿದ
ನೇಳಿದಿಟವನು ಮಾಳ್ಪವರು ಪಾಪಾತ್ಮರವರೆಂದ ೨೧

ರತಿಯನುತ್ಪಾದಿಸುತೆ ನಿಜಸುಖ
ರತನೆನಿಸಿ ಸತಿಯರಿಗೆ ಚರಣಾ
ಶ್ರಿತೆಯರಿಗೆ ದಿಟ ವಿಟನವೋಲಸ್ಖಲಿತ ವೀರ್ಯನಲಾ
ಕ್ಷಿತಿಪ ಲೌಕಿಕವಲ್ಲ ಲಕ್ಷ್ಮೀ
ಪತಿಯ ಪರಮ ವಿಹಾರವಜ್ಞರ
ಮತಿಗೆ ಗಮ್ಯವೆ ಮಗನೆ ಮುರಮಥನನ ಮಹಾಮಹಿಮೆ ೨೨

ಸಕಲ ಜೀವರಿಗೊಂದು ನೆವದಲಿ
ಮುಕುತಿಯನು ಕೊಡಲೆಂದು ಸಲೆ ಸು
ಪ್ರಕಟವಾದುದು ಸರಸಿಜಾಕ್ಷನ ಮೂರ್ತಿ ಮೇದಿನಿಗೆ
ಅಕಟ ವಿಟಬುದ್ಧಿಯಲಿ ವಿಹಿತಾ
ಸಕುತಿಯಲಿ ಗೋಪಿಯರು ಪಡೆಯದೆ
ಮುಕುತಿಯನು ಬರಲಾಡಿದವರಚ್ಯುತನ ಸನ್ನಿಧಿಗೆ ೨೩

ಆಡಿ ಮನ ಬಂದಂತೆ ನಲಿದೆಡೆ
ಯಾಡಿ ಹರಿಯೊಳಗರ್ಥಿಯಲಿ ಮಾ
ತಾಡಿ ರತಿಕೋವಿದೆಯರಂತಿಂತೊಲಿದು ಲೀಲೆಯಲಿ
ಕೂಡೆ ವನಭೂಮಿಯನು ಪಾವನ
ಮಾಡಿ ಬೆಳಗಹ ಜಾವದೊಳಗಾ
ಗಾಡಿಕಾತಿಯರೈದುವರು ತಂತಮ್ಮ ಮನೆಗಳಿಗೆ ೨೪

ಹೋಗಿ ನೀವೆಂದೆನುತ ಕರುಣಾ
ಸಾಗರನು ನೇಮಿಸಲು ವಿರಹದ
ಬೇಗೆಯಲಿ ಬೇಯುತ್ತ ಹೋಹರು ವನಿತೆಯರು ಮನೆಗೆ
ಯೋಗಮಾಯಾಧೀಶ್ವರನನನು
ರಾಗದಲಿ ಪಾಡುತ್ತ ಹಗಲನು
ನೀಗುವರು ತದ್ಭಾವಭಾವಿತ ಚಿತ್ತವೃತ್ತಿಯಲಿ ೨೫

ಇಂತು ಗೋಪಿಯರೊಡನೆ ಲಕ್ಷ್ಮೀ
ಕಾಂತನಾಡಿದ ವಿಮಳ ಚರಿತೋ
ದಂತ ಸುಧೆಯನು ಸೇವಿಸುವರಾರಿದನು ಭಕುತಿಯಲಿ
ಅಂತಕನನೊದೆದಚ್ಯುತನ ಚರ
ಣಾಂತಿಕವನೈದುವರವರು ಭೂ
ಕಾಂತ ಭುವನಾಧೀಶ ನಿತ್ಯಾತುಮನ ಕರುಣವಲಿ ೨೬

ಇಪ್ಪತ್ತೆಂಟನೆಯ ಸಂಧಿ ಮುಗಿಯಿತು

# ಇಪ್ಪತ್ತೊಂಬತ್ತನೆಯ ಸಂಧಿ

ಗೋಪ ಗೋಪೀ ಜನ ಮನೋಜ್ಞಾ
ಳಾಪನಮಲ ಚರಿತ್ರ ಮುರರಿಪು
ಶಾಪಮೋಕ್ಷವನಿತ್ತನಾ ವಿದ್ಯಾಧರಂಗೊಲಿದು

ಒಂದು ದಿನ ಕೇಳರಸ ಗೋಪರ
ವೃಂದ ನಡೆದುದು ದೇವಯಾತ್ರಾ
ನಂದ ಸಿದ್ಧಿಗೆ ಸಕಲ ಜನ ಸಹಿತಂಬಿಕಾ ವನಕೆ
ಬಂದು ತೀರ್ಥದಲಂಬಿಕಾಂಘ್ರಿ
ದ್ವಂದ್ವವನು ಭಜಿಸುತ್ತ ರಾತ್ರಿಯ
ಲಂದು ಮೈಮಱೆದಿರ್ದರುಪವಾಸದಲಿ ಗೋವಳರು ೧

ಹಗಲು ಹರ ಗಿರಿಜಾ ಪದಾಂಬುಜ
ಯುಗಳವನು ಪೂಜಿಸುತ ವಿಪ್ರರ
ಬಗೆ ದಣಿಯೆ ಗೋಭೂಮಿ ವಸನ ಹಿರಣ್ಯದಾನದಲಿ
ಸೊಗಯಿಸುವ ಮೃಷ್ಟಾನ್ನ ಪಾನಾ
ದಿಗಳಲೊಪ್ಪಿರಲಿರುಳು ನಿದ್ರೆಯ
ಬಿಗುಹಿನಲಿ ಮೈಮಱೆದು ಮಲಗಿರ್ದರು ವನಾಂತದಲಿ ೨

ನಂದನಾ ರಾತ್ರಿಯಲಿ ವನದೊಳ
ಗಂದು ಮೈಮಱೆದೊಱಗುತಿರಲ್ಕೆ
ತಂದುದವದಿರ ದನಿಗೆ ಮೈಮುಱಿದೆದ್ದು ಕಂದೆಱೆದು
ಬಂದಿತುಗ್ರೋರಗ ಮಹಾಶನ
ವಿಂದು ದೊರಕಿದುದೆನುತ ಸರಭಸ
ದಿಂದ ನುಂಗಿದುದೇನನೆಂಬೆನು ನಂದನನು ಹಿಡಿದು ೩

ನಿದ್ದೆ ತಿಳಿದುರಗಾಸ್ಯದಲಿ ತಾ
ಬಿದ್ದೆನೆನುತೊಱಲುವನ ದನಿ ಕೆಲ
ಕಿದ್ದವರನೆಬ್ಬಿಸಿತು ಹರಿತಂದುದು ಜನಸ್ತೋಮ
ಎದ್ದುದಲ್ಲಿಹ ಬಲಿದ ಕತ್ತಲೆ
ಕದ್ದುದನಿಬರ ಕಣ್ಣನೊಱಲುವ
ಶಬ್ದವೇ ಪ್ರಾಮಾಣ್ಯವಡೆದುದು ಭೂಪ ಕೇಳೆಂದ ೪

ಹಱಿದರತ್ತಾಯುಧಗಳಿಂದ
ಬ್ಬಱಿಸಿ ಹೊಯ್ದರು ಕಲ್ಲುಗಳಲಿ
ಟ್ಟರು ಕಠಾರಿಯಲಿಱಿದರಪ್ಪಳಿಸಿದರು ದಡಿಗಳಲಿ
ಅಱಿಯನಸುವೇದನೆಯನಂತದ
ನುರಗಪತಿ ಬಾಯ್ದೆಱಿದು ನುಂಗುವ
ಭರದಲಿದ್ದನು ನಂದಗೋಪನನಿಳೆಯೊಳಡಗೆಡಹಿ ೫

ಗಾರುಡದ ಮಂತ್ರದಲಿ ಕೆಲರುದು
ಗಾರತಂತ್ರಂಗಳಲಿ ಕೆಲರಹಿ
ಮಾರಣದ ವಿಧಿಗಳಲಿ ಕೆಲರೌಷಧ ವಿಧಾನದಲಿ
ಆರದಾವಂಗದಲುಪದ್ರಿಸೆ
ಸಾರವೆಂತುಟೊ ಸಹಜ ವಿಗತವಿ
ಕಾರನಿರ್ದನು ಸರ್ಪನಾತ್ಮಜ್ಞಾನರತನಂತೆ ೬

ಎಲೆಲೆ ನುಂಗಿತು ನುಂಗಿತಯ್ಯನ
ನಳಲಿಗನೆ ಹಾ ಕೃಷ್ಣ ಹಾ ಗೋ
ಕುಲದರಸ ಹಾ ರಾಮ ಹಾ ಹಾ ಹಾವು ಬಲು ಹಾವು
ಬಲವದರಿಮರ್ದನನೆ ಬಿಡಿಸಾ
ಖಳಕುಲಾಂತಕ ರಾಮ ಬಿಡಿಸಾ
ತಲೆಯಡಿಗೆ ನುಂಗಿತ್ತು ನುಂಗಿತ್ತೆನುತ ಜನವುಲಿಯೆ ೭

ಅಬ್ಬರವ ಕೇಳುತ್ತ ಹೋ ಹೋ
ದುರ್ಬಲರಿರಂಜದಿರಿ ನೀವೆನು
ತಿಬ್ಬರಾ ಹರಿ ರಾಮರೆಯ್ದಿದರಭಯವನು ಕೊಡುತ
ಉಬ್ಬುವತಿಶಯರೋಷ ಪಾವಕ
ಕರ್ಬುರಿತ ಕೋಮಲ ಕಟಾಕ್ಷದ
ಸರ್ಬಗತನೈತಂದು ಮೆಟ್ಟಿದನಾ ಮಹೋರಗನ ೮

ಮೆಟ್ಟಿದರೆ ಹರಿ ಚರಣಕಮಲವ
ಮುಟ್ಟಿ ಮುನ್ನಿನ ಸರ್ಪದೇಹವ
ಬಿಟ್ಟು ನಿಮಿಷಾಂತರದಲಾಂತನು ದಿವ್ಯ ರೂಪವನು
ಉಟ್ಟ ಪಟ್ಟಾವಳಿಯ ಕನಕದ
ತೊಟ್ಟ ಮಣಿಭೂಷಣದ ಮಿಗೆ ರೂ
ಹಿಟ್ಟ ಮನ್ಮಥನಂತೆ ಬೆಳಗಿದನಖಿಳ ದಿಗುತಟವ ೯

ರವಿಯ ರಶ್ಮಿಯನೇಳಿಸುವ ತ
ನ್ನವಯವದ ಕಾಂತಿಯಲಿ ದಶ ದಿ
ಗ್ವಿವರವನು ಬೆಳಗುತ್ತ ಕೃಷ್ಣನ ಚರಣಕಮಲದಲಿ
ದಿವಿಜವರನೆಱಗಿದನು ಗೋಪರ
ನಿವಹವೀಕ್ಷಿಸಲೊಲಿದು ಕರುಣಾ
ರ್ಣವನು ನಸುನಗುತೆಂದನಾನತ ಮಸ್ತಕವ ನೆಗಹಿ ೧೦

ಏನಿದೆತ್ತಣ ತೇಜವಿದು ಮು
ನ್ನೇನು ಕಾರಣ ಸರ್ಪನಾದೆ ಇ
ದೇನು ಮತ್ತೀ ದಿವ್ಯಮೂರ್ತಿ ಗ್ರಹಣಸಂಬಂಧ
ನೀನಿದನು ಹೇಳೆನಗೆನಲು ಕೇ
ಳ್ದಾನತನು ರೂಪದಲಿ ಗುಣದಲ
ನೂನ ವಿದ್ಯೆಗಳಲಿ ಸುದರ್ಶನನೆಂಬುದಭಿದಾನ ೧೧

ಉತ್ತಮಾಂಗನೆಯರು ಸಹಿತ ತಿರು
ಗುತ್ತ ದಿವ್ಯ ವಿಮಾನದಲಿ ಪುರು
ಷೋತ್ತಮನೆ ನಾ ಕಂಡೆನಾಂಗಿರಸಾಖ್ಯ ಮುನಿವರನ
ಚಿತ್ತವಿಸು ವಿದ್ಯಾಧರರಿಗಾ
ನುತ್ತಮನು ತಾನರುಹನಾಗಿ ಮ
ಹಾತ್ಮನಾಗಿರಲಾದುದೀ ತೆಱನೆನುತಲಿಂತೆಂದ ೧೨

ತಾಪಸರು ತಪದಿಂದ ಕೃಶತನು
ರೂಪವಳಿದಿರೆ ಕಂಡು ತಾನವ
ಲೇಪದಲಿ ನಿಜರೂಪಗುಣ ಯೌವನದ ಕೊಬ್ಬಿನಲಿ
ಶ್ರೀಪತಿಯೆ ಚಿತ್ತವಿಸು ತನಗಾ
ದಾಪದವ ನಾ ನಕ್ಕಡಿತ್ತನು
ಶಾಪವನು ಫಡ ಸರ್ಪನಾಗೆಂದೆನಗೆ ಭೂಸುರನು ೧೩

ಕೊಟ್ಟ ಶಾಪದ ವಜ್ರಹತಿಗೆಡೆ
ಗೊಟ್ಟುದೆನ್ನಯ ಗರ್ವಗಿರಿ ಕಂ
ಗೆಟ್ಟು ಕಾಲಲಿ ಕೆಡೆದು ಬೇಡಿದಡಿತ್ತರವರೆನಗೆ
ಸೃಷ್ಟಿಪಾಲಕರೊಡೆಯನಂಘ್ರಿಯ
ಮುಟ್ಟ ಮೋಕ್ಷವ ಪಡೆಯೆನುತ ಗಡಿ
ಗಟ್ಟಿದರು ಶಾಪಕ್ಕೆ ಶಾಂತಕ್ರೋಧರವರೆಂದ ೧೪

ಕಂಡೆನಾ ದ್ವಿಜವರರು ಮಾಡಿದ
ಚಂಡ ಕಾರುಣ್ಯೇಕ್ಷಣದಲಾ
ಖಂಡಲಾದಿ ಸುರೌಘಸೇವಿತ ಪಾದಪೀಠನನು
ಕಂಡೆನಱಸುವ ನಿಗಮತತಿ ಮುಂ
ಕೊಂಡು ಕಾಣದೆ ಮರಳಿ ನಾ ಚಿದ
ಖಂಡ ಸುಖಪರಿಪೂರ್ಣ ಪರಮಾತ್ಮನನು ತಾನೆಂದ ೧೫

ಅಕಟ ಹಿರಿಯರು ತಪ್ಪುವರೆ ಮತಿ
ವಿಕಳರಂತಿರಲಖಿಳ ಜೀವ
ಪ್ರಕರ ಚೈತನ್ಯಾತ್ಮನೊಬ್ಬನೆ ಯೆಂದು ಕಂಡವರು
ತ್ರಿಕರಣಂಗಳಲಿಂತು ಹಿತ ಸಾ
ಧಕರು ಪರರಿಂಗೆಂಬ ನುಡಿ ಸಾ
ರ್ಥಕವಲಾ ತಾನಾವ ಧನ್ಯನೊ ಶಿವಶಿವಾ ಯೆಂದ ೧೬

ಒಲಿದರೆಂತುಟೊ ಸಜ್ಜನರು ಸದ
ಮಳರು ಮುನಿದರೆ ನಿನ್ನ ಪದಯುಗ
ಜಲಜದರುಶನವಾಯ್ತಲಾ ದಿವಿಜಾಧಮಂಗೆನಗೆ
ಒಲಿದು ಮೇಣೊಲ್ಲದೆ ನಿರೀಕ್ಷಿಸೆ
ನಳಿನ ಸಖನನು ತೆರಳವೇ ಕ
ತ್ತಲೆಗಳೆಂತುಟು ಗಹನವೋ ಗುಣವಂತರಿರವೆಂದ ೧೭

ದೇವದೇವನ ಚರಣ ಕಮಲ ಯು
ಗಾವಲೋಕನದಿಂದಲೇ ಜಗ
ಪಾವನನು ನಾನಾದೆನೆಂಬುದಿದೊಂದು ಸಂಸ್ತುತಿಯೆ
ದೇವನಾಮ ಸ್ಮರಣೆ ಪಾತಕ
ಪಾವನಕೆ ಪಾವನವಲಾ ಸಲೆ
ಜೀವ ಜಾತಕ್ಕೆನ್ನವೊಲು ಸಭಾಗ್ಯರಾರೆಂದ ೧೮

ಸಿರಿಯ ಕರಕಮಲದಲಿ ಫಣಿಪನ
ಶಿರದಲಂಗದಲಮಲ ಮುನಿ ಹೃ
ತ್ಸರಸಿರುಹ ಪೀಠದಲಿ ನಿಗಮಶಿರೋರು ಹಸ್ತದಲಿ
ಚರಿಸುವೀ ನಿಮ್ಮಡಿಯ ರೇಣು
ಸ್ಪರುಶನದ ಬಹು ಪುಣ್ಯವೆಂತೋ
ದೊರಕಿದುದು ನನಗಿಲ್ಲಿ ಮೋಹವಿಮೂಢಮತಿಗೆಂದ ೧೯

ಧನ್ಯನಾದೆನು ಬೀಳುಕೊಡು ನಿ
ನ್ನುನ್ನತಾಮಳ ಕೀರ್ತಿ ಸುಧೆಯನು
ವರ್ಣಿಸುತ ನಿನ್ನಂಘ್ರಿಯುಗಳದ ದಾಸ ನಾನೆನಿಸಿ
ಸನ್ನುತನೆ ಸಂಚರಿಸುವಂತೆ ಕೃ
ಪಾರ್ಣವನೆ ಕಾರುಣ್ಯ ದೃಷ್ಟಿಯ
ನೆನ್ನೊಳಿರಿಸುವುದೆನುತ ಮಕುಟವ ಚಾಚಿದನು ಪದಕೆ ೨೦

ಆಗಲೇಳೆಲೆ ಮಗನೆ ತನ್ನದು
ಮೇಗಱಿಯ ಮಾತಲ್ಲ ಗರ್ವಿಸ
ಲಾಗದಾವಂಗದಲಿ ಕೆಡುವರು ನೀನೆ ಕಂಡೆಯಲೈ
ಹೋಗು ತನ್ನನು ಮಱೆಯದಿರು ಸುಖಿ
ಯಾಗೆನುತ ತಲೆದಡವಿ ಕರುಣಾ
ಸಾಗರನು ಬೀಳ್ಕೊಟ್ಟನಾ ವಿದ್ಯಾಧರೇಶ್ವರನ ೨೧

ಎಱಗಿದನು ಬಲವಂದು ಪುನರಪಿ
ಚರಣದಲಿ ಬೀಳ್ಕೊಂಡು ವಿದ್ಯಾ
ಧರನೊಡೆಯನನು ಸಕಲದಿಗಧೀಶ್ವರ ಮಹೇಶ್ವರರ
ಬೆರಸಿದನು ಸುರರೊಳಗೆ ಶಾಪವ
ಪರಿಹರಿಸಿ ಬಳಿಕಿತ್ತ ಗೋಪರು
ಪರಮ ವಿಸ್ಮಿತರಾದರೀಕ್ಷಿಸಿ ಹರಿಯ ಮಹಿಮೆಗಳ ೨೨

ಸತ್ತು ಬದುಕಿದನೆನುತ ಗೋಪರ
ಮೊತ್ತ ಕವಿದುದು ನಂದಗೋಪನ
ಮತ್ತೆ ಹರಸಿದರಿರದೆ ತಕ್ಕವಿಸುತ್ತ ಕೈದಣಿಯೆ
ಮತ್ತೆ ಕೃಷ್ಣನನಪ್ಪಿ ಕಾರಣ
ಮೂರ್ತಿಯಲ್ಲದಡೀ ವಿಧಾನದ
ಶಕ್ತಿ ಸೇರುವುದಾವ ದೇವಂಗೆಂದುದಖಿಳ ಜನ ೨೩

ಬಳಿಕ ನಿಯಮ ಸಮಾಪ್ತಿಯನು ಕೈ
ಕೊಳಿಸಿ ಹೂಡಿಸಿ ಬಂಡಿಗಳನಳ
ವಳಿಸಿ ಕಱುತುಱು ಬಾಲವನಿತಾ ವೃದ್ಧಜನ ಸಹಿತ
ನಳಿನಮುಖಿಯರು ಕೃಷ್ಣ ಚರಿತವ
ನೊಲಿದು ಪಾಡಲು ಬಂದರಾ ಗೋ
ಕುಲಕೆ ಗೋಪರು ಮೇಲೆ ಸುಮನೋವೃಷ್ಟಿಗಳು ಸುರಿಯೆ ೨೪

ಹಗಲು ಚೋರರ ಬಾಧೆಯಲಿ ವೈ
ದೆಗೆದು ರಾತ್ರಿಯ ರೂಪದಿಂದಿರೆ
ಜಗದಪತಿ ಕೃಷ್ಣನನು ಸೋಂಕಿ ವಿಶಾಪವಾದಂತೆ
ಮಗುಳೆ ನಿಜರೂಪದಲಿ ರಂಜಿಸಿ
ಸೊಗಸು ಮಿಗೆ ತಾವರೆಗಳೊಯ್ಯನೆ
ನಗುತಲಿರ್ದುವು ಮಿತ್ರನುದಯದ ವಿಭವವನು ಕಂಡು ೨೫

ಮತ್ತೆ ನೈದಿಲು ಸುಯ್ಲ ಝಳದಲಿ
ಹೊತ್ತಿ ಹೊಗೆಸುತ್ತಾಯ್ತು ಹಗಲಿನ
ಭಿತ್ತಿ ಭುವನದ ಚಿತ್ರ ರಚನೆಗಳೊಡನೆ ಮಾಸಿದುವು
ಮತ್ತೆ ಶಶಿ ಧವಳಿಸಿದನಮೃತದ
ಹಸ್ತದಲಿ ದೆಸೆಗಳನು ಬಲ ಪುರು
ಷೋತ್ತಮನರನೀಕ್ಷಿಸುವೆನೆಂಬೊಂದಧಿಕ ಹರುಷದಲಿ ೨೬

ಕಡಲ ಪೂಗಣೆಯಾಯ್ತು ವಾರಿಯ
ಕಡಿತ ಮನ್ಮಥನಲಗುಗೊಂಡನು
ನುಡಿಸಿದನು ವಿರಹಿಣಿಸುರಂಗದಲಂತರ ವ್ಯಥೆಯ
ಕುಡಿಯಲೆಱದನು ಜೊನ್ನವಕ್ಕಿಯ
ಗಡಣಕಮೃತವನೀ ಚರಾಚರ
ದೊಡಲ ವಗೆಯನು ಕಳೆವುತುದಯಾಚಲಕೆ ನಡೆತಂದ ೨೭

ಭೂರಿ ಭುವನದ ತಾಪ ಮೃಗಕುಲ
ಮಾರಣಕೆ ಹಿಮಕರ ಬಿಗಿದ ಬೆ
ಳ್ಗಾರವಲೆಯಂತೆಸೆವ ಬೆಳುದಿಂಗಳನು ನೋಡುತ್ತ
ಶೌರಿ ಹಲಧರರೈದಿದರು ಕಾಂ
ತಾರಕೇಳಿಗೆ ಕಮಲಮುಖಿಯರ
ಸಾರತರ ಸಂಕಲ್ಪಸಿದ್ಧಿಗೆ ಸಮಯವೆಂದೊಲಿದು ೧೮

ಪೊಂಗೊಳಲ ಬಾಜಿಸುತ ಹೊಸ ಪರಿ
ಯಂಗದಲಿ ಮೋಹಿಸುತ ಗೋಪಾ
ಲಾಂಗನೆಯರೊಡಗೂಡಿ ವೃಂದಾವನದ ಮಧ್ಯದಲಿ
ತುಂಗ ವಿಕ್ರಮರಾಡುತಿರೆ ಬೆಳು
ದಿಂಗಳಲಿ ಬಲವಂತನೊಬ್ಬನು
ಸಂಗರಪ್ರಿಯನಾಗಿ ದೈತ್ಯಾಧಮನು ನಡೆತಂದ ೧೯

ಬಂದು ಕಂಡನು ಹರಿಬಲರನಾ
ನಂದಲೀಲೆಯಲಾಡುವಾ ಸ್ತ್ರೀ
ವೃಂದವನು ತತ್ಸಂಗಸುಖ ಸಾಮ್ರಾಜ್ಯ ವಿಭವದಲಿ
ಬೆಂದನಂಗಜನಸ್ತ್ರ ಹತಿಯಲಿ
ಬಂದಿಕಾಜನು ಬಳಲುತೈತಂ
ದಿಂದುಮುಖಿಯರನೊಯ್ವೆನಿವರನು ತನ್ನ ಮನೆಗೆನುತ ೨೦

ಕಂಡು ಕಮಲದಳಾಕ್ಷಿಯರನಾ
ಭಂಡನಾರವರೆಂದು ನೋಡದೆ
ದಂಡಧರನೂರಿಂಗೆ ಸೈವಿಳೇಯವ ಸವಿವಂತೆ
ಖಂಡಪರಶುನಖಾನುಚರನು
ದ್ದಂಡ ಬಲನಾ ಶಂಖಚೂಡಕ
ನಂಡಲೆದನಬಲೆಯರನಂಗಜನಾಹವದ ಮೊನೆಗೆ ೨೧

ಒಲ್ಲದರೆ ಸತಿಯರನು ನೂಕಿದ
ನಿಲ್ಲಿ ನಿಮಗೇಕಡವಿಯಲಿ ನೃಪ
ರಿಲ್ಲದಾ ರಾಜ್ಯಕ್ಕೆ ಧರ್ಮಪಥಕ್ಕೆ ಪಾಲಕರು
ಸಲ್ಲದುದನಾಚರಿಪರೆನ್ನದು
ಹೊಲ್ಲೆಹವೆ ನಡೆನಡೆ ಯೆನುತ ಖಳ
ನೆಲ್ಲರನು ಹಿಡಿದೊಯ್ದನಳುಕದೆ ಬಡಗದೆಸೆಗಾಗಿ ೨೨

ಹಾ ರಮಣ ಹಾ ಕೃಷ್ಣ ಹಾ ರಿಪು
ವೀರಗಜ ಪಂಚಾನನನೆ ರಣ
ಧೀರರಸನೆ ರಾಮ ಹಾ ರಾಜೀವಲೋಚನನೆ
ಚೋರನೊಯ್ವುತ್ತಿಹನೆಯೆಮಗಿ
ನ್ನಾರೊಡೆಯರಡವಿಯಲೆನುತಾ
ನಾರಿಯರು ಮೊರೆಯಿಡಲು ಖಳನಟ್ಟಿದನು ಬೆಂಬಿಡದೆ ೨೩

ಕೇಳುತವೆ ಹೆಬ್ಬುಯ್ಯಲನು ವನ
ಮಾಲಿರಾಮರು ಬೆದಬಿಬೇಡೆನು
ತಾಳುಗಳ ದಾತಾರರೈದಿದರಭಯವನು ಕೊಡುತ
ಕಾಲಮೃತ್ಯುಗಳಂತೆ ರೋಷ ಕ
ರಾಳ ನೇತ್ರರು ಭೃಕುಟಿ ಬದ್ಧಾ
ಭೀಲ ವಕ್ತ್ರರು ವಿಕೃತಗಾತ್ರರು ಖಳನ ಸಮ್ಮುಖಕೆ ೨೪

ಜಾರ ಫಡ ಹೋಗದಿರು ನಾರೀ
ಚೋರ ಫಡ ಹೋಗದಿರು ಪಾಪಾ
ಚಾರ ಹೋಗದಿರೆನುತ ಬೆಂಬತ್ತಿ ಬರೆ ಹರಿಬಲರು
ಚೋರ ನಾನಹೆನಹೆನು ವಿಮಳಾ
ಚಾರ ನಿರತರು ನೀವು ನಿಶ್ಚಯ
ವಾರಜೀಯರಿದನೇಕೆ ಬಂದಿರಿ ತನ್ನ ಬಳಿಗೆಂದ ೨೫

ಅಹುದು ಧರ್ಮರಹಸ್ಯ ಸಂಹಿತೆ
ಯಿಹುದು ನಿನ್ನಲಿ ಸತಿಯರನು ನಿ
ಗ್ರಹಿಸುವವನಲಿ ಜೀವ ಹಿಂಸಾಪಾರಲುಬ್ಧನಲಿ
ವಿಹಿತವಹ ನಿಜ ಧರ್ಮ ಫಲ ನಿ
ರ್ವಹಣವನು ತಾ ತೋರ್ಪೆನೀಗಳೆ
ಕುಹಕಿ ನಿಮಿಷಾಂತರದೊಳೆನುತೈದಿನು ರಿಪುಭಟನ ೨೬

ಮುಟ್ಟಿ ಬರೆ ಮುರಮಥನನನು ಕಂ
ಗೆಟ್ಟು ನೋಡುವೊಡಂಜಿ ಸುರರಿಪು
ಬಿಟ್ಟು ಕೊಂಡನು ಮನೆಯ ಹೆಂಡಿರು ಸಾಕು ತನಗೆನುತ
ಬಿಟ್ಟು ಗೋಪೀಜನವನಸುರಘ
ರಟ್ಟನಣ್ಣನನಿರಿಸಿ ಕಾಲಂ
ಗಟ್ಟಿ ಬಹೆನಿವನಸುವನೆನುತೈದಿದನು ಬಳಿಸಲಿಸಿ ೨೭

ಕಳ್ಳ ಹೋಗದಿರಿನ್ನು ಬಿಡುವೆನೆ
ಬಲ್ಲಿದನ ಹಗೆ ಬಾಳಲೀವುದೆ
ತಳ್ಳಣಿಸುವರೆ ವೀರರಾದವರಾಹವಾಗ್ರದಲಿ
ನಿಲ್ಲೆನುತ ನಳಿನಾಕ್ಷನೈದಿದ
ನುಲ್ಲಸಿತ ತನ್ಮೂರ್ಧ್ನಿ ರತ್ನಮು
ತಲ್ಲಿಕಾ ಗ್ರಹಣೈಕ ತತ್ಪರನಾಗಿ ಬೆಂಬಿಡದೆ ೨೮

ಮುಟ್ಟಿಲಬಿಯವು ತೀವ್ರಯೋಗ ವಿ
ಶಿಷ್ಟ ಮತಿಗಳು ತನ್ನನಸುರನ
ಮುಟ್ಟಲಾರದೆ ಮರಳಲಜಿವನೆ ಚೇತನಾತ್ಮಕನು
ಅಟ್ಟಿದನು ಖಳ ನೋಡಿದನು ಗತಿ
ಗೆಟ್ಟು ಗಾಢಶ್ರಮದ ಭರದಲಿ
ತುಟ್ಟಿಸಿತು ತನು ಬಳಲಿ ಮುಮ್ಮಾರ್ಗದಲಿ ಸೈವರಿದು ೨೯

ಹಿಡಿದು ಖಳನನು ಮುಂದಲೆಯನೊದೆ
ದೆಡದ ಕಾಲಲಿ ಧರೆಗೆ ಕಾಯವ
ಕೆಡಹಿ ತಲೆಯನು ತಿಱಿದುಕೊಂಡನು ತಚ್ಛಿರೋಮಣಿಯ
ಪೊಡವಿಗತಿಶಯವೆನಿಪ ಮಣಿಯನು
ಮಡದಿಯರು ಭಾಪೆನಲು ಮುರರಿಪು
ತಡೆಯದಣ್ಣಂಗಿತ್ತನೈತಂದಧಿಕ ಹರುಷದಲಿ ೪೦

ಇರಲು ಶಶಿ ಚಂದ್ರಿಕೆಯನೊಯ್ಯನೆ
ಬರೆಸೆಳೆದನಂಬರಕೆ ತೊಡೆದನು
ತರಣಿ ತನುಕಾಂತಿಯನೆನಲು ಹರವಸಕೆ ಹರಹಿನಲಿ
ಗರುಡ ದೇವನು ಗಗನದಗಲ
ಕ್ಕೆರಕೆಗೆದಱಿ ನಿಜಾತ್ಮನಾಥನ
ಹೊರೆಗೆ ಬಂದಪನೆಂಬೊಲುದಯಾರುಣಿಮೆ ರಂಜಿಸಿತು ೪೧

ಬಳಿಕ ಗೋಪಿಯರಾ ಮುಕುಂದನ
ಚೆಲುವ ಮೂರ್ತಿಯನಪ್ಪಿ ಮನದಲಿ
ನಿಳಯವನು ಸಾರಿದರು ವಿರಹಾತುರೆಯರಾಗುತ್ತ
ಲಲನೆಯರು ನಿತ್ಯಾತ್ಮ ಕೃಷ್ಣನ
ಲಲಿತ ಮಂಗಳ ಮೂರ್ತಿ ಸುಧೆಯಲಿ
ಮುಳುಗಿ ನೈಮಱೆದಂತೆ ಕಳೆದರು ದಿವಸದಾಯಸವ ೪೨

ಇಪ್ಪತ್ತೊಂಬತ್ತನೆಯ ಸಂಧಿ ಮುಗಿಯಿತು

## ಮೂವತ್ತನೆಯ ಸಂಧಿ

ಸಾರತರಸತ್ಕೀರ್ತಿ ಭುವನಾ
ಧಾರಕಾರಣಮೂರ್ತಿ ಕೊಂದನು
ದಾರ ವೃಷಭಾಸುರನನಚ್ಯುತನಾಹವಾಗ್ರದಲಿ

ಹಗಲು ಹರಿ ತುಱುಗಾಯಲೊಡನಾ
ಡಿಗಳು ಸಹಿತ ವನಾಂತರದೊಳಿರೆ
ಮೃಗನಯನೆಯರು ತದ್ಗತಾತ್ಮೆಯರಾಗಿ ತಮತಮಗೆ
ಬಗೆ ದಣಿಯೆ ಗೋವಿಂದನುರು ಲೀ
ಲೆಗಳನಭಿವರ್ಣಿಸುತ ವಿರಹದ
ಡಗೆಯ ಗೆಲುವರು ದುಃಖದಲಿ ವಾಸರಪರಿಭ್ರಮವ ೧

ಎಡದ ಭುಜದಲಿ ಮುರಿದು ಮಂಡಿಸಿ
ದೆಡದ ಕದಪಿನ ಮಿಱುಗುವಧರದ
ಲಡಿವಿಡುವ ಪೊಂಗೊಳಲ ಸತ್ಕೃತಿಗೆಸೆವ ಹುಬ್ಬುಗಳ
ಬಿಡುವ ಹಿಡಿವಂಗುಳಿದಳದ ನಯ
ವಡೆದ ಸಪ್ತಸ್ವರದ ಮೂಜಗ
ದೊಡೆಯನೀ ಗೋವಿಂದನೈದನೆ ಮಲಗಿ ಸುರತರುವ ೨

ಆಗಳದನಾಲಿಸುತಲಿದ್ದ ಸ
ದಾಗತಾಮಳವನಿತೆಯರು ತಾ
ವಾಗ ನಲ್ಲರ ತೊಡೆಯ ಮೇಲುಡೆ ಮುಡಿಗಳನು ಮಱೆದು
ಪೂಗಣೆಯ ಗಾಯದಲಿ ಭಗ್ನೆಯ
ರಾಗೆ ಮೂರ್ಛೆಗೆ ಸಂದು ಕರುಣಾ
ಸಾಗರನ ಮೂರ್ತಿಯನು ನೋಡುತ್ತಿದ್ದರನವರತ ೩

ಕೇಳಿ ತಾ ಚಿತ್ರವನು ನೀವೆಲೆ
ಬಾಲಕಿಯರಿರ ನಮ್ಮ ಕೃಷ್ಣನ
ನೀಲಮೇಘಶ್ಯಾಮವೆನಿಸುವ ಮೆಱೆವ ಪೇರುರದ
ಮೇಲು ಮಿಂಚುಗಳೆಸೆಯಲಾರ್ತ ಕೃ
ಪಾಳು ನತಜನಬಂಧು ಕೊಳಲಲಿ
ಹೇಳಿಸುತ್ತಿರೆ ರಾಗಭೇದವನೆಸೆಯೆ ವನದೊಳಗೆ ೪

ಮಿಳ್ಳಿಱಿದು ಕಿವಿಗಳಲಿ ಕೇಳುತ
ಹುಲ್ಲುಗಳ ನೆರೆ ಕಚ್ಚಿ ಬಾಯಲಿ
ಬಲ್ಲ ಪುರುಷರವೋಲು ಮೇಲ್ಮೊಗವಾಗಿ ಗೋವುಗಳು
ಹುಲ್ಲೆಗಳು ಹುಲಿ ಹದ್ದು ಹಾವುಗ
ಳೆಲ್ಲ ನೆರೆದೊಂದಾಗಿ ಲಕ್ಷ್ಮೀ
ವಲ್ಲಭನ ನೋಡುತ್ತಲಿರ್ದುವು ಚಿತ್ರದಂದದಲಿ ೫

ಅಂಗಭೂಷಣ ಮಾಡಿ ಹೊಸಪರಿ
ಯಂಗದಲಿ ಮಲ್ಲರವೊಲೀ ನ
ಮ್ಮಂಗಜನ ಪಿತನೊಮ್ಮೆ ದೂರದಲಿದ್ದ ಗೋವುಗಳ
ಗಂಗೆ ಬಾರೆಲೆ ಯಮುನೆ ಬಾರಾ
ತುಂಗೆ ಹೋಗದಿರೆನುತ ತನ್ನಾ
ಮಂಗಳಲಿ ಸಖಿ ಕೇಳು ಕರೆವನು ಕರತಳವ ತೋಱಿ ೬

ಕರೆದನೆಮ್ಮನೆನುತ್ತ ನದಿಗಳು
ಹರಿವುದನೆ ನೆಱೆಮಾದು ನಮ್ಮಂ
ತಿರೆ ಸುಕೃತಕಾತಿಯರು ಸುಳಿ ಸುಳಿಸುಳಿದು ನೆಲೆಗೊಂಡು
ತೆರೆಗಳಲಿ ಕಮಲೋಪಹಾರವ
ಧರಿಸಿ ಕೃಷ್ಣನ ಪದಕಮಲ ಸಂ
ಸ್ಪರುಶನವ ಮಾಡುತ್ತಲಿರ್ಪವು ಪಾರವಶ್ಯದಲಿ ೭

ಕೆಳೆಯ ಗೋವಳರಿಂದ ಹೊಗಳಿಸಿ
ಕೊಳುತ ಪರಮೇಶ್ವರನವೋಲ
ಸ್ಖಲಿತ ವಿಭವದಲಾಡುತೊಪ್ಪುವ ಗಿರಿತಟಂಗಳಲಿ
ಹೊಲಬುದಪ್ಪಿದ ತುಱುಗಳನು ಪೊಂ
ಗೊಳಲ ದನಿಯಲಿ ಕರವುತಿರಲೆಲೆ
ಕೆಳದಿ ಕೇಳಾ ಕೃಷ್ಣನುರುಲೀಲೆಗಳ ವೈಶಿಕವ ೮

ಆಗಳಲ್ಲಿಯು ತರುನಿಕರ ತಲೆ
ವಾಗಿ ಫಲಭಾರದಲಿ ನಮ್ಮಲಿ
ಯೋಗಮೂರುತಿ ಕೃಷ್ಣನಿಹನೆಂದಱುಹುವಂದದಲಿ
ತೂಗಿ ತೊನೆವುತ್ತುಮ್ಮಳಿಸುತನು
ರಾಗ ಕೋರಕ ಪುಳಕ ಮಧುರಸ
ರಾಗಗಳ ಬಾಷ್ಪದಲಿ ಮೆಱೆದುವು ಮುನಿಗಳಂದದಲಿ ೯

ನಸುಬಳಲಿದೆಡೆದುಱುಬಿನಲಿ ವೇ
ಷ್ಟಿಸಿದ ಕತ್ತರಿವೀಲಿಗಳ ಹೆಱೆ
ನೊಸಲ ತಿಲಕದ ಕತ್ತುರಿಯ ನಳಿನಾಯತೇಕ್ಷಣದ
ಎಸೆವ ಭಂಗಿತ್ರಯದಲೊಲವಿನ
ಕುಸುಮನಾಭನು ಪೊಂಗೊಳಲ ಬಾ
ಜಿಸುವ ಸಮಯಲಾದ ಹದನನು ಕೇಳಿ ಕೆಳದಿಯರು ೧೦

ವಿಹಿತ ದಿವ್ಯ ವಿಚಿತ್ರ ವೇಷ
ಗ್ರಹಣ ಗುಣನಿಧಿ ಪೊಂಗೊಳಲಲು
ದ್ವಹಿಸಿ ಸಪ್ತಸ್ವರನನೆಲೆ ಕೆಳದಿಯರಿರೊಪ್ಪಿರಲು
ಮಹದತಿಕ್ರಮ ಭೀತಿಯಲಿ ಸ
ನ್ನಿಹಿತ ಮೃದುರವ ಪುಷ್ಪವೃಷ್ಟಿಯ
ಲಹಹ ತಾಪವಿಹರಣವನು ಮಾಡುವನು ಮೇಘಾಂಕ ೧೧

ನಿನ್ನ ಮಗನೀ ತ್ರಿಭುವನದೊಳತಿ
ಮಾನ್ಯನಲ್ಲಾ ತಾಯೆ ದಿಟ ಸಾ
ಮಾನ್ಯನೇ ನಿಜವೇಣುಗೀತಮನೋಜ್ಞಕೌಶಲವ
ನನ್ನಿ ತೋಱುಸುತಧರ ಪುಟದಲಿ
ಚೆನ್ನಿಗನು ಪೊಂಗೊಳಲ ಧರಿಸುತ
ಲುನ್ನತದ ಸಪ್ತಸ್ವರಂಗಳ ಗ್ರಾಮುಚಾರಿಗಳ ೧೨

ಕೆಳದಿ ಕೇಳಾ ಕಮಲಭವ ಭವ
ಬಲವಿರೋಧಿ ಪ್ರಮುಖ ಸುರಮುನಿ
ಕುಲನಿವಹವಂಬರದಲಾಲಿಸುತಿರಲು ತತ್ವವನು
ತಿಳಿಯಲಱಿಯದೆ ತಲೆಯನಾಡಿಸಿ
ಹೊಲಬುಗೆಡುವರು ಜಾಣರೊಳಗ
ಗ್ಗಳೆಯನೀ ಗೋವಿಂದನಮರಾಸುರ ಮನುಷ್ಯರಲಿ ೧೩

ಕೆಳೆಯ ಗೋವಳರೀಕ್ಷಿಸಲು ಗೋ
ಕುಲದ ಪರಮಸ್ವಾಮಿ ನವಿಮ್ಮಾ
ಚೆಲುವರರಸನು ಯಮುನೆಯೊತ್ತಿನಲಾಡುತಿರಲೊಮ್ಮೆ
ಬಳಲಿದಪನೆನ್ನಾಳ್ದನೆನುತ
ಕ್ಕುಳಿಸಿ ಶೀತಳವಾಗಿ ಮಂದಾ
ನಿಲನು ಬೀಸುವನೇನನೆಂಬೆನು ಕೃಷ್ಣನೊಡೆತನವ ೧೪

ಆಡುತಿರೆ ವನದೊಳಗೆ ನೆರೆ ಕೈ
ಗೂಡಿಸಲು ನಮ್ಮಿಷ್ಟವನು ನೆರೆ
ಮಾಡಲಸ್ತಾಚಲದತಪ್ಪಲಲಬುಜಸಖನೊಲಿದು
ಆಡಿಸುತ ತುಱುಗಳನು ತನ್ನೊಡ
ನಾಡಿಗಳಿಗೊರೆವುತ್ತ ಸನ್ನೆಯ
ಮಾಡಿ ಸಜ್ಜನಬಂಧು ಮರಳುವನೊಲಿದು ಗೋಕುಲಕೆ ೧೫

ಮುಂದೆ ತುಱುಗಳ ಖುರಹತಿಗೆ ಧರೆ
ನೊಂದಡನುಪಮ ನಿಜಪದಾಬ್ಜ
ದ್ವಂದ್ವಲಾಂಛನಗಳಲಿ ಸಂತೈಸುತ್ತ ತದ್ವ್ಯಥೆಯ
ನಂದಿಸುತ ನಯನಾಭಿರಾಮ ಮು
ಕುಂದನಾ ಬರುತ್ತೈದನಿದೆ ಗೋ
ವಿಂದನಂತೆ ಕೃಪಾನಿಧಿಗಳಿನ್ನಾರು ಧರಣಿಯಲಿ ೧೬

ಏನನೆಂಬೆನು ಕೃಷ್ಣ ಸಾರವ
ಧ್ವನಿಚಯ ತಮ್ಮಂತೆ ವಿರಹವ
ನಾನಲಾರದೆ ಮಱೆಗಳನು ಮೋಹವನು ನೆಱೆತೊಱೆದು
ಜ್ಞಾನವಿಲ್ಲದಡೇನು ಶಿವ ಶಿವ
ಹೀನಜಾತಿಗಳೆನ್ನಬಹುದೆ ಕೃ
ಷ್ಣಾನನಾರ್ಪಿತ ದೃಷ್ಟಿಗಳಲೆಸೆದಿರ್ಪವನವರತ ೧೭

ವಂದಿಗಳು ಸುರಸೂತಮಾಗಧ
ವೃಂದ ಕೈವಾರಿಸಲು ಸುಮನೋ
ವೃಂದ ಧಾರಾವೃಷ್ಟಿಗಳಲೋರಂತೆ ಗಗನದಲಿ
ಮುಂದೆ ಮುನಿಗಳು ತಾಯೆ ನಿನ್ನಯ
ನಂದನಾಂಘ್ರಿಗೆ ನವಕುಸುಮತತಿ
ಯಿಂದ ಮಾರ್ಗನಿರೋಧವನು ಮಾಡುವರು ಪೂಜಿಸುತ ೧೮

ನೋಡಿ ತನ್ನನು ಮನದ ಶಿಖಿಯಲಿ
ಬಾಡಿದೀ ಕಂಗಳಿಗೆ ಹಬ್ಬವ
ಮಾಡುವನು ಮಂದಸ್ಮಿತಾದ್ರ್ರಕಟಾಕ್ಷವೀಕ್ಷಣದಿ
ನೋಡುತೆಡಬಲವಂಕವನು ಕೈ
ನೀಡಿ ಕೆಳೆಯರ ಮೇಲೆ ಕಮಲವ
ನಾಡಿಸುತ ಬಲಗೈಯಲೈತಹನಾ ನಿಜಾಲಯಕೆ ೧೯

ವಾರಣೇಂದ್ರನವೋಲು ಘನ ಗಂ
ಭೀರಗಮನದ ಸುಸ್ಮಿತೇಕ್ಷಣ
ಚಾರುವದನದ್ಯುತಿಯ ಮಧುರಕಟಾಕ್ಷವೀಕ್ಷಣದ
ಮಾರನಯ್ಯನ ಮುಱುಕವೆನ್ನನು
ಮಾರುಗೋಲಲೀ ಲೋಕಗತಿಯನ
ದಾರು ಬಲ್ಲರು ಮಱೆವೆವುಡಿಮುಡಿಗಳನು ಮಱವಟ್ಟು ೨೦

ಭೂರಿ ಭುವನಾಧಿಪರ ಸೊಬಗಿನ
ಸಾರಸಂಗ್ರಹವೆನಿಪ ಚಾರು ಶ
ರೀರ ಕಾಂತಿಯ ಕೌಮುದಿಯಲೀ ಜಗದ ತಾಪವನು
ಜಾಱಿಸುತ ಕಂಡವರ ನಯನ ಚ
ಕೋರ ಸೌಖ್ಯದ ಬಹಳ ಪಾರಾ
ವಾರವನು ಹೆಚ್ಚಿಸುತ ಬಹನೀವ್ರಜಕಳಾನಾಥ ೨೧

ಸ್ಥೂಲ ರತ್ನಾಂಗದಲೆಸೆವ ನಿಡಿ
ದೋಳುಗಳ ಗಂಭೀರಗಮನದ
ಕಾಲ ಕಡೆಯದ ದಾನವರ ಹಾಹೆಗಳ ಬಾವುಲಿಯ
ಲೋಲ ಮಣಿಕುಂಡಲದಲೆಸೆವ ಕ
ಪೋಲ ಕಾಂತಿಯ ಮೋಹರದ ಗೋ
ಪಾಲನೀ ಬಂದನು ಮನೋರಥ ಸಿದ್ಧಿಯನು ಕೊಡುತ ೨೨

ಆವ ಸೌಖ್ಯದ ಸಿದ್ಧಿಯೋ ಕರು
ಣಾವಹನ ಸಕಲೇಂದ್ರಿಯಂಗಳಿ
ಗಾವ ಭೋಗಸ್ಥಾನದೈಕ್ಯವೊ ಬಲ್ಲರಾರಿದನು
ಸೇವೆ ಸವೆಯದು ಕೃತ್ಯ ದಣಿಯದು
ಭಾವ ಹಿಂಗದು ಸಕಲ ಜೀವರ
ಜೀವನೀ ಗೋವಿಂದನಿಲ್ಲಿಗೆ ಬಂದನಿದೆ ಬಂದ ೨೩

ನೆರೆದು ಗೋಪಿಯರಿಂತು ಕೃಷ್ಣನ
ಚರಿತವನು ಪಾಡುತ್ತ ಮಱೆವರು
ವಿರಹದಂತಸ್ತಾಪವನು ತತ್ಪಾರವಶ್ಯದಲಿ
ಕರಗುವರು ಕೊಂಬುಗಳ ಕೊಳಲುಗ
ಳುರವಣಿಯ ನಾದವನು ಕೇಳುತ
ಹರಿವರಸು ಬಂದಂತೆ ಮನೆವಾರ್ತೆಗಳನೀಡಾಡಿ ೨೪

ವನಿತೆಯರು ಕಾಣುತ್ತ ಕೃಷ್ಣನ
ನನಿಮಿಷಾರಾಧಿತನ ಮಱೆವರು
ತನುವನಾ ಮಾರ್ಗದಲಿ ದಿನದವಸಾನ ಸಮಯದಲಿ
ಕನಸಿನಲಿ ಭಾವುಕರ ಗೃಹ ಸಂ
ಜನಿತ ಕೃತ್ಯಂಗಳಲಿ ತದ್ಗತ
ಮನದ ನೆನಸಿನ ಭಾವಭಾಗ್ಯಕ್ಕಾರು ಸರಿಯೆಂದ ೨೫

ಇಂತು ಪರಮೋತ್ಸವವೆ ಒಡಲಿ
ಟ್ಟಂತೆ ಹಲಧರಸಹಿತ ಲಕ್ಷ್ಮೀ
ಕಾಂತನೆಸೆದಿರೆ ನಂದ ಗೋಕುಲದೊಳಗೆ ಮನವೊಲಿದು
ಅಂತಕನನಱಸುತ್ತ ನಡೆ ತ
ಪ್ಪಂತೆ ದಾನವನೊಬ್ಬನಾ ಹರಿ
ಯಂತಿಕಕೆ ನಡೆತಂದ ಕಂಸಾಸುರನ ನೇಮದಲಿ ೨೬

ಬಸವನಾಕೃತಿಯಾಗಿ ಕಂಡವ
ರಸುವನಾಕ್ರಮಿಸುತ್ತ ಕೋಡ್ಗಳ
ಬಸಿವ ರುಧಿರದ ಬಂಧದಲಿ ಜಡಿವಂತೆ ಮೂಲೆಗಳ
ಉಸಿರ ಹೊಗಲಿನ ದಳ್ಳುರಿಯ ಕೆಂ
ಪೆಸೆವ ಕಂಗಳ ಭೀಕರಾಂಗದ
ಲಸುರನಾವರಿಸುತ್ತ ಬಂದನು ನಂದಗೋಕುಲಕೆ ೨೭

ಖುರಪುಟದ ಕೆಂದೂಳಿ ದೆಸೆಗಾ
ವರಿಸೆ ಧರೆ ಪಾತಾಳನಭವನು
ಶರಣುವೊಗುವೋಲಾಡಿಸುತ್ತಭ್ರವನು ಬಾಲದಲಿ
ಮುರಿದು ನೋಡಿದ ದೆಸ ದೆಸೆಗೆ ಕೇ
ಸರಿಯವೋಲ್ಗರ್ಜಿಸುತ ಗೋಪರ
ನೆರವಿ ಬೆದಱಲು ಬಿಂಕದಲಿ ನಡೆತಂದನಸುರಾರಿ ೨೮

ಕೊಬ್ಬಿದಿಡಿ ಕೊರಳುಗಳ ನೆಲನನು
ಗಬ್ಬರಿಪ ಕೊಳಗುಗಳ ನಭದ ಸು
ಪರ್ಬರನು ಮರೆಯೊಗಿಸುತತ್ತಲು ಧ್ರುವನ ಮಂಡಲಕೆ
ಅಬ್ಬರದ ಗರ್ಜನೆಗೆ ಬಸುಱೊಡೆ
ದುರ್ಬಿಗಿಳಿಯಲು ಗರ್ಭ ಹೆಂಗಳಿ
ಗುಬ್ಬರದ ಕೋಪದಲಿ ಕವಿದೈತಂದನುರವಣಿಸಿ ೨೯

ಚಂಡ ಶೃಂಗಗಳಲ್ಲಿ ತಾರಾ
ಮಂಡಲವನಿಱಿದೆತ್ತಿ ಬಿಸುಡುತ
ಕಂಡವರನಂತಕನ ಕೈಯಲಿ ಕೊಡುತ ಗೋಕುಲಕೆ
ಗಂಡುಗಲಿ ದೂರದಲಿ ಬರೆ ತುಱು
ವಿಂಡುಗಳು ಚಲ್ಲಿದವು ಗೋಪರ
ತಂಡ ಹಾಯ್ದುದು ದೆಸೆದೆಸೆಗೆ ಕಾಣುತ್ತ ಭೀತಿಯಲಿ ೩೦

ಕೆಟ್ಟೆವೆನುತಾ ಬಾಲವೃದ್ಧರು
ಬಿಟ್ಟು ಮನೆಯನು ಗೋಕುಲವ ಹಾ
ಳಿಟ್ಟು ಮಿಗೆ ಕಂಗೆಟ್ಟು ಕಾವವರಿಲ್ಲದಳವಳಿದು
ಕಟ್ಟೆಯೊಡೆದಂತಾಯ್ತು ದುಷ್ಟಾ
ರಿಷ್ಟನಾ ಗೋವಳರ ಜಾತಿಗ
ರಿಷ್ಟವೇ ಬಪ್ಪಂತೆ ಬಂದನುದಗ್ರ ಕೋಪದಲಿ ೩೧

ಮಂದರದ ಮಥನಕ್ಕೆ ವೀಚೀ
ವೃಂದವಾ ವೇಲೆಯನು ಮುಱಿಯೊಗು
ವಂದದಲಿ ಖಳನಾಗವುನದಾಟೋಪದುರವಣೆಗೆ
ತಂದೆ ರಕ್ಷಿಸು ಕೃಷ್ಣ ದೇವ ಮು
ಕುಂದ ರಕ್ಷಿಸು ರಕ್ಷಿಸೆನುತಾ
ಮಂದಿ ಕವಿದುದು ಕೃಷ್ಣನಂಘ್ರಿ ಸರೋರುಹದ ಮುಱಿಯ ೩೨

ಮೃತ್ಯುಭಯವಿದ್ರಾವಿತರು ಮತಿ
ವೃತ್ತಿಯಲಿ ಮುಱಿಯೊಕ್ಕು ಗೆಲುವರು
ಮೃತ್ಯುವನು ಗಡ ತನ್ನನಿಂದೀ ಗೋಪ ಗೋಧನದ
ಮೊತ್ತವನು ತಲೆಗಾಯದಿರ್ದಡೆ
ಎತ್ತಣದು ನಿಜಭಕ್ತ ಕರುಣಾ
ವೃತ್ತ ತಾನೆಂಬೀ ಪ್ರತಿಜ್ಞೆಯೆನುತ್ತ ಹರಿ ನುಡಿದ ೩೩

ಅಂಜದಿರಿ ಗೋವಳರು ಗೋಪಿಯ
ರಂಜದಿರಿ ಬಾಹಿರರು ಭಕ್ತರ
ನಂಜಿಸುತ್ತಿರೆ ನೋಳ್ಪ ದೇವನೆ ತಾನೆನುತಲೊಲಿದು
ಕಂಜನಾಭನು ನಗುತ ನಿಜಕರ
ಕಂಜವನು ತೋಱುತ್ತ ಕರುಣಾ
ರಂಜಿತೇಕ್ಷಣದಿಂದ ನೋಡಿದನಂದು ಗೋಕುಲವ ೩೪

ಮಂದಮತಿ ನೋಡಿತ್ತಲೆಲವೋ
ಹಿಂದೆ ತನ್ನನು ಸಂಗರಕೆ ನಿ
ನ್ನಂದದವರಿಂಗುದಿಸಿದಂತಕನನು ದುರಾತ್ಮರಿಗೆ
ಮುಂದೆ ತಾನಿರೆ ಶಿಶು ಪಶು ಸ್ತ್ರೀ
ವೃಂದದಲಿ ಫಲವೇನು ಬೆದಱಿಸಿ
ನಿಂದಿರೆನುತಸುರಾರಿ ಕರೆದನು ಬೆರಳ ಸನ್ನೆಯಲಿ ೩೫

ಎಲವೊ ಬಾ ಸಮ್ಮುಖಕೆ ಸಮರವ
ನೊಲುವಡೆನುತಾಸ್ಫೋಟಿಸುತ ಕರ
ತಳವನಿದಿರಲಿ ನಿಂದು ನಿರ್ಭಯನಾಗಿ ನಸುನಗುತ
ಕೆಳೆಯಸಂಸದಲೆಡದ ಭುಜವನು
ಚಲಿಸದೊಪ್ಪಿರೆ ನೀಡಿ ಹರಿ ಮೂ
ದಲಿಸಿ ಕರೆವುತ್ತಿರಲು ಕಂಡನು ಖಳಕುಲಾಂತಕನ ೩೬

ಸಿಡಿಲವೊಲು ಗರ್ಜಿಸುತ ಕೃಷ್ಣನ
ಕಡೆಗಣಿಸಿ ಕೂರ್ಗೋಲುಗಳಲಿಳೆ
ಯೊಡೆಯಲಪ್ಪಳಿಸುತ್ತ ಕೊರಹ ಕೋಡುಗಳ ಮೊನೆಯ
ಕಡುಹಿ ಮೋಹಿಯಜಾಂಡ ಕೋಟಿಯ
ಲಡಕಿಲಿನ ಜಠರವನು ಹಾಯ್ದಿರೆ
ಹಿಡಿದನಸುರಾರಾತಿ ಚಲಿಸದೆ ಕೋಡುಗಳ ತುದುಕಿ ೩೭

ಎರಡು ಕೈಯಲಿ ಖಳನ ಕೋಡ್ಗಳ
ನೆರಡನಾಡುತ ಹಿಡಿದು ಹೋಗೆಲೆ
ಕಱುವೆ ನಿನಗೇಕಾಹವಾಂಗದ ವಿದ್ಯೆ ನಮ್ಮೊಡನೆ
ಧರೆಗೆ ಪಶುವಧೆ ಪಾಪವಿದು ವೀ
ರರಿಗಪಕೀರ್ತಿಯೆನುತ ನೂಕಿದ
ನಿರದೆ ಖಳನನು ಬಂದ ಬಟ್ಟೆಯಲಸುರರಿಪು ನಗುತ ೩೮

ನೂಕಿಬಿಟ್ಟರೆ ನೂಱು ಹೆಜ್ಜೆಯ
ತೇಕಿಬಿದ್ದನು ಹಿಂದೆ ನಭದಲಿ
ಪಾಕಶಾಸನ ಮುಖ್ಯವಿಬುಧೇಶ್ವರರುಘೇಯೆನಲು
ಏಕೆ ಸೈರಿಸಿ ನಗುವವರ ಕೈ
ತೂಕದಲಿ ನುಂಗುವೆನೆನುತ್ತವಿ
ವೇಕಿ ಹಾಯ್ದನು ಮತ್ತೆ ಸಿಡಿಲಂದದಲಿ ಮುರಹರನ ೩೯

ಇಟ್ಟ ವಜ್ರದವೋಲು ಖಳ ಮುಂ
ದಿಟ್ಟು ಕೂರ್ಗೋಡುಗಳ ಮೊನೆಯಲಿ
ಹೊಟ್ಟೆ ಬಿರಿಯಲು ಹಾಯ್ದಡಸುರನ ಕೋಡ್ಗಳನು ಹಿಡಿದು
ಮುಟ್ಟಲೀಸದೆ ಕೆಡಹಿ ಧರೆಯಲಿ
ಸೃಷ್ಟಿಪಾಲಕರೊಡೆಯನಂತಕ
ಗಟ್ಟಿದನು ಜೀವವನುಘೇಯೆನುತಿರ್ದುದಮರಗಣ ೪೦

ಕೊರಳು ಮುರಿದುಸುರಡಗಿ ಕಾಲ್ಗಳು
ಜರಿದು ಕಣು ಹೊಱಹಾಯ್ದು ಬಸುಱು
ಬ್ಬರಿಸಿ ನಾಸಿಕವರಳಿ ಹಲುಗಿಟಕಿಱಿದು ಬಾಯ್ದೆಱೆದು
ಹೊಱಗೆ ಮೂತ್ರ ಪುರೀಷವವನಿಗೆ
ಸುರಿದು ಕೋಡುಗಳುಡಿದು ಘನ ಭೀ
ಕರವೆನಿಸಿ ಕೆಡೆದಸುರನೊಡಲಂಜಿಸಿತು ಮೂಜಗವ ೪೧

ಭಾಪು ವೈರಿವಿದಾರಣನೆ ಮಝು
ಭಾಪು ವೀರಪಿತಾಮಹನೆ ಮಝು
ಗೋಪವೇಷಚ್ಛನ್ನ ಪರಮೇಶ್ವರನೆ ಭಾಪೆನುತ
ಗೋಪ ಗೋಪೀವೃಂದ ವಿರಹಿತ
ತಾಪಭವನಿರ್ಲೇಪನಮರ ಕ
ಲಾಪ ಕೈವಾರಿಸಲು ಜಯರವ ಪುಷ್ಪವೃಷ್ಟಿಯಲಿ ೪೨

ಆಡಿದರು ದೇವಿಯರು ನಭದಲಿ
ಪಾಡಿದರು ಮಹಿಮೆಯನು ಸಂಸ್ತುತಿ
ಮಾಡಿದರು ಮಂಗಳವೆನುತ ಗಂಧರ್ವ ಕಿನ್ನರರು
ಜೋಡಿಸಿದ ಜಯಲಕ್ಷ್ಮಿಯಲಿ ನಲಿ
ದಾಡುವಾ ಗೋವಳರ ಸಂದಣಿ
ಗೂಡಿ ನಿತ್ಯಾತುಮನು ಹೊಕ್ಕನು ನಂದಗೋಕುಲವ ೪೩

ಮೂವತ್ತನೆಯ ಸಂಧಿ ಮುಗಿಯಿತು.

## ಮೂವತ್ತೊಂದನೆಯ ಸಂಧಿ

ಹೇಳಿದನು ಕಂಸಂಗೆ ಲಕ್ಷ್ಮೀ
ಲೋಲ ಬಾಲಚರಿತ್ರ ಸಹಿತಾ
ಭೀಳ ದೈತ್ಯರ ವಧೆಯನಾ ನಾರದ ಮಹಾ ಮುನಿಪ

ಬಂದನಮರಾಸುರನತಾಂಘ್ರಿ
ದ್ವಂದ್ವನಚ್ಯುತಗೋತ್ರ ಪರಮಾ
ನಂದನಿಧಿ ಪರಹಿತ ಸಮಾಹಿತಮೂರ್ತಿ ನುತಕೀರ್ತಿ
ಇಂದಿರಾಪತಿ ಭಕ್ತಜನ ನಿಜ
ಮಂದಿರನು ವೈಷ್ಣವಶಿರೋಮಣಿ
ವಂದ್ಯಚರಣರ ದೇವನಾನಾರದ ಮಹಾಮುನಿಪ ೧

ಕಂಡವರ ಕರಣಾವಳಿಯ ಕಱೆ
ಗೊಂಡ ಕಲ್ಮಷನಿಕರವನು ಕಡಿ
ಖಂಡವನು ಮಾಡುತ್ತ ಕೇಳ್ದವರಘದ ಸಂಚಯವ
ಹಿಂಡಿ ಹಿಳಿವುತ ಕಾಲ ಕರ್ಮವ
ಗಂಡುಗೆಡಿಸುತ ಧರೆಗೆ ಮುನಿ ಮಾ
ರ್ತಾಂಡನಾವಿರ್ಭವಿಸಿದನು ಮಥುರಾಪುರಾಂತರಕೆ ೨

ದೆಸೆದೆಸೆಯ ದುರಿತವನು ದುವ್ವಾ
ಳಿಸುತ ಹರಿಗುಣ ನಾಮಘೋಷ
ಪ್ರಸರ ವೀಣಾರವದ ವೈಷ್ಣವಸಮಯಶಾಸನದ
ಎಸೆವ ಗಾತ್ರದ ಚಾರುನೇತ್ರದ
ಹೆಸರಿಸಿದ ವೈಷ್ಣವ ಮಹಾ ಪೂ
ರುಷನು ವೈದೋಱಿದನು ಭೋಜನೃಪಾಲನಿದಿರಿನಲಿ ೩

ಬಂದಡೋಲಗದೆಡೆಗೆ ಭೋಜ ನೃ
ಪೇಂದ್ರನಿಳಿದುತ್ತಮ ವರಾಸನ
ದಿಂದಿದಿರುಗೊಂಡುಚಿತವಹ ಸತ್ಕಾರವನು ಮಾಡಿ
ವಂದಿಸುತ್ತಿರೆ ಮಗನೆ ಸುಖಿಯಾ
ಗೆಂದು ಮುನಿ ತಲೆದಡವಿ ನಿನಗಾ
ನಂದವೇ ಮುಖಲಕ್ಷ್ಮಿ ಮುನಿದಂತಿರ್ದುದೇಕೆಂದ ೪

ಏನನೆಂಬೆನು ಮುನಿಪ ವದನ
ಗ್ಲಾನಿಯನು ತನ್ನೊಂದು ಪೈಕದ
ಹಾನಿಯನು ಕೇಳುವರೆ ಕರ್ಣವ್ಯಥೆಯಲಾ ನಿಮಗೆ
ಮಾನನಿಧಿ ಚಿತ್ತವಿಸು ತಂಗಿಯ
ಸೂನುವಿನ ದೆಸೆಯಿಂದ ತನಗವ
ಸಾನವೆಂದಂದಿಂದ ಮನಕೆ ವಿಷಾದವಾಯ್ತೆಂದ ೫

ತಂಗಿಗೊಬ್ಬಳು ಮಗಳು ಕೊಲಲಾ
ನಂಗವಿಸಿದಡೆ ಹಾಱಿದಳು ಗಗ
ನಾಂಗಣಕೆ ಸಾಱಿದಳು ಮೃತ್ಯುವೆ ನಿನಗೆ ಧರಣಿಯಲಿ
ಅಂಗವಿಡಿದಿಹನೆಂದು ತನ್ನೊಡ
ಲಿಂಗೆ ತಾಪವನಿತ್ತು ಹೋದಳು
ಭಂಗಿಸಿತಲಾ ಬಯಲ ನುಡಿ ತಾನೇವೆನಿದಕೆಂದ ೬

ವಸುಧೆಯೊಳಗಿಹನೈಸಲೇ ಎಂ
ದಸುರೆ ಹೋದಳು ಹೋದಳತ್ತಲೆ
ಶಿಶುವಧೆಗೆ ಬಕ ವತ್ಸ ಧೇನುಕರೆಂಬ ಪಟುಭಟರ
ಅಸುವನಾರೋ ಕೊಂಡವರು ಕೇ
ಳಿಸದು ಮಗುಳಾ ವಾರ್ತೆ ನಿಮ್ಮಡಿ
ಬೆಸಸಬೇಹುದು ಬಲ್ಲರೆಂದನು ಮುನಿಪತಿಗೆ ಕಂಸ ೭

ಎನಲು ನಕ್ಕನು ಮುನಿಪನಾ ಕಂ
ಸನ ನುಡಿಯನಾಲಿಸುತ ಕೇಳೆಲೆ
ನಿನಗೆ ಸರಿಯೇ ವಿಷ್ಣು ವೀರರದಾರು ನಿನ್ನಿದಿರ
ಅನಿಮಿಷರಿಗಲಗಣಸು ನಿನ್ನಾ
ನನದ ಲಕ್ಷ್ಮಿಗೆ ಮಾಂದ್ಯವೇಕೆ
ಲ್ಲಿನಿತು ಭಯವಾರಿಂಗೆ ನೀನಿದಕಂಜಲೇಕೆಂದ ೮

ಹೇಳುವೆನು ಬಲ್ಲಂದದಲಿ ನಿ
ನ್ನಾಳುಗಳು ಮಡಿದಂದವನು ಗೋ
ಪಾಲರಿಬ್ಬರು ಬೆಳವುತೈದರೆ ನಂದಗೋಕುಲದ
ಬಾಲಕರೊಳತಿ ಚೆಲುವರಧಿಕ ವಿ
ಶಾಲ ಭುಜಬಲರವರು ಲಕ್ಷ್ಮೀ
ಲೋಲನಂಶಜರೆಂಬರೆಲೆ ಭೂಪಾಲ ಕೇಳೆಂದ ೯

ದುಷ್ಟ ನೃಪಕುಲ ಭಾರದಲಿ ಕಂ
ಗೆಟ್ಟು ಕುಸಿದು ರಸಾತಳಕೆ ಧರೆ
ತುಟ್ಟಿಸುತ ತನುಗೊಂಡು ನಡುಗುತ ಕಮಲಸಂಭವಗೆ
ವಿಷ್ಟಪಾಧೀಶ್ವರರು ಸಹಿತ ಮ
ದಿಷ್ಟ ಪಿತನಾ ವಿಷ್ಣುವಿಗೆ ಮೊಱೆ
ಯಿಟ್ಟಡುದಿಸಿದನವನಿಯಲಿ ಸಾಕ್ಷಾತು ಹರಿಯೆಂದ ೧೦

ದೇವಕಾರ್ಯವ ಮಾಡಲೋಸುಗ
ದೇವಕಿಯ ಜಠರದಲಿ ಬರೆ ವಸು
ದೇವನೊಯ್ದಿರಿಸಿದನು ಕೇಳೆಲೆ ಕಂಸ ನಿಜಸುತನ
ಗೋವಳರೊಳಾರಱಿಯದಂತಿರು
ಳಾವಿಗಡ ವಿಷ್ಣುವನು ನಿನ್ನೀ
ಜೀವಹರಣನು ಬೆಳವುತೈದನೆ ಗೋಕುಲದಲೆಂದ ೧೧

ಭೂಮಿ ಭಾರಾಯಿತ ನೃಪಾನ್ವಯ
ಧೂಮಕೇತುಗಳಾಗಿ ಧರೆಯಲಿ
ರಾಮಕೃಷ್ಣಾಹ್ವಯರು ಬೆಳವುತ್ತೈದಗದಱಿಂದ
ಈ ಮಹಾ ದುರ್ಧರುಷ ದೈತ್ಯ
ಸ್ತೋಮವಳಿದುದು ಕಂಸ ಕೇಳು
ದ್ದಾಮ ಬಾಲಕ್ರೀಡೆಯಿಂದವೆ ಕೊಂದರವರೆಂದ ೧೨

ಮಗನೆ ಕೇಳೈ ಕಂಸ ನಂದನ
ಮಗಳು ಚಂಡಿಕೆ ಕೃಷ್ಣ ಶೌರಿಗೆ
ಮಗನು ತಾನಾ ರಾಮನಾ ರೋಹಿಣಿಗೆ ಮಗನಿಂತು
ಮುಗುದನಾಗದರಿನ್ನು ಕಾರ್ಯವ
ಬಗೆವುದೆನೆ ಕೇಳುತ್ತ ಖಳನೆ
ದ್ದೊಗುಮಿಗೆಯ ಕೋಪದಲಿ ಕೊಂಡನು ಸೆಳೆದು ಖಂಡೆಯವ ೧೩

ಕಾಲಭೈರವನಂತೆ ರೋಷ ಕ
ರಾಳಮುಖನೊದೆದವನಿಯನು ಕೆ
ಣ್ಣಾಲಿಗಳು ಕಿಡಿಯಿಟ್ಟು ಹೂಂಕರಿಸುತ್ತ ನಿಂದಿರ್ದು
ಸೀಳಬಿಡಿ ವಸುದೇವನನು ಭೂ
ತಾಳಿಗಿಕ್ಕುವೆ ಬಲಿಯನೀಕ್ಷಣ
ವೇಳೆನುತ ಖಂಡೆಯವ ಜಡಿದನು ಹಿಡಿದು ಮುಂದಲೆಯ ೧೪

ಅಕ್ಕಟೇನೇನೆನುತ ತಾನಿನಿ
ತಕ್ಕೆ ಬಂದನೆ ಪಾಪಿ ಕೊಲ್ಲದಿ
ರಕ್ಕಳಿಸಿಕೋ ಕೋಪವನು ಕಾರ್ಯಾರ್ಥಸಂಗತಿಯ
ಲೆಕ್ಕಿಸದೆ ನೀ ಕೊಂದಡವದಿರು
ಸಿಕ್ಕುವರೆ ಬಾಲಕರು ನಿನ್ನದು
ಮುಕ್ಕಳಾಟಿಕೆ ಕಂಸ ಕಳವಳಿಸದಿರು ನೀನೆಂದ ೧೫

ಅರಿದು ನಿನಗೀತನನು ಕೊಲುವರೆ
ಮುರುಳೆ ತಲೆಯಿರೆ ಬಾಲವನು ಕ
ತ್ತರಿಸುವರೆ ಕಾಳೋರಗನ ಕಲಿತನವ ತೋಱುವರೆ
ಕರೆಸು ನಿನ್ನಳಿಯಂದಿರನು ನಿಜ
ಪುರಕೆ ನೆವದಲಿ ಹಣ್ಣುವುದು ಬಳಿ
ಕರಸ ಮನದೊಳಗಿದ್ದ ಕಾರ್ಯವನೆಂದನಾ ಮುನಿಪ ೧೬

ಇಲ್ಲ ಹಿತವರು ನಿನಗೆ ಯಾದವ
ರೆಲ್ಲ ಹಗೆಯೆಂಬುದನು ಮುನ್ನವೆ
ಸೊಲ್ಲಿಸೆನೆ ಷಡುಗರ್ಭಜನನದಲಂದು ದೇವಕಿಯ
ಬಲ್ಲಿದಂಗಿದು ಪಥವೆ ಯಾದವ
ನಲ್ಲ ಗಂಧರ್ವೋದ್ಭವನು ನೀ
ನಲ್ಲದಿರ್ದರೆ ಕುಲವಿರೋಧವಿದೆಂತು ನಿನಗೆಂದ ೧೭

ಹೇಳಿದನು ಗಂಧರ್ವವೀರ್ಯವ
ಬಾಲೆ ಧರಿಸಿದ ಕಥೆಯ ವೈರದ
ಮೂಲ ಸಂಬಂಧವನು ಯಾದವರೊಡನೆ ಸಂಗರಕೆ
ಏಳಿದಿಕೆ ಬೇಡೆನುತ ತಪ್ಪಿಸಿ
ಕಾಲಭಯವನು ಶೌರಿನೃಪರನು
ಬೀಳುಕೊಂಡಡಱಿದನು ನಭವನು ನಾರದವ್ರತಿಪ ೧೮

ನೂಕು ಸಂಕಲೆಗಳಿಗೆ ಕಳ್ಳನ
ಸಾಕಿವನು ನಿಜಪುತ್ರ ಮರಣದ
ಶೋಕವನು ಭೋಗಿಸಲಿ ಹೋಗಲಿ ಕೂಡೆ ಬಳಿಕೆನುತ
ಆ ಕುಮತಿ ಕಂಸಾವನೀಶನ
ನೇಕ ಪರಿಯಲಿ ಜಱೆದು ಸುಜನಾ
ನೀಕ ಮಱುಗಲು ಶೌರಿದೇವಕಿಯರನು ಬಂಧಿಸಿದ ೧೯

ದುರುಳನಾಗಳೆ ಕೇಶಿಯೆಂಬನ
ಕರೆದು ಬೆಸಸಿದನರಿತಮೋಭಾ
ಸ್ಕರನೆ ವೀರಶಿರೋಮಣಿಯೆ ನೀ ಹೋಗು ಗೋಕುಲಕೆ
ಭರದಲೆನ್ನ ವಿರೋಧಿಗಳ ಸಂ
ಹರಿಸಿ ಬಾರಾ ರಾಮಕೃಷ್ಣರ
ತರಿಸುವೆನು ಗೋವಳರ ಸಿರಿಯನು ಬಳಿಕ ತಾನೆಂದು ೨೦

ಕಳುಹಿ ಖಳನನು ದುಷ್ಟಮತಿ ಗೋ
ಕುಲಕೆ ಬಳಿಕಾ ಮಲ್ಲರೊಳಗ
ಗ್ಗಳೆಯರಹ ಚಾಣೂರ ಮುಷ್ಟಿಕ ಶಲನ ಕೌಶಲನ
ಬಲವದಾರೋಹಕರ ರಣಕತಿ
ಬಲರೆನಿಪ ಮಾವಂತರನು ಕರೆ
ದಳಲು ಮಿಗಲಿಂತೆಂದನೋಲಗದೊಳಗೆ ಕುಳ್ಳಿರ್ದು ೨೧

ಕೇಳಿದಿರೆ ನೀವೊಂದು ಕಥೆಯನು
ಹೇಳುವರೆ ನಾಚುವುದು ಮನ ಗೋ
ಪಾಲರಿಬ್ಬರು ನಂದಗೋಕುಲದೊಳಗೆ ಗಡ ತನ್ನ
ಆಳುಗಳು ಕೊಂದವರು ಕಲಿಗಳು
ಕಾಳಗಕೆ ಗಡ ತನಗೆ ಮುನಿಪತಿ
ಹೇಳಿದನು ವಸುದೇವಸುತರವರೆಂದು ಬಾಲಕರು ೨೨

ಕೇಶಿಯಾಹವದೊಳಗೆ ಹಗೆಗಳು
ಘಾಸಿಯಾಗದೆ ಮಾಣದುಳಿದರೆ
ಸಾಸಿಗರ ಕರೆಸುವೆನು ಕೊಲುವುದು ನೀವು ಬರಲವರ
ಈ ಸಂಮಜಸ ಮಲ್ಲಸಭೆಯ
ಭ್ಯಾಸ ಮುಖದಲಿ ಮಲ್ಲರಂಗಳ
ದೇಶದಲಿ ಮಂಚಂಗಳಿಕ್ಕಲಿ ನೋಟಕರಿಗೆಂದ ೨೩

ಕುಳ್ಳಿರಲು ಮಂಚಂಗಳಲಿ ಜನ
ವೆಲ್ಲ ನೋಡಲಿ ಪೌರುಷವ ನೆಲೆ
ಮಲ್ಲರಿರ ಮಾವಂತ ಕೇಳಾ ಹಸ್ತಿಮಲ್ಲನನು
ಬಲ್ಲಿದರ ಸಮ್ಮುಖಕೆ ಬಿಡಿ ಬಳಿ
ಕಲ್ಲಿ ನಿರ್ಣಯವಾಗದಿದ್ದರೆ
ಮಲ್ಲರಲಿ ನಿರ್ಣಯಿಸಬಹುದೆನಲಂಜುತಿಂತೆಂದ ೨೪

ಕೊಂದೆನೆಂದರೆ ಖಳನ ಹುಗದಿ
ಲ್ಲಿಂದ ಮುನ್ನವೆ ಬಾಗಿಲೊಳಗಾ
ನಂದಗೋಪನ ಮಕ್ಕಳನು ಸಂದೇಹವೇಕಿದಕೆ
ಒಂದು ಬಿನ್ನಹ ನಿಮ್ಮಡಿಗಳಳಿ
ಯಂದಿರಲ್ಲಾ ಮುನಿದು ಕೊಲಲೆನು
ಗಿಂದು ಬೆಸಸಿದಡಕ್ರಮುವ ನಾ ಮಾಳ್ಪೆನೆಂತೆಂದ ೨೫

ಎಂದಡೆಂದನು ಕಂಸನಿದನಾ
ರೆಂದರೆಲವೋ ನಿನಗೆ ತನಗಳಿ
ಯಂದಿರವರೆಂದೆಂಬ ಲೋಕದ ಹರದವಾತುಗಳ
ಇಂದು ತಾನಾರೆನಗೆ ಯಾದವ
ವೃಂದವೇನಹುದಜೀಯೆ ನೀನದ
ಱಂದವನು ಕೇಳಾದಡೆಂದೆಲ್ಲವನು ವಿವರಿಸಿದ ೨೬

ಕೇಳಿರೈ ಪರಿವಾರವೆಲ್ಲರು
ಕೇಳಿ ಸುಭಟರು ಮಂತ್ರಿಗಳು ನೀವ್
ಕೇಳಿ ಪೌರ ಪ್ರಕೃತಿಗಳು ಕರಿತುರಗವಾಹಕರು
ಕೇಳಿರೈ ಯಾದವರಿಗೆನ್ನಲಿ
ಮೇಳವಿಸಿದೀ ವೈರಕೃತ್ಯದ
ಮೂಲ ಕಾರಣವನು ಸಮಸ್ತಾಮಾತ್ಯಜನರೆಂದ ೨೭

ಹುಟ್ಟಿದವ ನಾನಲ್ಲ ತಂದೆಗೆ
ಹುಟ್ಟಿದೆನು ಪರಬೀಜದಲಿ ಕ
ಣ್ಣಿಟ್ಟು ನಿಜಜನನಿಯಲಿ ಮುನ್ನಾ ದ್ರವಿಳನೆಂಬವನು
ಹುಟ್ಟಿಸಿದನೆನ್ನುವನು ಯಾದವ
ಸೃಷ್ಟಿಯೊಳಗಾನಲ್ಲ ಕೊಂದರೆ
ಮುಟ್ಟದೆನ್ನನು ಪಾಪ ನೀವಿದಕಂಜಬೇಡೆಂದ ೨೮

ಸುರರು ಯಾದವರೈದೆ ತಾನೇ
ಸುರವಿರೋಧಿಗಡೆನ್ನ ಕೊಲಲವ
ತರಿಸಿದನು ಗಡ ವಿಷ್ಣು ಧರೆಯಲಿ ರಾಮಕೃಷ್ಣರೆನೆ
ನಿರುತ ಗಂಧರ್ವಕನ ವೀರ್ಯವ
ಧರಿಸಿ ಪಾತಿವ್ರತ್ಯ ಭಂಗದ
ದುರಿತದಲಿ ಜನಿಸಿದೆನು ಪೂರ್ವದಲಸುರ ನಾನೆಂದ ೨೯

ಕೋಪದಲಿ ತಮ್ಮವ್ವೆ ಸುವ್ರತ
ಲೋಪದಲಿ ಸಂಜನಿಸಿದೆನ್ನೀ
ಪಾಪಿ ಮಗ ಸುರಸುಜನಕಂಟಕನಾಗಲೆನುತಿರಲು
ಶಾಪಭಯದಿಂದವನು ಯಾದವ
ಭೂಪರಿಗೆ ಕಂಟಕನಹನು ನಿ
ರ್ಲೇಪ ನಾನೆನುತಡಗಿದನು ಗಂಧರ್ವನಾ ಕ್ಷಣಕೆ ೩೦

ಹೇಳಿದನು ನಾರದನು ತನಗೀ
ಮೂಲಜನ್ಮ ರಹಸ್ಯವನು ಕರು
ಣಾಳುತನದಲಿ ಲೋಕಹಿತವಿಗ್ರಹನು ತಾನಿದನು
ಹೇಳೆನಿನ್ನೆಗವಿಂದು ಸಂಶಯ
ಲೋಲರಾದ ನಿಮಿತ್ತ ಹದನನು
ಹೇಳಿದೆನು ಬಾಂಧವರ ವಧೆಗಿನ್ನಂಜ ಬೇಡೆಂದ ೩೧

ಎಲವೊ ಸಂಶಯ ಬೇಡ ಗಜದಲಿ
ತುಳಿಸು ತಂಗಿಯ ಮಕ್ಕಳನು ಗೋ
ವಳರು ಸಹಿತೆಲ್ಲರನು ಕರೆಸುವೆನೀ ಚತುರ್ದಶಿಗೆ
ಬಲ ಬಲಿ ಪ್ರಮುಥರನು ನೀ ಬಾ
ಗಿಲಲಿ ತಪ್ಪಿದಡಿಕ್ಕುವುದು ಕಳ
ನೊಳಗೆ ಮಲ್ಲರು ನೀವಿದಕೆ ತಲ್ಲಣಿಸಬೇಡೆಂದ ೩೨

ರಂಗವನು ನೆಱೆ ಬಳಸಿ ಬಹು ಮಂ
ಚಗಳಲಿ ಕುಳ್ಳಿರ್ದು ನೋಡಲಿ
ಸಂಗರವನೀ ಲೋಕ ಜನವೀ ಪೌರ ಪರಿವಾರ
ಕಂಗಳಲಿ ನೆಱೆಕಂಡು ನಿಜಸುತ
ರಂಗನಾಶವನವರ ಬಳಿಯಲಿ
ಹಿಂಗದೀ ವಸುದೇವನೈದಲಿ ಬಂಧುಜನ ಸಹಿತ ೩೩

ನಂದಗೋಪನನಖಿಳ ಗೋಪರ
ವೃಂದವನು ನೆಱೆ ಕಳುಹಿ ಕಾಲನ
ಮಂದಿರಕೆ ತಾ ತರಿಸುವೆನು ಬಳಿಕವರ ಗೋಧನವ
ತಂದೆಯನು ದೇವಕನನಾಶ್ರಮು
ದಿಂದ ಮನ್ನಿಸಿ ಬಾಂಧವರನಾ
ನಂದದಲಿ ರಾಜ್ಯವನು ಮಾಡುವೆನೆಂದನಾ ಕಂಸ ೩೪

ಎಂದು ಬೆಸಸಿ ದುರಾತ್ಮರಿಗೆ ಗೋ
ವಿಂದ ರಾಮರ ನಿಖಿಳ ಗೋಪರ
ವೃಂದ ಸಹಿತೊಡಗೊಂಡು ಬಹಮತಿವಂತರಾರೆನುತ
ಮಂದಹಾಸದಲೆಸೆವ ಕರತಳ
ದಿಂದ ಕರವನು ಹಿಡಿದು ಖಳನಿಂ
ತೆಂದನಕ್ರೂರಂಗೆ ಪರಿಮಿತದಲಿ ಮನೋಗತವ ೩೫

ಹೋಗು ನೀನೆಲೆ ತಂದೆ ಗೋಕುಲ
ಕಾಗಿ ತನ್ನಾಜ್ಞೆಯಲಿ ದಿಟ ನೀ
ನಾಗಲಱಿವರೆ ಮತ್ತೆ ಕೆಲಬರು ಸ್ವಾಮಿಕಾರ್ಯದಲಿ
ಹೋಗಿ ಸುರರಂಡಲೆದು ತಂದರು
ಸಾಗರದ ಮನೆಯವನನೀ ಭೂ
ಭಾಗಕೆನ್ನಯ ವಧೆಗೆ ಗಡ ಕೇಳಿದೆನು ತಾನೆಂದ ೩೬

ಸುರರ ಕೆಲಸವದಂತಿರಲಿ ನಿಜ
ಕರತಳಸ್ಥರಲಾ ಕುಠಾರರು
ನೊರಜುಗಳು ಕಾಡುವುವೆ ಕರೆಯಾ ರಾಮಕೃಷ್ಣರನು
ಭರದಲೆನ್ನಂತಿಕಕೆ ಬಂದಡೆ
ಮರಣವಹುದಂಜದಿರು ಹಬ್ಬಕೆ
ಕರೆದು ಕೊಡು ನಾಡಿದು ಚತುರ್ದಶಿಗೆಂದನಾ ಕಂಸ ೩೭

ಭೋಜಕುಲವರ್ಧನನೆ ಹೋಗೀ
ರಾಜರಥದಲಿ ನಂದಗೋಕುಲ
ಕೋಜೆಯಲಿ ಕುಹಕಿಗಳನಿಲ್ಲಿಗೆ ಕೊಂಡುಬಾರೆನುತಾ
ಭೋಜನೃಪಖಳನೆನಿಪ ಕೇಶಿಯ
ನಾ ಜನಾರ್ದನವಧೆಗೆ ನೇಮಿಸಿ
ರಾಜಗೃಹವನು ಹೊಕ್ಕನೋಲಗ ಹರೆಯಲನುರಾರಿ ೩೮

ಬೀಳುಕೊಂಡಕ್ರೂರನಾ ರಾ
ಜಾಲಯವ ಹೊಱವಂಟು ಲಕ್ಷ್ಮೀ
ಲೋಲನಂಘ್ರಿ ಸರೋಜದರುಶನದರ್ತಿಯಲಿ ಬರಲು
ಮೇಳವಿಸಿದುದು ರವಿಗೆ ಪಶ್ಚಿಮ
ಶೈಲದಿರವಾ ಯಿರುಳು ಗೋಕುಲ
ಬಾಲೆಯರಿಗವಸರವೆನುತ ನಿತ್ಯಾತ್ಮ ಕೃಷ್ಣನಲಿ ೩೯

ಮೂವತ್ತೊಂದನೆಯ ಸಂಧಿ ಮುಗಿಯಿತು

# ಮೂವತ್ತೆರಡನೆಯ ಸಂಧಿ

ಕೇಶಿಯನು ಸದ್ಧರ್ಮಮಾರ್ಗವಿ
ನಾಶಿಯನು ಸಂಹರಿಸಿ ಕರುಣಾ
ರಾಶಿ ಸಲಹಿದನೊಲಿದು ಕಾರುಣ್ಯದಲಿ ಗೋಕುಲವ

ಅತ್ತಲನ್ನೆಗ ಕೇಶಿಯೆಂಬಸು
ರೋತ್ತಮನು ಕಂಸಾಜ್ಞೆಯಲಿ ಬಲು
ಮೃತ್ಯು ಬಾಯ್ದೆಱೆದಂತೆ ವಕ್ತ್ರವ ತೆಱೆದು ಗೋಕುಲಕೆ
ಹತ್ತು ದೆಸೆಯನು ಬೆದಱಿಸುತ ತುರ
ಗೋತ್ತಮಾಕೃತಿಯಾಗಿ ಬರೆ ಪುರು
ಷೋತ್ತಮನನಱಸುತ್ತ ಬಂದನು ಭೀಕರಾಂಗದಲಿ ೧

ಖರಖುರಾಗ್ರದಲವನಿಯನು ಗ
ಬ್ಬರಿಸಿ ಪಾತಾಳವನು ಹೊಗಿಸು
ತ್ತುರು ಸಟಾನೀಕದಲಿ ಗಗನಾಂಗಣವ ಕೆದಱುತ್ತ
ಉರಿಯನುಗುಳುವ ಕಂಗಳಲಿ ಮುರಿ
ಮುರಿದು ದೆಸೆಗಳನೀಕ್ಷಿಸುತ ಸಂ
ಗರ ವಿಶಾರದನಾಗಿ ತುರಗಾಕೃತಿಯಲೈತಂದ ೨

ಹೇಷಿತದಲಮುರಾವಳಿಗೆ ಪರ
ದೇಶವನು ಮಾಡುತ್ತ ವನವನು
ಘಾಸಿ ಮಾಡುತ ಕಾಲದೂಳಲಿ ವ್ಯೋಮ ಕಪ್ಪಿನಲಿ
ನೇಸಱನು ಮಸುಳಿಸುತ ಗೋಕುಲ
ವಾಸಿಗಳನಂಜಿಸುತ ಘನತರ
ರೋಷದಲಿ ನಡೆತಂದನಂತಕನಂತೆ ಗೋಕುಲಕೆ ೩

ಆಡಸಿ ಕವಿತರಲಸುರನನು ಕಂ
ಡೊಡಲು ಕಂಪಿಸೆ ಗೋಪಜನ ಗಡ
ಗಡನೆ ನಡುಗುತ ಗೋಧನಂಗಳ ಕಱುಗಳನು ಬಿಸುಟು
ನಡುಗಿ ಹಾಯ್ದಿತು ದೆಸೆದೆಸೆಗೆ ಕಾ
ವೊಡೆಯರಾರಿನ್ನೆಮಗೆನುತ ಬಾ
ಯ್ಬಿಡುತ ಕೃಷ್ಣನ ಮಱೆಯ ಹೊಕ್ಕುದು ಯೋಗವಿದರಂತೆ ೪

ಅಂಜದಿರಿ ಗೋವಳರು ಗೋಪಿಯ
ರಂಜದಿರಿ ಗೋಕುಲವ ನಾನಿರ
ಲೆಂಜಲಿಸುವನೆ ದೈತ್ಯನೀ ವ್ಯಾಜಾಶ್ವರೂಪದಲಿ
ಪಂಜರದ ಗಿಳಿಗಳನು ಮುಱಿವುದೆ
ಮಂಜರನು ಬೆದಱದಿರೆನುತ ಕರ
ಕಂಜವನು ನೆಗಹಿದನು ಕರುಣದಲಸುರರಿಪು ನಗುತ ೫

ವಾಮ ರಾಮ ಭುಜಾಗ್ರವಾ ಶ್ರೀ
ದಾಮನಂಸದಲೆಸೆಯೆ ನಯನ
ಪ್ರೇಮಭಾಜನಮೂರ್ತಿ ಕಡೆಗಣಿಸುತ್ತ ಗೋಪಿಯರ
ಆ ಮಹಾಸುರನಭಿಮುಖಕೆ ಕರೆ
ತಾಮರಸವನು ತೋಱಿ ಭುವನೋ
ದ್ದಾಮ ಗುಣನಿಧಿ ನಿಂದು ಕರೆದನು ಸಿಂಹನಾದದಲಿ ೬

ಇತ್ತಲೆತ್ತಲು ಹೋಹೆ ನಿಲು ನಿಲು
ಶಕ್ತಿಯುಳ್ಳಡೆ ಸಮರ ಮುಖದಲಿ
ಮೃತ್ಯುವಾಗಿಹೆನೇಕೆ ಬೆದಱಿಸಿ ಬಲವಿಹೀನರನು
ಅತ್ತಲೇಕಂಜಿಸುವೆ ಮರಣೋ
ದ್ಯುಕ್ತನಾದರೆ ನಿಲ್ಲೆನುತ ಕೈ
ಯೆತ್ತಿ ಕರೆದನು ಖಳನನಸುರಾಂತಕನು ಕನಲಿಸುತ ೭

ತಿರುಗಿ ಕಂಡನು ಕೃಷ್ಣನನು ಕೇ
ಸುರಿಯನುಗುಳುವ ಕಂಗಳಲಿ ಗ
ರ್ಘರ ಮಹಾರವದಿಂದ ಗರ್ಜಿಸಿ ಹಿಂದುಮುಂದಾಗಿ
ಖರಖುರಾಗ್ರದಲಚ್ಯುತನ ಪೇ
ರುರವನೊದೆದನು ದೈತ್ಯನಂಜನ
ಗಿರಿಯ ವಕ್ಷವನಿಂದ್ರನಿಟ್ಟಂತಾಯ್ತು ವಜ್ರದಲಿ ೮

ಇಲ್ಲ ಹುಸಿ ಹೋಗೆನುತ ಲಕ್ಷ್ಮೀ
ವಲ್ಲಭನು ಹಿಂಗಾಲ ಘಾಯದ
ಘೆಲ್ಲಣೆಯ ಘಾತಿಯನು ತಪ್ಪಿಸಿಕೊಂಡು ನಸುನಗುತ
ಬಲ್ಲಿದನು ನೀನಹೆ ಮಹಾಹವ
ದಲ್ಲಿ ಸುಸ್ಥಿರನಾಗೆನುತ ರಿಪು
ಮಲ್ಲನನು ನೂಕಿದನು ಹರಿ ಹಿಂಗಾಲ್ಗಳನು ಹಿಡಿದು ೯

ಜಾಱಿದನು ಖಳ ಹಿಂದುಮುಂದೆನೆ
ನೂಱು ಬಿಲ್ಲಂತರಕೆ ಮೋಱೆಯ
ನೂಱ್ ಬಿದ್ದನು ಸುರಕುಲಾಂತಕ ಶೈಲವನಸಹಿತ
ಡೋಱುವೋಗಲು ನೊಂದು ನೆತ್ತರ
ಕಾಱುತಮರಾರಾತಿ ಮಿಗೆ ಕಾ
ಹೇಱಿದುಕ್ಕಿನವೋಲು ಕಿಡಿಕಿಡಿವೋದನಡಿಗಡಿಗೆ ೧೦

ಆಹ ತಿಂಬೆನು ಕರುಳನೀಗಳೆ
ಹೂಹೆಗಕ್ಕಟ ತನ್ನೊಡನೆ ಹೇ
ಳಾಹವಕೆ ನಿಲುವಂತೆ ನಿಗುರಿತೆ ವಿಕ್ರಮದ ಲಕ್ಷ್ಮಿ
ಸಾಹಸಿಕನಹನಖಿಳ ಗೋಪ
ವ್ಯೂಹ ಸಹಿತಿನ್ನೊಮ್ಮೆ ನುಂಗುವೆ
ನಾಹುತಿಗೆ ನಾನೆನುತ ಖಳ ಬಾಯ್ದೆಱೆದು ಹರಿತಂದ ೧೧

ಭಂಡ ಬೊಬ್ಬಾಟವನು ಬಿಡು ಕೈ
ಕೊಂಡು ನೋಡಿದನುಳಿದ ಗೋಪರ
ತಂಡವನು ಬಳಿಕಾಹುತಿಯ ಮಾಡಾಪಡೆಂದೆನುತ
ದಿಂಡುಗವಿವನ ಬಾಯೊಳಗೆ ದೋ
ರ್ದಂಡವನು ನೂಕಿದನು ಭಯದಲಿ
ಕಂಡು ಗೋಪರನಿಕರ ಬಿದ್ದುದು ಬಹಳ ಮೂರ್ಛೆಯಲಿ ೧೨

ಕಡಿದು ನುಂಗುವೆನೆನುತ ಗಂಟಲ
ಗಡಿಯ ನೂಕಿದ ತೋಳ ಮೊದಲನು
ಕಡುಗಿ ಖಳ ಸಾಕಿದರೆ ಬಾಯಲಿ ಸೋಂಕಿದಾಕ್ಷಣವೆ
ಉಡಿದು ಬಿದ್ದವು ದಂತಚಯ ಗೋ
ಣೊಡೆಯೆ ಬೆಳೆದುದು ಬಾಹುಲತೆಯುಸು
ರುಡುಗಿ ಬಸಿಱುಬ್ಬರಿಸಿ ಬಿದ್ದನು ಧರೆಗೆ ಸುರವೈರಿ ೧೩

ಲಂಡವನು ಬಿಡುತವನಿತಳದಲಿ
ದಿಂಡು ಗೆಡೆದನು ವಜ್ರಹತಿ ಕೈ
ಕೊಂಡ ಕುಲಗಿರಿಯಂತೆ ದಿಕ್ಕುಂಭಿಗಳು ಘೀಳಿಡಲು
ಚಂಡವಿಕ್ರಮನಾರ್ದು ನಿಜ ದೋ
ರ್ದಂಡವನು ತೆಗೆದನು ಖಳನ ಹೃ
ತ್ಪುಂಡರೀಕದ ಜೀವ ಚೈತನ್ಯವನು ತೆಗೆವಂತೆ ೧೪

ಮಲ್ಲಿಗೆಯ ಮಳೆ ಸುರಿದವನುರರ
ವಲ್ಲಭೆಯರಾಡಿದರು ಪಾಡಿದ
ರುಲ್ಲಸಿತ ಸಂಗೀತ ವಾದ್ಯಂಗಳ ವಿನೋದದಲಿ
ಫುಲ್ಲದೃಶನಾ ಗೋಪಗೋಪಿಯ
ರೆಲ್ಲರಿಗೆ ಸಂತೋಷವನು ಸಿರಿ
ವಲ್ಲಭನು ಸಲಿಸುತ್ತಲಿರ್ದನು ವಿವಿಧ ಲೀಲೆಯಲಿ ೧೫

ಆ ಮಹೋತ್ಸವದೊಳಗೆ ಭುವನ
ಕ್ಷೇಮ ಕಾರಣಮೂರ್ತಿ ಹರಿಗುಣ
ನಾಮ ಸಂಕೀರ್ತನದ ಸಜ್ಜನದೇವನೀ ಧರೆಗೆ
ಸೋಮಸನ್ನಿಭನಿಳಿದನವನತ
ಕಾಮಧೇನು ಮಹಾತ್ಮನಾತ್ಮಾ
ರಾಮರರಸನು ನಾರದಾಂಕನು ಕೃಷ್ಣನಿದಿರಿನಲಿ ೧೬

ಕೆಱುಜಡೆಯ ನಯವಡೆದ ಭಾಳದ
ಕೊರಳ ತುಳಸಿಯ ದಂಡೆಗಳ ಪು
ಷ್ಕರದ ಬೀಜದ ಮೆಱೆವ ತ್ರಿಸರದ ಭಾಸುರದ್ಯುತಿಯ
ಮೆಱೆವ ಹರಿನಾಮೋರ್ಧ್ವಪುಂಡ್ರೋ
ತ್ಕರದ ಪುಳಕಾಮೃತದ ಲಹರಿಯ
ಪರಮವೈಷ್ಣವ ಮೌಳಿಮಣಿಯಿಳಿತಂದನೀ ಧರೆಗೆ ೧೭

ಕಂಡವರು ಮುಕುಳಿತಕರಾಬ್ಜವ
ಮಂಡೆಯಲಿ ಧರಿಸುತ್ತ ತನುವನು
ದಿಂಡುಗೆಡಹುತ್ತಿರಲು ಪದದಲಿ ಪರಮಭಕುತಿಯಲಿ
ಕಂಡು ಕೃಪೆಯಲಿ ಕಾಲಪಾಶವ
ಖಂಡಿಸುತ ಕಾರುಣ್ಯವೇ ವ್ಯೆ
ಗೊಂಡವೊಲು ವ್ಯೆದೋಱಿದನು ಗೋವಿಂದನಿದಿರಿನಲಿ ೧೮

ಜಯ ನಮೋ ಗೋವಿಂದ ಗೋಪೀ
ನಯನವಲ್ಲಭ ಭಕ್ತಸಂಸಾ
ರಿಯ ನಮೋ ಭವರೋಗವೈದ್ಯನೆ ಭುವನವಂದಿತನೆ
ಜಯ ಜಗನ್ಮೋಹನ ಗುಣಾಬ್ಧಿಯೆ
ಜಯ ಜಗತ್ಪಾವನ ಯಶೋಬ್ಧಿಯೆ
ಜಯಯೆನುತ ವ್ಯೆಯಿಕ್ಕಿದನು ಮುರಹರನ ಚರಣದಲಿ ೧೯

ಜೋಡಿಸಿದ ತನುಪುಳಕದುಬ್ಬಿನ
ಲೀಡಿಱಿವ ಹರುಷದಲಿ ಬಿನ್ನಹ
ಮಾಡಿದನು ವ್ಯೆಯಿಕ್ಕಿ ಕ್ಯೆಗಳ ಮುಗಿದು ಮುನಿನಾಥ
ನೋಡಿ ಮಂಗಳಮೂರ್ತಿಯನು ಕಡೆ
ಗೋಡಿವಱಿದಾನಂದಜಲದಲಿ
ಕೂಡೆ ನನೆದನು ನಯನಸಂಪ್ರೀತಿಯಲಿ ಮನ ಮುಳುಗಿ ೨೦

ಕಂಡೆನಾನೆಲೆ ಕೃಷ್ಣ ಭುವನೋ
ದ್ದಂಡ ದ್ಯೆವದ ದ್ಯೆವವೆನಿಸುವ
ಖಂಡ ಸುಖವಿಗ್ರಹನೆ ನರಶಿಶುತನದ ಲೀಲೆಗಳ
ಕಂಡೆನಿಂಗಡಲಿಂದಿಳಿದು ಸುರ
ತಂಡವನು ರಕ್ಷಿಸಲು ನೀ ತನು
ಗೊಂಡುದನು ದೇವಕಿಯುದರಕುಹರದಲಿ ತಾನೆಂದ ೨೧

ಮತ್ತೆ ಕಂಡೆನು ದೇವ ನಿಜ ಸುಚ
ರಿತ್ರವನು ನೀನೀ ಯಶೋದೆಯ
ಪುತ್ರನೆನಿಸಿಯೆ ಮೆಱೆವ ತ್ವತ್ಪದಪರಮಲೀಲೆಗಳ
ಇತ್ತು ವಿಷವನು ದನುಜೆ ನಿನ್ನಲಿ
ಮುಕ್ತಿ ಪಡೆಯಳೆ ಭಂಡಿಯನು ನೀ
ನೆತ್ತಿ ಬೀಸಾಡಿದುದನಾ ವಾತಾಸುರನ ವಧೆಯ ೨೨

ಬೆಣ್ಣೆಗಳುವುದನೂರೊಳಗೆ ನೆಱೆ
ಮಣ್ಣ ಮೆದ್ದುದ ರದಗಜಂಗಳ
ಬಣ್ಣಿಗೆಯ ಚಿತ್ರವನು ನಿನ್ನೀ ಬಾಯೊಳಗೆ ತೋರ್ಪ
ಹಣ್ಣು ಮಾಣಿಕವಹುದನಾ ಶಶಿ
ಹಣ್ಣಹುದನಂಗ್ಯೆಗೆ ಕಂಡೆನು
ಕಣ್ಣಲೆಲೆ ಕಮಲಾಕ್ಷ ನಿನ್ನ ವಿಚಿತ್ರ ಲೀಲೆಗಳ ೨೩

ಊರ ನೇಣುಗಳುದರವೇಷ್ಟನ
ಭಾರಣೆಗೆ ಬಾರದುದನೊಂದೇ
ಸೇರಿದುದನರ್ಜುನ ಮಹಾವಿಟಪಿಗಳನೀ ಧರೆಗೆ
ಬೇರು ಸಹಿತಡೆಗೆಡಹುವುದ ನೂ
ರೇಱುವದನೀಸ್ಥಳಕೆ ವತ್ಸನ
ನಾರುಭಟೆಯಲಿ ಕೊಲುವುದನು ನೆಱೆ ಕಂಡೆ ನಾನೆಂದ ೨೪

ಬಕನನಘನನು ವ್ಯೋಮನನು ಧೇ
ನುಕನನಾ ವೃಷಭನನು ಕೊಂದಂ
ತಕನ ಪುರಕಟ್ಟಿದೆ ಪ್ರಲಂಬಕನ ಶಂಖಚೂಡನನು
ಸುಕೃತಿಯಾದೆನು ಕಂಡು ವೃಷಭನ
ಶಕುತಿಯನು ಮತ್ತಿಂದು ಕೇಶಿಗೆ
ಮುಕುತಿಯನು ಕರುಣಿಸುವುದನು ಸಂಗ್ರಾಮದೊಳಗೆಂದ ೨೫

ಕಾಳಿಯನ ಮಸ್ತಕವ ತುಳಿದುರ
ಗಾಲಯಕೆ ಕಳುಹುವುದನಚಲವ
ನೇಳುದಿನ ಧರಿಸಿದುದನೊಂದೇ ವಾಮಹಸ್ತದಲಿ
ಗಾಳಿ ಮಳೆಯಲಿ ಗೋಕುಲವ ನೆಱೆ
ಪಾಲಿಸುವುದನು ಕಂಡೆನೀ ನಿಜ
ಲೀಲೆಗಳ ನಾಟಕದ ನಾನಾವಿಧವಿಡಂಬನವ ೨೬

ನಾಳೆ ಮತ್ತಕ್ರೂರನೊಡನೆ ನೃ
ಪಾಲ ಕಂಸನ ಪುರಕೆ ಬಲ ಗೋ
ಪಾಲಕರು ಸಹಿತೈದುವದನಾ ಪುರದ ರಜಕನನು
ಕಾಲನನು ಕಾಣಿಸುವ ಚಿಪ್ಪಿಗ
ನೇಳಿಗೆಯನಾಗಿಸುವ ದಾಮನ
ಮಾಲೆಯನು ಕೊಂಡೀವ ವರವನು ಕಾಂಬೆ ನಾನೆಂದ ೧೭

ಅಲ್ಲಿ ಕುಬುಜೆಯ ಮೂವುಬಗ ಕೈ
ಯಲ್ಲಿ ತಿದ್ದುತ ಕಂಸನಗ್ಗದ
ಬಿಲ್ಲನುಡಿದು ತದೀಯ ಬಲವನು ಬಡಿದು ಬಱಿಕೈಯ
ಬಲ್ಲಿದಾನೆಯ ಕೆಡಹಿ ಕಣದಲಿ
ಮಲ್ಲರನು ಮಾವನನು ಸುಪರ್ವರ
ವಲ್ಲಭೆಯರೊಡನಾಡಿಸುವುದನು ಕಾಂಬೆ ನಾನೆಂದ ೧೮

ಮೇಲೆ ಗುರುದಕ್ಷಿಣೆಗೆ ಕಾಲನ
ತಾಳಿಗೆಗೆ ತುತ್ತಾಗಿ ಸಂದಾ
ಬಾಲಕನನಂತಕನ ಪುರದಿಂದೀಸಿ ತಂದೀವ
ಲೀಲೆಯನು ಮುಚುಕುಂದನಕ್ಷಿ
ಜ್ವಾಲೆಯಲಿ ಯವನೇಶನೊಡಲನು
ಹೊಳುವುದನೀಕ್ಷಿಸುವೆನಾ ಮಾಗಧನ ಬಲಸಹಿತ ೧೯

ದ್ವಾರಕಾನಿರ್ಮಾಣವನು ದು
ರ್ವಾರ ಹಂಸಾಹವವನಾ ತ
ದ್ವೈರಿ ಬಲಸಂಕ್ಷಯವನಾ ರುಕ್ಮಿಣಿಯ ಪರಿಣಯವ
ಸ್ವೈರ ಚಾರಿತ್ರವನು ಪೌಂಡ್ರಕ
ವೀರನಸುಗೊಂಬುದನು ಕೃತ್ತಿಗೆ
ವಾರಣಾಸಿಯ ಬೇಳವುದನೀಕ್ಷಿಸುವೆ ನಾನೆಂದ ೨೦

ಮತ್ತೆ ಘಂಟಾಕರ್ಣನಿಗೆ ನಿಜ
ಭಕ್ತಿನೆಂದೊಲಿವುದನು ಕಾಣಲು
ಕೃತ್ತಿವಾಸನ ಪದವನಾ ಕೈಲಾಸ ಯಾತ್ರೆಯನು
ಉತ್ತಮಾಧ್ವರದೊಳಗೆ ಕುಂತೀ
ಪುತ್ರಪೂಜಿತನಾಗಿ ಚೈದ್ಯಗೆ
ಮುಕ್ತಿಯನು ಕರುಣಿಸುವ ಹದನನು ಕಾಂಬೆ ನಾನೆಂದ ೨೧

ಮುರನ ನರಕನ ಭಂಜನದ ಸಂ
ಗರವನಾ ಷೋಡಶ ಸಹಸ್ರಾಂ
ಬುರುಹಮುಖಿಯರ ಲಾಭವನು ಸುರಲೋಕಯಾತ್ರೆಯನು
ಮರಳಿ ಬರುತಾ ಪಾರಿಜಾತದ
ಹರಣದಲಿ ಸುರಲೋಕಪಾಲರ
ಪರಿಭವಿಸಿ ಕೈಕಾಯ್ದು ಬಹುದನು ಕಾಂಬೆ ನಾನೆಂದ ೨೨

ಸಾಲುವನ ಶಂಬರನ ವಿವಿದನ
ಬೀಳಹೊಯ್ದು ಕರೂಷಭವನನು
ಕಾಳಗದಲವಗಡಿಸಿ ಗೌರೀಶನನು ಬಲಿಸುತನ
ತೋಳುಗಳನಿಳುಹುವುದನರ್ಜುನ
ಗಾಳಹುದನಾ ಭಾರತದ ಬಲು
ಗಾಳಗವ ಗೆಲಿಸುವ ವಿಹಾರವ ಕೊಂಬೆ ನಾನೆಂದ ೨೩

ಅರಸಿ ಸಹಿತ ಮಹಾ ಸ್ಯಮಂತಕ
ಹರಣವನು ನೃಗವೋಕ್ಷನನು ದು
ರ್ಧರ ಮಹಾ ಭೂಭಾರ ಹರಣಾದಿ ಲೀಲೆಗಳ
ದುರವಗಾಹ್ಯವೆನಿಪ್ಪ ನಿಜಮಂ
ದಿರದಲಿರ್ದರ್ಭಕರನವನೀ
ಸುರಗೆ ತಂದೀವುದನು ಕಾಂಬೆನು ಧನ್ಯನಹೆನೆಂದ ೨೪

ಆವ ನಿಜಸುಖಪೂರ್ಣನೋ ವಸು
ದೇವ ನೀ ನಿನ್ನಂತೆ ನಿಸ್ಪೃಹ
ನಾವನೀ ಸಂಸಾರ ವಿಷಯಸುಖೋಪಭೋಗದಲಿ
ರಾವಣಾಂತಕ ನಿಜ ಕುಲಕ್ಷಯ
ಕಾವನಂಗೈಸುವುದ ಕಂಡಪೆ
ದೇವ ವಿವಿಧ ವಿಚಿತ್ರಚಾರಿತ್ರವನು ತಾನೆಂದ ೨೫

ನೀನಲಾ ಸಾಕ್ಷಾತು ಯೋಗಿ
ಧ್ಯಾನಗಮ್ಯನೆನಿಪ್ಪ ದೈವವು
ನೀನಲಾ ಕಮಲಜ ಪಿನಾಕಿ ಸುರೇಂದ್ರ ಮುಖ್ಯರಿಗೆ
ಸ್ಥಾನಮಾನ್ಯವನಿತ್ತು ಸಲಹುವ
ದಾನಿಗಳ ದಾತಾರ ನಿನ್ನೀ
ಮಾನುಷದ ಚಾರಿತ್ರವಧಿಕಪವಿತ್ರತರವೆಂದ ೨೬

ಆರು ಜಗದಾತ್ಮಕ ಜಗನ್ಮಯ
ದಾರು ಜಗದಾಧಾರಭೂತರ
ದಾರು ಜಗದಾರಾಧ್ಯ ದೈವವೆನಿಪ್ಪವರು
ಆರು ಜಗದಭಿವಂದ್ಯವಂದ್ಯನ
ದಾರು ಪರಮಾತುಮನೆನಿಪ್ಪನ
ದಾರು ಮತ್ತಾರು ನಿನಗಿದೆಂತುಪಸನ್ನವಾಯ್ತೆಂದ ೨೭

ಭುಕುತಿಯೇ ಭವಬಂಧ ಭೇದನ
ಭಕುತಿಯೇ ವರಮುಕುತಿ ಸಾಧನ
ಭಕುತಿಯೇ ಭುವನತ್ರಯಾರ್ತವಿರಾಗಸಂಸಿದ್ಧಿ
ಭಕುತಿ ಸುಖವನು ಬಲ್ಲ ಬುಧರಿಗೆ
ಮುಕುತಿ ಸುಖವಶ್ಲಾಘ್ಯ ನಿಜಪದ
ಭಕುತಿಯನು ಕೃಪೆ ಮಾಳ್ಪುದೆಲ್ಲರಿಗೆಂದನಾ ಮುನಿಪ ೨೮

ಯಜಿಸಿ ದಣಿಯರು ಕರ್ಮಿಗಳು ನೆಱೆ
ಭಜಿಸಿ ದಣಿಯರು ವಿಮಳ ಹೃದಯಾಂ
ಬುಜದ ಕರ್ಣಿಕೆಯೊಳಗೆ ಭಕ್ತರು ನಿಜಪದಾಂಬುಜವ
ಭಜಿಸಿ ತತ್ವಂಪದವನಾತ್ಮನ
ನಿಜವ ಕಂಡದ್ವೈತವೆಂದೇ
ತ್ರಿಜಗವಂದ್ಯನೆ ಕಂಡು ದಣಿಯದು ಯೋಗಿಜನವೆಂದ ೩೯

ಸಾಕು ತನಗೀ ನಿನ್ನಪದ ಕಮ
ಲೈಕಭಕ್ತಿಯೆ ಬೇಱೆ ಬಯಸಲ
ದೇಕೆ ತತ್ವಜ್ಞಾನಸಿದ್ಧಿಯ ಬುದ್ಧಿಯನು ದಿಟಕೆ
ಲೋಕಪಾವನ ಪುಣ್ಯಚರಿತ ಕ
ಥಾಕಥನಪೀಯೂಷವಾರ್ಧಿಯ
ಲೇಕ ಚಿತ್ತದಲಾಡುವಂತಿರೆ ಕೃಪೆಯ ಮಾಡೆಂದ ೪೦

ಎಂದು ಮುನಿಪತಿ ನೋಡಿ ಪರಮಾ
ನಂದ ಬಾಷ್ಪಜಲಾವಿಲೇಕ್ಷಣ
ದಿಂದ ದಿವ್ಯಮನೋಜ್ಞ ಮಂಗಳಮೂರ್ತಿಯನು ಬಿಡದೆ
ಸಂದಣಿಪ ತನುಪುಳಕದಲಿ ಗೋ
ವಿಂದನನುಪಮ ಪಾದಕಮಲ
ದ್ವಂದ್ವದಲಿ ಮೆಯ್ಯಿಕ್ಕಿ ಮುಳುಗಿದನಶ್ರುಪೂರದಲಿ ೪೧

ಬೀಳುಕೊಂಡನು ಕಂಗಳಲಿ ಮನ
ಬೀಳುಕೊಳ್ಳದು ಕೃಷ್ಣಮೂರ್ತಿ ವಿ
ಶಾಲಸಂಗದ ಪರಮಸುಖ ಸಾಮ್ರಾಜ್ಯಸಂಪದವ
ನಾಲಿಗೆಯಲಚ್ಯುತನ ನಾಮವ
ನೋಲಗಿಸುತೈದಿದನು ಕಮಲಜ
ನಾಲಯಕೆ ಭಾಗವತ ಗುಣಗಣವೌಳಿ ನಲವಿನಲಿ ೪೨

ಜನಪ ಕೇಳೊಂದು ದಿನ ವೃಂದಾ
ವನದೊಳಗೆ ಗೋವಳರು ಸಹಿತಾ
ದನುಜಹರ ಬಲರಾಮರಾಡುತ್ತಿರೆ ವಿನೋದದಲಿ
ದನುಜನೊಬ್ಬನುದಾರ ಭುಜಬಲ
ಜನಿತ ದರ್ಪದಲನಿಬರನು ಕೊಲು
ವನುವ ನೆಱೆ ನಿಶ್ಚೈಸಿ ಕಂಡೈತಂದನಾ ಸ್ಥಳಕೆ ೪೩

ಅದನಱಿತು ಸರ್ವಾತ್ಮಕನು ತೂ
ಗಿದನು ಶಿರವನು ಭಾಪು ಮಝು ಬಂ
ದುದು ತನಗಿದೊಂದಾಟವೀ ದಾನವನ ಬೊಬ್ಬಾಟ
ಇದಿರುಗೊಂಬೆನೆನುತ್ತ ಕೆಳೆಯರಿ
ಗೊದವಿದಂತರ್ಭಾವದುತ್ಸಾ
ಹದಲಿ ಕರೆದಿಂತೆಂದನಾ ಶ್ರೀಧಾಮ ಮುಖ್ಯರಿಗೆ ೪೪

ಚೋರಪಾಲಕರಾಗಿ ಗೋಪ ಕು
ಮಾರಕರ ಕೆಲರಿದಱೊಳಗೆ ತ
ಚ್ಚೋರರಾಗಲಿ ತುಱುಗಳಾಗಲಿ ಕೆಲರು ಕೆಲರದನು
ಚೋರವಿದ್ಯೆಯಲೊತ್ತಲೆನುತಸು
ರಾರಿ ನೇಮಿಸಲಾಗಲೆನುತ ಕು
ಮಾರಕರು ಮೂಱಿಂಗವಾದರು ಕೃಷ್ಣನಾಜ್ಞೆಯಲಿ ೪೫

ಕಂಡು ಖಳನದವಳ ವೇಷವ
ಕೊಂಡು ಬೆರಸಿದನಱಿಯದಂತಿರೆ
ಚಂಡಬಲನಾ ವ್ಯೋಮಸಂಜ್ಞಿಕನಂದು ಚೋರರನು
ಕೊಂಡು ನಿಂದನು ಕಱುಗಳೆನಿಸುವ
ತಂಡದಾ ಗೋವಳರನೊಯ್ದು
ದ್ದಂಡ ಬಲನಿರಿಸಿದನು ಗಿರಿಗಹ್ವರದಲರ್ಭಕರ ೪೬

ಮತ್ತೆ ಪಾಲಕರೆಂಬ ಗೋಪರ
ಮೊತ್ತವನು ಕೊಂಡೊಯ್ದು ಬಿಟ್ಟಾ
ಗರ್ತದೊಳಗಾ ಚೋರರಾದರ್ಭಕರ ಕೊಂಡೊಯ್ದು
ಅತ್ತಲಾ ಗುಹೆಯೊಳಗೆ ಖಳನೊ
ಮ್ಮೊತ್ತವನು ಮಾಡಿದನು ಹರಿ ಬಲ
ರೊತ್ತರಿಸೆ ಸಲೆ ನೀಗಿದನು ಮಿಕ್ಕಾ ಕುಮಾರಕರ ೪೭

ಉಳಿದರದರೊಳು ನಾಲ್ವರೈವರು
ಖಳನ ಬಾರಿಗೆ ತಪ್ಪಿ ಮಗುಳೊ
ಯ್ದಿಳುಹಿದನು ದರಿಯೊಳಗೆ ಮಕ್ಕಳನೆಲ್ಲರನು ಮೇಲೆ
ಶಿಲೆಯಲವರನು ಮುಚ್ಚಿ ಬಂದನು
ಬಲಮುರಾಂತಕರೈದೆ ಮನದಲಿ
ಕೊಲೆಯನೇ ನಿಶ್ಚೈಸಿ ನಕ್ತಂಚರನು ರೋಷದಲಿ ೪೮

ಬರೆ ಖಳನ ಕಾಣುತ್ತ ಮುಂಗೈ
ಮುಱಿಯೆ ಹಿಳಿದನಸುರಾರಿ ತೋಱು
ಕಱುಗಳನು ಕಱುಗೋವಳರ ಕಳ್ಳರನು ತೋಱೆನುತ
ಅಱುಗುಲಿಯನೊತ್ತಿದಡೆ ಕಂಗಳು
ಹೊಱಗೆ ಹಾಯ್ದವು ಬಿಟ್ಟನಸುವನು
ಮೊಱೆಯಿಡುತ ಮಲಗಿದನು ಕಾಯವ ಕೆಡಹಿ ಧರಣಿಯಲಿ ೪೯

ಕೊಂದು ಖಳನನು ಬಳಿಕ ಬಾಲರ
ವೃಂದವನು ಬಿಲಮುಖದಲತಿ ಕೃಪೆ
ಯಿಂದ ನೆಗಹಿದನೆಲ್ಲರನು ಪಡಿಗಲ್ಲನೀಡಾಡಿ
ಬಂದನಾ ಗೋಕುಲಕೆ ಪರಮಾ
ನಂದ ಮೂರುತಿ ಗೋಪಗೋಪೀ
ವೃಂದನಯನೋತ್ಸವವ ನಿತ್ಯಾತುಮನು ವಿರಚಿಸಿದ ೫೦

ಮೂವತ್ತೆರಡನೆಯ ಸಂಧಿ ಮುಗಿಯಿತು.

# ಮೂವತ್ತಮೂರನೆಯ ಸಂಧಿ

ಪರಮ ವೈಷ್ಣವಮೌಳಿಮಣಿ ಸಂ
ಸಾರತಿಮಿರದ್ಯುಮಣಿ ಕಂಡನು
ದಾರಗುಣ ಮಣಿಕಾಂತನಕ್ರೂರಾಂಕನಚ್ಯುತನ

ಅರಸ ಕೇಳಕ್ರೂರನೈತಂ
ದಿರುಳು ದುಮ್ಮಾನದಲಿ ನಿಜಮಂ
ದಿರವ ಹೊಕ್ಕನು ಚಿಂತಿಸುತ ಕೃಷ್ಣಾಂಘ್ರಿಪಂಕಜವ
ದರುಶನಕೆ ತಾನಾವನೆಂತೋ
ದೊರಕುವುದು ಮೇಣಾವ ಕಲ್ಪಾಂ
ತರಕೆ ಬೆಳಗಹುದಲ್ಪಪುಣ್ಯಂಗೆಂದು ಬಿಸುಸುಯ್ದ ೧

ಇನಿತು ದಿನ ಬದುಕಿದಕೆ ಫಲವಾ
ಯ್ತೆನಗೆ ಕಂಡಪೆನೀಗಳೆಂತಿರೆ
ದನುಜಹರನ ಪದಾಬ್ಜಯುಗಳವ ನೆನೆವ ತನಗೇಕೆ
ವನಜಸಖನೆಂತಕಟ ವಿಘ್ನವ
ನೆನೆದನಿರುಳನು ಮಾಡಿ ಲೇಸಿಂ
ಗೆನಿತಪಾಯವೊ ಧರೆಯಲೆನುತುಮ್ಮಳಿಸಿದನು ಮಱುಗಿ ೨

ಆರು ಮುನಿದೇಗುವರು ವಿಘ್ನದ
ಭಾರಣೆಗಳೇಗುವುವು ದಿಟ ಲ
ಕ್ಷ್ಮೀರಮಣನೊಲವುಳ್ಳಡಾವುದು ಭೀತಿ ಭಕ್ತರಿಂಗೆ
ಹಾ ರಮಣ ಹಾ ಕೃಷ್ಣ ಹಾ ಲ
ಕ್ಷ್ಮೀರಮಣ ಹಾ ತೋಱೆ ನಿನ್ನ ಪ
ದಾರವಿಂದವನೇಕೆನುತ ಹಲುಬುತ್ತ ಕುಳಿರ್ದ ೩

ಇರುಳ ನೂಕಿದನಿಂತು ಕೃಷ್ಣನ
ಚರಣವನು ನೆನೆವುತ್ತ ನಿದ್ರಾ
ವಿರಹಿತೇಕ್ಷಣನಿರಲು ಹರಿಶರಣರ ಮನೋರಥವ
ಧರೆಯಲಡ್ಡೈಸುವರದಾರೆಂ
ದಿರದೆ ಸಾಱುವವೋಲು ಮೂಡಲು
ತರಣಿ ನೂಕಿದನುದಯಶೈಲಾಗ್ರದಲಿ ನಿಜರಥವ ೪

ಹರೆದುದಂಧತಮಿಸ್ರವಾ ಯದು
ವರನ ಮನದ ವಿಷಾದ ತಾಮಸ
ಹರೆವವೋಲು ಮನೋರಥೋದಯದೊಡನೆ ರವಿಯುದಯ
ಭರಿತವಾಯ್ತುದಯದಲಿ ತನ್ಮುಖ
ಸರಸಿರುಹದೊಡನರಳಿದವು ಸರ
ಸಿರುಹತತಿ ಬೆಳಗಾಗೆ ಮಂಗಳವಾಯ್ತು ಮೇದಿನಿಗೆ ೫

ಎದ್ದು ಸಂಧ್ಯಾವಂದನಾದಿಯ
ಶುದ್ಧಮತಿ ಮಾಡಿದನು ಬಳಿಕರಿ
ಮರ್ದನನು ಬಲವಂದು ಗೋಗುರುದೇವತಾದ್ವಿಜರ
ಹೊದ್ದಿದನು ನೃಪರಥವನೊಪ್ಪುವ
ಭದ್ರವಚನದ ಬಹಳ ಘೋಷದ
ಹೃದ್ಯಶಕುನವನಾಲಿಸುತ ಹೊಱವಂಟನಕ್ರೂರ ೬

ಏಱಿದನು ನೃಪರಥವನಂದ
ಕ್ರೂರನಂತಃಕರಣದಲಿ ಹರಿ
ಚಾರು ಚರಣಾಂಬುಜವ ನೆನೆವುತ್ತೊಗುವ ಸುಖಜಲದ
ಪೂರದಲಿ ಪೂರಾಯ ಪುಳಕದ
ಭಾರದಲಿ ಭಾಗವತ ಗುಣಗಣ
ಮೇರು ನಡೆದನು ರಥ ಕುಸಿಯಲಕ್ರೂರನೊಲವಿನಲಿ ೭

ಬರುತ ಭಾಗವತೋತ್ತಮನು ಮನ
ಕರಗಿ ಕೃಷ್ಣಪದಾಬ್ಜಭಕುತಿಯ
ಪರಮ ಸುಖದಲಿ ಮುಳುಗಿ ಪರವಶನಾಗಿ ಮಾರ್ಗದಲಿ
ಪರಮ ಪುರುಷನ ಚರಣ ಕಮಲದ
ದರುಶನದ ಬಹು ಪುಣ್ಯವೆಂತೋ
ದೊರಕಿದುದು ತನಗೆನುತ ಮತ್ತಿಂತೆಂದನಕ್ರೂರ ೮

ಆವ ದೈವವ ಭಜಿಸಿದೆನೊ ಮೇ
ಣಾವ ಮುಖದಲಿ ಯಜಿಸಿದೆನೊ ತಾ
ನಾವ ಜನ್ಮಾಂತರದ ಸುಕೃತವೊ ಫಲಿತವಾಯ್ತೆನಗೆ
ದೇವದೇವನನಖಿಳ ನಿಗಮ ಶಿ
ರೋವಿರಾಜಿತ ಪಾದಪೀಠನ
ನಾವ ಪರಿಯಲಿ ಕಾಂಬೆನೆಂತುಪಸನ್ನವಾಯ್ತೆಂದ ೯

ಆಸೆಯಲಿ ಕುಂದಿಲ್ಲ ಪುಣ್ಯದ
ರಾಸಿಯೆಂತುಟೊ ಕಾಂಬೆನೆಂಬಭಿ
ಲಾಷೆ ಘನವೀ ಮಾಂಸದೃಷ್ಟಿಗಳಿಂದ ಮುರಹರನ
ದಾಸರೊಲವೊಡಗೂಡದೀ ಬಹು
ದೋಷಿಗೆಂತಹುದಾದಡಾ ನಿ
ನ್ನೇಸು ಧನ್ಯನೊ ಹರಿಪದಾಂಬುಜದಾಸರೊಳಗೆಂದ ೧೦

ವೇದ ವಚನ ಶ್ರವಣ ಶೂದ್ರಂ
ಗಾದಡೇನಹುದಾ ಮುಕುಂದನ
ಪಾದಕಮಲಪರಾಗ ದರುಶನವಧಿಕ ಪಾತಕಿಗೆ
ಆದಡದನಾರಱಿವವರು ಭಾ
ಗ್ಯೋದಯದ ಬೆಳೆಸಿರಿಯನೀ ಮಾ
ಯೋದಧಿಯನುತ್ತರಿಸನೇ ನಿಮಿಷಾರ್ಧದೊಳಗೆಂದ ೧೧

ಕೆಟ್ಟುದಿಂದಿನಲೆನ್ನದುರಿತದ
ಬೆಟ್ಟ ಬೆಳೆದುದು ಜನ್ಮಫಲ ಕೈ
ಮುಟ್ಟಿದುದು ಕಾಮಿತ ಮನೋರಥಸಿದ್ಧಿಗಳು ತನಗೆ
ದೃಷ್ಟಿಗೋಚರನಾಗಿ ಕಂಡೊಡ
ಲಿಟ್ಟ ಯೋಗಿಧ್ಯೇಯ ಪದಯುಗ
ವಿಷ್ಟರಕೆ ಪೊಡವಂಟಪೆನು ತಾನೆನುತ ನಡೆತಂದ ೧೨

ಅಜಭವಾದ್ಯಮರೇಶ್ವರರು ನೆಱೆ
ಭಜಿಸಿ ದಣಿಯರದಾರ ಚರಣಾಂ
ಬುಜವ ಕೈ ಮುಂಡಾಡಿ ದಣಿಯಳು ಗಡ ಮಹಾಲಕ್ಷ್ಮಿ
ಯಜಿಸಿ ಕಾಣರು ಕರ್ಮಿಗಳು ಸಲೆ
ಭಜಿಸಿ ಕಾಣರು ಸಾತ್ವಿಕರು ಸುರ
ಸುಜನಸೇವ್ಯನ ದುರವಗಾಹ್ಯನ ಕಾಂಬೆನೆಂತೆಂದ ೧೩

ಅತ್ತಲಜ ಭವಸುರ ಮುನೀಂದ್ರರ
ಚಿತ್ತದಲಿ ಸಂಚರಿಸುವಂಘ್ರಿಗ
ಳಿತ್ತಲಿತ್ತಲು ಗೋವುಗಳ ಬಳಿಸಂದು ವನದೊಳಗೆ
ಮತ್ತೆ ಚರಿಸುವುದೆತ್ತ ಲಕ್ಷ್ಮೀ
ವೃತ್ತ ಕುಚಕುಂಕುಮದಲೊಪ್ಪುವು
ದೆತ್ತ ಗೋಪೀಸ್ತನಘಸೃಣ ಪಂಕಾಂಕಿತವಿದೆತ್ತ ೧೪

ಲೋಲ ನಯನಾಂಬುಜದ ಚಾರು ಕ
ಪೋಲನಾಸಾ ಪುಟದ ಮೆಱೆವ ಗು
ಡಾಳಕದ ಸಸ್ಮಿತ ಕಟಾಕ್ಷಾರುಣನಿರೀಕ್ಷಣದ
ಶ್ರೀಲಲಾಮ ಮುಖಾಬ್ಜ ಲಕ್ಷ್ಮಿಯ
ನಾಲಿಗಳಲನುಭವಿಸಿದಪೆನೀ
ಹೇಳುತಿದೆಲಾ ತನ್ನ ಬಲದಲಿ ಖಗಮೃಗವ್ರಾತ ೧೫

ಧರೆಯ ಭಾರವನಿಳುಹಲೆಂದವ
ತರಿಸಿ ಸಾಕ್ಷಾದ್ವಿಷ್ಣು ನರರೊಳು
ನರನೆನಿಸಿ ನಿಜಲೀಲೆಯಲ್ಲಿರಲಿಂದು ಪರಿಯಂತ
ಬಱಿದೆ ಹೋದವು ದಿವಸ ಪಾಪಾ
ಚರಿತನಾದೆನು ವಿಫಲವಾಯ್ತೆ
ನ್ನಿರವು ಮೇಣೀಜನ್ಮವೀ ನಿಜಬುದ್ಧಿಗುಣವೆಂದ ೧೬

ಹುಟ್ಟಿ ಫಲವೇನೀ ಮನುಷ್ಯರು
ನೆಟ್ಟನಾರಾಧಿಸದೆ ಕಾಣದೆ
ದೃಷ್ಟಿಗೋಚರವಾಗಿ ಸಾಕ್ಷಾದ್ವಿಷ್ಣುವೈಷ್ಣವರ
ಬೆಟ್ಟದಲಿ ಗಿಡುಬಳ್ಳಿ ಮರಗಳು
ಹುಟ್ಟಿ ಮಡಿವಂದದಲಿ ಸುಡುಸುಡು
ಕಷ್ಟ ಜೀವರ ಜೀವನವನಿದನೆಂದನಕ್ರೂರ ೧೭

ಕೇಳವಾವನ ಕಿವಿಗಳಾ ಶ್ರೀ
ಲೋಲ ಚಾರಿತ್ರವನು ದುರಿತ
ವ್ಯಾಳ ದುರ್ಧರ ದುಃಖವಿಷವ ವಿಷಾಪನೋದಯವ
ಹೇಳದಾ ಜಗದೇಕನಾಥನ
ಲೀಲೆಯನು ನಾಲಗೆ ನಿರರ್ಥದ
ಬಾಳಿಕೆಯ ಬಾಹಿರರು ಜೀವನ್ಮೃತಕರವರೆಂದ ೧೮

ಓದಿದಡೆ ಫಲವೇನು ವೇದವ
ನಾದರಿಸಿ ಫಲವೇನು ಶಾಸ್ತ್ರವ
ನೋದಿದಡೆ ಫಲವಾವುದಖಿಳ ಪುರಾಣ ರಾಶಿಗಳ
ಆದಿ ಮಧ್ಯಾಂತಂಗಳಿಲ್ಲದ
ವೇದವೇದ್ಯನ ನೋಡದಿರ್ದಡೆ
ಬೂದಿಯಲಿ ಬೇಳಿದ ಹವಿಸ್ಸುಗಳೆಂದನಕ್ರೂರ ೧೯

ಆವನೊಬ್ಬನ ಪುಣ್ಯ ಚರಿತಕ
ಥಾವಿಮಿಶ್ರೋಕ್ತಿಗಳು ಸಜ್ಜನ
ಜೀವನಂಗಳು ಪಾವನಂಗಳು ಬಹಳ ಪಾತಕದ
ಭಾವಿಸಲು ತದ್ರಹಿತಸೂಕ್ತಿಗ
ಳಾವವಾಗಲಿ ಮೆಱೆಯಲಱಿಯವು
ಜೀವವಿಲ್ಲದೊಡಲ್ಗಳೊಪ್ಪಂಬಡೆಯವೆಂತಂತೆ ೨೦

ಆ ಸಕಲ ಲೋಕೈಕನಾಥನೆ
ವಾಸುದೇವಾಖ್ಯೆಯಲಿ ಗೋಕುಲ
ವಾಸದಲಿ ಜನಿಸಿದವೊಲಾವಿಷ್ಕರಿಸಿ ನಿಜತನುವ
ಈ ಸಕಲ ಲೋಕೌಘ ಬಂಧವಿ
ನಾಶನಾಮಳಕೀರ್ತಿಯನು ಜಗ
ದೀಶ ವಿಸ್ತರಿಸುತ್ತಲಿಹನಿಂತೀ ಧರಿತ್ರಿಯಲಿ ೨೧

ಪಾಡುತಿದೆ ಜಗವೈದೆ ನಭದಲಿ
ಕೂಡೆ ವೈಮಾನಿಕರು ದೇವಿಯ
ರಾಡುತಿದೆ ಗಂಧರ್ವಕಿನ್ನರರೈದೆ ಸಂಸ್ತುತಿಯ
ಮಾಡುತಿದೆಲಾ ಕೃಷ್ಣನಾರೆಂ
ದಾಡುವರು ಪಾಪಿಗಳು ಲೋಕದ
ಕೇಡನದನಿನ್ನೇನ ಹೇಳುವೆನೆಂದು ಚಿಂತಿಸಿದ ೨೨

ಇಂದಿದೇ ಕಂಡಪೆನು ಕಾಮನ
ತಂದೆಯನು ಕಮಲಜಭವಾದ್ಯಭಿ
ವಂದ್ಯನನು ಕಮನೀಯಮೂರ್ತಿಯನತುಳ ಕೀರ್ತಿಯನು
ಕುಂದದಪಸವ್ಯಾಕ್ಷಿ ಬಾಹು
ಸ್ಪಂದನಂಗಳು ಹೇಳುತಿವೆ ತನ
ಗೆಂದು ಹರುಷಾಮೃತ ಸಮುದ್ರದಲದ್ದನಡಿಗಡಿಗೆ ೨೩

ಬಯಸುವಮರೇಶ್ವರನನೊಲ್ಲದೆ
ಬಯಸಿದಳು ಗಡ ಲಕ್ಷ್ಮಿ ಯೀತನ
ದಯವೆ ಸುಸ್ಥಿರವೆಂದು ಸುಕರವಿದೆಂದುರಸ್ಥಳವ
ಬಯಸಿದಳು ಗಡ ಮತ್ತೆ ತುಳಸೀ
ಪ್ರಿಯವೆನಿಪ ಚರಣಾರವಿಂದಾ
ಲಯವನೆನಲಿನ್ನಾವ ಸೊಬಗಿನ ಕಣಿಯೊ ತಾನೆಂದ ೨೪

ಚರಣಕಮಲದಲೆಱಗಿದೆನ್ನನು
ಕರುಣದಿಂದೀಕ್ಷಿಸುತ ತನ್ನಯ
ಶಿರದಲಭಯಪ್ರದವೆನಿಪ ನಿಜಹಸ್ತಪಂಕಜವ
ಇರಿಸಬೇಕೆನ್ನಯ ಮನೋರಥ
ದೊರಕದಿರದೀ ಹೋದಿರುಳು ಶುಭ
ದರುಶನಂಗಳು ತೋಱಿದವು ಬೆಳಗಾಗುತಿರಲೆಂದ ೨೫

ಎಲ್ಲ ಪೂಜೆಯನಿತ್ತುವಾಣೀ
ವಲ್ಲಭನು ಹದಿನಾಲ್ಕು ಲೋಕಕೆ
ವಲ್ಲಭನು ತಾನಾದನಾ ಬಲಿ ಭೂಮಿದಾನವನು
ಎಲ್ಲಿಗರ್ಪಿಸಿ ಮೂಱು ಲೋಕಕೆ
ಬಲ್ಲಿದನು ತಾನಾದನಾಕರ
ಪಲ್ಲವವನೀ ಶಿರದಲಿರಿಸಲು ಧನ್ಯ ನಾನೆಂದ ೨೬

ಬಂದನಿವನಾ ಕಂಸನಾಜ್ಞೆಯ
ಲಿಂದು ತನ್ನಲ್ಲಿಗೆ ತದಾಶ್ರಯ
ನೆಂದು ತತ್ಪರನೆಂದು ತತ್ಕಾರ್ಯೈಕಪರನೆಂದು
ಮಂದಭಾಗ್ಯನನಕಟ ದೇವ ಮು
ಕುಂದನೆನ್ನನು ಬಗೆವನೋ ಗೋ
ವಿಂದನದು ಹುಸಿ ಚೇತನಾತ್ಮಕನಱಿಯನೇ ಎಂದ ೨೭

ಬಿದ್ದು ಪದದಲಿ ಕೈ ಮುಗಿದು ನಿಂ
ದಿರ್ದ ತನ್ನನು ನೋಡಿ ನಿಜಕರು
ಣಾರ್ದ್ರಲೋಚನದಿಂದ ಸಸ್ಮಿತ ಮಧುರ ಸೂಕ್ತಿಯಲಿ
ಭದ್ರವನು ಬೆಸಗೊಂಬನಕ್ಕೆ
ನ್ನದ್ವಯಾನಂದಾಂಬುನಿಧಿ ತಾ
ಹೊದ್ದಿದಕೆ ಫಲವಿಂದೆ ಕೈಗೂಡುವುದು ತನಗೆಂದ ೨೮

ಹಿಂಗದೆನ್ನವನೆಂದು ಕರುಣಾ
ಪಾಂಗದಲಿ ನಡೆನೋಡಿ ತೆಗೆದಾ
ಲಿಂಗಿಸಲೆ ಬೇಕೆನ್ನನೆರಡು ಭುಜಂಗಳಿಂದೊಲಿದು
ಅಂಗವಿದು ಧರೆ ಮೇಲೆ ಜಂಗಮ
ಗಂಗೆಯೆನಿಸದೆ ನಿಜ ಮನೋರಥ
ಹಿಂಗದೇ ಬಳಿಕೆನ್ನವೊಲು ಕೃತಾರ್ಥರಾರೆಂದ ೨೯

ಬಂದು ನಿಜ ಚರಣಾರವಿಂದ
ದ್ವಂದ್ವದಲಿ ವೈಯಿಕ್ಕಿ ತನ್ನಯ
ಮುಂದೆ ನಿಂದಿದ್ದೆನ್ನನನುಪಮ ಮಹಿಮನೀಕ್ಷಿಸುತ
ತಂದೆ ಬಂದೈ ಮಗನೆ ಸುಖವೈ
ಯೆಂದು ತನ್ನನು ನುಡಿಸಿದರೆ ತ
ನ್ನಿಂದಧಿಕರಾರೋ ಸನಾಥರು ಭುವನದೊಳಗೆಂದ ೩೦

ಅಲ್ಲದಾ ಸಾಕ್ಷಾತು ಲಕ್ಷ್ಮೀ
ವಲ್ಲಭನ ಕಾರುಣ್ಯದೃಷ್ಟಿಗೆ
ಸಲ್ಲದಾನರರಂದದಲಿ ಫಲವೇನು ಮರನಂತೆ
ಎಲ್ಲಿ ಹುಟ್ಟುವುದೆಲ್ಲಿ ಮಡಿವುದು
ಬಲ್ಲರಾರಾರೈದು ಸಲಹುವ
ರಿಲ್ಲದರ್ಭಕ ಜನ್ಮದಂತಾರಿಂಗೆ ಹಿತವೆಂದ ೩೧

ಎನ್ನವರು ಪರರೆಂದು ಸಂಪ್ರತಿ
ಪನ್ನ ಭೇದಭ್ರಾಂತಿಯಲಿ ಕರು
ಣಾರ್ಣವನು ದಿಟ ಕಾಣಲಱಿವನು ಜೀವರಾಶಿಗಳ
ಅನ್ಯರಾತ್ಮದ್ವೇಷಿಗಳು ನೆಱೆ
ತನ್ನವರು ತದಭಿಜ್ಞರೆಂದುಪ
ಸನ್ನಹಿತವಿಗ್ರಹನು ಕಲ್ಪದ್ರುಮದವೋಲೆಂದ ೩೨

ಶ್ರೀಮನೋರಮನಗ್ರಜನು ಬಲ
ರಾಮನೆನ್ನನು ನಿಜ ಪದದ್ವಯ
ತಾಮರಸಸನ್ನುತನನಪ್ಪುತ್ತೆರಡು ತೋಳ್ಗಳಲಿ
ಕ್ಷೇಮವನು ಬೆಸಗೊಂಡು ತನ್ನಯ
ಧಾಮವನು ಹೊಕ್ಕಂತೆ ಸಹಜ
ಪ್ರೇಮದಿಂಮುಚಿತವನು ಮಾಳ್ಪ ಮನೋನುರಾಗದಲಿ ೩೩

ಹರಿಯವರ ಮನ್ನಿಸದ ಬಾಳಿಕೆ
ಹರಿಕಥೆಯ ಹೇಳದನ ಹೇಳಿಕೆ
ಹರಿಗೆ ಹರಿಭಕ್ತರಿಗೆ ಪೊಡಮಡದವನ ಹಿರಿಯತನ
ಹರಿಯನಱಿಯದ ನರನಭಿಜ್ಞತೆ
ಹರಿಸಮರ್ಪಿತವಲ್ಲದರ್ಪಿತ
ನರಕಭಾಜನವೆನುತೆನುತ ಚಿಂತಿಸುತ ನಡೆತಂದ ೩೪

ಇಂತೆನುತ ಮನದೊಳಗೆ ಲಕ್ಷ್ಮೀ
ಕಾಂತನನು ನೆನೆವುತ್ತ ಮಾರ್ಗ
ಶ್ರಾಂತಿಯನು ನೆಱೆ ಮಱೆದು ತದ್ಗತ ಭಾವಭಕುತಿಯಲಿ
ಸಂತಸದಲೆಯಿತರಲು ಗೋಕುಲ
ದಂತಿಕಕೆ ರವಿ ರಥವನಪರದಿ
ಶಾಂತರಕೆ ನೂಕಿದನು ಬರೆಬರೆ ಸಂಜೆ ರಂಜಿಸಿತು ೩೫

ಬರುತ ಗೋಕುಲದಂತಿಕದಲಾ
ಪರಮಪುರುಷನ ಪಾದಕಮಲದ
ಧರೆಗೆ ಭೂಷಣವಾದ ಹಜ್ಜೆಗಳನು ವನಾಂತದಲಿ
ಇರಲು ಕಂಡನಶೇಷ ವಿಬುಧೇ
ಶ್ವರರ ಮಣಿಮುಕುಟ ಪ್ರಭಾ ಕೇ
ಸರಗಳಲಿ ಶೋಭಿಸುತಲಿರಲಾ ಮುಂದೆ ಮಾರ್ಗದಲಿ ೩೬

ಕಂಡೆನೆನ್ನಯ ಜನ್ಮ ಫಲವನು
ಕಂಡೆನೆನ್ನ ಮನೋರಥದ ಹದ
ಗೊಂಡ ಹೊಂಬೆಳಗೈಯ ಹೊಂಬೆಳಸಿನ ಮಹೋದಯವ
ಕಂಡೆನೆನ್ನ ಸ್ವಾಮಿ ಪದಯುಗ
ಪುಂಡರೀಕದ ಹಜ್ಜೆಗಳನಾ
ಖಂಡಲಾದಿಸುರೌಘ ಸೇವಾಸಹ್ಯ ರೇಣುಗಳ ೩೭

ಇವೆಯಲಾ ವಜ್ರಾಂಕುಶ ಧ್ವಜ
ಯವಲತೆಗಳಿಂದೆಸೆವ ರೇಖಾ
ನಿವಹ ಲಕ್ಷ್ಮೀ ಕುಚಕುಧರ ಕುಂಕುಮ ಪರಾಗಚಯ
ಇವೆಯಲಾ ಮುನಿಹೃದಯ ಪಂಕಜ
ಭವ ತಿಮಿರದ್ಯುಮಣಿಗಳು ತನ
ಗಿವರ ದರುಶನವಾಯ್ತು ಕಂಡೆನು ಕಂಡೆನಚ್ಯುತನ ೩೮

ಸಾಕು ತನಗಿಹಪರವಿದೇ ಲೋ
ಕೈಕ ಮಂಗಳವೆನಿಪ ಕೃಷ್ಣಪ
ದೈಕ ಪದ್ಮ ಪರಾಗ ದರುಶನವೇ ಮಹೋನ್ನತಿಕೆ
ಶ್ರೀಕರವಲಾ ಶ್ರೀಗೆ ತನ್ನಾ
ಲೋಕನಕೆ ದೊರಕೊಂಡುದೆಂದೆನು
ತಾಕುಲಾಂತಃಕರಣನೋಲಾಡಿದನು ಹರುಷದಲಿ ೩೯

ಚಿಗಿದು ರಥದಿಂದಿಳೆಗೆ ಬಿದ್ದನು
ಬಿಗಿದ ಗಳದಲಿ ಹರುಷ ಬಿಂದುಗ
ಳೊಗಲು ಕಂಗಳು ಮುಚ್ಚಿ ಕೃಷ್ಣ ಕೃಪಾಳು ಶರಣೆನುತ
ಬಗೆದಣಿಯೆ ಹೊಗಳಿದನು ಕೈಯಲಿ
ತೆಗೆದು ಮುಂಡಾಡಿದನು ಪದರೇ
ಣುಗಳಲೊಡಲನು ಹೂಳಿ ಹೀಹಾಳಿಸಿದನಡಿಗಡಿಗೆ ೪೦

ಸಂತವಿಸಿದವು ಪುಳಕವೆನುತೇ
ಕಾಂತಭಕ್ತರ ದೇವ ಲಕ್ಷ್ಮೀ
ಕಾಂತನಂಘ್ರಿಪರಾಗದಲಿ ಹೊರಳಿದನು ತಾಯುರದ
ಅಂತರದಲೋಲಾಡುವರ್ಭಕ
ನಂತೆ ಮೈಮಱೆದಧಿಕ ಹರುಷಾ
ಕ್ರಾಂತಮತಿ ಕೇಳಿದನು ಗೋಕುಲದೆಸೆವ ಕಳವಳವ ೪೧

ಏಱೀ ರಥವನು ಹರುಷದಲಿ ಹೊರೆ
ಯೇಱೀ ಫಲದಾಸೆಯಲಿ ಪುಷ್ಪವ
ನೂಱುವಂತಿರೆ ಕೃಷ್ಣ ಚರಣಾಂಬುಜದಿದೃಕ್ಷೆಯಲಿ
ವಿಾಱೀ ನಡೆದನು ಹಜ್ಜೆಗಳ ನಡೆ
ಯಾಱದನುರಾಗದಲಿ ಗೋಪರ
ತಾರುಥಟ್ಟಿನ ಸಿರಿಯಲೆಸೆವಾ ನಂದಗೋಕುಲಕೆ ೪೨

ಮುಂದೆ ಕಂಡನು ಬರುತ ಗೋಪರ
ವೃಂದದಲಿ ಗೋವುಗಳ ಕಱುಗಳ
ಸಂದಣಿಯ ಸಂಭ್ರಮದಲೆಸೆವಾ ನಂದಗೋಕುಲವ
ಇಂದುಮುಖಿಯರ ಕೃಷ್ಣನಿರುವಾ
ನಂದಭವನ ಶ್ರೇಣಿಗಳನೊಲ
ವಿಂದ ನೋಡುತ ಕೈಮುಗಿವುತ್ತೈತಂದನೊಲವಿನಲಿ ೪೩

ದೂರದಿಂದೈತರುತ ಕಂಡನು
ದಾರ ತೇಜೋನಿಧಿಗಳನು ಸುರ
ಧೀರಸೇವಿತಚರಣರನು ಸುಜನೈಕಶರಣರನು
ಚಾರುತರಸರ್ವಾಂಗಲಕ್ಷ್ಮೀ
ಕ್ಷೀರವಾರಿಧಿಗಳನು ಬಲದೈ
ತ್ಯಾರಿಗಳನೊಪ್ಪಿರಲು ಗೋ ಗೋಪಾಲ ಮಧ್ಯದಲಿ ೪೪

ನೀಲ ಕೈಲಾಸಾದ್ರಿಗಳ ವನ
ಕೇಳಿಯೋ ದಿಕ್ಕರಿಗಳರ್ಭಕ
ಲೀಲೆಯೋ ಸೌಂದರ್ಯ ಗುಣಸಾಗರದ ಸಂಭ್ರಮವೊ
ಸ್ಥೂಲ ಮರಕತ ಶುಭ್ರರತ್ನದ
ಸಾಲ ಭಂಜಿಕೆಗಳೊ ಬಲ ಶ್ರೀ
ಲೋಲರೋಯೆನಲೆಸೆವ ಮಂಗಳಮೂರ್ತಿಗಳ ಕಂಡ ೪೫

ಜೀಯ ಕೊಡು ನೇಮುವನೆನುತ ಸುರ
ರಾಯಸಿರಲೊಂದೆಸೆಗೆ ವಂದಿನಿ
ಕಾಯ ಕೈವಾರಿಸಲು ನಿಜಕೀರ್ತಿಗಳನೊಂದೆಸೆಗೆ
ಕಾಯ ಕಾಂತಿಯಲಿಳೆಗೆ ತಿಮಿರಾ
ಪಾಯವನು ಮಾಡುತ್ತ ಬಲ ನಾ
ರಾಯಣರು ನಿಜಲೀಲೆಯಿಂದಿರೆ ಕಂಡನಕ್ರೂರ ೪೬

ಒಮ್ಮೆ ತತ್ವದ ಮುನಿಗಳಂತಿರ
ಲೊಮ್ಮೆ ನಾನಾ ವಿಧದಲಂತಿರ
ಲೊಮ್ಮೆ ಭುಜ ನಾಲ್ಕಱಲಿ ಬಹಳೈಶ್ವರ್ಯ ಗುಣಗಳಲಿ
ಒಮ್ಮೆ ಸಚ್ಚಿತ್ಪೂರ್ಣರಾಗದ
ಲೊಮ್ಮೆ ಸಹಜಾರ್ಭಕರವೋಲಿರ
ಲೊಮ್ಮೆ ಬಲನಾರಾಯಣರನಿರೆ ಕಂಡನಕ್ರೂರ ೪೭

ಪೊಂಗೊಳಲ ಬಾಱಿಸುತ ತುಱುಗಳ
ಜಂಗುಳಿಯನೀಕ್ಷಿಸುತ ಗೋಪರ
ನಂಗಡದ ಮೇಳಾಪದಲಿ ಮೂಜಗವ ಮೋಹಿಸುತ
ಅಂಗನೆಯರಾ ಲೋಲನೇತ್ರಾ
ಲಿಂಗನಾ ಸೌಖ್ಯವನು ಕರುಣಾ
ಪಾಂಗದಲಿ ಕೈಗೊಳುತ ಸಿಂದಿರೆ ಕಂಡನಕ್ರೂರ ೪೮

ನೀಲ ಪೀತಾಂಬರಗಳಲಿ ನಿಡಿ
ದೋಳುಗಳ ಕಂಕಣಗಳಲಿ ವನ
ಮಾಲೆಗಳ ಸರ್ವಾಂಗಭೂಷಿತ ಭೂಷಣಂಗಳಲಿ
ಕಾಲ ಕಡಗದ ಮುದ್ರಿಕೆಯ ಗೋ
ಪಾಲರಿಬ್ಬರನೀಕ್ಷಿಸುತ ಕ
ಣ್ಣಾಲಿಗಳು ನೀರೇಱಿದವು ದೂರದಲಿ ಯದುವರನ ೪೯

ಧರೆಗೆ ಭೂಷಣವಾದ ಚರಣಾಂ
ಬುರುಹ ಶುಭರೇಖೆಗಳ ಸುರಮುನಿ
ವರರ ಮಣಿಮುಸ್ತಕದಲೊಪ್ಪುವ ಪಾದರೇಣುಗಳ
ಹರಿಬಲರನೀಕ್ಷಿಸುತ ಕಂಗಳು
ಕರಗಿದವು ಕರಪುಟವ ತನ್ನಯ
ಶಿರದಲಿಟ್ಟನು ಜಯ ನಮೋ ನಿತ್ಯಾತ್ಮ ಜಯ ಯೆನುತ ೫೦

ಮೂವತ್ತಮೂರನೆಯ ಸಂಧಿ ಮುಗಿಯಿತು.

## ಮೂವತ್ತನಾಲ್ಕನೆಯ ಸಂಧಿ

ಗಾಂದಿನೀಸುತನೊಡನೆ ದೇವ ಮು
ಕುಂದನಾ ಗೋ ಗೋಪ ಗೋಪೀ
ವೃಂದವನು ಸಂತಯಿಸಿ ಗೋಕುಲದಿಂದ ಹೊಱವಂಟ

ಕಂಡು ರಥದಿಂದೊಡಲನವನಿಗೆ
ದಿಂಡುಗೆಡಹಿದನಚ್ಯುತನ ಪದ
ಪುಂಡರೀಕವನೀಕ್ಷಿಸುತ ಜಯ ಜಯತು ಜಯಯೆನುತ
ದಂಡದಂತಿರೆ ಪೊಡಮಡುತ ಕರ
ಪುಂಡರೀಕದ ಮುಕುಳವನು ಸಲೆ
ಮಂಡೆಯಲಿ ಧರಿಸುತ್ತ ಭಕ್ತರ ದೇವನೈತಂದ ೧

ಮುಳುಗಿದನು ಕಾಣುತ್ತ ಹರಿಪದ
ಜಲರುಹವನಾನಂದಬಾಷ್ಪದ
ಜಲಧಿಯಲಿ ಬೆಂಡೆದ್ದ ಕಂಗಳ ಬಹಳಸಂತಸದ
ಪುಳಕನಿಕರದ ಭರದಲುಬ್ಬುವ
ಕಳೆವರದ ಕೃಷ್ಣಾಂಘ್ರಿ ಭಕುತಿಯ
ಸಲುಗೆವಂತರ ದೇವ ನೈಯಿಕ್ಕುತ್ತ ನಡೆತಂದ ೨

ಮಱೆದು ತನುವನು ತತ್ಪದಾಬ್ಜದ
ಲೆಱಗಿಸಿದ ನಿಜಚಿತ್ತವೃತ್ತಿಯ
ಲಱಿಯನಿದಿರುದೋಱದ ಭಾವಭಕುತಿಯಲಿ
ಅಱಿವಿನಂತವ ಕಳಿವವೊಲು ನಿಂ
ದುಱುವಯೋಗಿಗಳಂತೆ ಹರಿಯನು
ಹೊಱಗೊಳಗೆ ಕಾಣುತ್ತ ತನ್ಮಯನಾದನಕ್ರೂರ ೩

ಕಂಡು ಪರವಶನಾಗಿ ಪದಯುಗ
ಪುಂಡರೀಕದ ಮೇಲೆ ತನುವನು
ದಿಂಡುಗೆಡಹಿದನೊಪ್ಪಿಸುವವೋಲೊಡಲನಸುಸಹಿತ
ದಂಡದಂತಿರೆ ನೋಡಿ ಭಕುತನ
ಮಂಡೆಯಲಿ ಕೈಯಿಟ್ಟು ನಿಜ ದೋ
ರ್ದಂಡದಲಿ ನೆಗಹುತ್ತ ತಕ್ಕವಿಸಿದನು ಕರುಣದಲಿ ೪

ನಗುತ ಕಾರುಣ್ಯದಲಿ ಕರುಣಾ
ಳುಗಳ ದೇವನು ತನ್ನ ಸಿರಿಪದ
ಯುಗಳದಲಿ ಮುಗುಳೆಱಗಿದಕ್ರೂರನನು ಕೈದಣಿಯೆ
ತೆಗೆದು ತಕ್ಕಯಿಸಿದನು ಮಿಗೆ ಮೈ
ದೆಗೆಯಲೀಯದೆ ಬಿಗಿದ ಪುಳಕಾ
ಳಿಗಳ ಸುಪ್ರೇಮಾರ್ದ್ರ ಹೃದಯೇಕ್ಷಣದಲಡಿಗಡಿಗೆ ೫

ಶುದ್ಧ ತತ್ವಂಪದಯುಗೈಕ್ಯದ
ಸಿದ್ಧಿಯೋ ಹರಿಭಕ್ತರಿಬ್ಬರ
ಬದ್ಧ ಗಾಢಾಲಿಂಗನದ ಸಂಪನ್ನ ಸಂಸ್ಥಿತಿಯೊ
ಶ್ರದ್ಧೆಯೆಂತುಟೊ ಸಾತ್ವಿಕತ್ವದ
ಬುದ್ಧಿಯೆಂತುಟೊ ನಿಜ ಮನೋರಥ
ಸಿದ್ಧನಾದನು ಶತಗುಣೋತ್ತರವಾಗಲಕ್ರೂರ ೬

ಕೇಳಿ ದಣಿಯವು ಕಿವಿಗಳಾ ಶ್ರೀ
ಲೋಲನಮೃತೋಕ್ತಿಯನು ಸವಿಸವಿ
ದಾಲಿಗಳು ಸಾಕೆನ್ನ ವೊಂದೊಂದಂಗಸೌಷ್ಠವನ
ತೋಳುಗಳು ತಕ್ಕಯಿಸಿ ದಣಿದವು
ನಾಲಿಗೆಯು ಸ್ತುತಿಮಾಡಿ ದಣಿಯದು
ಹೇಳಲರಿದಾಯ್ತೆಂತುಟೋ ಹರಿಗುಣದ ಮಹಿಮೆಗಳ ೭

ಹರಿಗೆ ಹರಿಯೊಡನಾಡುವವರಿಗೆ
ಹರಿಸಖಪ್ರಿಯ ಬಂಧುವರ್ಗಕೆ
ಹರಿಚರಿತ್ರವ ಪಾಡುವಾ ಗೋಪೀ ಜನಂಗಳಿಗೆ
ಹರಿಯ ಭವನಂಗಳಿಗೆ ಹರಿಸಂ
ಚರಿಸುವಾ ಸ್ಥಳಗಳಿಗೆ ಗೋವ್ಗಳಿ
ಗಿರದೆ ಮೈಯಿಕ್ಕಿರ್ದನಕ್ರೂರಾಂಕನಿದಿರಿನಲಿ ೮

ಅಡಿಗೆಱಗಲಕ್ರೂರನನು ತಲೆ
ದಡವಿ ತಕ್ಕಯಿಸುತ್ತ ಹಲಧರ
ನಡಿಗಡಿಗೆ ಸುಪ್ರೇಮರಸ ಸಂಕೀರ್ಣಭಾವದಲಿ
ನುಡಿಸಿ ಕೇಳುತ ಕುಶಲವನು ಕುಲ
ಗೆಡುಕ ಕಂಸನ ನುಡಿಗಳಿಗೆ ಕಿವಿ
ಗೊಡುತ ನಗುತಕ್ರೂರಸಹಿತೈತಂದನಾಲಯಕೆ ೯

ನಲವು ಮಿಗಲಾತಿಥ್ಯ ಸತ್ಕ್ರಿಯೆ
ಗಳಲಿ ಮನ್ನಿಸಿ ಕುಳ್ಳಿರಿಸಿ ಹರಿ
ಬಲರು ನಿಜಬಾಂಧವಗೆ ಮಧುಪರ್ಕಾದಿ ಪೂಜೆಗಳ
ಒಲಿದು ಮಾಡಿದರಂಘ್ರಿಯುಗಳವ
ತೊಳೆದು ಮಾರ್ಗಶ್ರಮಗಳನು ನೆಱೆ
ಕಳೆದು ಕೈಗೂಡಿಸಿದರಕ್ರೂರನ ಮನೋರಥವ ೧೦

ಬಳಿಕ ಬಹುವಿಧದನ್ನ ಪಾನಂ
ಗಳಲಿ ಸಂತರ್ಪಿಸಿದರಾ ಯದು
ಕುಲಕುಶೇಶಯಭಾನುಗಳು ಭಾಗವತ ಮುಖ್ಯನನು
ಅಲಘುಭುಜಬಲರುಂಡು ಕುಳ್ಳಿ
ರ್ದೆಳನಗೆಯ ಸಸ್ನೇಹವಚನಂ
ಗಳಲಿ ಸಂಭಾಷಣೆಯ ಮಾಡಿಹರೊಡನೆ ಯದುವರನ ೧೧

ತಂದೆ ಹೇಳೈ ನೀನಿದೇನೈ
ಬಂದೆ ಬೇಸರವಿಲ್ಲಲೇ ನಿ
ನ್ನೊಂದು ಬಾಂಧವ ವರ್ಗದಲಿ ಪಿತೃ ಮಾತೃ ಸಹಜರಲಿ
ಇಂದು ನೀ ಬಹುದೆಮ್ಮ ಭಾಗ್ಯದ
ಕಂದೆಱವೆಯಲ್ಲೈ ವಿಚಾರಿಸ
ಲಿಂದಿನೀ ದಿನ ಸುದಿನವಾಯ್ತೆನಲೆಂದನಕ್ರೂರ ೧೨

ಬೇಸರವನೇನೆಂಬೆ ನಾ ಕಂ
ಸಾಸುರನ ದೆಸೆಯಿಂದ ನಗರಾ
ವಾಸವನು ನೆಱೆತೊಱೆದು ಯಾದವರೈದೆ ದೆಸೆದೆಸೆಗೆ
ಸೂಸಿದರು ತಂತಮ್ಮ ಜೀವವಿ
ನಾಶ ಭಯದಲಿ ವಿಷಯಸುಖದಭಿ
ಲಾಷೆಗಳನೀಡಾಡಿ ಬಹಳ ವಿದೇಶಗತರಾಗಿ ೧೩

ನೀವು ಸಾಕ್ಷಾದ್ವಿಷ್ಣುಗಳು ವಸು
ದೇವ ಮುಖ್ಯ ಯದೂತ್ತಮರು ದಿಟ
ದೇವನಿಕರವು ಗಡ ಜಗದ್ಧಿತಕಾರಿಗಳು ಜನಿಸಿ
ದೇವಕಾರ್ಯವ ಮಾಡಲೋಸುಗ
ದೇವಕೀಸುತರಾದಿರೆಂಬುದ
ದೇವಮುನಿ ನಾರದನು ಹೇಳಿದನಾ ನೃಶಂಸಂಗೆ ೧೪

ಗಾಳಿ ಬೆಂಬಲವಾಗಲಗ್ನಿ
ಜ್ವಾಲೆ ನಿಲುವುದೆ ಕೇಳಿ ಖಳ ಕರ
ವಾಳ ಜಡಿದೆಱಗಿದರೆ ವಸುದೇವನನು ಕೊಲಲೆಂದು
ಖೂಳನನು ಮಾಣಿಸಿದನಾ ಕರು
ಣಾಳು ಮುನಿಪನುಪಾಯದಲಿ ತಾ
ಹೇಳಲಱೆಯೆನು ಮೇಲೆ ಬಂದ ದುರಂತ ದುಃಸ್ಥಿತಿಯ ೧೫

ಶೌರಿದೇವಕಿಯರಿಗೆ ಮೊದಲಲಿ
ಭೂರಿ ಬಂಧನವಾಯ್ತು ಸಂಕಲೆ
ಸೇರಿದವು ದುರ್ಮತಿಯ ಹೆತ್ತವರಿಂಗೆ ಹಿರಿಯರಿಗೆ
ಆರು ನಿಲಬಹುದುಳಿದ ಯಾದವ
ವೀರರಿಗೆ ಬಂದೆಡಱುಗಳನಿ
ನ್ನಾರು ಬಣ್ಣಿಪರೆಂದು ಬಿನ್ನವಿಸಿದನು ವಿನಯದಲಿ ೧೬

ಹೇಳಿದನು ತಾ ಬಂದ ಕಾರ್ಯದ
ಮೂಲ ವೃತ್ತಾಂತವನು ಖಳಕುಲ
ಮೌಳಿ ನೆಗಳಿದ ನೀತಿಯನು ದುರ್ಮಂತ್ರಸಂಗತಿಯ
ಕೇಳು ನೃಪ ದೈತ್ಯಾರಿ ಬಲರದ
ಕೇಳಿ ಗಹಗಹಿಸುತ್ತ ನಗೆಯಲಿ
ಹೂಳಿದರು ಹೇರಾಳ ಹೃತ್ತಾಪವನು ಯದುವರನ ೧೭

ನಂದಗೋಪಂಗದನು ಹೇಳಿದ
ರೆಂದನಾತನಶೇಷಗೋಪರ
ವೃಂದವನು ನೆಱೆಕರೆಸಿ ಕಾರ್ಯಸ್ಥಿತಿಯ ಸಂಗತಿಯ
ಸಂದ ಗೋರಸ ದಧಿಘೃತಾದಿಕ
ಕಂದಮೂಲಫಲಾದ್ಯುಪಾಯನ
ದಿಂದ ಬಂಡಿಗಳೆಸೆಯೆ ಹೂಡುವುದೆಂದು ನೇಮಿಸಿದ ೧೮

ಹೊಱವಡಲಿ ಜನವೈದೆ ಮಧುರಾ
ಪುರಕೆ ನೋಡುವ ಬಿಲ್ಲ ಹಬ್ಬದ
ಧರಧುರದ ಸಂಭ್ರಮವನಾ ಹೊಳಲೊಪ್ಪವನು ಸಕಲ
ಧರೆಯ ಜನವೈತಹುದು ಗಡ ನ
ಮ್ಮರಸನಿದೆಲಾ ಕಳುಹಿದನು ಯದು
ವರನನೆನುತಲ್ಲಲ್ಲಿ ಸಂಭ್ರಮಿಸಿತು ಜನಸ್ತೋಮ ೧೯

ಕೇಳುತಲೆ ಗೋಪಾಂಗನೆಯರೆದೆ
ಹೊಳಿದುದು ಹೃತ್ತಾಪದಲಿ ಸಿರಿ
ಲೋಲನಂಘ್ರಿ ಸರೋಜವಿರಹ ವಿಷಾದಭಾರದಲಿ
ಕೋಲುಗೊಂಡಂತಾಗಿ ಮೂರ್ಛಾ
ವ್ಯಾಳ ವಿಷವಿಹ್ವಲೆಯರಶ್ರು ವಿ
ಲೋಲನೇತ್ರೆಯರಳಲು ಮಿಗೆ ಮಱುಗಿದರು ಮಱುಕೊಳಿಸಿ ೨೦

ಕ್ರೂರ ಕಂಸನ ಬೆಸದಲಿಂದ
ಕ್ರೂರನೆಂಬವನೊಬ್ಬನೀ ನ
ಮ್ಮೂರಿಗಿದೆ ಬಂದ ಗಡ ಮಧುರೆಗೆ ರಾಮ ಮಾಧವರ
ಹಾರದೊಯ್ವನು ಗಡ ಕೃಪಾಳಿ
ನ್ನಾರು ಗತಿ ತಮಗೆನುತ ಗೋಕುಲ
ನಾರಿಯರು ನಯನಾಶ್ರುಜಲದೊಳಗದ್ದರಡಿಗಡಿಗೆ ೨೧

ಸೀದವಧರದ್ಯುತಿಗಳಾ ದಾ
ಮೋದರಾಧರ ರಸವಿಯೋಗ ವಿ
ಷಾದ ತಪ್ತಶ್ವಾಸಗತಿಗಳ ಗಾಢತಾಪದಲಿ
ಕಾದುದೆದೆ ಕಮಲಾಕ್ಷಿಯರು ಬಡ
ವಾದರುಡೆ ಮುಡಿ ಸಡಿಲಿ ಕಂಬಸಿ
ಮೇದಿನಿಗೆ ಕಡಲಿಡಲು ಕಳವಳಿಸಿತು ವಧೂನಿವಹ ೨೨

ಕೆಲರು ಬಿದ್ದರು ಮೂರ್ಛೆಯಲಿ ಕೆಲ
ಕೆಲರು ಕೃಷ್ಣಧ್ಯಾನ ವರಮುನಿ
ಗಳವೊಲಿರ್ದರು ಮಱೆದು ತನುಭಾವನೆಯಲಿಹಪರವ
ಕೆಲರು ಕಮಲದಳಾಭನೇತ್ರನ
ಚೆಲುವಮೂರ್ತಿಯನಾ ಮೃದುಸ್ಮಿತ
ಲಲಿತಸೂಕ್ತಿಗಳೊಳಗೆ ಮನವಳಿದಿರ್ದರಬಲೆಯರು ೨೩

ಅಱುವಿನೊಳು ಮಱವೆಯೊಳು ಬೇಱೊಂ
ದಱಿಯರಾ ಮುರಹರನನಲ್ಲದೆ
ತೆಱಹ ಕಾಣರು ಕೂಡೆ ಸಚರಾಚರದ ಜೀವರಲಿ
ನೆಱೆ ನಿಜಪ್ರಾಣಾರ್ಪಣದಲೆಡೆ
ವಱಿಯದೊಲವಿನ ಮನದ ವೃತ್ತಿಯ
ಲೆಱಗಿಸಿದ ಪುತ್ಥಳಿಗಳಂತಾದರು ಮಹಾತ್ಮೆಯರು ೨೪

ಸ್ಮೇರವದನದ್ಯುತಿಯ ಘನ ಗಂ
ಭೀರಸೂಕ್ತಿಯ ಸುಪ್ರಸನ್ನೋ
ದಾರನಯನಾಪಾಂಗ ಮಧುರಮನೋಜ್ಞವೀಕ್ಷಣದ
ಚಾರುಗತಿ ವಿಭ್ರಮ ವಿಲಾಸದ
ಚಾರುಮೂರ್ತಿಯ ಲೀಲೆಗಳನಾ
ನಾರಿಯರು ನೆನೆನೆನೆದು ನೆನೆದರು ನಯನವಾರಿಯಲಿ ೨೫

ಒಂದೆಡೆಯಲೆಲ್ಲವರು ನೆರೆದು ಮು
ಕುಂದನನು ಹಲುಬುತ್ತ ತಮ್ಮೊಳ
ಗೆಂದರಾ ಗೋಪಿಯರು ತಮಗೈತಂದ ಪರಿಭವವ
ಕೊಂದೆ ನೀನೆಲೆ ವಿಧಿಯೆ ಹಗೆಯೇ
ನಿಂದುಮುಖಿಯರಲಕಟ ಬಲ್ಲಿದ
ನೆಂದು ನಿರ್ದಾಕ್ಷಿಣ್ಯದಲಿ ಮಾಳ್ಪರೆ ಮನೋವ್ಯಥೆಯ ೨೬

ಪುತ್ರ ಮಿತ್ರ ಕಳತ್ರ ಬಾಂಧವ
ಭೃತ್ಯ ಜನವೆಂಬಖಿಳ ಜೀವರ
ಮೊತ್ತವನು ಪಿತೃಮಾತೃಸಹಜಪ್ರೇಷ್ಠತಮರೆಂದು
ವಿಸ್ತರಿಸಿ ಮಮತೆಯಲಿ ಬಿಗಿದೇ
ಕತ್ರವಾಸದಲಗಲಿಸುವೆ ಕೃತ
ಕೃತ್ಯವಾಗದ ಮುನ್ನವೇ ಮಗುಳಾ ಸಬಾಂಧವರ ೨೭

ಅಕಟ ನಿನ್ನಯ ಚೇಷ್ಟೆ ದಿಟ ಬಾ
ಲಕರ ಚೇಷ್ಟಿತದಂತೆ ಜೀವ
ಪ್ರಕರದಲಿ ದಯೆಯಿಲ್ಲ ಬಲ್ಲವನಲ್ಲ ಪರಹಿತನ
ಸಕಲ ಲೋಕೇಶ್ವರನನಖಿಳಾ
ತ್ಮಕನನೀ ಕೃಷ್ಣನನು ತೋಱಿಂ
ತಕುಟಿಲನೆ ನೀ ಮಾಡಲೇಕೆ ಪರೋಕ್ಷ ಸಂಸ್ಥಿತಿಯ ೧೮

ಲೋಕಸೃಷ್ಟಿಗೆ ಚೆಲುವನೊಬ್ಬನೆ
ಸಾಕು ತೆಗೆ ಮಿಕ್ಕಮರಪತಿಗಳ
ಲೋಕಪಾಲರ ಮೊತ್ತವನು ನಮ್ಮೀ ನಿಜೇಶ್ವರನ
ಆಕೃತಿಯ ಸೌಂದರ್ಯಲಕ್ಷ್ಮಿಯ
ನೇಕದೇಶವ ಹೋಲುವರೆ ನಮ
ಗೇಕೆ ಹರಿವಿರಹಿತ ಜಗತ್ರಯವೆಂದರಬಲೆಯರು ೧೯

ಅಸಿತ ಕುಂತಳ ಪರಿವೃತಾನನ
ವಿಸರುಹದ ವಿಭ್ರಮ ಕಪೋಲೋ
ಲ್ಲಸಿತ ಕಮಲದಳಾಯತಾರುಣ ಚಾರುಲೋಚನದ
ಎಸೆವ ಹರಿಯನು ಕಂಡು ಮಿಗೆ ಸಂ
ತಸವ ಮಾಡುವೆನೆನೆ ವಿಧಾತನು
ವಿಷವನಿಕ್ಕಿದಡೆಂತು ಬದುಕುವೆವೆಂದರಬಲೆಯರು ೨೦

ಬಾಯ ಬಿಡುತಿದೆ ಕುಕ್ಕುಟವ್ರಜ
ಬೀಯವಾದುದು ರಾತ್ರಿ ನಗರ
ಸ್ತ್ರೀಯರಭಿಮತ ಸಿದ್ಧಿಗಳು ಸೇರಿದವಲಾ ದಿಟಕೆ
ಆಯಿತಿನ್ನೇನರೆ ಘಳಿಗೆ ನ
ಮ್ಮಾಯುಷಕೆ ಕಡೆ ಕಮಲಸಖ ನಿ
ರ್ದಾಯದಿಂದುದುಭವಿಸದಿರನೆಂದುದು ಸಖೀವ್ರಾತ ೨೧

ಹಬ್ಬವೆಂದೇ ಹೆಸರು ಕಂಗಳ
ಹಬ್ಬವಾ ಮಧುರಾಪುರ ಸ್ತ್ರೀ
ಸರ್ಬಜನಸಂತತಿಗೆ ಸಾಕ್ಷಾದ್ವಿಷ್ಣುವೆಂದೆನಿಪ
ಸರ್ಬಲೋಕೇಶ್ವರನನಖಿಳ ಸು
ಪರ್ಬಜನ ಸಂಸ್ತುತನ ಕಾಣ್ಬ ಸ
ಗರ್ಬ ಪುಣ್ಯೋದಯವಿದೆಂದರು ಕಾಂತೆಯರು ಮಱುಗಿ ೨೨

ಆವ ತಪವನು ಚರಿಸಿದರೊ ಮು
ನ್ನಾವ ಮಖವನು ಯಜಿಸಿದರೊ ಮೇ
ಣಾವ ಪರಿಯಲಿ ಫಲಿಸಿತಿಷ್ಟಾಪೂರ್ತರಾಶಿಗಳು
ಈ ವಿರಿಂಚಾರಾಧ್ಯ ಚರಣನ
ದಾವ ಪರಿಯಲಿ ಕಾಂಬ ಮಾರ್ಗಜ
ನಾವಳಿಗದೆಂತೆನುತ ಹಂಬಲಿಸಿದರು ಮಿಗೆ ಮಱುಗಿ ೨೩

ಹೋದವರು ಬಹರೆಂತು ಬಲ ದಾ
ಮೋದರರು ಮಗುಳಿತ್ತ ನಗರ ತ
ಳೋದರೀವಿಭ್ರಮವಿಳಾಸಂಗಳನು ನೆಱೆ ಕಂಡು
ಆದರಿಸುವರೆ ಹಳ್ಳಿಕಾಱರ
ಹಾದರದ ಹೆಂಗಳನು ಕೆಟ್ಟೆವ
ಲಾ ದುರಂತಧ್ವಾಂತಸಾಗರ ಮಧ್ಯದಲಿ ಮುಳುಗಿ ೨೪

ಕ್ರೂರನಲ್ಲಾ ಹೆಸರಿದೇಕ
ಕ್ರೂರನೆಂದೀತಂಗೆ ನಮ್ಮ ಶ
ರೀರ ಮಾತ್ರವನುಳುಹಿ ಜೀವವನೊಯ್ವ ಪಾತಕಿಗೆ
ಆರು ಕಳಿವರು ವಿರಹ ಪಾರಾ
ವಾರವನು ನಾವೆಂದು ಕಾಬೆವು
ಮೇರೆಯಿಲ್ಲದ ಕೃಪೆಯ ವಾರ್ಧಿಯನೆಂದರಬಲೆಯರು ೨೫

ಹುಟ್ಟುಗುರುಡರಿಗೇಕೆ ಕಂಗಳ
ಕೊಟ್ಟು ಕೊಂದೆ ವಿಧಾತ ನಿನ್ನಯ
ಚೇಷ್ಟೆ ಹಿತಕರವಲ್ಲ ನೆಱೆ ದತ್ತಾಪಹಾರವಲ
ಬಿಟ್ಟು ನಿಜ ಪಿತೃಮಾತೃ ಸುತರನು
ನೆಟ್ಟನಾಶ್ರಯಿಸಿದೆವು ತಮ್ಮನು
ಬಿಟ್ಟು ಹೋಗದಿರೆಲೆ ಮುಕುಂದ ಯೆನುತ್ತ ಹಲುಬಿದರು ೨೬

ಆರು ಗತಿ ಹೇಳೆಮಗೆ ನಿನ್ನ ಪ
ದಾರವಿಂದಾಶ್ರಿತೆಯರಿಂಗೆಲೆ
ಮೇರುವಲ್ಲಾ ನಿನ್ನನೊಂದರೆನಿಮಿಷ ಕಾಣದಿರೆ
ಆರಱಿವರಿದನೆಮ್ಮಳಲನಿ
ನ್ನಾರಿಗೆಂಬೆವು ಕೃಷ್ಣ ಕರುಣಾ
ವಾರಿಧಿಯೆ ಹಾ ರಾಮ ಹಾಯೆನುತಳಲಿದರು ಬಿಡದೆ ೨೭

ಹೆತ್ತ ತಾಯ್ತಂದೆಯರುಪೇಕ್ಷಿಸ
ಲೆತ್ತಣದು ನಮಗಿನ್ನು ಕೃಷ್ಣನ
ವಾರ್ತೆ ಹೋಗಲಿ ರಥವನೇಱುತ್ತಿರ್ದನಿನ್ನೇನು
ಮತ್ತವರು ಬೇಡೆನ್ನರೇತಕೆ
ಮತ್ತೆ ಕೆಳೆಯರು ತವಕಿಸುತ್ತಿದೆ
ಯೆತ್ತಲೇನೆಂದಱಿಯರಕಟೀಸು ದುಸ್ಥಿತಿಯೊ ೨೮

ಆಗವಪಶಕುನಂಗಳೀತಕೆ
ಹೋಗಲೆಂದೇ ಕಂಡವೀ ಭೂ
ಭಾಗದಧಿದೇವತೆಗಳೀ ವನ ಖಗಮೃಗ ವ್ರಾತ
ಏಗುವೆವು ನಾವಿನ್ನು ದೈವದ
ಲಾಗು ತಪ್ಪಿದ ಬಳಿಕ ಸುಖದಲಿ
ಹೋಗಿ ರಾಜ್ಯವ ಮಾಡಲದುವೇ ನಮಗೆ ಸಂತೋಷ ೨೯

ಅಡವಿಯಲಿ ತುಱುಗಾಯ ಹೋಗಿರ
ಲೊಡೆಯನೈತಹನೆಂದು ದಿವಸದ
ಕಡಲ ಕಳಿವೆವು ತಚ್ಚರಿತ್ರ ಕಥಾಕಥನದಿಂದ
ಒಡಲ ತಾಪಕ್ಕಸ್ತಮಯವೇ
ಕಡೆಯೆನಿಸಿತಿನ್ನಾವ ಕಾಲದ
ಕಡೆಗೆ ಕಾಂಬೆವೊ ಹಾ ಯೆನುತ ಮಱುಗಿದರು ೪೦

ಎಂದು ಬಹನಿನ್ನೆನುತ ಹಲುಬು
ತ್ತಿಂದುಮುಖಿಯರು ತಮ್ಮೊಳಗೆ ಗೋ
ವಿಂದ ದಾಮೋದರ ದಯಾನಿಧಿ ಮಾಧವಾ ಯೆನುತ
ಒಂದು ದೆಸೆಗೊಱಲಿದರು ಗೋವುಗ
ಳೊಂದೆಸೆಗೆ ತುಱುಗಿದವು ದೇವಮು
ಕುಂದನನು ಮೋಹರಿಸಿ ನೋಡುತ್ತಶ್ರುಜಲವೊಗಲು ೪೧

ಅತ್ತಲುದಯಾಚಲಕೆ ರವಿರಥ
ವೊತ್ತಿ ಬರೆ ತಲೆವಾಗಿ ಪದದಲಿ
ಹೆತ್ತವರ ಬೀಳ್ಕೊಂಡು ಸಂತವಿಸುತ್ತ ಗೋಪಿಯರ
ಚಿತ್ತದಳಲನು ಕಳೆದು ತೆಗೆದಱು
ಪುತ್ತ ಪರಿಮಿತ ವಚನದಲಿ ವರ
ಮೂರ್ತಿಗಳು ಹೊಱವಂಟರಂದಾ ನಂದಗೋಕುಲವ ೪೨

ವೀರ ವೈಷ್ಣವನೆಱಗಿ ಹರಿಪದ
ವಾರಿಜಕೆ ತಲೆವಾಗಿ ಬಂದ
ಕ್ರೂರನೇಱಿದನಾ ರಥವನಾವಶ್ಯಕವ ಮಾಡಿ
ಭೂರಿ ಕಹಳಾರವದ ಘನ ಗಂ
ಭೀರ ಭೇರೀರವದ ವಿಪ್ರರ
ವೀರ ಸೇಸೆಯ ಮಂತ್ರರವದೊಡ್ಡವಣೆ ರಂಜಿಸಿತು ೪೩

ಅವನಿಪತಿ ಚಿತ್ತವಿಸು ಪರಮೋ
ತ್ಸವದಲಂದಕ್ರೂರ ಬಲ ಮಾ
ಧವರು ಕುಳ್ಳಿರಲಾ ರಥಾಗ್ರದಲೆಸೆಯಲೆಡಬಲದ
ಅವನಿಯಡೆಗೆಡೆ ಭಂಡಿಗಳು ಭಾ
ರವಿಸಿ ನೂಕಿತು ಬಹಳ ಗೋರಸ
ನಿವಹ ತೀವಿದ ಹರವಿಗಳ ಸಾಲುಗಳು ತನಿ ಜಡಿಯೆ ೪೪

ನಂದ ಗೋಪಾದ್ಯಖಿಳ ಗೋಪರ
ವೃಂದವಖಿಳ ವಿಭೂಷಣಾಂಬರ
ದಿಂದ ಹೊಱವಂಟುದು ರಥಾಶ್ವಂಗಳಲಿ ಕೈಗೈದು
ಸಂದಣಿಸಲಕ್ರೂರ ಹರಿ ಬಲ
ರೊಂದು ರಥದಲಿ ಬರಲು ನೆರೆದುದು
ಮಂದಿ ಬಂಡಿಗಳೆತ್ತುಗಳು ಗೋವಳರನೊಡವೆರಸಿ ೪೫

ಒಡಲು ಜೀವವನುಳಿದಡೊಪ್ಪಂ
ಬಡೆಯಲಱಿವುದೆ ರಾಮಕೃಷ್ಣರು
ಒಡನೆಯಿಲ್ಲದ ಗೋಕುಲವಿದೇಕೆನುತ ತಮತಮಗೆ
ಕಡುಗಲಿಯ ಪಯಣವನು ಕಾಣುತ
ಮಡದಿಯರು ಮುಮ್ಮಾರ್ಗದಲಿ ರಥ
ವಿಡಿದು ಚಿತ್ರದವೋಲು ನಿಂದರು ಕೂಡೆ ಮಱವಟ್ಟು ೪೬

ಬೀಳುವೆವು ರಥ ವೀಥಿಯಲಿ ಸುಡು
ಬಾಳಲೇತಕೆ ಕೃಷ್ಣವಿರಹದ
ಕಾಳುಗಿಚ್ಚಿನಲಕಟ ಸೀಕರಿಯೋದ ವನದಂತೆ
ಸಾಲದೇ ಬದುಕಕಟ ಕೃಷ್ಣನ
ಕಾಲ ಕೆಳಗಸುಗಳನು ನೀಗುವೆ
ವೇಳೆನುತ ತಮತಮಗೆ ಕಳವಳಿಸಿತು ವಧೂನಿವಹ ೪೭

ಆವ ಸುಖವೋ ಹರಿಯ ಕಾರು
ಣ್ಯಾವಲೋಕನ ತದ್ವಿರಹವಿ
ನ್ನಾವ ತಪವೋ ಹರ ಹರಾ ಹರ ಬಲ್ಲರಾರದನು
ಗೋವುಗಳದಂತಿರಲಿ ಗೋಪ ಜ
ನಾವಳಿಗಳಂತಿರಲಿ ತದ್ವೃಂ
ದಾವನದ ಸಿರಿ ಸೀದುದೊಂದೇ ನಿಮಿಷಮಾತ್ರದಲಿ ೪೮

ಅದನಱಿತು ಗೋಪಿಯರಿಗುರುತರ
ಹೃದಯದಂತಸ್ತಾಪವನು ಕರು
ಣದಲಿ ಕೆಳೆಯರ ಕಳುಹಿಸಿ ನಿಜಕರ ಕಮಲವನು ತೋಱಿ
ಹದುಳವಿಹುದಾನೀ ಬಹೆನು ನಾ
ಡಿದು ನಿರರ್ಥಕ ಸಾಯಬೇಡೆಂ
ದುದಿತ ಸೌಹಾರ್ದದಲಿ ಸಂತವಿಸುತ್ತ ನಡೆತಂದ ೪೯

ಕಳುಹಿದರು ಕಂಗಳನು ಮನವನು
ಕಳುಹಿದರು ಹರಿಯೊಡನೆ ಮತ್ತಾ
ಚೆಲುವ ಮೂರ್ತಿಯನೆಡೆಯುಡುಗದೋರಂತೆ ಭಾವಿಸುತ
ಬಳಿಕ ಮರಳಿದು ರಾಗಗೆಟ್ಟಾ
ಲಲನೆಯರು ಗೋಕುಲಕೆ ಪರಿಜನ
ವುಲಿಯಲಾ ನಿತ್ಯಾತ್ಮರಾಮರು ನಡೆದರುರವಣಿಸಿ ೫೦

ಮೂವತ್ತನಾಲ್ಕನೆಯ ಸಂಧಿ ಮುಗಿಯಿತು.

# ಮೂವತ್ತೈದನೆಯ ಸಂಧಿ

ಯೋಗಮಾಯಾಧೀಶ್ವರನು ನಿಜ
ಯೋಗ ಸಿದ್ಧವೆನಿಪ್ಪ ನಿಜವನು
ಯೋಗ ಮೂರುತಿ ಬಲದಲಕ್ರೂರಂಗೆ ತೋಱಿಸಿದ

ಅರಸ ಕೇಳಚ್ಯುತನ ಮೂರ್ತಿಯ
ನಿರದೆ ನೋಡುತ ಚಿತ್ರದಂತಂ
ಬುರುಹಮುಖಿಯರು ನೆರೆದು ಬಾರನೆ ಮರಳಿ ಮನೆಗೆನುತ
ಹರಿಯನಾ ಹರಿರಥವನಾ ಧ್ವಜ
ಶಿರವನಾ ರಥರೇಣುಗಳನಂ
ಬರದೊಳಗೆ ಕಾಂಬನ್ನವೀಕ್ಷಿಸಿ ಮರಳಿದರು ಮನೆಗೆ ೧

ಸರಸಿಜಾಕ್ಷಿಯರನವರತ ಹರಿ
ಚರಿತವನು ಪಾಡುತ್ತ ಕೀರ್ತಿಸು
ತಿರುಳು ಹಗಲೆನ್ನದೆ ಸದಾ ಕೃಷ್ಣಾಂಘ್ರಿಪಂಕಜವ
ಸ್ಮರಿಸುತಿಹಪರಲೋಕವೆರಡನು
ಸರಕು ಮಾಡದೆ ಪರಮಸುಖ ಸಾ
ಗರದಲೋಲಾಡುತ್ತಲಿರ್ದರು ತತ್ಪ್ರಸಂಗದಲಿ ೨

ಅತ್ತಲಾ ರಥದಿಂದ ಬಲ ಪುರು
ಷೋತ್ತಮಾಕ್ರೂರರು ಮನೋವೇ
ಗೋತ್ತರದ ವೇಗದಲಿ ನಡೆದರು ಗೋಪಜನ ಸಹಿತ
ಉತ್ತರಿಸಿ ಕಾಳಿಂದಿಯನು ಗೋ
ಪೋತ್ತಮರು ಮುಂಕೊಂಡು ನಡೆಯಲು
ವಿಸ್ತರದ ಭಂಡಿಗಳ ಬಹಳೋಪಾಯನಂಗಳಲಿ ೩

ಬಂದು ಬಲಮಾಧವರೊಡನೆ ಕಾ
ಳಿಂದಿಗಕ್ರೂರಾಂಕನಂದಿಂ
ತೆಂದನೀ ನದಿಯೊಳಗೆ ಮಾಧ್ಯಾಹ್ನಿಕವನಾಚರಿಸಿ
ಬಂದಪೆನು ನೀವಿಹುದು ರಥದೊಳ
ಗೆಂದು ನೇಮವ ಕೊಂಡು ಬಲ ಗೋ
ವಿಂದರನು ನೆನೆವುತ್ತ ಬಂದನು ವರನದೀಜಲಕೆ ೪

ತೊಳೆದು ಕರಚರಣಂಗಳನು ತ
ಜ್ಜಲವನಭಿಮಂತ್ರಿಸುತ ನೀರೊಳು
ಮುಳುಗಿ ಕಂಡನು ರಾಮಕೃಷ್ಣರನಾ ಜಲಾಂತದಲಿ
ಥಳಿಲನೆದ್ದನಿದೇನು ರಥದಿಂ
ದಿಳಿದು ಬಂದರೊ ಬಱಿಮನದ ಹಂ
ಬಲೊ ಯೆನುತ ರಥದೊಳಗೆ ಕಂಡನು ರಾಮಮಾಧವರ ೫

ಮತ್ತೆ ಮುಳುಗಿದನಾದರದು ಹುಸಿ
ಚಿತ್ತದ ಭ್ರಮೆಯೆನುತ ಜಲದೊಳ
ಗುತ್ತಮಶ್ಲೋಕರನು ಪುನರಪಿ ಕಂಡನದಱೊಳಗೆ
ಎತ್ತಲಿದು ಹರಹರ ಶಿವಾಯ ನ
ಮೋऽಸ್ತು ಚಿತ್ರವೆನುತ್ತ ಸಲಿಲವ
ನುತ್ತರಿಸಿ ಬೆಱಗಾದನೀಕ್ಷಿಸಿ ರಾಮ ಕೇಶವರ ೬

ಇದನಱೆವೆನಿನ್ನೊಮ್ಮೆಯೆನುತಾ
ಹೃದಯದೊಳು ಮುಳುಗುತ್ತ ಕಂಡನು
ಕದವ ತೆಱೆದಂತಿರಲು ಸೂರ್ಯಸಹಸ್ರದೀಪ್ತಿಗಳ
ವಿದಿತ ವಿಭವಂಗಳಿಗೆ ಸಂಭವ
ಸದನವೆನಿಸುವನಂತನನು ಸೊಂ
ಪೊದವಿದುರುತೇಜದ ಸಹಸ್ರಫಣಾಮಣಿದ್ಯುತಿಯ ೭

ಕಂಡನಾ ಫಣಿರಾಜ ಭೋಗೋ
ದ್ದಂಡ ತಳ್ಪದಲೆಸೆವ ಕನಕವ
ಕಂಡೆಳಸಿದೆಳನೀಲರತ್ನಾಚಲದ ಗರುವಿಕೆಯ
ಪುಂಡರೀಕಾಕ್ಷನನು ಪುನರಪಿ
ಕಂಡನಿಕ್ಕೆಲದೋಲಗದ ಪರಿ
ಮಂಡಲದ ಪರಮೇಷ್ಠಿ ರುದ್ರಾದಿತ್ಯ ಕೋಟಿಗಳ ೮

ಸುಳಿಗುರುಳ ಮಣಿ ಮಕುಟ ರತ್ನಾ
ವಳಿಯ ಭಾಳದ ಚಂದನದ ಹೊಸ
ತಿಲಕ ಸಸ್ಮಿತ ಮಧುರತರ ಮಂಜುಳ ಮುಖಾಂಬುಜದ
ಹೊಳೆವ ಕಂಗಳ ತೊಟ್ಟ ಮಣಿಕುಂ
ಡಲದ ಚಾರು ಕಪೋಲ ದಂತಾ
ವಳಿಯ ಮೌಕ್ತಿಕವೆಸೆವ ಹರಿಯನು ಕಂಡನಕ್ರೂರ ೯

ಮೆಱೆವ ನಾಸಾಪುಟದ ಬಿಂಬಾ
ಧರದರುಣದೀಧಿತಿಯ ಚುಬುಕದ
ಕೊರಳ ಮೂರೇಖೆಗಳ ಕೌಸ್ತುಭರತ್ನಭೂಷಣದ
ಕರಚತುಷ್ಟಯ ಶಂಖ ಚಕ್ರಾಂ
ಬುರುಹ ಗದೆಗಳ ಕಂಕಣದ ವೇ
ರುರದ ವನಮಾಲೆಗಳ ರತ್ನಾಂಗದ ವಿಭೂಷಣದ ೧೦

ಬೆರಳ ಮಣಿಮುದ್ರಿಕೆಯ ಪೀತಾಂ
ಬರದ ಕಾಂಚೀಗುಣದ ಜಿತಕರಿ
ವರಕರದ್ವಯದಮಳ ಜಂಘಾಯುಗಳ ಜಾನುಗಳ
ಬೆರಳ ಮೆಲುದಳದರುಣ ಚರಣಾಂ
ಬುರುಹ ನಖಮಂಡಲದ ಮುನಿ ಹೃ
ತ್ಸರಸಿರುಹವಿಷ್ಟರದ ಹರಿಯನು ಕಂಡನಕ್ರೂರ ೧೧

ಸನಕ ನಾರದ ಮುಖ್ಯ ವರಮುನಿ
ಜನದ ಬಲಿ ಪ್ರಹ್ಲಾದ ಸಾತ್ವಿಕ
ಜನದ ಕಮಲಜ ರುದ್ರ ವಿಬುಧಾಧೀಶ ಪರಿಜನದ
ವಿನುತ ಮಾಯಾಶಕ್ತಿಗಳ ಸಂ
ಜನಿತ ಪರಮೈಶ್ವರ್ಯ ತೇಜೋ
ವನದಿ ಮಧ್ಯದಲೆಸೆವ ಹರಿಯನು ಕಂಡನಕ್ರೂರ ೧೨

ಶ್ರೀ ಸರಸ್ವತಿ ತುಷ್ಟಿ ಪುಷ್ಟಿ ವಿ
ಳಾಸ ಕಾಂತಿ ಸುಕೀರ್ತಿ ವಿಮಳೋ
ಚ್ಛ್ವಾಸಗತಿಸಂಪನ್ನ ತತ್ವಜ್ಞಾನ ಸೂಕ್ತಿಗಳ
ಆ ಸುವಿದ್ಯಾ ವಿದ್ಯೆಗಳ ಮಾ
ಯಾ ಸತಿಯ ಬಹುವಿಧ ವಿಧಾನ ವಿ
ಳಾಸಿನಿಯರೋಲಗದ ಹರಿಯನು ಕಂಡನಕ್ರೂರ ೧೩

ಜೀಯ ಹಸಾದವೆನುತ್ತ ದೈತ್ಯ ನಿ
ಕಾಯವಿದೆ ತಲೆವಾಗಿ ಪನ್ನಗ
ರಾಯರಿರಲೊಂದೆಸೆಗನಂತನ ಬಲದ ಭಾಗದಲಿ
ರಾಯ ರಾಯರಿಗೆಲ್ಲ ತಾನೇ
ರಾಯನೆನಿಪ ಜಗನ್ಮಯನ ನಾ
ರಾಯಣನ ಸಾಷ್ಟಾಂಗದೋಲಗದೊಪ್ಪವನು ಕಂಡ ೧೪

ಚಾರುಚರಿತೋದ್ಗಾಯಕ ಶ್ರುತಿ
ನಾರಿಯರ ಸಂಕೀರ್ತಿ ಗುಣ ವಿ
ಸ್ತಾರಕಿಯರೋಲಗದ ನರ್ತಕಿಯರ ವಿಳಾಸಕದ
ಭೂರಿತೇಜದ ವೈಷ್ಣವದ ಪರಿ
ಚಾರಕರ ಪಾತಕರ ಪರಮೋ
ದಾರ ಸಭೆಯಲಿ ಮೆಱೆವ ಲಕ್ಷ್ಮೀರಮಣನನು ಕಂಡ ೧೫

ಜಗದ ಸೊಬಗಿನ ಬಿತ್ತು ಬೊಮ್ಮದ
ಹೊಗರು ಭಾಗವತಾಭಿಮಾನದ
ಹುಗಿಲು ಪರಮಾನಂದರಸ ವಿಶ್ರಮದ ತನಿ ಮುಗಿಲು
ದೃಗುಸಿಜೆಯವೀಕ್ಷಣದ ಸೌಖ್ಯದ
ತಗಹು ಬಹಳೈಶ್ವರ್ಯನಿಕರದ
ಬಿಗುಹು ತಾನೆನಲೆಸೆವ ವೈಕುಂಠವನು ನೆಱೆ ಕಂಡ ೧೬

ಅಱುವಿನಂಗಡಿ ಭಾಗವತರ
ಕ್ಕಱುನ ಜನ್ಮಸ್ಥಾನ ಜಗದಂ
ಕುರದ ನಿಲಯ ಬೀಜ ರವಿ ಶಶಿ ಪಾವಕಪ್ರಭೆಯ
ಎಱಗಿಸಿದ ಪರಿಣಾಮ ಮಹಿಮೆಯ
ಮಿಱುಗು ಮಾಯಾ ಗುಣಪದದ ಕಡೆ
ಸೆಱಗು ತಾನೆನೆ ಮೆಱೆವ ಹರಿಪುರ ಲಕ್ಷ್ಮಿಯನು ಕಂಡ ೧೭

ಕಾಣುತವೆ ಕಮಲಾಕ್ಷನನು ಸ
ತ್ರಾಣಚೇತನನಾ ವಿಕುಂಠ
ಕ್ಷೋಣಿಯನು ಕಂಗಳಲಿ ಜಲವನು ಮನದಲುತ್ಸವವ
ಮಾಣದೊಡಲಲಿ ಬಹಳ ಪುಳಕ
ಶ್ರೇಣಿಯನು ವದನದಲಿ ಗದ್ಗದ
ವಾಣಿಯನು ತಳೆದಿಳೆಯಲೀಡಾಡಿದನು ಕಳೆವರವ ೧೮

ಸುರಿವ ಸುಖಬಾಷ್ಪದಲಿ ಕಂಗಳು
ಕರಗಿ ಕೃಷ್ಣಪದಾಬ್ಜಯುಗಳದ
ಲೆಱಕವಡೆದುದು ತನು ತದಂಘ್ರಿಸ್ಪರ್ಶ ಸುಖದೊಳಗೆ
ಬೆರಕೆವಡೆದವು ನಾಲಗೆಯಲಂ
ಬುರುಹನಾಭನ ಕೀರ್ತಿ ಗುಣ ವಿ
ಸ್ತರವನಾವಿಷ್ಕರಿಸಿದನು ನಿಜಭಾವ ಭಕ್ತಿಯಲಿ ೧೯

ಜಯ ನಮೋ ಜಗದಾದ್ಯ ಜಗದಾ
ಶ್ರಯ ನಮೋ ಜಗದೀಶ ಜನನ
ವ್ಯಯ ನಮೋ ವರ್ತಿತ ಜಗದ್ವಿಸ್ತಾರ ಸಂಸಾರ
ಜಯ ಜಗಜ್ಜೀವನ ದಯೋದಯ
ಜಯ ಜಗತ್ಪಾವನ ಗುಣೋದಯ
ಜಯ ನಮೋಽಸ್ತು ನಮೋಽಸ್ತು ಜಗದಾತ್ಮಕ ಜಗನ್ಮಯನೆ ೨೦

ಜಯ ನಮೋ ಹರಿಮೂರ್ತಿ ಭಕ್ತ
ಪ್ರಿಯ ಭವಾಬ್ಧಿ ನಿಮಗ್ನಜನ ಸಂ
ಶ್ರಯ ಸದಾನಂದೈಕವಿಗ್ರಹ ಸರ್ವವಿಗ್ರಹನೆ
ಜಯ ಜರಾಮರಣಾರ್ತಿ ಸಂಸೃತಿ
ಭಯನಿವಾರಣ ಪುಣ್ಯನಾಮಾ
ಹ್ವಯ ಪವಿತ್ರಚರಿತ್ರ ಪರಮೇಶ್ವರ ನಮೋ ಜಯತು ೨೧

ದೇವ ನಿನ್ನಂಶಾಂಶದಿಂದೀ
ದೇವ ದಾನವ ಮನುಜ ಪಕ್ಷಿ ಮೃ
ಗಾವಳಿಗಳೀ ಸಕಲ ಸಚರಾಚರ ಜಗನ್ನಿಕರ
ಶ್ರೀವರನೆ ಸಂಜನಿಸಿ ತೋಱುವ
ವಾ ವಿರಿಂಚಿ ಭವೇಂದ್ರ ಮುಖ್ಯರು
ದೇವರಾಜ್ಞಾವರ್ತಿಗಳು ದಿಗುಪಾಲರಿವರೆಂದ ೨೨

ನಿನ್ನ ನಾಭಿಸರೋಜದಿಂದು
ತ್ಪನ್ನನಾದನು ಕಮಲಭವನೀ
ನಿನ್ನ ಬಾಹುಗಳಿಂದ ಸುರನರಲೋಕಪಾಲಕರು
ನಿನ್ನ ನಖಮಣಿ ಕಾಂತಿಯಿಂದು
ತ್ಪನ್ನರಾದರು ರವಿ ಶಶಿಗಳೆನೆ
ನಿನ್ನ ಬಹಳೈಶ್ವರ್ಯಗತಿಗಳನಱಿವರಾರೆಂದ ೨೩

ಕಿವಿಗಳೊಳು ದಿಕ್ಕುಗಳು ನಾಸಾ
ವಿವರದೊಳಗಶ್ವಿಗಳು ಮುಖದೊಳು
ಪವನಸಖನುರದಲಿ ಸಪ್ತ ಸಮುದ್ರವಂಬರವು
ಭುವನವೀ ನಾಭಿಯೊಳು ಚರಣದ
ಲವನಿ ಸಂಧ್ಯೆಗಳುಟ್ಟ ವಸನದ
ಜವಳಿಯೊಳು ಸಂಭವಿಸಲಖಿಲಾತ್ಮಕನು ನೀನೆಂದ ೨೪

ಕುಂಡಲಂಗಳು ದೀಪ್ತ ರವಿ ಶಶಿ
ಮಂಡಲಂಗಳು ಹುಬ್ಬಿನಾಟವೆ
ದಂಡಧರನುಬ್ಬಾಟ ಕಾಲತ್ರಿತಯವೇ ಗಮನ
ಖಂಡಪರಶು ವಿರಿಂಚಿ ವಿವಿಧಾ
ಖಂಡಲಾದಿ ಸಮಸ್ತ ಸುರ ನರ
ಮಂಡಲಾಧೀಶ್ವರರು ನಿನ್ನಂಶಾಂಶಭವರೆಂದ ೨೫

ಗಿರಿ ಸಿಕರ ವಸತಿಗಳು ಧಾರಾ
ಧರ ನಿಕರ ಕೇಶಂಗಳೀ ಲತೆ
ತರುನಿಕರ ರೋಮಂಗಳೀ ನಿನ್ನೊಪ್ಪುವೆವೆಯಾಟ
ಇರುಳು ಹಗಲುಗಳಖಿಳ ಲೋಕವ
ನಿರದೆ ಶಾಸಿಪ ವೇದ ವಾಗ್ವಿ
ಸ್ತರವೆನಲು ನಿನ್ನತುಳ ಮಹಿಮೆಯನಱಿವರಾರೆಂದ ೨೬

ಧರೆ ಜಲಾನಲ ಮಾತರಿಶ್ವಾಂ
ಬರ ಗುಣಾಹಂಕಾರವಂತಃ
ಕರಣ ವಿಷಯೈಂದ್ರಿಯನಿಚಯಾವ್ಯಕ್ತ ಮಹದಾದಿ
ಸುರನಿಕರವೆಂತೀ ಜಗದ್ವಿ
ಸ್ತರಣಹೇತುಗಳೆನಿಪ ಸತ್ವೋ
ತ್ಕರಗಳಲಿ ನಿನ್ನಂಶದಿಂದುತ್ಪನ್ನವಾಯ್ತೆಂದ ೨೭

ಅಱಿಯದೀ ನಿನ್ನ ಸ್ವರೂಪದ
ನಿಱುಗೆಯನು ಕರಣೇಂದ್ರಿಯಂಗಳು
ನೆಱೆ ಸರೋರುಹಭವಭವೇಂದ್ರಾದ್ಯಮರವರನಿಕರ
ಎಱಗಿ ಮಾಯಾಗುಣವಿಷಯದಿಡು
ಕುಱಿನ ಸುಖಲೇಶಕ್ಕೆ ಮತಿಯನು
ತೆಱುವ ಮರ್ತ್ಯರ ಮಾತದೇಕೆನ್ನೆಂದನಕ್ರೂರ ೨೮

ಭಜಿಸುವರು ಯೋಗಿಗಳು ನಿನ್ನನು
ತ್ರಿಜಗದಧಿದೇವತೆಯನಾಶ್ರಿತ
ಸುಜನನು ದೇಹೇಂದ್ರಿಯಾಂತಃಕರಣಸಾಕ್ಷಿಯನು
ಯಜಿಸುವರು ವೈತಾನಿಕೋತ್ತ
ದ್ವಿಜರು ನಾನಾಕ್ರತುಗಳಲಿ ವಾ
ರಿಜದಳೇಕ್ಷಣ ವಿವಿಧ ದೈವದ್ರವ್ಯ ಭೇದದಲಿ ೨೯

ಕೆಲರುಳಿದು ವೇದೋಕ್ತ ಕರ್ಮಂ
ಗಳನು ಸಲೆ ಸನ್ಯಸ್ತವಿಷಯಂ
ಗಳಲಿ ಸಂಸ್ಥಿತರಾಗಿ ತತ್ವಜ್ಞಾನ ಯಜ್ಞದಲಿ
ಕೆಲರು ನಿನ್ನಯ ಮೂರ್ತಿಭೇದಂ
ಗಳನು ತಂತ್ರೋಕ್ತದಲಿ ಭಜಿಸುವ
ರೆಲೆ ಮುಕುಂದ ಭವತ್ಪದಾಬ್ಜಪರಾಗರತರೆನಿಸಿ ೩೦

ಕೆಲರು ಶೈವಾಗಮ ವಿಧಾನಂ
ಗಳಲಿ ಬಹುವಿಧ ಮಾರ್ಗಭೇದಂ
ಗಳಲಿ ಯಜಿಸುವರೊಲಿದು ಸಾಕ್ಷಾತ್ಪರಮ ಶಿವನೆಂದು
ಕೆಲರು ಸೌರಾಗಮಗಳಲಿ ಕೆಲ
ಕೆಲರು ಶಾಕ್ತೇಯಾದಿ ಭೇದಂ
ಗಳಲಿ ಸಕಲಾತ್ಮಕನೆ ಭಜಿಸುವರೀ ಭವತ್ಪದವ ೩೧

ಹಲವು ನದಿಗಳ ತರ್ಪಣದ ಜಲ
ಜಲಧಿಗೈದುವವೋಲು ಲೋಕದ
ಹಲವು ದೈವದ ಭಜನೆಗಳು ತತ್ತತ್ಸ್ವರೂಪವನು
ಜಲಜಲೋಚನ ನಿನ್ನನೈದುವ
ವಲಘು ದೈವದ ದೈವ ನೀನಿರ
ಲುಳಿದ ದೈವದ ಭಜನೆ ಕಾಲಕ್ಷೇಪಕರವೆಂದ ೩೨

ಸತ್ವಗುಣದಿಂದಮರರಿಂತು
ತ್ಪತ್ತಿ ರಾಜಸ ತಾಮಸದ ಗುಣ
ವೃತ್ತಿಯಿಂದೀ ನರರು ಭೂತ ಪ್ರೇತ ಗುಣನಿಚಯ
ಮತ್ತೆ ತಾಮಸದಿಂದ ತರುಗಳು
ಚಿತ್ತವಿಸುವರೆ ನಿನ್ನ ಮಾಯಾ
ಮತ್ತಕಾಶಿನಿಯಿಂದ ತದ್ಗುಣನಿಕರವಾಯ್ತೆಂದ ೩೩

ಜಲಚರಂಗಳು ತೋಱಿ ಮಗುಳಾ
ಜಲಧಿಯೊಳಗಳಿವಂತೆ ನಿನ್ನಲಿ
ಹೊಳೆದು ತೋಱುವವೀಯಜಾಂಡಕಟಾಹ ಕೋಟಿಗಳು
ಅಳಿವವೀ ನಿನ್ನೇಕದೇಶದ
ಳಳಿಯದುದುಭವಿಸದ ಸದಾ ನಿ
ಶ್ಚಲ ನಿರಂಜನ ನಿತ್ಯ ಸುಖ ಪರಿಪೂರ್ಣ ನೀನೆಂದ ೩೪

ಆರಱಿವರೀ ನಿನ್ನ ಮಹಿಮೆಯ
ನಾರು ಬಣ್ಣಿಸಬಹುದು ನಿನ್ನವ
ತಾರ ಕಥೆಗಳನೀ ಸರೋರುಹಭವ ಭವಾದಿಗಳು
ಈ ಋಷಿಗಳೀ ಮನುಗಳೀ ಸುರ
ವೀರವಂದಿಗಳೀ ಶ್ರುತಿಗಳೀ
ನಾರದಾದ್ಯರು ವಿಸ್ತರಿಸಿ ಕಡೆಗಾಣರವರೆಂದ ೩೫

ದೇವ ನಿನ್ನೆವತಾರಚರಿತಸು
ಧಾವಗಾಹನವಿಲ್ಲದಿರ್ದರೆ
ಜೀವರಿಗೆ ಸಂಸಾರ ತಾಪತ್ರಿತಯತಪ್ತರಿಗೆ
ಆವುದೋ ಪರಿಹಾರ ಗತಿಮತಿ
ಯಾವುದೋ ಶಿವ ಶಿವ ದುರಂತ ತ
ಮೋವಿಮೂಢರಿಗಕಟ ವಿಷಯವಿಷಾವಗಾಹರಿಗೆ ೩೬

ಧರಣಿಕಾರಣಮತ್ಸ್ಯ ಮಂದರ
ಧರಣಕಾರಣ ಕೂರ್ಮ ಧರಣೀ
ಧರಣಕಾರಣ ದಿವ್ಯತನು ವಾರಾಹ ನರಸಿಂಹ
ಶರಣು ರಕ್ಷಾಕರನೆ ಕಾಶ್ಯಪ
ವರತನಯ ವಾಮನನೆ ತ್ರಿಜಗ
ದ್ವಿರಚಿತ ತ್ರಿಪಥ ತ್ರಿವಿಕ್ರಮ ಜಯ ನಮೋ ಯೆಂದ ೩೭

ಧರೆಯ ದುಷ್ಟ ಕ್ಷತ್ರಕುಲ ಸಂ
ಹರಣ ಭಾರ್ಗವ ರಾಮ ದಶಕಂ
ಧರ ಕಬಂಧರಣೋಗ್ರ ನರ್ತನದಕ್ಷ ರಘುರಾಮ
ಸುರಪಶುದ್ವಿಜ ಧರ್ಮಶಿಕ್ಷಾ
ಕರಣ ಯದುಕುಲ ಲಲಾಮ ಸುರರಿಪು
ಹರಣ ಬೌದ್ಧ ಯುಗಾಂತ ಕಲ್ಕೀಶ್ವರ ನಮೋ ಜಯತು ೩೮

ಜಯ ನಮೋ ವಸುದೇವ ನಂದನ
ಜಯತು ಸಂಕರುಷಣ ನಮಸ್ತೇ
ಜಯ ಜಯ ಪ್ರದ್ಯುಮ್ನ ಮಹದನಿರುದ್ಧ ಸಂಜ್ಞಿಕನೆ
ಜಯ ಚತುರ್ವಿಧಮೂರ್ತಿ ಭಕ್ತಾ
ಶ್ರಯ ಭವಾಂಬುಧಿಮಗ್ನ ಜನಸಂ
ಶ್ರಯ ಸದಾನಂದೈಕವಿಗ್ರಹ ಜಯ ನಮೋ ಜಯತು ೩೯

ಬುದ್ಧಿಗೆಟ್ಟಾನಿಂತು ಸಂಸಾ
ರಾಬ್ಧಿಯಲಿ ಸುತದಾರಬಂಧು ಸ
ಮೃದ್ಧ ಧನವಿಷಯಾನುರಾಗಗ್ರಹ ಮುಖಂಗಳಲಿ
ಅಧ್ವಹೀನನು ಕೆಡೆದು ಸಲೆ ಸುಖ
ಬುದ್ಧಿಯಲಿ ಬಹುಕರ್ಮಪಾಶ ನಿ
ಬದ್ಧನಾದೆನು ಕೃಷ್ಣ ಕರುಣಿಸು ಕರುಣಿಸೆನಗೆಂದ ೪೦

ಇತ್ತಲಿತ್ತಲು ಸೆಳೆವುತಿದೆಲಾ
ಚಿತ್ತವನು ಕರಣೇಂದ್ರಿಯಗಳ
ವೃತ್ತಿಗಳು ಕಡುಕೃಪಣನಾದೆನು ಕಾಮವಶತೆಯಲಿ
ಎತ್ತಲೇನೆಂದಱಿಯಲೀಸವು
ತತ್ವವಿದ್ಯಾನಾವೆಯನು ಪುರು
ಷೋತ್ತಮನೆ ಕೃಪೆಮಾಡನಾಥಂಗೆನಗೆ ನೀನೆಂದ ೪೧

ದುರ್ಲಭವೆನಿಪ್ಪೀ ಭವತ್ಪದ
ಪಲ್ಲವದ ಸನ್ನಿಧಿಗೆ ಲಕ್ಷ್ಮೀ
ವಲ್ಲಭನೆ ಸೇರಿದೆನು ನಿನ್ನ ಕೃಪಾಕಟಾಕ್ಷದಲಿ
ಬಲ್ಲೆನಿನ್ನೀ ಭವವ ನಿನ್ನವ
ರಿಲ್ಲದಾ ಮೋಕ್ಷವನು ಬಯಸುವ
ನಲ್ಲ ಕೊಡು ನಿನ್ನವರ ಸಂಗವೆ ಸಾಕು ತನಗೆಂದ ೪೨

ಎಂದು ಭಕುತಿಯಲೆಱಗಿ ಚರಣ
ದ್ವಂದ್ವದಲಿ ವೈಯಿಕ್ಕಿ ಪರವಾ
ನಂದಬಾಷ್ಪ ಜಲಾವಿಲೇಕ್ಷಣನಾಗುತಿರುತಿರಲು
ಮುಂದೆ ತೋರ್ಪ ಮುಕುಂದನಾಕೃತಿ
ನಿಂದುದಂತರ್ಧಾನ ಗತಿಯಲಿ
ಸಂದ ವೈಷ್ಣವನಿಕರದೋಲಗಸಹಿತ ನಿಮಿಷದಲಿ ೪೩

ಎದ್ದನಾ ಜಲದೊಳಗೆ ಕಂಡು ಜ
ನಾರ್ದನನ ಮೂರ್ತಿಯನು ಕಾಣದೆ
ಬಿದ್ದ ಹೊನ್ನನು ಮರಳಿಯಱಸುವಪೋಲು ಕಳವಳಿಸಿ
ನಿದ್ದೆ ತಿಳಿದಂದದಲಿ ಭಕತರ
ಭದ್ರವಾರಣನೇಳುತವೆ ಬಲ
ಭದ್ರ ನಿತ್ಯಾತ್ಮರನು ಕಂಡನು ರಥದ ಮೇಲಿರಲು ೪೪

ಮೂವತ್ತೈದನೆಯ ಸಂಧಿ ಮುಗಿಯಿತು.

# ಮೂವತ್ತಾರನೆಯ ಸಂಧಿ

ಮಧುಮಥನನಕ್ರೂರನೊಡನಾ
ಮಧುರೆಯನು ಪೊಕ್ಕಂತೆ ಭಕ್ತನ
ಮಧುರಸೋಕ್ತಿಗಳಿಂದ ಬೀಳ್ಕೊಳಿಸಿದನು ನಿಜಗೃಹಕೆ

ಅರಸ ಕೇಳಕ್ರೂರನಚ್ಯುತ
ನಿರವನಾ ಜಲದೊಳಗೆ ಕಾಣದೆ
ಹೊರಳುತಿದ್ದನು ಕೃಷ್ಣ ಕೃಪಾಕರನೆಯೆಂದೆನುತ
ಸುರಿವ ಸುಖಬಾಷ್ಪದಲಿ ಕರಗುತ
ತಿರುಗಿ ಮುನ್ನಿರ್ದಾ ರಥಾಗ್ರದೊ
ಳಿರಲು ಕಂಡನು ಕೌತುಕಾನ್ವಿತನಾಗಿ ಹರಿಬಲರ ೧

ನಿತ್ಯಕರ್ಮವ ಮಾಡಿ ಸಲಿಲವ
ನುತ್ತರಿಸುತಕ್ರೂರನೈತಂ
ದುತ್ತಮಶ್ಲೋಕಾಂಘ್ರಿಯಲಿ ತಲೆವಾಗಿ ನಿಂದಿರಲು
ಇತ್ತ ಬಾರೈ ಕುಳ್ಳಿರೇತಕೆ
ಹುತ್ತಿರಕೆ ಬರಲೊಲ್ಲೆ ನಿನ್ನಯ
ಚಿತ್ತದಲಿ ಹೇಳೇನು ಸಂಶಯವೆಂದು ಹರಿ ನುಡಿದ ೨

ಜಲದಲನಿಲಸ್ಥಳದಲಂಬರ
ತಳದೊಳಕ್ಕದುಭುತವನಾವುದ
ನುಳಿಸದೇನುವ ಕಂಡೆ ನುಡಿ ತಾಬಲ್ಲೆ ನಿಂಗಿತವ
ಹೊಲಬುದಪ್ಪಿದನಂತೆ ನಾಲ್ದೆಸೆ
ಗಳನು ತನ್ನನು ನೋಳ್ಪೆ ಹೇಳೈ
ಬಳಲಿಸದೆ ತನ್ನನುವನೆನಲಿಂತೆಂದನಕ್ರೂರ ೩

ಜಲದೊಳನಿಲ ಸ್ಥಳದೊಳಂಬರ
ತಳದೊಳಕ್ಕದುಭುತಗಳೇನೇ
ನೊಳವು ಕಂಡೆನದೆಲ್ಲವನು ನಿನ್ನಂಘ್ರಿಪಂಕಜವ
ಜಲಜದೃಶ ಕಂಡಂತೆ ಮಾಯಾ
ಜಲಧಿಯೇ ನಿನ್ನೊಲುವ ಮಾಯೆಗೆ
ಹೊಲಬುದಪ್ಪದರೊಳರೆ ಚಿತ್ತವಿಸೆಂದನಕ್ರೂರ ೪

ಸಚ್ಚಿದಾನಂದೈಕರಸವಹ
ನಿಚ್ಚಟದ ನಿಜಸುಖವನಱಿಯದೆ
ಮೆಚ್ಚಿ ಮಾಯಾಮಯ ವಿಷಯಸುಖಲೇಶದನುಭವಕೆ
ಕಿಚ್ಚ ತಿಂಬರು ಕೆನೆಯಿರಲು ಮನ
ಮುಚ್ಚಿದಕಟೇ ಲೋಕವೇತ
ಕ್ಕಚ್ಚಿಗಂಬಡುತಿಹುದು ಕರುಣಾನಿಧಿಯೆ ಹೇಳೆಂದ ೫

ಹತ್ತಿರಕೆ ಬಹ ಬುದ್ಧಿಯನು ನಿಜ
ಚಿತ್ತದಲಿ ಕರುಣಿಸಿದಡಲ್ಲದೆ
ಮತ್ತೆ ಬಹೆ ನಾನೆಂತು ಕಾಂಬೆನದೆಂತು ಸಿರಿಪದವ
ಉತ್ತಮೋತ್ತಮ ನಿನ್ನ ಮಾಯಾ
ಮತ್ತ ಕಾಶಿನಿಯುಪಟಳಕೆ ಕೈ
ಯೆತ್ತಿ ಪೊಡವಂಟಪೆನು ಜಯ ಜಯ ಜಯ ನಮೋ ಎಂದ ೬

ಎನಲು ನಗುತಪ್ಪಿದನು ಕರುಣಾ
ವನದಿ ರಥದಲಿ ಕುಳ್ಳಿರಿಸಿಕೊಂ
ಡನುಪಮಾನಂದಾಬ್ಧಿಯೊಳಗೋಲಾಡುವನ ನೋಡಿ
ಅನುಪಮನೆ ನಡೆ ರಥವನೆಸಗೇ
ಕಿನಿತು ಕೌತುಕಬುದ್ಧಿ ನಿನಗೆಂ
ದೆನುತ ನಿಜಭಕ್ತನನು ಬೋಳಯಿಸಿದನು ವೈದಡವಿ ೭

ನಡೆಸಿದನು ನೃಪರಥವನಡಿಗಡಿ
ಗೊಡಲನೊಲೆವುತ ರಾಮಕೃಷ್ಣರ
ಕಡುಚೆಲುವ ಮೂರ್ತಿಯನು ಕಂಗಳು ದಣಿಯಲೀಕ್ಷಿಸುತ
ಕಡಲ ಮಗಳೇನಱಿಯದೀ ಮೆ
ಲ್ಲಡಿಗಳನು ಭಜಿಸಿದಳೆ ಕಂಗಳ
ಲೆಡಹಿ ಕಾಣದೆ ಕಮಲಭವ ಭವಲೋಕಪಾಲಕರು ೮

ಎನುತ ಮನದಲಿ ಕಂಗಳಲಿ ವಾ
ಕ್ಕಿನಲಿ ಹರಿಯನು ನೆನವುತೀಕ್ಷಿಸು
ತನುನಯದಲಭಿವರ್ಣಿಸುತ ಮಾರ್ಗಶ್ರಮವ ಮಱೆದು
ಜನಪ ಕೇಳಕ್ರೂರನೈದಿದ
ನನುಪಮರು ಸಹಿತಾವುದಚ್ಚರಿ
ಜನನ ಮರಣ ಕ್ಲೇಶವನು ಮಱೆಯರೆ ತದಾಶ್ರಿತರು ೯

ಬಾರದಿರನಕ್ರೂರನೊಡನಸು
ರಾರಿ ಬಲರೆನುತಲ್ಲಿಗಲ್ಲಗೆ
ದಾರಿಯಿಕ್ಕೆಲದಲ್ಲಿ ತತ್ತದ್ದೇಶ ಜನನಿಕರ
ಹಾರುತಿರ್ದುದುಪಾಯನಂಗಳ
ಭೂರಿ ಸಂವರಣೆಯಲಿ ಬಳಿಕದ
ನಾರು ಹವಣಿಸಬಹುದು ಬಹಳೋತ್ಸವದ ಸಂಭ್ರಮವ ೧೦

ಇಳೆಯ ಜನವಾ ರಾಮುಕೃಷ್ಣರ
ಚೆಲುವ ಮೂರ್ತಿಯ ಕಂಡು ಕಣ್ಣಲಿ
ಮುಳುಗಿ ಮೊಗೆದೀಂಟದರು ಮಾಣದೆ ತನ್ಮುಖಾಂಬುಜವ
ಲಲಿತ ಮಧುರ ಸ್ಮೇರ ನಯನ
ಸ್ಖಲಿತಸುಧೆಯನು ಭಲರೆ ಭಾಪುರೆ
ನಳಿನಭವನೀ ಸೃಷ್ಟಿಗಿಂದಿನಲಾಯ್ತು ಫಲವೆನುತ ೧೧

ಅಂಗನೆಯರೊಡಲೊಳಗೆ ಕಾಮನ
ಹೊಂಗಱಿಯ ಹೊಸಬಾಣ ಬಾಧಿಸಿ
ಬೆಂಗೆ ಮೂಡಿದುದೇನನೆಂಬೆನು ತಾಪವನು ತುಂಬಿ
ಕಂಗಳೈದವು ತೃಪ್ತಿಯನು ಹರಿ
ಯಂಗಲಕ್ಷ್ಮಿಯನೀಕ್ಷಿಸುತ ಸ
ರ್ವಾಂಗದಲಿ ಸಿಲುಕಿತ್ತು ತೆತ್ತುದು ತನುವಮನಧನವ ೧೨

ಅವನಿಪತಿ ಕೇಳತಿಕೃಪೆಯಲವ
ರವರ ಕಾಣಿಸಿಕೊಳುತ ಪುರುಷಾ
ರ್ಥವನು ಕರುಣಿಸುತೆಲ್ಲರಿಗೆ ಕರುಣಾಕಟಾಕ್ಷದಲಿ
ಅವರ ಕಣುಮನಗಳನು ಬಲ ಮಾ
ಧವರು ವಾಸನಿಸುತ್ತ ನಡೆದರು
ಸವನಿಸಿದ ಸೌಹಾರ್ದದಲಿ ಮಧುರಾಪುರಾಂತಿಕಕೆ ೧೩

ಅತ್ತಲನ್ನೆಗ ಗೋಪರಾ ಪುರು
ಷೋತ್ತಮಾಕ್ರೂರರ ಬರವ ಹಾ
ರುತ್ತ ನಂದಾದಿಗಳು ಮಧುರಾಪುರದ ಹೊಱವಳಲ
ಹತ್ತಿರದ ವನದೊಳಗೆ ಬಿಟ್ಟರು
ವಿಸ್ತರದ ಬೀಡಿಕೆಯ ಭಂಡಿಗ
ಳೊತ್ತರಿಸಿದೆಳೆದಳಿರುಗಳ ತಣ್ಣೆಳಲ ತಂಪಿನಲಿ ೧೪

ಬಂದರಲ್ಲಿಗೆ ರಾಮ ಕೇಶವ
ಗಾಂದಿನೀ ನಂದನರು ಬರುತರ
ವಿಂದನಾಭನು ನಗುತಲಕ್ರೂರನನು ಕೈವಿಡಿದು
ಎಂದನೀ ರಥಸಹಿತ ಹೋಗಾ
ಮುಂದೆ ತಾವೀ ಯಿರುಳನಿದಱೊಳು
ಹಿಂದುಗಳೆದೈತಹೆವು ತಡೆಯದೆ ಮನೆಗೆ ಹೋಗೆನುತ ೧೫

ಹೋಗು ಮನೆಗೆಂದೆಂಬ ಕರುಣಾ
ಸಾಗರನ ಮೊಗನೋಡಿ ಮಿಗೆ ತಲೆ
ವಾಗಿ ಕಂಗಳಲೊಱೆವ ಶೋಕಾಶ್ರುಗಳ ಪೂರದಲಿ
ತೂಗಿದನು ನಿಜಶಿರವ ವಿಹ್ವಲ
ನಾಗಿ ಕೃಷ್ಣಪದಾಬ್ಜ ವಿರಹದ
ಬೇಗೆಯಲಿ ಬೆಂಡಾಗಿ ಬಿನ್ನಹವೆಂದನಕ್ರೂರ ೧೬

ದೇವ ಮನೆಯೆಂದೆನುತ ತೊಳಲುವ
ಜೀವರಿಗೆ ನಿನ್ನಂಘ್ರಿಯುಗ ರಾ
ಜೀವವಿದೆಲಾ ಮನೆ ಜಗಕ್ಕಕುತೋಭಯಸ್ಥಿತಿಗೆ
ಏವುದೀ ಮನೆ ಮಕ್ಕಳೆಂಬೀ
ಭಾವಭೇದ ಭ್ರಾಂತಿ ವಿಫಲವ
ಲಾ ವಿಚಿತ್ರಸ್ವಪ್ನವಿಭ್ರಮವೆಂದನಕ್ರೂರ ೧೭

ಬಿಟ್ಟೆ ನಿನ್ನೀ ಚರಣಕಮಲದ
ವಿಷ್ಟರದ ಸನ್ನಿಧಿಯನೆಂತೈ
ಕಷ್ಟಮತಿ ತಾ ಹೋಹೆನೆನ್ನಯ ಮನೆಗೆ ನೀನೆಂತು
ಬಿಟ್ಟು ಕಳುಹುವೆ ಶರಣನನು ದಯೆ
ಗೆಟ್ಟು ಹರಹರ ಪರಮಕರುಣಾ
ದೃಷ್ಟಿಗಕಟಕಟೀಕೆ ಬಾಹಿರನಾದೆ ನಾನೆಂದ ೧೮

ಆಡಲಮ್ಮೆನು ತನ್ನ ಮನೆಯಲಿ
ಬೀಡಿಕೆಯ ಚಿತ್ತವಿಸಿ ಕೃಪೆಯನು
ಮಾಡುವುದು ನಿನ್ನವನು ತಾನು ಸನಾಥನೆಂಬುದನು
ನಾಡಱಿಯೆ ತೋಱಿಸುವುದನೇ
ಬೇಡಿಕೊಂಡೆನು ಚರಣಕಮಲವ
ನೋಡಿ ಸಂತಸವಡಲಿ ತನ್ನವರೆಂದನಕ್ರೂರ ೧೯

ಮತ್ತೆ ತನ್ನಯ ಪಿತೃಗಳಕ್ಷಯ
ತೃಪ್ತಿವಡೆಯಲಿ ದೇವತೆಗಳೆನ
ಗತ್ಯಧಿಕ ಸಂತುಷ್ಟರಾಗಲಿ ಸಲೆ ಹುತಾಶನರು
ಕೃತ್ಯವನು ತೀರಿಸಲಿ ನಿಮ್ಮಡಿ
ಯುತ್ತಮಾಂಘ್ರಿಸರೋಜ ತೀರ್ಥವ
ನಿತ್ತು ತನ್ನಯ ಗೃಹವ ಪಾವನ ಮಾಡಬೇಕೆಂದ ೨೦

ಬಲಿಯು ದಾನವ ಪಾದಕಮಲವ
ತೊಳೆದು ಭುವನಶ್ಲಾಘ್ಯನಾಗನೆ
ನೆಲಸನೇ ಸುರರಾಜ ತೇಜದ ಬಹಳ ವಿಭವದಲಿ
ಸಲುಗೆವಡೆಯನೆ ನಿನ್ನ ಪಾರ್ಷದ
ರೊಳಗೆ ನಿನ್ನವನೆನಿಸಿಕೊಳ್ಳನೆ
ಜಲಜದೃಶ ತತ್ಪಾದತೀರ್ಥವ ಕರುಣಿಸುವುದೆಂದ ೨೧

ದೇವ ನಿನ್ನೀ ಚರಣಯುಗಳನ
ಖಾವನೇಜನಿವಾರಿ ತ್ರಿಜಗ
ತ್ಪಾವನೆಯಲಾ ಗಂಗೆಯೆನಿಸಿ ಪವಿತ್ರಕರೆಯೆನಿಸಿ
ಆ ವಿರಿಂಚನು ತೊಳೆದನಾ ಗೌ
ರೀವರನು ಧರಿಸಿದನು ಶಿರದಲಿ
ದೇವಲೋಕವನೈದಿಸಳೆ ಸಗರಾತ್ಮಜರನೆಂದ ೨೨

ಮುನ್ನ ಜನಿಸಿದ ಗಂಗೆ ಪುನರು
ತ್ಪನ್ನವಾಗಲಿ ಲೋಕಪಾವನೆ
ತನ್ನ ಮನೆಯಂಗಣದ ಮಧ್ಯದಲೆಲೆ ಕೃಪಾನಿಧಿಯೆ
ನಿನ್ನ ಚರಣದ ದಾಸನಾನೆಂ
ಬುನ್ನತೋನ್ನತ ತೇಜವನು ಸಂ
ಪನ್ನಗುಣವಾರಿಧಿಯೆ ಕರುಣಿಸಬೇಹುದೆನಗೆಂದ ೨೩

ಬಿಡೆನು ನಿನ್ನ ಪದಾರವಿಂದವ
ನೊಡೆಯ ಕರುಣಿಸು ತನ್ನ ಮನೆಯಲಿ
ಬಿಡಿಸುವುದು ಬೇಡಿಕೆಯನೆಂದಕ್ರೂರನಂಘ್ರಿಯಲಿ
ಬಿಡದೆ ಹೊರಳುತ್ತಿರಲು ಕಂಬನಿ
ದೊಡೆದು ತಕ್ಕಯಿಸುತ್ತ ಮಿಗೆ ಮೈ
ದಡವಿ ಸಂತವಿಸುತ್ತ ಸರ್ವೇಶ್ವರನು ನೇಮಿಸಿದ ೨೪

ಬಹೆನು ತಾನೆಲೆ ತಂದೆ ಪರಿಜನ
ಸಹಿತ ನಿನ್ನಾಲಯಕೆ ಕೊಂದೀ
ಕುಹಕಿಯನು ಬಳಿಕಖಿಳ ಬಾಂಧವಜನವ ಸಂತವಿಸಿ
ವಿಹಿತವೆನಗಿದು ತನ್ನ ಭಕುತರ
ಗೃಹದಲಾರೋಗಿಸುವವೋಲೆನ
ಗಹುದೆ ತುಷ್ಟಿ ಜಡಾಗ್ನಿಹೋತ್ರದಲೆಂದನಸುರಾರಿ ೨೫

ಎಂದು ಕೈವಿಡಿದನುನಯದಲಾ
ಗಾಂದಿನೀತನಯನನು ಕಳುಹಿ ಮು
ಕುಂದನಿಳಿದನು ರಥವನಗ್ರಜಸಹಿತ ನಲವಿನಲಿ
ಕೊಂದನಕಟಾ ವಿಧಿಯೆನುತ ರಥ
ದಿಂದ ಪುರವನು ಹೊಕ್ಕು ತನ್ನಯ
ಮಂದಿರವನೈದಿದನು ವೈಷ್ಣವನರಸನನು ಕಂಡ ೨೬

ಬೀಳುಕೊಟ್ಟಕ್ರೂರನನು ಸಿರಿ
ಲೋಲ ರಾಮರು ಪುರದ ಬಾಹ್ಯ ವಿ
ಶಾಲ ವನದಲಿ ಬಿಡಿಸಿ ಸಂವರಣೆಗಳ ಭಂಡಿಗಳ
ಸಾಲೆಸೆಯಲಾ ಕೆಳೆಯ ಗೋಪರ
ಮೇಳದಲಿ ಕಡೆಹಗಲ ಜಾವದ
ವೇಳೆಯಲಿ ಹೊಱವಂಟರೊಪ್ಪಿರಲೀಕ್ಷಿಸಲು ಹೊಳಲ ೨೭

ಕೋಟೆಗಳ ನವರತ್ನ ಚಿತ್ರ
ಸ್ಫಾಟಿಕದ ರಚನೆಗಳ ವಜ್ರಕ
ವಾಟ ನಿಕರದ ಕನಕನಿರ್ಮಿತ ತುಂಗಗೋಪುರದ
ಕೋಟೆಯನು ಪರಿಸರ ಪುರೋದ್ಯಾ
ನಾಟವಿಯ ರಮ್ಯೋಪವನ ತರು
ಕೋಟಿಯನು ಕಾಣುತ್ತ ಕಂಡನು ಪುರವನಸುರಾರಿ ೨೮

ಹೊಳೆಹೊಳೆವ ನವಕನಕ ಹರ್ಮ್ಯ
ಸ್ಥಳದ ಶೃಂಗಾಟಕದ ಮಾರ್ಗದ
ಕೆಲದಲೆಸೆವಾ ಶ್ರೇಣಿಗಳ ಸಭೆಗಳ ಮನೋಹರದ
ಲಲಿತ ಘನವೈಢೂರ್ಯ ಮುಕ್ತಾ
ಫಲ ಮಹಾಸ್ಫಾಟಿಕೇಂದ್ರನೀಲಾ
ವಳಿಯ ರಚನೆಯ ಭಿತ್ತಿಗಳ ವೇದಿಗಳ ರಚನೆಯಲಿ ೨೯

ಹೊಳೆವ ಹೊಸಭಿತ್ತಿಗಳ ರತ್ನ
ಸ್ಥಳದ ಕಂಗೊಳಿಸುವ ಗವಾಕ್ಷಾ
ವಳಿಯಲಾಡುವ ಬರುಹಿ ಪಾರಾವತ ಮೃದುಸ್ವನದ
ತಳಿರುಗಳ ತೋರಣದ ಗುಡಿಗಳ
ನೆಳಲು ಮರಗಳ ತಿಂಥಿಣಿಯ ಶೀ
ತಳ ತರುಚ್ಛಾಯೆಯಲಿ ಮೆಱೆವಾ ಪುರವರವ ಕಂಡ ೩೦

ಅಂಗಣದ ವೀಥಿಗಳ ಥರವಿಡಿ
ದಂಗಡಿಯ ಪಣ್ಯೋಪಕರಣದ
ತುಂಗರಚನೆಯ ರಾಜಮಾರ್ಗದ ವರಪತಾಕೆಗಳ
ಹೊಂಗೊನೆಯ ಕದಳಿಗಳ ಪೂಗವ
ನಂಗಳಲಿ ಪುರಲಕ್ಷ್ಮಿ ನೋಳ್ಪರ
ಕಂಗೊಳಿಸಲೀಕ್ಷಿಸುತ ನಡೆದರು ರಾಮ ಮಾಧವರು ೩೧

ಹಲವು ಕನಕದ ಪೂರ್ಣಕಲಶಂ
ಗಳಲಿ ತನ್ಮುಖನಿಹಿತದರ್ಪಣ
ಗಳಲಿ ಧಾನ್ಯಾಕ್ಷತ ಫಲಾಂಕುರ ಪಲ್ಲವಂಗಳಲಿ
ಹೊಳೆಹೊಳೆವ ನವರತ್ನದೀಪಾ
ವಳಿಗಳಲಿ ಲಾಜೇಕ್ಷುದಂಡಂ
ಗಳ ಮಹಾಭಾರದಲೆಸೆವ ಪುರಲಕ್ಷ್ಮಿಯನು ಕಂಡ ೩೨

ಆನೆಗಳ ಕುದುರೆಗಳ ತೇರ್ಗಳ
ಮಾನವರ ದಾನವರ ಭಾಷೆಯ
ಮಾನವಂತರ ವೀರಪರಿವಾರದ ಪಸಾಯತರ
ಜಾನಪದ ಜನ ಪೌರಜನ ಸಂ
ಧಾನವನು ಮಾಳ್ಪವರನಿಪ್ಪಜ
ನಾನುರಂಜಿತ ಮಂತ್ರಿಗಳ ಪುರಲಕ್ಷ್ಮಿಯನು ಕಂಡ ೩೩

ಕಂಡು ಮರಳುವ ಧರೆಯ ರಾಯರ
ಮಂಡಲಾಧೀಶ್ವರರ ಸುಭಟರ
ತಂಡವನು ಮುಂಕೊಂಡು ಕಾಣಲು ಬಹ ಮಹೀಶ್ವರರ
ತಂಡವನು ಕಂಸನಲಿ ಸಲುಗೆಯ
ದಂಡನಾಥರ ಪಾರ್ಶ್ವಮುಖದು
ದ್ದಂಡ ತೇಜದ ವೀರರನು ನೋಡುತ್ತ ನಡೆತಂದ ೩೪

ಡೆಂಕಣೆಯು ಗವಣೆಗಳ ಕೋಟೆಯ
ಕೊಂಕುಗಳ ಕೊತ್ತಳದ ತೆನೆಗಳ
ಪಂಕದುರು ಪರಿಖೆಗಳ ನಾನಾ ಯಂತ್ರಕೋಟಿಗಳ
ಅಂಕದೊಡ್ಡವಣೆಗಳ ಬಲು ಭಾ
ರಂಕ ದುರ್ಗವನೀಕ್ಷಿಸುತ ಬಲ
ಪಂಕಜಾಕ್ಷರು ಹೊಳಲ ಹೊಗುತಂದರು ವಿನೋದದಲಿ ೩೫

ಆ ಮಹಾಪುರ ಭವನನಿಕರದ
ಸೋಮ ಸೂರಿಯ ವೀಥಿಗಳ ಸಂ
ಗ್ರಾಮ ಧೀರರು ಕೇರಿಕೇರಿಗಳೊಳಗೆ ನಡೆತರಲು
ರಾಮ ಮಾಧವರೆಸೆದರಂದಾ
ಭೂಮಿಲಂಬದ ಪುರಜನದಲು
ದ್ದಾಮ ವಿಕ್ರಮರಖಿಳ ಜನಮನಗಳನು ಮೋಹಿಸುತ ೩೬

ದೂರದಿಂದಾ ರಾಮಕೃಷ್ಣರು
ದಾರ ಮೂರ್ತಿಯನೀಕ್ಷಿಸುತ ಪರಿ
ವಾರ ಪುರಜನ ದೇಶಜನಗಳುದಾರ ಕೀರ್ತಿಗಳ
ಭೂರಿ ತೇಜೋಗುಣದ ರೂಹಿನು
ದಾರಲಕ್ಷ್ಮಿಯ ಬಹಳ ಪಾರಾ
ವಾರದಲಿ ಜನ ಮೂಡಿ ಮುಳುಗಾಡಿದುದು ನಿಮಿಷದಲಿ ೩೭

ಬರಲು ಪುರಜನ ಕಾಣಿಕೆಯನಿ
ತ್ತಿರದಿದಿರುಗೊಂಡರ್ಘ್ಯ ಪಾದ್ಯಾ
ದ್ಯುರುತರದ ಪೂಜೆಯಲಿ ಮನ್ನಿಸಿ ಚರಣಯುಗಳದಲಿ
ಶಿರವೆಱಗಿ ಕಣ್ದಣಿಯೆ ಬಲ ಕೃ
ಷ್ಣರನು ನಡೆನೋಡುತ್ತ ಸುಖ ಸಾ
ಗರದಲೋಲಾಡುತ್ತಲಿದ್ದುದು ಸಕಲಜನ ಸಹಿತ ೩೮

ಬೆರಸಿ ಸಾಗರಜಲವ ನದಿಗಳು
ಮರಳಲಱಿಯದವೋಲು ಕೃಷ್ಣನ
ಪರಮ ಮಂಗಳ ದಿವ್ಯಮೂರ್ತಿ ವಿಳಾಸಲಕ್ಷ್ಮಿಯನು
ಬೆರಸಿದಾ ಪುರಜನದ ಕಂಗಳ
ಮರಳುದಲೆಯನದಾರು ಕಂಡವ
ರಿರದೆ ಬೀದಿಯ ಚಿತ್ರದಂತಿರ್ದುದು ಬುಧಸ್ತೋಮ ೩೯

ಹೇಳುವೆನು ತಾನೇನನುತ್ಸವ
ದೇಳಿಗೆಯ ಸಂಭ್ರಮವನಾ ಜನ
ಜಾಲದಾವಿರ್ಭೂತ ಹರ್ಷೋದ್ರೇಕದುರವಣೆಯ
ಓಲಗಿಸಿ ವೈದಣಿಯದೀಕ್ಷಿಸು
ತಾಲಿಗಳು ದಣಿಯವು ಪರಸ್ಪರ
ಹೇಳಿ ದಣಿಯವು ನಾಲಿಗೆಗಳಚ್ಯುತನ ಗುಣಗಣವ ೪೦

ಅರಸ ಕೇಳಾ ಪುರವಧುಗಳಂ
ಬರುಹನಾಭನು ರಾಜಮಾರ್ಗಕೆ
ಬರಲು ತದ್ವಾರ್ತೆಯನು ಕೇಳುತ ಕೇಳುತವೆ ತನುವ
ಮಱೆದು ಕಿವಿವೇಟದಲಿ ತನ್ಮುಖ
ಸರಸಿರುಹ ಸಂದರುಶನಕೆ ಕಾ
ತರಿಸುತಿರದೇಱದರು ಮಣಿ ಮಾಡಂಗಳನು ನಲಿದು ೪೧

ಕೆಲರುಣುತ್ತುಣುತಿದ್ದವರು ಹರಿ
ಬಲರ ಬರವನು ಕೇಳಿ ಕಾಮಾ
ಕುಲಿತೆಯರು ಬೀಸಾಡಿ ಹರಿವಾಣಗಳನು ತಮತಮಗೆ
ನಳಿನಮುಖಿಯರು ನಯನಜನ್ಮದ
ಫಲವ ಪಡೆದೆವೆನುತ್ತ ಹವರ್‍ಯಾ
ವಳಿಗಳನು ಹತ್ತಿದರು ಹರಿಯನು ಕಾಂಬ ತವಕದಲಿ ೪೨

ಕೆಲರು ತೊಟ್ಟರು ಕಡಗವನು ಕಿವಿ
ಗಳಲಿ ಕಾಲಂದುಗೆಗಳನು ಕೈ
ಗಳಲಿ ಕಿವಿಯೋಲೆಯನು ಬೆರಳ್ಗಳಲಿಟ್ಟರುಟ್ಟುದನು
ಕಳೆದು ಬಿಸುಟುಡೆಗಳಲಿ ಸುತ್ತಿದ
ರೊಲಿದು ಪೂಮಾಲೆಗಳನಾ ಮುಡಿ
ಗಳಲಿ ಮಣಿ ಮೇಖಲೆಗಳನು ತುಱುಬಿದರು ತರಳೆಯರು ೪೩

ಒಂದು ಕಣ್ಣಲಿ ಕಾಡಿಗೆಯನಕ
ಟೆಂದುವದನೆಯರೆಚ್ಚುತವೆ ಮ
ತ್ತೊಂದು ಕಣ್ಣನು ಮಱದರೆಚ್ಚಲು ಪೊನ್ನದೊಡಿಗೆಗಳ
ಒಂದನುಳಿದೊಂದೊಂದ ತೊಟ್ಟರು
ಬಂದರಾ ಭುವನಾಧಿಪತಿ ಗೋ
ವಿಂದನನು ಕಾಂಬೊಂದು ಬಹಳೋತ್ಸವದ ತವಕದಲಿ ೪೪

ಕೆಲರು ತೈಲಾಭ್ಯಕ್ತೆಯರು ವರ
ಲಲನೆಯರು ಮಜ್ಜನವ ಮಱೆದರು
ಕೆಲರು ಶಿಶುಗಳಿಗೂಡುತವೆ ಬೀಸಾಡಿ ಶಿಶುಗಳನು
ಕೆಲರು ಕಸ್ತುರಿ ಚಂದನವ ತಲೆ
ಗಳಲಿ ಪೂಸಿಕೊಳುತ್ತ ಪರಿಯಾ
ಕುಳೆಯರಾದರು ಪರಮ ಪುರುಷೋತ್ತಮನ ದರುಶನಕೆ ೪೫

ಒಸಗೆವಱೆಗಳ ದನಿಗೆ ಸತಿಯರು
ಬಿಸುಟು ಮನೆವಾರ್ತೆಯನು ನವಿಮ್ಮಾ
ಕುಸುಮಬಾಣನ ತಂದೆ ಬಂದನೆನುತ್ತ ತಮತಮಗೆ
ಮಿಸುಪ ಮೊಲೆಗಳ ಮೋಳಕಾತಿಯ
ರಸುಗಳನೆ ಕಾಣಿಕೆಯನಿತ್ತೀ
ಕ್ಷಿಸುತಲಿರ್ದರು ಕೂಡೆ ಮನೆಮನೆಗಳ ಗವಾಕ್ಷದಲಿ ೪೬

ಅರಳುಗಂಗಳ ಚೆಲುವ ಬಿಂಬಾ
ಧರ ಮೃದುಸ್ಮಿತ ದಂತಪಂಕ್ತಿಯ
ಬಿರಿ ಮುಗುಳ ನಾಸಿಕದ ಕದಪಿನ ಚಾರುಕುಂಡಲದ
ಕೊರಳ ಮುತ್ತಿನ ಸರದ ಕುಚಯುಗ
ಭರದ ಸುಳಿಗುರುಳುಗಳ ಕಾಮಿನಿ
ಯರು ಗವಾಕ್ಷಂಗಳನಲಂಕರಿಸಿದರು ಮುಖಗಳಲಿ ೪೭

ನಾರಿಯರು ನಡೆನೋಡಿ ಕೃಷ್ಣನ
ಚಾರು ಮಂಗಳಮೂರ್ತಿಯನು ದಾ
ತಾರನಾಗೆಮಗೆಲ್ಲರಿಗೆ ಧರೆಗೊಡೆಯನಾಗೆನುತ
ಭೂರಿ ಪುಷ್ಪಾಂಜಲಿಯನಿತ್ತುಪ
ಚಾರವನು ಲಾಜಾಕ್ಷತಾಂಕುರ
ಸಾರನಯನಾಪಾಂಗ ವೀಕ್ಷಣಗಳಲಿ ರಚಿಸಿದರು ೪೮

ಈತನೀ ದೇವಕಿಗೆ ಗಡ ಸಂ
ಜಾತನಾದನು ಪೂರ್ವದಲಿ ಸಾ
ಕ್ಷಾತ ವಿಷ್ಣುವೆ ಗಡ ದುರಾತ್ಮನ ಕಂಸಭೂಪತಿಯ
ಭೀತಿಯಲಿ ವಸುದೇವನೊಯ್ದಿರಿ
ಸೀತನನು ಗೋಕುಲದಲಿನ್ನೆಗ
ವೀತನೀತನು ಬೆಳವುತಿರ್ದನು ಗೋಪಸದನದಲಿ ೪೯

ಜಗವ ಸೃಜಿಸಿದ ಕಮಲಸಂಭವ
ನೊಗೆದನೀತನ ನಾಭಿಯಲಿ ಗಡ
ಹಗಲಿರುಳನೊಡೆಯರುಗಳೀತನ ನಯನಸಂಭವರು
ದಿಗಧಿಪರು ಗಡ ದಾಸರೀತನ
ಜಗದಳವು ಸೋಂಕದು ಗಡೆಂತುಟೊ
ಬಗೆವಡೀತನ ಮಹಿಮೆಯೆನುತಿರ್ದುದು ವಧೂನಿವಹ ೫೦

ಹಿರಿಯನೀತಂಗೀತನೀ ಶಶಿ
ಕಿರಣ ಕಮನೀಯಾಂಗನವನಿಯ
ಧರಿಸಿದಾ ಸಾಕ್ಷಾತ ಶೇಷನು ಕಂಡ ರೋಹಿಣಿಗೆ
ವರತನಯನೀ ಗೋಪಪರಿವರನು
ಚರರು ಪುಣ್ಯಾತ್ಮಕರೆನುತ ಪಂ
ಕರುಹಮುಖಿಯರು ಹೊಗಳುತಿರೆ ನಡೆತಂದರೀಕ್ಷಿಸುತ ೫೧

ನೋಡಿ ನೋಡಿ ಮುಕುಂದನನು ತನು
ಬಾಡಿ ಮನುಮಥನಲಗು ಮುಱುವೊನೆ
ಮೂಡಿ ಮುಗುದೆಯರಿರಲು ಮಾಡಿದ ಚಿತ್ರದಂದದಲಿ
ಆಡಲೇಕದ ಜಗದ ವಶ್ಯವ
ಕೂಡೆ ಚೆಲುವರ ಮೂರ್ತಿಯನು ವಿಧಿ
ಜೋಡಿಸಿದನೆನುತಿರ್ದುದಂದಾ ಸಕಲ ಜನನಿವಹ ೫೨

ಆವ ಮೋಹನಮೂರ್ತಿಯೋ ಮೇ
ಣಾವ ಪಾವನಕೀರ್ತಿಯೋ ರಾ
ಜೀವಲೋಚನನಕಟ ನೋಳ್ಪರ ಕಣು ಮನಂಗಳನು
ಲಾವಣಿಗೆ ಗೊಂಡನು ಜಗತ್ರಯ
ಜೀವನಕೆ ತಾನೊಬ್ಬನೇ ದಿಟ
ಜೀವ ಚೇತನ ರೂಪನೆಂಬುದನಱುಹುವಂತಿರ್ದ ೫೩

ಆ ಸತೀ ನಿಕುರುಂಬದೊಳಗಾ
ದೇಶಜನ ಪುರಜನ ಮಹಾ ವಾ
ರಾಶಿಯೊಳಗತ್ಯಧಿಕ ರೂಪೌದಾರ್ಯ ಗುಣಗಣದ
ಬೀಸುವಲೆಗಳ ಬಹಳ ತರದ ವಿ
ಳಾಸಹಾಸೇಕ್ಷಣದಲಾ ಬಲ
ಕೇಶವರು ನಿತ್ಯಾತ್ಮ ಸುಖವನು ಸಲಿಸಿದರು ಜಗಕೆ ೫೪

ಮೂವತ್ತಾರನೆಯ ಸಂಧಿ ಮುಗಿಯಿತು.

# ಮೂವತ್ತೇಳನೆಯ ಸಂಧಿ

ಕೊಂದು ರಜಕನನಾ ಸುದಾಮನ
ಮಂದಿರವನೀಕ್ಷಿಸಿ ಕುಬುಜೆಗಾ
ನಂದವನು ಮಾಡಿದರು ಮುಱಿದರು ಹರಿಬಲರು ಧನುವ

ಅರಸ ಕೇಳಾ ರಾಮಕೃಷ್ಣರು
ಬರುತ ಕಂಡರು ರಾಜ ಮಾರ್ಗದ
ಉರವಣಿಸಿ ಪರಿಜನದಲೆಯ್ತಹ ರಾಜರಜಕನನು
ಮುರಿದ ಹುಬ್ಬಿನ ಬಿಟ್ಟ ಕಂಗಳ
ಬೆರಳ ಮೀಸೆಯ ಬಿಗಿದ ಬಿಂಕದ
ದುರುಳನನು ನುಡಿಸಿದರು ನೆರವಿಗಳೀಕ್ಷಿಸಲು ನಗುತ ೧

ನಿಲ್ಲು ಹೋಗದಿರೆಲವೊ ನಮ್ಮನು
ಬಲ್ಲದೇನೈ ನುಡಿಸಲೇತ
ಕ್ಕೊಲ್ಲೆ ನಿನ್ನೊಡೆಯಂಗೆ ನಾವಳಿಯಂದಿರೆಂಬರಲ
ಬಲ್ಲಿದನು ನೀ ರಂಗಗಾಱರಿ
ಗೆಲ್ಲ ಮಡಿ ಲೇಸಾಯ್ತು ಕೊಡು ನಿನ
ಗುಳ್ಳ ವಸನದಲುತ್ತಮವ ನಮಗೆಂದನಸುರಾರಿ ೨

ಕೊಡುವುದಿಬ್ಬರಿಗೆರಡು ವಸ್ತ್ರವ
ನುಡಲು ತಕ್ಕುದನಕಟ ನಮ್ಮನು
ಪೊಡವಿಯಾ ಜನ ರಾಯನಳಿಯಂದಿರುಗಳೆಂದೆಮ್ಮ
ಅಡಿಗೆಱಗುತಿದೆ ನೀನದೇತಕೆ
ಕಡೆಗಣಿಸಿ ಗರ್ವದಲಿ ಮುಂದಡಿ
ಯಿಡುವೆ ಹೋಗದಿರೆನಲು ಕೇಳಿದು ರಜಕನುಱೆ ಮುಳಿದ ೩

ಅಡವಿಯಲಿ ಸಂಚರಿಸುವವರಿಂ
ಗುಡಲು ತಕ್ಕುದ ಕಾಣೆನೇತಕೆ
ಬಡವುಗಳಿರೀ ವಸ್ತ್ರವನು ಬಯಸುವಿರಿ ಬಣಗುಗಳು
ಉಡುವಿರೇನೈ ನೀವು ತನ್ನಯ
ಮಡಿಗಳಿಗೆ ಮೆಚ್ಚಿದಿರಿ ಬೀದಿಯ
ಕಡೆಯಲಿದೆಲಾ ವಸ್ತ್ರ ನಿಮುಗುಡತಕ್ಕುವವೆಯೆಂದ ೪

ಉರ್ವಿಯೊಳಗೀ ನಿಮ್ಮ ಹೋಲುವ
ಗರ್ವಿತರ ನಾ ಕಾಣೆನೇತಕೆ
ಕೊರ್ವಿ ಸಾವಿರಿ ಬಱಿದೆ ರಾಜದ್ರವ್ಯವನು ಬಯಸಿ
ತುಬ್ಬಿದರೆ ನೃಪನವರು ನಿಮ್ಮನು
ಸರ್ಬಧನವನು ಕೊಂಡು ಕಾಲಿಗೆ
ಕಬ್ಬುನದ ಕಡೆಯವನು ತೊಡಿಸುವರಳಯದಿರಿಗೆಂದ ೫

ಮಱಿಯ ಮಾಡಿಸಿ ಕೊಡುವೆನೀ ಪರಿ
ಮುಱುಕಿಸಿದೊಡೊಲಿದಂತೆ ಗೆಡೆವರೆ
ಕುಱುಬರಿರ ನಗರವಿದು ಗಿರಿತಟವಲ್ಲ ವನವಲ್ಲ
ತೆಱನನಱಿಯಿರಿ ರಾಜನೀತಿಯ
ಬಱಿದೆ ಸಾಯದೆ ನೋಯದೆಲ್ಲರ
ಪರಿಯಲುಸುರದೆ ಹೋಗಿ ಬದುಕುವಡೆಂದು ಖಳ ಜಱಿದ ೬

ಎಲವೊ ಜಱಿಯದಿರಿಳೆಗಧೀಶ್ವರ
ನೊಲುವ ಮಡಿಗಳನೆಂದು ಬೇಡಿದ
ಡುಲಿವೆ ಮನಬಂದಂತೆ ಫಡ ಹೋಗದಿರು ಹೋಗದಿರು
ಒಲಿದು ಕೊಟ್ಟಡೆ ಲೇಸನೀ ಕೈ
ಯೊಳಗೆ ತೋಱುವೆನಲ್ಲದಿರ್ದಡೆ
ತಲೆಸಹಿತ ಮಡಿವರ್ಗ ತನ್ನದೆನುತ್ತ ಹರಿ ನುಡಿದ ೭

ಉಡಲು ವಸ್ತ್ರವ ಹಡೆಯೆ ಲೇಸನು
ಕೊಡುವೆ ಗಡ ಲೋಗರಿಗೆ ಹರ ಹರ
ಕಡು ಕೃಪಣತನವೇಕೆ ಹೋಹರೆ ಹೋಗಿ ನೀವೆನುತ
ಜಡಿದು ಲಕ್ಷ್ಮೀಪತಿಯವಜ್ಞೆಯ
ಲೆಡಹಿ ಕಾಣದೆ ಪಾಪಿ ಧಟ್ಟಿಸಿ
ನಡೆದನಂತಕಪುರಕೆ ನಡೆವಂತಿರೆ ಸರಾಗದಲಿ ೮

ಬೇಡಿಕೊಳಲೇಕಕಟ ರಜಕನ
ನೋಡು ಮುಂಡೆಯ ಮಗನನಾರೆಂ
ದಾಡುವನು ಫಡಯೆನುತ ಸಂವರಿಸುತ್ತ ಮುಂಜೆಱಗ
ನೋಡಿ ಬಲಭದ್ರನ ಮೊಗವನೊಡ
ನಾಡಿಗಳ ನೆಳನಗೆಯ ರೋಷದ
ಲೀಡಿಱುವ ನಯನಚ್ಛವಿಯಲೆಯ್ದಿದನು ಬೆಂಬತ್ತಿ ೯

ಅಟ್ಟಿ ರಜಕನ ತಲೆಯನುಗುರಲಿ
ಸೃಷ್ಟಿಪಾಲಕರೊಡೆಯನವನಿಯ
ಲಟ್ಟಿ ಕೆಡೆಯಲು ಕೆಡಹಿ ದಿಗುಬಲಿಕೊಟ್ಟು ಬವರದಲಿ
ಕೆಟ್ಟೆವೆನುತುಳಿದವರು ಹೊಱೆಗಳ
ಬಿಟ್ಟು ಹಾಯ್ದರು ದೆಸೆದೆಸೆಗೆ ಕಂ
ಗೆಟ್ಟು ಕೃಷ್ಣನ ತೋಟಿಯೇ ಬೇಡೆನುತ ತಮುತಮಗೆ ೧೦

ಕಂಡವರು ಲೇಸಾಯ್ತು ಖಳನು
ದ್ದಂಡತನಕಿದು ಘನವೆ ಯೆನುತಾ
ಪುಂಡರೀಕಾಕ್ಷನನು ಹೊಗಳಿದರಂದು ಹರ್ಷದಲಿ
ಗಂಡುಗಲಿಗಳು ಬಳಿಕ ವಸನದ
ದಿಂಡುಗಳಲುತ್ತಮವನಾಯಿದು
ಕೊಂಡುಳಿದುವನಿತ್ತರಾ ಗೋಪರಿಗೆ ಪರಿಜನಕೆ ೧೧

ಆದಱೊಳೊಬ್ಬನು ಚಿಪ್ಪಿಗನು ಸೊಂ
ಪೊದವಿದಾ ಶ್ರೀರಾಮಕೃಷ್ಣರ
ಸದಮಳಾಮಳ ಮೂರ್ತಿಗಳ ಸೌಂದರ್ಯಸಂಪದವ
ವಿದಿತತೇಜವನೀಕ್ಷಿಸುತ ಪದ
ಪದುಮದಲಿ ತಲೆವಾಗಿ ತದ್ವ
ಸ್ತ್ರದಲಿ ಮಾಡಿದನಂಗಿಕೆಯನುರುತರ ಸುಲಕ್ಷಣವ ೧೨

ಅಂಗಲಕ್ಷ್ಮಿಗೆ ತಕ್ಕ ಹೊಸಪರಿ
ಯಂಗಭೂಷಣ ರಚನೆಗಳಲೆಸೆ
ವಂಗಿಕೆಯನೊಪ್ಪಿರಲು ನಿರ್ಮಿಸಿ ಭಾವಭಕ್ತಿಯಲಿ
ರಂಗನಾಥಾನಂತರಿಗೆ ಕೊಡ
ಲಂಗಸಾರೂಪ್ಯವನು ಕೊಟ್ಟು ರ
ಥಾಂಗಧರನಿಷ್ಟಾರ್ಥ ಸಿದ್ಧಿಯನಿತ್ತನಾತಂಗೆ ೧೩

ತೊಟ್ಟ ನಿಱಿಗುಪ್ಪುಸದಪಾಂಗಿನ
ಕಟ್ಟಿದುಡಿ ನೇವಳದ ಮಣಿಗಳ
ವಟ್ಟ ಪೀತಾಂಬರದ ನೀಲಾಂಬರದ ನಿಱುಗೆಗಳ
ಇಟ್ಟ ಮಣಿಕುಂಡಲದ ನಗೆಮೊಗ
ದಷ್ಟಭೂತಿಗಳೊಡೆಯರೆಸೆದರು
ಪಟ್ಟದಾನೆಯ ಮಱಿಗಳಂತಾ ಜನದ ಮಧ್ಯದಲಿ ೧೪

ಮುಂದೆಬರುತವೆ ಮಾಲೆಗಾಱರ
ಮಂದಿರಂಗಳನೀಕ್ಷಿಸುತ ಗೋ
ವಿಂದ ರಾಮರು ಕಂಡರೊಬ್ಬ ಸುದಾಮನೆಂಬವನ
ಮಂದಿರನ ನಿಜಭಕ್ತಿ ಜನನೀ
ಮಂದಿರನಸುರು ವಿನಯ ಗುಣಗಣ
ಮಂದಿರನನಭಿನವ ಸುಪುಷ್ಪಾಮೋದ ಮಂದಿರನ ೧೫

ಅರಸ ಕೇಳಾ ರಾಮಕೃಷ್ಣರ
ಬರವ ಕಾಣುತ ಪರನು ಹರುಷಾಂ
ಕುರಿತ ಪುಳಕಿತಗಾತ್ರನಂಘ್ರಿ ಸರೋಜಯುಗಳದಲಿ
ಶಿರವೆಱಗಿ ಕೈಗೊಟ್ಟು ನಿಜ ಮಂ
ದಿರಕೆ ಬಿಜಯಂಗೈಸಿ ತಂದಾ
ದರದಲಾರಾಧಿಸಿದನಂದು ಸುಧಾಮನೊಲವಿನಲಿ ೧೬

ಪಡಿಗದಲಿ ಪರಮೇಷ್ಠಿ ವಂದಿತ
ನಡಿಗಳನು ತೊಳೆವುತ್ತ ತೀರ್ಥವ
ನೊಡಲು ದಣಿಯಲು ತಳಿದುಕೊಂಡು ಕುಟುಂಬಜನ ಸಹಿತ
ಅಡಿಗಡಿಗೆ ಮೈಯಿಕ್ಕೆ ಪುಳಕಿದ
ಗುಡಿಯ ಕಂಗಳ ಪೂರ್ಣಕಲಶದ
ಗಡಣದೊಸಗೆಯಲೊಲಿದು ಬಳಿಕಿಂತೆಂದನವರೆಂಡನೆ ೧೭

ಹಿಂದೆ ನಾನಾಯೋನಿ ಶತದಲಿ
ಬಂದುದಕೆ ಫಲವಾಯ್ತು ಪಿತೃಗಳು
ಸಂದರಕ್ಷಯಗತಿಗೆ ತನ್ನೀಕುಲ ಪವಿತ್ರತೆಗೆ
ಇಂದು ಸೇರಿದುದೆನ್ನ ಭಾಗ್ಯದ
ಕಂದೆಱವೆ ಸಾಕ್ಷಾತ ವಿಷ್ಣುವೆ
ಮಂದಿರಕೆ ಬಹ ಬಹಳಭಾಗ್ಯೋದಯವಿದೆಂತೆಂದ ೧೮

ಕಾಣರಾವನ ಚರಣಕಮಲದ
ರೇಣುಗಳನಜ ಭವ ಸುರೇಂದ್ರ
ಶ್ರೇಣಿಗಳು ಹೊಗಳುವಡೆ ನೆಱೆಯವು ನಿಗಮಕೋಟಿಗಳು
ಕಾಣಲೆಂತೌ ಕಂಗಳಿಂಗೀ
ಪ್ರಾಣನಾಥನೆ ಸೇರಿದನು ನಿ
ರ್ವಾಣಮೂರ್ತಿಯೆನುತ್ತ ಹೊಂಪುಳಿಯೋದನಡಿಗಡಿಗೆ ೧೯

ದೇವ ನಿನ್ನೀನಾಭಿಯಲಿ ರಾ
ಜೀವಭವನುದಯಿಸಿದನೆಂಬರು
ಪಾವನಾಂಘ್ರಿಗಳಿವೆಯಲಾ ಮುನಿ ಹೃದಯಪಂಕಜದ
ಜೀವನಂಗಳು ಜಾಹ್ನವೀ ಪು
ಣ್ಯಾವಹಂಗಳು ಕಂಡೆ ನಾನಿ
ನ್ನಾವ ಜನ್ಮಾಂತರ ಸಹಸ್ರದ ಸುಕೃತದಿಂದೆಂದ ೨೦

ಧನ್ಯರಾರೆನ್ನಂತೆ ಜಗದಲಿ
ಮಾನ್ಯರಾರೆಲೆ ದೇವ ದೇವರು
ಮನ್ನಿಸುತ ಮನೆಗೊಲಿದು ಬಿಜಯಂಗೈದಿರೆಂದೆನಲು
ತನ್ನ ಪೋಲು ಸನಾಥರತಿ ಸಂ
ಪನ್ನಪುಣ್ಯರದಾರೆನುತ ಕರು
ಣಾರ್ಣವನ ಪದಕೆಱಗಿ ಮಗುಳೆ ಸುಧಾಮನರ್ಚಿಸಿದ ೨೧

ಮಾಲೆಗಾಱರ ದೇವನಾ ಶ್ರೀ
ಲೋಲ ರಾಮರನಿಂತು ಸಂತಸ
ದೇಳಿಗೆಯಲಭಿವರ್ಣಿಸುತ ತದ್ರೂಪ ಗುಣಗಣವ
ಕಾಲವೇಲಡೆಗೆಡೆದು ಪರಮ ಕೃ
ಪಾಳುಗಳು ನೀವಿಂದು ಬರಲೆ
ನ್ನಾಲಯಕೆ ಕರ್ತವ್ಯವಾವುದು ಬೆಸಸಬೇಕೆಂದ ೨೨

ಆವುದೆಂದೇನೆನ್ನ ಭಕ್ತರ
ಕಾವುದೇ ಕರ್ತವ್ಯ ಸಲೆ ಸಂ
ಭಾವಿಸುವುದೇ ಕೃತ್ಯವವರಿಷ್ಟಾರ್ಥಸಿದ್ಧಿಯನು
ಈವುದೇ ತನ್ನಿಷ್ಟವೇಳ್ವೆ
ಜೀವದೊಡೆಯನೆ ಬಾಯೆನುತ ಕರು
ಣಾವಲೋಕನದಿಂದ ಮೈದಡವುತ್ತ ಹರಿ ನುಡಿದ ೨೩

ಬಗೆಯ ಬಯಕೆಯನಱಿದು ಕೈಗಳ
ಮುಗಿದು ಚಿತ್ರಯಿಸುವುದು ನಿಮ್ಮಡಿ
ಮಗನ ಸೇವೆಯನೆನುತ ಸುರಗಿಯ ವೊಲ್ಲೆ ಮಲ್ಲಿಗೆಯ
ಮಗಮಗಿಸುವೆಳತುಳಸಿ ವನಮಾ
ಲೆಗಳನೊಪ್ಪಿರೆ ರಚಿಸಿ ಕರುಣಾ
ಳುಗಳ ದೇವನ ಮುಂದಿರಿಸಿ ಮೈಯಿಕ್ಕುತಿಂತೆಂದ ೨೪

ನಿತ್ಯತೃಪ್ತಂಗೇನನೀವೆನು
ತೃಪ್ತಿ ಪಡಿಸುವೆನೆಂತು ಲೋಕದ
ತೃಪ್ತಿ ರೂಪನನವ್ಯಯನನದ್ವಯನನಕ್ರಿಯನ
ಪತ್ರ ಪುಷ್ಪಫಲಂಗಳನು ನಿಜ
ಭಕ್ತರಿತ್ತರೆ ನಲಿದು ದೇವರು
ತುತ್ತುಗೊಂಬುದನೊಮ್ಮೆ ಕೇಳಿದು ಬಲ್ಲೆನಾನೆಂದ ೨೫

ಎಂದು ಕೈಗಳ ಮುಗಿದು ಚರಣ
ದ್ವಂದ್ವದಲಿ ತಲೆವಾಗಿ ಬಹುವಿಧ
ಕಂದ ಮೂಲ ಫಲೇಕ್ಷುದಂಡಂಗಳನು ಭಕುತಿಯಲಿ
ಸಂದ ಭಾಗವತೋತ್ತಮನು ನಲ
ವಿಂದ ಕೊಡಲದನೆಲ್ಲವನು ಕೃಪೆ
ಯಿಂದ ಕೈಕೊಳುತೊಲವುಮಿಗಲಿಂತೆಂದನಸುರಾರಿ ೨೬

ಬೇಡು ವರವನು ಮೆಚ್ಚಿದೆನು ನೀ
ಮಾಡಿದುಪಚಾರಕ್ಕೆ ನಿರ್ಮಳ
ಗಾಢ ಭಕ್ತಿಗೆ ವಿನಯ ಗುಣನಿರಹಮ್ಮಮತೆಗಳಿಗೆ
ಆಡಿ ಮೆಚ್ಚಿಸಲೇಕೆ ಕೊಡುವೆನು
ಬೇಡಿದಿಷ್ಟಾರ್ಥವನು ಸಂಶಯ
ಬೇಡೆನಲು ಕೈಮುಗಿದು ಬಿನ್ನಹಮಾಡಿದನು ನಗುತ ೨೭

ಬೇಡುವೆನು ನಿಜ ಚರಣ ಭಕುತಿಯ
ಬೇಡುವೆನು ನಿಜ ಭಕುತಸಂಗವ
ಬೇಡುವೆನು ನಿಜವೆನಿಪ ಮೈತ್ರಿಯನಖಿಳ ಭೂತದಲಿ
ಬೇಡುವೆನು ಭವ ಭವದಲಿದನೇ
ನಾಡೆ ಸಲಿಸುವುದೆಂದೆನುತ್ತೀ
ಡಾಡಿದನು ಕಳೆವರವನಚ್ಯುತನಂಘ್ರಿಕಮಲದಲಿ ೨೮

ಆಯಿತೇಳಿತ್ತೆನು ಮನೋಭಿ
ಪ್ರಾಯಸಿದ್ಧಿಯನಧಿಕವಹ ಪರ
ಮಾಯುವನು ನಿನ್ನನ್ವಯಾನುಕ್ರಮ ವಿವರ್ಧನರ
ಶ್ರೀಯನುತ್ತಮ ಕೀರ್ತಿಯನು ನಿ
ಶ್ರೇಯಸವನೈಶ್ವರ್ಯಗತಿಗಳ
ನಾಯುವಂತನೆ ಕೊಟ್ಟೆನೆಂದನು ವರವನಾತಂಗೆ ೨೯

ಸಲಿಸಿ ಬಲವನು ಕಾಂತಿಯನು ಬಲ
ಬಲಿಮಥನರಲ್ಲಿಂದ ಭಕುತನ
ನಿಲಯವನು ಹೊಱವಂಟು ಬರುತಿರೆ ರಾಜಮಾರ್ಗದಲಿ
ಲಲನೆಯೊರ್ವಳು ಮುಂದೆ ಪೊಂಬ
ಟ್ಟಲಲಿ ಗಂಧವ ಪಿಡಿದು ದೆಸೆ ಪರಿ
ಮಳಿಸಿ ಹೋಗುತ್ತಿರಲು ಕಂಡರು ಕಮಲಲೋಚನೆಯ ೩೦

ನಕ್ಕರೊಬ್ಬರನೊಬ್ಬರೀಕ್ಷಿಸು
ತಕ್ಕಟ ಸತಿಯೇಕೆ ಯೌವನ
ದುಕ್ಕು ಸೊಕ್ಕಿನ ಹರೆಯವೇಕೀ ತೇಜವೀರೂಪು
ತಕ್ಕುದೈ ಮುಪ್ಪುಱುಗು ವಿಧಿಕೃತ
ವಕ್ಕು ಶಿವಶಿವ ನೋಡಿಯೆನುತಾ
ರಕ್ಕಸರ ಹಗೆ ನೋಡಿ ಕೆಳೆಯರನಾಕೆಗಿಂತೆಂದ ೩೧

ಆರು ನೀನೆಲೆ ಕಾಂತೆ ಕಂಡಡೆ
ವಾರಿಜಾನನೆ ಚೆಲುವೆ ಕೈಯಲಿ
ದಾರಿಗೊಯ್ವಪೆ ಗಂಧವನು ಲೇಪನವದಾರಿದಕೆ
ಭೂರಿ ಭಾಗ್ಯರು ಯೋಗ್ಯರೇತಕೆ
ನಾರಿ ತಾನಿದರಂಗಸಿರಿ ತಾ
ವಾರು ಬಲ್ಲೊಯೆನುತ ಮಾತಾಡಿಸಿದನಂಗನೆಯ ೩೨

ಈವುದನುಲೇಪನವನೆಮಗೆಲೆ
ಯೀವೆನಿಷ್ಟಾರ್ಥವನು ನಿನಗಿದ
ಕಾವ ಸಂಶಯ ಬೇಡ ನೃಪನಳಿಯಂದಿರಾವೆನುತ
ದೇವದೇವನು ನುಡಿಸಲಾ ರಾ
ಜೀವ ಲೋಚನೆ ಮನದೊಳಗೆ ಸಂ
ಭಾವಿಸುತ ಮೊಗ ನೆಗಹಿ ಮಾತಾಡಿದಳು ಹರಿಯೊಡನೆ ೩೩

ಲೇಸನಾಡಿದೆ ವೀರ ಮೋಹದ
ದಾಸಿಯಾನೀ ಭೋಜರಾಜಗೆ
ಯೇಸನಾರೊಯಿದಿತ್ತಡನುಲೇಪನವನದನೊಲಿದು
ವಾಸನಿಸನಾನಿತ್ತುದನು ಕರ
ಲೇಸೆನುತ ಕೈಕೊಂಬನೆನ್ನ
ಭ್ಯಾಸವಿದಱಲಿ ಸುಪ್ರತಿಷ್ಠಿತವೆಂದಳಬುಜಾಕ್ಷಿ ೩೪

ಏನ ಮಾಡಿದರೇನು ಕರ್ಮಾ
ಧೀನದಲಿ ತನ್ನೊಡಲು ರೂಪುವಿ
ಹೀನವಾದುದು ಕೆಟ್ಟೆನಾರಿಗೆ ಹೇಳುವೆನು ಹದನ
ಈನಿಮಿತ್ತ ತ್ರಿವಕ್ರೆಯೆಂಬಭಿ
ಧಾನವಡೆದೆನದಿಂದು ನೀನಿ
ನ್ನೇನನೀವೆ ವಿಧಾತ್ರನಲ್ಲೆಂದಳು ಸರೋಜಮುಖಿ ೩೫

ಇತ್ತಪೆನು ಗಂಧವನು ನಿನ್ನೀ
ಚಿತ್ತದೊಲವೇ ಸಾಕು ಕಾಣೆನು
ಮರ್ತ್ಯರೊಳಗೀ ನಿನ್ನ ಹೋಲುವ ಪುರುಷಭೂಷಣರ
ಸತ್ಯಸಂಧನೆ ನೀನಿರಲು ಹಿಡಿ
ಮತ್ತೆಯೋಗ್ಯರದಾರೆನುತ್ತಾ
ಮತ್ತಕಾಶಿನಿ ಕೊಟ್ಟಳನುಲೇಪನವನಚ್ಯುತಗೆ ೩೬

ವನಿತೆ ತನ್ನನು ಕೊಡುವವೋಲಾ
ದನುಜಹರರಾಮರಿಗೆ ಗಂಧವ
ನನಿತುವನು ಕೊಡಲೊಲಿದು ಕರುಣಾವನಧಿಗಳು ಕೊಂಡು
ತನುವಿನಪರಾರ್ಧದೊಳಗನುಲೇ
ಪನವನೊಪ್ಪಿರೆ ಧರಿಸಿ ಕೆಳೆಯರ
ತನು ನೆನೆಯಲೋಕುಳಿಯನಾಡಿದರಮಳಗಂಧದಲಿ ೩೭

ಕೊಂಡುದಕೆ ಫಲ ಬಳಿಕ ತನ್ನನು
ಕಂಡುದಕೆ ಫಲ ಕೈಯಮೇಲೀ
ಪುಂಡರೀಕದಳಾಕ್ಷಿಗಾಗಲೆ ಬೇಕೆನುತ್ತೊಲಿದು
ಮಂಡೆಯಲಿ ಕೈಯಿಟ್ಟು ಹೊರಡೆಡೆ
ಗೊಂಡುದೆಂದಿಂದಿತ್ತ ವೈದ್ಯರ
ಕಂಡು ಬಲ್ಲರು ತನ್ನ ಪೂರ್ವಜರೆಂದನಸುರಾರಿ ೩೮

ಮೆಟ್ಟೆ ಪಾದಾಗ್ರವನು ಗಲ್ಲದ
ಲಿಟ್ಟು ನಿಜಕೋಮಲ ಕರಾಗ್ರವ
ಬಿಟ್ಟು ಬೇಱೆರಡಂಗುಳಿಗಳುತ್ತಾನವಾಗಿರಲು
ನಿಟ್ಟೆಲುವು ನಿಟಿನಿಟಿಲು ನಿಟಿಲೆನೆ
ಸೃಷ್ಟಿಕರ್ತುಗಳೊಡೆಯನಬಲೆಯ
ಮುಟ್ಟೆ ನಿಗುಚಿದನೀಕ್ಷಿಸುವ ಜನನಿಕರ ಭಾಪೆನಲು ೩೯

ಧರೆಯೊಳಿಂದ್ರನ ರಂಭೆಯೋ ಕಿ
ನ್ನರವಧುವೊ ಗಂಧರ್ವೆಯೋ ಸಂ
ಚರಿಸುವುರಗಾಲಯವನುಳಿದಾ ನಾಗಕನ್ನಿಕೆಯೊ
ಪರಮ ಪುರುಷೋತ್ತಮನ ಕರ ಸಂ
ಸ್ಪರುಶದಲಿ ಸೈರಂಧ್ರಿಯಂಗೀ
ಕರಿಸಿದಳೊ ದಿವ್ಯಾಕೃತಿಯನೆನಲೆಸೆದಳಬುಜಾಕ್ಷಿ ೪೦

ಅಂಜುವೆನು ಬಿನ್ನವಿಸಲಿದೆಲಾ
ಸಂಜೆ ಸನಿಹಕೆ ಬಂದುದಘಕುಲ
ಭಂಜನನೆ ನಡೆ ಮನೆಗೆ ಮಾಡು ಮನೋರಥವನೆನಗೆ
ಸಂಜನಿತ ಕಾಮಾಗ್ನಿ ಜೀವವ
ಭಂಜಿಸುತ್ತಿದೆ ಕುರುಣಿಸೆನುತವೆ
ಮುಂಜೆಱಗ ನಾಚುತ್ತ ಹಿಡಿದಳು ನಗುತ ನಳಿನಾಕ್ಷಿ ೪೧

ಬಹೆನು ಸಂಶಯವಿಲ್ಲ ನಿನ್ನಯ
ಗೃಹಕೆ ಕಾರ್ಯವಿಶೇಷವನು ನಿ
ರ್ವಹಿಸಿ ನಾಡಿದು ನಂಬು ತನ್ನಯ ಮಾತು ದಿಟವೆಂದು
ಗೃಹವಿಹೀನರಿಗೆಮಗೆ ನಿನ್ನಯ
ಗೃಹವಲಾ ಪಥಿಕರಿಗೆ ಸಮ್ಮತ
ಗೃಹ ಪರಿಶ್ರಮಹರವಿದೆಂದನು ನಗುತ ಮುರವೈರಿ ೪೨

ಬೀಳುಕೊಟ್ಟುಚಿತದಲಿ ಲಕ್ಷ್ಮೀ
ಲೋಲರಾಮರು ಸತಿಯನಾ ಗೋ
ಪಾಲರೊಡನಾಡುತ್ತ ನೋಡುತ್ತಾಪುರದ ಸಿರಿಯ
ಮೇಲೆ ನೋಳ್ಪಬಲೆಯರ ಹಂತಿಯ
ನಾಲಿಸುತ ಮನುಮಥನ ಮತವನು
ಪಾಲಿಸುತ ನಡೆತಂದರೊಪ್ಪುವ ರಾಜಮಾರ್ಗದಲಿ ೪೩

ವೀರ ಪಾಂಚಾಲರ ಪಸಾಯ್ತರ
ಕೇರಿಗಳ ಮಾವಂತ ನಿಕರದ
ಕೇರಿಗಳನೊಪ್ಪಿರಲು ಪಾಠಕನಿಕರ ಕೇರಿಗಳ
ಚಾರಣರ ವಂದಿಗಳ ವೈಶ್ಯರ
ಕೇರಿಗಳನಾ ಹುಂಜಮಾನರ
ಕೇರಿಗಳನೀಕ್ಷಿಸುತ ನಡೆತರುತಿರ್ದರರೊಲವಿನಲಿ ೪೪

ಮುತ್ತುಮಾಣಿಕಗಳನು ಕಾಣಿಕೆ
ಯಿತ್ತು ಕಾಲ್ಗಳಿಗೆಱಗಿ ಕೈಮುಗಿ
ದೊತ್ತರಿಸಿ ಜೀಯೆಂಬ ಪಟ್ಟಣಗಾಱರರೋಲಗದ
ಮತ್ತೆ ಮಾಗಧ ಸೂತವಂದಿಗ
ಳುತ್ತಮಸ್ತುತಿಪಾಠವನು ನೆಱೆ
ಚಿತ್ರವಿಸುತೆಯಿತಂದರೊಪ್ಪಿರೆ ಕೇರಿ ಕೇರಿಯಲಿ ೪೫

ಬಿಲ್ಲ ಹಬ್ಬವೆನುತ್ತ ಧರೆಯೊಳ
ಗೆಲ್ಲ ಬೊಬ್ಬಿಱಿದಾಡುತಿರೆ ಬಲು
ಬಿಲ್ಲುಗಡ ತೋಱಿರೆಯೆನುತ ತಾನಡೆಯ ಧನುಶಾಲೆ
ಎಲ್ಲಿ ಹೇಳಿಯೆನುತ್ತ ಲಕ್ಷ್ಮೀ
ವಲ್ಲಭನು ಬೆಸಗೊಳುತ ಬಂದನು
ನಿಲ್ಲದಾ ಧನುಶಾಲೆಗಾ ಬಲ ಗೋವಳರು ಸಹಿತ ೪೬

ಬಂದು ನಿಂದರು ಶಸ್ತ್ರಶಾಲೆಯ
ಮುಂದೆ ಮೋಹನ ಮೂರ್ತಿಗಳು ಗೋ
ವಿಂದ ರಾಮರು ತಡೆದ ತದ್ದ್ವಾರಿಗೆ ನೃಪಧನುವ
ತಂದೆಗಳಿರೀಕ್ಷಿಸುವ ಮನದಲಿ
ಬಂದೆವಾವೆಡೆ ತೋಱಿಸುವುದೆನು
ತಂದು ಹೊಕ್ಕರು ನಗುತ ದ್ವಾರಿಕರ ಕರವಿಡಿದು ೪೭

ಕಂಡರಿದಿರಲಿ ಮೆಱೆವ ರಿಪುಕೋ
ದಂಡವನು ಮಣಿಕನಕರಚನೋ
ದ್ದಂಡವನು ರಿಪುಭಟ ವಿನಾಶನ ಕಾಲದಂಡವನು
ಕಂಡಿರೇ ಗೋವಳರು ಧನುವನು
ಕಂಡಿರೇ ನೀವಣ್ಣದೇವರು
ಖಂಡಪರಶುವಿನಾಣೆ ಕೌತುಕವಿತ್ತು ನೋಡೆಂದ ೪೮

ದೃಷ್ಟಿ ಸಫಲವಿದಾಯ್ತು ಕೈಗಳು
ಮುಟ್ಟಿ ಸಫಲವ ಹಡೆಯಲಾಗದೆ
ಸೃಷ್ಟಿಯಲಿ ಧರಿಸುವ ಮಹಾತ್ಮರದಾರೊ ತಾನಿದನು
ಮುಟ್ಟಿ ನೋಡುವೆನೆನುತ ದೈತ್ಯಘ
ರಟ್ಟನಾ ಬಲುಬಿಲ್ಲನೀಕ್ಷಿಸಿ
ಬೆಟ್ಟದಂತಿರಲೆಡದ ಕೈಯಲಿ ನೆಗಹಿದನು ತುಡುಕಿ ೪೯

ಎಲವೊ ಹೋಹೋ ತಮ್ಮ ಬಿದ್ದರೆ
ಕೊಲುವುದೆಲ್ಲರನಿರಿಸಿರಿಸು ನಿ
ನ್ನಳವಿನಾಯುಧವಲ್ಲ ಬಿಡು ಬಿಡು ಮಾಣು ಮಾಣೆನುತ
ಉಲಿಯುಲಾ ರಾಮಾದಿಗಳು ಹಳು
ಹಳು ಮಹಾಧನು ಬೇಡ ಬಿದ್ದರೆ
ಕೊಲಿಸಿದವರಾವಲ್ಲವೆನುತಿರ್ದುದು ಭಟವ್ರಾತ ೫೦

ತೊಡಿಸಿದನು ತಿರುವಿನಲಿ ಚಾಪವ
ತುಡುಕಿ ಕಾಪಿನಭಟರು ಮಿಗೆ ಬೊ
ಬ್ಬಿಡಲು ತೆಗೆದರೆ ತಪ್ಪೆ ನಿನಗದು ಕೀರ್ತಿ ವೀರರಿಗೆ
ನುಡಿದಡಮರರ ಪದವೆನುತ ಕಿವಿ
ಗಡಿಗೆ ತೆಗೆದಾರ್ದಚಲ ಚಾಪವ
ನುಡಿದನಿಕ್ಕಡಿಯಾಗಲಂಬರ ತಳದಲಜ ಬೆದಱೆ ೫೧

ಒಡೆದುದೋ ಬ್ರಹ್ಮಾಂಡವವನಿಗೆ
ಕೆಡೆದುದೋ ಕುಲಶೈಲವದ್ದುದೊ
ಪೊಡವಿ ಪಾತಾಳಕ್ಕೆ ಹರಿದುದೋ ಹರಹರ ಮಹಾದೇವ
ನಡುಗಿದನು ಖಳಕಂಸನಮರರು
ಗುಡಿಯ ಕಟ್ಟಿದರಾ ಮಹಾ ಧನು
ವೊಡೆದ ದನಿ ಧೃತಿಗೆಡಿಸಿತೇನೆಂಬೆನು ಜಗತ್ರಯವ ೫೨

ಕಟ್ಟು ಹಿಡಿ ಕೊಲ್ಲಿವನನೇತಕೆ
ದುಷ್ಟವನು ಹೊಗಿಸಿದಿರಿ ಬಾಗಿಲ
ಕಟ್ಟಕೊಳಲಿ ಮಹಾಭಟರು ಹೊಱನಡದವೋಲೆನುತ
ಇಟ್ಟಣಿಸಿ ಕಾಪಿನ ಮಹಾ ಭಟ
ರಿಟ್ಟೆ ಮುಸಲ ಮುಸುಂಡಿ ಮುದ್ಗರ
ಪಟ್ಟಸಂಗಳ ಪಾಯದಳವೆಯಿತಂದುದೆಣ್ದೆಸೆಗೆ ೫೩

ಕಡುಗಿ ಬಹ ಕಾಪಿನ ಮಹಾ ಭಟ
ಪಡೆಯನೀಕ್ಷಿಸಿ ನಗುತೆರಡು ಬಿ
ಲ್ಕಡಿಯನಿಬ್ಬರು ಕೊಂಡು ನಿಂದರು ಬಾಗಿಲಿದ್ದೆಸೆಗೆ
ಹಿಡಿಯ ಬಂದಿರೆ ನೀವೆನುತ ಕೈ
ವಿಡಿಸಿದರು ಕಾಲಂಗೆ ಮಡಿದುದು
ಪಡೆ ಪರಾಜಯವಾರ್ತೆ ಹರಿದುದು ಕಂಸನೋಲಗಕೆ ೫೪

ಮತ್ತೆ ಕಂಸಾಸುರನ ಬೆಸದಲಿ
ಮತ್ತ ಗಜಘಟೆ ಕುದುರೆ ಕಾಲಾ
ಳೊತ್ತರಿಸಿ ಬರಲಾಹವಕೆ ಬೊಬ್ಬಿಱಿದು ಬಾಗಿಲಿಗೆ
ಮುತ್ತಿಗೆಯ ಪರಬಲದ ಜೀವವ
ಮೃತ್ಯುವಿಗೆ ಮಾವಾರಿ ಹಿಡಿದಂ
ತುತ್ತಮಶ್ಲೋಕಾಖ್ಯರುಪಸಂಹರಿಸಿದರು ಬಲವ ೫೫

ದಳ್ಳುರಿಯ ಮುತ್ತಿಗೆಯ ಹದಗದ
ಹಾಳು ನೆರವಿಯೊ ತತ್ವವಿದ್ಯೆಯ
ಕೊಲ್ಲಣೆಗೆಗೊಡ್ಡಿಸಿದ ಮಾಯಾಮಯ ತನುಭ್ರಮೆಯೊ
ಫುಲ್ಲನಾಭಾನಂತರಿಕ್ಕಿದ
ಘಲ್ಲಣೆಯ ಘಾಯವನು ಕಳದಲಿ
ಮಲ್ಲ ಸೈನ್ಯವ ಗೆಲಿದರೊಂದೇ ನಿಮಿಷಮಾತ್ರದಲಿ ೫೬

ಬಳಿಕ ರವಿ ನಿಜರಥವನಾ ಖಳ
ಕುಲಶಿರೋಮಣಿ ಹರಿಸದಿರನೆಂ
ದಿಳಿದನಸ್ತಾಚಲದ ತಪ್ಪಲ ಕಾನನದ ಮಱೆಗೆ
ಹಲಧರ ಶ್ರೀನಾಥರಾಯುಧ
ನಿಳಯವನು ಹೊಱವಂಟು ಬಂದರು
ಹೊಳಲ ಸಿರಿಯನು ನೋಡಿ ಬೀಡಿಕೆಗಾಗಿ ನಲವಿನಲಿ ೫೭

ಕಂಡು ಹೊಳಲೊಪ್ಪವನು ಕಂಸನು
ಕಂಡ ಹರಿಬವನಱಿತು ಮುಗುಳು
ದ್ದಂಡ ವಿಕ್ರಮರಿರದೆ ಬೀಡಿಕೆಗಾಗಿ ನಡೆತಂದು
ಉಂಡು ಹಾಲೋಗರವನೊಲಿದೆಡೆ
ಗೊಂಡು ಕೆಳೆಯರನಾಪ್ತರನು ಕೈ
ಕೊಂಡು ನಿದ್ರಾಂಗನೆಯ ಬಲನಿತ್ಯಾತ್ಮರೊಪ್ಪಿದರು ೫೮

ಮೂವತ್ತೇಳನೆಯ ಸಂಧಿ ಮುಗಿಯಿತು.

# ಮೂವತ್ತೆಂಟನೆಯ ಸಂಧಿ

ಚಂಡವಿಕ್ರಮರಾನೆಯನು ಬೆಂ
ಕೊಂಡು ಭುವನೇಶ್ವರರು ಪೃಥ್ವೀ
ಮಂಡಲಾಧೀಶ್ವರನ ಸಭೆಯನು ಹೊಕ್ಕರೊಲವಿನಲಿ

ಅರಸ ಕೇಳಾ ರಾಮ ಕೃಷ್ಣರ
ಚರಿತವನು ಸಾಹಸವನಾ ಧರ
ಧುರದ ವೀರಪರಾಕ್ರಮವ ನಿಜಚಾಪಭಂಜನವ
ಇರದೆ ನಿಜಬಲನಾಶವನು ಸಂ
ಗರದ ಕಲಿತನಗಳನು ಕೇಳ್ದಾ
ಯಿರುಳು ಜಾಗರವಾಯ್ತು ಕಂಸಂಗತಿನೃಶಂಸಂಗೆ ೧

ಕರೆಸಿದನು ಮಲ್ಲರನು ಮಾವಂ
ತರನು ಮನದಂಥತೆಗೆ ಕತ್ತಲೆ
ನೆರವು ಬರೆಯಾಲೋಚನೆಗೆ ಬೇಹವರ ಮಂತ್ರಿಗಳ
ಬರಿಸಿ ನೃಪನಿರುಳೋಲಗವನಿ
ತ್ತರಿದಿಶಾಪಟನಳಲುತಂತಃ
ಕರಣದಲಿ ಕಳವಳಿಗನಾಜ್ಞಾಪಿಸಿದನವರೊಡನೆ ೨

ಬಂದರೀ ವಸುದೇವ ಕುಹಕಿಯ
ನಂದನರು ತನ್ನಾಜ್ಞೆಯಿಂದೀ
ಗಾಂದಿನೀಸುತನೊಡನೆ ತನ್ನಯ ಪುರಕೆ ರಜಕನನು
ಕೊಂದರುಡಲೀಯದೊಡೆ ಗಡ ತಾ
ಮಂದಿಯೊಳು ಬಡಬಿಲ್ಲು ಮುಱಿದು ಮು
ಕುಂದರಾಮರು ಕೇಳಿದಿರೆ ನೀವ್ ಬಾಲ ಕೇಳಿಗಳ ೩

ಉಡಿದ ಬಿಲ್ಲಿನ ದಡಿಗಳಲಿ ಬಡಿ
ಬಡಿದು ಕಾಪಿನ ಭಟರನೆಲ್ಲರ
ಕೆಡಹಿದರು ತಾ ಕಳುಹಿದೀ ಚತುರಂಗ ಸೈನಿಕವ
ಮುಡುಹಿದರು ಗಡ ಕೈದುಗೊಳ್ಳದೆ
ಕಡುಗಲಿಗಳವರಿಬ್ಬರೇ ದಿಟ
ಪೊಡವಿಗಗ್ಗದ ಭಟರೆನುತ ಬಿಸುಸುಯ್ದನಾ ಕಂಸ ೪

ಆಳು ಮತ್ಸರವೇಕೆ ನಾಳಿನ
ಕಾಳಗದ ಕಲಿತನದಲೆನ್ನಯ
ಸೋಲ ಗೆಲವುಗಳೆಂಬುದನು ನಿಮ್ಮಾಪರಾಕ್ರಮವ
ಆಲಿಗಳಲೀಕ್ಷಿಪೆನು ದುಸ್ತರ
ಕಾಲಗತಿಯನು ಕಂಡರಾರಿ
ನ್ನೇಳಿದಿಕೆ ಬೇಡವರು ಬಲ್ಲಿದರೆಂದನಾ ಕಂಸ ೫

ಬವರ ಬಲು ಹುರಿ ನಮಗೆ ನಾಳಿನ
ದಿವಸ ನೀವೆನ್ನಾಹವಕ್ಕೊದ
ಗುವುದು ಕಾಂಬೆನು ಹರುವನಸುವಿಂಗಹಿತಸಂತತಿಗೆ
ಅವನಿಗಿಳಿಯಲಿ ಭಾರವೀ ಯಾ
ದವ ಕುಲಾಂತಕನೆನಿಸಿಕೊಂಬೆನು
ಕುವಲಯಾಪೀಡನಲಿ ನಿಮ್ಮಲಿ ಚಿಂತೆ ಬೇಡೆಂದ ೬

ರಂಗವನು ಕೈಗೈದು ರಣ ಭೂ
ತಂಗಳನು ಪೂಜಿಸುವುದೆನುತರಿ
ಭಂಗನಾ ವರ ಮಂತ್ರಿ ಮಲ್ಲರನೊಲಿದು ಬೀಳ್ಕೊಳಿಸಿ
ಸಿಂಗಿಯನು ಕೊಂಡಂತೆ ಸಂತ
ಪ್ತಾಂಗನಿದ್ದನು ರಾಮ ಕೃಷ್ಣರ
ಸಂಗರದ ಸಾಹಸವ ನೆನೆವುತ್ತ ಮನದೊಳಗೆ ೭

ಕಂಡನಿರುಳವಶಕುನವನು ಭೂ
ಮಂಡಲದಲಭ್ರದಲಿ ದೆಸೆಯಲಿ
ಗಂಡುಗಲಿ ನಿಜ ದೇಹದಲಿ ನಾನಾ ವಿಧಂಗಳನು
ಕಂಡು ಮರಣತ್ರಾಸದಲಿ ಭಯ
ಗೊಂಡು ಮನದನುತಾಪಶಿಖಿಯಲಿ
ಕೆಂಡವನು ನುಂಗಿದವೊಲುಮ್ಮಳಿಸಿದನು ಮಿಗೆ ಕಂಸ ೮

ತಲೆದಡವಿ ನೋಡುತ್ತ ದರ್ಪಣ
ದೊಳಗೆ ಕಾಣದೆ ತನ್ನ ತಲೆಯನು
ಖಳಕುಲಾಗ್ರಣಿ ಕಾತರಿಸಿ ಕಳವಳಿಸಿದನು ಮಱುಗಿ
ನೆಳಲೊಳಗೆ ಛಿದ್ರಂಗಳನು ಕಿವಿ
ಗಳಲಿ ನಷ್ಟಪ್ರಾಣ ಘೋಷವ
ನಳಲಿದನು ಕಾಣುತ್ತ ಕಾಲನ ಭಯದಲಾ ಕಂಸ ೯

ಜ್ವಲಿತ ವೃಕ್ಷಂಗಳಲಿ ಧೂಮಾ
ಕುಳಿತ ಗಗನಸ್ಥಳವನಾ ಕಾ
ವಳಿಯವನು ತಿಮಿರಾಕೃತಿಯನಾಕಸ್ಮಿಕವ್ಯಥೆಯ
ಕಳೆವರದ ಕಂಪವನು ಕಂಗಳ
ಲಿಳಿವ ಜಲವನು ಹಲವು ವಿಧವಹ
ಕುಲ ವಿನಾಶಕರಂಗಳನು ನೆಱೆ ಕಂಡನಾ ಕಂಸ ೧೦

ಸತ್ತ್ರವರು ಬಂದಪ್ಪಿಕೊಂಬುದ
ಕತ್ತ್ರಿಯನು ತಾನೇಱಿ ಹೋಹುದ
ಗರ್ತದೊಳಗಾಳುವುದನೊಂದೇ ಜ್ಯೋತಿಯೊಳಗೆರಡ
ಚಿತ್ರವಿಸುವುದನೊಬ್ಬನೇ ವಿಷ
ಭುಕ್ತಿಯನು ಮಾಳ್ಪುದನು ತೈಲಾ
ಭ್ಯಕ್ತನಾದುದ ಕನಸು ನೆನಸುಗಳೊಳಗೆ ನೆಱೆ ಕಂಡ ೧೧

ಕಾಣುತವೆ ಬಹು ವಿಧ ನಿಮಿತ್ತ
ಶ್ರೇಣಿಗಳನೀಪರಿಯಲಾತ್ಮ
ಪ್ರಾಣನಾಶನ ಹೇತುಗಳನಡಿಗಡಿಗೆ ಕಂಪಿಸುತ
ಕೇಣವಿದೆ ಕಾಲ ಭಯವನು
ಕೇಣಿಯನು ಕೊಂಡಂತೆ ಕಂಸ
ಕ್ಷೋಣಿಪತಿ ಕುಳ್ಳಿರ್ದನಾತ್ಮಧ್ಯಾನರತನಂತೆ ೧೨

ಭಯದಲಾ ಕಂಸಂಗೆ ಜಗ ಹರಿ
ಮಯವೆನಿಸಿತೇನೆಂಬೆ ಪುಣ್ಯೋ
ದಯದ ಸಿದ್ಧಿಯ ಸಾರ ಸಂಪನ್ನತೆಯ ಸಂಸ್ಥಿತಿಯ
ನಯನ ಗೋಚರಗಳನು ಶಬ್ದ
ಪ್ರಿಯ ರಸಘ್ರಾಣಾದಿ ಕರಣೇಂ
ದ್ರಿಯ ವಿಷಯ ನಿಕರವನು ತನ್ಮಯವಾಗಿರಲು ಕಂಡ ೧೩

ಜಲದೊಳಗೆ ಕಂಗಳಲಿ ಮಂದರ
ಕುಲಗಿರಿಯ ಕುಹರದಲಿ ಮತ್ತಾ
ನಳಿನಭವನುಸಿರಿನಲಿ ಜನಿಸನೆ ಮುನ್ನ ಮಾಯಾವಿ
ಜಲಧಿಶಯನನೆನುತ್ತ ಖಳನು
ಮ್ಮಳಿಸಿ ಭೋಜನ ಪಾನ ಶಯನಂ
ಗಳಲಿ ಶಂಕಿಸುತಿರ್ದನೋರಂತಾ ಜಗನ್ಮಯನ ೧೪

ಖಳನ ಕರ್ಮಕ್ಷಯದವೊಲು ಕ
ತ್ತಲೆ ಸಂಕ್ಷಯವಾಯ್ತು ಮೂಡಲು
ನಳಿನಸಖನ ರಥಾಶ್ವತತಿ ನೂಕಿದವು ಗಿರಿವರಕೆ
ಮೊಳಗಿದವು ಭೇರಿಗಳು ಭುವನ
ಪ್ರಳಯದಂತಿರೆ ಮಲ್ಲರಂಗದ
ಬಳಸಿನಲಿ ಮಂಚಂಗಳೆಸೆದವು ನಾಲ್ಕು ದಿಕ್ಕಿನಲಿ ೧೫

ಕಡಿದು ಕುರಿ ಕೋಣನನು ದಿಗುಬಲಿ
ಗೊಡುವ ಗಂಧಾಕ್ಷತೆಗಳನು ದೆಸೆ
ಗಿಡುವ ಮಾಂಸಸುರಾದಿ ಪೂಜೆಗಳಿಂದ ನಿಂಬಜೆಗೆ
ಪೊಡೆಮಡುವ ಶಸ್ತ್ರಾಸ್ತ್ರ ನಿಕರವ
ಬಿಡದೆ ಪೂಜಿಪ ಭಟರ ಬಿಂಕದ
ಸಡಗರದ ಸಂಭ್ರಮ ಸಮಾಹಿತವಾಯ್ತು ಸಮರದಲಿ ೧೬

ಅತ್ತಲುಪವನದಿಂದ ಗೋಪರ
ಮೊತ್ತವೆಯ್ತಂದರಸನನು ಕಂ
ಡಿತ್ತು ಕಾಣಿಕೆಗಳನು ಕುಳ್ಳಿರಲಂದು ಮಂಚದಲಿ
ಮತ್ತೆ ಕೆಳೆಯರು ಸಹಿತ ಬಲ ಪುರು
ಷೋತ್ತಮರು ಕೃತ ಭೋಜನರು ಸಂ
ಪತ್ತಿನಲಿ ಹೊಱವಂಟರಾ ಹೊಱವಳಲನೀಕ್ಷಿಸುತ ೧೭

ವೀರವರರೆಯ್ತರುತ ರಂಗ
ದ್ವಾರದಲಿ ಕೈಕಾಲ ಧರಿಸಿದ
ಮೇರುಗಿರಿಯೋ ಗಜವೊ ಗಂಡಸ್ಥಳದ ಮದಜಲದ
ಧಾರೆಯೋ ಸುರನದಿಯ ನಿರ್ಝರ
ವಾರಿಯೋ ಹೇಳೆನಲು ಕಂಡರು
ದೂರದಿಂದವೆ ಕುವಲಯಾಪೀಡನ ಮಹೋನ್ನತಿಯ ೧೮

ಬಂದರೈ ವಸುದಾಧಿಪತಿಯಳಿ
ಯಂದಿರಾವಿನ್ನಿದಿರುಗೊಳಬೇ
ಕೆಂದು ಹಸ್ತಿಪನಂಕುಶದಲಿಱಿದಾ ಮದೇಭವನು
ಮಂದಮತಿ ನಡೆಸಿದನು ಬಲ ಗೋ
ವಿಂದರಭಿಮುಖಕಾಗಿ ಬಲ ಗೋ
ವಿಂದರುಟ್ಟುದ ಸಂವರಿಸುತಿಂತೆಂದರವನೊಡನೆ ೧೯

ಎಲವೊ ಬಿಡುಬಿಡು ಬಟ್ಟೆಯನು ನೀ
ತೊಲಗು ತೊಲಗೀ ಗಜ ಸಹಿತ ನಿ
ನ್ನಳಿವನೊಲುವಡೆ ಸಾರು ಸಾರಲ್ಲದರೆ ನಿನ್ನಸುವ
ಕಳುಹುವೆನು ಯಮಪುರಿಗೆ ನೋಡೀ
ಗಳೆ ಗಜೇಂದ್ರನ ಜೀವಸಹಿತೆಂ
ದುಲಿದು ಹಸ್ತಿಪನೊಡನೆ ಮೊಳಗುವವೋಲು ಹರಿ ನುಡಿದ ೨೦

ಅಹುದಲೇ ಮತ್ತಿನ್ನೇನು ಸಹಸಿಗ
ಳಹಿರಿ ಗೋಪರ ಮಕ್ಕಳಿರ ಸ
ನ್ನಿಹಿತರಾದಿರಿ ಶೌರ್ಯದಲಿ ತಪ್ಪೇನು ತಪ್ಪೇನು
ಮಹಿಯಲಿನ್ನೇನ ಕೇಳಲು
ಬಹುದು ಬದುಕಿರಲೆನುತ ಜಱಿದಾ
ಕುಹಕಿ ನೂಕಿದನಾನೆಯನು ಮುರಹರನ ಸಮ್ಮುಖಕೆ ೨೧

ಮತ್ತಗಜ ಮಾವಂತನಿಱಿಯಲು
ನೆತ್ತಿಯನು ಕೋಪಾಗ್ನಿಯಲಿ ತನು
ಹೊತ್ತಿ ಹೊಗೆವಾಲಿಗಳ ಹೊಗಱಿನ ವಿಸ್ಫುಲಿಂಗದಲಿ
ಮೃತ್ಯು ಮೈಮುರಿದೆದ್ದವೊಲು ಹರಿ
ಯುತ್ತಮನ ಶ್ಲೋಕರನು ರಣದಲಿ
ಸುತ್ತಿ ಹಿಡಿದುದು ಸುಂಡಿಲಲಿ ಬಲ ಗೋವಳರು ಬೆದಱೆ ೨೨

ಬಿಡಿಸಿಕೊಂಡಾ ಗಜದ ಮಸ್ತಕ
ವೊಡೆಯಲಪ್ಪಳಿಸಿದನು ಮುತ್ತುಗ
ಳೊಡನೆ ಚೆಲ್ಲಲು ಗಗನತಳ ತಾರಕಿತವಾದಂತೆ
ಹಿಡಿಹುಗೊಡದಸುರಾರಿ ಕಾಲುಗ
ಳೆಡೆಯಲಡಗಿದಡಱಸಿ ಕಾಣದೆ
ತುಡುಕುತಿರ್ದುದು ತನ್ನವರನಾ ಹಸ್ತಿ ಹರಿಹರಿದು ೨೩

ಕಾಣದಜ್ಞಾನಿಗಳು ಕರಣ
ಪ್ರಾಣ ಸಾಕ್ಷಿಯನಕಟ ವಿಷಯ
ಶ್ರೇಣಿಗಳಲಱಸುತ್ತ ತೊಳಲುವವೋಲು ಮುರಹರನ
ಕಾಣದಱಸುತ ಕಂಡಡಾತ್ಮ
ಜ್ಞಾನ ದೃಷ್ಟಿಯಲೊಳಗಿಹುದ ಗೀ
ರ್ವಾಣಿಗಳವೋಲಡಸಿ ಹಿಡಿದುದು ಸುಂಡಿಲಲಿ ಹರಿಯ ೨೪

ಚಿತ್ತ ಶುದ್ಧಿಗಳಿಲ್ಲದವರಿಂ
ಗೆತ್ತಣದು ನಿಜ ಲಾಭವೆಂದಱು
ಪುತ್ತಲಿಪ್ಪಂತಿಭಪತಿಯ ಬಱಿಕೈಯ ಬಂಧವನು
ಮತ್ತೆ ಹರಿ ಹಿಡಿ ಹಿಡಿಯೆ ಬಿಡಿಸಿಕೊ
ಳುತ್ತ ಗಜವಾಲವನು ಹಿಡಿದಿ
ಪ್ಪತ್ತು ಬಿಲ್ಲಂತರವನೆಳೆದನು ಹಿಂದು ಮುಂದಾಗಿ ೨೫

ಮುರಿದುದೆಡದಲಿ ಬಲದೆಡೆಗೆ ತಾ
ತಿರುಗುವನು ಬಲದೆಡೆಗೆ ಮುರಿದಡೆ
ತಿರುಗುವನು ವಾಮದಲಿ ಹರಿ ಬಳಲಿಸುತ ಬಲು ಗಜವ
ಹುರುಳುಗೆಡಿಸಿದನಿಂತು ತ್ರಿಮದಾಂ
ಧರನು ಬಳಲಿಸಿ ವೈಗುಡದೆ ತಾ
ನಿರದೆ ಕಾಡುವೆನೆಂದು ತೋಱುಸುವಂತೆ ಮೂಜಗಕೆ ೨೬

ಬಿಸುಟು ಬಾಲವನಾ ಮದೇಭದ
ಮಸುಡ ತಿವಿದೋಡಿದನು ಕರಿ ಕೋ
ಪಿಸುತ ಬೆಂಬತ್ತಿದುದು ಮುನಿ ಮಾನಸದುರಾಸದನ
ಅಸುರರಿಪು ಹಿಡಿಹಿಡಿದು ಹಾಯ್ದನು
ಮುಸಗಿ ಗಜ ಬೆನ್ನಟ್ಟ ಬರೆ ಬರೆ
ವಸುಧೆಯಲಿ ಬಿದ್ದಂತೆ ಮಗುಳೆದ್ದೋಡಿದನು ನಟಿಸಿ ೨೭

ಬಿದ್ದನಚ್ಯುತನೆಂದು ಬಗೆದಾ
ಭದ್ರಗಜವೆಱಗಿದುದು ಬಲು ದಂ
ತದ್ವಯದಲದ್ವಯನ ಕೊಲುವೆನೆನುತ್ತ ಕೋಪದಲಿ
ಹೊದ್ದಲಱುವವೆ ಕಾಲಗತಿಗಳು
ಹೊದ್ದಲಱಿಯದ ಹರಿಯನಖಿಳಾ
ಭೇದ್ಯನನು ಭೇದಿಸುವುದೆಂತಿಭ ದಂತಹತಿಗಳಲಿ ೨೮

ಕರಿ ಕೆರಳಿ ವಿಫಲ ಪ್ರಯತ್ನದ
ಲಿರದೆ ನಿರ್ದೈವರವೊಲಾ ವಿ
ಸ್ಫುರಿಸಿ ಮಗುಳಾಟೋಪದಲಿ ಮಾವಂತನುರವಣಿಸಿ
ಧರೆ ರಸಾತಳಕಿಳಿವುದೆನಲ
ಬ್ಬರಿಸುತೈತರೆ ಸಾಕಿದೇತಕೆ
ಮರುಳು ಗಜದೊಡನಾಟವೆನುತಿದಿರಾಗಿ ನಡೆತಂದ ೨೯

ಹಿಡಿದುದೋ ಗಜವೆನುತ ಜನ ಬೊ
ಬ್ಬಿಡಲು ಸುಂಡಿಲ ಸುತ್ತಿ ತೆಗೆಯಲು
ಪೊಡವಿ ಸಪ್ತದ್ವೀಪ ಸಾಗರ ಶೈಲವನ ಸಹಿತ
ನಡುಗಿದುದು ಸುರನಿಕರ ಮಿಗೆ ಬಾ
ಯ್ಬಿಡಲು ದಂತದಲಿಱಿದು ತನುಜನ
ವುಡಿಯೆ ರಣದಲಿ ಮತ್ತಗಜ ಹೆಣಗಿದುದು ಹರಿಯೊಡನೆ ೩೦

ಸದೆದು ಮಾವಂತರನು ಕಾಲನ
ಸದನವನು ಹೊಗಿಸು ಕಡುಗುವ
ಮದಗಜವ ಕೆಡಹಿದನು ಶುಂಡಾಲವನು ಹಿಡಿದೌಕಿ
ತ್ರಿದಶರಾಯನು ವಜ್ರದಲಿ ಕೆಡ
ಹಿದರೆ ಸುರಗಿರಿ ಜಱಿದು ಬಿದ್ದವೊ
ಲೊದೆದುಕೊಳ್ಳುತ ಬಿದ್ದುದವನಿಗೆ ಭದ್ರ ಮದದಂತಿ ೩೧

ಮತ್ತಗಜವನು ಕೆಡಹಿ ನಿಂದಿ
ರ್ದುತ್ತಮೋತ್ತಮನದಱ ಮೇಲಾ
ಡುತ್ತ ಕಂಸನ ಹಲ್ಲುಗಳ ಕೀಳ್ವಂತೆ ದಂತವನು
ಕಿತ್ತು ಗಜದಾರೋಹಕರ ಕೆಡೆ
ಗುತ್ತಿ ಕೊಂದನು ಸುರನಿಕರ ಹಾ
ಡುತ್ತ ಹರಸುತ್ತಮಮ ಕಱೆದರು ಪುಷ್ಪವೃಷ್ಟಿಗಳ ೩೨

ಕೊಂದು ಗಜವನು ತದ್ರುಧಿರ ಮದ
ಬಿಂದುಗಳು ಸಮರೋಚಿತಶ್ರಮ
ಬಿಂದುಗಳು ಸರ್ವಾಂಗದಲಿ ರಂಜಿಸಲು ಸಿರಿಮೊಗದ
ಮಂದಹಾಸೇಕ್ಷಣದಲಾ ಗೋ
ವಿಂದರಾಮರು ಕೆಳೆಯ ಗೋಪರ
ವೃಂದದಲಿ ಗಜದಂತಧಾರಿಗಳೆಸೆದರವನಿಯಲಿ ೩೩

ಹೆಗಲ ದಂತದ ಮೆಱೆವ ಪಿಲ್ಲಣೆ
ಗೆಗಳಲಾ ಬಲರಾಮ ದೈತ್ಯಾ
ರಿಗಳು ಕೆಳೆಯರು ಸಹಿತ ರಂಗದ್ವಾರ ರಚನೆಗಳ
ಬಗೆದು ನೋಡುತ ಹೊಕ್ಕರೆಸೆವೋ
ಲಗದ ವೀರರ ಪಟುಭಟರ ಸಂ
ಕ್ರಿಗಳ ನಾನಾದೇಶ ಜನದಾಸ್ಥಾನಮಂಟಪವ ೩೪

ಮಲ್ಲವಱೆಗಳು ವೊಳಗಲಪ್ರತಿ
ಮಲ್ಲರೋಲಗದಿದ್ದೆಸೆಗೆ ಜನ
ವೆಲ್ಲ ಕುಳ್ಳಿರಲೆಸೆವ ಮಂಚಗಳಲಿ ಹರುಷದಲಿ
ಬಲ್ಲಿದನು ತಾನೆನಿಸಿ ವೃಥ್ವೀ
ವಲ್ಲಭರ ಮಧ್ಯದಲಿ ಗಗನವ
ನಳ್ಳಿಱುವ ಮಂಚದಲಿ ಕುಳ್ಳಿರೆ ಕಂಡರವನಿಪನ ೩೫

ಆಗಿವ ಚಾಮರ ಛತ್ರನಿಕರದ
ಬಿಗಿವ ಮೇಲ್ಕಟ್ಟುಗಳ ರತ್ನಾ
ಳಿಗಳ ಪರಮೈಶ್ವರ್ಯ ತೇಜೋರಾಶಿಯೆಂದೆನಿಸಿ
ವಿಗಡನುನ್ನತ ಮಂಚದಲಿ ಕಾ
ಳಗವನೀಕ್ಷಿಸಲೆಂದು ಹೃದಯದ
ದುಗುಡದಲಿ ಕುಳ್ಳಿರಲು ಕಂಡರು ಕಂಸಭೂಪತಿಯ ೩೬

ಮಲ್ಲರಿಗೆ ತಲೆಗೊಂಬ ವಜ್ರವೊ
ಫುಲ್ಲಲೋಚನೆಯರಿಗೆ ತನುಗೊಂ
ಡೆಲ್ಲರನು ವೋಹಿಸಲು ಬಂದಭಿನವ ಮನೋಭವನೊ
ಖುಲ್ಲಜನರಿಗೆ ಶಾಸಕನೊ ಮೇ
ಣೆಲ್ಲರಿಗೆ ಬಾಂಧವನೊ ಯೆನೆ ಸಿರಿ
ವಲ್ಲಭನು ತೋಱಿದನು ನೋಳ್ಪರ ಕಂಗಳಿಗೆ ನಿಜವ ೩೭

ಮತ್ತೆ ಶಿಶುವಿನ ವೋಲಃ ತನ್ನಯ
ಹೆತ್ತ ತಾಯ್ತಂದೆಯರಿಗೀಕ್ಷಿಪ
ಮರ್ತ್ಯರಿಗೆ ನರವರನ ಹೋಲುವ ಕಂಸಭೂಪತಿಗೆ
ಮೃತ್ಯುತಾನೆಂಬಂತೆ ಯೋಗ ವಿ
ದುತ್ತಮರಿಗೀಕ್ಷಿಸಲು ಪರತರ
ತತ್ವವೇ ತಾನಾಗಿ ಮೆಱೆದನು ರಂಗಮಧ್ಯದಲಿ ೩೮

ಮತ್ತಗಜವನು ಕೊಂದುದನು ಕೇ
ಳುತ್ತ ಮತ್ತವರಾಕೃತಿಯ ಕಾ
ಣುತ್ತ ಖಳನೆದೆಯೊಳಗೆ ಹೊಕ್ಕುದು ಭೀತಿ ತನಗಿವರು
ಮೃತ್ಯುಗಳು ಸಂದೇಹವಿಲ್ಲೆಂ
ದುತ್ತರಿಸಿ ಧೈರ್ಯವನು ಃಗೆ ಮಱು
ಗುತ್ತ ಕುಳ್ಳಿರ್ದನು ಧರಾಧೀಶ್ವರರ ಮಧ್ಯದಲಿ ೩೯

ಲೋಲ ನೇತ್ರದ ಚೆಲುವಿಕೆಯ ನಿಡು
ದೋಳುಗಳ ಬಹಳತೆಯ ಜನವನು
ಸೋಲಿಸುವ ನವರತ್ನ ಭೂಷಣ ಗಾತ್ರಲಕ್ಷ್ಮಿಯಲಿ
ನೀಲ ಮೇಘಸಿತಾಭ್ರರುಚಿಗಳ
ನೇಳಿಸುವ ಸುಕುಮಾರರನು ಕ
ಣ್ಣಾಲಿಗಳಲಂದಿದಿರುಗೊಂಡಪ್ಪಿದುದು ಜನನಿವಹ ೪೦

ಕುಡಿಕುಡಿದು ಜನನಯನ ನೀ
ಢಡಸಿದುವು ಹರಿಮೂರ್ತಿ ಸುಧೆಯನು
ಬಿಡದೆ ತೆಕ್ಕೆಗೆ ತವಕಿಸಿದವಾ ಜನದ ತೋಳುಗಳು
ವೊಡವಡಲು ಕರಪುಟಗಳೆತ್ತಿದ
ವಡಿಗಡಿಗೆ ಭಾಳದಲಿ ತೂಗಿದ
ವೊಡಲುಗಳನೋರಂತೆ ತದ್ದರುಶನ ಸಭಾಗ್ಯತೆಗೆ ೪೧

ಆವ ಭಾಗ್ಯಾಧಿಕರೊ ದೇವರ
ದೇವ ಮಝು ಮಹಿಮರನು ಹೆತ್ತವ
ರಾವ ಜನ್ಮಾಂತರ ಸಹಸ್ರಾರ್ಜಿತ ತಪಃಫಲವೊ
ಆವುದೋ ನಮಗಿಂದು ಪೂರ್ವಭ
ವಾವಳೀ ಸಂಚಿತ ಸುಕರ್ಮ ಫ
ಲಾವಳಿಗಳೆನುತೆನುತ ನೆರೆದುದು ಕೂಡೆ ಜನನಿವಹ ೪೨

ಇವರು ಸಾಕ್ಷಾದ್ವಿಷ್ಣಗಳು ಗಡ
ದಿವಿಜರರ್ಥಿಸಲವನಿಯಲಿ ಸಂ
ಭವಿಸಿದರು ಗಡ ಶೌರಿ ದೇವಕಿಯರಿಗೆ ಸುತರೆನಿಸಿ
ಇವರನಾ ಗೋಕುಲಕೆ ರಾಜ
ಬ್ರುವನ ಭಯದಿಂದೊಯ್ದಿರಿಸಲಿಂ
ತಿವರು ಬೆಳವುತ್ತಿರ್ದರಿನ್ನೆಗ ಗೋಪ ಗೃಹದೊಳಗೆ ೪೩

ಇವರು ವೊಲೆಯುಂಬಂದು ಗಡ ಕೊಂ
ದವರು ನವ್ಮೀ ಪೂತನಿಯನಾ
ಪವನರೂಪಿನಲರಿದು ಶಕಟಯಮಳಾರ್ಜುನಾಹ್ವಯರ
ಇವರು ಸಂಹರಿಸಿದರು ವತ್ಸನ
ನಿವರು ಕೊಂದರು ಬಕನನಘನನು
ವಿವರಿಸಿದರಂತಕನ ಪುರಕೆನುತಿರ್ದುದಖಿಳ ಜನ ೪೪

ಇವರು ಧೇನುಕನ ಮೃತ್ಯುಗಳು ಮ
ತ್ತಿವರು ಲೀಲೆಯಲಾ ಪ್ರಲಂಬನ
ದಿವವನೈದಿಸಿದವರು ವೃಷಭನ ತುರಗದಾನವನ
ಹವಣಿಸಿದರಸುಗಳನು ರಜಕನ
ಸವರಿ ಕುಬುಜೆಯ ನಿಗುಚಿ ಕೊಂದರು
ಕುವಲಯಾಪೀಡನನು ಮತ್ತಿಂದೀಗಳೀ ಬರುತ ೪೫

ಕಾಳುಗಿಚ್ಚನು ನುಂಗಿದನು ಗಡ
ಪಾಲಿಸಲು ಗೋಕುಲವ ನಿಂದ್ರನು
ಕಾಲವೃಷ್ಟಿಯ ಮಾಡಲಾ ಗೋವರ್ಧನಾಹ್ವಯದ
ಶೈಲರಾಜನನೆಡದ ತನ್ನಯ
ತೋಳಲಾಂತನು ಗಂಡ ನೆಱೆ ಕಿ
ತ್ತೇಳು ದಿನಪರಿಯಂತ ಚಲಿಸದೆ ಘಾಳಿ ಮಳೆಗಳಲಿ ೪೬

ದುಷ್ಟಫಣಿ ಕಾಳಿಯನ ಹೆಡೆಗಳ
ಮೆಟ್ಟಿ ಮಡುವನು ಕಲಕಿ ಕಡಲಿಂ
ಗಟ್ಟಿದನು ಗಡ ತದ್ವಿಷೋದಕಪಾನದಗ್ಧರನು
ದೃಷ್ಟಿಯಿಂದೆತ್ತಿದನು ಗಡ ನೆಱೆ
ನಷ್ಟರೆನಿಸಿದ ಶಿಶು ಪಶುಗಳನು
ಸೃಷ್ಟಿಪಾಲಕನೀತನೆನುತಿರ್ದುದು ಜನಸ್ತೋಮ ೪೭

ಗೋಪಿಯರು ಗಡ ತಮ್ಮ ಹೃದಯದ
ತಾಪವಡಗಲು ಕಂಗಳಲಿ ಕುಡಿ
ದೀ ಪರಮಪೂರುಷನ ದಿವ್ಯಮುಖಾಂಬುಜದ ರಸವ
ರೂಪು ಗುಣ ಸೌಂದರ್ಯ ಮಧುರಾ
ಲಾಪಹೃತಚಿಂತೆಯರು ಮಾಡಿದ
ನೋಂಪಿಯಾವುದೊ ಮಱೆದರಿಹಪರಲೋಕವಿಭ್ರಮವ ೪೮

ಈತನೀತಂಗಗ್ರಜನು ಗಡ
ಭೂತಳವನಿದನಾಂತನಂತನೆ
ಜಾತನಾದನು ಕಂಡ ರೋಹಿಣಿಯಲ್ಲಿ ಯಿದುವರಿಗೆ
ಈತಗಳು ಜಗದುದ್ಭವ ಸ್ಥಿತಿ
ಹೇತುಗಳು ನೋಡೆನುತ ಬಲನಿ
ತ್ಯಾತುಮರನೋರಂತೆ ಹೊಗಳುತ್ತಿರ್ದುದಖಿಳಜನ ೪೯

ಮೂವತ್ತೆಂಟನೆಯ ಸಂಧಿ ಮುಗಿಯಿತು

# ಮೂವತ್ತೊಂಬತ್ತನೆಯ ಸಂಧಿ

ಗಂಡುಗಲಿಗಳು ಹರಿಬಲರು ಮುಂ
ಕೊಂಡು ಕಣದಲಿ ಮಲ್ಲರನು ತಲೆ
ಗೊಂಡು ಮುಱಿದೆಳೆದಾಡಿದರು ಕಂಸನನು ಕಳನೊಳಗೆ

ಇಂತೆನುತ ತಮತಮಗೆ ಲಕ್ಷ್ಮೀ
ಕಾಂತರಾಮರ ರೂಪು ಗುಣ ವೃ
ತ್ತಾಂತ ಸಂಗತಿಗಳನು ವಿವರಿಸುತೊಬ್ಬರೊಬ್ಬರಿಗೆ
ಸಂತಸುಖದೊಳಗಿರಲು ಮೊಳಗುವ
ನಂತ ಭೇರೀರವದ ಮಲ್ಲರ
ತಿಂಥಿಣಿಯ ತನಿ ರೌದ್ರರಸ ರಂಜಿಸಿತು ರಂಗದಲಿ ೧

ಎಂದನಾ ಚಾಣೂರನೆಲೆ ಗೋ
ವಿಂದ ಬಾರೈ ಬಲ್ಲಿದನು ನೀ
ನೆಂದು ಕರೆಸಿದನವನಿಪತಿಯಳಿಯಂದಿರಾಟವನು
ಇಂದು ನೋಳ್ಪ ಮನೋಭಿಲಾಷೆಯ
ಸಂದು ತೋಱುವುದೆಮ್ಮೊಡನೆ ಬ
ಲ್ಲಂದದಲಿ ಮಲ್ಲಶ್ರಮುವನೆನಲೆಂದನಸುರಾರಿ ೨

ಮಲ್ಲರರಸನೆ ಮರುಳಲಾ ಭೂ
ವಲ್ಲಭನು ಮಲ್ಲಾಂಗ ವಿದ್ಯೆಯ
ಬೆಲ್ಲಿಯದು ಗಿರಿ ವನ ನಿವಾಸಿಗಳಾದ ಗೋಪರಿಗೆ
ಬಲ್ಲಿದನು ತಾನಹೆನು ಕರೆ ನಿಜ
ಮಲ್ಲ ಬಾಲಕರನು ಧುರಕೆ ಸಮ
ವಲ್ಲ ಸಮರವಿಹಾರ ನಮಗಿಬ್ಬರಿಗೆ ಕೇಳೆಂದ ೩

ಒಡೆಯರೆವಗಿಲ್ಲಾಹವದ ಪರಿ
ವಿಡಿಯ ಕಲಿಸುವರಿಲ್ಲ ಗುರುಗಳು
ಕಡುಗಿ ಕಾದುವರೆಂತು ನಿನಗೀ ಸಮರದಂಗವಣೆ
ಬಿಡದೆ ಕಾದಿದಡಕಟ ಪಾಪದ
ಕಡಲಲಾಳದೆ ಮಲ್ಲಸಭೆ ತ
ನ್ನೊಡನೆ ಸಮರದ ಮಾತನಾಡದಿರೆಂದಡಿಂತೆಂದ ೪

ಆರಿಗಾಡುವೆ ಕೃಷ್ಣ ಗೋಪಕು
ಮಾರಕನೆ ನೀ ದಿಟಕೆ ಕೊಂದವ
ರಾರು ಗಜವನು ಗಜಸಹಸ್ರಸಮಾನ ಸತ್ವವನು
ಆರು ಮುಱಿದರು ಧನುವನಾರೋ
ಹೀರಿದರು ಪೂತನಿಯ ಜೀವವ
ನಾರು ಶಕಟನನೊಡೆದರಾಯಮಳಾರ್ಜುನರನೆಂದ ೫

ಆರು ಬಕ ವೃಷ ವತ್ಸಧೇನುಕ
ಮಾರಿಗಳು ಮೇಣಘನ ಜಠರವ
ನಾರು ಹೊಕ್ಕುಳುಹಿದರು ಶಿಶುಪಶುನಿಕರದಸುಗಳನು
ಆರು ಕೊಂದರು ಕೇಶಿಯನು ರಣ
ಧೀರರಲ್ಲಾ ನೀವು ಸರಿ ನಿಮ
ಗಾರು ಮಲ್ಲರ ಸಭೆಗೆ ಪಾತಕವಿಲ್ಲ ಕೇಳೆಂದ ೬

ಹಳಚು ನೀನೆನ್ನೊಡನೆ ಮುಷ್ಟಿಕ
ಹಲಧರರು ತಮ್ಮೊಳಗೆ ಕಾದಲಿ
ಸಲಿಸುವೆವು ನೃಪನರ್ತಿಯನು ನೋಡಲಿ ವಿನೋದವನು
ಇಳೆಯ ಜನವೆಲೆ ಕೃಷ್ಣ ಕೊಡು ಕರ
ತಳವನನುವಾಗೆನುತ ಹಿಡಿದನು
ತಳವನಾ ಚಾಣೂರ ಮುಷ್ಟಿಕನಾ ಹಲಾಯುಧನ ೭

ತಳವ ತಳದಲಿ ಹೊಯ್ದು ಭುಜ ಮಂ
ಡಳವನಾಸ್ಫೋಟಿಸಿ ಪರಸ್ಪರ
ಕಲಿತ ಕರ ಜಾನೂರು ಪಾದದ್ವಿತಯ ಬದ್ಧದಲಿ
ತಳಿಸಿ ತೊಡರುವ ಬೀಸಿ ಬಿಸುಡುವ
ನಿಲುವಿನಿಂದಡಿಯಿಂದ ಚಲಿಸುವ
ಹಲವು ಪರಿವಿಡಿಯಿಂದ ಹಳಚಿದರಂದುಭಯ ಭಟರು ೮

ಹೊಗುವ ಹತ್ತುವ ಲಾಗಿಸುವ ಹೊಱ
ದೆಗೆವ ತೊಡರುವ ತೋರಹತ್ತದ
ಬಿಗಿಯುರಗಬಂಧದಲಿ ಬಿಚ್ಚುವ ಬೀಸುವೊಡೆದಿವಿವ
ಬಿಗಿದು ಬೀಳುವ ಭರದಲೇಳುವ
ಗಗನಗತಿಯಲಿ ಲಂಘಿಸುವ ಮೂ
ಜಗದ ವೀರರು ತೋಱಿದರು ಬಹು ವಿಧದ ಬಿನ್ನಣವ ೯

ಡೊಕ್ಕರಿಸಿ ಬರಸೆಳೆವ ಬಿಡಿಸುವ
ತೆಕ್ಕೆಯಲಿ ಮಡ ಮುಱಿವ ಕಳಚುವ
ಜಕ್ಕಲಿಸುವಂಘವಿಸುವಾಸ್ಫೋಟಿಸುವ ಬೊಬ್ಬಿಱಿವ
ಸಿಕ್ಕಿಸುವ ಹೊಱವಡುವ ಹೋರುವ
ದಿಕ್ಕರಿಗಳಂದದಿ ಮಹಾ ಭಟ
ರಿಕ್ಕಿದರು ಘಾಯವನು ಪರಿಹರಿಸುತ್ತುಭಯ ಭಟರು ೧೦

ನೆರೆದು ನೋಡುತ್ತಾ ಪುರಸ್ತ್ರೀ
ಯರು ಮಹಾಬಲ ಬಾಲಕರ ಸಂ
ಗರವನೆಂದರು ತಮ್ಮೊಳಗೆ ಭಾಪಕಟ ವಿಧಿಯೆನುತ
ಬರಿಸಿದ್ಯೆ ಕೊಲಲೆಂದು ಸುಕುಮಾ
ರರನು ಶಿವಶಿವ ಕರುಣವಿಲ್ಲದ
ದೊರೆಯಲಾ ಸಭ್ಯರು ಮಹಾ ಪಾತಕಿಗಳಿವರೆನುತ ೧೧

ಎತ್ತಲೀ ದೃಢವಜ್ರ ಸನ್ನಿಭ
ಗಾತ್ರರೀ ಚಾಣೂರ ಮುಷ್ಟಿಕ
ರೆತ್ತಲತಿಸುಕುಮಾರಗಾತ್ರರು ರಾಮಮಾಧವರು
ಎತ್ತಲೀ ಗಿರಿಸನ್ನಿಭರು ತಾ
ವೆತ್ತಲೀ ಬಾಲಕರು ಕಾದುವು
ದೆತ್ತಲೌ ಕಡು ಪಾಪಿಗಳು ನಾವೆಂದರಬಲೆಯರು ೧೨

ಲೇಸೆ ಮತ್ತ್ರಕಟನೋಳ್ಪ ಸ
ಭಾಸದರಿಗಿದು ಸಕಲ ಧರ್ಮವಿ
ನಾಶನವಲಾ ಬಾಲ ಬಲಿ ಯುದ್ಧವನು ನೋಡುವುದು
ದೋಷವದು ಬಲ್ಲವರು ಹೊಗರೀ
ದೋಷಿಸಭೆಯನು ಸರ್ವಥಾ ಕೃತ
ದೋಷಿಗಳು ತಾವದೇಕಿಹರೆಂದರಬಲೆಯರು ೧೩

ನೋಡಿರೌ ಕೆಳದಿಯರು ಕೃಷ್ಣನ
ಬಾಡಿದಾನನ ಕಮಲ ಲಕ್ಷ್ಮಿಯ
ನೀಡಿಱಿವ ಘನ ಘರ್ಮ ಜಲ ಪರಿಲುಳಿತ ಕುಂತಳದ
ನೋಡಿ ಬಲರಾಮನು ಸಮರನಿ
ರೂಢ ರೋಷೋದ್ವೃತ್ತನಯನಸ
ಗಾಢ ರೌದ್ರ ಸ್ವೇದ ಜಲ ಸಂಸಿಕ್ತ ವಿಗ್ರಹನ ೧೪

ಧನ್ಯೆಯರು ಗೋಪಿಯರು ತ್ರಿಭುವನ
ಮಾನ್ಯೆಯರು ನೋಳ್ಪರು ಗಡೀ ಕರು
ಣಾರ್ಣವನ ಕಮನೀಯ ಮೂರ್ತಿಯನತುಳ ಕೀರ್ತಿಯನು
ವರ್ಣಿಸುತ ಮಱೆವರು ಮಹಾತ್ಮೆಯ
ರನ್ಯ ಸುಖವನು ಮುನಿಗಳಂತಿರೆ
ಮುನ್ನ ಮಾಡಿದ ತಪವದಾವುದೊ ಭವಸಹಸ್ರದಲಿ ೧೫

ಪಾಡಿ ದಣಿಯರು ಬಾಲ ಚರಿತವ
ನಾಡಿ ದಣಿಯರು ತಮ್ಮೊಳಗೆ ನಡೆ
ನೋಡಿ ದಣಿಯದರು ಕಂಗಳಲಿ ಸಂಪನ್ನ ಗುಣನಿಧಿಯ
ನೋಡಿ ತಾವಾವಾವ ಪಾಪವ
ಮಾಡಿದೆವೋ ಮೊದಲಲ್ಲಿ ತೊಟ್ಟುದು
ಕೇಡು ಹಾಹಾ ವಿಧಿಯೆ ಹಾಯೆನುತಿರ್ದರಬಲೆಯರು ೧೬

ಕಱೆವ ಕಾಸುವ ಕಡೆವ ತೊಟ್ಟಿಲ
ನಿರದೆ ತೂಗುವ ಸಾರಿಸುವ ಮಿದಿ
ವರಿವ ಪೂಸುವ ಮಿಾವ ಮೂಡುವವುಂಬ ಪವಡಿಸುವ
ಭರದಲುಯ್ಯಲೆಯಾಡುವವೆಡೆಗಳ
ಲರರೆ ಗೋಪಿಯರೀ ಮುಕುಂದನ
ಚರಿತವನು ಪಾಡುತ್ತ ಮಱೆವರು ಗಡ ಪರಿಶ್ರಮವ ೧೭

ಮುಂದೆ ತುಱುಗಳು ಗೋವಳರು ಬರೆ
ಹಿಂದೆ ಕೈವಾರಿಸುತ ನಡುವೆ ಮ
ಹೇಂದ್ರ ವಂದಿತಚರಣನೀ ಗೋವಿಂದನೆಯ್ತರಲು
ನಿಂದು ಹೊತ್ತರೆ ಬೈಗೆ ಗೋರಜ
ದಿಂದ ಮೆಱೆವಳಕಾವಳಿಯ ಮೃದು
ಮಂದಹಾಸಾನನನನೀಕ್ಷಿಸುವರು ಸಭಾಗ್ಯೆಯರು ೧೮

ಕಂಗಳಲಿ ಕುಡಿ ಕುಡಿದು ಕೃಷ್ಣನ
ಮಂಗಳಾನನ ಸುಧೆಯನಾ ಗೋ
ಪಾಂಗನೆಯರೆವೆಗಳಿಗೆ ಮುನಿವರು ದಣಿಯರನವರತ
ತಂಗಿ ನಮ್ಮಂದದಲಭಾಗ್ಯೆಯ
ರಂಗನೆಯರಾರೀ ದುರಾತ್ಮರ
ಸಂಗರದಲಳಿವುದನು ಕಂಡೆವೆನುತ್ತ ಮಱುಗಿದರು ೧೯

ಏಕೆ ತೋಱದೆ ವಿಧಿಯೆ ಸುರ ನರ
ಲೋಕ ಮೋಹನಮೂರ್ತಿಯನು ಮ
ತ್ತೇಕೆ ನೂಕಿದೆ ನಯನರತ್ನವನೀ ಮಹಾಹವಕೆ
ಏಕೆ ಬಾರದು ಸಾವು ತಮಗಿ
ನ್ನೇಕೆ ಜೀವನವೆನುತ ಸತಿಯರು
ಶೋಕಜಲಧಿಯಲಾಳುತೇಳುತ್ತಿರ್ದ್ದರಡಿಗಡಿಗೆ ೨೦

ಈಪರಿಯಲಳಲುತ್ತ ಸುಜನಕ
ಳಾಪವೀಕ್ಷಿಸುತಿರಲು ಕೇಳ್ಕೆ
ಭೂಪ ಯೋಗಾಧೀಶ್ವರನು ಕೇಳುತ್ತ ಸತಿಯರನು
ತಾಪಹರವೆಂದೆನಿಪ ನಿಜಕರು
ಣೋಪಚಿತ ದೃಷ್ಟಿಯಲಿ ನೋಡಿ ಸ
ಕೋಪನಾದನು ಶತ್ರುಸಂಹಾರಕ್ಕೆ ಮನದಂದು ೨೧

ಎಕ್ಕತುಳದಲಿ ತೋಳ ಬಲುಹನು
ಚಕ್ರಧರ ಚಾಣೂರರಿಕ್ಕಿಸು
ತಿಕ್ಕಿದರು ಗಾಯವನು ಬಲಮುಷ್ಟಿಕರು ತವ್ಮೊಳಗೆ
ಲೆಕ್ಕಿಸುವಡಾ ಹರಿಬಲರ ಗಾ
ಯಕ್ಕೆ ಮಲ್ಲರೊಡಲ್ಗಳುಸುರೊಳ
ಸಿಕ್ಕಿದುವು ಸಡಿಲಿದವು ತನುಸಂಧಿಗಳು ಪಟುಭಟರ ೨೨

ಕಂಡರತಿಸುಕುಮಾರಗಾತ್ರರು
ಚಂಡವಿಕ್ರಮರಿವರು ಕರಹತಿ
ಗೊಂಡ ತನ್ನೆದೆ ಬಲ್ಲಿತಹುದೋ ಕೃಷ್ಣ ನೀನಹುದೊ
ಕಂಡ ಪರಿಯಲಿ ತಿವಿಯಲೇಕೀ
ಭಂಡತನ ಬೇಡೊಂದನೇ ಕೈ
ಕೊಂಡು ನೋಡಾ ಮುನ್ನವೋ ನೀ ಮುನ್ನವೋಯೆಂದ ೨೩

ತಿವಿಯೆಲವೊ ನೀ ಮುನ್ನ ಮಲ್ಲಾ
ಹವಕೆ ಮಾನ್ಯನಲಾ ಭಟಾಗ್ರಣಿ
ಬವರವೆನ್ನದು ಬಳಿಕ ಮುಂಗಾಣಿಕೆಯು ನಿನ್ನದಲೈ
ಜನನ ತೋಱಾ ತೋಱೆನಲು ಮಾ
ಧವನ ನುಡಿಗೇಳುತ್ತ ಮುಷ್ಟಿಯ
ಹವಣಿಸುತ ಚಾಣೂರನೆಱಗಿದನಸುರಹರನೆದೆಯ ೨೪

ಆಯಿತೇ ಸಂಕಲ್ಪ ನೋಡೆ
ನ್ನಾಯತಿಕೆಯನು ನಿಲ್ಲೆನುತ ನಾ
ರಾಯಣನು ನಗುತಟ್ಟಹಾಸದಲಾ ಮಹಾಭಟನ
ಗಾಯವನು ಪರಿಹರಿಸಿ ಕಡು ಪೂ
ರಾಯದಲಿ ಭಟನುರವನೆಱಗಲು
ಬಾಯಳೊಕ್ಕುದು ರುಧಿರ ನಾಸಾವಿವರನೆರಡಱಲಿ ೨೫

ಬಿಡದೆ ಬೀಸಿದಡಂಭಟನ ತಲೆ
ಯೊಡೆದು ಸೂಸಿದುದರುಣಜಲ ನಭ
ದೆಡೆಯಲೇ ಹಾಯಿತು ಜೀವ ಶರೀರವನು ಬಿಸುಟು
ಪೊಡವಿಗೀಡಾಡಿದನು ಹೆಣನನು
ಕಡುಗಲಿಯ ಮರಣದಲಿ ಕಟ್ಟಿತು
ಗುಡಿಯನಭ್ರದಲಮರಚಯ ಜಯ ಜಯತು ಜಯಯೆನುತ ೨೬

ಮುಷ್ಟಿಕನ ಕರಹತಿಗೆ ಬಲ ಕೈ
ಗೊಟ್ಟು ವಜ್ರಸಮಾನದೃಢತರ
ಮುಷ್ಟಿಯಲಿ ಮೋದಿದರೆ ವಕ್ಷಸ್ಥಳವನುಸುರಡಗಿ
ಘಟ್ಟಿಗೆಡೆದನು ಧರೆಗೆ ಖಳ ಕಡ
ಲಿಟ್ಟು ಹರಿಯಲು ರಕುತ ವಜ್ರದ
ಲಿಟ್ಟ ಗಿರಿಯಂದದಲಿ ಕುಸಿಯಲು ಧರೆ ರಸಾತಳಕೆ ೨೭

ಕಡುಗಿ ಫಡ ಫಡ ತಾನಿಹೆನು ರಣ
ದೆಡೆಗೆ ನಿಲುನಿಲ್ಲೆನುತ ಬಲವನು
ಬಡಿದು ಕೂಟಾಪ್ವಯನು ಹಳಚಿದನಂತಕನಪುರಕೆ
ನಡೆದನತ್ತಲು ಕೌಸಲನು ಖಳ
ನೆಡದ ಕಾಲಲಿ ಕೃಷ್ಣನೊದೆಯಲು
ಪೊಡವಿಗಿತ್ತನು ತನುವನವರೈದಿದರು ನಿಜಪದವ ೨೮

ಅಸಮಬಲ ಚಾಣೂರ ಮುಷ್ಟಿಕ
ರಸುವಳಿಯೆ ಕೂಟಾದ್ಯರೊಡಲನು
ಬಿಸುಟು ಹೋಗಲು ಮಿಕ್ಕ ಮಲ್ಲರು ಬಲಮುರಾಂತಕರ
ಗಸಣಿ ನಮಗೇಕೆನುತ ಹಾಯಲು
ದೆಸೆ ದೆಸೆಗೆ ಜೀವಾಭಿಲಾಷೆಯ
ಲಸುಗಳುಳಿದರೆ ಸಾಕೆನುತ ಸಂಗ್ರಾಮಭೀತಿಯಲಿ ೨೯

ಕೊಲ್ಲೆವೋಡದಿರೋಡದಿರಿ ನೀವ್
ನಿಲ್ಲಿರೈ ಪರಿವಾರ ಹಗೆ ತಮ
ಗಿಲ್ಲ ನಮ್ಮನರೈಸಲೇ ನೀವಂಜಬೇಡೆನುತ
ಫುಲ್ಲನಾಭಾನಂತರಭಯವ
ನೆಲ್ಲರಿಗೆ ಕರುಣಿಸುತ ನಿಜಕರ
ಪಲ್ಲವನ ನೆಗಹಿದರು ನಲಿದಾಡುತ್ತ ರಂಗದಲಿ ೩೦

ಬನ್ನಿರೈ ಗೋವಳರಿ ನೀವೇ
ನನ್ನಿಗರೆ ಕರೆಕರೆಯಲೋಡುವ
ಕುನ್ನಿಗಳನೇಗುವೆವೆನುತ್ತಾ ರಾಮಮಾಧವರು
ಹೊನ್ನ ಗಂಟೆಗಳುಲಿಯಲಾಡಿದ
ರುನ್ನತೋನ್ನತರೂಪು ಗುಣ ಸಂ
ಪನ್ನರೆಸೆವಾಮಲ್ಲವಱಗಳ ರಂಗ ಮಧ್ಯದಲಿ ೩೧

ನೂಕಿವರನೂರಿಂದ ಹೊಱಗು
ದ್ರೇಕಿಗಳನೆಲವೆಲವೊ ಹಱಗಳ
ನೇಕೆ ಹೊಡೆವಿರಿ ಭಂಡರಿರ ಬಾಹಿರರಿರಜ್ಞರಿರ
ಸಾಕು ನಂದನ ಕೂಳಿ ಕುಹಕಿಯ
ನೇಕೆ ಕೊಂಡಾಡುವಿರಿ ಬಿಟ್ಟೆನು
ಗೋಕುಲದ ಕೈಸೂಱೆಯನು ನಿಮಗೆಂದನಾ ಕಂಸ ೩೨

ಕೊಲ್ಲಿ ವಸುದೇವನನು ಮಕ್ಕಳು
ಗಳ್ಳನನು ವೃದ್ಧರನು ಕೊಲ್ಲಲಿ
ಕೊಲ್ಲಿರಯ್ಯನನುಗ್ರಸೇನನನಾತನನು ಜರನ
ಭಲ್ಲೆಯದಲಿಱ ಕುಹಕಿ ಯಾದವ
ರೆಲ್ಲರನು ತಡೆಗಡಿಯೆನುತ ರಿಪು
ಮಲ್ಲಭಂಜನನೆದ್ದು ಕೈವೀಸಿದನು ನಿಜಬಲಕೆ ೩೩

ಅಣ್ಣ ನೀನಿದ ಕೇಳಿದೈ ಬಾ
ಬಣ್ಣಿಗೆಯ ನಾನಿದಕೆ ತಕ್ಕುದ
ಹಣ್ಣಿ ಬಹೆ ನೀನೋಡು ಚಿತ್ರವನೆನುತ ಲಕ್ಷಿಮೆಯಲಿ
ಪುಣ್ಯ ಗುಣನಿಧಿ ಲಂಘಿಸಿದನೆಂದಾ
ಕಣ್ಣು ಮನಗಳು ಕೊಲ್ಲದಸುರಾ
ಗ್ರಣ್ಯರೇಱದ ರಾಜಮಂಚಾಗ್ರಕ್ಕೆ ರಭಸದಲಿ ೩೪

ಬರಲು ಕಾಣುತ ಗದ್ದುಗೆಯ ಮೇ
ಲಿರದೆ ಕೆಲದಲಿ ನಿಂದು ಕೊಂಡನು
ಹರಿ ಕಡಿತಲೆಗಳನು ಕಲಿಗಳ ದೇವನಾಹವಕೆ
ಭರದಲೆಡ ಬಲವಂಕ ಮೇಲು
ಪ್ಪರದಲವನಿಯಲಣುವಿವರ ಗೋ
ಚರಿಸದಂತಭ್ಯಾಸದಲಿ ತೋಱದನು ಕೌಶಲವ ೩೫

ಗರುಡನುರಗನನೌಕಿ ಹಿಡಿವಂ
ತರಿಭಟನನಾಹವದಲಿರಲ
ಬ್ಬಱಸಿ ಕೆಡೆ ಕೆಡೆಯೆನುತ ಹಿಡಿದನು ಹಾಯ್ದು ಮುಂದಲೆಯ
ಧರೆಗೆ ಬೀಸಾಡುತ್ತ ಜಗದೀ
ಶ್ವರನು ಜಗದಾಧಾರನಾತನ
ಕರುಳ ಚೆಲ್ಲಲು ಮೇಲೆ ಬಿದ್ದನು ಹೊಯಿದನವನೊಡಲ ೩೬

ಕಳೆದುದಸು ಕಾಯವನು ಕಂಸನ
ಬಳಗ ಬಾಯ್ಬಿಡೆ ಬರಿ ಹೆಣನನಾ
ಕಳನೊಳೆಳೆದಾಡಿದನು ಕೋಪಾಟೋಪವನು ಬಿಡದೆ
ಮಳೆಗಱೆವವೊಲು ನಭದಿ ಪುಷ್ಪಾ
ವಳಿಗಱದರಮರೌಘ ಕೈಗುಡಿ
ಗಳಲಿ ಕುಣಿದುದು ಕೂಡೆ ನಿತ್ಯಾತುಮನ ವರ್ಣಿಸುತ ೩೭

ಮೂವತ್ತೊಂಬತ್ತನೆಯ ಸಂಧಿ ಮುಗಿಯಿತು.

## ನಲವತ್ತನೆಯ ಸಂಧಿ

ಸಂತವಿಟ್ಟನು ಸಕಲಯಾದವ
ಸಂತತಿಯನೊಲಿದುಗ್ರಸೇನಂ
ಗಂತಕಾಂತಕನೊಲಿದು ಪಾಲಿಸಿದನು ನೃಪಾಸನವ

ಅರಸ ಕೇಳನವರತ ವೈರೋ
ತ್ತರದ ಭರಭಾರದಲಿ ನೆನನೆನ
ದಿರುಳು ಹಗಲೋರಂತೆ ತನ್ಮಯನಾಗಿ ಮೂಜಗವ
ಬೆರಸಿ ಕಾಣುತ ಕಂಸನಾ ಮುರ
ಹರನ ಸಾರೂಪ್ಯವನು ಪಡೆದನು
ಪರಮ ಭಕತರಿಗಿನ್ನು ದುರ್ಲಭವೇನು ಹೇಳೆಂದ ೧

ಅವನಿಪತಿ ಕೇಳಣ್ಣನವಸಾ
ನವನು ಕಂಡವನನುಜರಿಗೆ ಮತಿ
ಸವನಿಸಿದುದಾಹವಕೆ ಬಲನೊಡನೆಂಟು ಮಂದಿಗಳು
ದಿವವನೆಯ್ದಿದರವರ ವನಿತಾ
ನಿವಹ ಕೆಟ್ಟೆವೆನುತ್ತ ಹಾ ಹಾ
ರವ ದಿಗಂತವನಳ್ಳಿಱಯಲೆಯ್ತಂದರಾಹವಕೆ ೨

ಹೊಡೆ ಹೊಡೆದು ತಲೆಬಾಯಿ ಬಸಿಱುಗ
ಳೊಡೆದು ಸುರಿವರುಣಾಂಬು ಕಂಬನಿ
ಗಡಲ ಸಂಗಮವಾಯ್ತು ತಕ್ಕಯಿಸುತ್ತ ಪತಿಗಳನು
ಕೆಡೆದರವನಿಗೆ ಹಳವಿಸುತ ದೆಸೆ
ಯೊಡೆಯಲೊಱಲುತ ಬಿಕ್ಕಿ ಬಿಱುವುತ
ಮಡದಿಯರು ಬಸವಳಿದರಳಲಿದರತ್ತರಿಳೆಯೊಡೆಯ ೩

ಹಾ ರಮಣ ಹಾ ಕಾಂತ ನೆಲನಿದು
ಸೇರಿತೇ ಮೃದು ತಲ್ಪಶಾಯಿಗೆ
ಸೇರಿದುದೆ ಕಸ್ತೂರಿ ಕುಂಕುಮದಂಗರಾಗವಿದು
ಈ ರಣೋದ್ಗತ ಧೂಳಿ ರುಧಿರಾ
ಸಾರ ಸಾಧಿತ ಪಂಕಕೆಮಗಿ
ನ್ನಾರು ಗತಿ ಹೇಳೇಕೆ ನುಡಿಯೆಯೆನುತ್ತ ಹಲುಬಿದರು ೪

ಉಪ್ಪವಡಿಸೆಲೆ ಕಾಂತ ನೋಡೆ
ಮ್ಮೊಪ್ಪವನು ಪುರಲಕ್ಷ್ಮಿ ನೀನುಳಿ
ದೊಪ್ಪಲಱುವುದೆ ನೋಡುತಿದೆ ಸದ್ಧರ್ಮ ಹರಿಯೊಡನೆ
ತಪ್ಪಿದೈ ದ್ರೋಹಿಗಳ ಬದುಕುಗ
ಳಿಪ್ಪವೇ ಗೋದ್ವಿಜರ ವಧೆ ತಾ
ತಪ್ಪುವುದೆ ಕೈಯೊಡನೆ ಫಲಿಸಿತ್ತೆಂದರಬಲೆಯರು ೫

ಈತನಲ್ಲಾ ಸಕಲಭುವನ
ಖ್ಯಾತ ದೈವದ ದೈವ ತ್ರಿಜಗ
ಕ್ಕೀತನಿಂದುತ್ಪತ್ತಿ ವಿಲಯಸ್ಥಾನವೃತ್ತಿಗಳು
ಈತನನು ಸುರಮುನಿವರರು ಸಾ
ಕ್ಷಾತ ವಿಷ್ಣುವೆಯೆಂಬರೇತ
ಕ್ಕೀತನಲಿ ಹಗೆಯಾಯ್ತೆನುತ ಹಲುಬಿದರು ಹರಿಗುಣವ ೬

ಇಂತೆನುತ್ತಿರೆ ಕೃಷ್ಣನಾ ನೃಪ
ಕಾಂತೆಯರಿಗಭಯವನು ಕರುಣಿಸಿ
ಸಂತವಿಸಿ ಸಂಸಾರ ಧರ್ಮವಿದಿಂತುಟೆಂದಱುಹಿ
ಚಿಂತೆ ಬೇಡೆಂದೆನುತ ಮೃತನೃಪ
ಸಂತತಿಗಳಿಗೆ ಮಾಡಿಸಿದನವ
ರಂತದೂರ್ಧ್ವ ಕ್ರಿಯೆಗಳನು ನೆಱೆ ಸಾಂಪ್ರದಾಯಿಕವ ೭

ಬಿಡಿಸಿ ಸೆಱೆಯನು ತಾಯಿ ತಂದೆಯ
ರಡಿಗೆಱಗಿ ಬಹುಕಾಲ ದುಃಖಿಂ
ಬಡಿಸಿದನಲಾ ಪಾಪಿ ಸೆಱೆ ಸಂಕಲೆಗಳನು ಮಾಡಿ
ಬಿಡದೆ ತತ್ಫಲವೈಸಲೇ ಕೈ
ಯೊಡನೆ ಫಲಿಸಿತ್ತೆನುತ ಹರಿಬಲ
ರಡಿಗಡಿಗೆ ತಲೆದೂಗಿ ನೆನೆದರು ನಯನವಾರಿಯಲಿ ೮

ಹುಟ್ಟಿ ಫಲವೇನವ್ವ ಮಕ್ಕಳು
ನೆಟ್ಟನಾರಾಧಿಸದೆ ನೆಱೆ ಕ
ಣ್ಣಿಟ್ಟು ಕಾಣದೆ ಹೆತ್ತ ತಾಯ್ತಂದೆಯರನಾರೆಂದು
ನಟ್ಟಡವಿಯಲಿ ಬಿಸುಟವೊಲು ಕೈ
ಗಟ್ಟುವುದೆ ಸುಖವೆನುತ ದನುಜಘ
ರಟ್ಟ ರಾಮರು ತುಂಬಿದರು ಕಂಗಳಲಿ ಕಂಬನಿಯ ೯

ಹತವಿಧಿಪ್ರೇರಿತ ವಿದೇಶ
ಸ್ಥಿತಿಯಲಾ ನಮಗಾಯ್ತು ಮಾತಾ
ಪಿತೃಪರೋಕ್ಷದಲಾಯ್ತು ಲಾಲನ ಪೋಷಣಾದಿಗಳು
ಅತುಳ ಸುಖವರ್ಭಕರಿಗಿಲ್ಲದ
ವಿತಥ ಜೀವನರವರು ಜೀವ
ನ್ಮೃತರಲಾ ಯೆಂದೆನುತ ದನುಜಾರಾತಿ ಬಿಸುಸುಯ್ದ ೧೦

ಅರ್ಥಿತಾಖಿಳ ಸೌಖ್ಯ ಘನ ಪುರು
ಷಾರ್ಥಕರವಹ ಮರ್ತ್ಯದೇಹವ
ನರ್ಥಿಯಿಂದುತ್ಪಾದಿಸಿದ ಮಾತಾಪಿತರುಗಳಿಗೆ
ಅರ್ಥದಿಂದೊಡಲಿಂದ ಸುಖವ ಸ
ಮರ್ಥಿಸದ ಪಾಪಿಗಳ ಜನನ
ವ್ಯರ್ಥವಲ್ಲಾ ನರಕಭಾಜನರವರು ಕೇಳೆಂದ ೧೧

ಹೆತ್ತ ತಾಯನು ತಂದೆಯನು ಮು
ಪ್ಪೊತ್ತಿದವರನು ಭಾರ್ಯೆಯನು ಸ
ದ್ವೃತ್ತೆಯನು ಶಿಶುಪಶು ಗುರುದ್ವಿಜ ಸೇವಕಾಶ್ರಿತರ
ಶಕ್ತಿ ತನಗುಂಟಾಗಿ ಸಲಹದ
ಮರ್ತ್ಯರನು ಕಡಿದವನ ಬಾಯಿಗೆ
ತುತ್ತು ಮಾಡುವರವನ ಮಾಂಸವನಂತಕಾನುಗರು ೧೨

ಬಱಿದೆ ಹೋದವು ದಿವಸವಿನ್ನೆಗ
ಸೆಱೆಯಲಿದ್ದಿರಿ ನೀವು ದೇಶಾಂ
ತರಕೆ ನೂಕಿದುದೆಮ್ಮನಱುವವರಾರು ವಿಧಿಕೃತವ
ಮಱೆವುದೆಮ್ಮಪರಾಧವನು ಪತಿ
ಕರಿಸಿ ಕೊಂಬುದು ಗುಣವನೆನುತಡಿ
ಗೆಱಗಿ ವಿನಯಾನ್ವಿತರು ಮೆಱೆದರು ಲೋಕಸಂಗ್ರಹವ ೧೩

ಕುಡಿಕುಡಿದು ಕಿವಿಗಳಲಿ ಕಂಗಳ
ಲೊಡನೆ ವಾಕ್ಸುಧೆ ರೂಪ ಸುಧೆಗಳ
ನೊಡಲ ಮಱೆದರು ಮುದದಲುಬ್ಬುವ ರೋಮಪುಳಕದಲಿ
ನುಡಿಯಲಱಿಯರು ಕೈಗಳಲಿ ತಡ
ತಡವಿ ತೆಗೆದಪ್ಪಿದರು ಮೂಜಗ
ದೊಡೆಯರನು ಪುತ್ರಾನುರಾಗದಲಾ ಮಹಾಭುಜರು ೧೪

ತೆಗೆದು ತೊಡೆಯಲಿ ಕುಳ್ಳಿರಿಸಿ ಕೊಂ
ಡೊಗುಮಿಗೆಯ ಸುಪ್ರೇಮ ಹರುಷಾ
ಶ್ರುಗಳ ಧಾರಾವೃಷ್ಟಿಯಲಿ ನಾದಿದರು ಸುತರೊಡಲ
ಮಗನ ಗಾತ್ರಸ್ಪರುಶದಲಿ ತೊಱೆ
ದೊಗುವ ಮೊಲೆಗಳಲಪ್ಪಿ ದೇವಕಿ
ಡಗೆಯನುಳಿದಳು ಮನದ ಸಂಕ್ಲೇಶದ ಪರಂಪರೆಯ ೧೫

ಅಚ್ಚರಿಯೆ ಮಱೆದೊಮ್ಮೆ ನಾಮವ
ನುಚ್ಚರಿಸೆ ನಾಲಗೆಯ ಕೊನೆಯಲಿ
ಬಿಚ್ಚುವುದು ಭವತಾಪವೆನಲಾ ದೇವಕೀದೇವಿ
ಅಚ್ಯುತನನಿಕ್ಕೈಯಲೊಡಲಿ
ಟ್ಟೊಚ್ಚತಾಲಿಂಗಿಸುವ ಹರುಷದ
ಹೆಚ್ಚುಗೆಯನದನೇನ ಹೇಳುವೆನೆಂದನಾ ಮುನಿಪ ೧೬

ಮತ್ತೆ ಮೂರ್ಧ್ನಿರ್ಘ್ರಾಣವನು ಮಾ
ಡುತ್ತ ಮಗ್ಗುಲಲಪ್ಪಿ ಮಹಿಮರ
ಹೆತ್ತವರು ಕುಳ್ಳಿರಲು ಕುಶಲ ಕ್ಷೇಮವಾರ್ತೆಯಲಿ
ಕೃತ್ಯವಿದರಾ ಪುರದ ಜನಗಳ
ನೊತ್ತವೈತಂದೆಱಗಲಭಯವ
ನಿತ್ತು ಕಾಣಿಸಿಕೊಂಡರಾಪ್ತ ಪಸಾಯ್ತ ಮಂತ್ರಿಗಳ ೧೭

ಕಡಿಸಿ ಸಂಕಲೆಗಳನು ಕಂಸನ
ಹಡೆದ ತಂದೆಯನುಗ್ರಸೇನನ
ಬಿಡಿಸಿ ಬಿಗುಹನು ದೇವಕನ ಹೆಡಗೈಯ ಬಂಧನವ
ಪೊಡವಿಗಧಿಪತಿ ನೀನೆನುತ ಜಗ
ದೊಡೆಯರೊಡೆಯನು ಸಕಲ ಯಾದವ
ರೊಡನೆ ಸಲಿಸಿದನುಗ್ರಸೇನಂಗಾ ನೃಪಾಸನವ ೧೮

ಹೇಳಲರಿದೆಲೆ ಭೂಪ ಕೃಷ್ಣನ
ಲೀಲೆ ಕೌತುಕವುಗ್ರಸೇನ ನೃ
ಪಾಲನನು ಕುಳ್ಳಿರಿಸಿ ಸಿಂಹಾಸನದ ಮಧ್ಯದಲಿ
ಹೇಳು ಬೆಸನನು ತಮಗೆ ನಿಮ್ಮಡಿ
ಯಾಳುಗಳು ತಾವೆನುತ ನಿಂದಿ
ರ್ದೋಲಗಿಸುವನು ಸಕಲ ಪೃಥ್ವೀಪಾಲಕರುಸಹಿತ ೧೯

ಆ ಯಯಾತಿಯ ಶಾಪ ಕುಳ್ಳಿರ
ಲೀಯದಿನ್ನೆಗ ನಮ್ಮ ಯಾದವ
ರಾಯನನು ರಾಜಾಸನಾಗ್ರದಲೆನಲು ತಾನೆಂಬ
ಜೀಯ ಭೃತ್ಯನಿರಲ್ಕೆ ನಿನಗ
ನ್ಯಾಯವಿಲ್ಲಂಜದಿರು ನಿರ್ಜರ
ರಾಯನೆಱಗುವನುಳಿದ ರಾಯರ ಮಾತದೇಕೆಂದ ೨೦

ಎಂದು ನೇಮಿಸಿ ಕಂಸಕೃತ ಭಯ
ದಿಂದ ವಿದ್ರುತರಾದ ಯಾದವ
ವೃಂದವನು ಕರೆಸಿದನು ದೇಶಾಂತರ ನಿವಾಸಿಗಳ
ಬಂದವರಿಗವರವರ ಪೂರ್ವದ
ಮಂದಿರಂಗಳನವರ ಧನ ಪಶು
ವೃಂದವನು ನೆಱೆ ಕೊಡಿಸಿದನು ಕಾಣಿಸಿದನವನಿಪನ ೨೧

ಏನನೆಂಬೆನು ಯಾದವರ ಸು
ಮ್ಮಾನವನು ಸುಖದಿಂದ ಹರಿಸ
ನ್ಮಾನಿತರು ತಾವಾಗಿ ನಗರಾವಾಸ ಸಂಸ್ಥಿತಿಯ
ಸ್ಥಾನ ಮಾನ್ಯಂಗಳಲಿ ತಪ್ಪದೆ
ದಾನವಾಂತಕನೆಲ್ಲರನು ಸುನ
ವೀನ ಪದವಿಯನಿತ್ತು ಸಲಹಿದನಖಿಳ ಬಾಂಧವರ ೨೨

ತಲೆ ನಡುಗಿ ಕಂಗಳಲಿ ಹುಬ್ಬುಗ
ಳಿಳಿದು ಕರ್ಣೇಂದ್ರಿಯದ ಬಲವ
ಕ್ಕುಳಿಸಿ ಮುಪ್ಪೆಡೆಗೊಂಡ ವೃದ್ಧರು ಸಹಿತ ಯೌವನವ
ತಳೆದರದನೇನೆಂಬೆನಾ ಯದು
ಕುಲದವರು ಗೋವಿಂದಮೂರ್ತಿಯ
ಲಲಿತ ಮಧುರಸ್ಮೇರವದನಾಮೃತವ ಸವಿಸವಿದು ೨೩

ಏನನೆಂಬೆನು ಭೂಪ ಹರಿಮಹಿ
ಮಾನುಭಾವದ ಸಿದ್ಧಿಯನು ಬಲ
ಹೀನರೇ ಬಲವಂತರತಿ ದುಃಖಿಗಳೆ ಸುಖಮಯರು
ದಾನಿಗಳು ತಾವೆನಿಸಿದರು ಧನ
ಹೀನರಾದವರಧಿಕ ತೇಜೋ
ಭಾನುಗಳು ತಾವಾದರಪಗತತೇಜರಾದವರು ೨೪

ಚಿತ್ತವಿಸು ನೃಪ ನಂದಗೋಪನ
ಹತ್ತಿರಕೆ ನಡೆತಂದು ಬಲಪುರು
ಷೋತ್ತಮರು ತಕ್ಕವಿಸುತಿಂತೆಂದರು ಮನೋಗತವ
ಹೆತ್ತವರ ಮೋಹಕ್ಕೆ ಮಿಗಿಲೆನ
ಲತ್ಯಧಿಕ ಸಂಪ್ರೀತಿಯಲಿ ಸಲ
ಹುತ್ತ ಲಾಲನ ಪೋಷಣವ ಮಾಡಿದಿರಿ ನೀವೆಂದ ೨೫

ಅವರೆ ತಾಯ್ತಂದೆಗಳು ನಿಜಸುತ
ರವೊಲು ಸಲಹುವರಾರು ಬಾಂ
ಧವಸುತರನಾಪದ್ಗತರನತ್ಯಧಿಕ ಮೋಹದಲಿ
ಯವಗೆ ನೀವೇ ತಂದೆತಾಯಿಗ
ಳಿವಗೆ ನೀವೇ ಪ್ರಾಣದೊಡೆಯರು
ಸವನಿಸಿದುದೆಮ್ಮೊಳಗೆ ಪುತ್ರ ಸ್ನೇಹ ನಿಮಗೆಂದ ೨೬

ತಂದೆ ಹೋಗಾ ಬಹೆನು ಬಾಂಧವ
ವೃಂದವನು ಸಂತವಿಸಿ ದಿವವನು
ಹಿಂದುಗಳೆಯದೆ ಗೋಕುಲಕೆ ನೀವಿಂದು ನಿಮ್ಮೊಳಗೆ
ಕುಂದದಿರಿ ಹೋಗೆನುತ ಪರಮಾ
ನಂದನಿಧಿ ಬೆಸಸುತ್ತಲಿರಲಾ
ನಂದಗೋಪನು ಕೇಳುತಿರ್ದನು ನಯನಜಲವೊಗಲು ೨೭

ಹಿಡಿದು ಮೆಟ್ಟಿದ ಕೊಂಬುಗಳುಡಿ
ದುಡಿದು ಬಿದ್ದವೊ ನೆತ್ತಿಯನು ಬಱ
ಸಿಡಿಲು ಕವಿದುದೊ ದಿಂಡುಗೆಡೆದುದೊ ಧರೆ ರಸಾತಳಕೆ
ಕಡಲು ಕವಿದುದೊ ಮೇಲೆನಲು ಮು
ಪ್ಪಡಸಿದಾತನು ಪುತ್ರ ವಿರಹದ
ನುಡಿಗಳನು ಕೇಳುತ್ತ ಬಿದ್ದನು ಬಹಳ ಮೂರ್ಛೆಯಲಿ ೨೮

ತೆಗೆದು ತಕ್ಕಯಿಸುತ್ತ ಕರುಣಾ
ಳುಗಳ ದೇವನು ತೊಡೆದು ನಯನಾಂ
ಬುಗಳನೊಯ್ಯನೆ ನಿಜಕರಾಬ್ಜದ ಮೆಲುದಳಂಗಳಲಿ
ನಗುತ ನುಡಿದನು ತಂದೆ ಹೋ
ಗಗಲಲಱೆವೆನೆ ನಿಮ್ಮನೇತಕೆ
ದುಗುಡ ನಾನಿರಲಂಜಬೇಡೆನಲೆಂದನಾ ನಂದ ೨೯

ಮಗನೆ ನೀನೆಲೆ ದೇವ ತನಗೀ
ಜಗದ ದೈವದ ದೈವವಲ್ಲಾ
ನಿಗಮಶತ ನಿರ್ಣಯಿಸಲಱೆಯವು ನಿನ್ನ ಮಹಿಮೆಗಳ
ದೃಗುಯುಗಳದಲಿ ಕಂಡು ವರಯೋ
ಗಿಗಳು ಬಯಸುವ ಬೊಮ್ಮನನು ತಾ
ನಗಲಲಱೆವೆನೆ ಕೃಷ್ಣ ಕರುಣಾನಿಧಿಯೆ ಹೇಳೆಂದ ೩೦

ಅಂತರಾತ್ಮನನಗಲಿ ಹೋಹೆನ
ದೆಂತು ತಾನೆಲೆ ಕೃಷ್ಣ ಕಮಲಾ
ಕಾಂತ ಗತಿಮತಿಯಾವುದೆಮಗಿನ್ನೇನುತ ಬಾಯ್ಬಿಡಲು
ಚಿಂತೆ ಬೇಡಾನೆನ್ನ ನೆನೆವವ
ರಂತರಂಗದೊಳಿಹೆನು ಮಱೆಯದೆ
ಸಂತವಿರು ಸುಖಿಯಾಗು ಭಾಗ್ಯಾಧಿಕನೆ ಹೋಗೆಂದ ೩೧

ದೃಷ್ಟಿಗೋಚರವಾದುದನು ನೆಱೆ
ನಷ್ಟವೆಂದಱೆ ಕಾಲ ಚಕ್ರಾ
ವಿಷ್ಟವೀ ಸಂಸಾರವಾ ಬ್ರಹ್ಮಾಂತವಱೆತವರ
ಮುಟ್ಟಲಱೆಯದು ಮಾಯೆ ನೆನೆವವ
ರಿಷ್ಟರೆನಗವರಂತರಂಗಾ
ವಿಷ್ಟ ನಾನೆಲೆ ತಂದೆ ಚಿಂತಿಸಬೇಡ ಹೋಗೆಂದ ೩೨

ಎಂದು ಸುಪ್ರೇಮದಲಿ ಗೋಪರ
ವೃಂದವನು ವಿನಯದಲಿ ತನ್ನಯ
ತಂದೆಯನು ಕಾತರಿಸದಿರಿ ಬಹೆನೆನುತ ಸಂತವಿಸಿ
ಇಂದಿರಾಪತಿರಾಮರಥಿಕಾ
ನಂದಜಲ ಪರಿಲುಳಿತಲೋಚನ
ದಿಂದ ಕಳುಹಿದರುಚಿತವಹ ಸತ್ಕಾರವನು ಮಾಡಿ ೩೩

ನಂದನಾ ಗೋವಳರು ಸಹಿತಾ
ನಂದ ಮೂರ್ತಿಯನಪ್ಪಿ ಬಲನನು
ನಿಂದು ತಕ್ಕವಿಸುತ್ತ ನಯನಜಲಾವಿಲೇಕ್ಷಣನು
ಮಂದಿರಕೆ ಬೀಳ್ಕೊಂಡು ಭಂಡಿಗ
ಳಿಂದೆಸೆಯೆ ನಿತ್ಯಾತ್ಮ ದೇವ ಮು
ಕುಂದನನು ಭಾವಿಸುತ ಬಂದನು ನಂದಗೋಕುಲಕೆ ೩೪

ನಲವತ್ತನೆಯ ಸಂಧಿ ಮುಗಿಯಿತು.

# ನಲವತ್ತೊಂದನೆಯ ಸಂಧಿ

ಮನುಜರಿಗೆ ಗುರುಮುಖದಲಲ್ಲದೆ
ಜನಿಸದಾತ್ಮಜ್ಞಾನವೆಂಬುದ
ನನುಪಮರು ತೋರ್ಪಂತೆ ನಡೆದರು ಗುರುಗೃಹಾಂತರಕೆ

ಶೂರಸುತನಂದೊಲಿದು ತನ್ನ ಕು
ಮಾರರಿಂಗುಚಿತದಲಿ ನೃಪಸಂ
ಸ್ಕಾರವನು ವೇದೋಕ್ತದಿಂದುಪನಯನ ಸಂಗತಿಯ
ಭೂರಿವಿಭವಂಗಳಲಿ ವಿಶ್ರುತ
ಧಾರುಣೀಸುರಮಂತ್ರದೊಸಗೆಯ
ಭಾರಣೆಯಲೊಪ್ಪಿರೆ ಪುರೋಹಿತನಿಂದ ಮಾಡಿಸಿದ ೧

ಗರ್ಗ ಮಹಋಷಿ ಮುಖ್ಯರಿಂದಪ
ವರ್ಗ ಮೂರ್ತಿಗಳಿಂಗೆ ರಚಿಸಿ ನಿ
ಸರ್ಗನಿರ್ಮಳರಿಂಗೆ ಪಾವನವೆನಿಪ ಸಂಸ್ಕೃತಿಯ
ನಿರ್ಗಮಿತ ಮಾಯರಿಗೆ ವೈದಿಕ
ವರ್ಗವಿಹಿತವ್ರತಗಳನು ಬುಧ
ವರ್ಗವಂದ್ಯರು ಕಟ್ಟಿದರು ನಿಜನಿತ್ಯಮುಕ್ತರಿಗೆ ೨

ದಣಿಯಲಿತ್ತನು ದಾನವನು ಧಾ
ರುಣಿಯ ಸುರರಿಗೆ ಶೌರಿ ನಾರಾ
ಯಣಸಮರ್ಪಿತವೆಂದು ಪುತ್ರಾಭ್ಯುದಯಕರವೆಂದು
ಮಣಿ ಕನಕ ದಿವ್ಯಾಂಬರಂಗಳ
ನೆಣಿಸುವೆಲ್ಲಾ ವಸ್ತುವನು ಮ
ನ್ನಣೆಯ ಮಧುರೋಕ್ತಿಯಲಿ ಪೂಜಿಸಿದನು ಸಭಾಸದರ ೩

ನೆನೆದನಾಗಳೆ ಮುನ್ನ ಕೃಷ್ಣನ
ಜನನದಲಿ ಸಂಕಲ್ಪಿಸಿದ ಗೋ
ಧನವನಯುತವನಿತ್ತನಂದಾ ಕಂಸಭೂಪತಿಯ
ಮನೆಯ ಗೋಧನಗಳನು ಕೊಟ್ಟನು
ಕನಕ ಕೋಡುಗಳಿಂದ ಮಿಗೆ ಸಂ
ಜನಿತ ರೌಪ್ಯಖುರಾಗ್ರವೆಸೆವ ವಿಭೂಷಣಾಂಬರವ ೪

ಆದುದುತ್ಸವವಖಿಳಯಾದವ
ಮೇದಿನೀಶಂಗಂದು ಸಲೆ ಸಂ
ಪಾದಿಸಿದ ಸಂಕರುಷಣಾಚ್ಯುತ ಸದ್ವಿಜತ್ವದಲಿ
ವೇದಮಯರೊಪ್ಪಿದರು ಬಲದಾ
ಮೋದರರು ರವಿರಶ್ಮಿಗಳು ಗಂ
ಗೋದಕಸ್ಪರುಶನವ ಪಡೆದಂದದಲಿ ನಿರ್ಮಳರು ೫

ಬಳಿಕ ವಿದ್ಯಾಮೂರ್ತಿಗಳು ಗುರು
ಕುಲ ನಿವಾಸವ ಬಯಸಿ ಕಾಶೀ
ನಿಳಯ ಸಾಂದೀಪನಿಯೆನಿಪ್ಪ ಮಹಾತ್ಮನಂತಿಕಕೆ
ನಳಿನನಾಭಾನಂತರೆಯ್ದಿದ
ರೊಲಿದವಂತೀಪುರಕೆ ಗುರುಪದ
ಜಲರುಹಕೆ ತಲೆವಾಗಿ ಕಲಿತರು ವಿಮಳ ವಿದ್ಯೆಗಳ ೬

ಕಲಿಸಿದನು ಚೌಷಷ್ಟಿ ವಿದ್ಯಾ
ವಳಿಗಳನು ಗುರು ಸಕಲ ವಿದ್ಯಾ
ಜಲನಿಧಿಗಳಿಗೆ ಸಕಲ ಸುರನರ ಲೋಕ ಗುರುಗಳಿಗೆ
ಸಲೆ ಚತುಷ್ಷಷ್ಟಿ ಪ್ರಮಿತ ದಿನ
ಗಳಲಿ ಸಾಂಗಸಮಗ್ರ ವೇದಾ
ವಳಿ ಧನುರ್ವೇದಾದಿ ಶಾಸ್ತ್ರದ ಶಿಕ್ಷೆಗಳು ಸಹಿತ ೭

ಮೂಗಿನಲಿ ಬೆರಳಿಟ್ಟು ಗುರು ತಲೆ
ದೂಗಿ ಮಾನವರಲ್ಲ ಮಹಿಯಲಿ
ಯೋಗಸಿದ್ಧರೊ ಮೇಣಿವರು ಸಾಕ್ಷಾತು ಹರಿಹರರೊ
ಆಗದಿರರಿವರಲ್ಲದಿರ್ದೊಡೆ
ಲೋಗರಿಂಗೀ ಬುದ್ಧಿ ಬಲ ತೇ
ಜೋ ಗುಣಪ್ರಾಗಲ್ಭ್ಯ ರೂಪಾದಿಗಳಿವೆಂತೆಂದ ೮

ಎತ್ತಲೀ ನರಶಿಶುಗಳವರಱು
ವತ್ತು ನಾಲುಕು ವಿದ್ಯೆಗಳನಱು
ವತ್ತು ನಾಲ್ಕು ದಿನಂಗಳಿಂಗಭ್ಯಾಸವನು ಮಾಳ್ಪ
ಸತ್ವ ಬುದ್ಧಿಯಿದೆಂದೆನುತ ನಿಜ
ಚಿತ್ತದಲಿ ಗುರುಧನ್ಯತೆಯ ನೆನೆ
ವುತ್ತಿರಲು ವಿದ್ಯಾಮಯರು ಸರ್ವಜ್ಞರೆನಿಸಿದರು ೯

ಅಕ್ಷಯರು ಗುರುವಿನಲಿ ಕಳೆಗಳ
ನೀಕ್ಷಿಸಿದರಿನ್ನೇನನೀವೆವು
ದಕ್ಷಿಣೆಗಳನು ಬೇಡಿಕೊಂಬುದು ತಮ್ಮ ಬಲವಱಿದು
ಲಕ್ಷಣಂ ಬೆರಸಾತ್ಮ ವಿದ್ಯೆಯ
ಶಿಕ್ಷಿಸಿದ ಗುರುವಿಂಗೆ ಕೊಡುವೆವು
ದಕ್ಷಿಣೆಯನಿನ್ನೇನನೆನುತೆಱಗಿದರು ಗುರುಪದಕೆ ೧೦

ಆ ಮಹಾತ್ಮರ ಬಿನ್ನಪವ ಸು
ಪ್ರೇಮದಲಿ ಕೇಳುತ್ತ ಮನದಲಿ
ಭೂಮಿಸುರನಾಳೋಚಿಸುತ ನಿರ್ಣಯವ ಕಾಣದಿರೆ
ಭಾಮಿನಿಯು ಬೆಸಗೊಂಡಡೆಂದಳು
ತಾಮರಸಮುಖಿ ತನ್ನಮನದಲಿ
ರಾಮಕೃಷ್ಣರ ತೇಜವನು ಕಾಣುತ್ತ ಪತಿಯೊಡನೆ ೧೧

ತಂದುಕೊಡಹೇಳಾಪಡೆನ್ನಯ
ಕಂದನನು ತೀರ್ಥಕ್ಕೆ ಹೋಗಿರೆ
ಹೊಂದಿದಾತನನಾ ಪ್ರಭಾಸದಲಾ ಜಲಾಂತದಲಿ
ಬೆಂದೊಡಲ ಬೇಗೆಯನು ಕಳೆಯಲಿ
ತಂದೆಗಳು ಸಾಮಾನ್ಯರಲ್ಲಿವ
ರೆಂದು ಸತಿ ಹೇಳಿದಡೆ ಹೇಳಿದನಾತನಿವರೊಡನೆ ೧೨

ಉತ್ತಮರಿರೆನ್ನೊಡೆಯರಿರ ನಿಜ
ಚಿತ್ತವಲ್ಲಭರಿರ ನಿರೂಪವ
ಚಿತ್ತವಿಸುವುದು ಮಕ್ಕಳಿರ ಮಱಿಯಾನೆಗಳಿರೆನ್ನ
ತತ್ವಮೂರುತಿಗಳಿರ ಗುರುಕುಲ
ಕೃತ್ಯವನು ಮಾಡುವರೆ ತನ್ನಯ
ಸತ್ತ ಮಗನನು ತಂದುಕೊಡಿ ನೀವೆಂದನಾ ವಿಪ್ರ ೧೩

ಎನೆ ಹಸಾದ ಭವತ್ಕೃಪಾಸಂ
ಜನಿತ ಕೃತ್ಯರಿಗಾವುದರಿದೆಂ
ದೆನುತ ಗುರುವನು ಬೀಳುಕೊಂಡೇಱಿದರು ಮಣಿರಥವ
ದನುಜಹರ ಬಲರಾ ಪ್ರಭಾಸಾ
ವನಿಯನೆಯ್ದಿದರುದಧಿತೀರದ
ಲನುಪಮರು ಕುಳ್ಳಿರ್ದರಂದಾ ಲೋಕವಂದಿತರು ೧೪

ಅದನಱಿತು ತನ್ನಾಳ್ದನೆಯ್ತಂ
ದುದನು ಸಾಗರನಾಕ್ಷಣವೆ ಲೋ
ಕದಲಿ ಧನ್ಯನು ತಾನೆನುತ ನವರತ್ನನಿಕರವನು
ಸದಮಳರ ಕಾಣಿಕೆಯ ತಂದಿ
ತ್ತೊದವಿದುತ್ಸವದಿಂದ ತನ್ನಯ
ಪದವನೋಲಗಿಸುತ್ತಲಿರಲಿಂತೆಂದನಸುರಾರಿ ೧೫

ಎಲವೊ ತಾ ಗುರುಪುತ್ರನನು ನಿ
ನ್ನೊಳಗೆ ಮಡಿದನನೀಕ್ಷಣವೆ ನುಡಿ
ಬಳಿಕೆನಲು ಕೈಮುಗಿದು ಸಾಗರನಧಿಕ ಭಕುತಿಯಲಿ
ತೊಲಗಿ ಬಿನ್ನವಿಸಿದನು ಕೊಲ್ಲೆನು
ಕೊಲುವರಿಗೆ ಮನಗೊಡೆನು ಗುರುಸುತ
ನಳಿವು ಪಂಚಜನಾಖ್ಯ ಶಂಖಾಸುರನಲಾಯ್ತೆಂದ ೧೬

ಇಹನು ತನ್ನೊಳಗಾತನನು ಕೊಂ
ದಹಿತನನು ಮೃತ ಗುರುಸುತನ ಸಂ
ಗ್ರಹಿಸುವುದು ಬಲ್ಲಿದನು ಖಳನಮರಾಸುರೇಂದ್ರರಲಿ
ಅಹರೆ ನೋಡುವುದೆನಲು ಹರಿ ಗಹ
ಗಹಿಸುತಾ ವರುಣಾಗ್ರಹಸ್ತ
ಗ್ರಹದಲಿಳಿದನು ಜಲಧಿಯಲಿ ಕಂಡನು ಮಹಾಸುರನ ೧೭

ಕಾಳಗದೊಳವನಸುವನಂತಕ
ನಾಲಯಕೆ ಕಳುಹುತ್ತ ಜಠರವ
ಸೀಳಿ ನೋಡಿದನಸುರರಿಪು ಗುರುಪುತ್ರನಿದ್ದಿರವ
ಆಲಿಸುತ ಕಾಣದೆ ಕೃತಾಂತನ
ಕೋಳುವಿಡಿವೆನೆನುತ್ತ ರಿಪುಕುಲ
ಕಾಲನುದ್ಧರಿಸಿದನು ಶಂಖವನಾತನಂಗದಲಿ ೧೮

ಉತ್ತರಿಸಿ ಸಾಗರವ ಬಲ ಪುರು
ಷೋತ್ತಮರು ರಥದಿಂದ ನಿಜಗುರು
ಪುತ್ರನನು ತರಲೆಂದು ಸಂಯಮಿನೀ ಪುರಾಂತರಕೆ
ಮತ್ತೆ ನಡೆತಂದನುಪಮರು ಶಂ
ಖೋತ್ತಮವ ಮೊಳಗಿದರೆ ಕೇಳಿದ
ನೆತ್ತಣದು ರವವೆನುತ ಜವನೈತಂದನಿದಿರಾಗಿ ೧೯

ಎನ್ನೊಡೆಯ ನಾರಾಯಣನ ಶಂ
ಖೋನ್ನತಧ್ವನಿಯೆತ್ತಲೆನಗು
ತ್ಪನ್ನವಾಯ್ತೀ ಶ್ರೋತ್ರಪುಟಪೀಯೂಷದುತ್ಸವಕೆ
ಧನ್ಯನಾದೆನೆನುತ್ತ ಯಮುನ
ತ್ಯುನ್ನತೋನ್ನತ ವಿಭವದಲಿ ಕರು
ಣಾರ್ಣವನನೊಲಿದಿದಿರುಗೊಂಡನು ಸಕಲಜನಸಹಿತ ೨೦

ಬಂದು ಕಾಣಿಕೆಗೊಟ್ಟು ಚರಣ
ದ್ವಂದ್ವದಲಿ ಮೈಯಿಕ್ಕಿ ಮಿಗೆ ರವಿ
ನಂದನನು ನಯನಾಮೃತಾನಂದಾಬ್ಧಿಯಲಿ ಮುಳುಗಿ
ಕಂದೆಱೆದು ಕಮನೀಯ ಮೂರ್ತಿಗ
ಳಂದವನು ನೋಡುತ್ತ ಬಿನ್ನಹ
ವೆಂದು ಕರಪುಟವೆಸೆಯೆ ನುಡಿದನು ವಿನಯಪರನಾಗಿ ೨೧

ಆವ ಧನ್ಯರೊ ತನ್ನ ಪಿತೃಗಳ
ದಾವ ಭಾಗ್ಯಾಧಿಕರೊ ತನ್ನ ಕು
ಲಾವಳೀಸಂಜಾತ ಪಾವನವಾಯ್ತು ನಿಮ್ಮಡಿಯ
ಶ್ರೀವಧೂಕರಕಮಲಲಾಲಿತ
ಪಾವನಾಂಘ್ರಿಯ ದರುಶನಕೆ ತಾ
ನಾವನೆಂದಡಿಗೆಱಗಿ ಪುಳಕಿತನಾಗುತಿಂತೆಂದ ೨೨

ಕೃತ್ಯವಾವುದು ತನಗೆ ದೇವರು
ಚಿತ್ತವಿಸುವುದು ನಿಮ್ಮಡಿಗಳೇ
ನಿತ್ತ ಬಿಜಯಂಗೆಯ್ದಿರೆಂದಂಘ್ರಿಯಲಿ ತಲೆವಾಗಿ
ಭೃತ್ಯಭಾವದಲಿರಲು ಕಾರು
ಣ್ಯೋತ್ತರದ ಸುಪ್ರೇಮ ಸೂಕ್ತಿಯ
ಉತ್ತಮೋತ್ತಮ ಕೀರ್ತಿ ಬೆಸಸಿದನೆಂದು ರವಿಸುತಗೆ ೨೩

ತಂದುಕೊಡು ಗುರುಪುತ್ರನನು ತನ
ಗಿಂದು ಮಾಳ್ಪಡೆ ಸೇವೆಯನು ನಿಜ
ಮಂದಿರದಲಿದ್ದವನನಾತ್ಮಕೃತಾಪರಾಧದಲಿ
ಬಂದೆವಾವಿದು ಕಾರಣದಲೆನ
ಲೆಂದನಾತನು ದೇವರಱಿಯಿರೆ
ತಂದು ಕೊಡುವೀ ಹದನನೆನಲಿಂತೆಂದನಸುರಾರಿ ೨೪

ಪ್ರಾರಬುಧ ವಶದಿಂದ ಜೀವರು
ಸೇರುವರು ನರಕಕ್ಕೆ ಬಲ್ಲೆನ
ದಾರು ತಪ್ಪಿಸಬಹುದು ತಾ ಹೊಱತಾಗಿ ಮೂಜಗಕೆ
ಆರೊಡೆಯರೆಲೆ ಮಗನೆ ಸೇವಕ
ರಾರು ತರ ಹೇಳಿದರೆ ತಹುದು ವಿ
ಚಾರಿಸಲು ತಾನೊಲಿದಡಾ ಪ್ರಾರಬ್ಧವಿಲ್ಲೆಂದ ೨೫

ಎನೆ ಹಸಾದವೆನುತ್ತಾ ಗುರು ಪು
ತ್ರನನು ತಂದಿತ್ತಿನಜನಚ್ಯುತ
ನನುಪನೂಂಘ್ರಿದ್ವಯವ ಭಜಿಸುತ್ತಿರಲು ಭಕ್ತಿಯಲಿ
ದನುಜಹರಬಲರಾತನನು ಸಂ
ಜನಿತ ಕಾರುಣ್ಯದಲಿ ಬೀಳ್ಕೊಂ
ಡನಿಮಿಷಾರಾಧಿತರು ಬಂದರು ಮರಳಿ ಗುರುಗೃಹಕೆ ೨೬

ತಂದು ನಿಜಗುರುಪುತ್ರನನು ಗೋ
ವಿಂದ ರಾಮರು ದಕ್ಷಿಣೆಯನಿದೆ
ತಂದೆ ತಂದೆವು ನಿಮ್ಮಡಿಯ ಕಾರುಣ್ಯಶಕ್ತಿಯಲಿ
ಎಂದು ಕೈಯಲಿ ಕೊಟ್ಟು ಚರಣ
ದ್ವಂದ್ವದಲಿ ತಲೆವಾಗಿದರು ಮರ್ಱು
ತಂದೆತಾಯ್ಗಳ ಹರುಷವನು ಹವಣಿಸುವರಾರೆಂದ ೨೭

ಕಾಲಿಗೆಱಗಿದ ರಾಮಕೃಷ್ಣರ
ಮೌಳಿಗಳ ನೆಗಹುತ್ತ ಹರುಷಾ
ಲೋಲನಯನಾಸ್ಪಂದ ಸಲಿಲಾಮೃತದಲೋಲಾಡಿ
ತೋಳುಗಳು ಮಿಗೆ ದಣಿಯಲಪ್ಪಿ ವಿ
ಶಾಲಮತಿ ಹರಸಿದನು ಪೃಥ್ವೀ
ಪಾಲರಾಗಿ ಪವಿತ್ರಕೀರ್ತಿಗಳಾಗಿ ನೀವೆನುತ ೨೮

ಆವುದರಿದೆಮಗಿನ್ನು ಧರೆಯಲಿ
ಸೇವಕರು ನೀವಾದಿರೆನಲಿ
ನ್ನಾವ ಧನ್ಯನೊ ತಾನೆನುತ ನಿಜಪುತ್ರಲಾಭದಲಿ
ಜೀವವನು ಪಡೆದೊಡಲವೋಲು ಧ
ರಾವಿಬುಧ ಹರುಷದಲಿ ನಿಜರಾ
ಜೀವಲೋಚನೆಸಹಿತ ಹೊಂಪುಳಿಯೋದನಡಿಗಡಿಗೆ ೨೯

ಭಕುತಿಯಲಿ ಬೀಳ್ಕೊಂಡು ಗುರುವನು
ಸಕಲಲೋಕೇಶ್ವರರು ಸಹಜ
ಪ್ರಕಟ ವಿದ್ಯರು ಬಂದರಾ ಮಧುರಾಪುರಕ್ಕೊಲಿದು
ಸಕಲ ಪುರಜನ ಬಂಧುವರ್ಗ
ಪ್ರಕರವಂದೊಲಿದಿದಿರುಗೊಳಲತಿ
ಸುಕೃತವನು ಸಲಿಸಿದರು ಬಲನಿತ್ಯಾತ್ಮರಭಿಜನಕೆ ೩೦

ನಲವತ್ತೊಂಭನೆಯ ಸಂಧಿ ಮುಗಿಯಿತು.

# ನಲವತ್ತೆರಡನೆಯ ಸಂಧಿ

ಬಂದನುದ್ಧವನಚ್ಯುತನ ಬೆಸ
ದಿಂದ ಭಾಗವತೋತ್ತಮನು ನಲ
ವಿಂದ ಬಾಂಧವ ದರ್ಶನಾರ್ಥದಲಂದು ಗೋಕುಲಕೆ

ಅರಸ ಕೇಳೈ ರಾಮಕೃಷ್ಣರ
ಬರವ ಕಾಣುತ ಶಶಿಯಿದಿರ ಸಾ
ಗರದವೋಲುಬ್ಬೆದ್ದು ಪುಳಕದ ಬಹಳ ಹರುಷದಲಿ
ಪರಿಹರಿಸಿ ಬಹುದಿವಸ ಕಾಣದ
ವಿರಹತಾಪವನಾತ್ಮವಿದ್ಯಾ
ಪರಿಣತರವೋಲಾಯ್ತು ಮಧುರಾಪುರಜನಸ್ತೋಮ ೧

ವಿತತ ಹರುಷದಲಿದಿರುಗೊಂಡ
ಚ್ಯುತ ಬಲರನಾ ಪೌರಪರಿಜನ
ತತಿ ತದೀಕ್ಷಣದುತ್ಸವದಲೋಲಾಡಲೊಲವಿನಲಿ
ಶ್ರುತಿಶಿರೋಭೂಷಣರು ರಥದಿಂ
ದತುಳ ವಿಕ್ರಮರಿಳಿದು ಮಾತಾ
ಪಿತೃಗುರುದ್ವಿಜರಂಘ್ರಿಗಳಿಗೆಱಗಿದರು ವಿನಯದಲಿ ೨

ಉಲಿವ ಬಿರುದಿನ ಕಹಳೆಗಳ ಕಳ
ಕಳದ ಬಹುವಿಧ ಭದ್ರವಾದ್ಯಾ
ವಳಿಯ ಮೊಳಗುವ ಸೂತಮಾಗಧವಂದಿಗಳ ರವದ
ಕೆಲದ ಪಾಯವಧಾರುಗಳ ಮಂ
ಗಳ ಮಹಾರವವೆಸೆಯಲುತ್ಸವ
ದೊಳಗೆ ಸುಮುಹೂರ್ತದಲಿ ಹೊಕ್ಕರು ಹರಿಬಲರು ಪುರವ ೩

ಸತ್ತಿಗೆಯ ಚಾಮರದ ಮುಸುಕಕೆ
ಕೆತ್ತುದಂಬರವಿವರ ರಥಹಯ
ಮತ್ತಗಜ ದಳಭಾರದಲಿ ಮೀಱಿತ್ತು ಕಣುಮನವ
ಒತ್ತರಿಸಲೆಡಬಲದಲುದ್ಧವ
ಸಾತ್ಯಕಿಪ್ರಮುಖ ಪ್ರಚಂಡ ಯ
ದೂತ್ತಮರು ನಡೆತಂದು ಹೊಕ್ಕರು ರಾಜಮಂದಿರವ ೪

ಆದುದುತ್ಸವವಖಿಳಯಾದವ
ಮೇದಿನೀಶರಿಗುತ್ತರೋತ್ತರ
ವಾದುದವರಭ್ಯುದಯದುನ್ನತಿಯಿಂದು ಮೊದಲಾಗಿ
ಮೇದಿನೀಪತಿ ಕೇಳು ಬಲದಾ
ಮೋದರರು ಮಾಂಸಾಕ್ಷಿ ಗೋಚರ
ರಾದ ಬಳಿಕಿನ್ನೇನು ದುರ್ಲಭವೆಂದನಾ ಮುನಿಪ ೫

ಒಂದು ದಿನ ಕರುಣಾವನಧಿ ಗೋ
ವಿಂದನಾ ಗೋಕುಲವ ನೆನೆದಿಂ
ತೆಂದನುದ್ಧವನೊಡನೆ ಬಹಳ ಮನೋನುರಾಗದಲಿ
ತಂದೆ ಹೋಗೆನ್ನರಸ ಹೋಗಾ
ನಂದಗೋಕುಲಕೀಗಳಿಂತಿರೆ
ತಂದೆ ತಾಯ್ಗಳ ಮನಕೆ ಹರುಷವ ಮಾಡು ಹೋಗೆಂದ ೬

ಗೋಪಿಯರಿಗೆನ್ನೀ ವಿರಹ ಹೃ
ತ್ತಾಪವಡಗುವವೋಲು ತನ್ನ ಮೃ
ತೋಪಮೋಕ್ತಿಯನೊರೆದು ಸಂತವಿಸೆನ್ನ ಬಾಂಧವರ
ಆಪದವ ಕಳೆ ತಂದೆ ಹೋಗು ಕೃ
ತಾಪರಾಧರು ನಾವು ತನ್ನ ನಿ
ರೂಪವನು ಹಾರುತ್ತಲಿಹರಾ ಗೋಪವನಿತೆಯರು ೭

ಚಿತ್ತವೆನ್ನಲಿ ಪ್ರಾಣವೆನ್ನಲಿ
ಪುತ್ರ ಪತಿ ಪಿತೃ ಮಾತೃ ಬಾಂಧವ
ಭೃತ್ಯ ಗೃಹದಾಸಕುತಿ ತನ್ನಲಿ ಗೋಪವಧುಗಳಿಗೆ
ಇತ್ತಲಿಹುದೆನ್ನೊಡಲು ಮನವವ
ರತ್ತಲಿಹುದೆಲೆ ತಂದೆ ಕಲ್ಪಶ
ತೋತ್ತರಕೆ ತಾ ಕಳೆಯಲಱಿವೆನೆ ಋಣವನಿದನೆಂದ ೮

ತೊಱೆದರೆನಗೋತಿಹಪರವೆನಿ
ಪ್ಪೆರಡಭಿಲಾಷೆಯನು ತನ್ನನು
ಕರಗುವರು ಕಾಣದರೆ ಕಂಬನಿಗಡಲಲಬಲೆಯರು
ಅರೆನಿಮಿಷ ಯುಗವೆಂಬರೆವೆಗಳ
ಮಱೆಗೆ ಬೈವರು ವಿಧಿಯನೆಂತೋ
ವಿರಹ ದುಃಖವನಕಟ ಸೈರಿಸಲಱಿಯರವರೆಂದ ೯

ಇನ್ನೆಗವರಸು ನಿಲ್ಲದೊಡಲಲಿ
ತನ್ನ ವಿರಹಾನಲನಲೊಡಲು ವಿ
ಪನ್ನವಾಗದೆ ಜೀವಿಸಿದ್ದರೆ ಹೇಳು ನೀ ಹೋಗಿ
ಎನ್ನ ವಲ್ಲಭೆಯರಿಗೆ ಬಹಳ ಕೃ
ಪಾರ್ಣವನು ಬಹನಂಜಬೇಡೆಂ
ದೆನುತ ತಮ್ಮನು ಮಱೆಯೆ ನಾನೆಂಬುದನು ಹೇಳೆಂದ ೧೦

ಭಕುತ ಯೋಗಕ್ಷೇಮ ನಿರ್ವಾ
ಹಕನು ತಾನೆಂಬೀ ಪ್ರತಿಜ್ಞೆಗೆ
ವಿಕಳತೆಯನಾಗಿಸಿತಲಾ ಗೋಪಾಂಗನಾವಿರಹ
ಮುಕುತಿ ಫಲವಲ್ಲವರ ಮನದಾ
ಸಕುತಿಗವರನುರಾಗಲಾಲಿತ
ಭಕ್ತಿಗಾವುದು ಪಡಿ ಫಲೋದಯವೀವುದುಂಟೆಂದ ೧೧

ಅಱಿಯರೆನ್ನಿಂದಧಿಕ ದೈವವ
ನಱಿಯರೆನ್ನಿಂದಧಿಕ ಹಿತವರ
ನಱಿಯರೆನ್ನಿಂದತಿಶಯಪ್ರಿಯಮಿತ್ರ ಬಾಂಧವರ
ಅಱಿತನೇ ತಾನದನು ಗೋಪಿಯ
ರುಱುವ ಸ್ನೇಹದ ಸಿಱುಗೆಯನು ನಿ
ಷ್ಕರುಣಿಗಳು ತನ್ನಂದದವರಾರಿನ್ನು ಹೇಳೆಂದ ೧೨

ನೀನೆನಗೆ ಸರಿತೂಕದವನು ಸ
ಮಾನ ಬಾಂಧವನೆನಗೆ ತನ್ನ ಮ
ನೋನುರಾಗದ ಭಕ್ತನದಱಿಂದೆನ್ನ ವಾರ್ತೆಯನು
ನೀನೊರೆದು ನಿಜಭಕ್ತೆಯರ ದು
ಮ್ಮಾನವನು ಕಳೆ ಹೋಗು ಭಕ್ತಾ
ಧೀನನೆಂಬೀ ಬಿರುದ ಪಾಲಿಸು ತಂದೆ ಹೋಗೆಂದ ೧೩

ಧರೆಯನೊಲ್ಲೆನು ಸಿರಿಯನೊಲ್ಲೆನು
ವರಸಖಿ ಪ್ರಿಯ ಮಿತ್ರ ಬಾಂಧವ
ರಿರವನೊಲ್ಲೆನು ತನ್ನ ಭಕ್ತರನಲ್ಲದುಳಿದವರ
ಸರಕು ಮಾಡೆನು ಮಗನೆ ಹೋಗೆ
ನ್ನರಸ ಹೋಗೆನ್ನಾನೆ ಹೋಗೆ
ನ್ನುರುತರ ಪ್ರೇಮಾಸ್ಪದನೆ ಹೋಗೆಂದನಸುರಾರಿ ೧೪

ಎಂದಡಾಗಲಿ ಜೀಯಯೆನುತಾ
ನಂದದಲಿ ತಲೆವಾಗಿ ಚರಣ
ದ್ವಂದ್ವದಲಿ ಮೈಯಿಕ್ಕಿ ಪುಳಕಿತನಾಗಿ ಬೀಳ್ಕೊಂಡು
ಅಂದು ಭಾಗವತೋತ್ತಮನು ರಥ
ದಿಂದ ಹರಿಯಾಜ್ಞೆಯಲಿ ನಡೆದನು
ನಂದಗೋಕುಲಕಧಿಕ ತೀವ್ರ ಮನೋನುರಾಗದಲಿ ೧೫

ಅನ್ನೆಗಿನನಸ್ತಾಚಲಕ್ಕುಪ
ಸನ್ನನಾದನು ಭಕ್ತಿಗುಣ ಸಂ
ಪನ್ನ ಮತಿ ಬರೆ ನಂದಗೋಕುಲಕಾಗಿ ಮಾರ್ಗದಲಿ
ಧನ್ಯವಹ ಗೋಧೂಳಿ ಪಟಲ
ಚ್ಛನ್ನರಥ ಹಯಗಾತ್ರನೈತಂ
ದುನ್ನತಾಮಳಕೀರ್ತಿ ಕಂಡನು ಗೋಕುಲದ ಸಿರಿಯ ೧೬

ಕಂಡನಾ ಗೋಕುಲವನಾ ತುಱು
ವಿಂಡುಗಳ ಸಂದಣಿಯ ನಾ ಮೊಲೆ
ಯುಂಡು ಕುಣಿವೆಳಗಱುಗಳೆಸೆವಾನಂದಲೀಲೆಗಳ
ಕಂಡು ಗೋಪೀ ಗೋಪನಿಕರದ
ಖಂಡವಿಭವದಲೆಸೆವ ಸಿರಿಯನು
ಮಂಡೆಯಲಿ ಕರಮುಕುಳವನು ಧರಿಸುತ್ತ ನಡೆತಂದ ೧೭

ಮಘಮಘಿಪ ಮನೆ ಮನೆಯ ಧೂಪದ
ಹೊಗೆಯ ಗುರುಪಿತೃ ದೇವಪೂಜಾ
ದಿಗಳ ಸಂಭ್ರಮದಿಂದ ಮೆಱೆವ ಮಹಾ ಮಹೋತ್ಸವದ
ಹಗಲಿರುಳು ಹರಿಗುಣವ ಪಾಡುವ
ಹೊಗಳುತಳಲನು ಮಱೆವ ಗೋಪಿಯ
ರೊಗುಮಿಗೆಯ ಸಂಗೀತವನು ಕೇಳುತ್ತ ನಡೆತಂದ ೧೮

ಇಳಿದು ರಥವನು ಭಾಗವತ ಕುಲ
ತಿಲಕನಾ ಬಾಗಿಲಲಿ ನಂದನ
ನಿಳಯವನು ಹೊಗುತಿರಲು ನೆಱೆ ಕಾಣುತ್ತ ದೂರದಲಿ
ತೊಲಗಿದಸು ಬಂದಂತೆ ಹರುಷಾ
ಕುಲಿತಲೋಚನನಿದಿರು ಬಂದು
ತ್ಕಲಿತ ಪುಳಕದಲಪ್ಪಿದನು ಬಾಂಧವನನಾ ನಂದ ೧೯

ಸತುಕರಿಸಿ ಪರಮಾಸನದಲಂ
ದತಿಶಯ ಪ್ರೀತಿಯಲಿ ಭುವನಾ
ರ್ಚಿತನನೊಲಿದರ್ಚಿಸುತ ಕೃಷ್ಣಪ್ರಿಯ ಸಬಾಂಧವನ
ನುತ ಸುಭೋಜನ ಪಾನವಿಭವೋ
ಚಿತ ಸುಸತ್ಕಾರದಲಿ ಕಳೆದನು
ವಿತತ ಮಾರ್ಗಶ್ರಮವನಧಿಕಾನಂದದಲಿ ನಂದ ೨೦

ಕುಳ್ಳಿರಿಸಿ ಮಂಚದಲಿ ಮೃದುಪದ
ಪಲ್ಲವವನೊತ್ತುತ್ತ ಲಕ್ಷ್ಮೀ
ವಲ್ಲಭನು ಸಾಕ್ಷಾತ ನೀನೆಂದೊಲಿದು ಪತಿಕರಿಸಿ
ಎಲ್ಲರಿನ್ನೆಗ ಕುಶಲರೇನೈ
ಬಲ್ಲಹನೆ ಶೂರಾತ್ಮಜಾದ್ಯರು
ಬಲ್ಲಿದರೆ ಬಾಂಧವರು ಬಂದಿರದೆಂತು ನೀವೆಂದ ೨೧

ಕುಶಲಿಗಳೆ ಸಲೆ ರಾಮಕೃಷ್ಣರು
ಕುಶಲರೇ ನಮ್ಮಾಪ್ತ ಬಾಂಧವ
ವಿಸರದಲಿ ಸಂಬಂಧಿ ಶಿಶುಪಶು ಭೃತ್ಯವರ್ಗದಲಿ
ಹೆಸರಿಸಿದ ಭಾಗವತನಿತ್ತಲು
ಹೊಸತಲಾ ನೀ ಬಹುದು ಮಱು ಭಾ
ಪಸಮ ಪುಣ್ಯನು ತಾನೆನುತ ತೂಗಿದನು ನಿಜಶಿರವ ೨೨

ನೆನೆವನ್ನೆ ಮಱೆದೊಮ್ಮೆ ಜನನೀ
ಜನಕರನು ಗೋವಿಂದನೆಮ್ಮನು
ನೆನೆವನ್ನೆ ಸಖಿಯರನು ಗೋಪರನಾಪ್ತ ಬಾಂಧವರ
ನೆನೆವನ್ನೆ ಗೋಕುಲವನೀ ಗೋ
ಧನವನೀ ಬೃಂದಾವನವನೀ
ವಿನುತ ಗೋವರ್ಧನವೆನಿಪ್ಪೀ ಗಿರಿಯನಿದನೆಂದ ೨೩

ತಂದೆ ಹೇಳೆನ್ನಾಳ್ದನೆನ್ನಾ
ನಂದನಿಧಿಯೆನ್ನರಸ ತಮ್ಮನ
ನೆಂದು ಕಾಣಲನಾಥರನು ನಿಜಚರಣಶರಣರನು
ಬಂದರೀಕ್ಷಿಸೆನೊಮ್ಮೆ ದೇವ ಮು
ಕುಂದನೊಪ್ಪುವ ಮಧುರರಸನಿ
ಸ್ಯಂದಹಾಸೇಕ್ಷಣದ ಕಮನೀಯಾನನಾಂಬುಜವ ೨೪

ವರುಷವಾತದ ಬಾಧೆಯಲಿ ಕಾ
ಳುರಿಯ ಕೋಪದಲಹಿ ವೃಷಭ ದು
ಸ್ತರ ಮಹಾ ಮೃತ್ಯುಗಳ ಮುಖದಲಿ ಬಹುವಿಪತ್ತಿನಲಿ
ಕರುಣದಲಿ ರಕ್ಷಿಸಿದನೆಮ್ಮನು
ಶರಣಜನ ನಿಜಬಂಧು ಕೃಷ್ಣನ
ಚರಣವನು ತಾನೆಂತು ಮಱೆವೆನು ತಂದೆ ಹೇಳೆಂದ ೨೫

ಹೇಳಲೇನೆಲೆ ತಂದೆ ಕೃಷ್ಣನ
ಬಾಲಕೇಳಿಯನಾ ಪರಾಕ್ರಮ
ದೇಳಿಗೆಯನಾ ಮಧುರ ಹಾಸೋದಾರ ವೀಕ್ಷಣದ
ಲೋಲನಯನಾಪಾಂಗದೆಸೆವ ಕ
ಪೋಲ ನಾಸಾಪುಟ ಮೃದೂಕ್ತಿಯ
ನಾಲಿಸುತ ನಿಶ್ಚೇಷ್ಟರಾಗಿಹೆವೆಂದನಾ ನಂದ ೨೬

ಆ ಮುಕುಂದ ಪದಾಬ್ಜ ರೇಖಾ
ಸ್ತೋಮರಂಜಿತ ಗಿರಿ ನದೀ ವನ
ಭೂಮಿಗಳನಿವನೆಂತು ಮಱೆವೆವು ಕಾಣುತಡಿಗಡಿಗೆ
ಈ ಮನೋಹರ ವೇಣುರವವೆಂ
ತಾ ಮಹಾತ್ಮನ ಮಱೆಯಲೀಯವು
ಸೋಮಸನ್ನಿಭ ಕೇಳು ತನ್ಮಯವಹುದು ಮನವೆಂದ ೨೭

ಬಳ್ಳೆನಚ್ಯುತರಾಮರನು ನರ
ರಲ್ಲ ಗೋವಳರಲ್ಲ ಯಾದವ
ರಲ್ಲ ದೇವೋತ್ತಮರು ತಾವವತರಿಸಿ ಧರಣಿಯಲಿ
ಸಲ್ಲಲಿತ ಮೂರ್ತಿಗಳು ನರರಂ
ತೆಲ್ಲರಿಗೆ ಮೆಱೆವುತ್ತ ನಿಜವನು
ವಲ್ಲಭನೆ ವರ್ತಿಸುವರಖಿಳ ಜಗದ್ಧಿತಾರ್ಥದಲಿ ೨೮

ಗರ್ಗನಂದೆನಗೊರೆದನಿವರಪ
ವರ್ಗ ಮೂರ್ತಿಗಳೆಂದು ಮಱವೆಯ
ಮುಗ್ಗುಲಲಿ ಮಾತಾಡಿ ನಂಬಿಸೆ ತನ್ನ ಸುತರೆಂದು
ದುರ್ಗಮವ ನೀವ್ ಕಳೆವಿರಿವರಿಂ
ದಗ್ಗಳೆಯರೀ ಸುರ ನರೋರಗ
ವರ್ಗದೊಳಗಿಲ್ಲೆಂದಡಱಿಯದೆ ಕೆಟ್ಟೆವಾವೆಂದ ೨೯

ದುರ್ಲಲಿತ ತಾಳತ್ರಯದ ಬಲು
ಬಿಲ್ಲು ಮುಱಿದು ಮಹಾಹವಕೆ ಗಜ
ಮಲ್ಲರನು ಬಲಿಗೊಟ್ಟು ರಂಗದ್ವಾರದಲಿ ಮಲೆವ
ಮಲ್ಲರನು ತಲೆಗೊಂಡು ಕಂಸನ
ಕೊಲ್ಲರೈ ನಾಗಾಯತ ಪ್ರತಿ
ಮಲ್ಲ ಬಲನನು ಹರಿಬಲರು ಸಾಮಾನ್ಯರಲ್ಲೆಂದ ೩೦

ಆರು ಶಿಶುತನದಂದು ದನುಜೆಯ
ಹೀರಿದರು ಜೀವವನು ಶಕಟನ
ನಾರೊದೆದವರಭ್ರದಲಿ ವಾತಾಸುರನ ಜೀವನಕೆ
ಮಾರಿಯಾದವರಾರು ವತ್ಸನ
ನಾರು ಕೊಂದರು ಸೀಳ್ದು ಬಕನನು
ಸೇರಿಸಿದರಾರಂತಕಂಗೆಲೆ ತಂದೆ ಹೇಳೆಂದ ೩೧

ಬೆಣ್ಣೆಗಳ್ಳನದಾರು ಬಾಯಲಿ
ಮಣ್ಣ ಮೆದ್ದು ಗುಣತ್ರಯಂಗಳ
ಬಣ್ಣಿಗೆಯ ಭುವನಾವಳಿಯ ಚಿತ್ರವನು ತೋಱುತ
ಚಿಣ್ಣನುದರಕ್ಕೂರದಾವ್ಗಳು
ಹಣ್ಣಲಱಿಯವು ಮಗುಳೆ ಮೊದಲಾ
ಕಣ್ಣಿಯೊಂದೇ ಕಟ್ಟಲಾದುದು ತಂದೆ ಕೇಳೆಂದ ೩೨

ಏಳು ವರ್ಷದ ಬಾಲಕನು ತಾ
ನೇಳು ದಿನ ಪರಿಯಂತವೊಂದೇ
ತೋಳಿನಲಿ ಗೋವರ್ಧನಾದ್ರಿಯನಕಟ ಲೀಲೆಯಲಿ
ತಾಳಿದಿರನ್ನೆ ಪ್ರಳಯದಂದಿನ
ಗಾಳಿ ಮಳೆಯಲಿ ಕಾಳಿಯಾಖ್ಯ
ವ್ಯಾಳನನು ಹೆಡೆತುಳಿದು ಕಳುಹನೆ ಸಾಗರಕ್ಕೆಂದ ೩೩

ಹೇಳಲಱಿಯೆನು ಕೃಷ್ಣನರ್ಭಕ
ಲೀಲೆಗಳನಖಿಳಾಮರೇಂದ್ರರು
ಹೋಲಲಱಿವರೆ ರೂಪು ಗುಣ ವಿಕ್ರಮದ ವಿಭವದಲಿ
ಖೂಳರಾರೆಮ್ಮಂತೆ ಲಕ್ಷ್ಮೀ
ಲೋಲನನು ಮಗನೆಂದು ದಿಟ ಗೋ
ಪಾಲನೆಂದಜ್ಞಾನ ಮೋಹಿತರಾದೆವಾವೆಂದ ೩೪

ಎನುತೆನುತ ಕೃಷ್ಣಾಂಘ್ರಿಕಮಲವ
ನೆನೆನೆನೆದು ಜನಿತಾನುರಾಗದ
ವನಧಿಯಲಿ ಮನಮುಳುಗಿ ತನ್ಮಯನಾಗಿ ಪುಳಕದಲಿ
ನೆನೆದು ನಯನಾನಂದ ಜಲದಲಿ
ಮುನಿವರರ ಪೋಲೆರಡನಱಿಯದ
ಘನಸುಖದಲುಸುರದೆ ಸಮಾಧಿಯಲಿದ್ದನಿದಿರಳಿದು ೩೫

ಇರಲದನು ಕೇಳುತ್ತ ಪುತ್ರನ
ಚರಿತವನು ತದ್ಗುಣಗಣಂಗಳ
ನಿರದೆ ನೆನೆವುತ್ತಾ ಯಶೋದೆ ಮನೋನುರಾಗದಲಿ
ತೊರೆದ ಮೊಲೆಗಳ ತನುಪುಳಕದು
ಬ್ಬರದ ನಯನಜಲೌಘದೊಳಗಂ
ಬುರುಹಮುಖಿ ನೆನೆವುತ್ತ ಹೊಂಪುಳಿಯೋದಳಡಿಗಡಿಗೆ ೩೬

ಅವರ ಮನದನುರಾಗವನು ಭಾ
ಗವತನಾ ಕೃಷ್ಣಾಂಘ್ರಿ ದರುಶನ
ದವಿರಳಾಂತಸ್ತಾಪವನು ಕಾಣುತ್ತ ಮನದೊಳಗೆ
ಸವನಿಸಿದ ಭಕುತಿಯಲಿ ಕೈಮುಗಿ
ದವನತನು ತಾನಾಗಿ ವರ ವೈ.
ಷ್ಣವಕುಲಾಗ್ರಣಿ ಧನ್ಯತೆಗೆ ತಲೆದೂಗುತಿಂತೆಂದ ೩೭

ಆರು ನಿಮ್ಮಂದದ ಕೃತಾರ್ಥರು
ಭೂರಿ ಭಾಗ್ಯರು ಭುವನಜನ ವಿ
ಸ್ತಾರದಲಿ ನಿಮ್ಮಂತೆ ಧನ್ಯರದಾರು ಮುನಿಮನಕೆ
ದೂರವಹ ಪರಮಾತ್ಮನಲಿ ಮನ
ಬೇರುವಱಿದುದು ಕೃಷ್ಣನಲಿ ಸಾ
ಕಾರ ಸಂಪತ್ತಿನಲಿ ಪುತ್ರಪ್ರೇಮದಿಂದೆಂದ ೩೮

ಈ ಸಕಲ ಜಗದುದಯ ಸಂಸ್ಥಿತಿ
ನಾಶ ಹೇತುಗುಣತ್ರಯಂಗಳ
ಕೋಶವೆನಿಸುವ ಮಾಯೆ ಪೈಗೊಂಡಾವನಂಘ್ರಿಯಲಿ
ದಾಸಿಯಾಗಿಹಳಾ ವಿಕುಂಠಾ
ವಾಸಿ ಸಾಕ್ಷಾದ್ವಿಷ್ಣು ಧರೆಯಲಿ
ವಾಸುದೇವಾಖ್ಯೆಯನು ತಳೆದನು ತಂದೆ ಕೇಳೆಂದ ೩೯

ಆವನೊಬ್ಬನನಂತ್ಯಕಾಲದ
ಲೋವಿ ನಿಜಚಿತ್ತದಲಿ ಕ್ಷಣ ಕಾ
ಲಾವಸರವನು ಪಡೆದು ನೆನೆದರೆ ನಿಮಿಷಮಾತ್ರದಲಿ
ಜೀವರೈದುವರೆನೆ ವಿಮುಕ್ತಿಯ
ನಾ ವಿಕುಂಠಾಧೀಶನಲಿ ನಿಜ
ಭಾವವುಳ್ಳ ಮಹಾತ್ಮರಿಗೆ ನಿಮಗಾರು ಸರಿಯೆಂದ ೪೦

ಒಮ್ಮೆ ನಿಜನಾಮವನು ನೆನೆದಡೆ
ಕರ್ಮಬಂಧನ ಕಡಿವ ಸಾಕ್ಷಾ
ದ್ಬ್ರಹ್ಮ ಮೂರುತಿ ಕೃಷ್ಣನಂಘ್ರಿಯನಕಟ ನಿಮಗೆಂದು
ಸಮ್ಮತಾತ್ಮಸುತಾಭಿಮಾನದ
ನೆಮ್ಮುಗೆಯ ನಿಜಭಕ್ತಿಯಾಯ್ತೀ
ನಿಮ್ಮ ಹೋಲುವ ಪರಮಧನ್ಯರದಾರು ಹೇಳೆಂದ ೪೧

ಅತ್ತಲಜಭವ ಸುರ ಮುನೀಂದ್ರರು
ಚಿತ್ತದಲಿ ನೆನೆನೆನೆದು ದಣಿಯರು
ಸತ್ಯ ಸಂವಿದ್ರೂಪನನು ಸಂಪನ್ನಭಕುತಿಯಲಿ
ಇತ್ತಲೀ ನರಲೀಲೆಯಲಿ ಪರಿ
ವರ್ತಿಸುತ ಪರಮಾತ್ಮನಿಹುದೀ
ಮರ್ತ್ಯಲೋಕದ ಪುಣ್ಯವಲ್ಲಾ ತಂದೆ ಹೇಳೆಂದ ೪೨

ಅಂತಿಕದಲಿಹನಚ್ಯುತನು ಮನ
ದಂತರಂಗ ವ್ಯಥೆಯನೆಲ್ಲರಿ
ಗಂತರಾತ್ಮನು ಕೃಷ್ಣನಲ್ಲಾ ನೆನೆದು ನೋಡುವಡೆ
ಸಂತವಿರು ಸುಖಿಯಾಗು ಲಕ್ಷ್ಮೀ
ಕಾಂತನನು ನಿನ್ನೊಳಗೆ ಕಂಡೀ
ಚಿಂತೆಯನು ಬಿಡು ತಾಯೆ ಸರ್ವಾತ್ಮಕನು ಹರಿಯೆಂದ ೪೩

ತಂದೆ ತಾಯೊಡವುಟ್ಟದವರೆಂ
ಬೊಂದು ಮಾಯಾ ಭ್ರಾಂತಿಯಿದು ಗೋ
ವಿಂದನಲಿ ದೊರಕೊಳ್ಳದಖಿಳಾತ್ಮಕನು ತಾನಾಗಿ
ಮುಂದಮತಿಗಳು ಬಱಿದೆ ಸತಿಸುತ
ರೆಂದು ಬಾಂಧವ ಜನಕ ಜನನಿಯ
ರೆಂದು ಕಲ್ಪಿಸಿ ಕೆಡುವುದೊಂದೇ ವಸ್ತುವಿನಲೆಂದ ೪೪

ಬಿಡದೆ ಮೂಱು ಗುಣಂಗಳಲಿ ತನು
ವಿಡಿದು ಸೃಷ್ಟಿ ಸ್ಥಿತಿ ಲಯಂಗಳ
ನಡಸುವನು ಪರಮಾತ್ಮನಜ ಹರಿ ಯೀಶ್ವರಾಖ್ಯೆಯಲಿ
ಕಡೆಗೆ ತಾನೇ ತನ್ನೊಳಗೆ ತನು
ವಿಡಿದು ನಿಲಲು ಗುಣತ್ರಯಂಗಳ
ತೊಡಱ ದೇಕನ ನಂತನನಕ್ರಿಯನಾತ್ಮ ನೋಡೆಂದ ೪೫

ಮಗನು ನಿಮಗೆಂದೆಂಬರೆಲ್ಲಾ
ಜಗಕೆ ಮಗನಲ್ಲಾ ಮುಕುಂದನು
ನಿಗಮಮತವೆಲೆ ಪುಣ್ಯವಂತರಿರಿದು ವಿಚಾರಿಸಲು
ಅಗಲಲಱಿವನೆ ಚಿನುಮಯನು ಸ
ರ್ವಗನು ಸರ್ವಾತ್ಮಕನು ತೋಱುವ
ದೃಗುಯುಗಳ ವಿಷಯಕ್ಕೆ ವಿಹ್ವಲರಾಗಬೇಡೆಂದ ೪೬

ತಾ ತಿರುಗಿ ಕಂಗೆಟ್ಟು ತಿರುಗಿತು
ಭೂತಳವಿದೆಂಬಂತೆ ದಿಟ ಪರ
ಮಾತುಮನೆ ತೋಱುವನು ತತ್ವಜ್ಞಾನಶೂನ್ಯರಿಗೆ
ಜಾತ ಮೃತವೆಂಬಂತೆ ಕರ್ಮ
ವ್ರಾತ ಕರ್ತುವಿನಂತೆ ಹಮ್ಮಿನ
ಹೇತುವಿಂದಲಿ ತಿಳಿದರಕ್ರಿಯನಾತ್ಮ ನೋಡೆಂದ ೪೭

ಜಲನಿಧಿಯ ವೀಚಿಯ ವಿಕಾರಾ
ವಳಿಗಳಾ ಜಲಧಿಯಲಿ ತೋಱುವು
ದಳಿವುದೆಂತಂತದ್ವಯ ಜ್ಞಾನಾಮೃತಾಬ್ಧಿಯಲಿ
ಹೊಳೆದು ತೋಱುವವೀಯಜಾಂಡಾ
ವಳಿ ಚರಾಚರಸಹಿತ ಕೃಷ್ಣನ
ಲಳಿವವೆನಲಿನ್ನಾರು ತದ್ವಿರಹಿತರು ಹೇಳೆಂದ ೪೮

ಭಾವಿಸಲು ಸರ್ವಾತ್ಮಕನು ಮಾ
ಯಾವಿಲಂಬನದಿಂದ ಜನಿಸಿದ
ನಾವನಧಿಲೋಕೈಕಹಿತವಿಗ್ರಹನು ತಾನೆನಿಸಿ
ಈ ವಸುಧೆಯಲಿ ಸಂಚರಿಸಲಿಂ
ದೀವರಾಕ್ಷನು ನಿಮ್ಮ ಬಯಕೆಯ
ಭಾವನೆಗೆ ಬಳಿಸಂದು ಬಂದನು ನಿಮ್ಮ ಸನ್ನಿಧಿಗೆ ೪೯

ಯತಿಮನಂಗಳು ಮುಟ್ಟಲಱಿಯವು
ಕ್ರತುಗಳಾವನ ತುಷ್ಟಿಗೈಯವು
ಶ್ರುತಿನಿಕರ ಬಣ್ಣಿಸಲು ನೆಱೆಯವದಾವನೊಳು ಗುಣವ
ಸುತನೆನಿಸಿ ಮೊಲೆಯುಂಡು ದಣಿದ
ಚ್ಯುತನು ಮುಗ್ಗುಲಲೊಱಗುವನು ಕೇ
ಳುತ ನಿಜಾರ್ಭಕಚರಿತವನು ನೀವ್ ಪಾಡುತಿರಲೆಂದ ೫೦

ಧನ್ಯರಿನ್ನಾರವ್ವ ನಿಮ್ಮಿಂ
ತನ್ಯರೀ ಜಗದೊಳಗೆ ಸಜ್ಜನ
ಮಾನ್ಯರಾರೀ ಭಕುತಿಯಾಪರಿ ಜನಿಸಬೇಕೆಂದು
ಸನ್ನುತನು ದೂರಸ್ಥನಾದಂ
ತೆನ್ನನಟ್ಟಿದನದು ನಿಮಿತ್ತವೆ
ಖಿನ್ನರಾಗದಿರೆಂದು ಸಂತವಿಸಿದನು ಬಾಂಧವರ ೫೧

ಎಂದು ಹರಿ ಮಹಿಮೆಗಳನಂದಾ
ನಂದಗೋಪ ಯಶೋದೆಗಾ ಗೋ
ವಿಂದದಾಸನು ಮನದ ವಿರಹ ವಿಷಾದ ಕೆಡುವಂತೆ
ಬಂದಪನು ಹರಿಯೆಂದು ಬಣ್ಣಿಸು
ತಂದು ಕುಳ್ಳಿರಲಿರುಳು ಕತ್ತಲೆ
ಸಂದುದರೆನಿಮಿಷದವೊಲಾ ನಿತ್ಯಾತ್ಮನಿಷ್ಠರಿಗೆ ೫೨

ನಲವತ್ತೆರಡನೆಯ ಸಂಧಿ ಮುಗಿಯಿತು.

# ನಲವತ್ತಮೂರನೆಯ ಸಂಧಿ

ಸಂತವಿಟ್ಟನು ಗೋಪಿಯರನೇ
ಕಾಂತಭಕ್ತರ ದೇವ ಲಕ್ಷ್ಮೀ
ಕಾಂತನಾಜ್ಞಾಪಿಸಿದಮಳ ಸಂದೇಶ ಸೂಕ್ತಿಯಲಿ

ಅರಸ ಕೇಳಾ ನಂದಗೋಪಾ
ದ್ಯರು ಮುಕುಂದನ ಲೀಲೆಯನು ವಿ
ಸ್ತರಿಸುತುದ್ಧವನೊಡನೆ ಮಾತಾಡುತ್ತ ಕುಳ್ಳಿರಲು
ಇರುಳು ಕಡೆ ಹಗಲಾಯಿತೆಂದಂ
ಬುರುಹಮುಖಿಯರು ಗೋಪನಾರಿಯ
ರಿರದೆ ಕಡೆದರು ಮೊಸರನೊಪ್ಪಿರೆ ದೀವಿಗೆಯ ಬೆಳಗಿ ೧

ಸೊಡರ ಬೆಳಗಿನಲೆಸೆವ ಮಣಿ ಹೊಂ
ದೊಡಿಗೆಗಳ ಮೊಗರಸವ ಸೂಸುವ
ಬಿಡುಮುಡಿಯ ಮಲ್ಲಿಗೆಯ ಚಲಕುಚತಟದ ಕದಪುಗಳ
ಹೊಡೆವ ಹೊನ್ನೋಲೆಗಳ ಕೆಱೆಬೆಮ
ರಿಡುವ ಭಾಳದ ಸುಳಿಗುರುಳುಗಳ
ಮಡದಿಯರು ಪಾಡಿದರು ಹರಿಯನು ಮೊಸರ ಕಡೆವುತ್ತ ೨

ದಿವವನಳ್ಳಿಱಿವಂತೆ ದಶದಿಗು
ವಿವರದಘ ಹರಿವಂತೆ ಸುಜನ
ಶ್ರವಣ ಮಂಡಳವೆನಲು ಪರಮಾನಂದಕರವೆನಲು
ಯುವತಿಯರು ಪಾಡಿದರು ಕೃಷ್ಣನ
ನವಿರಳ ಪ್ರೇಮೋಪರಂಜಿತ
ರವದಲಾ ತ್ರೈಲೋಕ್ಯಪಾವನ ಮೂರ್ತಿಗಳು ಬಿಡದೆ ೩

ಪರಿಪರಿಯ ಹರಿ ಬಾಲಲೀಲಾ
ಚರಿತವನು ಪಾಡುತ್ತ ಕಾಂತೆಯ
ರಿರದೆ ಮೊಸರನು ಕಡೆವುತಿರೆ ತತ್ಪಾರವಶ್ಯದಲಿ
ಹರಿವ ದುರಿತದ ಕೂಡೆ ಕತ್ತಲೆ
ಹರಿದುದೆಣ್ದೆಸೆಗುದಯ ಶೈಲದ
ಶಿರದಲಿತ್ತನು ರವಿ ಧರಾತಳಕೆಸೆಯಲೋಲಗವ ೪

ನಾರಿಯರು ಬೆಳಗಾಗಲಾ ಹೊಂ
ದೇರನೀಕ್ಷಿಸಿ ಬಾಗಿಲೊಳಗಿರ
ಲಾರು ಬಂದವರಿಂದು ನವಿಸ್ಮಾ ನಂದಗೋಕುಲಕೆ
ಬಾರದಿರನಕ್ರೂರನಾವುದು
ಕಾರಿಯವೊ ತನಗಿಲ್ಲಿ ಬಹಡೆ ವಿ
ಚಾರಿಸುವಡೆಂದೈತಂದರಂದಾ ರಥದ ಹೊರೆಗಾಗಿ ೫

ನೆರೆದು ಸತಿಯರು ನೋಡುತಿರಲಂ
ಬುರುಹನಾಭನ ಭಕ್ತನಂದಾ
ಚರಿಸಿ ಸಂಧ್ಯಾವಂದನವನೈತಂದನಾ ಸ್ಥಳಕೆ
ಅರಳುಗಂಗಳಲೆಸೆವ ಭಾಳದ
ಕುರುಳುಗಳ ಕಮನೀಯ ವದನಾಂ
ಬುರುಹ ಕಾಂತಿಯಲಖಿಳ ಜನಮನಗಳನು ಮೋಹಿಸುತ ೬

ಉಟ್ಟ ಪೀತಾಂಬರದ ಕಿವಿಗಳ
ವಟ್ಟ ಮಣಿಕುಂಡಲದ ಕೊರಳಲಿ
ತೊಟ್ಟ ಹಾರದ ವೈಜಯಂತಿಯ ಕರದ ಕಂಕಣದ
ಕಟ್ಟಿದುಡೆ ನೇವಳದ ಮಣಿಗಳ
ವಟ್ಟ ಮುಂಜೆಱಗಿನಲಿ ದನುಜಘ
ರಟ್ಟನಂತೈತರಲು ಕಂಡರು ಗೋಪಕಾಂತೆಯರು ೭

ಈತನಾರಿವನಾರು ಬನ್ನಿ ಮ
ಹಾತಿಶಯ ಪೂರುಷನಲಾ ಸಾ
ಕ್ಷಾತು ಕೃಷ್ಣನ ಹೋಲುವಾಕೃತಿ ವೇಷ ಭೂಷಣದ
ಜಾತಶೋಭೆಗಳೆಂತು ತಾನೆಂ
ದೀತನಲಿ ಸಂಭವಿಸಿದವು ಬ
ನ್ನೀತನನು ನೋಡುವೆವೆನುತ ನಡೆತಂದರಬಲೆಯರು ೮

ಆ ಸತಿಯರುದ್ಧವನನಚ್ಯುತ
ದಾಸನೆಂಬುದನಱಿತು ತತ್ಕೃತ
ವೇಷಭೂಷಣದಿಂದ ವಿದಿತ ಮನೋನುರಾಗದಲಿ
ಲೇಸೆನುತ ಪರಿವರಿಸಿ ನೆಱೆ ಪರಿ
ವೇಷದಂತಿರೆ ನಿಂದು ಹರುಷಾ
ವೇಶದಲಿ ಬೆಸಗೊಂಡರನುಪಮನಂಘ್ರಿಗಳಿಗೆಱಗಿ ೯

ಆರು ನೀನೆಲೆ ತಂದೆ ಕಳುಹಿದ
ರಾರು ನಿನ್ನನು ಬಂದೆ ನೀನಿಂ
ದಾರ ಹತ್ತಿರಕೇನು ಕಾರಿಯವಾರ ಬಾಂಧವನು
ಚಾರುತರ ಕೃಷ್ಣಾಂಗ ಲಕ್ಷ್ಮಿಗೆ
ಸೇರುತಿದೆ ನಿನ್ನಂಗಸಿರಿ ಹೇ
ಳಾರು ನೀನೆನಲೆಂದನುದ್ಧವನವರೊಡನೆ ನಗುತ ೧೦

ದಾಸ ನಾನೆಲೆ ತಾಯ್ಗಳಿರ ಲ
ಕ್ಷ್ಮೀಶನಂಘ್ರಿಗೆ ಪರಮ ಕರುಣಾ
ರಾಶಿ ಕಳುಹಿದನೆನ್ನನೀ ನಿಮ್ಮಂಘ್ರಿಸನ್ನಿಧಿಗೆ
ವಾಸುದೇವನು ಕರುಣಿಸಿದ ಸಂ
ದೇಶದಲಿ ತಾ ಬಂದೆನೀ ಮನ
ದಾಸಱನು ಪರಿಹರಿಸಿ ನಿಮ್ಮನು ಸಂತವಿಸಲೆಂದು ೧೧

ಎನಲು ಸತಿಯರು ಕೇಳುತವೆ ಕಂ
ಬನಿಯ ಧಾರಾವೃಷ್ಟಿಯಲಿ ತನು
ನೆನೆದು ನಯನಪ್ರೀತಿರಸದಲಿ ಮುಳುಗಿ ಮರುಳಾಗಿ
ವನಿತೆಯರು ಗೋವಿಂದನೊಲವನು
ನೆನೆದು ತಲೆದೂಗುತ್ತ ಹರಿದಾ
ಸನನು ಸತ್ಕರಿಸುತ್ತ ನುಡಿದರು ಕುಶಲ ವಾರ್ತೆಗಳ ೧೨

ಲೇಸನಾಡಿದೆ ಕೃಷ್ಣನಗ್ಗದ
ದಾಸನಹೆ ನೀನಿದನು ಬಲ್ಲೆವು
ದೂಷಣವೆ ನಿಜಮಾತೃಪಿತೃಗಳಲೆಸೆವ ಮಮತೆಗಳ
ಆಸಱಿದನಾರಕಟ ಕಳೆವರು
ಘಾಸಿಯಾದರು ತಂದೆತಾಯ್ಗಳಿ
ಗಾಸೆಯಾವುದು ಕಳುಹದಿರ್ದಡನಾಥರಿಗೆ ದಿಟಕೆ ೧೩

ಹೆತ್ತವರ ಮೇಲುಳ್ಳ ಮಮತೆ ಸು
ದುಸ್ತರವಲಾ ಯೋಗಿಗಳಿಗೆ ನಿ
ವೃತ್ತತೃಷ್ಣರಿಗವಗತಾತ್ಮ ಸುತತ್ವರಿಗೆ ಸಹಿತ
ಮತ್ತೆ ಕೃಷ್ಣಂಗಾರು ನೆನೆವನೆ
ಭೃತ್ಯರನು ಕಳುಹುವರೆ ತನ್ನಯ
ಚಿತ್ತವೃತ್ತಿಗೆ ಬರುವರಿದಱೊಳಗಾರು ಬಾಂಧವರು ೧೪

ಉಳಿದವರ ಕೆಳೆ ಕಾರ್ಯಕೋಸುಗ
ಬಲಿದಿಹುದು ತತ್ಸಿದ್ಧಿಯಲಿ ನಿಷ್
ಫಲವೆನಿಪ್ಪುದು ಪುಷ್ಪರಸದಲಿ ತುಂಬಿಗಳು ಮಾಳ್ಪ
ಕೆಳೆಯವೋಲಾರಿಂಗದಾರೈ
ಕೆಳೆಯರಾರಿಂಗಾರು ಹಿತವರು
ತಿಳಿವರೆಲ್ಲಾ ಲೋಕವಿಹುದಾ ಸ್ವಾರ್ಥಪರವಾಗಿ ೧೫

ಎಣಿಸುವರೆ ಧನಹೀನರನು ದಿಟ
ಗಣಿಕೆಯರು ವಿಭ್ರಷ್ಟನಹ ಧಾ
ರುಣೀಪತಿಯನಾ ಪ್ರಜೆಗಳವಗತವಿದ್ಯರಾ ಗುರುವ
ತೃಣಕೆ ಕೊಂಬರೆ ಋತ್ವಿಜರು ದ
ಕ್ಷಿಣೆ ಬರಲು ಯಜಮಾನನನು ಮೃಗ
ಗಣವಿಹವೆ ಬಳಿಗಾಡೊಳೆಂದರು ಕಾಂತೆಯರು ಮಱುಗಿ ೧೬

ಬೀತ ಮರನನು ಬಿಡವೆ ಪಕ್ಷಿಗ
ಳೀತಕಾ ಹಲುಬುವಿರಿ ಕೃಷ್ಣನ
ಮಾತು ನಮಗಿನ್ನೇಕೆ ಕನಸಿನ ನಿಧಿಯಲಭಿಲಾಷೆ
ಓತು ತನಗಂದೊಲಿದು ಪತಿ ಪಿತೃ
ಮಾತೃ ಸುತರನು ತೊಱೆದ ನಮ್ಮನು
ಘಾತಿಸಿದ ನಿಷ್ಕರುಣಿಯೆಂದರು ಕಾಂತೆಯರು ಮಱುಗಿ ೧೭

ಆರು ನಾವೀ ನಮಗೆ ಕೃಷ್ಣನ
ದಾರು ಬಱದೇ ಹಂಬಲಿಸಿ ಸಂ
ಸಾರ ಬಱುದೊಱೆಯಾಯ್ತು ತಚ್ಚಿಂತೆಯಲಿ ಮನ ಮುಳುಗಿ
ಸೇರಿದರು ಸಾಮ್ರಾಜ್ಯಕಹಿತರು
ಸೇರಿದರು ಕಾಲಂಗೆ ತನುಗಿ
ನ್ನಾರು ನೆನೆವಡೆ ನಾವೆನುತ ತುಂಬಿದರು ಕಂಬನಿಯ ೧೮

ನೆನೆವನೈ ಮಱೆದೊಮ್ಮೆ ನಮ್ಮನು
ವನಿತೆಯರ ಗೋಷ್ಠಿಯಲಿ ಕೆಳೆಯರ
ಜನಿತ ಮೇಳದ ಹಾಸ್ಯ ಕಥೆಗಳಲಿರೆ ಯದೃಚ್ಛೆಯಲಿ
ಮನುಜ ಭೂಷಣನಾತ್ಮ ಪದಯುಗ
ವನಜ ಸಂಶ್ರಿತೆಯರನನಾಥೆಯ
ರನು ನಿಜಾಂಘ್ರಿಯ ದಾಸಿಯರನೆಂದರು ಮೃಗಾಕ್ಷಿಯರು ೧೯

ತಾಯೆ ಮರುಳಾ ನೀನು ನಗರ
ಸ್ತ್ರೀಯರಿಗೆ ತಾವಿನ್ನು ಕಮಲದ
ಳಾಯತಾಕ್ಷಂಗಾರು ಮೋಹಕ್ಕುಂಟೆ ಮುಪ್ಪುಗಳು
ಬಾಯ ಬಿಟ್ಟರೆ ಬಲ್ಲನೇ ನ
ಮ್ಮಾಯಸವನಿವನೊಡೆಯನೆನುತೆನು
ತಾ ಯುವತಿಯರು ಬಿದ್ದರಳಲುತ ಬಹಳ ಮೂರ್ಛೆಯಲಿ ೨೦

ನೆನನೆನದು ಗೋಪಿಯರು ಗೋವಿಂ
ದನ ಮೃದುಸ್ಮಿತ ಮಧುರಸೂಕ್ತಿಯ
ಸನುಪಮಾನನಕಮಲವನು ಸುಪ್ರೇಮ ವೀಕ್ಷಣದ
ಜನಿತ ಸೌಹಾರ್ದದ ದೃಢಾಲಿಂ
ಗನವನಾ ರತಿಗೋಷ್ಠಿಗಳನಾ
ವನಿತೆಯರು ತನ್ಮಯವೆನಲು ಕಂಡರು ಜಗತ್ರಯವ ೨೧

ಸತಿಯರಿಂತಳಲುತ್ತ ನೆನದ
ಚ್ಯುತನ ಬಾಲ್ಯ ಕುಮಾರ ಲೀಲಾ
ಕೃತಿಗಳನು ಮೋಹನ ವಿಹಾರ ವಿಳಾಸ ವಿಭ್ರಮವ
ಗತಿಗಳನು ತದ್ಭಾವನಾ ಭಾ
ವಿತೆಯರಸ್ಪಿಜಲಾವಿಲಾಲೋ
ಕ್ಷಿತೆಯರಿದ್ದರು ಪುತ್ಥಳಿಗಳಂತುದ್ಧವನ ಮುಂದೆ ೨೨

ಅಂಬುಜಾನನೆ ಗೋಪಿಯೊಬ್ಬಳು
ಹಂಬಲಿಸಿ ದೆಸೆದೆಸೆಗಳಿಗೆ ಪೀ
ತಾಂಬರನು ಕಳುಹಿದನು ದೂತನನೆಂದು ನೆಱೆ ಬಗೆದು
ತುಂಬಿಯನು ಕಂಡೆಂದಳೀತ
ಕ್ಕಂಬುಜೋದರನಟ್ಟಿದನು ನೀ
ನೆಂಬೆ ತಮಗಿನ್ನಾವ ಸಾಮವೆನುತ್ತ ಹಲುಬಿದಳು ೨೩

ಮುಟ್ಟಿ ಮಾತಾಡಿದರು ವಲ್ಲಭ
ನಟ್ಟಿದನೆ ಲೇಸಾಯ್ತು ಸವತಿಯ
ರಿಟ್ಟ ಕುಚಕುಂಕುಮದ ಮೈಲಿಗೆ ಸೋಂಕದಂದದಲಿ
ನಟ್ಟನಾತನೆ ಧರಿಸಲವದಿರು
ತೊಟ್ಟ ವನಮಾಲಾ ಪ್ರಸಾದವ
ನಿಷ್ಟವಲ್ಲಾ ಯದುಸಭೆಗೆ ಸುಶ್ಲಾಘ್ಯವದು ತನಗೆ ೨೪

ದೂತನೀಪರಿ ನೀನು ತಾನಿ
ನ್ನೇತಱದ ಕಾಂತಾನುಭವಿಯೋ
ಘಾತಕನು ತನ್ನಧರಸುಧೆಯನು ತನಗೆ ಮುನ್ನೊಮ್ಮೆ
ನೂತನ ಪ್ರಿಯನಿತ್ತು ಮಗುಳೆ ವಿ ,
ನೀತೆಯರನೀಡಾಡಿ ಕುಸುಮ
ವ್ರಾತವನು ನಿನ್ನಂತೆ ಬಿಸುಟೈದಿದನು ಮಧುಪುರಿಗೆ ೨೫

ಇಂತು ಪರಿಚರ್ಯೆಯನು ಲಕ್ಷ್ಮೀ
ಕಾಂತೆ ಮಾಳ್ಪಳೊ ತನಗೆ ತನ್ನನ
ದೆಂತು ನಂಬುವಳಕಟ ಕಪಟ ವಿಳಾಸದೀಕ್ಷಿತನ
ಮಂತ್ರಮೂರ್ತಿ ಪವಿತ್ರಕೀರ್ತಿ ಮು
ಹಾಂತರಿಂಗಾಳ್ದನೆನಿಪಾ ಶ್ರು
ತ್ಯಂತಗೀತವ ಕೇಳಿ ಮರುಳಾದಳು ಮಹಾಲಕ್ಷ್ಮಿ ೨೬

ಬಂದು ಬಂದೆಲೆ ತುಂಬಿ ನೀನೇ
ನೆಂದು ಹಾಡುವೆ ಹಳೆಯ ನಲ್ಲನ
ನಿಂದು ಲಾಭವದೇನು ಹಾಡಿದಡಬಲೆಯರ ಮುಂದೆ
ಮಂದಿರವು ನಮಗಿಲ್ಲ ನೀ ಹೋ
ಗಿಂದುಮುಖಿಯರು ಕೃಷ್ಣಸಂಗದ
ಲಿಂದು ಪೂರ್ಣೆಯರೀವರಿಷ್ಟಾರ್ಥವನು ದಿಟ ನಿನಗೆ ೨೭

ಆವ ವಧುವೋ ಕಪಟ ಹಾಸ
ಭ್ರೂವಿಜೃಂಭಂಗಳಿಗೆ ಸೋಲದ
ಳಾವಳೋ ದುರ್ಲಭೆ ನರಾಮರನಾಗಲೋಕದಲಿ
ಸೇವಿಸುವಳಾವನ ಪದಾಬ್ಜ ರ
ಜೋವಿಶೇಷವ ಲಕುಮಿ ಯೆಂದರೆ
ನಾವದಾರೌಯೆಂಬಡುತ್ತಮ ಕೀರ್ತಿಯಿನ್ನೇಕೆ ೨೮

ಎಱಗಿ ಪದದಲಿ ಬೇಡಲೇತ
ಕ್ಕೆಱೀಯರೇ ತಾವಿದನು ಕಪಟದ
ಹೊಱಗೆವಾಳನ ಮಾತಿನಲಿ ದಿಟ ಸಾರವೇನುಂಟು
ತೊಱೆದು ತನಗೋತಿಹ ಪರದ ಸುಖ
ದಱಿಕೆಯನು ನಾವಿರಲು ನಮ್ಮನು
ತೊಱೆದು ಹೋದಾತನಲಿ ಮಾಡುವರುಂಟೆ ಸಂಧಾನ ೨೯

ಕೊಲುವನೇ ಧರ್ಮಿಷ್ಟನಾದರೆ
ಹಳುವದಲಿ ಬಾಲೆಯನು ಬಲಿಯನು
ಬಿಲನಿವಾಸಕ್ಕೆಳುಹುವನೆ ನಿಜಚರಣ ಶರಣರನು
ಲಲನೆ ಕಾಮಿಸಿ ಬಂದಡಱಿಯನೆ
ಮುಳಿದು ಕಿವಿ ಮೂಗುಗಳನೊಬ್ಬಳ
ಕಳೆವರವನದ ಸಸಿನೆ ಮಾಳ್ಪನೆ ಕಾಮಿಯಲ್ಲದರೆ ೩೦

ಸಾಕು ಕೃಷ್ಣನಸಖ್ಯ ನಮಗಿ
ನ್ನೇಕೆ ಮಱೆಯಲು ನೆಱೆಯೆವಾತನ
ಲೋಕ ಮೋಹನಮೂರ್ತಿ ವಾರ್ತೆಯನೊಮ್ಮೆ ಕೇಳ್ದವರು
ಲೋಕದೊಳಗಿರಲೀ ವಿಹಂಗಾ
ನೀಕಸಹಿತಡವಿಯಲಿ ಭಿಕ್ಷಾ
ನ್ನೈಕಜೀವಿಗಳಾದಪರುಳಿದು ಕುಟುಂಬ ಸಂಗ್ರಹವ ೩೧

ಸತ್ಯವೆಂದೇ ನಂಬಿದೆವು ಜಿಂ
ಹೋಕ್ತಿಯನು ಲುಬ್ಧಕನ ಸಂಗೀ
ತೋಕ್ತಿಯನು ನಂಬಿದ ಮೃಗಾಂಗನೆಯರವೊಲಾಯ್ತೆಮಗೆ
ಮತ್ತಿದೊಂದೇ ಲಾಭವಾ ಪುರು
ಷೋತ್ತಮನ ನಖಹತಕುಚಪ್ರಭ
ವಾರ್ತೆ ಸಾಕಂತಿರಲಿ ಹೇಳುವುದನ್ಯವಾರ್ತೆಗಳ ೩೨

ಮತ್ತೆ ಬಂದ್ಯೆ ಪ್ರಿಯಸಖಿಯೆ ಪುರು
ಷೋತ್ತಮನು ಹೇಳೇಕೆ ಕಳುಹಿದ
ನಿತ್ತ ಬಾರ್ಕೆ ಕುಳ್ಳಿರಿಪ್ಪವದೇನು ಬೇಡುವುದು
ಚಿತ್ತದೊಡೆಯನ ದೂತ ನೀನೆಮು
ಗತ್ಯಧಿಕತರ ಮಾನ್ಯನಲ್ಲಾ
ಕೃತ್ಯವನು ತಮಗೇನ ಹೇಳಿದನೇನು ಗತಿ ತವಗೆ ೩೩

ಸಂಧಿಸಲು ನೀ ಬಂದೆ ಬಹೆವಾ
ವಂಥತನದಿಂದೆಂತು ದುಸ್ತ್ಯಜ
ಬಂಧುವಿನ ಸನ್ನಿಧಿಗೆ ಬಂದರೆ ಕೃತ್ಯವೇನೆಮಗೆ
ಸಿಂಧುವಿನ ಮಗಳಿಹಳುರಸ್ಥಳ
ಬಂಧದೊಳಗನವರತ ಕೌಸ್ತುಭ
ಕಂಧರನ ಕಾಣಿಸೆ ಸಮರ್ಥನೆ ಹೇಳನಾಥೆಯರ ೩೪

ಎಂದು ಬಹನೆಮ್ಮರಸನೆಮ್ಮಾ
ನಂದನಿಧಿಯೆಮ್ಮಾಳ್ದನೆಮ್ಮ ಮು
ಕುಂದ ನೆಮ್ಮಸ್ವಾಮಿ ಯೆಮ್ಮಯ ಹರಣದಾಧಾರ
ಚಂದನಾಗರು ಚಾರು ಭುಜದಿಂ
ದೆಂದು ವಿರಹಾತುರೆಯರನು ಗೋ
ವಿಂದನಪ್ಪುವನೆನುತ ಮೂರ್ಛೆಗೆ ಸಂದರಬಲೆಯರು ೩೫

ಇಂತು ಕಂಡುದನೆಲ್ಲವನು ನಿಜ
ಕಾಂತನಹ ಗೋವಿಂದನೆಂದೇ
ಕಾಂತೆಯರು ಹಂಬಲಿಸಿ ಹಲುಬುತ ಹಲವು ಪರಿಗಳಲಿ
ಚಿಂತಿಸುತ ತದ್ಭಾವ ವಿಹಿತ
ಸ್ವಾಂತದಲಿ ವೈಮಱೆದಳಲುತೇ
ಕಾಂತಭಕ್ತೆಯರಿರವನಂದುದ್ಧವನು ನೆಱೆ ಕಂಡ ೩೬

ಗೋಪಿಯರ ನಿಜವೆನಿಪ ಭಕ್ತಿಯ
ನಾ ಪರಮ ಪೂರುಷನ ಚರಣಸ
ಮೀಪದರುಶನಲಾಲಸೆಯರಿದ್ದಿರವನೀಕ್ಷಿಸುತ
ಶ್ರೀಪತಿಯ ನಿಜದಾಸನಂದಾ
ಗೋಪಕಾಂತೆಯರಧಿಕ ಪುಣ್ಯ ಕ
ಳಾಪವಾವುದೆನುತ್ತ ಪೊಡವಡುತೆಂದನವರೊಡನೆ ೩೭

ಕೇಳಿರೌ ಕೃತಕೃತ್ಯೆಯರು ನ
ಮ್ಮಾಳ್ದನ ಸಂದೇಶವನು ನಿಜ
ಮೌಳಿಯಲಿ ಧರಿಸುವುದು ಹೇಳುವೆನದನು ನಿಮಗಿಂದು
ಶ್ರೀಲಲಾಮ ಪದಾಬ್ಜ ಸೇವಾ
ಲೋಲ ಭೃತ್ಯರ ಭೃತ್ಯ ನಾನೆ
ನ್ನೋಲಗವನವಧರಿಸುವುದು ನೀವೆಂದು ಕೈಮುಗಿದ ೩೮

ಆರು ನಿಮ್ಮಂದದ ಸನಾಥೆಯ
ರಾರು ನಿಮ್ಮಂದದ ಸಭಾಗ್ಯೆಯ
ರಾರು ನಿಮ್ಮಂದದ ಕೃತಾರ್ಥೆಯರಖಿಳ ಭುವನದಲಿ
ಶ್ರೀರಮಣನೊಲವಿನ ಕಟಾಕ್ಷದ
ಕೂರುಮೆಗೆ ಸೇರಿದಿರಿ ನಿಮ್ಮಂ
ತಾರು ಧನ್ಯೆಯರಾರವಾಪ್ತ ಮನೋಗತೆಯರೆಂದ ೩೯

ಜಪತಪಂಗಳ ನಿತ್ಯಕರ್ಮದ
ಕೃಪಣರಲ್ಲಯರು ಯೋಗ ನಿಷ್ಠೆಯ
ನಿಪುಣಮತಿಗಳು ಕಾಣರಾವನ ಪಾದರೇಣುಗಳ
ವಿಪುಳ ಪುಣ್ಯೆಯರಾರು ನಿಮ್ಮಂ
ತಪರಿಮಿತ ಮಹಿಮನಲಿ ಮಾಯಾ
ಗುಪಿತ ಪರಮಾತ್ಮನಲಿ ಮತಿಸಂಪನ್ನವಾಯ್ತೆಂದ ೪೦

ದಾನ ಯಜ್ಞ ತಪೋವ್ರತಾತ್ಮ
ಧ್ಯಾನ ಸಂಯಮ ನಿಯಮ ತೀರ್ಥ
ಸ್ನಾನ ಜಪ ವೈರಾಗ್ಯ ಬುದ್ಧಿಗುಣಂಗಳೆಂಬವರ
ತಾನದಾವುದು ಸಿದ್ಧಿ ನೋಳ್ಪರೆ
ದಾನವಾಂತಕ ಕೃಷ್ಣಭಕ್ತಿ ವಿ
ಧಾನವೊಂದೇ ಸಕಲ ವೇದ ಪುರಾಣಮತವೆಂದ ೪೧

ಆ ಮಹಾಪೂರುಷನ ಪದಯುಗ
ತಾಮರಸ ನಿಜಭಕ್ತಿ ಸುಕೃತೋ
ದ್ದಾಮೆಯರಿರಳವಟ್ಟುದದು ನಿರ್ದಾಯದಲಿ ನಿಮಗೆ
ಭೂಮಿಪಾವನ ಮೂರ್ತಿಗಳಿರ ನಿ
ರಾಮಯಾಚ್ಯುತ ಭಕ್ತೆಯರಿರ ಮ
ಹಾಮಹಿಮೆಯರಿರಾರು ಸರಿ ಭುವನದಲಿ ನಿಮಗೆಂದ ೪೨

ವಂದನೀಯರಿರಖಿಳಜಗಕಭಿ
ವಂದನೀಯರಿರಚ್ಯುತಾಂಘ್ರಿ
ದ್ವಂದ್ವಭಕ್ತೆಯರವನಿಪಾವನಮೂರ್ತಿಗಳು ನೀವು
ಮುಂದುವರಿವಾ ಶ್ರುತಿಗಳಿಗೆ ಗೋ
ವಿಂದನಿತ್ತನೆ ಸಮಯವನು ನಿಮ
ಗೆಂದಡುರಿಯರಗಾಗಿ ಕರಗುವ ಕೃಷ್ಣನನವರತ ೪೩

ಮನವಿಹುದು ನಿಮ್ಮಲ್ಲಿ ಕೃಷ್ಣನ
ತನುವಿಹುದು ತಾನಲ್ಲಿ ನಿಮ್ಮನು
ನೆನೆದು ದಣಿಯನು ವಾಕ್ಕಿನಲಿ ಬಣ್ಣಿಸುತ ನೆಱೆ ದಣಿಯ
ನೆನೆಯಲಱಯರು ಮುನಿಗಳತ್ತಲು
ಘನತರದ ಮಹಿಮೆಯನು ಬಣ್ಣಿಸು
ವನುವನಱಯವು ವೇದಮಸ್ತಕ ವಾಚನೆಗಳೆಂದ ೪೪

ಶ್ರದ್ಧೆಯಲಿ ಸಂಪಾದಿಸಿದ ವೇ
ದಾಧ್ಯಯನ ಜಪ ಹೋಮ ಸಂಯಮ
ಬುದ್ಧಿಗುಣನಿಯಮಾದಿ ಸದನುಷ್ಠಾನನಿಕರದಲಿ
ಸಿದ್ಧಿಯೊಂದೇ ಕೃಷ್ಣಪದಯುಗ
ಬದ್ಧವಹ ನಿಜಭಕುತಿ ಧರೆಯಲ
ಸಾಧ್ಯವಿದು ಬಹು ಪುಣ್ಯವಂತರಿಗಲ್ಲದಿಲ್ಲೆಂದ ೪೫

ಅತ್ತಲಜ ಭವ ಸುರ ಮುನೀಂದ್ರರು
ಸತ್ವ ಗುಣಸಂಪನ್ನ ನಿರ್ಮಳ
ಚಿತ್ತವೃತ್ತಿಗಳೈದಲಱಯದ ಪರಕೆ ಪರತರದ
ತತ್ವವೆನಿಸುವ ಕೃಷ್ಣನಲಿ ನಿಜ
ಚಿತ್ತದನುರಾಗೋಪಲಾಲಿತ
ಭಕ್ತಿಯದು ನಿತ್ಯಾತ್ಮನಲಿ ನಿಮಗಾಯ್ತಲಾ ಯೆಂದ ೪೬

ನಲವತ್ತಮೂರನೆಯ ಸಂಧಿ ಮುಗಿಯಿತು.

# ನಲವತ್ತನಾಲ್ಕನೆಯ ಸಂಧಿ

ಸಂತವಿಸಿ ಗೋಪಿಯರನಂದೇ
ಕಾಂತಭಕ್ತರ ದೇವ ಲಕ್ಷ್ಮೀ
ಕಾಂತನಂಘ್ರಿಗೆ ಬಂದು ಬಿನ್ನಹ ಮಾಡಿದನು ಹದನ

ತಂದೆ ಲೇಸಾಯ್ತಚ್ಯುತನ ಬೆಸ
ದಿಂದನೀ ಬರಲಾಯ್ತಲಾ ಗೋ
ವಿಂದದರುಶನ ಸೌಖ್ಯವೆಲೆ ಸಜ್ಜನಕುಲಾಗ್ರಣಿಯೆ
ಎಂದನೇನನು ನೆನೆವನೆಂತು ಮು
ಕುಂದನೆಮ್ಮನು ನಗರವನಿತಾ
ವೃಂದ ವಿಭ್ರಮಮೋಹಿತನು ಹೇಳೆಂದರಬಳೆಯರು ೧

ನೆನೆವನೇ ನಮ್ಮೊಡನೆ ವೃಂದಾ
ವನದಲಾ ರಾಸೋತ್ಸವದ ಸಂ
ಜನಿತ ಸೌಖ್ಯದಲಾಡಿದೆಮ್ಮನು ಸಂದ ರಾತ್ರಿಗಳ
ನೆನೆವನೇ ನಿಜ ದಾಸಿಯರ ನೆ
ಮ್ಮನುಪಮ ಪ್ರೇಮವನು ನಿಜಗುಣ
ವಿನುತಸಂಗೀತವನು ಮೋಹನವೆನಿಪ ಲೀಲೆಗಳ ೨

ಅಱಿಯನೇ ಗೋಕುಲವ ನಿಜಪದ
ವಿರಹಪರಿತಾಪದಲಿ ಬೆಂದುದ
ನಱಿಯನೇ ಮೇಣೆಮ್ಮನಿಂತೀ ವಿಧಿಗೆ ಸಂದವರ
ಮೆಱೆವ ಕಾರುಣ್ಯೇಕ್ಷಣದ ಮಳೆ
ಗಱೆದು ಸಂಜೀವನವ ಮಾಳ್ಪನೆ
ಕರುಣೆಗಳ ದಾತಾರ ಬಂದೀ ನಮ್ಮ ಗೋಕುಲಕೆ ೩

ಕಾಳುಗಿಚ್ಚಿನಲುರಿವವನು ಮಳೆ
ಗಾಲವನು ಕಾಂಬಂತೆ ಕೃಷ್ಣನ
ಲೋಲನೇತ್ರಾಪಾಂಗ ಸುಸ್ಮಿತ ಮಧುರ ಸೂಕ್ತಿಗಳ
ಲೀಲೆಗಳನಿನ್ನೆಂದು ಕಂಡಪೆ
ವಾಲಿಗಳಲಕಟಕಟ ಬಱಿದೆ ಕೃ
ಪಾಳುವೆಂಬರು ಕೃಷ್ಣನನು ಜನವಾಕ್ಯ ಹುಸಿಯಾಯ್ತು ೪

ಆಸೆಯಿಲ್ಲದೆ ಬಹುದು ಹುಸಿ ಲ
ಕ್ಷ್ಮೀಶನಿನ್ನೀ ಗೋಕುಲಕೆ ನಿಜ
ದಾಸಿಯರ ಹಂಗೇಕೆ ನಿಜಲಾಭಾಪ್ತಕಾಮಂಗೆ
ದೇಸಿಗಿತಿಯರ ಹೊರೆಗೆ ದಿಟ ಸಂ
ದೇಶವಾವುದು ಕಳುಹುವರೆ ನಿ
ರ್ದೇಶಿಸುವಡಾವಱಿಯೆವೆಂದರು ಕಮಲವದನೆಯರು ೫

ಆಸೆಯಿಂದವೆ ಜೀವರಿಗೆ ಸಂ
ಕ್ಲೇಶವದನುಳಿವವರಿಗಾವ
ಕ್ಲೇಶವಿಲ್ಲೆಂಬುದನು ಪಿಂಗಳೆ ಹೇಳಿದಳು ಮುನ್ನ
ಆಸೆ ಬಿಡದದನಱಿವಡೆಯು ಲ
ಕ್ಷ್ಮೀಶನಂಘ್ರಿಯ ದರುಶನದಲಿ
ನ್ನೇಸು ಮೋಹನವೋ ಮುಕುಂದನ ಮೂರ್ತಿ ಮೂಜಗಕೆ ೬

ಎಲೆ ಮಹಾತ್ಮನೆ ಕೇಳು ಕೃಷ್ಣನ
ಚೆಲುವಮೂರ್ತಿ ವಿಲಾಸವನು ಕಂ
ಡುಳಿಯಲುತ್ಸಾಹಿಸುವ ಯೋಗಿಗಳಾರು ಭುವನದಲಿ
ಉಳಿದವರ ಮಾತೇಕೆ ಮಱೆದವ
ಳಿಳಿಯಲಮ್ಮಳು ಲಕ್ಷ್ಮಿ ತಪ್ಪುವು
ದೊಲವೆನುತ್ತುತ್ತುಂಗದಲಿ ಮನೆಮಾಡಿ ನಿಸ್ಪೃಹನ ೭

ಈ ಗಿರಿಗಳೀ ನದಿಗಳೀ ಭೂ
ಭಾಗವೀ ವನನಿಕರ ಕುರುಹಾ
ಸಾಗರನ ಪದಕಮಲಭೂಷಿತ ಲಾಂಛಿತೋದ್ದೇಶ
ರಾಗರಂಜಿತ ವೇಣುರವಗಳು
ಯೋಗನಿಧಿಯನು ಮಱೆಯಗೊಡವಿ
ನ್ನೇಗುವೆವು ಹಾ ವಿಧಿಯೆನುತ್ತಳಲಿದರು ಗೋಪಿಯರು ೮

ಏತಕಳಲುವಿರೌ ಗತೋದಕ
ಸೇತುವಲ್ಲಾ ನಮಗೆ ಕೃಷ್ಣನ
ಮಾತು ನಮ್ಮವನುಳಿದು ದಿನವಾತಂಗೆ ಹಿಂಗುವಡೆ
ಆತನಿಂದವೆ ನಮಗೆ ದಿನ ನಿ
ರ್ನೀತವಾದರೆ ಸಾಕು ನಾನಾ
ರಾತನಾರಿನ್ನೇತಕಾಸೆ ಯೆನುತ್ತ ಹಲುಬಿದರು ೯

ಆವ ಪರಿಯಲಿ ಮಱೆಯಬಹುದೀ
ಭಾವವನು ಸುಪ್ರೇಮ ಹಾಸ ದ
ಯಾವಲೋಕನ ಲಲಿತಗತಿ ಮೃದುಮಧುರ ಸೂಕ್ತಿಯನು
ಜೀವರೂಪನನುಳಿದಡೆಂತೋ
ಜೀವಿಸುವೆವಿನ್ನೆವಗೆ ಗತಿ ಮತಿ
ಯಾವುದೆಂದೋಲಾಡುತಿರ್ದರು ನಯನವಾರಿಯಲಿ ೧೦

ಅಡಿಗಡಿಗೆ ಹಂಬಲಿಸಿ ಹಲುಬು
ತ್ತೊಡನೊಡನೆ ಹಾ ಕೃಷ್ಣ ಗೋಕುಲ
ದೊಡೆಯ ಗೋಪೀನಾಥ ಗೋಕುಲ ಭಯನಿವಾರಣನೆ
ಒಡೆಯ ನೀನುದ್ಧರಿಸುವುದು ದುಃಖದ
ಕಡಲಲದ್ದೆವು ಕೃಷ್ಣಯೆನುತಾ
ಮಡದಿಯರು ದೆಸೆಯೊಡೆಯಲೊಱಲಿದರಿಡಿದ ಮೂರ್ಛೆಯಲಿ ೧೧

ಆರು ಗತಿ ನಮಗಿನ್ನು ಕರುಣಾ
ವಾರಿಧಿಯೆ ಹಾ ಕೃಷ್ಣ ಹಾ ಗೋ
ಪೀರಮಣ ಗೋವಿಂದ ಗೋಕುಲದರಸ ಹಾ ಯೆನುತ
ನಾರಿಯರು ಹಲುಬುತ್ತ ಹರಿಯನು
ಮೇರೆಯಿಲ್ಲದ ಕೃಷ್ಣ ಚಿಂತಾ
ವಾರಿಧಿಯಲೋಲಾಡುತಿರ್ದರು ಮಱೆದು ಲೌಕಿಕವ ೧೨

ಇರಲದನು ಕಾಣುತ್ತ ಗೋಪಿಯ
ರಿರವನಾ ಪ್ರೇಮೋಪಲಾಲಿತ
ಹರಿಪದಾಂಬುಜ ಭಕುತಿಯನು ಸರ್ವಾತ್ಮಭಾವವನು
ಪರಮ ಭಾಗವತೋತ್ತಮನು ಮನ
ಕರಗಿ ತಲೆದೂಗುತ್ತ ಸಾಮವ
ನೊರೆವುತಂದಿದನೆಂದನಧಿಕ ಮನೋನುರಾಗದಲಿ ೧೩

ಸತಿಯರಿರ ಸಂಪನ್ನ ಭಾಗ್ಯಾ
ನ್ವಿತೆಯರಿರ ಗೋವಿಂದ ವಿರಹದ
ಲತಿಶಯದ ಹಿತವಾಯ್ತನುಗ್ರಹವಾಯ್ತು ಕೃಷ್ಣನಲಿ
ಮತಿ ಸುನಿಶ್ಚಲವಾಯ್ತು ನೆನೆವರೆ
ಯತಿಮುನಕೆ ದುಷ್ಪ್ರಾಪ್ಯವೆನಿಪ
ಚ್ಯುತನೊಲವು ನಿರ್ವಾಯದಲಿ ಸೇರಿದುದು ನಿಮಗೆಂದ ೧೪

ಚಿತ್ರವಿಸಿರೈ ತಾಯ್ಗಳಿರ ನಿಜ
ಚಿತ್ರವಲ್ಲಭನೆಂದು ಸಂದೇ
ಶೋಕ್ತಿಯನು ನಿಮ್ಮಮಲಹೃದಯ ತಮಿಸ್ರ ದೀಪವನು
ಸತ್ಯವೆಂದೇ ನಂಬುವುದು ತ
ದ್ಭೃತ್ಯ ನಾನೆಂದೆನುತ ಹೇಳಿದ
ನುತ್ತಮಶ್ಲೋಕನ ಸುಧಾಸೂಕ್ತಿಗಳ ಸಂಗತಿಯ ೧೫

ಅಗಲಲಱಿವನದೆಂತು ನಿಮ್ಮನು
ಜಗನುಮಯ ತಾನಾಗಿ ಜೀವರ
ಬಗೆಗಳಿಗೆ ಚೈತನ್ಯಮಯನಾಶ್ರಯನು ತಾನಾಗಿ
ಗಗನ ಜಲಧರೆ ವಹ್ನಿವಾತಾ
ದಿಗಳು ನಿಜಕಾರ್ಯವನು ತಾನೆಂ
ತಗಲುವವು ತದ್ಭೂತ ಭೌತಿಕರೂಪ ತಾನೆಂದ ೧೬

ಎನ್ನಳುಮೆಯಿಂದುಳುಮೆ ತ್ರಿಜಗ
ಕ್ಕೆನ್ನೊಳಗೆ ಸಂಸ್ಥಾನ ರಕ್ಷೆಗ
ಳೆನ್ನ ಮಾಯಾಶಕ್ತಿಯಿಂದವೆ ಮಗುಳೆ ಸಂಹಾರ
ಭಿನ್ನನಾದಂತಿಹುದು ನೋಡಲ
ಭಿನ್ನವೆನಲೀ ತ್ರಿಜಗ ತೋರ್ಪ ಮ
ಹಾರ್ಣವದ ಬುದಬುದ ತರಂಗಾವಳಿಗಳಂತೆಂದ ೧೭

ಮೂಱುಗುಣದಲಿ ತೋರ್ಪ ಬುದ್ಧಿಯ
ಮೂಱವಸ್ಥೆಗಳೊಳಗೆ ತಾನೆಡೆ
ಯಾಱದಮಲಜ್ಞಾನಮಯ ನಿಜತತ್ವವೆಂದೆನಿಸಿ
ಬೇಱೆ ನಿಜವುಂಟೆಂಬುದನು ಮೈ
ದೋಱೆ ತುರಿಯಾವಸ್ಥೆಯಲಿ ಕೈ
ಮಿಱೆ ತುರಿಯಾತೀತನಹ ಪರಮಾತ್ಮ ತಾನೆಂದ ೧೮

ಬೇಱೆನಿಸಿ ತೋಱುವುದು ಮನದ ವಿ
ಕಾರದಲಿ ಜಗವೊಂದೆ ಸ್ವಪ್ನ ಮ
ನೋರಥಂಗಳವೋಲನಿರ್ವಚನೀಯ ರೂಪದಲಿ
ನೀಱೆಯರಿರಾನುಳಿಯೆ ಜಗವಿದು
ತೋಱಲಱಿಯದು ಜಗವಿದಲ್ಲದೊ
ಡೋಱುಗುಡಿಸೆನು ನಿತ್ಯಸುಖಪರಿಪೂರ್ಣ ತಾನೆಂದ ೧೯

ಇತ್ತೆನಗಲಿಕೆಯನು ನಿಮಗೆ ನಿಜ
ಚಿತ್ತವೃತ್ತಿಗಳೆನ್ನನಗಲದೆ
ವರ್ತಿಸಲೆಬೇಕೆಂದು ಬಹಳ ಮನೋನುರಾಗದಲಿ
ಮುಕ್ತಿಗೆನ್ನ ಧ್ಯಾನವಲ್ಲದೆ
ಮತ್ತೆ ತನುವಿನ ಸಂಗದಲಿ ನಿ
ವರ್ತಿಸದು ಹುರುಳಿಲ್ಲ ಜಡವಿಷಯಂಗಳೊಳಗೆಂದ ೨೦

ನಲ್ಲನೊಡನಿರಲಾತನಲಿ ಮನ
ಸಿಲ್ಲದಬಲೆಯರಿಂಗೆ ದೂರಕೆ
ನಲ್ಲನಿರಲಡಿಗಡಿಗೆ ತಾತ್ಪರಿಯದಲಿ ನೆನೆವಂತೆ
ವಲ್ಲಭೆಯರಿರ ನಿಮ್ಮ ಮನವೆ
ನ್ನಲ್ಲಿ ದೃಢತರವೆಂಬುದನು ತಾ
ಬಲ್ಲೆ ನೇತಕ್ಕಳಲುವಿರಿ ಹಂಗಿಗನು ತಾನೆಂದ ೨೧

ಭಾವಭಕ್ತಿಯೆ ಮುಕ್ತಿಕಾರಣ
ವಿವೇ ಕಾಣಿರೆ ಮನೆಗಳಲಿ ರಾ
ಜೀವಮುಖಿಯರು ನೆನೆದು ತನ್ನಯ ರಾಸಲೀಲೆಗಳ
ಭಾವಕಿಯರಿರ ತಡೆಯದೆನ್ನಲಿ
ಜೀವವನು ಬೆಱಸಿದರು ತನುವಿನ
ಸೇವೆಯಿಂದ ಮನೋನುರಾಗವೆ ಮುಖ್ಯತರವೆಂದ ೨೨

ಕೂಡಿಕೊಂಬೆನು ನಿಮ್ಮನೆಂದೇ
ಮಾಡಿದೆನು ಕಂಗಳಿಗೆ ದೂರವ
ನಾಡಲೇತಕ್ಕಂಜದಿರಿ ಹಂಗಿಗನಲಾ ನಿಮಗೆ
ನೋಡಲಾಗದು ತಪ್ಪನೆನ್ನಲಿ
ಜೋಡಿಯನು ಹಿಡಿಯದಿರಿ ನಿಮ್ಮಲಿ
ಕೂಡಿಹುದು ನಿಜಚಿತ್ತವನ್ಯಥವಱಿಯೆ ನಾನೆಂದ ೨೩

ಮನದಲೆನ್ನ ಧ್ಯಾನವನು ವಾ
ಕ್ಕಿನಲಿ ನಿಜಗುಣಗಣವನಭಿವ
ರ್ಣನೆಗಳನು ಮಾಡುವುದು ಮುನಿಗಳವೋಲು ಯತ್ನದಲಿ
ವನಿತೆಯರಿರೈದುವಿರಿ ತನ್ನಲಿ
ನೆನೆಯದಿರಿ ಭೇದವನು ನಿಸ್ಪೃತಿ
ಜನಿಸಲಱಿಯದು ಭಕ್ತಹಿತವಿಗ್ರಹನು ತಾನೆಂದ ೨೪

ಕನಸಿನಂತಿಂದ್ರಿಯಕೆ ಗೋಚರ
ವೆನಿಸುವೀ ವಿಷಯಂಗಳನು ಭವ
ಮನಕೆ ಮನವಾತ್ಮನನು ವಿವಿಧಜ್ಞಾನಶಕ್ತಿಯಲಿ
ನೆನೆವುದಾತ್ಮಾಭಾಷಿತವ ನಾ
ಮವನೆನ್ನಲಿ ಯೋಚಿಸಲು ಸಂ
ಜನಿಸುವುದು ಸಾಯುಜ್ಯಪದವೀ ಜೀವರಿಂಗೆಂದ ೨೫

ಏತದರ್ಥದಲಖಿಳ ನಿಗಮ
ವ್ರಾತವಡಗಿದವಾತ್ಮವಿದ್ಯೋ
ಪೇತ ಸಾಂಖ್ಯಮನೀಷಿತಾರ್ಥ ತಪೋವ್ರತಾದಿಗಳು
ನೀತಿವಿದೆಯರಿರಬುಧಿಯಲಸಂ
ಖ್ಯಾತನದಿಗಳಡಂಗುವಂತಿರ
ಲಾತುರಿಸಬೇಡಖಿಳದಲಿ ಪರಿಪೂರ್ಣ ತಾನೆಂದ ೨೬

ಮಱೆಯಲಱೆವೆನೆ ನಿಮ್ಮ ನೇಹದ
ನೆಱವಣಿಗೆಯನು ಕೋಟಿ ಕಲ್ಪಂ
ತರಕೆ ನಿವೃತಿಯುಂಟೆ ತನಗೋತಿಹಪರದ ಸುಖವ
ತೊಱೆದಿರೆನ್ನಲಿ ಹಂಗನೇ ನೆಱೆ
ಹೊಱಿಸಿದಿರಿ ಸಾಕಿನ್ನು ಮನದಲಿ
ಮಱುಗಲಾಗದು ತನ್ನ ಭಕ್ತರ ಭಾರ ತನಗೆಂದ ೨೭

ಇಂತು ನಿಜನಾಥೋಕ್ತಿಗಳನಾ
ಕಾಂತೆಯರು ಕೇಳುತ್ತ ವಿರಹದ
ಚಿಂತೆಗಳನೀಡಾಡಿ ಪೂರ್ಣಮನೋರಥೆಯರೆನಿಸಿ
ಅಂತರಾತ್ಮನು ಕೃಷ್ಣನೆಂಬುದ
ನಂತರಂಗದಲಱಿದು ಸತಿಯರು
ಸಂತಸುಖದಲಿ ನೆಲಸಿದರು ಮಱೆದರು ಮನೋವ್ಯಥೆಯ ೨೮

ಪ್ರಿಯತಮನ ಸಂದೇಶವನು ಕಾಂ
ತೆಯರಿಗೊರೆದವರಂತರಂಗಾ
ಮಯವನಪಹರಿಸುತ್ತ ಭಾಗವತೋತ್ತಮನು ಹರಿಯ
ನಯದಲಟ್ಟಿದ ಕೊರಳವನಮಾ
ಲೆಯನುರದ ಸಿರಿಗಂಧ ಕಸ್ತೂ
ರಿಯನು ಕೊಟ್ಟುಚಿತದಲಿ ಸಂತೈಸಿದನು ಗೋಪಿಯರ ೨೯

ಗೋಪಗೋಪೀಜನಗಳಂತ
ಸ್ತಾಪವಡಗಲು ಕೃಷ್ಣಲೀಲಾ
ಳಾಪ ಕಥನಶ್ರವಣ ಕೀರ್ತನ ಸಾರ ಸುಧೆಗಳಲಿ
ಶ್ರೀಪತಿ ಪ್ರಿಯದಾಸನೆಂದನು
ರೂಪಚೇಷ್ಟೆಗಳಿಂದ ಬಹುದಿನ
ಯಾಪನೆಯರಘಳಿಗೆಯಂತಿರೆ ಕಳಿದರದಱೊಳಗೆ ೩೦

ಉದ್ಧವನನಿಂತಬಲೆಯರು ಹರಿ
ಬುದ್ಧಿಯಲಿ ನಂದಾದಿಗಳು ಸು
ಶ್ರದ್ಧೆಯಲಿ ವರ್ಣಿಸುತ ಹರಿಗುಣ ಕೀರ್ತನವನೊಲಿದು
ಬದ್ಧ ಬಹಳ ಪ್ರೇಮರಸ ಸಂ
ವೃದ್ಧ ಸತ್ಪ್ರೋದಿತ ಪರಾನಂ
ದಾಬ್ಧಿಯೊಳಗೋಲಾಡುತಿರ್ದರು ಸಾಧುಸಂಗದಲಿ ೩೧

ವರನದೀ ತೀರವನು ಕುಸುಮಿತ
ತರುಗಳನು ಗೋವರ್ಧನಾಹ್ವಯ
ಗಿರಿಯನಾ ಕೃಷ್ಣಾಂಘ್ರಿ ರೇಖಾ ರೇಣುರಂಜಿತದ
ಪರಮ ಭಾಗವತಾಂಕನೀಕ್ಷಿಸು
ತಿರದೆ ತಲೆದೂಗುತ್ತ ಕೃಷ್ಣನ
ಚರಿತ ವಿಪಿನೋದ್ದೇಶದೊಳಗಾಡಿದನು ಹರುಷದಲಿ ೩೨

ಇದು ಬಕಾಸುರ ಭಂಜನಸ್ಥಳ
ವಿದುವೆ ಧೇನುಕನಾಶನ ಸ್ಥಳ
ವಿದು ವೃಷಾಸುರ ಶಂಖಚೂಡವ್ಯೋಮರೆಂಬವರ
ಕದನ ರೌದ್ರಸ್ಥಾನ ವತ್ಸನ
ನೊದೆದ ಲೀಲಾಸ್ಥಾನವೆಂದಾ
ಸುದತಿಯರು ತೋಱುತ್ತ ನಡೆದರು ನಯನವಾರಿಯಲಿ ೩೩

ಇದು ರಮಾರಮಣಾದೃತಸ್ಥಳ
ವಿದು ಮಹೋರಗ ಮರ್ದನಸ್ಥಳ
ವಿದು ಮುಕುಂದನ ಭೋಜನದ ಮಂಡಲದ ಸಂಸ್ಥಾನ
ಮುದದಲೆಮ್ಮೊಡನಾಡಿದ ಸ್ಥಳ
ವಿದು ವಿಹಾರಲತಾ ಗೃಹಾಂತರ
ವಿದೆ ಯೆನುತ ಬಸವಳಿದರಬಲೆಯರುದ್ಧವನ ಮುಂದೆ ೩೪

ತೋಱಿದರು ತಂತಮ್ಮ ಜೀವವ
ಮಾಱುಗೊಂಡೆಡೆಗಳನು ಧರೆಯಲಿ
ನೀಱೆಯರು ಹೊರಳುತ್ತ ನಯನಜಲಂಗಳಲಿ ನೆನೆದು
ಓಱುಗುಡಿಸಿದರೊಱಲಿದರು ಬಾ
ಯಾಱಿ ಬಸವಳಿದೇಕೆ ಗಂಟಲ
ನೂಱಿಹೋದೆ ವಿಧಾತ್ರ ಯೆಂದಳಲಿದರು ಮೂರ್ಛೆಯಲಿ ೩೫

ಇರಲು ಗೋಪಾಂಗನೆಯರಂತಃ
ಕರಣ ಪರಿಪಾಕವನು ಪರಮೇ
ಶ್ವರಪದಾಬ್ಜ ಪರಾಗ ನಿಷ್ಠೆಯನದನು ಕಾಣುತ್ತ
ಪರಮಭಾಗವತೋತ್ತಮನ ಮನ
ಕರಗಿ ಕರಪುಟ ಮುಕುಳದಲಿ ಪಂ
ಕರುಹಮುಖಿಯರ ಪಾದರೇಣುಗಳಿಂಗೆ ಪೊಡವಂಟ ೩೬

ಹುಟ್ಟುವಡೆ ಗೋಪಿಯರ ಪರಿಯಲಿ
ಹುಟ್ಟುವುದು ನರರಾಗಿ ಮೇಣೀ
ಸೃಷ್ಟಿಯಲಿ ಗಿಡಬಳ್ಳಿ ಮರಗಳು ಹಕ್ಕಿ ಹರಿಣಗಳು
ಹುಟ್ಟವೇ ಫಲವೇನು ಅರರೆ ವಿ
ಶಿಷ್ಟ ವಿಪ್ರತ್ವದಲಿ ಸುಖ ಕೈ
ಮುಟ್ಟಲಱಿವುದೆ ಹರಿಪದಾಬ್ಜ ಪರಾಙ್ಮುಖರಿಗೆಂದ ೩೭

ಸಾವು ಹುಟ್ಟಿನ ದುಃಖ ಸಂಕ್ಲೇ
ಶಾವಳಿಗಳಿಂಗಂಜಿ ಮುನಿಗಳ
ದಾವನಂಘ್ರಿಸರೋಜದಲಿ ಭಕ್ತಿಯನು ಭಜಿಸುವರು
ನಾವು ಬಯಸುವೆವಾವನಂಘ್ರಿಯ
ಸೇವೆಯನು ಗೋಪಿಯರ ಸುಕೃತವ
ದಾವುದೋ ತತ್ಪದ ಭಕುತಿ ಸಂಪನ್ನವಾಯ್ತೆಂದ ೩೮

ಎತ್ತಲೀ ಗಿರಿವನನಿವಾಸಿಗ
ಳೆತ್ತಲೀ ವ್ಯಭಿಚಾರ ಲೀಲೆಯ
ದೆತ್ತಲೀ ಶೌಚಾಚಮನ ಚಾರಿತ್ರಹೀನೆಯರು
ಎತ್ತಲೀ ಗೋವಿಂದನಲಿ ದೃಢ
ಭಕ್ತಿಯಿದು ಮಝು ಭಾಪು ಸಂಭವಿ
ಸಿತ್ತು ಯೋಗಿಧ್ಯೇಯನಲಿ ಸಕಲಾತ್ಮಕನಲೆಂದ ೩೯

ಆರು ಸರಿ ಸತಿಯರಿಗೆ ರಾಸ ವಿ
ಹಾರದಲಿ ಕಾರುಣ್ಯನಿಧಿ ದೈ
ತ್ಯಾರಿ ಮನವೊಲಿದಪ್ಪುವನು ಗೋಪನಾರಿಯರ
ಭೂರಿ ಭಾಗ್ಯೆಯರೊಳಗೆ ಮಾಡಿದ
ಕೂರುಮೆಯು ಲವಲೇಶವುಂಟೇ
ವಾರಧಿಯ ಮಗಳಲಿ ನಿಜೋರಃಸ್ಥಳ ನಿವಾಸೆಯಲಿ ೪೦

ಅಪ್ಪಿದಳು ಸಿರಿ ತಾನೆ ಬಿಡದೊಲಿ
ದಿಪ್ಪನಾ ಲಕ್ಷ್ಮಿಯನು ಮುರಹರ
ನಪ್ಪುವನು ಗಡ ತಾನೆ ವೊಲಿದೀ ಭಾಗ್ಯವಂತೆಯರ
ದರ್ಪಕನ ಹೆತ್ತಯ್ಯನೊಲವಿನ
ದರ್ಪವೆಂತುಟೊ ಭಕ್ತರಿಂಗೇ
ನೊಪ್ಪಲಱಿಯದು ಬಲ್ಲಿದರು ಭುವನತ್ರಯದಲೆಂದ ೪೧

ಜನನವಾಗಲಿ ತನಗೆ ಗೋ
ಜನದ ಪಾದ ಪರಾಗ ಸೋಕುವ
ವಿನುತ ವೃಂದಾವನದ ತರು ಲತೆ ಗುಲ್ಮ ನಿಕರದಲಿ
ವನಜದೃಶನೊಲವೆನ್ನಲುಳ್ಳಡೆ
ತನಗಿದೇ ಪುರುಷಾರ್ಥ ಬೇಡುವೆ
ನೆನಗೆ ಕರುಣಿಸು ಕೃಷ್ಣ ಕರುಣಾನಿಧಿಯೆ ನೀನೆಂದ ೪೨

ಅಱಸಿ ಕಾಣರು ಮುನಿಗಳಾವನ
ನಿಱುಗೆಯನು ಶ್ರುತಿಕೋಟಿಗಳು ಕಡೆ
ಸೆಱಗ ಕಾಣವು ಕೀರ್ತಿಸುತ ಮಹಿಮಾಮೃತಾಂಬುಧಿಯ
ಉಱುವ ದೈವವನದನು ಕುಚತಟ
ದಿಱುಬಿನಲಿ ಬಿಗಿದಪ್ಪಿ ಗಡ ವೈ
ಮಱೆವರೀ ಗೋಪಿಯರು ರಾಸೋತ್ಸವದ ಗೋಷ್ಠಿಯಲಿ ೪೩

ವಿರತರನು ವಿಷಯಿಗಳ ಮಾಡುವ
ಪರತರಾತ್ಮಜ್ಞಾನನಿಷ್ಠಾ
ನಿರತರನು ನೆಲೆಗೆಡಿಸುವಚ್ಯುತನಂಘ್ರಿ ಪಂಕಜವ
ಇರದೆ ಕೆಂಗಳಲಾನನದಲಂ
ಬುರುಹವದನೆಯರೊತ್ತಿಕೊಳುತುರು
ವಿರಹ ತಾಪವನುಳಿವರಿರುಳೀ ಸಭಾಗ್ಯೆಯರು ೪೪

ಒಡನಿಹೆನು ತಾನೆಂಬ ಕೃಷ್ಣನ
ನುಡಿಯನೇ ನೆಱೆ ನಂಬಿ ಮುಗ್ಧಿಲ
ಲೊಡನೆ ಹರಿಯಿರೆ ಕಂಡು ವಿರಹವ್ಯಥೆಯನೀಡಾಡಿ
ತಡವಿ ತಕ್ಕವಿಸುತ್ತ ರತಿಸುಖ
ವೊಡರಿಸಲು ಬೆಳಗಾಗೆ ವಿಸ್ಮಯ
ವಡುವರಚ್ಯುತವಂಗರಾಗವನಂಗದಲಿ ಕಂಡು ೪೫

ಆವ ಕರುಣಾವನಧಿಯೋ ರಾ
ಜೀವಲೋಚನನಕಟ ಗೋಪಿಯ
ರಾವ ಭಾಗ್ಯಾಧಿಕೆಯರೋ ಭುವನತ್ರಯಂಗಳಲಿ
ಭಾವ ಹರಿಮಯ ಭಕುತಿ ಹರಿಮಯ
ಜೀವಜಾತವಿದೈದೆ ಹರಿಮಯ
ವೋವೊ ಹರಿಮಯ ಕನಸು ನೆನಸು ಸುಷುಪ್ತಿಗಳಲೆಂದ ೪೬

ಇಂದುಮುಖಿಯರು ಪಾಡುವೀ ಗೋ
ವಿಂದ ಕಥನಾಮೃತದ ಕಡಲಲಿ
ಮಿಂದು ಪಾವನವಾಗುತಿದೆಲಾ ಸಲೆ ಜಗತ್ರಿತಯ
ವಂದಿಸುವೆ ನಾನೀ ವ್ರಜಸ್ತ್ರೀ
ವೃಂದ ಪದರೇಣುಗಳನಡಿಗಡಿ
ಗೆಂದು ನೆಱೆ ಕೈಯೆತ್ತಿ ಪೊಡಮಡುತಿರ್ದನವನಿಯಲಿ ೪೭

ಬಾಲೆಯರು ಪಾಡುವ ಮುಕುಂದನ
ಲೀಲೆಯನು ಕೇಳುತ್ತ ಕರಗು
ತ್ತಾಲಿಗಲ್ಲಂದದಲಿ ಪರವಶನಾಗೆ ಗೋಪಿಯರ
ಕಾಲಿಗೆಱಗುವನಡಿಗಡಿಗೆ ಪದ
ಧೂಳಿಯನು ಧರಿಸುವನು ವೈಷ್ಣವ
ಶೀಲನಿಧಿ ಮುಳುಗಾಡುತಿರ್ದನು ನಯನವಾರಿಯಲಿ ೪೮

ಇಂದು ನಾಳೆ ಯೆನುತ್ತ ದಿವಸವ
ಹಿಂದುಗಳೆದರು ಗೋಪಿಯರು ಗೋ
ವಿಂದದಾಸನ ಸಂಗಸುಖ ಲಾಭದಲಿ ಕಳುಹಿಸದೆ
ಸಂದವರಘಳಿಗೆಯೆನೆ ದಿನವೊಂ
ದೊಂದು ಹರಿಗುಣಚರಿತ ಕೀರ್ತನ
ದಿಂದ ಕೃಷ್ಣನ ಸಂಗಸುಖಕೆ ಸಮಾನವೆಂದೆನಿಸಿ ೪೯

ಸಂತವಿಸಿ ಗೋಕುಲವನಂದೇ
ಕಾಂತಭಕ್ತರ ದೇವನಾ ಶ್ರೀ
ಕಾಂತನನು ನೆನೆದೆಲ್ಲ ನೆಱೆ ಮನ್ನಿಸುತ ಬೀಳ್ಕೊಂಡು
ಸಂತಸಲೇಱಿದನು ರಥವನು
ಕಂತುಶರ ಭಗ್ನೆಯರು ಗೋಕುಲ
ಕಾಂತೆಯರು ಕವಿತರಲು ಕಾಣುತ ಕಾತರಾಕ್ಷಿಯರ ೫೦

ನಂದಗೋಪಯಶೋದೆಯರು ನಡೆ
ತಂದು ಗೋಪೀ ಗೋಪಜನ ಸಹಿ
ತಂದು ಕಾಣಿಕೆಗೊಟ್ಟು ಕೃಷ್ಣಂಗೀವುದಿದನೆನುತ
ಎಂದರಾ ಕೃಷ್ಣಾಂಘ್ರಿ ಚಿಂತಾ
ನಂದಬಾಷ್ಪಜಲಾವಿಲೇಕ್ಷಣ
ದಿಂದ ನೋಡುತ್ತುದ್ಧವನ ಕಾಲ್ಗೆಱಗಿ ತೆಗೆದಪ್ಪಿ ೫೧

ಮನದ ವೃತ್ತಿಗಳಾ ಮುಕುಂದನ
ನೆನಹಿನಲಿ ವಾಕುಗಳು ಗುಣ ಕೀ
ರ್ತನಗಳಲಿ ಕೈಗಳು ತದಂಘ್ರಿಸರೋಜ ಪೂಜೆಯಲಿ
ತನು ನಮಸ್ಕಾರದಲಿ ಸಲೆ ಸಂ
ಜನಿಸಲೇಬೇಕೆಮಗೆ ಬೇಡುವೆ
ವಿನಿತುವನು ಕೃಷ್ಣಂಗೆ ಬಿನ್ನವಿಸುವುದು ನೀನಿದನು ೫೨

ಕರ್ಮವಶದಲಿ ತಿರುಗಿ ನಾನಾ
ಜನ್ಮಶತದಲಿ ತೊಳಲುವೀ ದು
ಷ್ಕರ್ಮಿಗಳೆನಿಪ್ಪೆಮಗೆ ಮಱೆಯದವೋಲು ನಿಜಮತಿಯ
ಎನ್ಮೊಳಗೆ ದಯೆಗೈದು ಮಾಳ್ಪುದು
ಧರ್ಮವೇನೈ ತಂದೆ ಸಾಕ್ಷಾ
ದ್ಬ್ರಹ್ಮರೂಪನೆನಿಪ್ಪ ಕೃಷ್ಣನ ಚರಣಯುಗಳದಲಿ ೫೩

ದತ್ತಫಲದಲಿ ಸಂಚಿತೇಷ್ಟಾ
ಪೂರ್ತಫಲದಲಿ ವಿಧಿವಿಹಿತ ಸ
ದ್ವೃತ್ತಫಲದಲಿ ಬೇಡುವೆವು ತಾವಿದನು ನಿಜವೆನಿಪ
ಭಕ್ತಿಯಲಿ ಕೃಷ್ಣನಲಿ ಸಂತತ
ಮೈತ್ರಿಯನು ಭೂತದಲಿ ತನ್ನಯ
ಭೃತ್ಯರೊಲವನು ಕರುಣಿಸುವುದೆಂದೆನುತ ಕೃಷ್ಣಂಗೆ ೫೪

ನಿನ್ನವರು ನಾವಾದಡೆಲೆ ಕರು
ಣಾರ್ಣವನೆ ನೀ ಬೇಡಿಕೋ ಸಂ
ಪನ್ನ ಕರುಣಾನಿಧಿಯನೆನುತಾನಂದಬಾಷ್ಪದಲಿ
ಸನ್ನುತನನಪ್ಪಿದರು ಮರಳಿದ
ರುನ್ನತಾನುಳ ಮೂರ್ತಿ ಗೋಪರ
ಧನ್ಯತೆಗೆ ತಲೆತೂಗಿ ಕೈಮುಗಿವುತ್ತ ಬೀಳ್ಕೊಂಡ ೫೫

ಬಂದನುದ್ಧವನಾ ಮಹಾರಥ
ದಿಂದ ಮಧುರಾಪುರಕೆ ಪರಮಾ
ನಂದದಲಿ ಕಾಣಿಕೆಯನಿತ್ತಚ್ಯುತನ ಪದಕೆಱಗಿ
ನಿಂದು ಕೈಗಳ ಮುಗಿದು ಬಿನ್ನಹ
ವೆಂದೆನುತ ಗದ್ಗದಗಳಾಕ್ಷರ
ದಿಂದ ಭಕ್ತ್ಯುದ್ರೇಕವನು ಹೇಳಿದನು ಗೋಕುಲದ ೫೬

ಹೆಸರುಗೊಂಡವರವರುಪಾಯನ
ವಿಸರವನು ಮಣಿಕನಕಭೂಷಣ
ವಸನಮಧುಘೃತ ಕುಂಭಧೇನು ಪ್ರಮುಖ ವಸ್ತುಗಳ
ಪ್ರಸರವನು ಪರಮೇಷ್ಠಿಪಿತಗೊ
ಪ್ಪಿಸಿದನನಿತುವನೊಲವು ಮಿಗಲೀ
ಕ್ಷಿಸುತ ಭಕ್ತಪ್ರೇಮನಿಧಿ ತುಂಬಿದನು ಕಂಬನಿಯ ೫೭

ಆಲಿಸುತ ವೃತ್ತಾಂತವನು ಕರು
ಣಾಳು ಹೊಂಪುಳಿಯೋಗಿ ಭಕ್ತರ
ಮೇಲಣನುರಾಗಾನುರಂಜಿತ ಪಾರವಶ್ಯದಲಿ
ಹೊಳಿದವು ನಿಡುಗಂಗಳಡಿಗಡಿ
ಗೋಳಿಗೆಯ ಪುಳಕದಲಿ ಭಕ್ತನ
ಮೌಳಿಯನು ತಡವಿದನು ಕೇಳಿದನವರ ಕುಶಲವನು ೫೮

ಮತ್ತೆ ವಸುದೇವಂಗೆ ದೇವಕಿ
ಗಿತ್ತನಾ ನಂದಾದ್ಯರುಚಿತದ
ಲಿತ್ತು ಕಳುಹಿದ ವಸ್ತುಗಳನಿರದುಗ್ರಸೇನಂಗೆ
ಮತ್ತೆ ಬಲದೇವಂಗೆ ಕಾಣಿಕೆ
ಯಿತ್ತು ಕೈಗಳ ಮುಗಿದು ಗೋಪರ
ಭಕ್ತಿಯನು ವಿಸ್ತರಿಸಿದನು ನಿತ್ಯಾತ್ಮಬಾಂಧವರ ೫೯

ನಲವತ್ತನಾಲ್ಕನೆಯ ಸಂಧಿ ಮುಗಿಯಿತು.

# ನಲವತ್ತೈದನೆಯ ಸಂಧಿ

ಸಿಂಧುಶಯನನಭೀಷ್ಟವನು ಸೈ
ರಂಧ್ರಿಗಿತ್ತಕ್ರೂರಭವನಕೆ
ಬಂದು ಕೃತ್ಯಾರ್ಥದಲಿ ಬಿಜಯಂಗೈದನೊಲವಿನಲಿ

ಒಂದು ದಿನ ಮನದೊಳಗೆ ನೆನೆದು ಮು
ಕುಂದನಾ ಸೈರಂಧ್ರಿಯೊಪ್ಪುವ
ಮಂದಿರಕೆ ಬಹೆನೆಂದ ಮಾತನು ಸಲಿಸಬೇಕೆಂದು
ವಂದ್ಯಚರಣರ ದೇವನೈತರ
ಲಿಂದುಮುಖಿ ಕಾಣುತ್ತ ಪರಮಾ
ನಂದದಲಿ ಬಂದಿದಿರುಗೊಂಡಳು ವಿವಿಧವಿಭವದಲಿ ೧

ಆ ಸರೋರುಹವದನೆ ಹರುಷಾ
ವೇಶದಲಿ ಮನ ಮುಳುಗಿ ಕೃಷ್ಣಂ
ಗಾಸನವನೊಪ್ಪಿರಲು ಸಿರಿ ಮಂಚದಲಿ ಪಚ್ಚಡಿಸಿ
ಲೇಸೆನಿಸಿ ನಿರ್ಮಲಿನವಹ ಮೆಲು
ವಾಸಿನಲಿ ನವರತ್ನನಿಕರದ
ಭಾಸುರಾಂತರ್ಗೃಹದೊಳಾರಾಧಿಸಿದಳಚ್ಯುತನ ೨

ಕೊಟ್ಟ ವಿಮಲಾಸನವ ಕೈಯಲಿ
ಮುಟ್ಟಿ ಕೆಳಗವನಿಯಲಿ ಸಲೆ ಜಗ
ಜಟ್ಟಿ ಭಕುತರ ದೇವನುದ್ಧವನೆಱಗಿ ಕುಳ್ಳಿರಲು
ದೃಷ್ಟಿ ಮೋಹನಮೂರ್ತಿದನುಜಘ
ರಟ್ಟನನುಕರಿಸುತ್ತ ಲೋಕದ
ಚೇಷ್ಟೆಯನು ಕುಳ್ಳಿರ್ದನೊಪ್ಪಿರಲೆಸೆವ ಮಂಚದಲಿ ೩

ಮಘಮಘಿಪ ಕಸ್ತೂರಿ ಕುಂಕುಮ
ದಗರು ಚಂದನ ವಾಸಿತದ ಬೆಳು
ವೊಗೆಯ ಧೂಪದ ದಿವ್ಯ ಪುಷ್ಪಾಮೋದ ಮೋಹನದ
ಬಿಗಿದ ಪಟ್ಟಾವಳಿಯ ಮೇಲ್ಕ
ಟ್ಟುಗಳ ಮುಕ್ತಾಜಾಲ ಮಾಲಾ
ಸ್ಥಗಿತ ಗೃಹರಚನೆಯನು ನೋಡಿದನಸುರರಿಪು ನಗುತ ೪

ಕಾಲು ಮೊಗವನು ತೊಳೆದು ಮೆಱೆವ ದು
ಕೂಲವನು ಬಿಗಿದುಟ್ಟು ಮೊಲೆಗಳ
ಮೇಲೆ ವರಕಸ್ತೂರಿ ಚಂದನದಣ್ಪು ರಂಜಿಸಲು
ಲೋಲಲೋಚನೆ ಮುಡಿದು ಮೊಲ್ಲೆಯ
ಮಾಲೆಯನು ಹೊಳೆಹೊಳೆವ ಹೊಸ ಹೊ
ನ್ನೋಲೆಕಡಗಂಗಳನು ತೊಟ್ಟಳು ವರ ವಿಭೂಷಣವ ೫

ಒಲಿದು ಭೋಜನ ಪಾನ ಭೂಷಾ
ವಳಿಗಳಲಿ ಮನದಣಿಯೆ ಕೊಂಡಳು
ಬಿಳಿಯೆಲೆಯ ಕರ್ಪೂರಪೂರದಲೆಸೆವ ವೀಳೆಯವ
ಲಲಿತಪದನೂಪುರದ ರವದಲಿ
ಲಲನೆ ಬಂದಳು ಲಕ್ಷ್ಮಿಯಂತಾ
ನಳಿನನಾಭನ ಹೊರೆಗೆ ಮೆಱೆವ ಮನೋನುರಾಗದಲಿ ೬

ಉಡುಗಿ ಲಜ್ಜಾಭಾರದಲಿ ಮೈ
ನಡುಗಿ ನವಸಂಗಮುಕೆ ನಸು ಬೆಮ
ರಿಡುವ ಭಾಳದ ತಿಲಕದಲಿ ಕಡೆಗಣ್ಣ ನೋಟದಲಿ
ಎಡದ ಕೈಯಲಿ ಮೇಲುದನು ಬಿಡು
ಮುಡಿಯನೋಸರಿಸುತ್ತ ನಿಂದಳು
ಕಡು ಚೆಲುವೆಯೆಂದೆನಿಸವಿಭ್ರಮಗಳನು ನೆಱೆ ಮೆಱೆದು ೭

ಕಾತರಿಸಿದಳು ಕಾಂತೆ ನಯನ
ಪ್ರೀತಿ ಚೇತಸ್ಸಂಗಸಂಕ
ಲ್ಪಾತಿಶಯ ನಿದ್ರಾನಿವೃತ್ತಿ ಶರೀರಕಾರ್ಶ್ಯದಲಿ
ದೌತ್ಯವಿಷಯ ನಿವೃತ್ತಿಲಜ್ಜಾ
ಖ್ಯಾತಿಚೇತೋನ್ಮಾದ ಮೂರ್ಛಾ
ಜಾತವೆಂಬೊಂಬತ್ತನಸ್ಥೆಗಳವುಕಿದವು ಸತಿಯ ೮

ಅಕಟಟ ಲೋಕವಿದಧಿಕ ದುಃಖ
ಪ್ರಕೃತಿ ಗುಣ ವಿಷಯಂಗಳಿಂಗತಿ
ವಿಕಳತೆಯು ನೆಯ್ದುವುದು ಸಾವುದು ಕೆಡುವುದಳಲುವುದು
ಸಕಲಸುಖವಿಗ್ರಹನೆ ಸಕಲಾ
ತ್ಮಕನೆ ಮುಂದಿರೆ ಕಾಣುತಾ ಸತಿ
ವಿಕಳಗೊಂಬುದು ಚಿತ್ರವೇ ಭೂಪಾಲ ಕೇಳೆಂದ ೯

ಇರಲು ಪಂಕಜನಾಭನಾ ಪಂ
ಕರುಹಮುಖಿಯನು ನೋಡಿ ಕರ ಪಂ
ಕರುಹದಲಿ ಕಂಕಣದ ಕೈಯನು ಹಿಡಿದು ನಸುನಗುತ
ಸ್ಪರುಶ ಸುಖಸಾಮ್ರಾಜ್ಯ ಭೋಗವ
ನಿರದೆ ಸಲಿಸುವೆನೆಂದು ಕರುಣಾ
ಶರಧಿ ತೆಗೆದಪ್ಪಿದನು ಸಿರಿಮಂಚದಲಿ ಕುಳ್ಳಿರಿಸಿ ೧೦

ರಮಿಸಿದನು ರಮಣಿಯನು ಲಕ್ಷ್ಮೀ
ರಮಣನಂದನುಲೇಪನವನಿ
ತ್ತ್ರಮಿತಪುಣ್ಯದ ಫಲವಸಿಹವಲಿ ಸಲಿಸಲೆಂದೊಲಿದು
ಕಮಲಮುಖಿ ಕಂಗಳಲಿ ನಿಜಮುಖ
ಕಮಲದಲಿ ಮೊಲೆಗಳಲಿ ಹರಿಪದ
ಕಮಲವನು ತೆಗೆದೊತ್ತಿಕೊಳುತೆಸೆದಿರ್ದಳಡಿಗಡಿಗೆ ೧೧

ಮುಕ್ತಿಸುಖವನು ಪಡೆದ ಜೀವರ
ಚಿತ್ತಸಹಿತ ಮುಕುಂದನಂಘ್ರಿಯ
ಭಕ್ತಿಸುಖಲಾಭಕ್ಕೆ ಮಿಗೆ ಕಕ್ಕುಲಿತೆವಡುವುದೆನೆ
ಅತ್ತಲಾಮದನಾಸ್ತ್ರತಾಡಿತ
ಚಿತ್ತಸುಖಲೇಶವನು ಪಡೆಯದೆ
ಮತ್ತೆ ಪಡೆದೆಂತಕಟ ಬಿಡುವರೆ ಕೃಷ್ಣನಂಘ್ರಿಗಳ ೧೨

ತೋಳುಗಳ ಮಧ್ಯದಲಿ ಬಿಗಿದಾ
ಬಾಲೆ ತಕ್ಕೈಸುತ್ತ ದಣಿಯಳು
ಮೇಳದಲಿ ಮಾತಾಡಿ ದಣಿಯಳು ಕೃಷ್ಣನಂಗವನು
ಸಾಲದಾಘ್ರಾಣಿಸುತ ದಣಿಯಳು
ನೀಲಮೇಘನಿಭಾಂಗ ಕಾಂತಿಯ
ನಾಲಿಗಳಲಡಿಗಡಿಗೆ ಪಡೆಯಳು ಕುಡಿ ಕುಡಿದು ದಣಿವ ೧೩

ಎಂದಳಂಗನೆ ಬಿಡದಿರೆಲೆ ಗೋ
ವಿಂದ ತನ್ನನು ದಿನವನಿಲ್ಲಿಯೆ
ಹಿಂದುಗಳೆವುದು ಕೆಲವನೀವುದು ನಿಜಮನೋರಥವ
ಎಂದು ಸತಿ ನಿಜ ಚರಣಕಮಲ
ದ್ವಂದ್ವವನು ಹಿಡಿದಿರಲು ನಸು ನಗು
ತೆಂದನಾ ಸೈರಂಧ್ರಿಯೊಡನೆ ಮನೋನುರಾಗದಲಿ ೧೪

ಮತ್ತೆ ಬಹೆನೆಲೆ ಕಾಂತೆ ಕಾಡದೆ
ಚಿತ್ತದಲಿ ಕಳವಳಿಸದೆನ್ನನು
ಮುಕ್ತನನು ಮಾಡುವುದು ಕಾರ್ಯವಿಶೇಷವುಂಟೆನುತ
ಇತ್ತು ಕಾಮಿತ ವರಗಳನು ವರ
ಮೂರ್ತಿ ಸೈರಂಧ್ರಿಯನು ಸಂತವಿ
ಸುತ್ತ ಬೀಳ್ಕೊಳಿಸಿದನು ಬಿಜಯಂಗೈದನರಮನೆಗೆ ೧೫

ತಂದೆ ಕೇಳೆಲೆ ಭೂಪ ಹರಿ ಮ
ತ್ತೊಂದು ದಿನ ರಾಮೋದ್ಧವರು ನಲ
ವಿಂದ ತನ್ನೊಡನೈತರಲು ಭಕ್ತಾನುರಾಗದಲಿ
ಬಂದನಕ್ರೂರನ ಮನೆಗೆ ಮುದ
ದಿಂದ ಭಕ್ತಾಧೀನ ವಿಗ್ರಹ
ನೆಂದು ಲೋಕಕ್ಕರುಹುವಂತಿಹೆ ತಾನೆ ಮನವೊಲಿದು ೧೬

ಬರವ ಕಾಣುತ ಗಾಂದಿನೀಸುತ
ನಿರದೆ ನೈಯಿಕ್ಕುತ್ತ ಹರುಷೋ
ತ್ಕರುಷದಲಿ ನಡೆದಿದಿರುಗೊಂಡುಚಿತದಲಿ ನಿಜಗೃಹಕೆ
ಪರಮಪುರುಷೋತ್ತಮನನಂದಾ
ಪರಮ ಭಾಗವತೋತ್ತಮನು ಸತು
ಕರಿಸಿ ಬಿಜಯಂಗೈಸಿ ತಂದನು ಪರಮವಿಭವದಲಿ ೧೭

ಅರ್ಚಿಸಿದನಾತಿಥ್ಯದಲಿ ಜಗ
ದರ್ಚಿತಾಂಘ್ರಿಗಳನು ಮನೋರಥ
ದಚ್ಚುಗಳನಾಶ್ರಿತರ ಹರುಷಾಬ್ಧಿಗಳ ಮೆಚ್ಚುಗಳ
ಸಚ್ಚರಿತನಮೃತಾನ್ನಪಾನ ಸ
ಮುಚ್ಚಯಾಮಳ ಗಂಧಮಾಲ್ಯದ
ಪಚ್ಚಕಪ್ಪುರ ವೀಳೆಯದ ವಿಭವಾನುಸಾರದಲಿ ೧೮

ಕುಳ್ಳಿರಿಸಿ ಮಂಚದಲಿ ಸಿರಿಪದ
ಪಲ್ಲವವನೊತ್ತುತ್ತ ನಿಜಕರ
ಪಲ್ಲವದಲಕ್ರೂರನೆಂದನು ನಿಜಸಭಾಗ್ಯತೆಯ
ಭುಲ್ಲವಣೆಯನು ಭುವನಪತಿಗಳ
ಬಲ್ಲಹರು ಬರಲಾವ ಧನ್ಯರ
ಬಲ್ಲಹನೊ ತಾನಿಂದು ನಿಜ ಮಂದಿರಕಿದೆಂತೆಂದ ೧೯

ಆ ದುರಾತ್ಮಕ ಕಂಸನನು ಕೊಂ
ದಾ ದಿನಂ ಮೊದಲಾಗಿ ನಮ್ಮಾ
ಯಾದವರ ಕುಲವಧಿಕ ಪಾವನವಾಯ್ತು ಸುಖವಾಯ್ತು
ಆ ದುರಂತ ಮಹಾವಿಪನ್ಮ
ಹೋದಧಿಯನುತ್ತರಿಸಿದುದು ಕರು
ಣೋದಧಿಗಳಿರ ನೀವೊಲಿದಡಿನ್ನಾವುದರಿದೆಂದ ೨೦

ನೀವಲ್ಲೈ ಜಗದುದಯ ಸಂಸ್ಥಿತಿ
ಭಾವನರು ಸಚರಾಚರಾತ್ಮಕ
ಜೀವರೂಪರು ಸಕಲ ಜಗದಾಧಾರಮೂರ್ತಿಗಳು
ನೀವುಳಿಯಲೀ ಜಗದ ತೋರ್ಕೆಗ
ಳಾವವೈ ತೋಱುವವು ಕಲ್ಲೋ
ಲಾವಳಿಗಳೆಂತಬುಧಿ ಜಲವಿರಹಿತಗಳಹವೆಂದ ೨೧

ಆ ರಜೋಗುಣದಿಂದ ನೀನೇ
ಭೂರಿ ಜಗವನು ಮಾಳ್ಪೆ ಸಲಹುವೆ
ಸಾರ ಸತ್ವಗುಣಾವಲಂಬನದಿಂದ ಮತ್ತದನು
ಮೇರೆಗಿಡಿಸುವೆ ಜಗವನಂತ ಗು
ಣಾರಚಿತ ಮೂರ್ತಿಯಲಿ ನಿಜ ಲೀ
ಲಾರಚನೆ ತೋರ್ಪೀ ಜಗತ್ರಯವೆಂದನಕ್ರೂರ ೨೨

ನಿನಗೆ ತದ್ಗುಣ ಕರ್ಮವೆಂತೈ
ಜನನ ಹೇತುವೆನಿಪ್ಪುದು ಪರಾ
ತ್ಪರನನು ಬಂಧಿಸಲರಿವುದೆಂತೆಲೆ ದೇವ ಚಿನ್ಮಯನ
ಕನಸಿನಂತೆ ನಿರೂಪಿತವಲಾ
ಜನನವಿದು ಸತ್ವಾದಿಗುಣ ಸಂ
ಜನನವಲ್ಲದೆ ಬಂಧ ಮುಕುತಿಗಳಿಲ್ಲ ನಿನಗೆಂದ ೨೩

ಅರಿವು ಮರವೆಗಳಿಲ್ಲ ನಿನ್ನಲಿ
ತಿಳಿಹುಕುಳುಹುಗಳಿಲ್ಲ ಖಂಡಿತ
ನಳಿವೆನಿಸಿ ಬೇರಾಗಿ ತೋರಿದಸತ್ಯದೃಶಿ ಮಾತ್ರ
ಅರಿವು ಮರವೆಗಳೀಯವಿದ್ಯೆಯ
ಮರೆಗಳೆನಿಸುವ ಜೀವರಿಂಗೆ ತೋ
ರ್ಪರಿವು ನೀನಲ್ಲದಿರೆ ಮರವೆಯನರಿವರಾರೆಂದ ೨೪

ಗುಣವಿಮೂಢಾತ್ಮರಿಗೆ ನಿಜವನು
ಗುಣಿಸಿ ಕೊಡಲೆಂದೊಲಿದು ನೆರೆ[3] ನಿ
ರ್ಗುಣನೆನಿಪ ಪರಮಾತ್ಮನೆ ಸತ್ವಾದಿಗುಣದಿಂದ
ಗುಣಯುತನು ತಾನಾಗಿ ನಾರಾ
ಯಣನೆನಿಪೆ ನಾನಾವತಾರದ
ಭಣಿತೆಗಳ ಪರುಠವದ ಪರತರವಸ್ತು ನೀನೆಂದ ೨೫

ಜಗಕೆ ತತ್ವಜ್ಞಾನಸಿದ್ಧಿಯ
ಬಗೆಗೆ ನೀನೇ ಕರುಣೆಯೆನಿಸಿದ
ನಿಗಮಮಾರ್ಗಂಗಳನು ತದನುಷ್ಠಾತೃವರ್ಗವನು
ಅಗಡಿಸುವ ಪಾಷಂಡ ಪಥದೂ
ಳಿಗವ ಮಾಣಿಸಲೆಂದು ನೀನೊಲಿ
ದೊಗುವೆ ನರ ಸುತ ತಿರ್ಯಗಾದಿ ಶರೀರಗಳಲೆಂದ ೨೬

ದೇವ ನೀನಿಂದೊಲಿದು ಸತ್ವ ಗು
ಣಾವಲಂಬನ ಮೂರ್ತಿಯಲಿ ವಸು
ದೇವಗೃಹದಲಿ ದೇವಕೀದೇವಿಯರಿಗವತರಿಸಿ
ಜೀವರಕ್ಷಾಕರನೆ ಭೂಭಾ
ರಾವಸಾನವ ಬಯಸಿ ಜನಿಸಿದ
ಡಾವನೈ ದಿಟಕರಿವನೀ ನಿನ್ನತುಳ ಲೀಲೆಗಳ ೨೭

ಇಂದು ಪಾವನವಾದುದೆನ್ನಯ
ಮಂದಿರಂಗಳು ಚರಣತೀರ್ಥದ
ಲೊಂದಿದಪಲಾ ತ್ರಿಜಗದಘಹರವೆನಿಪ ನಿಜಪದವ
ವಂದ್ಯರೇಣುವ ಧರಿಸಿದೀ ಜನ
ವೃಂದವೆನ್ನೀ ಸತಿಸುತಾದ್ಯರ
ಮಂದಪುಣ್ಯರು ಪರಮಧನ್ಯರು ಮಾನ್ಯರಾವೆಂದ ೨೮

ಪರಮ ಕರುಣಾಸಿಂಧು ತ್ರಿಜಗ
ದ್ಗುರು ಕೃತಜ್ಞನೆನಿಪ್ಪ ನಿನ್ನೀ
ಚರಣಕಮಲವನುಳಿದು ಬೇರಿನ್ನೊಂದು ದೈವವನು
ಶರಣುವೊಗುವರೆ ಬಲ್ಲವರು ನಿಜ
ಶರಣರಿಗೆ ಕಾಮಿತ ವರಂಗಳ
ಕರುಣಿಸುವ ಕಲ್ಪದ್ರುಮವಲಾ ನಿನ್ನ ಪದವೆಂದ ೨೯

ಕ್ಷೇಮ ವೃದ್ಧಿಗಳಿಲ್ಲದಧಿಕ
ಕ್ಷೇಮವಹ ನಿಜಪದವ ನೀ ನಿ
ಷ್ಕಾಮರಿಂಗೆ ನೀನೀವೆ ಯೆಂದರೆ ದೇವ ನಿನ್ನಂತೆ
ಶ್ರೀಮನೋರಮ ಕೇಳು ಭಕ್ತ
ಪ್ರೇಮವಾಹಕರಾರು ಭುವನ
ಸ್ತೋಮದಲಿ ನಿನ್ನಂತೆ ಕರುಣಾರ್ಣವರದಾರೆಂದ ೩೦

ಅರರೆ ಭುವನತ್ರಯದಲೆನ್ನಂ
ತಿರೆ ಸಭಾಗ್ಯರದಾರು ಯೋಗೀ
ಶ್ವರಮನೋದುರ್ಲಕ್ಷ್ಯ ಪದಕಮಲನನು ಕಂಡೆನಲ
ಕರುಣಿಸುವುದೆನಗಿದನೆ ಜನ್ಮಾಂ
ತರಸಹಸ್ರದ ಭವಣೆಗೆಯಲೆಂ
ದಿರದೆ ವೈಯಿಕ್ಕಿದನು ಮುನಿವಂದಿತನ ಚರಣದಲಿ ೩೧

ಇಂತು ಸಂಸ್ತುತಿ ಪೂಜೆಗಳನೇ
ಕಾಂತಭಕ್ತರ ದೇವನಮಳ
ಸ್ವಾಂತದಲಿ ಮಾಡುತ್ತ ವೈಯಿಕ್ಕಿರಲು ಚರಣದಲಿ
ಅಂತವಿಲ್ಲದ ಕೃಪೆಯನಾ ಶ್ರೀ
ಕಾಂತನಾಚರಿಸಿದನು ನುಡಿದನು
ದಂತಪಂಕ್ತಿಗಳೆಸೆಯಲಾತನ ಮಸ್ತಕವ ನೆಗಹಿ ೩೨

ನೀನಲಾ ಗುರುವಂದ್ಯನೆಮಗತಿ
ಮಾನನೀಯನಲಾ ಪಿತೃವ್ಯನ
ದೇನ ಹೇಳಿದೆ ತಂದೆ ಲಾಲನಪೋಷಣಾರ್ಹರಿಗೆ
ಸೂನುಗಳಿಗೇಕಿದು ತ್ರಿಕಾಲ
ಜ್ಞಾನಿಗಳಲಾ ನೀವು ಪೂಜ್ಯರು
ಮಾನವರಿಗಿಷ್ಟಾರ್ಥಸಿದ್ಧಿಗೆ ಸೇವ್ಯತಮರೆಂದ ೩೩

ಸುರರು ಸಜ್ಜನರೆಂಬರಿಬ್ಬರೆ
ಪರಹಿತೈಕಸ್ವಾರ್ಥನಿಷ್ಠರು
ಸುರರು ನಿಯತಸ್ವಾರ್ಥಸಾಪೇಕ್ಷೋಪಕಾರಿಗಳು
ಸುರರಿಗಧಿಕರು ಸಜ್ಜನರು ಸಂ
ದರುಶನದಿಲಖಿಳಾಘಹರರೀ
ಧರೆಗೆ ಪಾವನಮೂರ್ತಿಗಳು ನಿಮ್ಮಂದದವರೆಂದ ೩೪

ಅಱಿಯದವರಿಗೆ ತೀರ್ಥವೀ ಜಲ
ವಱಿಯದವರಿಗೆ ಮೃತ್ಯುವೀ ನೆಲೆ
ಯಱಿಯ ಬಲ್ಲವರಿಗೆ ನೀನೇ ತೀರ್ಥ ನಿಜದೈವ
ಮಱೆಯದೋಲಗಿಸಿದರೆ ಕಾಲಾಂ
ತರಕೆ ಕೆಡಿಸುವವಘವನವು ಸ
ತ್ಪುರುಷರೊಂದೇ ನಿಮಿಷ ಸಂಗಪವಿತ್ರಕರವೆಂದ ೩೫

ದೈವವೆನಗಾ ಸಜ್ಜನರು ನಿಜ
ದೈವವರಿಂಗಾನು ಭಕ್ತರು
ಜೀವಭೂತರು ತನಗೆ ತಾನೇ ಜೀವ ಭಕುತರಿಗೆ
ಭಾವಿಸುವಡಾನಹೆನು ನಿಜ ಭ
ಕ್ತಾವಳೀ ಸಂಸಾರಿಕನು ಕಾ
ರ್ಯವಿಶೇಷವನೊರೆವೆ ನಿನ್ನೊಂದಿಹುದು ಕೇಳೆಂದ ೩೬

ವರಮತಿಯೆ ಹೋಗಿನ್ನು ಹಸ್ತಿನ
ಪುರಕೆ ಬಂಧುಗಳೆನಿಪ ಪಾಂಡವ
ರಿರವನವರ ಕ್ಷೇಮ ಕುಶಲಂಗಳನು ನೆಱೆ ತಿಳಿದು
ಮರಳಿಬಹುದಾ ಪಾಂಡುಮಾವನ
ಮರಣದಲಿ ಬಾಲಕರು ಮಿಗೆ ಕಾ
ತರಿಸಿ ನೆಱೆ ಕಳವಳಿಸದಿರರೆಲೆ ತಂದೆ ಹೋಗೆಂದ ೩೭

ತರಳಮತಿ ಧೃತರಾಷ್ಟ್ರನಾ ಸ
ಚ್ಚರಿತರನು ತಾಯ್ಸಹಿತ ಹಸ್ತಿನ
ಪುರಕೆ ಕರೆಸಿದನೆಂಬುದನು ಕೇಳಿದೆನು ತಾನಿಂದು
ದುರುಳರಾ ದುರ್ಯೋಧನಾದ್ಯರು
ಧರಣಿಪತಿ ಜಾತ್ಯಂಧನೆಂತವ
ರಿರವು ನೋಡಿ ಶುಭಾಶುಭಂಗಳನಱಿದು ಬಹುದೆಂದ ೩೮

ವೃತ್ತವನು ನೆಱೆ ತಿಳಿದು ಬಾ ಹೋ
ಗುತ್ತಮನೆ ವೇಗದಲಿ ಪರಮ ಸು
ಹೃತ್ತುಗಳು ನಮಗವರಲ್ಲೈ ಕುಂತೀಕುಮಾರಕರು
ಮತ್ತನಾಥರಿಗಬಲರಿಗೆ ನಿಜ
ಭೃತ್ಯರಿಗೆ ನಿಜಚೇಷ್ಟೆಯಲಿ ನಿ
ರ್ವರ್ತಿಸುವುದೆಲೆ ತಂದೆ ತಡೆಯದೆ ಹೋಗು ನೀನೆಂದ ೩೯

ಎಂದು ಕಳುಹಿ ಮುಕುಂದನಂದಾ
ಗಾಂದಿನೀತನಯನನು ಕುಂತೀ
ನಂದನರ ಹೊಱೆಗಿರದೆ ಬಲಭದ್ರೋದ್ಧವರು ಸಹಿತ
ಬಂದನರಮನೆಗಖಿಳ ಪುರ ಜನ
ವೃಂದ ಜಯಯೆನೆ ಸೂತ ಮಾಗಧ
ವಂದಿಗಳ ಕೈವಾರವನು ನಿತ್ಯಾತ್ಮನಾಲಿಸುತ ೪೦

ನಲವತ್ತ್ಮೂದನೆಯ ಸಂಧಿ ಮುಗಿಯಿತು.

## ನಲವತ್ತಾರನೆಯ ಸಂಧಿ

ಗಾಂದಿನೀನಂದನನು ಕುಂತೀ
ನಂದನರನಾ ಸಕಲ ಬಾಂಧವ
ಬೃಂದವನು ಕಂಡುಚಿತ ಸತ್ಕಾರದಲಿ ಮನ್ನಿಸಿದ

ಅರಸ ಕೇಳಕ್ರೂರನಾ ಮುರ
ಹರನ ನೇಮದಲಿರದೆ ಹಸ್ತಿನ
ಪುರಕೆ ಬಂದನು ಕಂಡನಾ ಧೃತರಾಷ್ಟ್ರಭೂಪತಿಯ
ಸುರನದೀಜ ದ್ರೋಣ ಕೃಪ ವಿದು
ರರನು ಬಾಹ್ಲಿಕ ಕರ್ಣ ಕೌಂತೇ
ಯರನು ಗುರುಜ ಸುಯೋಧನಾದಿ ಸಮಸ್ತ ಬಾಂಧವರ ೧

ದೂರದಿಂದೈತರಲು ಕಂಡ
ಕ್ರೂರನನು ನಡೆದಿದಿರುಗೊಂಡಾ
ಕೌರವಾನ್ವಯಜಾತರಪ್ಪಿದಿರಧಿಕ ಹರುಷದಲಿ
ಭೂರಿ ಕುಶಲಪ್ರಶ್ನೆಯೆಸೆಯಲು
ದಾರಮತಿಗಳು ಪಡೆದೆವೀ ಸಂ
ಸಾರಫಲವೆನುತ ಮಿಗೆ ಕೊಂಡಾಡಿದರು ಯದುವರನ ೨

ವಿದಿತವೆನಲಾ ಕುಂತಿಯೊಡವು
ಟ್ಟದನ ಬರವನು ಕಾಣುತವೆ ಹರು
ಷದಲಿ ಬಂದಪ್ಪಿದಳು ಕುಶಲಕ್ಷೇಮವಾರ್ತೆಯನು
ಪದುಮಮುಖಿ ಕೇಳುತ್ತ ಸಂತೋ
ಷದಲಿ ಹೊಂಪುಳಿಯೋಗಿ ತನು ಪುಳ
ಕದಲಿ ನೆನೆದಳು ನಳಿನಲೋಚನನ ನಯನವಾರಿಯಲಿ ೩

ನೆನೆದು ತನ್ನಯ ತವರುಮನೆಯನು
ನೆನೆದು ಬಂಧುಸ್ನೇಹವನು ಕೃ
ಷ್ಣನ ಪರಾಕ್ರಮ ರೂಪ ಗುಣ ಮಾಹಾತ್ಮ್ಯ ವೈಭವವ
ವನಜಮುಖಿ ಕಂಬನಿಯಲಾನನ
ನೆನೆಯಲಾ ನಿಜನಂದನರು ಸಹಿ
ತನುಪಮಂಗಿಂತೆಂದಳಂತರ್ಗತಮನೋವ್ಯಥೆಯ ೪

ನೆನೆವರೈ ತಾಯ್ತಂದೆಗಳು ದಿಟ
ನೆನೆವರೈ ಭ್ರಾತೃಗಳು ತನ್ನನು
ನೆನೆವರೈ ತಂಗಿಯರು ತತ್ಸುತ ಸಹಜ ಬಾಂಧವರು
ನೆನೆವನೇ ಕರುಣಾಳುಗಳ ದೇ
ವನು ಶರಣ್ಯನನಾಥಬಾಂಧವ
ನನುಪಮನೆ ಗೋವಿಂದನೆನ್ನುವನೆಂದಳಾ ಕುಂತಿ ೫

ಭ್ರಾತೃಸುತನಾ ರಾಮುನೆನ್ನಯ
ಮಾತನಾಡುವನೈ ವಿರೋಧಿ
ವ್ರಾತಮಧ್ಯನಿವಾಸಿಗಳನೆನ್ನೀ ಕುಮಾರಕರ
ಘಾತಿಸುವ ಹುಲಿಗಳ ನಡುವೆ ಮೃಗ
ಪೋತಕಂಗಳು ಜೀವಿಸುವವೋ
ಲೀತಗಳು ಜೀವಿಸುವರೆಂದಳು ಕುಂತಿ ಬಿಸುಸುಯ್ದು ೬

ಹಸುಳೆತನದಲಿ ಮಕ್ಕಳಯ್ಯನು
ನುಸುಳಿದನು ಸುರರಾಜಪದವಿಗೆ
ಬಿಸುಟು ತನ್ನನು ವಿಪಿನದಲಿ ವಿಹ್ವಲೆಯನಬಲೆಯನು
ಶಿಶುಗಳೊಡನಾನಿರಲು ಬಳಿಕೀ
ವಿಷಮುಮತಿ ಕರೆಸಿದಡೆ ಬಂದೆನು
ಹಸಿದು ಸಾಯಲದೇಕೆನುತ್ತೀ ಹಸ್ತಿನಾಪುರಕೆ ೭

ಇವರ ಬುದ್ಧಿಬಲಂಗಳನು ಮ
ತ್ತಿವರ ಸಾಹಸದೇಳಿಗೆಯನಿಂ
ತಿವರ ಸಚ್ಚರಿತವನು ಮತ್ತೀಯಬಲರನುನಯವ
ಇವರಲಖಿಳ ಪ್ರಜೆಗಳನುರಾ
ಗವನು ತೇಜೋಗುಣಗಳನು ಕಂ
ಡವರು ಕೆಡಿಸಲು ಬಗೆದರಿವದಿರನೆಂದಳಾ ಕುಂತಿ ೮

ಕಾವಡೆಯು ಕೊಲುವಡೆಯು ಕಡೆಯಲಿ
ದೇವಕೀಸುತನಲ್ಲದುಳಿದವ
ರೇವರಿವದಿರು ಮುನಿದು ಮಾಡುವುದೇನು ಮನವೊಲಿದು
ಆ ವಿಗಡರಿಕ್ಕಿದರೆ ವಿಷವನು
ಜೀವಿಸರೆ ಮಡುವಿನೊಳಗದ್ದಿದ
ಡೋವೊ ಬದುಕರೆ ತನ್ನ ಸುತರೆಂದಳು ಸರೋಜಮುಖಿ ೯

ದೈವವೆಂದೆನಗಖಿಳ ದೈವದ
ದೈವವಲ್ಲಾ ಕೃಷ್ಣ ನೀ ಜೀ
ವಾವಳಿಯನುದ್ಧರಿಸಲೋಸುಗ ವಿಷ್ಣುವೀ ಧರೆಗೆ
ದೇವಕೀಸುತನೆಂದೆನಿಸಿ ಕರು
ಣಾವನಧಿ ಜನಿಸಿದನು ಗಡ ನಮ
ಗಾವುದೈ ಭಯವಿನ್ನು ವಿಜಯಿಗಳೆಂದಳಾ ಕುಂತಿ ೧೦

ಬಾರನೈ ಗೋವಿಂದ ನಮಗಿ
ನ್ನಾರು ಗತಿ ಶಿಶುಗಳನು ಸಲಹುವ
ರಾರು ಬಾಂಧವರಾರು ಹಿತವರದಾರು ತಾನುಳಿಯೆ
ಆರಿಗೆಂಬೆನು ಕೃಷ್ಣ ಕರುಣಾ
ವಾರಿಧಿಯೆ ತನ್ನೊಡಲ ತಾಪವ
ನಾರು ಕಳೆವಸಮರ್ಥರಿನ್ನಿದನೆಂದಳಾ ಕುಂತಿ ೧೧

ಪಾಲಿಸಿದೆ ಗಡ ಜಗವನೆನ್ನೀ
ಬಾಲಕರು ನಿನಗೆಅವಿಗರೆ ಕರು
ಣಾಳುತನವನದೆಲ್ಲಿ ಸಲಿಸುವೆ ದೀನರಾವಿರಲು
ಕಾಲಕರ್ಮದ ಭಯಕೆ ನಿನ್ನೀ
ಕಾಲನೊಡ್ಡುವೆ ಭೀತರಿಗೆ ಗಡ
ನಾಳೆ ನಿನ್ನದನಾರು ನಂಬುವರೆಂದಳಾ ಕುಂತಿ ೧೨

ಬೇಱೆ ಗತಿಯನು ಕಾಣೆ ನೀ ಸಂ
ಸಾರ ದುಸ್ಸಹ ದುಃಖ ಭಯ ದು
ರ್ವಾರ ಪಾರಾವಾರಪತಿತರಿಗಸ್ವತಂತ್ರರಿಗೆ
ಚಾರುತರ ಭವದೀಯ ಚರಣಾಂ
ಭೋರುಹಸ್ಮೃತಿ ನಾವೆಯಲ್ಲದ
ಡಾರು ನಿಸ್ತಾರಕರು ಜೀವರಿಗೆಂದಳಾ ಕುಂತಿ ೧೩

ದಳ್ಳುರಿಯ ಮಧ್ಯದಲಿ ಸಿಲುಕಿದ
ಹುಲ್ಲೆ ಮರಿಗಳು ಸಹಿತ ಜೀವಿಸ
ಬಲ್ಲುವೈ ಬೇಱೊಂದು ಹಿಂಡನಗಲ್ದು ಪತಿಯುಳಿದು
ಎಲ್ಲರಿಗೆ ನೀನಾತ್ಮನೆಂಬರು
ಬಲ್ಲವರು ತನ್ನಿರವ ನೀನೇ
ಬಲ್ಲೆಯೆಂದಳಲಿದಳು ನಿನ್ನ ಪಿತಾಮಹನ ಜನನಿ ೧೪

ಇಂತು ತನ್ನ ಪರಾಭವವನಾ
ಕುಂತಿ ವಿಸ್ತರಿಸುತ್ತ ಲಕ್ಷ್ಮೀ
ಕಾಂತ ಕೃಷ್ಣನ ಮಹಿಮೆಯನು ಮನದೊಳಗೆ ನೆನೆವುತ್ತ
ಸಂತವಿಸಿ ಕೊಳಲಱಿಯದಳಲನು
ಕಾಂತೆ ಕಂಬನಿ ಸುರಿಯಲಖಿಳ ದಿ
ಗಂತ ಜನ ಬೆದಱುವವೊಲತ್ತಳು ಮುಳುಗಿ ಮೂರ್ಛೆಯಲಿ ೧೫

ಇರಲು ವಿದುರಾಕ್ರೂರರಾ ಪಂ
ಕರುಹಮುಖಿಯನು ಸಂತವಿಸುತೆಂ
ದರು ಮುಕುಂದನ ಜನನಸಂಬಂಧ ಪ್ರಯೋಜನವ
ಸುರರು ನಿಜಕಾರ್ಯಾರ್ಥದಿಂದವ
ತರಿಸಿದವರೀ ನಿನ್ನ ಸುತರೆಂ
ದೊರೆದು ಸಮಸುಖದುಃಖತನದಲಿ ತಿಳುಪಿದರು ಸತಿಯ ೧೬

ನೀನಿದೇಕೌ ಚಿಂತಿಸುವೆ ನಿಜ
ಸೂನುಗಳು ತಾವಾರಿವರು ಸುಯಿ
ಧಾನವಾರದು ನಿಜ ಪದಾಬ್ಜ ಪರಾಗಸಂಶ್ರಿತರ
ಹಾನಿವೃದ್ಧಿಗಳೆನ್ನವೆಂಬನು
ದಾನವಾಂತಕ ಕೃಷ್ಣನೆಂದಾ
ಮಾನಿನಿಯ ತಿಳುಹಿದರು ವಿದುರಾಕ್ರೂರರುಚಿತದಲಿ ೧೭

ಅಂದು ಕಳುಹಿಸಿಕೊಂಡು ಕುಂತೀ
ನಂದನರನಾ ವಿದುರ ಗಂಗಾ
ನಂದನರನಾ ದ್ರೋಣ ಕೃಪ ಗುರು ನಂದನಾದಿಗಳ
ಸಂದ ವೃತ್ತಾಂತವನು ದೇವ ಮು
ಕುಂದನಡಿಗಱುಪುವೆನು ನೀ ನಿ
ಲ್ಲೆಂದು ಕುಂತೀದೇವಿಯನು ಬೀಳ್ಕೊಂಡನಕ್ರೂರ ೧೮

ಬರುತ ಧೃತರಾಷ್ಟ್ರಂಗೆ ಬುದ್ಧಿಯ
ನೊರೆದು ನೋಡುವೆನೊಲ್ಲದಿರ್ದರೆ
ಮುರಹರನೆ ತಾ ಬಲ್ಲನುದ್ರೇಕಾರ್ತಿಗೌಷಧವ
ಪರಿಮಿತದಲಿಂತೆನುತ ಧರಣಿಪ
ನರಮನೆಗೆ ನಡೆತಂದು ಕೇಳೆಲೆ
ನುರುಳು ಭೂಪತಿ ನೀತಿಶಾಸ್ತ್ರವನೆಂದನಕ್ರೂರ ೧೯

ಏನು ಹೇಳ್ವೆ ತಂದೆ ಹೇಳುವೆ
ನೇನ ಬೇಱನ್ನೊಂದ ಕುಂತೀ
ಸೂನುಗಳನಾರೈದು ಸಲಹುವುದಕಟ ಬಾಲಕರ
ನೀನು ದಿಟಕಿದನಱಿಯದವನೇ
ನಾನು ಹೇಳುವುದಲ್ಲ ದುಷ್ಪು
ತ್ರಾನುವಶದಲಿ ನಡೆದು ನರಕದಲಾಳಬೇಡೆಂದ ೨೦

ತಂದೆಯಿಲ್ಲದ ಮಕ್ಕಳಿವದಿರು
ಮುಂದಮತಿಗಳು ಸಜ್ಜನರು ಗೋ
ವಿಂದನತ್ತೆಯ ಮಕ್ಕಳೆಂದಟ್ಟೆದನು ತನ್ನುವನು
ಇಂದು ಬುದ್ಧಿಯ ಹೇಳಲೆಂದಾ
ಬಂದೆನನ್ಯಾಯದಲಿ ನಡೆಯದಿ
ತಂದೆ ಮತಿಯುತನಾಗಿ ನಡೆ ಲೇಸಹುದು ನಿನಗೆಂದ ೨೧

ನೆಚ್ಚದಿರು ರಾಜ್ಯಾನುಭವವನು
ನೆಚ್ಚದಿರು ಸತಿಸುತರ ಸಿರಿಯನು
ನೆಚ್ಚದಿರು ಪರಿವಾರ ಪುರಜನ ಬಂಧುಜನದೊಲವ
ನೆಚ್ಚದಿರು ತನುಬಲವನೇನುವ
ನೆಚ್ಚದಿರು ಜೀವಾತ್ಮ ಕಣ್ಣನು
ಮುಚ್ಚಿದರೆ ನೀನಾರು ಬಳಿಕವರಾರು ಹೇಳೆಂದ ೨೨

ಕನಸಿನಲಿ ರಾಜ್ಯಾನುಭವ ಸಂ
ಜನಿಸಿದರೆ ತಿಂದುಂಡದಾವುದು
ನೆನಸಿನಲಿ ಸೇರುವುದು ಸುಖದುಃಖಾನುಭವ ತನಗೆ
ಜನಪ ಮರುಳ್ಳೆ ಕಲ್ಪವೃಕ್ಷದ
ವನವ ಕಡಿವರೆ ಕಾತ ಬರ್ಬರ
ವನದ ಸಿರಿಯನು ನೆಚ್ಚಿ ಸಿರಿಯಿದು ನಿತ್ಯವಲ್ಲೆಂದ ೨೩

ಧರ್ಮದಲಿ ರಾಜ್ಯವನು ಮಾಡುತ
ಧರ್ಮದಲಿ ವರ್ಣಾಶ್ರಮಂಗಳ
ಧರ್ಮವನು ಪಾಲಿಸುತ ಧರ್ಮಪಥಂಗಳಲಿ ನಡೆವ
ಧರ್ಮಪಾಲಕರೆನಿಪ ನೃಪರಾ
ಬ್ರಹ್ಮಲಯ ಪರಿಯಂತ ದಿವದಿಂ
ದೊಮ್ಮೆಯೂ ಧರೆಗಿಳಿಯಲಱಿಯರು ಭೂಪ ಕೇಳೆಂದ ೨೪

ಒಬ್ಬನೇ ಹುಟ್ಟುವನು ಸಾವಾ
ಗೊಬ್ಬನೇ ಕೃತ ಪುಣ್ಯ ಪಾಪವ
ನೊಬ್ಬನೇ ಭೋಗಿಸುವನಕಟಾ ಸ್ವರ್ಗ ನರಕದಲಿ
ಸರ್ಬಜನವನು ತನ್ನವರೆನು
ತ್ತೊಬ್ಬನಾರ್ಜಿಸಿ ಧನವನವನಿಯ
ತುಬ್ಬಿನಲಿ ಮತ್ತವರಿಗಿತ್ತು ವಿಶಿಷ್ಟನಹನೆಂದ ೨೫

ಅವರ ಕೈಯಿಂದತ್ತಲಪಹರಿ
ಸುವರು ಧನವನನೀತಿಯಲಿ ಸಂ
ಭವಿಸಿದುದನದನನ್ಯರವರಿಂದತ್ತಲವರಿಂದ
ಅವನಿಪತಿ ಚೋರಾನಲಾದ್ಯರ
ನಿವಹವಾವಂಗದಲಿ ಧರ್ಮ
ವ್ಯವಹೃತಿಗೆ ಹೊಱಗಾದ ಧನವುಪಭೋಗ್ಯವಲ್ಲೆಂದ ೨೬

ಒಡಲಶುದ್ಧದ ಬೀಜವಧ್ರುವ
ವೆಡಱು ನರಿ ಕಾಗೆಗಳ ಭಾಜನ
ಕಡುಗುವೀ ಕಾಮಾದಿರಿಪುಗಳ ಕಾಲದುಳಿಭಯದ
ಮಡುವು ಮೋಹಕ್ಲೇಶದುಃಖದ
ಕಡಲು ಕಾಯವಿದಂತಕನ ಕೈ
ಯೆಡೆಯ ಧನವಿದ ನೆಚ್ಚಿ ಕೆಡುವರು ಮೂಢಜನರೆಂದ ೨೭

ಇದನಱಿತು ಧರ್ಮದಲಿ ನಡೆ ನರ
ಕದಲಿ ಬೀಳದಿರೆರಡಱಲಿ ಸದು
ಹೃದಯನಾಗಿರು ಪಾಂಡುಸುತ ನಿಜಸುತರ ವರ್ಗದಲಿ
ಇದುವೆ ನಿನಗಿಹಪರಕೆ ಹಿತವ
ಭ್ಯುದಯಕರವೀಯನ್ವಯಕೆ ಕಂ
ಡಿದಕೆ ಸಂತೋಷಿಸುವರಾವೆಲೆ ತಂದೆ ಕೇಳೆಂದ ೨೮

ಲೇಸನಾಡಿದೆ ತಂದೆ ತನ್ನ ಮ
ನೀಷಿತಾರ್ಥವನಖಿಳದುರಿತ ವಿ
ನಾಶನವಲಾ ನಿನ್ನ ನುಡಿ ಹಿತಕರವಿದಿಹಪರಕೆ
ಆಸಱಡಗಿದುದನುಪಮನೆ ಪೀ
ಯೂಷವನು ಕುಡಿದಂತೆ ಘನ ಸಂ
ತೋಷವಾದುದು ತನ್ನ ಹೃದಯದಲೆಂದನಂಧನೃಪ ೨೯

ಉತ್ತಮನೆ ಕೇಳಾದಡೆನ್ನೀ
ಚಿತ್ತವಿದು ದುಷ್ಪುತ್ರವಶದಲಿ
ವರ್ತಿಸುವುದಿದಱೊಳಗೆ ನಿಲ್ಲದು ನೀನು ಕರುಣಿಸಿದ
ತತ್ವವಿದ್ಯಾಮೃತವದನೇವೆನ
ಕೃತ್ಯಕಾರಿಗಳೆನ್ನ ಮಕ್ಕಳು
ಮೃತ್ಯುವನು ಕಾಣರು ಶಿವಾಯೆಂದಳಲಿದನು ಭೂಪ ೩೦

ಆರನಾರೈ ರಕ್ಷಿಸುವರಿ
ನ್ನಾರನಾರೈ ಕೊಲುವರೀ ಸಂ
ಸಾರ ಚಕ್ರದಲೀ ಚರಾಚರ ಜೀವರಾಶಿಗಳ
ಪ್ರೇರಕನು ತಾನೊಬ್ಬನೀಶ್ವರ
ನಾರನಾವೆಲೆ ತಂದೆ ಜಗದಾ
ಧಾರನಾಡಿಸಿದಂತೆ ನಾಟಕವಾಡುತಿಹುದೆಂದ ೩೧

ಹುಟ್ಟಿಸಿದನೇ ಬಯಸಿ ಸುತರನು
ದುಷ್ಟರನು ನಿಜಕರ್ಮ ವಶದಲಿ
ಹುಟ್ಟುವುದು ಹೊಂದುವುದು ಲೋಕವಿದೀಶ್ವರೇಚ್ಛೆಯಲಿ
ಕಷ್ಟವನು ಬಯಸುವರೆ ಮೇಣು ವಿ
ಶಿಷ್ಟತೆಯನೆಸಗುವಡೆ ಲೋಕಕೆ
ನಷ್ಟವಿದನೀಶ್ವರನು ಮಾಡುವುದೇನು ನಾನೆಂದ ೩೨

ಆ ಸಕಲ ಲೋಕೈಕನಾಥನೆ
ವಾಸುದೇವಾಖ್ಯೆಯಲಿ ಮಾನುಷ
ವೇಷವನು ಮಱೆಗೊಂಡು ದೇವಕಿಗುದುಭವಿಸಿ
ಭೂಸುರದ್ವಿಜ ಧರ್ಮಪಾಲನೆ
ಗೋಸುಗವನಿಯಲವತರಿಸಿ ಲ
ಕ್ಷ್ಮೀಶನಿರಲಿನ್ನಾವ ಚಿಂತೆಗಳೆಂದನಂಧನೃಪ ೩೩

ಲೋಕ ಮೂಱಱ ಯಂತ್ರವಾಹಕ
ನಾಕೆವಾಳನು ಕೃಷ್ಣನಾತಂ
ಗೇಕೆ ತನಗಾತ್ಮೀಯರನ್ಯರು ದಿಟ ವಿನೋದವಲ
ಪ್ರಾಕೃತನೆ ಪರಮಾತ್ಮನಲ್ಲೈ
ಸಾಕು ತಾನಾಡಿಸಿದವೋಲ
ವ್ಯಾಕುಲದಲಾಡುವುದು ತ್ರಿಭುವನ ನಾಟಕವಿದೆಂದ ೩೪

ತನ್ನ ಮಾಯೆಯಲಖಿಳ ಜಗವಿದು
ನನ್ನಿ ತೋಱುವುದಳಿವುದೆಡೆಯಲಿ
ಹೊನ್ನು ಕಟಕಾದಿಗಳ ನಾಮವ ತಳೆದು ತೋರ್ಪಂತೆ
ಭಿನ್ನವೆನಿಸಿ ಸಮಸ್ತದಲಿ ಸಂ
ಭಿನ್ನತೆಯನೇ ಮೆಱೆದು ಕಡೆಯಲ
ಭಿನ್ನನೆನಿಸುವೆ ನೀನು ತಾನಿದಕಂಜಲೇಕೆಂದ ೩೫

ಅಱಿಯದಂತೀ ಜಗಕೆ ನಿಜವನು
ಮೆಱೆದು ಮಾನುಷ್ಯದಲಿ ಭೂಮಿಯ
ಹೊಱೆಯನಿಳುಹಲು ಜಾತನಾದಂತಿರ್ದುರುಕ್ರಮನ
ಅಱಿವೆವಾವೆಂತಪ್ರಮೇಯನ
ನಿಱುಗೆಯನು ಪೊಡೆವಂಟೆನೆನ್ನೈ
ನೆಱೆ ಜಗನ್ಮಯಗೆಂದು ಕೈಗಳ ಮುಗಿದನಂಧನೃಪ ೩೬

ಎಂದಡಾತನ ಮತವನಾ ಯದು
ನಂದನನು ನೆಱೆ ತಿಳಿದು ಬಾಂಧವ
ವೃಂದವನು ಬೀಳ್ಕೊಂಡು ರಾಜಾಲಯವ ಹೊಱವಂಟ
ಬಂದು ವೃತ್ತಾಂತವನು ದೇವ ಮು
ಕುಂದನಡಿಗಳಿಗಱುಪುವೆನು ನಿ
ಲ್ಲೆಂದು ಕುಂತೀದೇವಿಯನು ಬೀಳ್ಕೊಂಡನಕ್ರೂರ ೩೭

ನಿಂದು ಕಳುಹಿಸಿಕೊಂಡು ಕೌರವ
ನಂದನರನಾ ವಿದುರ ಗಂಗಾ
ನಂದನನನಾ ದ್ರೋಣ ಕೃಪ ಗುರುನಂದನಾದಿಗಳ
ಬಂದನಾ ಭಾಗವತ ಗುಣಗಣ
ಮಂದಿರನು ಮಧುರಾಪುರಕೆ ಗೋ
ವಿಂದನಂಘ್ರಿಗೆ ನಮಿಸಿ ಬಿನ್ನಹಮಾಡಿದನು ಹದನ ೩೮

ವಿನಯಗುಣವನು ಪಾಂಡುನೃಪನಂ
ದನರ ಕುಂತೀದೇವಿಯಂತ
ರ್ಮನದ ವೈಕ್ಲವ್ಯವನು ಕೃಷ್ಣಪದಾಬ್ಜ ಭಕ್ತಿಯನು
ನೆನೆದ ದುರ್ಮಂತ್ರವನು ದುರ್ಯೋ
ಧನನ ದುಶ್ಚೇಷ್ಟೆಯನು ಭೂಪನ
ಮನವನಾ ನಿತ್ಯಾತ್ಮರಾಮರಿಗ್ಗೈದೆ ವರ್ಣಿಸಿದ ೩೯

ನಲವತ್ತಾರನೆಯ ಸಂಧಿ ಮುಗಿಯಿತು.

# ನಲವತ್ತೇಳನೆಯ ಸಂಧಿ

ಭೂಮಿ ಭಾರಾಯತ ನೃಪಾಲ
ಸ್ತೋಮವನು ಸದೆದಸ್ತ್ರ ಶಿಖಿಯಲಿ
ಹೋಮಿಸಿದನಸುರಾರಿ ಮಾಗಧ ಸೈನ್ಯಸಾಗರವ

ಚಿತ್ತವಿಸು ಭೂಪೋತ್ತಮಾಸ್ತಿ
ಪ್ರಾಪ್ತಿಯೆಂಬರಸಿಯರು ಕಂಸನ
ಮೃತ್ಯುವನು ಕಾಣುತ್ತ ನಿಜವೈಧವ್ಯವೇದನೆಯ
ಹೆತ್ತ ತಂದೆಗೆ ಹೇಳುವೆನು
ತ್ತತ್ತು ಕಂಬನಿಗಡಲಲೋಲಾ
ಡುತ್ತ ಹರಿದರು ಹಳವಿಸುತ ಮಗಧೇಂದ್ರನಿದ್ದೆಡೆಗೆ ೧

ಘೀಳಿಡುತ ಬಸವಳಿದು ತಂದೆಯ
ಕಾಲ ಮೇಲಡಗೆಡೆದು ಬಱಿದಾ
ದೋಲೆಗಳ ಕಿವಿಗಳಲಿ ಕೆದಱಿದ ಕೇಶ ಪಾಶದಲಿ
ಓಲಗದಲಬಲೆಯರು ಹೊರಳಲು
ಬಾಲಕಿಯರನು ನೆಗಹಿ ಹದನನು
ಕೇಳದನು ಚಿಂತಿಸುತ ತೂಗಿದನಡಿಗಡಿಗೆ ಶಿರವ ೨

ಅಕ್ಕಟೇನೇನೆನುತ ಗೋಪರ
ಮಕ್ಕಳೇ ಕೊಂದವರು ಕಾಲಂ
ಗಕ್ಕುಳಿಸಲತಿಬಲ ಪರಾಕ್ರಮನನು ರಣಾಗ್ರದಲಿ
ಮಿಕ್ಕು ಕಾದುವಡಮರರಿಗೆ ಕೈ
ಯಿಕ್ಕುವನೆ ಹಾ ಯೆನುತ ಕಣ್ಣಲಿ
ಮುಕ್ಕುಳಿಸಿದನು ಮಗಧಪತಿ ರೋಷಾಗ್ನಿಯುರವಣೆಯ ೩

ಅಂತಕನ ಹೆತ್ತಯ್ಯನೋ ಕ
ಲ್ಪಾಂತ ರುದ್ರನೋ ಮಗಧಪೃಥ್ವೀ
ಕಾಂತನೋ ಹಾ ಯೆನುತ ಬಹಳಾಸ್ಥಾನಜನ ಬೆದಱಿ
ಕುಂತವನು ತಿರುಹುತ್ತ ನೋಡಿ ದಿ
ಗಂತವನು ಧೂಮಾಯಮಾನಾ
ನಂತಮಂಡಲವನಾಱುತಿದ್ದನು ಗದ್ದುಗೆಯ ಹೊಯ್ದು ೪

ಸಾಹಸಿಗನಿಪ್ಪತ್ತುಮೂಱ
ಕ್ಷೋಹಿಣೀ ಬಲ ಸಹಿತ ಕೃತ ಸ
ನ್ನಾಹದಲಿ ಭಟನಿಕರ ಬಿಡಿ ಹೆಱಪಾಳೆಯವನೊಲಿದು
ಆಹ ಜಗವಿದ ಯಾದನತ್ವವ
ಗಾಹಿಸಲಿ ನಡೆಯೆನುತ ರಾಜ ಸ
ಮೂಹದಲಿ ಸಂಗ್ರಾಮಧೀರರ ದೇವ ಹೊಱವಂಟ ೫

ಪಡೆಯ ಪದಹತಿಗವನಿದೆಸೆ ಕಂ
ಗೆಡಲು ಕೆಂಧೂಳಿಯಲಿ ಲಗ್ಗೆಯ
ಗಡಬಡೆಗೆ ಗತಿಗೆಡಲು ಸೂರ್ಯರಥಾಶ್ವ ಸಂದೋಹ
ಕೊಡೆ ಚಮರ ಸಿಂಧಂಗಳಲಿ ನಭ
ವಡಗಲಖಿಳ ನೃಪಾಲಬಲ ಸಹಿ
ತಡಸಿ ಮುತ್ತಿದನಗಿದು ಮಧುರಾಪುರವನೆಣ್ದೆಸೆಗೆ ೬

ಕುಱಿವವನು ಕಡಲಾವರಿಸಿ ಮು
ಕ್ಕಱುಕಿ ಮೋದುವವೋಲು ಮಿಗೆ ಬೊ
ಬ್ಬಿಱಿದು ಬಹಳ ರಥಾಶ್ವಪತ್ತಿಗಜಂಗಳುರವಣಿಸಿ
ಮುಱಿದು ಹೊಕ್ಕುದು ಕೋಟೆಯನು ಗ
ಬ್ಬಱಿಸಿ ನಾಲಕು ದಿಕ್ಕಿನಲಿ ಮೋ
ಹರಿಸಿ ಬಿಟ್ಟುದು ಬಿಂಕ ಮಿಗಲಾ ಬಹಳ ನೃಪಕಟಕ ೭

ಮೇರೆದಪ್ಪಿ ಮಹಾಬ್ಧಿ ಭುವನಾ
ಹಾರಗೊಂಬಂಧದಲಿ ಮಾಗಧ
ವೀರಬಲವಾರಾಶಿಕವಿತರುತಿರಲು ಪುರಜನದ
ಭೂರಿಸಂಕ್ಲೇಶವನು ಮಿಗೆ ದೈ
ತ್ಯಾರಿ ಕಾಣುತ ಶರಣಜನ ಸಂ
ಸಾರಿಕನು ಮನದೊಳಗೆ ಮುನಿಜನ ವಂದ್ಯನಿಂತೆಂದ ೮

ಬಂದುದೈ ಕುಱಿವಿಂಡು ಮಾರಿಯ
ಮಂದಿರಕೆ ತಪ್ಪೇನು ಮಾಗಧ
ಮಂದಮತಿ ಮುನಿದೆಮ್ಮೊಡನೆ ಸಂಗ್ರಾಮವನು ಬಯಸಿ
ಬಂದಡಿದು ಲೇಸಾಯ್ತು ಪರಬಲ
ವೃಂದವನು ಸಂಹರಿಸಿ ಕಾಲನ
ಮಂದಿರಕೆ ಹೊಗಿಸುವೆನಿದೇ ಕರ್ತವ್ಯ ತನಗೆಂದ ೯

ಕೊಲ್ಲೆನಿವನನು ಕೊಲುವುದಿದು ಮತ
ವಲ್ಲ ಪೃಥ್ವೀಪಾಲರೆಂಬರಿ
ಗೆಲ್ಲರಿಗೆ ಮೊದಲೀತನುರುತರ ಬಾಹುಸತ್ವದಲಿ
ಬಲ್ಲಿದನು ಬಹುದಿವನವಶಕಿಳೆ
ಯೆಲ್ಲ ಭೂಮಿಭಾರನ ಬಳಿಕೀ
ನಿಲ್ಲಿಯೇ ನಿರ್ಣೈಯಿಸುವೆನು ತಾನೆಂದನಸುರಾರಿ ೧೦

ಬೆರಟ ಭೂ ಭಾರವನು ಧರ್ಮವ
ಹೊರೆಯಲೆಂದವನಿಯಲಿ ತಾನವ
ತರಿಸಿದೆನಲಾ ಸಾಧು ಜನ ಸಂರಕ್ಷಣಾರ್ಥದಲಿ
ದುರುಳ ಮಾಗಧನಿಂದವೇ ಸಂ
ಹರಿಸುವೆನು ನೃಪಸೈನ್ಯಮಯ ಸಾ
ಗರವನಿದುವೇ ಮಂತ್ರವೆಂದನು ತನ್ನ ಮನದೊಳಗೆ ೧೧

ಎನುತಿರಲು ಮಗಧೇಂದ್ರ ಸೇನಾ
ವನಧಿ ಹೊಕ್ಕುದು ನೂಕಿ ದಶ ದಿ
ಕ್ಕಿನಲಿ ಪುರವನು ಗೋಪುರ ದ್ವಾರಂಗಳನು ಮುಜಿದು
ಕನಕ ತೋರಣ ಹರ್ಮ್ಯ ಕೃತ್ರಿಮ
ವನವನೊರಸಿ ಭಟಾಳಿ ಸಿಂಹ
ಧ್ವನಿಯ ದುರ್ಭರ ಬಹಳ ಭೇರೀವಾದ್ಯ ರಭಸದಲಿ ೧೨

ಚೇಕಿತಾನ ಕಳಿಂಗ ಚೈದ್ಯನು
ಲೂಕನತಿಬಲ ದಂತವಕ್ರ ಸ
ವಿಾಕ ವೀರವಿಡೂರಥಾಹ್ವಯ ವೇಣುಧಾರಿಗಳು
ಲೋಕವಿಶ್ರುತ ವೀರ ಸಾಲ್ವಾ
ನೀಕ ಪತಿಯೆಂಬವನಿಪಾಲಾ
ನೀಕವುರವಣಿಸಿತ್ತು ಮೂಡಣ ಬಾಗಿಲನು ಮುಜಿದು ೧೩

ವಿಕಟ ಬಲ ವಿಂದಾನುವಿಂದ
ಪ್ರಕಟರಥವಿರಾಟನೃಪ ಪೌಂ
ಡ್ರಕ ಮಹೀವರನೇಕಲವ್ಯಕ ಪಂಚಜನಭೂಪ
ಮುಕುತಿನಾಥನ ಪುರವನಾ ಬಾ
ಹ್ಲಿಕ ಮುಖಾವನಿಪಾಲಕರು ಮಿಗೆ
ವಿಕಳವನು ಮಾಡಿದರು ತೆಂಕಣ ಬಾಗಿಲನು ಮುಜಿದು ೧೪

ದ್ರುಮ ಸುದಕ್ಷಿಣ ಶಲ್ಯರನ್ಯೋ
ತ್ತಮ ಯುಧಾಮನ್ಯು ಕ್ಷಿತೀಶ್ವರ
ಸಮರಪಟು ಭೂರಿಶ್ರವನು ಬೃಹಕ್ಷತ್ರರೆಂಬವರು
ಅಮಿತಭುಜಬಲರುತ್ತಮೋಜ
ಪ್ರಮುಖರಾ ಮಾಗಧನ ಬೆಸದಿಂ
ದಮರವಂದ್ಯನ ಪುರದ ಪಶ್ಚಿಮದೆಸೆಯಲುಜುಬಿದರು ೧೫

ವೀರ ಶಕುನಿ ಕಳಿಂಗ ದ್ರುಪದ ಮ
ಹೀರಮಣ ಶಿಶುಪಾಲ ಸೈಂಧವ
ವೀರ ಧೀರ ತ್ರಿಗರ್ತ ಭೂಪತಿ ಸೋಮದತ್ತ ನೃಪ
ಭೂರಮಣ ಮಾಗಧರಸಿಂಹ ಮು
ಹಾರವದಲುತ್ತರ ದಿಗಂತ
ದ್ವಾರವನು ಮುತ್ತಿದರು ಮುಜಿದರು ಬಹಳ ರಭಸದಲಿ ೧೬

ಕಳಕಳದ ಕಹಳೆಗಳ ಬಹು ನಿ
ಸ್ಸಳದ ಮೊಳಗುವ ಬಹಳ ಭೇರೀ
ಕುಳದ ವೀರರ ಸಿಂಹನಾದದ ಶಂಖನಿಸ್ವನದ
ದಳದುಳದ ನೃಪಕಟಕದುಬ್ಬರ
ದೊಳಗೆ ಭುವನಚತುರ್ದಶದ ನುಡಿ
ಮುಳುಗಿದುದು ಜಗದಂಡ ಮಂಡಲವಡಿಗಡಿಗೆ ಜಡಿಯೆ ೧೭

ಮುತ್ತಿಗೆಯ ಮುರಹರನ ಪುರವೋ
ಕೃತ್ತಿವಾಸನನಯನ ಶಿಖಿಯಲಿ
ಹೊತ್ತಿ ಹೊಗೆಸುತ್ತಾಗಿ ಮುಸುಕಿದಜಾಂಡಮಂಡಲವೋ
ತತ್ವನಿಕರನಿಮಗ್ನ ಪರತರ
ತತ್ವವೋ ಯೆನಲಹಿತ ರಾಯರ
ಸುತ್ತುವೆಡೆಯಲಿ ಸುಳಿಯೊಲಿರ್ದುದು ಯದುಕುಲಸ್ತೋಮಗಲ ೧೮

ಆ ಮಹಾಕಲ್ಪಾಂತಕಾಲ ಮ
ಹಾಮಹಾರ್ಣವದಂತೆ ಮೊಳಗುವ
ಭೂಮಿಪಾಲ ಕದಂಬವನು ಕಾಣುತ್ತ ಮನದೊಳಗೆ
ಶ್ರೀಮನೋರಮನಳುಕದಾತ್ಮಾ
ರಾಮನಿರ್ದನು ಬಹುಸೃಗಾಲ
ಸ್ತೋಮಕೃತವನು ಬಗೆಯದಾ ಕಲಿಸಿಂಹದಂದದಲಿ ೧೯

ಇಳಿದುದಿರಲೆರಲೆರಡು ರಥ ಹೊಳೆ
ಹೊಳೆದು ನಭದಿಂದವನಿಗಿನಮಂ
ಡಲರವನಂಡಲೆವುತ್ತ ನಿರುಪಮ ತೀವ್ರತೇಜದಲಿ
ತೊಳತೊಳಗಿ ಶಸ್ತ್ರಾಸ್ತ್ರ ಸೂತಾ
ವಳಿ ಪರಿಸ್ತರಣಗಳ ದೆಸೆಯು
ಜ್ವಲಿಸೆ ಪರಬಲಧಿಗೆ ಶಿಖಿಯುತ್ಪಾತದಂದದಲಿ ೨೦

ಘೋರ ಸೂರ್ಯ ಸಹಸ್ರನಿಭ ದು
ರ್ಧಾರ ಧಾರಾನಿಕರದಲಿ ಗಂ
ಭೀರ ತೇಜದ ಚಕ್ರವೈತಂದುದು ತತುಕ್ಷಣಕೆ
ವೈರಿ ಭೀಕರ ಪಾಂಚಜನ್ಯೋ
ದಾರ ಶಂಖಪ್ರವರ ಸಹಿತ ನಿ
ವಾರ ಕೌಮೋದಕಿಯೆನಿಪ ಗದೆಯಿಳಿದುದೊಂದೆಸೆಗೆ ೨೧

ಕಡುಗುವುತ್ಕಟ ನಂದಕಾಹ್ವಯ
ಖಡುಗ ಕಾರ್ಮುಕವೆಂಬ ಧನುಶರ
ವಿಡಿದ ತೂರ್ಣಾದ್ವಿತಯ ವಕ್ಷಯ ದಿವ್ಯಮಾರ್ಗಣದ
ಬಿಡದೆ ಸುಗ್ರೀವನು ಬಲಾಹಕ
ನೊಡನೆ ಸೈನ್ಯಕಮೇಘಪುಷ್ಪರ
ಪೊಡವಿಗಿಂತಶ್ವಂಗಳಿಳಿದವು ನಾಲ್ಕು ವಹಿಲದಲಿ ೨೨

ಹಲ ಮುಸಲವೆಂಬೆರಡು ಕೈದುಗ
ಳಿಳಿದವಾ ಬಲಭದ್ರನಿದಿರಲಿ
ಹೊಳೆಹೊಳೆದು ದಶದಿಕ್ಕುಗಳನಳ್ಳಿಱಿವ ತೇಜದಲಿ
ಜಲಜದೃಶನಾ ರಥ ಹಯಾಸ್ತ್ರಾ
ವಳಿಗಳನು ಕಾಣುತ್ತ ನಗುತಾ
ಹಲಧರಂಗಿಂತೆಂದನಾಕಾಲೋಚಿತ ಕ್ರಮವ ೨೩

ನೋಡು ನೋಡೆಲೆ ಅಣ್ಣ ಬಂದುದು
ಕೇಡು ನಮ್ಮವರಿಂಗೆ ಭೂಪರ
ಬೀಡು ಬಿಟ್ಟದೆ ಮೃತ್ಯು ಬಾಯ್ದೆಱೆದಂತೆ ನೀನಿದನು
ನೋಡುತಿಹುದಿನ್ನುಚಿತವೇ ಕೈ
ಮಾಡು ಕೈಮಾಡಿವೆ ರಥಾಯುಧ
ಜೋಡು ಸೀಸಕಗಳು ಮಹಾಹವ ವಿಧಿತಸನ್ನಾಹ ೨೪

ಏತದರ್ಥದಲಿಳಿದೆವಲ್ಲೈ
ಭೂತಳಕೆ ಜನಕಾದಿ ಹಿತವರು
ಜಾತರಾದಂದದಲಿ ಸುರಸುಜನೈಕರಕ್ಷೆಯಲಿ
ಘಾತಕರ ಬಲವನಧಿಯಿದಸಂ
ಖ್ಯಾತವೆನಲಿಪ್ಪತ್ತು ಮೂಱೀ
ಭೂತಳದ ಭಾರವನು ಕಳೆ ಕಳೆ ಬೇಗ ಮಾಡೆಂದ ೨೫

ಎಂದು ನೇಮಿಸುತಸುರಹರನಾ
ಸ್ಯಂದನವನೇಱಿದನು ಯಾದವ
ವೃಂದವನು ಕರೆಯೆನುತ ಹೊಱವಂಟನು ಮಹಾಹವಕೆ
ಸಂದ ಯಾದವವೀರರಿಗೆ ನೀ
ವಿಂದು ನಿಲುವುದು ನಾಲ್ಕು ಬಾಗಿಲ
ಮುಂದೆ ನಾಲ್ವರು ನಾಲ್ವರಾಹಕೆಂದು ನೇಮಿಸಿದ ೨೬

ಕರೆದು ಕೃತವರ್ಮನನು ನಿಶ್ಯಠ
ನಿರದೆ ವಸುದೇವೋದ್ಧವರನಾ
ಪುರದ ಪೂರ್ವದ್ವಾರ ರಕ್ಷೆಗೆ ಪೃಥುವಿಪೃಥುಗಳನು
ಪುರದ ತೆಂಕಣ ಬಾಗಿಲಿಗೆ ಭಟ
ವರಸುಧಾಮನನುಗ್ರಸೇನನ
ಕರತಳದ ಸನ್ನೆಯಲಿ ಕಳುಹಿದನಂದು ಬಲಸಹಿತ ೨೭

ವೀರವರನಕ್ರೂರ ಸಾತ್ಯಕಿ
ಭೂರಿಬಲಗದನಾ ಪ್ರಸೇನ ಮ
ಹಾರಥರು ನಾಲ್ವರು ಮುಕುಂದನ ಪುರದ ಪಶ್ಚಿಮದ
ದ್ವಾರಪಾಲಕರಾದರಾ ದೈ
ತ್ಯಾರಿ ರಾಮರು ಸಂಗರಕೆ ಹೊಂ
ದೇರನೇಱಿದರುತ್ತರದ್ವಾರಾಭಿಮುಖರಾಗಿ ೨೮

ಆದುದಾಹವವಷ್ಟ ಸಂಖ್ಯೆಯು
ಮೇದಿನೀಶರ ಕೂಡೆ ನಾಲ್ವರು
ಯಾದವೋತ್ತಮರಿಂಗೆ ಬಾಗಿಲು ಮೂಱಱಲಿ ಬಿಡದೆ
ಕಾದಿದರು ರಾಜನ್ಯ ಕಟಕ ಮ
ಹೋದಧಿಯ ಶಸ್ತ್ರಾಸ್ತ್ರ ಹತಿಯಲ
ಭೇದಿತಾಂಗರು ಕೃಷ್ಣ ಕರುಣಾಕವಚ ರಕ್ಷಿತರು ೨೯

ಅತ್ತಲಚ್ಯುತರಾಮರೊಂದೆಸೆ
ಗುತ್ತರದ್ವಾರದಲಿ ಹೊಱವಂ
ಟುತ್ತಮಸ್ಯಂದನದಲುಗ್ರಾಹವಕೆ ಪರಬಲದ
ಮಸ್ತಕಂಗಳು ಬಿಱಿಯೆ ಪೂರವಿ
ಸುತ್ತ ಶಂಖವನಡಿಗಡಿಗೆ ಮೊಳ
ಗುತ್ತ ಕೊಂಡರು ಚಾಪಶರವನು ಸಿಂಹನಾದದಲಿ ೩೦

ನುಡಿದನಸುರಾರಾತಿಸಾರಥಿ
ಯೊಡನೆ ಹರಿಸಾ ಚೈದ್ಯ ಮಾಗಧ
ರೆಡೆಗೆ ರಥವನು ಬಂದರಲ್ಲೈ ಬದ್ಧಿನರು ನಮಗೆ
ಬಡಿಸುವೆನು ಬಾಣಾವಳಿಯ ಸವಿ
ಯಡಿಗೆಗಳನಂತಕನ ಪುರದಲಿ
ಬಿಡಿಸುವೆನು ಬೀಡಿಕೆಯನೀಗಳೆ ಬೇಗ ಮಾಡೆಂದ ೩೧

ಎನೆ ಹಸಾದವೆನುತ್ತ ಹರಿ ಪದ
ವನಜದಲಿ ತಲೆವಾಗಿ ಬಿಟ್ಟನು
ಮನದ ಗತಿಯನು ಹಿಂದುಳಿಹಿ ಸಾರಥಿ ಮಹಾರಥವ
ಧನುವನೊದಱಿಸಿ ವೈರಿ ನೃಪಬಲ
ವನಧಿ ಮಧ್ಯದಲಿಬ್ಬರೇ ಹೊ
ಕ್ಕನುವರಕೆ ಮೊಳಗಿದರು ಶಂಖೋತ್ತಮುವನತಿಬಲರು ೩೨

ನಡುಗಿದುದು ಧರೆದಿಗ್ಗಜಂಗಳು
ಕೊಡಹಿ ಬಿಸುಟವು ನೆಲನನಹಿಪನ
ಹೆಡೆಗಳೆಡೆಯಾಡಿದವು ನೆಗ್ಗಿತು ಕಮಠನಗ್ಗಳಿಕೆ
ಒಡೆದುದೆದೆ ಪರಬಲಕೆ ಮೂರ್ಛೆಯ
ಕುಡಿದು ತೇಗಿದುದವನಿಪಾಲರ
ಗಡಣವೆನೆ ಗಾಹಿಸಿತು ಘನತರ ಪಾಂಚಜನ್ಯ ರವ ೩೩

ಹೊಕ್ಕರಸುರಾರಾತಿಗಳು ಪರ
ಚಕ್ರವನು ಹರಿಬಲರು ರಥದಿಂ
ದಿಕ್ಕೆಲಕೆ ಬಲಜಲಧಿ ತೆಗೆಯಲು ವೀರರುರವಣೆಗೆ
ಮಿಕ್ಕು ಬರೆ ಮಗಧೇಂದ್ರನೀಕ್ಷಿಸಿ
ನಕ್ಕನಿವರೇ ರಾಮಕೃಷ್ಣರು
ಸಿಕ್ಕಿದರಲಾ ಯೆನುತ ಕೈವೀಸಿದನು ಕೆಲಬಲಕೆ ೩೪

ಅವನಿಪತಿ ಕೇಳಾಮಹಾನೃಪ
ನಿವಹ ಬಲವಾರಾಶಿ ಬಲ ಮಾ
ಧವರ ಮುಸುಕಿದುದೇನ ಹೇಳುವೆನೆಂಟು ದಿಕ್ಕಿನಲಿ
ತವತವಗೆ ಭಟನಿವಹ ಕವಿಕವಿ
ಕವಿಯೆನುತ ಗಜರಥ ಹಯಾವಳಿ
ಯವಗಡಿಸಿತಾಹವದ ಜೋಡಣೆ ಝೊಂಪಿಸಿತು ಜಗವ ೩೫

ಗರುಡ ತಾಳ ಧ್ವಜದ ಚಿಹ್ನವ
ನಿರದೆ ಕಾಣುತ ಮೇಲೆ ಮೇಲ
ಬ್ಬರಿಸಿ ಕವಿತರುತಿರ್ದುದಾ ಪರಬಲ ಮಹಾಂಬೋಧಿ
ಉರವಣಿಸಿ ಕಾರ್ಮುಗಿಲ ಬಲುವೋ
ಹರಗಳಿನಮಂಡಲವನಗಿದಾ
ವರಿಸಿ ಕವಿವಂದದಲಿ ಮಿಗೆ ಪವಮಾನನಾಜ್ಞೆಯಲಿ ೩೬

ಅದ್ದುದೋ ಹರ ಹರ ವಿರೋಧಿಸ
ಮುದ್ರದಲಿ ಹರಿಬಲರ ರಥ ಬಿಡ
ದೆದ್ದುದೋ ಪರಿಭವ ಯದುಪ್ರವರರಿಗೆ ಹಾ ಯೆನುತ
ಭದ್ರಬಲಕಾರೊಡೆಯರೋ ಬಲ
ಭದ್ರ ಗೋವಿಂದರನು ಕಾಣದೆ
ನಿದ್ರೆಗೈದರು ಪುರವಧುಗಳಾಗಳೆಡೆಗೆಡೆದು ಮೂರ್ಛೆಯಲಿ ೩೭

ಇರಲಿರಲು ಹರಿಬಲರು ನಿಮಿಷಾಂ
ತರಕೆ ಪರಬಲವಾರ್ಧಿಯನು ದು
ರ್ಧರ ಮಹಾಸ್ತ್ರ ಪ್ರಕರ ವಡಬಾಗ್ನಿಯಲಿ ಸಂವರಿಸಿ
ಪುರಜನಕೆ ಪರಿಜನಕೆ ಹರುಷೋ
ತ್ಕರುಷವನು ಮಾಡುತ್ತ ಶಂಖವ
ನಿರದೆ ಮೊಳಗಿದನಮರಚಯ ಜಯಜಯತು ಜಯಯೆಂದು ೩೮

ಕಂಡು ಪರಬಲನಿಕರ ಮೇಘೋ
ದ್ದಂಡ ಶರವೃಷ್ಟಿಯಲಿ ಹೊದಕುಳಿ
ಗೊಂಡು ಹೊರಳುವ ನಿಜಬಲವನಾತ್ಮೀಯ ಪರಿಭವವ
ಗಂಡುಗಲಿಗಳ ದೇವ ನಿಜ ಕೋ
ದಂಡ ನಿರ್ಗತನಿಶಿತ ಶರದಲಿ
ದಿಂಡುದಱಿದನು ಮುಱಿದನಾ ಪಟುಭಟರ ಮೋಹರವ ೩೯

ತುಡುಕಿ ಬಾಣಧಿಯಿಂದ ಶರವನು
ತೊಡುತ ತೆಗೆವಾರ್ದೆಸುತಲಾಹವ
ದೆಡೆದೆಱಹನದ ಕಂಡವರದಾರಾಹವಾಗ್ರದಲಿ
ಬಿಡದಲಾಹತ ಚಕ್ರವೇನಯ
ವಡೆದುದಾ ಹರಿಶಾರ್ಙ್ಗ ಕೆದಱುವ
ಕಿಡಿಯ ಗಡಣಂಗಳವೊಲೆಸೆದವು ಘನಶರವ್ರಾತ ೪೦

ಎಸುವ ಮುಗುಳೆಚ್ಚಸ್ತ್ರವನು ಖಂ
ಡಿಸುವ ಯದುವೀರರನು ಸಂಜೀ
ವಿಸುವ ಘನತರ ಪಾಂಚಜನ್ಯವನಿರದೆ ಮೊಳಗಿಸುವ
ಮುಸೆನಡೆದ ರಥತುರಗ ಸೂತರ
ನೊಸಲ ತಡವಿ ಕೃಪೇಕ್ಷಣದಲೀ
ಕ್ಷಿಸುವ ರಣ ಕೈಚಳಕ ರಂಜಿಸಿತಂದು ಮುರಹರನ ೪೧

ಹೊರಳಿದುವು ಹಯನಿಕರ ಗೋಣುಗ
ಳುರುಗಿ ಸೊಂಡಿಲು ಹರಿದು ಗಜಘಟೆ
ಯುರುಳಿದವು ತೇರುಗಳ ತಳ ಮೇಲಾದವಡಗೆಡದು
ಕರ ಹರಿದು ಕಾಲುಡಿದು ಕರುಳು
ಬ್ಬಱಿಸಿ ಕಾಳಿಜ ಹಾಯ್ದು ಕಾಲಾ
ಳೊಱಗಿದುದು ಕೃಷ್ಣಾಸ್ತ್ರಧಾರಾತೀರ್ಥದಲಿ ಮುಳುಗಿ ೪೨

ಜನಪ ಕೇಳಾ ಪಾಂಚಜನ್ಯ
ಧ್ವನಿಯನದನಾಲಿಸುತ ತನುಬಲ
ಜನಿತವಾದುದು ರಣದಲಾ ಯದುವೀರರಿಗೆ ಧುರದ
ಮನವನಿಳುಹಿದರವನಿಪಾಲಕ
ರನುಪಮನ ಶರಹತಿಗೆ ಪರಬಲ
ವನಧಿ ಬಱತುದು ಬಹಳ ಶೌರ್ಯನಿದಾಘತಾಪದಲಿ ೪೩

ತೆತ್ತುದವನಿಪಕಟಕ ಬೆನ್ನನು
ಮತ್ತೆ ಹೇಳಲದೇಕೆ ವೈಯಲಿ
ಮೆತ್ತಿದಂಬಿನ ಭಾರದಲಿ ಬಸವಳಿದು ರಥ ಹಯವ
ಮೃತ್ಯುವಿಗೆ ಸಾರಥಿ ಸಹಿತ ಸಲಿ
ಸುತ್ತ ಚತುರಂಗವನು ನೆಱೆ ಕೈ
ವರ್ತಿಸಿದರಾಹವಕೆ ಹಾಯ್ದರು ಕಂಡ ದೆಸೆಗಳಲಿ ೪೪

ಮೂಱು ಬಾಗಿಲ ನೃಪರ ಮುತ್ತಿಗೆ
ಜಾಱಿದುದು ಚತುರಂಗ ಬಲ ಬಾ
ಯಾಱಿದೆಗೆದುದು ಬಡಗಲಾ ಮಾಗಧಮಹೀಪತಿಯ
ವಿಱಾಱಿತಾಹವ ಶೌರ್ಯರಸ ಕಾ
ಹೇಱಿ ಕಡುವುಱಿಯಿತ್ತು ಕೃಷ್ಣನ
ತೋಱಿತೋಱಿನುತ್ತೈದೆ ಕವಿದುದು ಮತ್ತೆ ನೃಪಕಟಕ ೪೫

ಕಡಿದು ಬಿಸುಟನು ಕವಿವ ನೃಪಬಲ
ದಡವಿಯನು ಕರಿ ತುರಗ ರಥವೊ
ಗ್ಗೊಡೆದು ಚೆಲ್ಲಲು ದೆಸೆದೆಸೆಗೆ ಮಾವಂತರಾವ್ತರನು
ಕೊಡಹಿ ಬಿಸುಟವು ಪಾದಚಾರಿಗ
ಳೊಡಲಲದ್ದವು ಬಾಣತತಿ ಹೆ
ಗ್ಗಡಲ ಮಂದರವಾಯ್ತು ಹರಿರಥವೊಂದು ನಿಮಿಷದಲಿ ೪೬

ಕರಿಘಟೆಗಳೊಳು ಕೃಷ್ಣನುಱುಬುವ
ತುರಗಗತಿಯಲಿ ಕೃಷ್ಣ ತೇರ್ಗಳ
ಥರಥರದ ಥಟ್ಟುಗಳ ನೋಡುವಡೈದೆ ಕೃಷ್ಣಮಯ
ಚರಣಚರರೊಳು ಕೃಷ್ಣನಾ ನೃಪ
ವರರ ಮುಖದೊಳು ಕೃಷ್ಣ ನಾವ
ಚ್ಚರಿಯೊ ಹರ ಹರ ಕೃಷ್ಣಮಯವಾಯ್ತಖಿಳನೃಪಕಟಕ ೪೭

ಇರಿದನೆಚ್ಚನು ಕೊಚ್ಚಿದನು ಸಂ
ಹರಿಸಿದನು ಸವಱಿದನು ಸೀಳಿದ
ನರೆದನೊರಸಿದನದ್ದಿದನು ನೂಕಿದನು ಪಟುಭಟರ
ತರಿದನಂಬಿನಲಂಬುಗಳ ಕ
ತ್ತರಿಸಿದನು ಪರಬಲವನಂತಕ
ಪುರಕೆ ಪಯಣವ ಮಾಡಿಸಿದನೊಂದೇ ಮುಹೂರ್ತದಲಿ ೪೮

ಕೆಟ್ಟುದೋ ಕಾಲಂಗೆ ಸೂಱೆಯ
ಬಿಟ್ಟುದೋ ಹಾ ಚೈದ್ಯಮಾಗಧ!
ರುಟ್ಟುದನು ಬೀಸಾಡಿ ಹೋದರೆ ನೆಱೆ ತಪೋವನಕೆ
ಕಟ್ಟೊಡೆಯರೆಂಬವರ ಕಾಣೆವು
ದೃಷ್ಟಿಗೋಚರದೊಳಗೆನುತ ಮಿಗೆ
ಕೆಟ್ಟುದರಿಬಲವನಧಿ ವಿಶ್ವಂಭರನ ಸಂಗರಕೆ ೪೯

ಬಾಯ ಹೊಯ್ ಹೊಯ್ ಬಱಿದೆ ಬಗುಳುವ
ನಾಯಿಗಳ ನಾನಿರಲು ನಿರ್ಜರ
ರಾಯರಿದಿರೇ ನೂಕು ನೂಕು ದುರಾತ್ಮಕರನೆನುತ
ರಾಯದಳಕಭಯವನು ಕೊಡುತರಿ
ರಾಯ ಭಂಜನನಭಿಮುಖಕೆ ಪೊ
ರಾಯ ಬಿಂಕದ ಬಿಗುಹಿನಲಿ ಶಿಶುಪಾಲನೈತಂದ ೫೦

ನಿಲ್ಲು ನಿಲ್ಲೆಲೆ ಕೃಷ್ಣ ಹೋಹೆಯ
ದೆಲ್ಲಿಗಾನಿರಲಾಹವಕೆ ಹಿಡಿ
ಬಿಲ್ಲನೇತಕೆ ಬಱಿದೆ ಬಾಹಿರರೊಡೆ ಸಂಗ್ರಾಮ
ಬಲ್ಲಿದನು ನೀನೆಂಬರಲ್ಲೈ
ಹಳ್ಳಿಕಾಱರ ಮಕ್ಕಳಲಿ ಕಿಱು
ದುಳ್ಳಡಾಹವಶೌರ್ಯವಿದಿರಾಗೆನುತ ಮಾಱಾಂತ ೫೧

ಬಾಯಿಗಾಳಗವೋ ಭಟಾಂಗದ
ಸಾಯಕದ ಕಾಳಗವೊ ಹೊಗುವಡೆ
ತಾಯಬಸುಱಿಂಬುಂಟೆ ತೆಗೆ ಮಾತಾಡು ಬಳಿಕೆನುತ
ಆಯುತಿಕೆ ಮಿಗಿಲಾರ್ದು ಬಾಣ ನಿ
ಕಾಯವನು ಕೊಳ್ಳೆನುತ ಯದು ನಾ
ರಾಯಣನು ತೆಗದೆಚ್ಚನಾ ಚೈದ್ಯನನು ಬಲ ಬೆದಱೆ ೫೨

ಎಚ್ಚಡಹುದೋ ಕೃಷ್ಣ ವಹಿಲಕೆ
ಮೆಚ್ಚಿದೆನು ನಿಲು ನಿಲ್ಲೆನುತ ತೆಗೆ
ದೆಚ್ಚನಾ ಹಯನಿಕರವನು ನಾಲ್ಕರಲಿ ಸಾರಥಿಯ
ಎಚ್ಚನೊಂದಂಬಿನಲಿ ಕೈಯೊಡ
ನೆಚ್ಚನೀರೈದಂಬಿನಲಿ ಮಗು
ಳಚ್ಯುತನನಾ ಕುಮತಿ ಮೊಳಗುವ ಸಿಂಹನಾದದಲಿ ೫೩

ಲೇಸು ಮಾಡಿದೆ ವೀರ ಶಸ್ತ್ರಾ
ಭ್ಯಾಸಿ ನೀನಹೆ ಸಂಯುಗೋಪ
ನ್ಯಾಸವಿದು ಲೇಸಾಯ್ತು ನೋಡಿನ್ನೆನ್ನ ಕೌಶಲವ
ಮಿಾಸಲಿನ ವೈಸಿರಿಯನೆನುತ ಶ
ರಾಸನವನೊದಱಿಸುತ ಹರಿದನು
ಘೋಷಿಸುತಲೊಡಲೊಳಗೆ ಹೂಳಿದನಸ್ತ್ರಸಂತತಿಯ ೫೪

ಆ ಸಮಯದಲಿ ಮತ್ತೆ ಬಲವಾ
ರಾಶಿ ಕವಿದುದು ಮೇಲೆ ತ್ರಿಂಶದಿ
ಳೇಶ್ವರರ ಸಂದೋಹ ನೂಕಿದುದೆಂಟು ದಿಕ್ಕಿನಲಿ
ಘಾಸಿಯಾದನು ಕೃಷ್ಣನಿಂದಿನ
ಲೀ ಸಮಗ್ರ ಚತುರ್ಬಲಾಬ್ಧಿಯ
ನೀಸಿದಡೆ ವಿಜಯಿಗಳು ನಾವೆನುತಿರ್ದುದಮರಗಣ ೫೫

ಏನನೆಂಬೆನು ಭೂರಿ ಭೂಪರ
ಹಾದಿಯನು ಹರಿ ಶಾಙ್ರ್ಗಮುಕ್ತ ನ
ವೀನ ಶರವೈದರಲಿ ಹಯ ನಾಲ್ಕಱಲಿ ಸೂತನನು
ಆನಿಸಿದನಂತಕನ ರಥವನು
ದಾನವಾಂತಕನಾಜ್ಞೆಯಲಿ ರಥ
ಹೀನರಾದಯರಾರುರೊಂದೇ ನಿಮಿಷಮಾತ್ರದಲಿ ೫೬

ಮತ್ತೆ ತ್ರಿಂಶದ್ಭೂಪರನು ಪುರು
ಷೋತ್ತಮನು ವಿರಥರನು ಮಾಡಿ ಶ
ರತ್ರಯದಲೊಬ್ಬೊರನು ಮಗುಳೆಚ್ಚನವರವರ
ತೆತ್ತಿಸಿದನೊಂದೊಂದನೆದೆಯಲಿ
ವಕ್ತ್ರದಲಿ ಭಾಳದಲಿ ವಿಹ್ವಲ
ಚಿತ್ತರಾದರು ಭೂಪಜನವೇನೆಂಬೆನದುಭುತವ ೫೭

ನೊಂದು ಸೈರಿಸಿ ಮತ್ತೆ ಭೂಪರ
ವೃಂದ ಬಿಡದೆಸುತಿರಲು ದೇವ ಮು
ಕುಂದನಾ ಮೂವತ್ತು ಚಾಪವನನಿತು ಬಾಣದಲಿ
ನಿಂದು ಕಡಿದುರುಳಿಸಿದನವನಿಗೆ
ಮಂದ ಮತಿ ಶಿಶುಪಾಲಕನ ಹೊರೆ
ಗೆಂದು ಬಿಟ್ಟನು ರಥವನೆಲವೋ ನಿಲ್ಲು ನಿಲ್ಲೆನುತ ೫೮

ಎಚ್ಚನಾ ರಥವಾಜಿಗಳ ಕೆಡೆ
ಯೆಚ್ಚನಾ ಧ್ವಜದಂಡವನು ಕೆಡೆ
ಯೆಚ್ಚನಾ ಚೇದಿಪನ ಮಕುಟಚ್ಛತ್ರ ಮಂಡಲವ
ಅಚ್ಚರಿಯನೇನೆಂಬೆನಾ ನೃಪ
ನಚ್ಯುತನ ಶರಹತಿಗೆ ಶೌರ್‍ಯವ
ಮುಚ್ಚಿದನು ಮುಳುಗಿದನು ಬಹಳ ಭಯಾನಕಾಬ್ಧಿಯಲಿ ೫೯

ಕಾದಿ ಶಿಶುಪಾಲಾದಿ ತ್ರಿಂಶ
ನ್ಮೇದಿನೀಶರು ಜಾಱಿದರು ರಣ
ಮೇದಿನಿಗೆ ಮೈಗೊಡದೆ ಸಲೆ ಜೀವಾಭಿಲಾಷೆಯಲಿ
ಕೋದ ಕಣೆಗಳಲುದುಱಿದವು ಮೇ
ಲಾದ ಗಜ ಘಟೆ ತುರಗ ಪತ್ತಿಗ
ಳಾದುದವನೀಭಾರಸಂಕ್ಷಯವೊಂದು ನಿಮಿಷದಲಿ ೬೦

ಅರೆದನತ್ತಲದೊಂದೆಸೆಗೆ ಹಲ
ಧರನು ನೇಗಿಲನಿಕ್ಕಿ ಮುಸಲದ
ಲರಿಬಲದ ಕರಿತುರಗರಥ ಪತ್ತಿಗಳ ಮೋಹರದ
ಸುರಿವ ನೆತ್ತರ ಮಾಂಸರಾಶಿಯ
ಕರುಳ ಕಾಲ್ದೊಡಕಿನಲಿ ರಣ ದು
ಸ್ತರವೆನಿಸಿತೇನೆಂಬೆನಾಹವದುರುಭಯಾನಕವ ೬೧

ಕಱಿಗಳೆಸೆವ ದ್ವೀಪದಲಿ ರಥ
ತುರಗ ನಕ್ರಾವಳಿಗಳಲಿ ಕಡಿ
ದುರುಳ್ದ ಭುಜ ಭುಜಗಂಗಳಲಿ ಕರನಿಕರಮೀನ್ಗಳಲಿ
ಕರುಳ ಹಾವಸೆಗಳಲಿ ಚಾಪೋ
ತ್ಕರ ತರಂಗಂಗಳಲಿ ಮಿಗೆ ಭೀ
ಕರವೆನಿಸಿ ಹರಿದವು ರಣಾಗ್ರದಲರುಣಜಲ ಜಲಧಿ ೬೨

ಉಡಿದು ಕೆದಱಿದ ಕೈದುಗಳ ಕಿಱು
ಗಿಡುಗಳಲಿ ಭೀಕರ ಮಹಾನಕ
ವಿಡಿದ ಸುಳಿ ಸುಳಿಗಳಲಿ ರತ್ನಾಭರಣ ಶಿಲೆಗಳಲಿ
ಕಡಿಡ ತಲೆಗಳ ಕಚ್ಛಪಂಗಳ
ಗಡಣದಲಿ ಕಂಡವರ ಮನವನು
ನಡುಗಿಸಿತು ರಣಭೂಮಿ ನೆತ್ತರ ಕಡಲ ಕಡುಹಿನಲಿ ೬೩

ನೋಡಲರಿದಾಯ್ತೋವೊ ಕಾಲನ
ಬೀಡೊ ಮೇಣ್ಕಲ್ಪಾಂತ ಭೈರವ
ನಾಡಿದೆಡೆಯೊ ಬಹಳ ರಣರಂಗವೊ ಮಹಾದೇವ
ಊಡಿದರೊ ರಣಭೂತತತಿಗೆಡೆ
ಮಾಡಿದರೊ ನರಿ ಕಾಗೆ ಹದ್ದಿನ
ಬೀಡಿಕೆಗೆ ಮಝು ಭಾಪೆನಲು ರಂಜಿಸಿತು ರಣಭೂಮಿ ೬೪

ಬಿಟ್ಟುಕೊಂಡರು ನೃಪರು ಮಾಗಧ
ನಿಟ್ಟಕಿಚ್ಚಿದು ತನ್ನನೇ ತಗು
ಳ್ದಟ್ಟಿ ಸುಡುತಿದೆಯೆನುತ ಹೇಳದೆ ಕಂಡ ದೆಸೆಗಳಿಗೆ
ಘಟ್ಟುಗೆಡೆದುದು ರಾಯದಳ ಜಗ
ಜಟ್ಟಿ ರಾಮನ ಮುಸಲಹತಿಯಲಿ
ಕಟ್ಟಿಯೊಡೆದಂತರುಣಜಲ ಕಡಲಿಡಲು ಕಣನೊಳಗೆ ೬೫

ಹೋದರೇ ರಣಗೇಡಿಗರು ಹುಲು
ಮೇದಿನೀಶರು ಹೋಗಲದಕೇ
ನಾದಭಂಗವನಾತ್ಮವಿಡಿದಿರಲೊಡಲು ನಿಜವಲ್ಲ
ಕಾದುವರೆ ತನ್ನೊಡನೆ ದಿಟ ಮನ
ವಾದಡಿದಿರಾಗೆನುತ ಮಾಗಧ
ಮೇದಿನೀಪತಿ ಹಾಯ್ದನಾ ಹಲಧರನ ಸಮ್ಮುಖಕೆ ೬೬

ಕೆರಳಿ ರಥವೊಂದಱಿ ಕಂಗಳ
ಲುರಿಯನುಗುಳುತ್ತೊನಕೆಗಾಱನೆ
ಧುರಕೆ ನಿಲ್ಲನುವಾಗು ಘಡ ಘಡ ಕೈದುಗೊಳ್ಳೆನುತ
ಗಿರಿ ಗಿರಿಗೆ ಮಲೆತಂತೆ ಕರಿ ದಿ
ಕ್ಕರಿಗೆ ಕೈಯಿಟ್ಟಂತೆ ಮಾಗಧ
ಧರಣಿಪಾಲ ಹಲಾಯುಧರು ಹಳಚಿದರು ತಮ್ಮೊಳಗೆ ೬೭

ಬಲವ ಸವಱಿದ ಗರ್ವಗಿರಿಗಿದೆ
ಕುಲಿಶವೆನುತ ಮಹಾಗದೆಯ ಬರ
ಸೆಳೆದು ತಿರುಹಿ ಸಹಸ್ರ ಗುಣವೆನಲಾರ್ದು ಬೊಬ್ಬಿಱಿದು
ಹಲಧರನ ವಕ್ಷಃಸ್ಥಳವನಿಡ
ಲಲಘು ಗದೆಯನು ವಂಚಿಸುತ ನಿ
ಷ್ಫಲವ ಮಾಡಿದನಾ ರಣಾರಂಭವನು ಬಲರಾಮ ೬೮

ಕೈದುಗೊಳ್ಳೆನ್ನೊಮ್ಮೆ ತಾ ದಿಟ
ಕೈದು ಕೊಂಡರೆ ನಿನ್ನ ಹೆಂಡರಿ
ಗೈದೆತನಕವಸಾನವಿದೆ ಕೊಳ್ಳೆನುತ ಮುಸಲದಲಿ
ಹೊಯ್ದಡಾತನ ರಥ ಹಯಂಗಳು
ಹಾಯ್ದವಂತಕಪುರಕೆ ಸಾರಥಿ
ಬಿದ್ದನವನಿಯಲೊಡಲನದ್ದುದು ರಥ ಧರಿತ್ರಿಯಲಿ ೬೯

ವಿರಥನನು ಮಾಡಿದನು ನಿಮಿಷಾಂ
ತರದಲೆಲವೋ ಹೋಗೆನುತ ಹಲ
ಧರನು ಹಗೆಯನು ಜೀವಮಾತ್ರವನುಳುಹಿ ಬೀಜವನು
ಹುರಿಯಲಾಗದೆನುತ್ತ ರಥವನು
ತಿರುಗಿಸಲು ಮಗಧಾಧಿಪತಿ ದು
ರ್ಭರದ ಲಜ್ಜಾಭಾರದಲಿ ಮರಳಿದನು ನಿಜಪುರಿಗೆ ೭೦

ಮರಳಿದರು ಪರಬಲ ಮಹಾ ಸಾ
ಗರವನದನುತ್ತರಿಸಿ ವಿನುತಾ
ಭರಣವಾಹನ ವಸ್ತುಕೋಶಂಗಳನು ಸಂಗ್ರಹಿಸಿ
ಪುರಕೆ ಪರಿತೋಷದಲಿ ಸುರರಂ
ಬರದಲುಲಿಯಲು ರಾಮ ಕೃಷ್ಣರು
ದರುಶನವನಿತ್ತಖಿಳ ಪುರಜನವಿದಿರುಗೊಳುತಿರಲು ೭೧

ಉಲಿವ ಬಿರುದಿನ ಕಹಳೆಗಳ ಕಳ
ಕಳದ ಮಾಗಧ ಸೂತ ವಂದಿಗ
ಳಲಘು ಗೀತದ ಬಹಳ ಭೇರೀ ಪಟಹ ನಿಸ್ವನದ
ಬಳಿದು ಬಣ್ಣದ ಸೊಡರನಗಲಕೆ
ಸುಳಿದು ಬಿಸುಡುತ ಜನದ ವಿಪ್ರಾ
ವಳಿಯ ಮಂತ್ರಾಕ್ಷತೆಯ ರವ ರಂಜಿಸಿದುದೆಡಬಲಕೆ ೭೨

ನೊಂದುಳಿದ ನಿಜಬಲವನೀಕ್ಷಿಸಿ
ಮಂದಹಾಸಾನ್ವಿತ ಕೃಪೇಕ್ಷಣ
ದಿಂದ ಸಂಜೀವನವ ಮಾಡುತ ಮೆಱೆವ ನಿಜಪುರವ
ಬಂದು ಹೊಕ್ಕರು ವಿಭವದಲಿ ಗೋ
ವಿಂದ ರಾಮರು ನಭದಲಮರರ
ವೃಂದ ಕೈವಾರಿಸುತ ಸುರಿದರು ಪುಷ್ಪವೃಷ್ಟಿಗಳ ೭೩

ನೋಡಲಾದವು ಮುನ್ನಿನಂತಿರೆ
ಕೂಡೆ ಪುರರಚನೆಗಳು ತಾ ದಿಟ
ಮಾಡಲಾಗದೆ ಶಿವಶಿವಾ ಬ್ರಹ್ಮಾಂಡ ಕೋಟಿಗಳು
ಕೂಡೆ ಮಣಿ ತೋರಣ ಪತಾಕೆಗ
ಳೀಡಿಱದವಭ್ರದಲಿ ಮಾಯಾ
ಗಾಡಿಕಾತಿಯ ಗಂಡನೀ ಹರಿಯೆಂದುದಮರಗಣ ೭೪

ರಾಯದಳವನು ಗೆಲಿದು ಬಲ ನಾ
ರಾಯಣರು ಬರುತಿರೆ ನಗರ
ಸ್ತ್ರೀಯರೊಲಿದೇಱದರು ಮಣಿಮಾಡಂಗಳನು ನಲಿದು
ಶ್ರೀಯರಸನಾಕೃತಿಯನೀಕ್ಷಿಸಿ
ಕಾಯದಲಿ ಕುಡಿ ಕುಡಿದು ಮಱೆದರು
ಕಾಯವನು ಪರಮಾತ್ಮ ತತ್ವಜ್ಞಾನರತರಂತೆ ೭೫

ಬಾಲೆಯರು ದಧ್ಯಕ್ಷತಾಂಕುರ
ಮಾಲೆಗಳಲರ್ಚಿಸಿದರಾ ಶ್ರೀ
ಲೋಲರಾಮರನೊಡನೊಡನೆ ನಯನೋತ್ಪಲಂಗಳಲಿ
ಲೀಲೆ ಮಿಗಲೈತಂದು ನಿಜ ರಾ
ಜಾಲಯಕೆ ತೋಱಸಿದರಾ ಜನ
ಜಾಲವನು ನಿತ್ಯಾತ್ಮ ರಾಮರು ನೃಪತಿಗೊಲವಿನಲಿ ೭೬

ನಲವತ್ತೇಳನೆಯ ಸಂಧಿ ಮುಗಿಯಿತು.

# ನಲವತ್ತೆಂಟನೆಯ ಸಂಧಿ

ರಾಯಬಲವನು ಸದೆದು ಬಲ ನಾ
ರಾಯಣರು ಮಾಗಧನ ಧನವನು
ಪಾಯದಲಿ ಸಪ್ತಾಂಗವನು ಕೊಂಡರು ರಣಾಗ್ರದಲಿ

ಅರಸ ಕೇಳಾ ಮಾಗಧಾಧೀ
ಶ್ವರನು ಮನದೊಳಗಳಲುತವೆ ನಿಜ
ಪುರವ ಹೊಕ್ಕನು ತಲೆಮುಸುಕಿನಲಿ ಮೆಱೆವ ದುಗುಡದಲಿ
ಇರುಳು ಹಗಲನವರತ ಭಂಗ
ಸ್ಮರಣೆಯಲಿ ಸಂಜಾತಕೋಪೋ
ತ್ಕರುಷ ಶಿಖಿಯಲಿ ಬೇವುತಿರ್ದನು ವೀರನಡಿಗಡಿಗೆ ೧

ಮತ್ತೆ ಋಳ ಮೂಱನೆಯ ತಿಂಗಳಿ
ಗೆತ್ತಿಸಿದನೀ ಧರೆಯ ರಾಯರ
ಮೊತ್ತವನು ಕರಿತುರಗ ರಥ ಪತ್ತಿಗಳ ಸುಂಕುಲವ
ಕಿತ್ತು ಧರೆ ನಡೆವಂತೆ ನೆರೆದಿ
ಪ್ಪತ್ತು ಮೂಱಕ್ಷೋಹಿಣಿಯ ಪರಿ
ವೃತ್ತಿಯಲಿ ಪಾಳೆಯವ ಬಿಡಿಸಿದನಾಹವಕೆ ಬಲವ ೨

ನೆರೆದು ಮಾಳವ ಮತ್ಸ್ಯ ಪಾಂಚಾ
ಲರು ಕಳಿಂಗಾವಂತಿ ಕುಂತಳ
ದರಸುಗಳು ಗಾಂಧಾರ ಸೃಂಜಯ ಕುರು ನೃಪಾಲಕರು
ಧರಣಿಪಾಲ ಕಳಿಂಗ ಕೇಕಯ
ವರತ್ರಿಗರ್ತ ದಶಾರ್ಣ ವಂಗೇ
ಶ್ವರರು ಸೌವೀರಾಂಧ್ರಪತಿಗಳು ಬಂದರಾಕ್ಷಣಕೆ ೩

ವೀರ ಕೇಳಾ ಕಾಶಿ ಮಾದ್ರ ಮ
ಹೀರಮಣರಾ ಚೈದ್ಯನೃಪ ಹ
ಮ್ಮೀರ ಗುಜ್ಜರ ಪಾರ್ವತೇಯ ಪ್ರಭೃತಿ ನೃಪಕಟಕ
ವಾರಿಧಿಗೆ ನಾನಾ ದಿಗಂತದ
ಭೂರಿನದಿಗಳು ಬಹವೊಲಾ ರಣ
ಧೀರ ಮಾಗಧನೆಡೆಗೆ ಬಂದುದು ಬಹಳ ಬಲಸಹಿತ ೪

ಎನ್ನ ಬಿಡು ತನ್ನ ಬಿಡು ಬವರಕೆ
ಮುನ್ನರಿವೆನಾ ಹರಿ ಬಲವ ತಾ
ಮುನ್ನರಿವೆನೀ ಹಂಬವೆನ್ನದು ತನ್ನದೆಂದೆನುತ
ಮನ್ನಣೆಯ ಪಟುಭಟರು ಬಹಳ ಮ
ಹಾರ್ಣವದವೋಲುಃಲಿಯಲವನಿಪ
ನುನ್ನತಾಟೋಪದಲಿ ಮಗಧನೃಪಾಲ ಹೊಱವಂಟ ೫

ಪೊಡವಿಯನು ಕೆಳಗಿಕ್ಕಿ ಮಿಗೆ ಹೆ
ಗ್ಗಡಲು ಕವಿತಹವೋಲು ಬಂದುದು
ಪಡುವಲಭಿಮುಖವಾಗಿ ಮಧುರೆಗೆ ಬಹಳ ನೃಪಕಟಕ
ಹೊಡೆವ ಭೇರಿಯ ನಿಸ್ಸಳಂಗಳ
ಗಡೆಬಡೆಗೆ ಜಗದಂಡಮಂಡಲ
ವಡಿಗಡಿಗೆ ತನು ಜಡಿದುದೇನೆಂಬೆನು ಮಹಾದ್ಭುತವ ೬

ವೀರ ಮಾಗಧ ಧರಣಿಪಾಲಕ
ನಾ ರಥಾಶ್ವಗಜೌಘಪತ್ತಿಗ
ಳೋರಣದಲೈತರಲು ಯಮುನಾನದಿಗೆ ನಡೆತಂದು
ಭೂರಿ ದಳಭಾರದಲಿ ಬಿಟ್ಟನು
ದಾರಮತಿ ಪಾಳೆಯವನಿಳಿದುದು
ತೇರು ತದ್ವೀತಿಯಲಿ ಪಶ್ಚಿಮಕೆನಲು ಭಾಸ್ಕರನ ೭

ಆಡಿದವು ಚವುರಿಗಳು ಬಿಟ್ಟುದು
ಬೀಡು ಧರೆಯಗಲದಲಿ ಮನೆಗಳು
ಮೂಡಿದವು ರಾಯರಿಗೆ ಪಟ್ಟಾವಳಿಯ ವಸನದಲಿ
ಕೂಡೆ ಹಯ ರಥ ಗಜಗಳಿಗೆ ಮನೆ
ಜೋಡಿಸಿದುದಾನಂದ ಲೀಲೆಯ
ಲಾಡುತಿರ್ದುದು ರಾಯದಳ ನಾನಾ ವಿನೋದದಲಿ ೮

ನಾಳಿನಲಿ ಯಾದವರ ಕುಲ ನಿ
ರ್ಮೂಲವಾಗದಡುಳಿಯದೀ ಜಗ
ಶೂಲಪಾಣಿಯ ನಯನವಹ್ನಿಯ ವೇದನೆಯೊಳೆನುತ
ಕಾಳಗದ ಕಲಿಗಳನು ಬಲದ ವಿ
ಶಾಲತೆಯನೀಕ್ಷಿಸುತ ಭೂಪರು
ಮೌಳಿಗಳ ತೂಗುತ್ತಲಿರ್ದರು ಬೆರಳ ಮೂಗಿನಲಿ ೯

ಒಲಿದು ಹಾಡಿಸಿಕೊಳುತ ಮಗಧಾ
ವಳಿಯ ಸೂತರ ವಂದಿಗಳ ಕಳ
ಕಳದ ಕಳರವ ಗೀತನೃತ್ಯಂಗಳಲಿ ನೃಪನಿವಹ
ಘಳಿಯ ಚಾವಡಿಗಳಲಿ ದಂತಾ
ವಳಿಯ ಮಣಿಮಂಚಂಗಳಲಿ ವರ
ಲಲನೆಯರ ಮೇಳದಲಿ ಕಳಿದುದು ರಾತ್ರಿ ವಿಭವದಲಿ ೧೦

ಬಂದು ಬೇಹಿನ ಭಟರು ರಾಯರ
ಸಂದ ಸಮರೋದ್ಯೋಗವನು ಗೋ
ವಿಂದ ರಾಮರಿಗೊರೆದರೇಕಾಂತದಲಿ ನಡುವಿರುಳು
ತಂದೆಗಳಿರವಧರಿಸುವುದು ಕಾ
ಳಿಂದಿಗಾ ಕಲ್ಪಾಂತ ಸಾಗರ
ಬಂದವೊಲಾವರಿಸಿಬಿಟ್ಟಿದೆ ಮಾಗಧನ ಕಟಕ ೧೧

ಎಂದಡಾಹವಧೀರ ಮಾಗಧ
ಬಂದುದನು ಕೇಳುತ್ತ ರಾಮ ಮು
ಕುಂದರಾಳೋಚಿಸಿದರಾ ಯದುವೃಂದದೊಡಗೂಡಿ
ಮಂದಮತಿಯನು ಬರಿಸುವುದು ನಮ
ಗಿಂದು ಮತವಲ್ಲಖಿಳ ಯಾದವ
ವೃಂದನಾಶನವೆನುತ ನಿಶ್ಚೈಸಿದರು ತಮ್ಮೊಳಗೆ ೧೨

ಕರೆಸಿ ಯಾದವ ವೀರ ಭಟರನು
ತರಣಿ ಬರುತಿರಲುದಯಶೈಲದ
ಶಿರಕೆ ಸಮರೋದ್ಯೋಗವನು ಮಾಡಿಸಿದನಸುರಾರಿ
ಕರೆದು ಕೃತವರ್ಮನನು ರಾಮನ
ನಿರದೆ ಗದ ಸಾರಣರನೆಡದಲಿ
ಪರಬಲವನೈದುವುದು ನೀವೆಂದಿರದೆ ನೇಮಿಸಿದ ೧೩

ವಿಪುಳ ಬಲ ಸಾತ್ಯಕಿಯನಾ ಪೃಥು
ವಿಪೃಥುಗಳನುದ್ಧವನನಾಹವ
ನಿಪುಣರನು ಕಳುಹಿದನು ಬಲವಂಕದಲಿ ಬಲಸಹಿತ
ಅಪರ ರಾತ್ರೆಯಲಖಿಳ ಸೇನಾ
ಧಿಪರು ಸಹಿತಾಹವಕೆ ನಡೆದನು
ಗುಪಿತ ಸಮರಾರಂಭಕಾ ನೃಪಕಟಕದಭಿಮುಖಕೆ ೧೪

ಬಿಟ್ಟರಿಸಿ ಕೈದುವನು ಮಗ್ಗುಲ
ಲುಟ್ಟುದನು ಪಚ್ಚಡಿಸಿ ಸುಭಟರು
ಬಿಟ್ಟ ಮಂಡೆಗಳಿಂದ ಮೈಮುಱಿದಿರಲು ನಿದ್ರೆಯಲಿ
ಕಟ್ಟದಿಭಘಟೆ ತುರಗತತಿ ಸಾ
ಲಿಟ್ಟರಲು ರಥ ಸಹಿತ ದನುಜಘ
ರಟ್ಟನೈದಿದನಾ ಮಹಾ ನೃಪಕಟಕವನು ಕವಿದು ೧೫

ಅರಳುತಿರ್ದವು ಕಮಲವನ ನಸು
ತೆರಳುತಿರ್ದವು ತುಂಬಿಗಳು ತಮ
ತೆರಳುತಿರ್ದುದು ದೆಸೆದೆಸೆಗೆ ಗೂಡಿನಲಿ ಹಕ್ಕಿಗಳು
ಇರದೆ ಕೂಜಿಸುತಿರ್ದುದವನೀ
ಶ್ವರರ ಬಲವಾರಾಶಿ ನಿದ್ರೆಯ
ಭರದಲಿರ್ದುದು ಕೃಷ್ಣ ಸಂವೇಶನದ ಸಮಯದಲಿ ೧೬

ಮೊಳಗಿದುವು ನಿಸ್ಸಾಳತತಿ ನೆಲ
ಹಿಳಿಯೆ ದಿಕ್ಕರಿ ಕುಸಿಯೆ ಕಮಠನ
ತಲೆ ಹೊಗಲು ಬಸುಱೊಳಗೆ ಗರ್ಭಿಣಿಯರುಗಳೊಡಲೊಡೆದು
ಇಳಿದುದವನಿಗೆ ಗರ್ಭವೆನೆ ದಳ
ದುಳವ ಹಾಯ್ದಸುರಾರಿ ಪರಬಲ
ಜಲಧಿಯಲಿ ಮೊಳಗಿದನು ಶಂಖೋತ್ತಮವನಡಿಗಡಿಗೆ ೧೭

ಕಳವಳಿಸಿದುದು ಕಟಕ ಕೋಳಾ
ಹಳದ ಲಗ್ಗೆಗೆ ವಾಜಿಗಜಸಂ
ಕುಲದ ರಥ ಪಾದಾತಿತತಿ ಸಂಭ್ರಮಿಸಲಾಹವಕೆ
ಸುಳಿದುದಲ್ಲಿಯದಲ್ಲಿ ಕೈದುವ
ಸೆಳೆದು ಕಲಿಗಳು ಕವಚ ಸೀಸಕ
ವುಳಿಯಲೈದಿದರನುವರಕೆ ಬಱಿಗೈಯಲುರವಣಿಸಿ ೧೮

ಮತ್ತೆ ಹರಿಯೆಡವಂಕದಲಿ ನೃಪ
ಸತ್ತ್ರಮನೆ ಕೇಳೊಂದು ದೆಸೆಯಲಿ
ಮುತ್ತಿಗೆಯ ಮಾಡಿದನು ಮಾಗಧ ಸೈನ್ಯಸಾಗರವ
ಉತ್ತರಿಸಿ ಬಲವಂಕದಲಿ ಬರೆ
ಸಾತ್ಯಕಿ ಪ್ರಮುಖರು ರಣೋದ್ವೃತ
ಮತ್ತ ಗಜರಥ ತುರಗ ನಿಕರಂಗಳಲಿ ಸಂದಣಿಸಿ ೧೯

ಮುಕ್ಕುಱಿಕಿದುದು ಮೂಱು ಮೊನೆಯಲಿ
ಸಿಕ್ಕಿದುದು ನೃಪಕಟಕ ಯಾದವ
ರಿಕ್ಕಿದಾಳ್ಗಳ ವೇಢೆಯಲಿ ದಾವಾಗ್ನಿ ಮಧ್ಯದಲಿ
ಸಿಕ್ಕಿದಡವಿಯೊ ಯೆನಲು ತನು ಬಲ
ವಕ್ಕಳಿಸಿ ಹೇಡಿಗಳ ಬಲ ಬೆ
ನ್ನಿಕ್ಕಿದುದು ರಣಧೀರರಿದಿರಾಯ್ತಾಹವಾಗ್ರದಲಿ ೨೦

ತುರಗ ಸೂತ ಧ್ವಜಗಳಿಲ್ಲದ
ಬಱಿ ರಥವನೇಱಿದರು ರಥಿಕರು
ಕರಿಗಳನು ಮಾವಂತರೇಱುತ್ತಿರ್ದರಿದ್ದಂತೆ
ಭರದಲೇಱಿದರಶ್ವತತಿಯನು
ಕರದ ಚಮ್ಮಟಿಗೆಯಲಿ ಬಿಗಿಯದೆ
ಧುರದ ಸನ್ನಾಹದಲಿ ರಾವ್ತರು ವಿರಹಿತಾಸ್ತ್ರದಲಿ ೨೧

ಬಿಟ್ಟ ಮಂಡೆಯಲೈದಿದರು ಜಗ
ಜಟ್ಟಿಗಳು ಸಂಗ್ರಾಮಧೀರರು
ಮುಟ್ಟ ಹೊಯ್ದರು ಹಾಯ್ದರಮರವಧೂಭುಜಾಂತರಕೆ
ಬಿಟ್ಟುಕೊಂಡರು ಕೆಲರು ಬಾಯೊಳ
ಗಿಟ್ಟ ಬೆರಳನು ಕೆಲರು ಕೈದುವ
ಬಿಟ್ಟು ನಿಮ್ಮವರೆನುತಲಿರ್ದುದು ಮಗಧ ನೃಪಕಟಕ ೨೨

ಹೊರಳಿದವು ಕುದುರೆಗಳು ಕರಿಘಟೆ
ಯುರುಳಿದವು ರಥ ನಿಕರ ಬಿದ್ದವು
ತುರಗರಾಹಿತ್ಯದಲಿ ರಥಿಕವ್ರಾತವಡಗೆಡೆದು
ಕರ ಹಱಿದು ತೊಡೆಯುಡಿದು ಕರುಳು
ಬ್ಬರಿಸಿ ಕಾಲ್ಗಳು ಜರಿದು ನೆತ್ತರು
ಸುರಿದು ಮಿಗೆ ಹೊಡಕರಿಸುತಿರ್ದುದು ವೈರಿತಳತಂತ್ರ ೨೩

ಹೊಕ್ಕು ಕಡಿದನು ಮಲೆವ ಮಾಗಧ
ಚಕ್ರವನು ಮುರವೈರಿಯೊಂದೆಸೆ
ಗಿಕ್ಕೆಲದಲಾ ರಾಮ ಸಾತ್ಯಕಿಗಳು ಚತುರ್ಬಲವ
ಜಕ್ಕುಲಿಸೆ ಶರ ಖಡುಗ ನಿಕರದ
ಲಿಕ್ಕಿದರು ನೃಪಬಲದಲಹಿತರ
ಲೆಕ್ಕವನು ಬರೆಸಿದರು ಸುರಪನ ಸೇನ ಭೋವನಲಿ ೨೪

ಹರಿವ ಕತ್ತಲೆಯೊಡನೆ ಬಲವನು
ಹರದುವನನೀಶ್ವರರು ವಿಪಿನೇ
ಶ್ವರರೆನಿಸಿದರು ಬಿಸುಟು ಶಿಬಿರಂಗಳನು ಧನುಸಹಿತ
ಕರಿತುರಗ ರಥಪಾಯದಳ ಕಾ
ತರಿಸುತಿರ್ದವು ನಾಯಕತ್ವದ
ಪರಿಭವಕೆ ನೆಲೆಯಾಗಿ ಕಡಿವಡೆದಂಗನಿಕರದಲಿ ೨೫

ಬಲದಳಿವನದ ಕಂಡು ಭಯದಲಿ
ತೊಲಗಿದನು ಮಗಧಾಧಿಪತಿ
ಬಲು ಹಳುವವನು ಹೊಕ್ಕುಸುರದಿದ್ದರು ರಾಜಮಂತ್ರಿಗಳು
ಬಲುಭುಜರ ಬೆಂಬತ್ತಿ ಸಾತ್ಯಕಿ
ಕೊಳುಗುಳದಲೀರೈದು ಯೋಜನ
ದಳತೆಗೆಬ್ಬಟ್ಟಿದನು ಬಂದನು ಜಯಿಸಿ ಪರಬಲವ ೨೬

ಕೊಲ್ಲದಿರಿ ಕೈಮಾಡದವರನು
ಕೊಲ್ಲದಿರಿ ವಿರಥರನು ಪ್ರತಿಭಟ
ರಲ್ಲದವರನು ಶಸ್ತ್ರಹೀನರನಾಹವಾಗ್ರದಲಿ
ಬಿಲ್ಲ ಬಿಸುಟರನಂಜಿದವರನು
ಕೊಲ್ಲದಿರಿ ನಮ್ಮವರೆನುತ ಸಿರಿ
ವಲ್ಲಭನು ಹೊಯ್ಸಿದನು ಕಟಕಂಗಳಲಿ ಡಂಗುರವ ೨೭

ಹಿಡಿ ಗಜಾವಳಿಗಳನು ರಥದಲಿ
ತೊಡಿಸು ತುರಗಂಗಳನು ರಾವುತ
ರಡಱುವುದು ಹಕ್ಕರಿಕೆ ಹಲ್ಲಣ ಬಿಗಿದ ತೇಜಿಗಳ
ಕಡಿಯದಿರಿ ಕಾಲಾಳುಗಳ ನೊ
ಗ್ಗೊಡೆಯಲೀಯದೆ ತಱುಬೆನುತ ಜಗ
ದೊಡೆಯನಾಜ್ಞಾಪಿಸಿದನಾ ಕಟಕದಲಿ ಕೈ ನೆಗಹಿ ೨೮

ಅಳಿದುಳಿದ ಚತುರಂಗವನು ವರ
ಲಲನೆಯರನಾ ಯೋದನದ ಸಂ
ಕುಲದ ಶಸ್ತ್ರಂಗಳನು ಮಿಗೆ ಪರಿಕರದ ಭಂಡಿಗಳ
ಲಲಿತ ವಸನಾಭರಣ ರತ್ನಾ
ವಳಿಯ ಪೆಟ್ಟಿಗೆ ಜಾಳಿಗೆಗಳನು
ವಿಳಸವಿಕ್ಕಿದರಲ್ಲಿಗಲ್ಲಿಗೆ ರಾಜಮುದ್ರೆಯಲಿ ೨೯

ಮತ್ತಗಜಘಟೆ ಭಂಡಿ ಕಾಲಾ
ಳಿತ್ತುಗಳು ಹೇಱಿದುವು ಬಲಪುರು
ಷೋತ್ತಮರ ನೇಮದಲಿ ಮಧುರಾಪುರಕೆ ಪರಬಲವ
ಮುತ್ತು ಮಾಣಿಕದಾಭರಣ
ವಿತ್ತ ಸಂದೋಹವನು ನಡಸಿದ
ರತ್ಯಧಿಕ ವಿಭವದಲಿ ರಾಜನ್ಯರ' ರಥಾವಳಿಯ ೩೦

ವೈರಿ ಮಾಗಧರಾಯಭಂಜನ
ಭೂರಿ ವಿಜಯಾರಂಭರಂಜನ
ಧಾರುಣೀ ಸುರ ವಿಪ್ರರಕ್ಷಾಶೀಲ ಜಿತಕಾಲ
ಶ್ರೀರಮಣ ಜಯ ಕೃಷ್ಣ ಜಯ ರಣ
ಧೀರರರಸನೆ ಜಯಯೆನುತ ಸುರ
ನಾರಿಯರು ಕೈವಾರಿಸಲು ಮರಳಿದನು ನಿಜಪುರಕೆ ೩೧

ಸತ್ತಿಗೆಯ ಸುಳಿಗಳಲಿ ಘನಚಮು
ರೋತ್ತಮದ ಹಂಸಿಗಳಲೆತ್ತಿದ
ಚಿತ್ರರತ್ನಧ್ವಜ ಪತಾಕಾವಳಿಯ ತೆರೆಗಳಲಿ
ಮತ್ತಗಜ ಹಯನಿಕರ ಜಲಚರ
ಸತ್ವದಲಿ ಹರಿ ಬಲಜಲಧಿ ದಿಗು
ಭಿತ್ತಿಗಳನಾಕ್ರಮಿಸಿ ನಡೆದುದು ಮೇರೆಯನು ಮುಱಿದು ೩೨

ತೋಱಿಸಿದರಾ ಧನವನಾ ರಣ
ಧೀರ ಶೃಂಗಾರವನು ಹಯ ರಥ
ವಾರಣಾಳಿಗಳನಾ ಯದುರಾಜಾಧಿರಾಜಂಗೆ
ಹೇಱಿಸಿದರಂಗದಲಿ ಪುಳಕದ
ಭಾರಣೆಯನಾ ಪುರವ ಹೊಕ್ಕರಿ
ವೀರರೆಸೆದರು ರಾಮ ನಿತ್ಯಾತುಮರು ವಿಭವದಲಿ ೩೩

ನಲವತ್ತೆಂಟನೆಯ ಸಂಧಿ ಮುಗಿಯಿತು.

# ನಲವತ್ತೊಂಭತ್ತನೆಯ ಸಂಧಿ

ಬಾಣಬಲದ ಸಹಾಯದಿಂದ
ಕ್ಷೀಣ ಭುಜಬಲನಿರದೆ ಮಗಧ
ಕ್ಷೋಣಿಪತಿ ಮುತ್ತಿದನು ಮಧುರಾಪುರವನಾಕ್ರಮಿಸಿ

ಅರಸ ಕೇಳಾಹವದಲಚ್ಯುತ
ನಿರದೆ ತನ್ನನು ಸದೆದು ನೃಪರನು
ಪರಿಭವಿಸಿ ಸಪ್ತಾಂಗವನು ಕೊಳಲಾದ ಭಂಗದಲಿ
ಪುರವ ಹೊಗದಾ ಮಗಧ ಪೃಥ್ವೀ
ಶ್ವರನು ಚಿಂತಿಸಿ ಹೋದನಸುರೇ
ಶ್ವರನೆನಿಪ ಬಾಣಾಸುರನ ಶೋಣಿತಪುರಾಂತರಕೆ ೧

ಬರವ ಕೇಳಿದು ಸಕಲ ಪೃಥ್ವೀ
ಶ್ವರರು ಸಹಿತುತ್ಸವದಲವನೀ
ಶ್ವರನನಂದಿದಿರುಗೊಂಡು ಮಂಗಲವಾದ್ಯ ಘೋಷದಲಿ
ಪರಮ ಸಿಂಹಾಸನವನಿತ್ತುಪ
ಚರಿಸಿ ಕೈಮುಗಿದಿತ್ತಲವನೀ
ಶ್ವರರ ಮಂಡಲ ಸಹಿತ ಬಹ ಕಾರಣವದೇನೆಂದ ೨

ಎಂದಡೆಲೆ ದೈತ್ಯಾಧಿಪತಿ ಕೇ
ಳಿಂದು ತನ್ನಯ ಭಂಗವನು ಗೋ
ವಿಂದನೆಂಬವನೊಬ್ಬ ಗೋಪನಧರ್ಮದಲಿ ನೃಪರ
ವೃಂದವನು ಪರಿಭವಿಸಿ ಮಱಿಹಿಸಿ
ಕೊಂಡನುನ್ನತ ಕೋಶ ವಾಹನ
ವೃಂದ ಸಪ್ತಾಂಗವನು ಕೊಂಡನು ತಂದೆ ಕೇಳೆಂದ ೩

ದಿಕ್ಕರಿಗೆ ಸಮವೆನಿಪ ಗಜಘಟೆ
ಸಿಕ್ಕಿದವು ಕುದುರೆಗಳು ತೇರ್ಗಳು
ಪುಕ್ಕಟೆಯಲೇ ಪರರಿಗಾದವು ಹೇಳಲೇನದನು
ಮಿಕ್ಕ ಸಂವರಣೆಗಳ ಸರಕಿನ
ಲೆಕ್ಕವದನಾರಱಿವರಿದ್ದುದ
ನಿಕ್ಕಿ ಬಂದೆನು ಸಮರಸರ್ವಸ್ವವನು ತಾನೆಂದ ೪

ತಾನಿದಕೆ ಚಿಂತಿಸುವವನಲ್ಲೆನ
ಗೀ ನೃಪರು ನೆರವಾಗಿ ಕೆಟ್ಟರು
ಮಾನದಿಂದರ್ಥಂಗಳಿಂದಸುವಿಂದ ಸಂಗರದ
ಮಾನನೀಯರು ಭಂಗವಡೆದರು
ಹೀನರಲಿ ಸುಡಲಿನ್ನು ಬದುಕಿನ
ಲೇನು ಫಲ ವಿಪರೀತಕಾಲಕ್ರಮವಲಾ ಯೆಂದ ೫

ಬಂದೆನದಱಿಂದೀ ನೃಪಾನ್ವಯ
ವೃಂದವಿದು ಸಮದುಃಖಸುಖತನ
ದಿಂದ ಬಂದುದು ನಿನ್ನ ಹತ್ತಿರಕಾದ ಭಂಗದಲಿ
ತಂದೆ ವಿಸ್ತರಿಸಿದೆನು ನೀನೆನ
ಗಿಂದು ಸಾಹಾಯವನು ಮಾಡಾ
ನಂದಗೋಪನ ಮಕ್ಕಳೊಡನೆಯ ಕಾಳಗಕ್ಕೆಂದ ೬

ಸೋಲವಹುದಿದು ವೈಪರೀತ್ಯದ
ಕಾಲವಲ್ಲೈ ಧರೆಯ ಪೃಥ್ವೀ
ಪಾಲರೆತ್ತಲು ಸುರಪತಿಯ ಸಮತೇಜದತಿಬಲರು
ಕಾಳಗಕೆ ದಿಟ ಮಲೆವ ಹುಲು ಗೋ
ಪಾಲರೆತ್ತಲು ಹಾನಿಯನು ತಾ
ಹೇಳಲಾಗದು ತನಗೆ ನಾಚಿಕೆ ಶಿವಾ ಶಿವಾ ಯೆಂದ ೭

ಕಾದಿ ಗೆಲುವೆನು ಸಾವೆನೆಂದಾ
ಹೋದಡೆನ್ನನು ಮಾಣಿಸಿದರಾ
ಮೇದಿನೀಶರು ತನಗೆ ನಿರ್ಬಂಧವನು ನೆಱಿಮಾಡಿ
ಆದುದಾಗಲಿ ನಿನ್ನ ಸಖ್ಯವ
ನಾದರಿಸುತಾ ಬಂದೆನೀವುದು
ಯಾದವಕ್ಷಯದೀಕ್ಷಿತಂಗಭಯವನು ನೀನೆಂದ ೮

ಎಂದಡೈಸಲೆ ಸಾಕು ನುಡಿಯದಿ
ರೆಂದು ತಕ್ಕೈಸಿದನು ತೋಳ್ಗಳ
ವೃಂದದಲಿ ಬಲಿಸುತನಶೇಷನೃಪಾಲಕುಲಸಹಿತ
ಮಂದಿರಕೆ ಬಾಯೆನುತ ಕೈವಿಡಿ
ದಂದು ನಿಜ ರಾಜಾಲಯದಲಾ
ನಂದದಿಂದರ್ಚಿಸಿದನವನೀಶ್ವರರನುಚಿತದಲಿ ೯

ಉಡಿಗೆ ತೊಡಿಗೆಗಳಿಂದ ಮನ್ನಿಸಿ
ಪಡುರಸಾನ್ನಂಗಳಲಿ ಭೂಪರ
ಗಡಣವನು ಪೂಜಿಸಿ ಮಹಾವಿಭವಾನುಸಾರದಲಿ
ಒಡನೆ ಕುಳ್ಳಿರ್ದರು ಪರಿಶ್ರಮ
ವಡಗಲಾ ಮಗಧಾವನೀಶ್ವರ
ನೊಡನೆ ನಗುತಿಂತೆಂದನವನೀಪಾಲಮಧ್ಯದಲಿ ೧೦

ಕೇಳಿರೈ ನೆರೆದವನಿಪಾಲರು
ಕೇಳು ಮಾಗಧ ವರನೃಪಾನ್ವಯ
ಮೌಳಿಮಣಿ ತನ್ನೊಂದು ಮಾತನು ನಿರ್ವಿಕಾರದಲಿ
ಹೇಳಬಂದೈ ತನಗೆ ನೀನೇ
ನಾಳುಗೆಲಸದ ನೃಪನೆ ಯಾದವ
ನೂಳಿಗನನಟ್ಟದರೆ ಸಾಲದೆ ಮಾನಿಸರನೆಂದ ೧೧

ಬೇಡಿಕೊಳಲೇಕೆನ್ನ ರಾಜ್ಯದ
ರೂಢಿ ನಿನ್ನದು ದೈತ್ಯನಾಯಕ
ವಾಡಿಗಳು ನಿನ್ನವರು ಮೆಱಿವೀ ಮತ್ತಗಜನಿವಹ
ನಾಡ ಮಾತುಗಳೇಕೆ ಹಯರಥ
ಜೋಡು ಶಸ್ತ್ರಾಸ್ತ್ರಂಗಳಿವೆಯಿವೆ
ನೋಡಿಕೋ ನೀ ಮನಕೆ ಬಂದುದನೆಂದನಮರಾರಿ ೧೨

ಇತ್ತಲಿದೆ ಕೊಳ್ಳೆನುತ ಮುದದಲಿ
ಮತ್ತಗಜ ಸಂದೇಹದೊಳಗಱು
ವತ್ತು ಸಾವಿರ ಗಜಂಗಳನು ಸಪರಿಚ್ಛದಂಗಳನು
ಇತ್ತನೊಂದೇ ಲಕ್ಷ ರಥವನು
ಹತ್ತು ಲಕ್ಷ ತುರಂಗಮಂಗಳ
ನಿತ್ತನಿಚ್ಛಾಗತಿಗಳನು ದೈತ್ಯೇಂದ್ರನವನಿಪಗೆ ೧೩

ಮತ್ತೆ ಮಾಯಾವಿದರೆನಿಪ ದೈ
ತ್ಯೋತ್ತಮರ ಮುನ್ನೂಱು ಮಂದಿಯ
ನಿತ್ತನಾತ್ಮ ಸಮಾನರನು ಸಂಗರವಿಶಾರದರ
ಮತ್ತೆ ಹಲ್ಲಣ ಹಕ್ಕರಿಕೆಗಳ
ಶಸ್ತ್ರಸೀಸಕ ಕವಚವೆಂಬವ
ನಿತ್ತನಸುರನಸಂಖ್ಯವೆನಲವನೀಶ್ವರಂಗೊಲಿದು ೧೪

ಬೊಕ್ಕಸದ ಮನೆಗಳನು ತಾನೇ
ಹೊಕ್ಕು ತೆಗೆಸಿದನವನಿಪತಿಗುಡ
ತಕ್ಕುದನು ದಿವ್ಯಾಂಬರಂಗಳೊಳೆಸೆವ ದಿಂಡುಗಳ
ಲೆಕ್ಕವಿಲ್ಲದ ವಸ್ತುವಾಹನ
ಹಕ್ಕರಿಕೆ ಜೋಡುಗಳನಿತ್ತನು
ರಕ್ಕಸರ ಕೈಯಿಂದ ಹೊಱಿಸಿದನವನಿಪನ ಬಳಿಗೆ ೧೫

ಹೊನ್ನ ಕೊಡ ಕೊಪ್ಪರಿಗೆ ಮಡಕೆಗ
ಳುನ್ನತಾಸನ ಶಯನವೆಂಬಿವ
ಮನ್ನಿಸಿತ್ತನು ಮಗಧ ಭೂಪಾಲಂಗೆ ಮನವೊಲಿದು
ತನ್ನಲುಳ್ಳುದನುಳಿಸದಸುರಕು
ಲಾರ್ಣವಾಮೃತಕಿರಣನಿತ್ತನು
ಪನ್ನಗೇಂದ್ರವಿಭೂಷಣಂಗರ್ಪಿತವಿದೆಂದೆನುತ ೧೬

ಮಂತ್ರಿಗಳನಿಬ್ಬರನು ನಿಜತಳ
ತಂತ್ರರಕ್ಷೆಗೆ ಕೊಟ್ಟನಮರ ಕು
ಲಾಂತಕನು ಕುಂಭಾಂಡನನು ವರಕೂಪಕರ್ಣನನು
ಇಂತು ಸಂಭೃತ ಸಮರಸಾಧನ
ನಂತಕನವೊಲು ಮಗಧ ಪೃಥ್ವೀ
ಕಾಂತನಾ ಬಾಣಾಸುರನ ಬೀಳ್ಕೊಂಡು ಹೊಱವಂಟ ೧೭

ಕಾಳುರಿಯ ಬೆಂಬಲಕೆ ಬಂದುದು
ಭಾಳನೇತ್ರನ ನಯನವಹ್ನಿ
ಜ್ವಾಲೆಗಳು ಭಾಪೆನಲು ಭುವನ ವಿನಾಶಕಾರಿಗಳು
ಮೇಳವಿಸಿದುದು ಮಗಧ ಪೃಥ್ವೀ
ಪಾಲನೊಡನಾ ದೈತ್ಯ ಸುಭಟರ
ಜಾಲವಾ ಕುಂಭಾಂಡ ಕೂಪಶ್ರವಣರಾಜ್ಞೆಯಲಿ ೧೮

ಪ್ರಳಯವೋ ಕಲ್ಪಾಂತ ರುದ್ರನ
ವಳಯವೋ ರಾಜನ್ಯ ಕಟಕವೊ
ಹುಲು ಮನುಷ್ಯರ ಪಾಡೆ ಯಾದವರೀ ಮಹಾಂಬುಧಿಗೆ
ಹುಲು ಮೊರಡಿ ಕುಲ ಶೈಲಕಕ್ಷಾ
ವಳಿವಿದಾರಣ ದಕ್ಷನೆನಿಸುವ
ಕುಲಿಶನಿಕರದ ದಾಳಿಗಿದಿರೇ ಯೆನುತ ಜನ ಬೆದಱಿ ೧೯

ಮತ್ತೆ ನೃಪರಕ್ಷೋಹಿಣಿಗಳಿ
ಪ್ಪತ್ತು ಮೂಱಾಯ್ತು ಮಗಧಪತಿ
ದೈತ್ಯಪತಿಯನು ಬೀಳುಕೊಂಡನು ಬಹಳ ಹರುಷದಲಿ
ಮತ್ತೆ ಗಜರಥತುರಗಪತ್ತಿಗ
ಳೊತ್ತರಿಸಲಾ ರಾಯದಳ ದಂ
ಡೆತ್ತಿ ನಡೆದುದು ನಾಲ್ಕು ದೆಸೆಯಲಿ ಕೂಡೆ ಯಮಪುರಿಗೆ ೨೦

ಅಗಿದು ಗಿರಿಶೃಂಗಾಗ್ರವನು ಕಾ
ರ್ಮುಗಿಲು ಕವಿವಂದದಲಿ ಕೃಷ್ಣನ
ನಗರಿಯನು ನಾನಾ ನೃಪಾಲಕದಂಬ ಬಲಜಲಧಿ
ಮೊಗೆದುದೋ ಎಂಬಂತೆ ಬಿದ್ದುವು
ದಿಗಿಭಗಳು ಭುವಿಗಾಂತನಂತನು
ಹೆಗಲಲಾ ಭಾರಕ್ಕೆ ಕುಸಿದನು ಕೂರ್ಮನಳವಳಿದ ೨೧

ದಿವಸಕರ ಮುಸುಳಿದನು ಸೇನಾ
ನಿವಹ ಪದಹತಧೂಳಿಯಲಿ ದಿಗು
ವಿವರ ಪಲ್ಲಟಿಸಿದುವು ಕೆತ್ತುದು ಗಗನ ಗಜಘಟೆಯ
ನವ ಮದಾಂಬುನಿಷೇಕದಲಿ ತಗ್ಗು
ವುವು ತತುಕ್ಷಣಕೇಳುವವು ಮಾ
ನವರ ಚಂಚಲ ಮನದವೊಲು ತೊಳಲಿತ್ತು ಕೆಂಧೂಳಿ ೨೨

ದೃಷ್ಟಿರೋಧವ ಮಾಡಿ ಮಲಿನವ
ನಿಟ್ಟು ನಿರ್ಮಲವೆನಿಸಿದವರಲಿ
ಹುಟ್ಟಿದೆಡೆಯನು ಮುಱಿದು ತೇಜಸ್ವಿಗಳನವಗಡಿಸಿ
ಮುಟ್ಟಿದವರನು ಬಳಲಿಸುತ ನೈ
ಗೊಟ್ಟು ಕೃಶತೆಗೆ ತೊಳಲುತಿರ್ದುದು
ದುಷ್ಟ ದುರ್ಜನರಂತೆ ಕೆಂದೂಳಿರದೆ ದೆಸೆದೆಸೆಗೆ ೨೩

ಕೆಡಹಿದರು ಕೋಟೆಯನು ಗುದ್ದಲಿ
ಗಡಿತದವರುಪವನದ ಸಿರಿಯನು
ಕೊಡಲಿಕಾಱರು ಸೂಱಿಗೊಂಡರು ಕೂಡೆ ಕಡಿಕಡಿದು
ಬಿಡದೆಯವನಿಯ ತುಂಬಿದರು ತನಿ
ಗೆಡಹಿದರು ತೋರಣ ಪತಾಕೆಗ
ಳಡಸಿದಟ್ಟಾಲಂಗಳನು ಭಟನಿವಹ ಬೊಬ್ಬಿಱಿದು ೨೪

ಲಂಕೆಯಿದು ಹನುಮಂತರಾವೆನು
ತಂಕದಲಿ ಬಲದಲ್ಲಿಗಲ್ಲಿಗೆ
ಬೆಂಕಿಯನು ಬೆಸಸಿದರು ಕೇರಿಗಳೊಳಗೆ ಕವಿಕವಿದು
ಡೆಂಕಣಿಯ ಕಲ್ಲುಗಳ ಕವಣೆಗ
ಳಂಕೆಯನು ವಿಾಱಿದರು ಹೊಕ್ಕರು
ಶಂಕೆಯಿಲ್ಲದೆ ಶೀಲಹೀನರು ಶಾಶ್ವತನ ಪುರದ ೨೫

ಬಂದನೇ ಮಾಗಧನು ಪುನರಪಿ
ತಂದನೇ ಕದನವನು ಲೇಸಾ
ಯ್ತೆಂದು ಕರೆಸಿದನಸುರರಿಪು ಯಾದವ ಮಹಾಭಟರ
ವೃಂದವನು ಸನ್ನಾಹ ಭೇರಿಗ
ಳಂದು ಮೊಳಗಲು ಕಾಳಗಕೆ ರಥ
ದಿಂದ ಮುಸಲಾಯುಧಸಹಿತ ಹೊಱವಂಟನುರವಣಿಸಿ ೨೬

ದೇವ ನೀಪರಿಯಂತ ಸಮರವಿ
ದಾವಘನವಾವಿರಲು ನಿಜಕರು
ಣಾವಲೋಕನ ಕವಚರಕ್ಷಿತರೆಮ್ಮೊಡನೆ ಧುರಕೆ
ದೇವರಾಜನೆ ಬರಲಿ ಮೇಣ್ಗಾ
ರೀವರನೆ ಸುರನಿಕರ ಸಹಿತೆಮ
ಗೀವುದೆಂದರು ನೇಮವನು ಯಾದವ ಮಹಾಭಟರು ೨೭

ಏಱಿಸಿದ ಬಿಲು ಸರಳುಗಳಲ
ಕ್ರೂರ ಸಾತ್ಯಕಿ ಗದ ಹೃದೀಕಜ
ವೀರ ವಸುದೇವೋಗ್ರಸೇನ ಪ್ರಭೃತಿಗಳು ಗಜವ
ತೇರುಗಳನಶ್ವಂಗಳನು ಬಿಗಿ
ದೇಱಿದರು ದೃಢಕವಚಬದ್ಧರು
ಮಿಾಱಿದರು ಸಂಗರಕೆ ಬಲಕೃಷ್ಣರನು ಹಿಂದಿಕ್ಕಿ ೨೮

ಪುರವ ಹೊಱವಂಟಸುರರಿಪು ಸಂ
ಕರುಷಣರು ಸಂಗರಕೆ ಶಂಖವ
ನಿರದೆ ಮೊಳಗಿಸಿ ಮದಗಜಂಗಳವೋಲು ಪರಬಲವ
ಬೆರಸಿದರು ಘನ ಸಿಂಹನಾದದ
ಉರವಣಿಸಿ ಬಹಳಾರ್ಣವದ ಮಂ
ದರಗಳಂತೆಸೆದರು ನೃಪಾಲಕದಂಬ ಮಧ್ಯದಲಿ ೨೯

ಬಂದರೈ ಗೋಪಾರ್ಭಕರು ಗೋ
ವಿಂದ ರಾಮರು ಕವಿಯೆನುತ ನೃಪ
ವೃಂದ ಕವಿದುದು ಮೇಲೆ ಗರುಡಧ್ವಜವನೀಕ್ಷಿಸುತ
ಇಂದುವನು ಕಾರ್ಮುಗಿಲು ಮಿಗೆ ಕವಿ
ವಂದದಲಿ ಶರನಿಕರ ವೃಷ್ಟಿಗ
ಳಿಂದ ವಿಶ್ವಂಭರನ ಮುಸುಕಿದರೊಂದು ನಿಮಿಷದಲಿ ೩೦

ಕೆದಱಿ ಕವಿವ ಮಹಾಸ್ತ್ರ ಶಸ್ತ್ರದ
ಹೊದಱುಗಳನೊಡೆಹೊಯ್ದು ತಿಮಿರವ
ಸದೆದು ಸರಸಿಜಮಿತ್ರನುಜ್ವಲಿಸುವವೊಲರಿಬಲವ
ಹೊದಿಸಿದನು ಹೇರಾಳ ಶರಜಾ
ಲದಲಿ ರಥ ಗಜವಾಜಿ ಪತ್ತಿಗ
ಳುದುರಲಾಹವದೊಳಗೆ ದನುಜಾರಾತಿ ರಂಜಿಸಿದ ೩೧

ಬಡಬಶಿ ಖಿಯೋ ಹರಿರಥವೊ ಹೆ
ಗ್ಗಡಲೊ ಹರಹರ ಧರಣಿಪಾಲರ
ಪಡೆಯೊ ಗಾಣವೊ ತಿಲದ ರಾಶಿಯೊ ಕಾಲತೈಲಿಕನೊ
ಪೊಡೆಗಲಿಪ ಪರಬಲವ ಮಾಣದೆ
ಕಡಿದು ಬಿಸುಡುವ ಹರಿ ಶರಾವಳಿ
ಯೆಡೆದೆಱಹನಾರಱವರೆಲೆ ಭೂಪಾಲ ಕೇಳೆಂದ ೩೨

ಕುಲಿಶಹತ ಕುಲಗಿರಿಗಳೋ ಕೊಳು
ಗುಳದಲಡೆಗೆಡೆದಾನೆಗಳೊ ಶರ
ದಳಿತ ಕಂದರದಶ್ವನಿಚಯವೊ ಗಿರಿಶಿಲೋಚ್ಚಯವೊ
ಬಳ ಕಡಿತದಲಿ ಕಡಿದು ಬೀಳುವ
ಹಳುವವೊ ಕಾಲಾಳೊ ಎನೆ ದಿಗು
ವಳೆಯದಲಿ ಕೌತುಕವ ಮೆಱೆದವು ಹರಿಶರವ್ರಾತ ೩೩

ದಿಗ್ಗಜಂಗಳು ಸಸಿನವಾದವು
ತಗ್ಗಿದಹಿಪನ ಹೆಡೆಗಳೆದ್ದವು
ಮುಗ್ಗಲನು ಮಗುಚಿದನು ಕಮಠನೆನಲ್ಕೆ ಪರಬಲವ
ನುಗ್ಗುನುಸಿಯನು ಮಾಡಿದುವು ಮುನಿ
ವರ್ಗವಂದ್ಯನ ತೀವ್ರತರ ಶರ
ವರ್ಗವೇನಚ್ಚರಿ ಕೃತಾಂತ ಮೂರ್ತಿಯಲಿ ೩೪

ಮುಱಿದುದೋ ಮುಂಗುಡಿ ಕೃತಾಂತನ
ಹೊಱದುದೋ ಸಾಗರದೊಳಗೆ ಮಳೆ
ಗಱೆದುದೋ ಹುರುಡೇಕೆ ಗುಣದಲಿ ಕೃಷ್ಣನೀ ಜಗಕೆ
ಉಱುವ ವೀರರ ದೇವನೆನುತು
ಬ್ಬಱಿಸಿ ಪಡೆ ಬಾಯ್ಬಿಡಲು ಕವಿದರು
ಕಱೆ ಮನದ ರಕ್ಕಸರು ಮನ್ನೂರ್ವರು ಮಹಾಹವಕೆ ೩೫

ಸೀಳು ಬಗುಳುವ ಬಣಗು ನಾಯ್ಗಳ
ನಾಲಗೆಯನಾಹವದಲೀ ಗೋ
ಪಾಲನೇ ಮೂಜಗಕೆ ವೀರರ ದೇವನಹುದಹುದು
ಹೇಳಬಲ್ಲಿರೆ ತಥ್ಯವನು ತೆಗೆ
ಕಾಳಗದ ಹಂದೆಗಳನೆನುತ ಕ
ರಾಳ ದೈತ್ಯವ್ರಾತ ಕವಿದುದು ಕೃಷ್ಣನಭಿಮುಖಕೆ ೩೬

ಕವಿಸಿದರು ಮಾಯೆಗಳನಾ ಯಾ
ದವರ ಬಲ ಕಂಗೆಡಲು ದೈತ್ಯ
ಪ್ರವರ ಭಟರಾವರಿಸಿ ಗಜರಥತುರಗಪತ್ತಿಗಳ
ಸವೆಯೆ ಸವಱುತ್ತಿರಲು ಕರುಣಾ
ರ್ಣವನು ವಿಜ್ಞಾನಾಸ್ತ್ರದಲಿ ಪರಿ
ಭವಿಸಿದನು ದಾನವರ ಮಾಯೆಯನೊಂದು ನಿಮಿಷದಲಿ ೩೭

ಮೆಚ್ಚಿರೈ ನೀವೆನ್ನ ವೀರ್ಯಕೆ
ಮೆಚ್ಚಿಸುವೆನಿದೆಯಿದೆಯೆನುತ ತೆಗೆ
ದೆಚ್ಚನಾ ದೈತ್ಯರನು ದಾನವವೈರಿ ಮುಱಿ ಮುಱಿದು
ಹೆಚ್ಚಿದಡವಿಗೆ ಮೋಹರಿಸಿ ಕಾ
ಳ್ಗಿಚ್ಚು ಕವಿದಂದದಲಿ ಕವಿಕವಿ
ದಚ್ಯುತನ ಶರಜಾಲ ಸವಱಿದವಸುರಮೋಹರವ ೩೮

ಮುಱಿದದಸುರರ ಚೂಣಿ ಬೆನ್ನಲಿ
ತುಱುಗಿದವು ತೂಳಿದವು ಹೊಸ ಹೊಂ
ಗಱಿಯ ಕಣೆಗಳು ಜಾಱಿದರು ದಾನವ ಮಹಾಭಟರು
ನೆಱೆ ನಿರಾಶ್ರಯವಾಯ್ತು ಬಲವೆಂ
ದೊಱಲಿದುದು ನೃಪಕಟಕ ಸಮರದ
ಸೆಱಗ ಹಿಡಿದರು ಬಾಣಮಂತ್ರಿಪ್ರವರರುರವಣಿಸಿ ೩೯

ಅಳಿಬಲವನಂಜಿಸಿದೆನೆಂಬ
ಗ್ಗಳಿಕೆಗಿದೆ ಕೊಳ್ಳೆನುತ ಬಾಣಾ
ವಳಿಯ ಮಳೆಗಱೆವುತ್ತ ಬಾಣಾಸುರನ ಮಂತ್ರಿಗಳು
ಹಳಚಿದಡೆ ಕೃತವರ್ಮ ಸಾತ್ಯಕಿ
ಗಳಿಗೆ ಹೇಳಿಕೆಯಾಯ್ತು ಬಳಿಕಾ
ಜಲಜನಾಭನು ಹಾಯ್ದನತ್ತಲು ಮೋಹರಕೆ ನೃಪರ ೪೦

ಬಂದು ಬಿಲ್ಲಿನಲಸುರರಿಪು ನೃಪ
ವೃಂದದೊಡನಾಹವಕೆ ತೆರಳದೆ
ನಿಂದನೊಬ್ಬನೆ ಸುರರು ಭಾಪೆನಲೊಂದೆ ರಥದಿಂದ
ಬಂದಿವಿಡಿದನು ಬಹಳ ರಥ ಹಯ
ವೃಂದವನು ಗಜ ಘಟೆಗಳನು ರವಿ
ನಂದನನು ಕಾಣಿಸಿದನೇನೆಂಬೆನು ಮಹಾದ್ಭುತವ ೪೧

ಮೇಲೆ ಕವಿದುದು ಮತ್ತೆ ಬಹಳ ನೃ
ಪಾಲ ರಥ ಹಯನಿಕರ ಗಜ ಘಟೆ
ತೂಳಿದವು ತುಱುಗಿದವು ಕಾಲಾಳೆಂಟು ದಿಕ್ಕಿನಲಿ
ಹೂಳಿದರು ಹರಿರಥವನಸ್ತ್ರ
ಜ್ವಾಲೆಯಲಿ ಸಂಗ್ರಾಮದೊಡ್ಡಣೆ
ಹೇಳಲರಿದಾಯ್ತೀಕ್ಷಿಸುತ ಬೆಱಗಾದುದನುರಗಣ ೪೨

ಏನನೆಂಬೆನು ತೀವ್ರ ಶರಸಂ
ಧಾನಲಾಘವವನು ನಿರಂತರ
ಭಾನುಮಂಡಲದಂತೆ ಮೆಱೆದುದು ಶಾರ್ಙ್ಗ ಶರನಿಕರ
ಭಾನುಕರನಿಕರಂಗಳಾದುವು
ಸೇನೆಯದು ತಮವಾಯ್ತು ಭೂಪರ
ಮಾನಭಂಗದ ಕಮಲವನಕೆ ವಿಕಾಸವಾಯ್ತೆಂದ ೪೩

ಮತ್ತೆ ಭಟರೊಬ್ಬೊಬ್ಬರಲಿ ಶರ
ಹತ್ತು ಹಯ ಹಯಗಳಲಿ ಶರ ನೂ
ಱೊತ್ತರಿಸಿ ಗಜವೊಂದಱಲಿ ಸಾವಿರ ರಥಂಗಳಲಿ
ಹತ್ತು ಸಾವಿರವೆನಲು ಮುಸುಕಿ ವಿ
ಯತ್ತಳವನವನಿಯನು ದಶದಿಗು
ಭಿತ್ತಿಯನು ಬೆಳಗುತ್ತ ಕವಿದವು ಹರಿಶರವ್ರಾತ ೪೪

ಅತ್ತಲನ್ನೆಗ ಮಗಧ ನೃಪನೆದೆ
ಹೊತ್ತಿದುದು ಹಲಧರನನೀಕ್ಷಿಸು
ತೆತ್ತಿದಂತಸ್ತಾಪ ಶಿಖಿಯಲಿ ಪೂರ್ವಭಂಗದಲಿ
ಕೆತ್ತಿದವು ಮೀಸೆಗಳು ಕಂಗಳು
ಹೊತ್ತವರುಣಚ್ಛವಿಯನೈತಹ
ಮೃತ್ಯುವಿನವೋಲಿದಿರುಗೊಂಡನು ಹಲಧರನ ರಥವ ೪೫

ಎಲೆಲೆ ಹಿಡಿ ಹಿಡಿ ಮುಸಲವನು ನೇ
ಗಿಲನು ತೆಗೆ ನಿಜ ಬಾಹುಸತ್ವದ
ಬಲುಹ ತೋಱೆನ್ನೊಡನೆ ರಿಪುಭಂಜನದ ಸಾಹಸವ
ಅಳವ ತೊಱಿಾ ತೋಱು ನಿನ್ನಯ
ತಲೆಗೆ ಗದೆಯನು ತೊಡದ ಮುನ್ನವೆ
ಕಲಿತನಕೆ ಬಳಿಕಿಲ್ಲ ತೆಱಹೆನುತಧಟ ಮಾರಾಂತ ೪೬

ಲೇಸು ಮಾಡಿದೆ ತನ್ನ ತೋಳ್ಗಳಿ
ಗೇಸು ಜನ್ಮಾಂತರದ ಪುಣ್ಯದ
ರಾಸಿಯೋ ಫಲಿಸಿತ್ತು ಸಂಗ್ರಾಮದಲಿ ನೀನೆಂಬ
ಸಾಸಿಗನು ದೊರೆಕೊಂಡೆಯೆನುತತಿ
ರೋಷವಿಹ್ವಲನೇತ್ರನುಗಿದನು
ಭಾಸುರದ್ಯುತಿಯೆನಿಪ ಮುಸಲವನಾಹವಾಗ್ರದಲಿ ೪೭

ತಿರುಗಿ ಸಾವಿರ ಸುತ್ತಲಭ್ರದ
ಲುರಿಯನುಗುಳಲು ಕಾಲದಂಡವ
ತಿರುಹುವಂತಕನಂತೆ ಧೂಮಜ್ವಾಲೆ ದೆಸೆದೆಸೆಗೆ
ಭರಿತವಾಗಲು ಸಕಲ ದಿಗಧೀ
ಶ್ವರರು ಭಾಪೆನೆ ಮುಸಲದಲಿ ನೃಪ
ವರನನಪ್ಪಳಿಸಿದನು ಮೊಳಗುವ ಸಿಂಹನಾದದಲಿ ೪೮

ತಪ್ಪಿ ರಥವನು ತಾಗಿದಡೆ ನೆಲ
ನೊಪ್ಪುಗೊಂಡುದು ರಥಹಯವು ಸಹಿ
ತೊಪ್ಪವಮಾ ಧ್ವಜಸಹಿತ ಸಮುರಚ್ಛತ್ರಧಾರಿಗಳ
ನೊಪ್ಪಿತಾದುದು ಜೀವ ನೃಪನೊಡ
ಲೊಪ್ಪವಳಿದುದು ಕವಚ ಸೀಸಕ
ಕುಪ್ಪಳಿಸಿದುವು ವಿರಥನಾದನು ಭೂಪನಾ ಕ್ಷಣಕೆ ೪೯

ತೇರ ಹಂಗಿನ ಭಟನೆ ಫಡಫಡ
ಸಾರು ಸಾರಲ್ಲದಡೆ ನಿನ್ನಯ
ಬೇರುಗೊಲೆಗಿದೆ ಕೊಳ್ಳೆನುತ ಗಿರಿ ಶೃಂಗದಂತೆಸೆವ
ಭೂರಿ ತೇಜದ ಗದೆಯಲಿಟ್ಟನು
ಸೀರಪಾಣಿಯ ಪರಮ ತೇಜದ
ಪೇರುರವನಗಿದಾರ್ದು ಮಗಧ ನೃಪಾಲನಬ್ಬಱಿಸಿ ೫೦

ಕೆಡೆಯೆನುತ ಮಾಗಧನುಹೀಪತಿ
ಜಡಿದು ತಿರುಹಿಡಲಭ್ರದಲಿ ಕಿಡಿ
ಕಿಡಿಗೆದಱಿ ಹೊಡಿಸುವ ಗದೆ ತನ್ನೆದೆಯೊಳೆಱಗುತಿರೆ
ತುಡುಕಿದನು ಹುಸಿಯೆನುತ ಜಡಿದಾ
ರ್ದೆಡದ ಕೈಯಲಿ ವೈರಿಗದೆಯನು
ಹಿಡಿದನಿನ್ನೇನುಂಟು ರಕ್ಷಣವೆನುತ ಬಲಭದ್ರ ೫೧

ರಪಣವೇಕೆಲೆ ಹೂಹೆ ಭಟರಿಗೆ
ವಿಪುಳ ಸಂಗ್ರಾಮದಲಿ ಭುಜವೇ
ರಪಣವಲ್ಲೈ ಕೈದು ಪರಿಯಂತೇಕೆ ನಿನ್ನೊಡನೆ
ನಿಪುಣನಹಡಿದಿರಾಗು ನಿನ್ನನು
ತೃಪುತಿಗೊಳಿಸುವೆನೆನುತ ಜಡಿದಾ
ನೃಪತಿ ಭುಜವನು ಹೊಯ್ದು ನಿಂದನು ಸಿಂಹನಾದದಲಿ ೫೨

ಆದಡೀಕ್ಷಿಪೆನೆನುತ ಗದೆಯನು
ಮೇದಿನಿಗೆ ಬೀಸಾಡಿ ರಥವನು
ಕಾದಿಹುದು ನೀನೆಂದು ಸಾರಥಿಯೊಡನೆ ನೇಮಿಸುತ
ಕೋದ ತಿರುಹೊಡೆ ಕವಚ ಸೀಸಕ
ವಾದಿಯಾದುದನುಳಿದು ಬಲನನು
ವಾದನಾಸ್ಫೋಟಿಸುತ ಭುಜವನು ಬಹಳ ರೋಷದಲಿ ೫೩

ಡೊಕ್ಕರಿಸಿ ಮಾಗಧನ ಹಿಡಿದನು
ತೆಕ್ಕೆಯಲಿ ತನಿಕೋಪ ಕಂಗಳ
ಲುಕ್ಕಲಂಘ್ರಿಯನಂಘ್ರಿಯಲಿ ತೊಡೆಗಳನು ತೊಡೆಗಳಲಿ
ಅಕ್ಕಳಿಸದವಯವಗಳನು ಗಂ
ಟಿಕ್ಕಿದನು ಕಂಕುಳಲಿ ತಲೆಯನು
ಸಿಕ್ಕಿಸಿದನಾ ಕ್ಷಣಕೆ ಬಿದ್ದರು ಧರೆಯಲಾ ಭಟರು ೫೪

ಬೀಳುತವನಿಗೆ ಮಗಧ ಭೂಪನ
ಮೇಲೆ ಬಿದ್ದನು ರಾಮು ರಾಮನ
ಮೇಲೆ ನಿಂದನು ಮಗಧಪತಿ ನಿಮಿಷದಲಿ ಕೆಳಗಿಕ್ಕಿ
ಆಳುಗಳ ಚಕ್ರೇಶ್ವರರು ಕೈ
ಮೇಳವಿಸಲೇಳುತ್ತ ಕೊಂಡರು
ಕಾಳಗಕೆ ಮುಸಲವನು ಗದೆಯನು ಗಾಢ ವಿಕ್ರಮರು ೫೫

ಪೊಡವಿಪತಿಯಂಸವನು ಶಿರವನು
ತೊಡೆಯನುರವನು ಜಠರವನು ಕ್ರಮ
ವಿಡಿದು ನಾಭಿಯನೆಸೆವ ಜಂಘಾಯುಗಳ ಜಾನುಗಳ
ಹೊಡೆದಡವನಿಪನೀತನನು ಕೈ
ಯೊಡನೆ ತಲೆಯನು ಗಲ್ಲವನು ಹೆಗ
ಲೆಡೆಗಳನು ತೊಡೆ ಜಾನು ಜಂಘೆಗಳನು ವಿಭಾಡಿಸಿದ ೫೬

ನೆಗ್ಗಿದುದು ಧರೆ ಭಟರ ಘಾಯದ
ಲಗ್ಗೆಗಮರೇಶ್ವರರು ಸರಕನು
ಹುಗ್ಗಿದರು ಪಾತಾಳತಳವಾಸಿಗಳು ತಲ್ಲಣಿಸಿ
ದಿಗ್ಗಜಂಗಳು ಧಾತುಗೆಟ್ಟವು
ನಿಗ್ಗವನು ಹೊಱಗಿರಿಸಿದರು ನೃಪ
ವರ್ಗವಾಗಧನಳಿವ ನಿಶ್ಚೈಸಿಯೆ ಪಲಾಯನಕೆ ೫೭

ಅತ್ತಲಾ ಕುಂಭಾಂಡನೊಡನಾ
ಸಾತ್ಯಕಿಗೆ ಸಂಗ್ರಾಮ ಸಂದಣೆ
ಸಿತ್ತು ಮೂಱು ಮಹಾಸ್ತ್ರದಲಿ ಖಳನೆಸಲು ಕಡುನೊಂದು
ಮತ್ತೆ ತರಹರಿಸುತ್ತ ಕೊಡುವೆನು
ಮೃತ್ಯುವಿನ ಕೈಯೆಡೆಯುನೀ ದೈ
ತ್ಯೋತ್ತಮನ ಮಂತ್ರಿಯನೆನುತ್ತುಗಿದನು ಶರಾವಳಿಯ ೫೮

ಕದನದಲಿ ಶರಪಂಜರದಲಂ
ದಧಟನನು ತೆಗೆದೆಸಲು ನಾಭಿಯ
ನುದರವನು ಕಂಠವನು ನೊಸಲನು ಮೆಱೆವ ಮಸ್ತಕವ
ಒದೆದು ಹಾಯ್ದವು ಬಾಣವಪರಾಂ
ಗದಲಿ ಮೊನೆಯನು ಮೆಱೆದು ಸರ್ವಾಂ
ಗದಲಿ ನೆತ್ತರ ಕಡಲು ಹರಿದುದು ರೌದ್ರವೆನೆ ಧರೆಗೆ ೫೯

ಬಿದ್ದನೋ ಕುಂಭಾಡನವನಿಯ
ಲದ್ದುದೋ ರಥವೆನಲು ಭರದಲಿ
ನಿದ್ರೆಗೈದನು ಕಾತರಿಸಲಮರಾರಿಗಳ ಸೇನೆ
ನಿರ್ದಿನೀಶರನೀಕ್ಷಿಸುತ ಸಾರಥಿ
ಕದ್ದನಾತನ ರಥವನಪಗಮ
ನೋದ್ಯತನು ಸಂಗ್ರಾಮದಿಂದಸುರೇಶ್ವರನ ಪುರಕೆ ೬೦

ಅತ್ತಲಾ ಕೃತವರ್ಮನಲಿ ತಲೆ
ಯೊತ್ತಿ ಹಳಚುವ ಕೂಪಕರ್ಣನು
ಮತ್ತೆ ತದ್ವಾರ್ತೆಯನು ಕುಂಭಾಂಡನ ಪರಾಭವವ
ಚಿತ್ತವಿಸುತವೆ ಸಮರವಿದು ಸ
ನ್ಯಸ್ತವಾಗಲೆನುತ್ತ ಹಾಯ್ದನು
ಮೊತ್ತದಸುರರು ಸಹಿತ ಶೋಣಿತಪುರಕೆ ವಹಿಲದಲಿ ೬೧

ಬಾಣಬಲದಪಗಮನವನು ನೆಱೆ
ಕಾಣುತವೆ ಬೆನ್ನುಗಳು ನೃಪರಿಗೆ
ಕಾಣಬಂದವು ಯಾದವಾಧೀಶ್ವರರ ಕಂಗಳಿಗೆ
ಕ್ಷೀಣವಾದುದು ಬಳಿಕ ಮಗಧ
ಕ್ಷೋಣಿಪಾಲನ ಸತ್ವವಮರ
ಶ್ರೇಣಿ ಹೊಗಳುತ್ತಿರ್ದುದಾ ನಿತ್ಯಾತ್ಮ ವಿಕ್ರಮವ ೬೨

ನಲವತ್ತೊಂಭತ್ತನೆಯ ಸಂಧಿ ಮುಗಿಯಿತು.

# ಐವತ್ತನೆಯ ಸಂಧಿ

ದುರ್ಗದನ್ವೇಷಣವನಾ ಶ್ರುತಿ
ದುರ್ಗಮಹಿಮನು ಮಾಡಿ ಸರಳಿನ
ಸುಗ್ಗಿಯಲಿ ಮೆಱೆಸಿದನು ಸದೆದು ಸೃಗಾಲಕನ ತಲೆಯ

ಚಿತ್ರವಿಸು ಭೂಪಾಲ ತೆರಳುವ
ದೈತ್ಯ ಬಲವನು ಕೃಷ್ಣನಾಹವ
ದತ್ಯಧಿಕ ಸಾಹಸವನಾ ನೃಪಕುಲ ಪಲಾಯನವ
ಮತ್ತೆ ತಾಳಧ್ವಜನ ತನುಬಲ
ವುತ್ತರೋತ್ತರವಾಯ್ತು ಮಗಧ ನೃ
ಪೋತ್ತಮನು ಮನಗುಂದಿದನು ಜಯವಿಲ್ಲ ತನಗೆನುತ ೧

ಅಣೆದರೊಬ್ಬರನೊಬ್ಬರಾಹವ
ತ್ರಿಣಯನುರು ನಿಜ ಬಾಹು ಸತ್ವವ
ನೆಣಿಸಿ ಸರ್ವಾಂಗದಲಿ ರುಧಿರ ಸ್ವೇದಜಲವುಗಲು
ರಣವಿಜಯನಂಘ್ರಿಗಳ ಹತಿಗಳಿ
ಗಣುಗಳಾದವು ಹೆಮ್ಮರಂಗಳು
ಗಣಿಸಲೇತಕೆ ನೂಱು ಬಿಲ್ಲಂತರದ ವಳಯದಲಿ ೨

ಎಲವೊ ಫಡ ಫಡ ಬೀಳೆನುತ ಮುಂ
ದಲೆಯ ಹಿಡಿದನು ರಾಮನವನಿಗೆ
ಕೆಡಹಿ ಕೋಪಾಟೋಪದಲಿ ಮಾಗಧನ ಮಸ್ತಕವ
ಹೊಡೆಯಲೆತ್ತಿದನರಿಭಟರು ಬೊ
ಬ್ಬಿಡಲು ಮುಸಲವನನ್ನೆಗಾಗಸ
ದೆಡೆಯಲಾದುದು ರಭಸವಾ ಬಲಭದ್ರನಿದಿರಿನಲಿ ೩

ರಾಮ ಬಿಡು ಬಿಡು ಸಾವನಲ್ಲೀ
ಭೂಮಿಪತಿ ತೆಗೆ ಮುಸಲವನು ನೀ
ಕ್ಷೇಮದಲಿ ನಡೆ ಪುರಕೆ ಕೊಲಲರಿದೀತನನು ನಿನಗೆ
ಸೌಮನಸ್ಯದಲಾಯ್ತುಲಾ ಸಂ
ಗ್ರಾಮಜಯವಿದು ನಿನ್ನದೆನುತಾ
ವ್ಯೋಮತಳದಲಿ ನುಡಿದುದಶರೀರೋಕ್ತಿ ಸಿಡಿಲಂತೆ ೪

ಬಿಟ್ಟನದ ಕೇಳುತ್ತ ನೃಪನನು
ಕೊಟ್ಟೆನಸುವಿನ ದಾನವನು ನಿನೆ
ಗಿಟ್ಟುಕೋ ಬುದ್ಧಿಯನು ತಲೆಯಲಿ ಭಂಡ ಹೋಗೆನುತ
ಪಟ್ಟಣಕೆ ಮರಳಿದನು ರಥದಲಿ
ಮೆಟ್ಟಿ ನೋಡುತ ರಾಯರಾಯರ
ಥಟ್ಟುಗಳ ತನಿರೌದ್ರ ರಣರಂಗವನು ಹರುಷದಲಿ ೫

ಭೂತಳಾಧೀಶ್ವರರ ತಲೆಗಳು
ಹೂತ ಮರನಂತಾದವಾಹವ
ಜಾತಭಂಗದ ಭಾರ ಮಗಧಾಧಿಪತಿ ಸಹಿತ
ನೀತಿಹೀನರು ಹಾಯ್ದರಲ್ಪ ಪ
ದಾತಿಯಲಿ ನಿಜ ಪುರಗಳಿಗೆ ಪರಿ
ಭೂತ ಭುಜವಿಕ್ರಮರು ಬಹುಳ ಮನೋವಿಷಾದದಲಿ ೬

ಇತ್ತಲಸುರಾರಾತಿ ವೈರಿ ಜ
ಯೋತ್ತರದ ಸಂತೋಷದಲಿ ಶಂ
ಖೋತ್ತಮನುವನೋರಂತೆ ವೊಳಗಿಸಿ ಸಕಲ ಬಲಸಹಿತ
ಉತ್ತರಿಸಿ ಸಮರಾಬ್ಧಿಯನು ಸಂ
ವೃತ್ತನಾದನು ಪುರಕೆ ನಭದಲಿ
ಕೃತ್ತಿವಾಸವಿರಿಂಚಿಮುಖ್ಯಾಮರರು ಜಯಯೆನಲು ೭

ರಾಯವನಭಂಜನ ಸಮೀರಣ
ರಾಯ ಕದಳೀವಿಪಿನವಾರಣ
ರಾಯಗಜಪಂಚಾಸ್ಯ ರಾಯಾರಣ್ಯದಾವಾಗ್ನಿ
ರಾಯವಾರಿಧಿ ವಡಬ ಯೆನುತರಿ
ರಾಯ ವಿಜಯಾಂಕವನು ವಂದಿನಿ
ಕಾಯ ಕೈವಾರಿಸಲು ಪುರವನು ಹೊಕ್ಕನಸುರಾರಿ ೮

ಸಂದಣಿಪ ಮಾಗಧರ ಸೂತರ
ವಂದಿಗಳ ಕಳಕಳದ ವೊಳಗುವ
ದುಂದುಭಿಯ ದುರ್ವಾರ ಶಂಖ ಮೃದಂಗನಿಸ್ವನದ
ಸಂದ ಬಿರುದಿನ ಕಹಳೆಗಳ ರವ
ದಿಂದ ದೆಸೆ ಮಾರ್ಮೊಳಗಲಂದರ
ವಿಂದನಾಭನು ಪುರವ ಹೊಕ್ಕನು ವಿದಿತ ವಿಭವದಲಿ ೯

ಮುಂದೆ ವಸುದೇವೋಗ್ರಸೇನರು
ಸಂದಣಿಸಿ ರಥದೊಳಗೆ ಪಾರ್ಶ್ವ
ದ್ವಂದ್ವದಲಿ ರಾಮೋದ್ಧವಾಕ್ರೂರಾದಿಗಳು ಬರಲು
ಹಿಂದೆ ಕೃತವರ್ಮಾದಿ ಯಾದವ
ವೃಂದವೈತರೆ ಮಧ್ಯದಲಿ ಗೋ
ವಿಂದನೆಸೆದನು ನಿರುಪಮಿತ ಸುರರಾಜತೇಜದಲಿ ೧೦

ಹೊಳೆವ ಗುಡಿ ತೋರಣಗಳಲಿ ವರ
ಲಲನೆಯರ ಕಳಕಳದ ಕನ್ನಡಿ
ಕಲಶ ದಧ್ಯಾಕ್ಷತ ಫಲಾಂಕುರ ಲಾಜ ವೃಷ್ಟಿಗಳ
ತಳಿಗೆಗಳ ನವರತ್ನ ದೀಪಾ
ವಳಿಗಳಲಿ ಪರಮಾತ್ಮನೆಸೆದನು
ಲಲಿತ ಮಂಗಳವಾದ್ಯ ಗೀತಂಗಳ ವಿಡಾಯಿಯಲಿ ೧೧

ಮತ್ತ ಗಜ ರಥ ಹಯ ಪದಾತಿಗ
ಳೊತ್ತರಿಸಲೆಡಬಲದ ಧವಳ
ಚ್ಛತ್ರ ಚಾಮರ ಸಿಂಧಸೀಗುರಿಗಳ ಪತಾಕೆಗಳ
ಮೊತ್ತದಲಿ ನಭ ವಿರಳಗೆಡಲಮ
ರೋತ್ತಮರು ಪುಷ್ಪಾಂಜಲಿಯನೊಲಿ
ದಿತ್ತು ಕೈವಾರಿಸಲು ಹೊಕ್ಕನು ಪುರವನಸುರಾರಿ ೧೨

ದಾರಿಯಿಕ್ಕೆಲದಲಿ ನೆರೆದು ಪುರ
ನಾರಿಯರು ಕಂಗಳಲಿ ಕೃಷ್ಣನ
ಚಾರುಮೂರ್ತಿವಿಲಾಸಸುಧೆಯನು ಕುಡಿಕುಡಿದು ದಣಿದು
ಮೇರೆಯಿಲ್ಲದ ಬಹಳ ಪಾರಾ
ವಾರದೊಳಗೋಲಾಡುತಿರ್ದುದ
ದಾರಿಗಾವಾನಂದವೋ ಭೂಪಾಲ ಕೇಳೆಂದ ೧೩

ಗೆಲಿದು ಬಂದನು ಪರಬಲವನೆಂ
ದೊಲಿದು ಹರುಷೋತ್ಕರುಷದಲಿ ಜನ
ಜಲಧಿ ಕಾಣುತ್ತಿರ್ದುದಿದಿರಾಗಿತ್ತು ಕಾಣಿಕೆಯ
ಸುಳಿದು ಸೊಡರನು ಮೆಱೆವ ಪಟ್ಟಾ
ವಳಿಗಳನು ಬೀಸಾಡುವಾ ಕಳ
ಕಳದ ಪಟ್ಟಣಗಾಜರೋಲಗವೆಸೆಯಲೈತಂದ ೧೪

ಬಾಡಿದವು ಬಳಿವಱಿದು ಕಂಗಳು
ನೋಡಿನೋಡಿ ಮುಕುಂದನೊಪ್ಪುವ
ರೂಢಿಗಗ್ಗದ ಚೆಲುವ ಮೂರ್ತಿಯ ರೂಪವೈಭವದ
ಕಾಡುವಿಂದ್ರಿಯಗಳಿಗೆ ತೃಪ್ತಿಯ
ಮಾಡಲೆಂದೀಕಮಲಭವ ನೆಲೆ
ಮಾಡಿದನೋ ಮಝು ಭಾಪೆನುತಿರ್ದುದು ಜನಸ್ತೋಮ ೧೫

ಬೀಳುಕೊಟ್ಟನು ಪರಿಜನವನಾ
ಲೋಲನಯನಾಪಾಂಗದಲಿ ಸಿರಿ
ಲೋಲನುದ್ಧವ ಸಾತ್ಯಕಿ ಪ್ರಮುಖಾಪ್ತ ಮಂತ್ರಿಗಳ
ಮೇಳದಲಿ ನಡೆತರಲು ನಿಜ ರಾ
ಜಾಲಯಕೆ ರವಿ ಪಶ್ಚಿಮಾದ್ರಿಗೆ
ಬೀಳುಕೊಂಡನು ತತ್ಪದಾಬ್ಜ ಪರಾಗವನು ಧರಿಸಿ ೧೬

ದನುಜಹರನೈತಂದನೊಪ್ಪುವ
ಕನಕರಥದಿಂದಿಳಿದು ಸಿಂಹಾ
ಸನಕೆ ರತುನದ ಚಾವಡಿಯ ಪರಿವಿತದ ಚವುಕಿಗೆಗೆ
ಜನಪ ಕೇಳಾಳೋಚನೆಯ ಮನ
ಜನಿಸಿ ಕುಳ್ಳಿರ್ದಮಳ ಮಂತ್ರಿ ಗ
ಳನುವನಱಿವೊಲವಿಂದ ನಯಕೋವಿದರಿಗಿಂತೆಂದ ೧೭

ಬಂದುದೈ ನಮಗಖಿಳ ರಾಯರ
ವೃಂದದೊಡನೆ ವಿರೋಧ ಪುಣ್ಯದ
ಲಿಂದು ಕಳಿದವು ವೈರಿ ಬಲ ಸಂಗ್ರಾಮ ಸಾಗರವ
ನೊಂದಿರೆಲ್ಲರು ಮಗಧ ಭೂಪನ
ದಂದುಗಕೆ ನೋಡುವೆವು ನಾವಿ
ನ್ನೊಂದು ಪರದುರ್ಭೇದ್ಯವಹ ದುರ್ಗೋತ್ತಮವನೆಂದ ೧೮

ದುರ್ಗದೊಳಗತಿ ಲೇಸು ಗಿರಿಜಲ
ದುರ್ಗ ಸಪ್ತಾಂಗಂಗಳೊಳಗಱ
ದುರ್ಗವಲ್ಲೈ ನೋಡುವರೆ ಮುಖ್ಯಾಂಗವಾಹವಕೆ
ಅಗ್ಗಳೆಯಸೀ ಮಗಧಪತಿ ನೃಪ
ವರ್ಗವೈದೆ ಸಹಾಯವಾತಂ
ಗೆಗ್ಗತನವನು ಮಾಡಿ ನಾವಿಹುದುಚಿತವಲ್ಲೆಂದ ೧೯

ನೋವೆ ನಾನೆನ್ನವರು ನೊಂದರೆ
ನೋವು ದಿಟಕೆನಗಿಲ್ಲ ಸೇವಕ
ಜೀವ ಭರಣವ ಮಾಳ್ಪುದೇ ಕರ್ತವ್ಯವೆನಗೆನುತ
ಶ್ರೀವಧೂವರನಖಿಳ ಮಂತ್ರಿ ಜ
ನಾವಸಿತ ಮಂತ್ರದಲಿ ಕಳಿದು ವಿ
ಭಾವರಿಯನಗ್ರಜಸಹಿತ ಪುರವರವ ಹೊಱವಂಟ ೨೦

ಭಕ್ತಹಿತವಿಗ್ರಹರು ನಿಲಿಸಿ ಯ
ದೂತ್ತಮರನೆಲ್ಲರನು ಯಮುನೆಯ
ನುತ್ತರಿಸಿ ದಕ್ಷಿಣದಿಶಾಮುಖರಾಗಿ ನಡೆತರುತ
ಮತ್ತೆ ಗಿರಿ ವನ ನದಿಗಳಲಿ ಜಯ
ವೃತ್ತಿಗಳು ಕಳಿಕಳಿದು ಮಾರ್ಗದ
ಲುತ್ತಮುವ್ರತಿಯೊಬ್ಬನಿರೆ ಕಂಡರು ಮಹಾಭುಜರು ೨೧

ನಿಡುಜಡೆಯ ಕೃಷ್ಣಾಜಿನದ ಚೆ
ನ್ನುಡಿಗೆಯೆಸೆವ ಬ್ರಹ್ಮಸೂತ್ರದ
ತೊಡಿಗೆಗಳ ರುದ್ರಾಕ್ಷಿ ದಂಡ ಕಮಂಡಲಗಳೆಸೆವ
ಇಡಿದ ಪದ್ಮಾಸನದಲಳವ
ಟ್ಟೊಡಲ ನಿಲವಿನ ಮರ್ತ್ಯರೂಪದ
ಮೃಡನವೋಲಿರೆ ಕಂಡರಾ ಕಮನೀಯ ಮೂರುತಿಯ ೨೨

ರವಿಯ ತೇಜದ ಬೆಳಗುವೊಂದೊಂ
ದವಯವದ ಸುಕುಮಾರ ತೇಜೋ
ನಿವಹರಂಜಿತ ಮೂರ್ತಿಯನು ಸಂಪನ್ನ ಕೀರ್ತಿಯನು
ಅವಿರಳಾತ್ಮ ಸಮಾಧಿ ಯೋಗಾ
ರ್ಣವದಲೋಲಾಡುವನನೀಕ್ಷಿಸು
ತಿವರು ತಲೆವಾಗಿದರು ಮುನಿವರನಂಘ್ರಿ ಕಮಲದಲಿ ೨೩

ಕಂಡೆಱಿದು ಮುನಿನಾಥ ಗೋ
ವಿಂದ ರಾಮರ ದಿವ್ಯ ಮೂರ್ತಿಗ
ಳಂದವನು ಮನದೊಳಗೆ ಭಾವಿಸಿ ನೋಡಿ ನೆಱೆ ತಿಳಿದು
ಮಂದಹಾಸದಲೆದ್ದನಾಸನ
ದಿಂದ ಧಿಗಿಲೆನೆ ಶಿಷ್ಯಶತಸಹಿ
ತಂದು ಮೈಯಿಕ್ಕಿದನು ಪರಮೋತ್ಸವದ ಭಾವದಲಿ ೨೪

ಆಸನವನಿತ್ತುಪಚರಿಸಿ ಮುನಿ
ಲೇಸು ಮಾಡಿದಿರೆನ್ನ ಮನದಭಿ
ಲಾಷೆ ಕೈಸಾರಿತ್ತು ಕಂಡೆನಲೈ ಭವತ್ಪದವ
ಆ ಸಕಲನಿಗಮೌಘದಱಿಕೆಗೆ
ಮೀಸಲಳಿಯದ ವಸ್ತು ತನ್ನಾ
ವಾಸದೆಡೆಗೈತಂದುದೀಗತಿ ಧನ್ಯ ನಾನೆಂದ ೨೫

ಅಱಿತೆ ನಾನೆಲೆ ಕೃಷ್ಣ ನೀ ಜಗ
ಕುಱುವ ದೈವದ ದೈವವಖಿಳೇ
ಶ್ವರರಿಗೀಶ್ವರನಾತ್ಮನಖಿಳಾತ್ಮರಿಗೆ ಮೂಜಗದ
ನೆಱೆ ಜನಿ ಸ್ಥಿತಿ ನಾಶ ಕರ್ಮದ
ಹೊಱಗೆ ನಿನ್ನಲಿ ತೋರ್ಪ ಗುಣ ಮೂ
ಱಱ ವಿಕಾರವ ಹೊದ್ದದಖಿಳಾತ್ಮಕನು ನೀನೆಂದ ೨೬

ನೀನು ದಿಟ ಪೂರ್ವದಲಿ ವರ ಪಾ
ಠೀನ ಕೂರ್ಮ ವರಾಹ ನರಪಂ
ಚಾನನಾದಿತಿಸೂನು ವಾಮನ ಪರಶುರಾಮನೆನೆ
ಜಾನಕೀಪತಿ ಯೆನಿಸಿ ಸುರರಭಿ
ಮಾನವನು ರಕ್ಷಿಸಿದೆ ರಘುಕುಲ
ಮಾನನಿಧಿಯೆಂದೆನಿಪ ಸಾಕ್ಷಾದ್ವಿಷ್ಣು ನೀನೆಂದ ೨೭

ರಾಮ ಕೃಷ್ಣಾಖ್ಯೆಯಲಿ ಮತ್ತೀ
ಭೂಮಿ ಭಾರವ ಕಳೆಯಲೆಂದು
ದ್ದಾಮ ವಿಕ್ರಮರುದಿಸಿದಿರಿ ವಸುದೇವಸುತರೆನಿಸಿ
ಕ್ಷೇಮವನು ಮೂಜಗಕೆ ಭುವನ
ಸ್ತೋಮವಂದ್ಯರು ಮಾಳ್ಪಿರೆಂಬೀ
ನಾಮ ಮಾತ್ರವನಿದನು ಕೇಳಿದು ಬಲ್ಲೆ ನಾನೆಂದ ೨೮

ಬಂದಿರೇನು ನಿಮಿತ್ತವಿಲ್ಲಿಗೆ
ತಂದೆಗಳು ನೀವೆಂದು ಭೃಗುಕುಲ
ನಂದನನು ಬೆಸಗೊಳಲು ಕೈಗಳ ಮುಗಿದು ವಿನಯದಲಿ
ಮಂದಹಾಸದಲೊಬ್ಬರೊಬ್ಬರ
ನಂದು ತಕ್ಕೈಸುತ್ತ ರಾಮ ಮು
ಕುಂದರವಗತತತ್ವರಿಂತೆಂದರು ಭೃಗೂದ್ವಹಗೆ ೨೯

ದುರ್ಗವನು ನೋಡುತ್ತ ಬಂದೆವು
ನಿರ್ಗಮಿಸಿ ನಿಜಪುರವನಾತ್ಮ ಸ
ವರ್ಗಸಂಸ್ಥಾನಕ್ಕೆ ಗೋಮಂತಾಖ್ಯ ಗಿರಿವರನು
ಯೋಗ್ಯವೇ ಹೇಳೆನಲು ನುಡಿದನು
ಭಾರ್ಗವನು ಭುವನಾಧಿಪತಿಗಳ
ವರ್ಗದೊಡೆಯರಿಗಿದನು ಮಗುಳೆ ಮನೋನುರಾಗದಲಿ ೩೦

ಉಂಟು ದುರ್ಗ ವಿಶೇಷವದಱಲಿ
ಕಂಟಕನು ನೃಪನೊಬ್ಬನಾತನ
ಗಂಟಲನು ಮುಱಿ ಹೋಗು ಕರವೀರಾಖ್ಯ ಪುರವರಕೆ
ನಂಟ ಹೆಸರು ಸೃಗಾಲನೆಂಬರು
ಪಂಟಿಸುವಡಾಹವಕೆ ಜೋಳದ
ದಂಟು ನಿಜ ಭುಜವಿಕ್ರಮಕೆ ನೋಡೆಂದನಾ ಮುನಿಪ ೩೧

ಅರಸ ಕೇಳಿಂತೆನಲು ನಗುತಾ
ವರಮುನಿಯ ಬೀಳ್ಕೊಂಡು ನಡೆದರು
ಮೆಱೆವ ಕರವೀರಾಖ್ಯಪುರವರಕಂದು ವಹಿಲದಲಿ
ಪರಮಪುರುಷೋತ್ತಮನು ಶಂಖವ
ನಿರದೆ ಮೊಳಗಿದನಖಿಳದಿಗಧೀ
ಶ್ವರರು ಭಾಪೆನೆ ಬಹಳ ರವವಳ್ಳಿಱಿಯಲಂಬರವ ೩೨

ಆರೆಲವೊ ಶಂಖವನು ರಾಜ
ದ್ವಾರದಲಿ ಮೊಳಗಿಸುವ ಗರ್ವಿತ
ರಾರು ನೋಡೆನೆ ರಾಮಕೃಷ್ಣರು ಬಂದುದನು ಕೇಳಿ
ವೀರಮಾಗಧನೊಡನೆ ಕಾದಿದ
ಸಾರನೇ ತನ್ನೊಡನೆ ಘಡ ಘಡ
ಕೂರಲಗಿನಲಿ ಮಾತನಾಡುವೆನೆನುತ ಹೊಱವಂಟ ೩೩

ಆ ಸೃಗಾಲ ಸಮಾಖ್ಯೆಯೆಸೆವಾ
ವಾಸುದೇವನು ಬಹಳ ಬಲವಾ
ರಾಸಿಯಲಿ ಬಲಕೃಷ್ಣರಿಗೆ ಶಸ್ತ್ರಾಸ್ತ್ರನಿಕರವನು
ಸೂಸಿ ಕಂಡನು ಕಾಣಿಕೆಯನಮ
ರಾಸುರರು ಭಾಪೆನಲು ಸಮರಾ
ಭ್ಯಾಸವನು ತೋಱಿದನು ಕಲಿಗಳ ದೇವನುರವಣಿಸಿ ೩೪

ಎಸೆವ ಗಜ ರಥ ವಾಜಿ ಪತ್ತಿ
ಪ್ರಸರದಲಿ ಪರಿವೇಷ್ಟಿಸಿದನಂ
ದಸುರರಿಪು ರಾಮರನು ಬಹು ಶಸ್ತ್ರಾಸ್ತ್ರವರುಷದಲಿ
ಅಸಮ ಮೇಘವ್ರಾತದಲಿ ರವಿ
ಶಶಿಗಳನು ಪವಮಾನನಾವೇ
ಷ್ಟಿಸುವವೋಲು ಸೃಗಾಲಭೂಪತಿ ಬಹಳ ರೋಷದಲಿ ೩೪

ಸವಜುದರು ಪರಬಲದ ಶಸ್ತ್ರದ
ನಿವಹವನು ಕಾಲಾಳುತನದಲಿ
ಸವೆಯಲೆಚ್ಚರು ಸಮರಸಾಹಸಿಗಳನು ಕವಿಕವಿದು
ದಿವಿಜರುಘೆ ಯೆನಲಿಬ್ಬರೇ ಮಾ
ಧವರು ಮಾಜಾಂತರೀ ಬಲದ ಜೀ
ವವನು ಜವನೂರಿಂಗೆ ಜೋಡಿಸಿದರು ರಣಾಗ್ರದಲಿ ೩೫

ಕಂಡು ನಿಜಬಲ ನಾಶವನು ಖತಿ
ಗೊಂಡು ಫಡ ಫಡ ಹೋಗದಿರು ಕಲಿ
ಗಂಡ ನೀನಾರಾಹವಕೆ ಕಾಣೆನದೇಕೆ ಕೌಶಲವ
ಭಂಡತನ ಬೇಡೆನುತ ರಣದಲಿ
ಗಂಡುಗಲಿ ಭೂಪಾಥಮನು ಬಿಲು
ಗೊಂಡು ಬಲ ಬಲಮಥನರನು ಮೂದಲಿಸುತೈತಂದ ೩೬

ಕಾಣಿಸುವೆಸಿದೆ ಕೌಶಲವನೆ
ನ್ನಾಣೆ ಬಾ ಸಮ್ಮುಖಕೆ ಕಾಲನ
ಕೇಣಿಗಿಂದಿನಲಾಗಬೇಹುದು ತುಷ್ಟಿ ನಿನ್ನೊಡಲ
ಬಾಣಧಾರೆಯಲಖಿಳವಿಹಗ
ಶ್ರೇಣಿಗೀವೆನೆನುತ್ತ ಮುರರಿಪು
ಮಾಣದೆಚ್ಚನು ನಿಶಿತ ಶರನಿಕರಂಗಳಲಿ ನೃಪನ ೩೭

ಹೊಕ್ಕು ನೃಪನೊಡಲೊಳಗೆ ಕಣೆ ಸಹಿ
ತಿಕ್ಕೆಹಕ್ಕೆಯ ಮಾಡಿ ರುಧಿರವ
ಮುಕ್ಕುಳಿಸಿಗಜು ಸಹಿತ ಮಾಂಸಾಶನವನಾಚರಿಸಿ
ಲೆಕ್ಕವಿಲ್ಲದ ಹರಿಶರಾವಳಿ
ಮಿಕ್ಕು ಬೆನ್ನಲಿ ವೈರಿಭಟರನು
ಜಕ್ಕುಲಿಸೆ ಬೀಳ್ಕೊಳುತಲಿರ್ದರು ಸುರರು ಭಾಪೆನಲು ೩೮

ಲೇಸೆನುತ ಕೈಯೊಡನೆ ತೆಗೆದಾ
ವಾಸುದೇವನು ಕೀಲಿಸಿದನೀ
ವಾಸುದೇವನನಂಬಿನಲಿ ಮತ್ತ್ರವನು ಕಡಿ ಕಡಿದು
ಬೇಸಜಿದೆ ಕಮಲಾಂಬಕನು ಹೊಜಿ
ಬೀಸಿದನು ನಿಮಿಷದಲಿ ತಲೆಯನು
ಕೀಸಿದನು ಹಾ ಯೆನುತ ರಣದಲಿ ವೈರಿಬಲ ಬೆದಜ಼ೆ ೩೯

ಕೆಟ್ಟೆವೆನುತೋಡಿದರು ಸುಭಟರು
ಬಿಟ್ಟ ಮಂಡೆಯಲೊಡೆಯನಳಿವನು
ನಿಟ್ಟಿಸುತ ಜೀವಾಭಿಲಾಷೆಯಲೆಂಟು ದೆಸೆಗಳಿಗೆ
ಬಿಟ್ಟು ಕೈದುವನಿಳಿದು ತೇರ್ಗಳ
ನುಟ್ಟು ಹೆಣ್ಣುಡಿಗೆಯನು ಬಲ ಕಂ
ಗೆಟ್ಟು ಕರುಣವ ತೋಜುತಿರ್ದುದು ಹರಿಬಲರ ಮುಂದೆ ೪೦

ಇತ್ತನಭಯವನೆಲ್ಲರಿಗೆ ಪುರು
ಷೋತ್ತಮನು ಪುರ ರಾಷ್ಟ್ರ ಜನ ತ
ದ್ಭೃತ್ಯಜನ ಪರಿವಾರ ಮಂತ್ರಿ ಪ್ರವರ ಪುರಜನವ
ಮತ್ತೆ ಕಾಣಿಸಿಕೊಂಡು ಬಹುವಿಧ
ವಸ್ತುವನು ಮಣಿ ಕನಕ ನಿಕರವ
ನೆತ್ತು ಭಂಡಿಗಳಿಂದ ಮಧುರಾಪುರಕೆ ಹೇಜಿಸಿದ ೪೧

ಪುರವ ಹೊಕ್ಕಸುರಾರಿ ತದ್ಗಿರಿ
ವರವನೀಕ್ಷಿಸಿ ಸಂಗರದ ಜಯ
ಸಿರಿಯ ಸಮ್ಮೇಳದಲಿ ತತ್ಪುರ ರಾಷ್ಟ್ರ ಜನಗಳಿಗೆ
ಪರಮ ಹರುಷವ ಮಾಡುತಿರ್ದನು
ಶರಣಜನ ಸಂಸಾರಿಕನು ಸುರ
ವರ ನಿಷೇವಿತಮೂರ್ತಿ ನಿತ್ಯಾತುಮನು ನಿಜಜನಕೆ ೪೨

ಐವತ್ತನೆಯ ಸಂಧಿ ಮುಗಿಯಿತು.

# ಐವತ್ತೊಂದನೆಯ ಸಂಧಿ

ಕಾಲಯವನನನೊಯ್ದು ವರ ಭೂ
ಪಾಲ ಮುಚುಕುಂದಾಕ್ಷಿ ವಹ್ನಿ
ಜ್ವಾಲೆಗಾಹುತಿ ಮಾಡಿದನು ವೈದೆಗೆದು ಮುರವೈರಿ

ಚಿತ್ರವಿಸು ನೃಪ ರಾಮಕೃಷ್ಣರು
ಹತ್ತಿದರು ಗೋಮಂತವೆಂಬ ನ
ಗೋತ್ತಮವನುನ್ನತತರುಪ್ರಕರೋಪಶೋಭಿತವ
ಚಿತ್ರ ಖಗ ಮೃಗ ಭೃಂಗ ಗೀತ ಗ
ರ್ವೋತ್ತರದ ಗಂಧರ್ವ ಕಿನ್ನರ
ನೃತ್ಯ ಗೀತವಿಶಿಷ್ಟ ವಿವಿಧವಿಹಾರ ರಂಜಿತವ ೧

ಫಲಿತ ಕದಳೀವನಗಳನು ಕೋ
ಮಲ ಮಹಾ ಮಂಟಪಗಳನು ನಿ
ರ್ಮಳ ಸರೋವರಗಳನು ವಿಕಸಿತ ಕಮಲವನಗಳನು
ಕಳರವದ ಶುಕ ಪಿಕ ವಿಹಂಗಾ
ಕುಳಿತ ಫಲಿತದ್ರುಮಲತಾ ಮಂ
ಡಲಗಳನು ನೋಡುತ್ತ ಹತ್ತಿದರಾ ಮಹಾಚಲವ ೨

ಬೆಳೆದ ತೆಂಗಿನ ಕಾಯ್ಗಳನು ನಸು
ನಿಲುಕಿ ಕೊಯ್ಯುತ ಪೂಗವನವನು
ಸುಳಿದು ನೋಡುತ ನಾಗವಲ್ಲೀ ವಿಲಸಿತಸ್ಥಳವ
ನಲಿದು ಬಲರಾಮಂಗೆ ತೋಱಿಸು
ತಲಘುಮಹಿಮನು ಮುನಿಗಳುಟಜಾ
ವಳಿಯ ಸತ್ಕಾರವನು ಕೈಕೊಳುತೇಱಿದನು ಗಿರಿಯ ೩

ಹಲವು ನಿರ್ಜರ ವಾರಿಗಳನಾ
ಹಲವು ಕಮಲಾಕರಗಳನು ನಿ
ರ್ಮಲವೆನಿಪ ಹಲವಮೃತರಸ ಕಾಸಾರ ಪಂಙ್ಕ್ತಿಗಳ
ಒಲಿದು ನೋಡುವ ಹಲವು ವಿಧದು
ಜ್ವಲ ವನಶ್ರೀಗಳನು ನಿರ್ವ್ವಾ
ಕುಲರು ಗೋಮಂತಾದ್ರಿಶಿಖರವನೇಱಿದರು ನಲಿದು ೪

ಅಂಬುಜೇಕ್ಷಣನಾ ಪ್ರವರುಷಣ
ವೆಂಬ ಶೃಂಗಾಗ್ರವನಡರ್ದು ಪ್ರ
ಲಂಬಮರ್ದನ ಸಹಿತ ಸಂತೋಷದಲಿ ಮಳೆಗಱೆವ
ಅಂಬುದಾವಳಿಗಳನು ನಿಜ ಹ
ಸ್ತಾಂಬುಜದಲೋಲಾಡಿಸುತ್ತ ನಿ
ತಂಬದಲಿ ದಿವಸವನು ಕಳೆದನು ಹಲವನದಱೊಳಗೆ ೫

ಹತ್ತು ದೆಸೆಗಳನೆಲ್ಲವನು ನೋ
ಡುತ್ತ ಫಲ ಮೂಲಾಶನವ ಮಾ
ಡುತ್ತ ಲೀಲೆಯಲಾಡುತಿರಲಾ ಗಿರಿಯ ಶೃಂಗದಲಿ
ಅತ್ತಲನ್ನೆಗ ಹರಿಯನೋಲಗಿ
ಸುತ್ತ ದುಗ್ಧಾಬ್ಧಿಯಲಿ ಕ
ದ್ದೆತ್ತಿಕೊಂಡೋಡಿದನು ಮಕುಟವನಾ ಮುರಾಂತಕನ ೬

ಅದನಱಿದು ಖಗರಾಜ ಬೆಂಬ
ತ್ತಿದನು ಮಾರ್ಗದಲಮರ ರಿಪುವನು
ಸದೆದು ಸಮರ ಮಹೋಗ್ರ ವಿಕ್ರಮನಾಹವಾಗ್ರದಲಿ
ಸದಮಳಾಮಳಮಕುಟವನು ಕೊಂ
ಡೊದವಿದಾನಂದದಲಿ ಬರುತಾ
ಯದುಕುಲೋತ್ತಂಸನನು ಕಂಡನು ಕಾನನಾಂತದಲಿ ೭

ಕಂಡು ನಿಜದಾತಾರನನು ಪದ
ಪುಂಡರೀಕದಲೆಱಗಿ ನವ ಮಾ
ರ್ತಾಂಡ ಮಂಡಲನಿಭ ಮಹಾಮಣಿಕೀರ್ಣ ಮಕುಟವನು
ಗಂಡುಗಲಿ ತಂದಿರಿಸಿ ಶಿರದಲಿ
ಚಂಡವಿಕ್ರಮನಿದಿರಲವನಿಗೆ
ಮಂಡಿಸಿದ ವಾಮಾಂಘ್ರಿಜಾನುಗಳಿಂದ ಪೊಡವಂಟ ೮

ಜಯ ನಮೋ ಜಗದಾದ್ಯ ಜಗದಾ
ಶ್ರಯನನೋ ಜಗದುದ್ಭವಸ್ಥಿತಿ
ಲಯ ವಿಧಾನವಿಹಾರ ಮಾಯಾಧಾರ ಜಿತಪಾರ
ಜಯ ಜಗದ್ವ್ಯಾಪಕ ಜಗನ್ಮಯ
ಜಯ ಜನಿಸ್ಥಿತಿನಾಶವರ್ಜಿತ
ಜಯ ಜಗನ್ಮಂಗಳ ಪವಿತ್ರಚರಿತ್ರ ಜಯಜಯತು ೯

ಲೀಲೆಯಿಂದಜನೆನಿಸಿ ಸೃಜಿಸುವೆ
ಪಾಲಿಸುವೆ ನಾರಾಯಣಾಹ್ವಯ
ದೇಳಿಗೆಯಲೀ ಜಗವನುನ್ನತ ಸತ್ವಮೂರ್ತಿಯಲಿ
ಭಾಳನೇತ್ರಾತ್ಮಕನೆನಿಸಿ ಕೈ
ಮೇಳವಿಸುವೆ ಕಠೋರನಯನ
ಜ್ವಾಲೆಯಲಿ ನೀನಲ್ಲದೊಡೆಯರದಾರು ಜಗಕೆಂದ ೧೦

ಚಿತ್ರವಿಸುವುದು ನಿಜಪದಾಬ್ಜದ
ಭೃತ್ಯ ನಾನು ಗರುತ್ಮನಾವುದು
ಕೃತ್ಯವೆನಗಾಜ್ಞಾಪಿಸುವುದೆನುತಂಘ್ರಿಕಮಲದಲಿ
ಭಕ್ತಿಭಾವದಲೆಱಗಿರಲು ಪುರು
ಹೋತ್ರಮನು ನಸುನಗುತ ಗರುಡನ
ಮಸ್ತಕವ ನೆಗಹಿದನು ನೈದಡವಿದನು ಕರುಣದಲಿ ೧೧

ನೆನದ ಹೊತ್ತೈತಹುದು ಹೋಗೆನು
ತನುಪಮರು ಬೀಳ್ಕೊಳಿಸಿ ವಿನತಾ
ತನಯನನು ಸುಪ್ರೇಮ ಸೌಹೃದ ಮಧುರಸೂಕ್ತಿಯಲಿ
ದನುಜಹರ ರಾಮರು ಮಹಾದ್ರಿಯ
ಜನಿತವಿಭವವ ನೋಡಿ ರಿಪು ಭಂ
ಜನರು ಮರಳಿದು ಬಂದುಹೊಕ್ಕರು ನಲಿದು ನಿಜಪುರದ ೧೨

ಆ ಸೃಗಾಲನೃಪಾಲ ಪುರಧನ
ಕೋಶಬಲ ತಳತಂತ್ರಸಹಿತ ವಿ .
ಳಾಸದಲಿ ಬರುತಿರಲು ಪುರಕೆ ಮನೋನುರಾಗದಲಿ
ವಾಸುದೇವನ ವಾರ್ತೆಯನು ಭೂ
ವಿಾಶಮಾಗಧನದನು ಕೇಳುತ
ರೋಷವಿಹ್ವಲನಾಗಿ ನೆರಹಿದನಖಿಳನೃಪಕುಲವ ೧೩

ಮತ್ತೆ ನೆರೆದುದು ರಾಯದಳವಿ
ಪ್ಪತ್ತುಮೂಱಕ್ಷೋಹಿಣಿಗಳೆನೆ
ಮತ್ತಗಜ ರಥ ತುರಗ ಪತ್ತಿ ಪ್ರಕರದೊಗ್ಗಿನಲಿ
ಮುತ್ತಿಗೆಯ ಮಾಡಿದನು ಮಾರ್ಗದ
ಉತ್ತಮಶ್ಲೋಕರಿಗೆ ಜಡಿವ ಮ
ಹತ್ತರದ ಲಗ್ಗೆಗಳ ಘನಗಂಭೀರಮಧ್ಯದಲಿ ೧೪

ಬೆರಸಿದರು ಪರಬಲದ ಸುಭಟರ
ನೊರಸಿದರು ಭಂಗವನು ಪುನರಪಿ
ಬರೆಸಿದರು ಲೆಕ್ಕವನು ನಾಲ್ಕನೆ ರಣಪಲಾಯನವ
ಧರಿಸಿದರು ಕೀರ್ತಿಯನು ಬಹುಳೀ
ಕರಿಸಿದರು ವಿಕ್ರಮವನಾವಿ
ಷ್ಕರಿಸಿದರು ರಣಭೂತತೃಪ್ತಿಯನಮಿತ ಭುಜಬಲರು ೧೫

ಬಂದರಾ ಮಧುರಾಪುರಕೆ ಗೋ
ವಿಂದ ರಾಮರು ಸದೆದು ಭೂಪರ
ವೃಂದವನು ಪರಿವಾರಸಹಿತ ಮನೋನುರಾಗದಲಿ
ದುಂದುಭಿಯ ಕಹಳೆಗಳ ಕಳಕಳ
ದಿಂದೆಸೆವ ವರ ಸೂತ ಮಾಗಧ
ವಂದಿಗಳ ಕೈವಾರಜಯರವವೆಸೆಯೆ ದೆಸೆದೆಸೆಗೆ ೧೬

ಕಾಳಗವನೀಪರಿಯ ಮಗಧ ನೃ
ಪಾಲನಲಸದೆ ಬಹಳ ಪೃಥ್ವೀ
ಪಾಲಬಲದೊಡನೆಸಗಿ ಕೃಷ್ಣಪರಾಕ್ರಮಾಗ್ನಿಯಲಿ
ಬೀಳಿದನು ತಳತಂತ್ರವನು ಹದಿ
ನೇಳುಬಾರಿ ದಿಶಾಗಜಂಗಳ
ಮೌಳಿಗಳು ತವೆ ನೆಗೆಯಲಪಗತ ಭೂಮಿಭಾರದಲಿ ೧೭

ಮತ್ತೆ ಹದಿನೆಂಟನೆಯ ಸಮರಕೆ
ವಿತ್ತವನು ಸಂವರಿಸಿ ಮಗಧ ನೃ
ಪೋತ್ತಮನು ಬಹ ಸಮಯವಾಗಿರಲಾಯ್ತು ಮತ್ತೊಂದು
ನೃತ್ಯ ಮಧುರಾಪುರಕೆ ನಾರದ
ನಿತ್ತಕುರುಹಿನಲಾಹವವನಱ
ಸುತ್ತ ಬಂದನು ಕಾಲಯವನಾಹ್ವಯನು ಬಲಸಹಿತ ೧೮

ಗಂಡುಗಲಿ ತನ್ನೊಡನೆ ಪೃಥ್ವೀ
ಮಂಡಲದ ರಾಯರಲಿ ಕಾದುವ
ಗಂಡುತನವುಳ್ಳವರ ಕಾಣದೆ ವೀರರಾದವರ
ಚಂಡವಿಕ್ರಮತನವ ಕೇಳಿದು
ಚಂಡವಿಕ್ರಮರೆಡೆಗೆ ಸಮರೋ
ದ್ದಂಡದರ್ಪಜ್ವರಗೃಹೀತನು ಬಂದನುರವಣಿಸಿ ೧೯

ಮೂಱುಕೋಟಿಯ ಮ್ಲೇಚ್ಛರಲಿ ನೆಲ
ನೋರುಗುಡಿಸಲು ನಾಲ್ಕು ದೆಸೆಯಲಿ
ಕೀಱಬಿಟ್ಟುದು ಬೀಡು ಸುಭಟರ ಸಿಂಹನಾದದಲಿ
ಏಱಸಿದ ಬಿಲ್ಲುಗಳ ಪಟು ಭಟ
ರೇಱದರು ಕೋಟೆಯನು ಗುದ್ದಲಿ
ಕಾಱರೊಡನಾಟೋಪ ಮಿಗಲಾವರಿಸಿದರು ಪುರವ ೨೦

ನೋಡಿ ಪರಬಲಜಲಧಿಯನು ತೂ
ಗಾಡಿದನು ನಿಜಶಿರವನೆತ್ತಣ
ಕೇಡು ಶಿವ ಶಿವ ಬಂದುದೀ ಯಾದವರ ಸಂತತಿಗೆ
ಈಡಿಱದು ಕಾದುವಡೆ ನಾಳೆಯೊ
ನಾಡಿದೋ ಬಹನಿದಕೆ ಸಂಶಯ
ಬೇಡ ಮಾಗಧನೆಂದು ನುಡಿದನು ಹರಿ ಹಲಾಯುಧಗೆ ೨೧

ಇಂದು ಬಹನೋ ಮೇಣು ಮಾಗಧ
ಮುಂದಮತಿ ನಾವಿವರ ಸಮರದ
ದಂದುಗದಲಿರಲಾದಡೀ ಯಾದವರ ಸಂತತಿಯ
ಕೊಂದು ಹೋಹನೊ ಸೆಱೆವಿಡಿದು ನಿಜ
ಮಂದಿರಕ್ಕೊಯ್ವನೊ ದುರಾತ್ಮಕ
ನೆಂದು ಮಂತ್ರಾಲೋಚನೆಯ ಮಾಡಿದನು ಮುರವೈರಿ ೨೨

ದುರ್ಗವಿದು ನಮಗಲ್ಲ ನೋಳ್ಪೆವು
ದುರ್ಗವನು ಬೇಱೊಂದನಹಿತಸು
ದುರ್ಗಮವೆನಿಪ್ಪುದನು ಮತ್ತದಱೊಳಗೆ ಜಲದುರ್ಗ
ದುರ್ಗದೊಳಗುತ್ತಮನು ವಿದಿತ ಭೂ
ಸ್ವರ್ಗವೆನಲೊಪ್ಪುವುದದೊಂದು ನಿ
ಸರ್ಗನಿರ್ಮಿತ ರಾಜಧಾನಿ ಸಮುದ್ರದೊಳಗೆಂದ ೨೩

ಅದು ಕುಶಸ್ಥಲಿಯೆಂಬ ನಿಜ ನಾ
ಮದಲಿ ವಿಶ್ರುತ ಪೂರ್ವಪುರ ಮು
ತ್ತುದಧಿವೇಷ್ಟಿತ ತೋರಣಾಟ್ಟಾಳಾದಿ ರಚನೆಯಲಿ
ಅದು ಸುದುರ್ಗಮವೀ ಮನುಷ್ಯಂ
ಗದನು ನಿರ್ಮಿಸಿ ಬಂಧುವರ್ಗಕೆ
ಸದನವನು ಮಾಡುವುದು ಮಂತ್ರವೆನುತ್ತ ಹೊಱವಂಟ ೨೪

ಪುರವ ಹೊಱವಂಟಸುರರಿಪು ಸಂ
ಕರುಷಣಾನ್ವಿತನಾಗಿ ನಡೆದನು
ಪರಿಮಿತದಲಂಭೋನಿಧಿಯ ನಿರುರುತಿಯ ದಿಕ್ಕಿನಲಿ
ಶರಧಿಯಲಿ ಯೋಜನದ ಸೇತುವ
ವಿರಚಿಸಿದನೆಯ್ದಿದನು ಬಳಿಕಾ
ವರ ಕುಶಸ್ಥಲಿಯನು ಸಮುದ್ರಜಲಾವಕುಂಠಿತವ ೨೫

ಧನ್ಯನಾದೆನು ಭಲರೆ ಮಝು ಭಾ
ಪುನ್ನತೋನ್ನತ ಪುಣ್ಯಫಲ ಸಂ
ಪನ್ನ ನಾನೆನುತೀಕ್ಷಿಸುತ ರತ್ನಾಂಗುಳಿಯ ನೆಗಹೆ
ಅರ್ಣವನು ಮೈಯಿಕ್ಕಿ ಪರಮು ಕೃ
ಪಾರ್ಣವನ ಪದಕೆಱಗಿ ನುಡಿದನು
ಬಿನ್ನವಿಸುತೆನಗೇನು ಕಾರ್ಯವೆನುತ್ತ ಕೈಮುಗಿದು ೨೬

ಕಾರ್ಯವೇನೆಂದೆಲೆ ಮಗನೆ ಸಂ
ಸ್ಕಾರ್ಯವೀಪುರವಿದಱೊಳಗೆ ಸುರ
ಕಾರ್ಯವನು ತೀರ್ಚುವೆನು ಮನೆಯನು ಮಾಡಿ ನಿಜಜನಕೆ
ಹಾರ್ಯವವನೀಭಾರ ಜಲವಪ
ಸಾರ್ಯವೆನೆ ಜೀಯೆನುತ ವರುಣನ
ವಾರ್ಯವಿಕ್ರಮನಾಜ್ಞೆಯಲಿ ತೆಗೆಸಿದನು ನಿಜಜಲವ ೨೭

ಹನ್ನೆರಡು ಯೋಜನದಿ ಪುರ ಸಂ
ಪನ್ನವಾದುದು ವಿಶ್ವಕರ್ಮನ
ಬಿನ್ನಣದ ಬಹು ಚಿತ್ರರತ್ನಾವಳಿಯ ರಚನೆಯಲಿ
ಹೊನ್ನಕಳಶಂಗಳಲಿ ಮಣಿ ಸೌ
ವರ್ಣ ಭವನಂಗಳಲಿ ರಜತ ಶಿ
ಲೋನ್ನತೋನ್ನತ ಹರ್ಮ್ಯನಿಕರಂಗಳಲಿ ರಂಜಿಸಲು ೨೮

ಹೊಳೆವ ಮಣಿಭಿತ್ತಿಗಳ ಮುಕ್ತಾ
ವಳಿಯ ಮೇಲ್ಕಟ್ಟುಗಳ ಪಟ್ಟಾ
ವಳಿಯ ಗುಡಿಗಳ ಹೊನ್ನ ತಳಿಗೆಯ ತೋರಣಾವಳಿಯ
ಥಳಥಳಿಪ ಹರಿನೀಲರತ್ನ
ಸ್ಥಳದ ಸೋಪಾನ ಪಂಕ್ತಿಯ
ತಿಳಿಗೊಳನ ಸಿರಿ ಸೂಱೆಗೊಂಡುದು ಹರಿಬಲರ ಮನವ ೨೯

ಮುಗಿಲ ಮೊಗೆವಟ್ಟಾಳ ಹರ್ಮ್ಯಾ
ಳಿಗಳ ಕನಕಸ್ಥಳದ ಗಗನವ
ಬಗಿವ ತೋಳ್ಗಳ ಕೋಟೆಗಳ ರಚನೆಗಳ ಹೊಳೆಹೊಳೆವ
ಮುಗಿಲುಗಳ ಮಾಣಿಕ್ಯಫಲಕಾ
ಳಿಗಳ ನವಮಣಿಮಯದ ಹೊಂಜಗ
ಲಿಗಳ ರತ್ನದ್ವಾರ ವಜ್ರಕವಾಟ ಪಂಕ್ತಿಗಳ ೩೦

ಉಲಿವ ಶುಕ ಪಿಕ ನಿಕರದಲಿ ಕಂ
ಗೊಳಿಪ ಕಲ್ಪದ್ರುಮಲತಾ ಮಂಡಲ
ಗಳಲಿ ರಂಜಿಸುವ ಬಹಳೋದ್ಯಾನ ಶೋಭೆಯಲಿ
ಹೊಳಲ ಸಿರಿಯನು ನೋಡಿ ವಿಬುಧಾ
ವಳಿಗಳಚ್ಚರಿವಡಲು ಮೆಱೆದುದು
ತಿಲಕದಂತವನಿಗೆ ಕುಶಸ್ಥಲಿ ಜಲಧಿ ಮಧ್ಯದಲಿ ೩೧

ಕನಕ ನಿರ್ಮಿತ ವಿವಿಧ ವಾತಾ
ಯನದ ಹಂತಿಯ ಪರಮ ಶೋಭಾ
ಜನಿತ ದೇವಾಲಯ ನಿಕರದಾರಾಮರಚನೆಗಳ
ವಿನುತ ಸಭೆಗಳ ರಥ್ಯಗಳ ಯದು
ಜನರ ಮನೆಗಳ ವಿಹಾರಾವನಿ
ಗಳಲಿ ಸುರನರರಿಗತಿಶಯವೆನಲು ರಂಜಿಸಿತು ೩೨

ದ್ವಾರವತಿಯೆಂದಾಯ್ತು ಹೆಸರಾ
ಶ್ರೀರಮಣನೊಲಿದಿಟ್ಟ ಹೆಸರಲಿ
ಪೂರುವದಲದುವೇ ಕುಶಸ್ಥಲಿ ಭುವನ ವಿಖ್ಯಾತ
ಭೂರಮಣ ಕೇಳಾವ ಮಾಯಾ
ಪಾರ ಯೋಗಾಂಬುಧಿಯೊ ತುಂಬಿದ
ನೂರನೊಂದೇ ನಿಮಿಷದಲಿ ನಿಜಬಂಧು ವರ್ಗದಲಿ ೩೩

ಮುತ್ತಿಗೆಯ ಬಲವಱಿಯದಂತೆ ಯ
ದೂತ್ತಮರ ಕುಲಸಹಿತ ಪುರಜನ
ವೊತ್ತವನು ತಂದಿರಿಸಿದನು ತತ್ಪುರ ಗೃಹಂಗಳಲಿ
ಎತ್ತಲಿದು ನಾವಾರು ಮಧುರೆಯ
ದೆತ್ತಲೆನೆ ಜನನಿವಹವಾವುದು
ಚಿತ್ರವೈ ನಿಜಯೋಗಮಾಯೇಶ್ವರನ ಮಹಿಮೆಯಲಿ ೩೪

ಅದು ವಿಕುಂಠಪುರಕ್ಕೆ ಮಿಗಿಲಾ
ದುದು ಮುಕುಂದನ ಪರಮ ಸಾನ್ನಿ
ಧ್ಯದಲಿ ಸಕಲೈಶ್ವರ್ಯಸಂಪನ್ನತೆಯಲೀ ಧರೆಗೆ
ವದನದರ್ಪಣವಾಯ್ತು ಷಡುಭಾ
ವದ ವಿಕಾರವನಖಿಳ ಸಂಸಾ
ರದ ಭಯವನಱಯದೆ ಸುಖಸ್ಥಿತವಾಯ್ತು ಸಕಲಜನ ೩೫

ಸುಡುವ ತಾಪತ್ರಯಕೆ ನೆಲೆಯೆನಿ
ಪೊಡಲನೊದೆದು ವಿಮುಕ್ತಿಪದವನು
ಪಡೆದು ತತ್ವಜ್ಞಾನನಿಸ್ಮರವೋಲು ಬಾಧೆಗಳ
ತೊಡಕ ಹೊದ್ದದ ನಿರ್ಭಯದ ನಡು
ಗಡಲದುರ್ಗವ ಬಲಿದು ಮುರಹರ
ನಡಿಗಳಲಿ ವಿಶ್ರಮಿಸಿ ಸುಖದಿಂದಿರ್ದುದಖಿಳ ಜನ ೩೬

ತರಿಸಿದನು ಸುರಸಭೆಯನಲ್ಲಿಗೆ
ಬರಿಸಿದನು ನಂದಿಗಳನಾವಿ
ಷ್ಕರಿಸಿ ನಿಜತೇಜವನು ಪರಮೈಶ್ವರ್ಯ ಶಕ್ತಿಗಳ
ಸಿರಿಸಹಿತ ನೆಲೆಗೊಂಡನದಱೊಳು
ಧರೆಗೆ ಪಾವನವೆನಲು ಪರಮೇ
ಶ್ವರನು ಸುರನರಕೀರ್ತ್ಯಮಾನ ಚರಿತ್ರನೆಂದೆನಿಸಿ ೩೭

ನರರು ತಾವು ಸುಧರ್ಮವೆಂಬಾ
ಸುರಸಭೆಯನಾಕ್ರಮಿಸುವರು ಗಡ
ಚರಣದಲಿ ಕೃತ ಪುಣ್ಯವೆಂತುಟೊ ಪೂರ್ವಜನ್ಮದಲಿ
ಧರೆಯಲಾವುದಸಾಧ್ಯವಚ್ಯುತ
ಚರಣಕಮಲಾಶ್ರಿತರಿಗೆಂಬುದ
ನಱುಪುವಂತಾನಂದನಿರ್ಭಯವಾಯ್ತು ಯದುವಂಶ ೩೮

ಆ ಸಭೆಯೊಳಚ್ಚಿನ್ನ ವಾಸಾ
ಯಾಸವಿಲ್ಲಶನಾರ್ತಿ ಶೋಕ ಪಿ
ಪಾಸೆ ಮೋಹ ಜರಾ ಮರಣವೆಂಬೀ ಷಡೂರ್ಮಿಗಳು
ಕ್ಲೇಶವೈದಱ ಭಾವವಾಱಱ
ವಾಸನೆಗಳಿಲ್ಲನವರತ ಲ
ಕ್ಷ್ಮೀಶನೊಲವಿನ ಸುಖದಲೋಲಾಡಿದುದು ಸಕಲಜನ ೩೯

ಪುರವ ನಿರ್ಮಿಸಿ ಸಂತವಿಸಿ ತ
ತ್ಪುರ ಜನವನಾನರ್ತನಗರಿಯ
ನರಿವಿಜಯ ವಿಕ್ರಮರು ಹೊಱವಂಟಱಯದಂದದಲಿ
ದುರುಳಯವನನ ಬೀಡ ನೋಡುವ
ಭರದಲಾ ಮಧುರಾಪುರದಲಿ
ದ್ದಿರದೆ ನೈದೋಱದರು ಬಲನಾಥವರು ಪರಬಲಕೆ ೪೦

ನೀಲವೇಘಚ್ಛವಿಯ ನಾಲುಕು
ತೋಳುಗಳ ಸಿರಿ ವತ್ಸಲಾಂಛನ
ದೇಳಿಗೆಯ ಪೇರುರದ ಪದುಮದಳಾಭಲೋಚನದ
ಲೋಲ ಭೃಂಗನಿಭಾಳಕದ ಸುವಿ
ಶಾಲ ಭಾಳದ ಪೀತವಸನದ
ಪಾಲುಗಡಲೊಡೆಯನನು ಕಂಡುದು ಯವನಪರಿವಾರ ೪೧

ಈತನಹನಚ್ಯುತನು ಮುನಿಪನ
ಮಾತು ಹುಸಿಯದು ತೋಱುತಿದೆ ಲ
ಕ್ಷ್ಮಾತಿಶಯವೀ ಕೌಸ್ತುಭದ್ಯುತಿ ನಾಲ್ಕು ತೋಳುಗಳು
ಪೀತವಸನ ವಿಶಾಲ ನಯನ ಸು
ಜಾತ ಕಂಠ ಕಪೋಲ ಮಕರ
ಸ್ಫೀತ ಮಣಿಕುಂಡಲಗಳಿವೆ ನಿಜವೆಂದನವನೀಶ ೪೨

ತಪ್ಪಲಱವನೆ ಮುನಿಪ ನಿಜ ಭುಜ
ದರ್ಪಕಿಂದಿನಲಾಯ್ತು ಫಲ ಕಂ
ದರ್ಪಪಿತನನು ಕಂಡೆನಾಹವದಗ್ರಭಾಗದಲಿ
ಒಪ್ಪುವೀ ತ್ರೈಭುವನ ಮೋಹನ
ದರ್ಪಕನನಭಿಭವಿಸಿದರೆ ತನ
ಗೊಪ್ಪುವುದು ಜಯಲಕ್ಷ್ಮಿಯೆನುತೈತಂದನದಿರಾಗಿ ೪೩

ಬಿಟ್ಟು ರಥವನು ಕೈದುಗೊಳ್ಳದೆ
ಸೃಷ್ಟಿಗೊಡೆಯನು ಬರುತಿರಲು ಜಗ
ಜಟ್ಟಿ ಕಾಣುತ ಕಾಲಯವನನುದಾರ ಧರ್ಮವನು
ನಿಟ್ಟಿಸುತ ರಥವಿಳಿದು ಕೈದುವ
ಬಿಟ್ಟು ಕಾಲಾಳಾಗಿ ಹರಿಯನು
ಮುಟ್ಟಿ ಕಾದಲು ಬಂದನಾ ಕಡುಪಾಪಿ ಪಡಿಮುಖಕೆ ೪೪

ಅಡ್ಡ ಮೊಗವಿಟ್ಟಸುರರಿಪು ಬೆ
ನ್ನೊಡ್ಡಿ ನಡೆದನು ಪಹಿಲದಲಿ ಖಳ
ಖಡ್ಡಿಸುತ ಬೆಂಬತ್ತಿದನು ನಿಲು ಹೋಗದಿರು ಎನುತ
ಗೆಡ್ಡ ಗಡ ನೀನಖಿಳ ಸುರರಿಗೆ
ಖಡ್ಡಿ ಗಡ ಸುರ ಲೋಕಪಾಲರು
ಗೊಡ್ಡುತನದಿಂದೋಡುವರೆ ಸುಭಟಾಗ್ರಣಿಗಳೆನುತ ೪೫

ಅಟ್ಟಿದನು ಖಳ ನೋಡಿದನು ಮುನ
ಮುಟ್ಟಲಱಯದ ಮಹಿಮ ಕೈಗಳ
ವಟ್ಟನೆಂಬಂತಡಿಗಡಿಗೆ ನೈಗೊಡುತ ಬಳಲಿಸುತ
ಬಟ್ಟೆದೆಗೆದನು ದೂರದೇಶದ
ಘಟ್ಟ ಬೆಟ್ಟವ ಕಳೆದು ಹೊಕ್ಕನು
ದಟ್ಟಡವಿಯನು ನಯನ ಮೋಹನಮೂರ್ತಿ ನಲವಿನಲಿ ೪೬

ಏನನೆಂಬನು ನಾರದನು ನೀ
ನೇನ ಮಾಡಿದೆ ವೀರ ಗಜ ಪಂ
ಚಾನನೆ ನಿಲು ನಿಲ್ಲು ನಿನಗಿದು ಪಥವೆ ಯದುಕುಲದ
ಮಾನವಾಧೀಶ್ವರರ ಕೀರ್ತಿಗೆ
ಹಾನಿಯಲ್ಲಾ ಕೇಳಿ ಘನತೆಯ
ತಾನು ಬಂದಡದೀಗಲೋಡುವುದುಚಿತವೇ ಯೆಂದ ೪೭

ಮೂಱು ಲೊಕದ ಗಂಡ ಗಡ ಕೈ
ದೋಱು ಕೈದೋಱಿಲೆ ಪಲಾಯನ
ಗಾಱರರಸನೆ ಹೋಗದಿರು ತನ್ನಾಣೆ ಹೋಗದಿರು
ಮಿಾಱಿದೈ ಮಾರ್ಗವನು ಮೂಗನು
ಮಾಱಿದೈ ಬಯಲಿಂಗೆ ಬೆನ್ನನು
ತೋಱಿದೈ ನೀನೆನುತ ಬೆಂಬತ್ತಿದನು ಯವನೇಶ ೪೮

ಆ ದುರಾತ್ಮಕನಿಂತು ತನ್ನನು
ಮೂದಲಿಸುತ್ತೈತರಲು ಬೆನ್ನಲಿ
ನಾದದೂರನು ನುಡಿಯದೈದಿದನೊಂದು ಗಿರಿಗುಹೆಗೆ
ಭೇದಿಸುತ ಹೊಕ್ಕೆಡೆಯ ಹೊಕ್ಕನು
ತೀದ ವಿಕ್ರಮರಂತೆ ಮಱೆಯಲಿ
ಮೈದೆಗೆದು ಹರಿ ನಿಂದನಜ್ಞತೆಯೊಳಗೆ ನಿಲುವಂತೆ ೪೯

ಒಡನೆ ಹೊಕ್ಕಱಸುತ್ತ ಕಂಡನು
ಪೊಡವಿಯಲಿ ಮಲಗಿರ್ದ ನೃಪನನು
ತಡೆಯದೊಬ್ಬನನಾತನೇ ಹರಿಯೆಂದು ಹಾರೈಸಿ
ಜಡರು ನಿಜವೆಂದಕ್ಷಿಗೋಚರ
ದೊಡಲನೇ ಬಗೆವಂತೆ ದುರ್ಮತಿ
ನುಡಿಸಿದನು ನಿದ್ರಾನಿಗೂಢಶ್ರಮನೆನಿಪ ನೃಪನ ೫೦

ಓಡಿ ಬರಲೇಕಿನಿತು ಭರದಲಿ
ಕೂಡೆ ಗಿರಿ ಗುಹೆಯೊಳಗೆ ಕಾಲನು
ನೀಡಿ ಬಿದ್ದಿರಲೇಕೆ ಸಾಧುವಿನಂತೆ ತನ್ನಿದಿರ
ನೋಡಲಾಱದೆ ಮುಚ್ಚಿ ಕಂಗಳ
ನೇಡಿಸೆನು ನೋಡೆನ್ನೊಡನೆ ಮಾ
ತಾಡು ಮಲಗಿರಲೇತಕೇಳೇಳೆಂದು ಖಳ ಜಱೆದ ೫೧

ಜಾಱ ಬರಲೇಕಿಲ್ಲಿತನಕಕ
ಟಾಱದಿರ್ದಡೆ ಕಾಲ್ಗಳಿಗೆ ಮೈ
ದೇಱುತತ್ತರೆ ಸಾಲದೇ ಕೊಲುವೆನೆ ಪಲಾಯಿತರ
ಗಾಱುಮಾಡಿದೆ ತನ್ನ ನೀನೆನು
ತೇಱಿಸಿದ ಕೋಪಾಗ್ನಿ ಕಿಡಿಕಿಡಿ
ಹಾಱಲೊದೆದನು ಕಾಲಯವನನು ಕಾಲಲಾ ನೃಪನ ೫೨

ಕಂದೆಱೆದು ಖಳನಂಘ್ರಿಹತಿಯಲಿ
ನೊಂದು ನಿದ್ರೆಯ ನೂಕಿದನು ಮುಚು
ಕುಂದನಧಿಕಕ್ರೋಧ ಮೂರ್ಛಿತನಾಗಿ ಹೂಂಕರಿಸಿ
ಮುಂದೆ ನಿಂದಿರ್ದವನ ನೋಡಲು
ಬೆಂದು ಭಸ್ಮೀಭೂತನಾದನು
ಚಂದ್ರಮೌಳಿಯ ನಯನಶಿಖಿಯಲನಂಗನುರಿದಂತೆ ೫೩

ಆ ಸುರಾರಿ ಮಹಾತ್ಮನಕ್ಷಿಸ
ರೋಷವಹ್ನಿಯಲುರಿದು ಹೋಗಲು
ನೇಸಱುದಿಸಿದವೋಲು ಗುಹೆಯ ತಮೋವಿಳಾಸವದು
ನಾಶವಾದುದು ತೋಱಿದನು ನಿಜ
ಭಾಸುರಾಂಗವನಾಗಳಂತೆ ಮು
ಹೀಶನಕ್ಷಿಗಳಿಂಗೆ ನಿತ್ಯಾತ್ಮಕನು ಕರುಣದಲಿ ೫೪

ಐವತ್ತೊಂದನೆಯ ಸಂಧಿ ಮುಗಿಯಿತು.

# ಐವತ್ತೆರಡನೆಯ ಸಂಧಿ

ನಿಜಪದವನೊಲಿದಿತ್ತು ನೃಪತಿಗೆ
ತ್ರಿಜಗವಾಯೆನೆ ಮಾಗಧಗೆ ರಣ
ವಿಜಯಸಿರಿಯ ಕಟಾಕ್ಷವನು ಕರುಣಿಸಿದನಸುರಾರಿ

ಅರಸ ಕೇಳವನೀಶನಕ್ಷಿ
ಸ್ಫುರಿತ ಪವನಪ್ರಿಯನಶೇಷದ
ಲುರಿದು ಭಸ್ಮೀಭೂತನಾಗಲು ಯವನನಾಕ್ಷಣಕೆ
ತಿರುಗಿ ಕಂಡನು ಕಂದೆಱೆದು ಮುರ
ಹರನ ಮಂಗಳಮೂರ್ತಿಯನು ರವಿ
ಕಿರಣಕೋಟಿಯ ಕದವ ತೆಱೆದಂತಾ ಕಟಾಕ್ಷದಲಿ ೧

ಹರಹರಾರೋ ಬಿಲನಿವಾಸವ
ನಿರದೆ ಹೊಕ್ಕ ಮಹಾತ್ಮನೀತನ
ಚರಣನಖದಗ್ರವನು ಕಾಣಲು ನೆಱೆಯವಕ್ಷಿಗಳು
ಆರರೆ ಕಂಗಳನೇಕೆ ವಿಧಿಯೊಲ
ವರದಲುತ್ಪಾದಿಸಿದನೆನುತವೆ
ಧರಣಿಪತಿ ಮುಚ್ಚಿದನು ಕಂಗಳನೆರಡು ಕೈಗಳಲಿ ೨

ಇರಲು ನಗುತಸುರಾರಿ ಮನದಲಿ
ಕರುಣಿಸಲು ಕಂದೆಱೆದು ಕಂಡನು
ದರಹಸಿತ, ಪರಿಗುಣಿತ ಕಮಲದಳಾರುಣೇಕ್ಷಣದ
ಸಿರಿಮೊಗದ ಸಂಪನ್ನಕಾಂತಿಯ
ಹರಹಿನಲಿ ಹೊಳೆ ಹೊಳೆವ ಮಕುಟದ
ಕಿರಣ ಕರ್ಬುರ ತಾರಕಾವಳಿಗಳ ಮನೋಹರನ ೩

ಮಕರಕುಂಡಲ ದೀಪ್ತಗುಣ ದಾ
ಯಕ ಕಪೋಲದ ಚ್ಚಾರು ಮುಕ್ತಾ
ಪ್ರಕರ ಕುಟ್ಮಳಗಳನು ಕೆಡಿಸುವ ದಂತಪಂಕ್ತಿಗಳ
ವಿಕಸದಮಳಾಮೋದ ಘನ ಚಂ
ಪಕ ಚಮತ್ಕೃತಿಚಾಳನದ ನಾ
ಸಿಕದ ನಯನಾನಂದ ನಿಧಿಯನು ಕಂಡನವನೀಶ ೪

ವರ ಚತುರ್ಭಜಮಂಡಲದ ಪೀ
ವರ ವರೋರುಸ್ಥಳದ ತೊಳಗುವ
ತರುಣ ತುಳಸಿಯ ಮಾಲೆಗಳ ವರ ವೈಜಯಂತಿಗಳ
ಕರವಿರಾಜಿತ ಶಂಖ ಚಕ್ರಾಂ
ಬುರುಹ ಗದೆಗಳ ಮೆಱೆವ ಪೀತಾಂ
ಬರದ ಮುನಿವಂದಿತನ ಮೂರ್ತಿಯ ಕಂಡನವನೀಶ ೫

ಲಲಿತ ಕೌಸ್ತುಭ ಕಂಕಣದ ಭುಜ
ವಳಯ ಮಣಿಮುದ್ರಿಕೆಯ ಹಾರಾ
ವಳಿಯ ನಾಭಿಯ ಚಾರು ಮಣಿಮೇಖಲೆಯ ಕಟಿತಟದ
ವಿಲಸದೂರುದ್ವಯದ ತನು ಕೋ
ಮಲದ ಜಾನುದ್ವಯದ ಮುನಿಹೃ
ನ್ನಳಿನಭವನದ ಚರಣಕಮಲನ ಕಂಡನವನೀಶ ೬

ಕಂಗಳಲಿ ಕುಡಿಕುಡಿದು ಕೃಷ್ಣನ
ಮಂಗಳಾನನಕಮಲಸುಧೆಯನು
ಹಿಂಗಲಱಿಯದು ಚಿತ್ತ ದಣಿಯದು ಭೂಪನಭಿಲಾಷೆ
ಹೊಂಗಿದನು ಹೊರಳಿದನು ಪದ ಕಮ
ಲಂಗಳಲಿ ಜಯ ಜಯ ಜಯಾಮರ
ಪುಂಗವನೆ ಎನುತೆದ್ದು ಬಿನ್ನವಿಸಿದನು ಕೈಮುಗಿದು ೭

ಆರು ನೀನೆಲೆ ತಂದೆ ಗಿರಿ ಕಾಂ
ತಾರಗಹ್ವರವೆತ್ತ ನಿನ್ನೀ
ಚಾರುತರ ಚರಣಾಬ್ಜವೆತ್ತಲು ಭೂರಿ ಕಂಟಕದ
ಸೇರುವೀವನವೇಕೆ ನೀನೇ
ಕಾರು ನೀನು ವಿಭಾವಸುವೋ ಸರ
ಸೀರುಹೋದ್ಭವನೋ ಮಹೇಂದ್ರನೊ ಚಂದ್ರಮನೊ ಯೆಂದ ೮

ಅಲ್ಲ ರವಿ ಶಶಿ ಪಾವಕೇಂದ್ರರು
ಬಲ್ಲೆನಜ ಗೋವಿಂದ ಗೌರೀ
ವಲ್ಲಭರೊಳೊಬ್ಬನು ಸುನಿಶ್ಚಿತವಿದು ಭವತ್ಪದದ
ಪಲ್ಲವವೆ ಗೋಚರವೆನಲರಿದು
ವಲ್ಲಭನೆ ನಿಜ ಜನ್ಮ ಕರ್ಮವ
ನೆಲ್ಲವನು ಕರುಣಿಸು ಸುವಿಸ್ತರವಾಗಿ ತನಗೆಂದ ೯

ಲೋಕರಮಣನೆ ಕೇಳು ತಾನಿ
ಕ್ಷ್ವಾಕುಕುಲ ಸಂಭವನು ಮುಚುಕುಂ
ದೈಕ ನಾಮನು ಯೌವನಾಶ್ವಾತ್ಮಜನು ಪಡಿತಳಿಸಿ
ನಾಕನಿಳಯರ ರಕ್ಷೆಗಸುರಾ
ನೀಕವನು ಸಂಗ್ರಾಮ ಮುಖದಲಿ
ನೂಕಿದೆನು ಪರಿಭವಕೆ ಹರುಷವನಿತ್ತೆನಮರರಿಗೆ ೧೦

ಸಂದವದಱೊಳಗಿರಲು ದಿನ ಹಲ
ವಿಂದ್ರನೆನ್ನನು ಕರೆದು ಮನ್ನಿಸು
ತೆಂದನಾಸನದರ್ಧವನು ತನಗಿತ್ತು ಕುಳ್ಳಿರಿಸಿ
ತಂದೆ ನಿನ್ನೀ ವಿದಿತ ಭುಜಬಲ
ದಿಂದ ಗೆಲಿದೆವು ದೈತ್ಯ ದಾನವ
ವೃಂದವನು ನಿನಗಾವು ಮಾಡುವುದೇನು ಹೇಳೆಂದ ೧೧

ತೊಱೆದು ನಿಜರಾಜ್ಯವನು ಹೆಂಡಿರ
ನುಱುವ ಭಂಡಾರವನು ಸುತರನು
ಜಱೆದು ಬಂಧುಪ್ರೀತಿಯನು ಬಹು ವಿಷಯಭೋಗವನು
ಬಱಿದೆ ಹೋದವು ದಿವಸ ಪರಹಿತ
ದೆಱಕದಲಿ ಹರ ಹರ ಕೃತಾಂತನ
ಸೆಱೆಗೆ ಸಂದರು ನಿನ್ನ ಬಾಂಧವರೆಂದನಮರೇಂದ್ರ ೧೨

ಬಲ್ಲಿದನಲೈ ಕಾಲನೀಶ್ವರ
ನೆಲ್ಲರಿಗೆ ನಿಜಸತಿಸುತಾದ್ಯರ
ನೆಲ್ಲರನು ಹಿಂದಿಕ್ಕಿ ಕೊಂಡನಸಹ್ಯವಿಕ್ರಮನು
ತಲ್ಲಣಿಸುವವರೆಲ್ಲರಿಗೆ ನೃಪ
ಮಲ್ಲ ಸಲಿಸಿದೆ ಸುಖವನಾ ಕೈ
ವಲ್ಯ ಹೊಱತಾಗೊಂದು ವರವನು ಬೇಡಿಕೊಳ್ಳೆಂದ ೧೩

ಒಬ್ಬನೇ ದಾತಾರನದಕೆ ಸು
ಪರ್ಬಸೇವಿತ ವಿಷ್ಣುವೆನ್ನಲಿ
ನಿರ್ಬಹಿಸದುಳಿದುದನು ಬೇಡೆನೆ ಬಾಗಿ ಕೈಮುಗಿದು
ಸರ್ಬಲೋಕ ಮನೋರಮನೆ ತಾ
ನುರ್ಬಿಗಿಳಿದೆನು ಬಳಿಕ ನಿರ್ಜರ
ಸರ್ಬನುಗ್ರಹಲಬ್ಧ ನಿದ್ರೆಯಲೀ ವನಾಂತರಕೆ ೧೪

ಎದ್ದೆ ನಾನಾರೋ ನಿರರ್ಥಕ
ನಿದ್ರೆಯನು ನೆಱೆ ಕೆಡಿಸಿ ಧರೆಯಲಿ
ಬಿದ್ದು ಭಸ್ಮೀಭೂತನಾದನು ಬಱಿದೆ ಪಾತಕವ
ಹೊದ್ದಿಸಿದನೆಲೆ ಜಗದ ಕಂಗಳ
ಬಿದ್ದಿನನೆ ಬೆಸಸೆನಗೆ ನೀನಾ
ರದ್ವಯವ್ರತನಿಷ್ಠನೆನೆ ನಗುತಿಂತೆಂದನಸುರಾರಿ ೧೫

ಕೇಳು ನೃಪ ನಿಜ ಜನ್ಮ ಕರ್ಮವ
ಹೇಳುವಡೆ ತನಗರಿದು ಭೂಮಿಯ
ಧೂಳಿಗವನಂಬರದ ಧಾರಾವೃಷ್ಟಿಬಿಂದುಗಳ
ಮೇಲೆ ತೋಱುವ ಬಹಳ ತಾರಾ
ಮಾಲೆಗಳನೆಣಿಸಿದವನೆಣಿಸಲು
ಸಾಲನೆನ್ನಯ ಜನ್ಮಕರ್ಮಾದಿಕವನಿವನೆಂದು ೧೬

ಇಲ್ಲ ಹೆರರುಗಳಿಂಗೆ ಕಡೆ ತಾ
ಬಲ್ಲೆನೆಂದೆನಲರಿದು ಭೂಪರ
ಬಲ್ಲಹನೆ ಕಾಲತ್ರಯೋಚಿತ ಜನ್ಮಕರ್ಮವನು
ಸಲ್ಲಲಿತ ಗುಣಗಳನು ಹೇಳುವೆ
ನಿಲ್ಲಿಗುಚಿತವನೆನುತ ಲಕ್ಷ್ಮೀ
ವಲ್ಲಭನು ಹೇಳಿದನು ನಿಜವೃತ್ತಾಂತ ಸಂಗತಿಯ ೧೭

ಬಿನ್ನವಿಸಿದನು ಕಮಲಭವನೆನ
ಗರ್ಣವಾಂತಃಶಯನ ಸಂಪ್ರತಿ
ಪನ್ನಪರಿಗತ ಯೋಗನಿದ್ರಾಮುದ್ರ ನಾನಿರಲು
ವರ್ಣಧರ್ಮದ ರಕ್ಷೆಗವನಿಯ
ಬನ್ನವನು ಬಿಡಿಸಲಿಕೆ ತಾನು
ತ್ಪನ್ನನಾದೆನು ಯದುಕುಲದಲೆಲೆ ಭೂಪ ಕೇಳೆಂದ ೧೮

ಭೂವರನೆ ಸಂಭವಿಸಿದೆನು ವಸು
ದೇವನುದರದಲದು ನಿಮಿತ್ತವೆ
ಭಾವಿಸಿತಲ್ಲೈ ತನಗೆ ಜಗದಲಿ ವಾಸುದೇವಾಖ್ಯೆ
ದೇವರಿಪುಗಳ ಹಲಬರನು ಕಾ
ಲಾವಸಥವನು ಹೊಗಿಸಿದೆನು ಮ
ತ್ಶ್ರೀ ವಿರೋಧಿಯನಿಕ್ಕಿದೆನು ನಿನ್ನಕ್ಷಿರೋಷದಲಿ ೧೯

ಹಿಂದೆ ನೀನೆನ್ನನು ಭಜಿಸಿದೆ
ತಂದೆ ಮೋಕ್ಷಾರ್ಥದಲಿ ಕೊಡಲಾಂ
ಬಂದೆನದನೇ ಬೇಡಿಕೋ ಕಾಂಕ್ಷಿತ ಮನೋರಥವ
ಕಂದ ಹುಸಿಯಲ್ಲಮರಪತಿ ನಿನ
ಗಂದು ಹೇಳಿದುದೊಡೆಯನೊಬ್ಬನೆ
ಕುಂದು ಹೆಚ್ಚಿಲ್ಲದ ವಿಮುಕ್ತಿಯನೀವಡಾನೆಂದ ೨೦

ಬೇಡು ವರವನು ಕೊಡುವೆನೆಲ್ಲವ
ನಾಡಮಾತುಗಳೇಕೆನಲು ಕೈ
ನೀಡಿ ಮೈಯಿಕ್ಕಿದನು ಹರ ಹರ ಜಯ ನಮೋಯೆನುತ
ನೋಡಿ ನಯನಾನಂದನಿಧಿಯನು
ಕೋಡಿವರಿವಾನಂದ ಜಲದಲಿ
ಮೂಡಿ ಮುಳುಗಾಡುತ್ತ ಸಂಸ್ತುತಿ ಮಾಡಿದನು ಭೂಪ ೨೧

ಜಯ ಜಯಾಶ್ರಿತ ಮಾಯ ಮಾಯಾ
ಶ್ರಯ ಮಹಾ ಮಾಯಾರ್ತಿ ಮೂರ್ತಿ
ತ್ರಯ ಮಹೇಶ ಮನೋಜ ಹರ ಕಮಲಾಕ್ಷ ಕಮಲಭವ
ನಯನವಿಷಯ ವಿನೋದಿ ಭಕ್ತ
ಪ್ರಿಯ ಭವಾಬ್ಧಿನಿಮಗ್ನಜನ ಸಂ
ಶ್ರಯ ಪದಾಬ್ಜಪ್ಲವ ಪರಂಜ್ಯೋತಿಯೆ ನಮೋ ಎಂದ ೨೨

ಒಡೆಯ ನಿನ್ನೀ ಮಾಯೆಯಲಿ ಮತಿ
ಮಡಮುಱಿದು ಮಹಾಂಧಕಾರದ
ಕಡಲೊಳಗೆ ಕಾಲೂಱಿ ಮಱೆದು ಭವತ್ಪದಾಂಬುಜವ
ಮಡದಿ ಮನೆ ಮನೆವಾರ್ತೆಯೆಂಬೀ
ತೊಡಕಿನಲಿ ತನು ಸಿಲುಕಿ ದುಃಖಿ
ಬಡುತಿಹುದು ಸುಖಬುದ್ಧಿಯಲಿ ದಂಪತಿಗಳಿವರೆಂದ ೨೩

ಅಱಿದೆನೇ ನೀನಖಿಳ ಲೋಕ
ಕ್ಕುಱುವದೈವದ ದೈವವೆಂಬುದ
ನಱಿಯಲೀವುದೆ ಮಾಯೆ ಮರ್ತ್ಯರನಕಟ ಕಂಗೆಡಿಸಿ
ಅಱಿವ ಸಾಧನವುಳ್ಳ ದೇಹದ
ಲಱಿಯದಿರ್ದಡೆ ಬಳಿಕ ಮೋಕ್ಷವ
ನಱಿಸಿದಡೆ ಬಹುದೇ ಪಶುಸ್ಥಾವರತೆಗಳಲೆಂದ ೨೪

ಹಾಳು ಕುಳಿಯಲಿ ಬಿದ್ದ ಪಶು ಮೇ
ಲೇಳಬಲ್ಲುದೆ ಬಹಳ ಮಾಯಾ
ಜಾಲದಲಿ ಸಿಲುಕಿರ್ದ ನರರೈದುವರೆ ನಿಜಪದವ
ಹೇಳಲೇಕೆಲೆ ಕೃಷ್ಣ ಕಡಿಯೈ
ಕಾಲಕೋಳವನಧಿಕ ಕರುಣಾ
ಲೋಲ ನೀನಲ್ಲದೆ ಅತಃಪರರಾರು ಹೇಳೆಂದ ೨೫

ಕಾದುಕೊಳ್ಳಿಲೆ ಕೃಷ್ಣ ಬಱಿದೊಱೆ
ಯೋದುದೆನ್ನಾಯುಷ್ಯವಿನ್ನೆಗ
ವಾದಿಯಲಿ ರಾಜ್ಯಾನುಬಂಧವಿರುದ್ಧ ಮಮತೆಯಲಿ
ಮೇದಿನೀಪತಿತನದ ಬಲುಹಿನ
ಬೀದಿಗಿಚ್ಚಿನ ಬೇಗೆಯಲಿ ಮ
ತ್ತಾದರಿಸಿ ನಿದ್ರೆಯನು ಗಿರಿಗಹ್ವರದ ಶಯನದಲಿ ೧೬

ಚಕ್ರವರ್ತಿತ್ವದಲಿ ದಶ ದಿಗು
ಚಕ್ರವನು ನೆಱೆ ಜಯಿಸಿ ಧರಣೀ
ಚಕ್ರಪಾಳನವೆಲ್ಲವನು ಭೋಗಿಸುವೆನೆಂದೆನುತ
ಅಕ್ರಮವನಾಚರಿಸಿ ಕಾಲನ
ಚಕ್ರದಲಿ ಕಡಿವಡೆದುರುಳ್ದು ಕು
ಲಕ್ರಮವನದ್ದುವೆವು ನರಕಾರ್ಣವದಲಾವೆಂದ ೧೭

ಒಡೆಯ ಚಕ್ರೇಶ್ವರನೆಯಾಗಲಿ
ನಡೆಯಲಾನೆಯನೇಱೆ ಸತ್ತಿಗೆ
ವಿಡಿಸಿ ತಾಳಲಿ ಮನುಜ ವೃಂದಪರೀತನಾಗಿರಲಿ
ಕಡೆಯಲಸು ತೊಲಗಿದಡೆ ನಾಯಿಗ
ಳಡಗು ಮೇಣ್ಮಡೆ ಭಸ್ಮ ಕಾಗೆಗ
ಳೊಡಲ ವಿಷ್ಠೆ ವಿಚಾರಿಸದೆ ಕೆಡುತಿಹುದು ಜಗವೆಂದ ೧೮

ಬಱಿದೆ ಮಾಯಾ ಮೋಹದಲಿ ಮೈ
ಮಱೆದು ವಿಷಯಸುಖಂಗಳಿಗೆ ಹಲು
ದೆಱೆದು ತೃಷ್ಣಾಪಾಶಪರಿವೃತರಾಗಿ ಪರಿಭವಕೆ
ಗುಱಿಯೆನಿಸಿ ತಾಪತ್ರಯದ ಮಿಡು
ಗುಱಿನಲೋರಂತೊದವಿಸುತ ಜಗ
ದೆಱೆಯನೆನಿಸುವ ನಿನ್ನನಱಿಯದು ಮೂಢಜನವೆಂದ ೧೯

ಇಂದಿದನು ಮಾಡಿದೆನು ಮಾಳ್ಪೆನು
ಮುಂದೆ ಮತ್ತಿದ ಸಾಧಿಸುವೆನೆ
ನ್ನಿಂದಧಿಕರಾರುತ್ತಮರು ಧನಬಲಸಮನ್ವಿತರು
ಎಂದು ವಿಷಯಾಸಕ್ತಿಯಲಿ ಮನ
ಸಂದು ಮಱೆದೀ ಮೂಢಮರ್ತ್ಯರ
ವೃಂದವಾಯುಕ್ಷಯವನಱಿಯದು ಬಹಳ ಚಿಂತೆಯಲಿ ೨೦

ಅಱಿಯದೀ ಮರ್ತ್ಯರನು ನೀನೆ
ಚ್ಚಱಿಸಲಂತಕನೆನಿಸಿ ನಿಮಿಷಕೆ
ಮುಱಿದು ನುಂಗುವೆ ನಿನ್ನ ಚರಣವ ನೆನೆಯದಜ್ಞರನು
ಹೊಱಗೆ ನೋಡದೆ ಪರಧನವ ಮೈ
ಮಱೆದು ಹೊಳ್ಳಿಸುವಿಲಿಗಳನು ಬಾ
ಯ್ದೆಱೆದು ಕಾಳೋರಗನು ನುಂಗುವವೋಲು ಕಡು ಹಸಿದು ೨೧

ಬಿಟ್ಟು ವಿಷಯಂಗಳನು ದುಃಖಂ
ಬಟ್ಟು ತಪವನು ಚರಿಸಿ ಧನವನು
ಕೊಟ್ಟು ದಾನಾರ್ಥದಲಿ ಗುರು ವಿಪ್ರಾಗ್ನಿ ಮುಖಗಳಲಿ
ನೆಟ್ಟನಾ ವಿಷಯೋಪಭೋಗವ
ನಿಟ್ಟು ಮನದಲಿ ಬಳಲುವರು ಮತಿ
ಗೆಟ್ಟು ಮನುಜರು ಮರಳಿ ಮರಳಿ ಭವಾಂತರಂಗಳಲಿ ೨೨

ದೊರಕಲಱಿವುದೆ ನಿನ್ನ ಚರಣ
ಸ್ಮರಣೆ ವಿಷಯಾತ್ಮರಿಗೆ ಮಾಯಾ
ಪರಿಗಳಿತ ಮತಿಗಳಿಗೆ ನಿನ್ನವರೊಲವಿನಾಗಮನ
ದೊರಕಿದಲ್ಲದೆ ಮೋಕ್ಷಪದವಿದು
ದೊರಕಲಱಿಯದು ಕೃಷ್ಣ ಕರುಣಾ
ಕರನೆ ಕರುಣಿಸು ನಿನ್ನವರ ಸಂಗವನು ತನಗೆಂದ ೨೩

ಮೂಱು ತಾಪದ ಬೇಗೆಯಲಿ ಬಾ
ಯಾಱೆ ದುರಿತಧ್ವಾಂತದಲಿ ಕಾ
ಲೂಱೆ ಮೋಹಮಹೋರಗನ ವಿಷಮಸ್ತಕವನೇಱೆ
ಆಱು ಹಗೆಗಳ ಧರೆಗೆ ತನ್ನನು
ಮಾಱೆ ಪರವಶನಾದೆನಗೆ ಮೈ
ದೋಱಂದ್ಯೆ ನಿನ್ನಂತೆ ಕರುಣಾನಿಧಿಗಳಾರೆಂದ ೨೪

ಲೋಕವೆರಡಱ ಭೋಗ ಸುಖವನು
ನೂಕಿ ಪೃಥ್ವೀಶ್ವರರು ಭಜಿಸುವ
ರೇಕಚಿತ್ತದಲಾವನಂಘ್ರಿಸಮೀಪವನು ಬಯಸಿ
ಶ್ರೀಕಳತ್ರನೆ ನಿನ್ನ ಚರಣಾ
ಲೋಕನದ ಸಂಪನ್ನಪುಣ್ಯಾ
ನೀಕವಿದು ತನಗಾಯ್ತುಯತ್ನದಲೆಂದನವನೀಶ ೨೫

ಗಾರ್ಗ್ಯನೆನಗುಪದೇಶಿಸಿದನಪ
ವರ್ಗಮೂರುತಿ ವಿಷ್ಣು ನಿನ್ನಯ
ದೃಗ್ವಿಷಯನಹನೆಂದು ಹಿರಿಯರ ಮಾತು ಹುಸಿಯಹುದೆ
ಸರ್ಗದೊಳಗಿಂದಿನಲಿ ಜನ್ಮವಿ
ದಗ್ಗಳಿಯದಾಯ್ತೆನಗೆ ಮಾಯೆಯ
ಲಗ್ಗವನು ಪರಿಹರಿಸಿದೆನು ಸುಖಿಯಾದೆ ನಾನೆಂದ ೨೬

ಗೆಲಿದೆನೆಂದೆನಲರಿದು ಮಾಯೆಯ
ವಿಲಗವನು ನಾನಾ ವಿಕಾರದ
ಉಳಲಿಸುವುದಜ್ಞರನು ಹೊಕ್ಕಂಗದಲಿ ಪಡಿಸಲಿಸಿ
ಬಲವಿಹೀನನನಾಥನಿವನೆಂ
ದೊಲಿದು ನಿನ್ನವನೆಂದು ಕರುಣಾ
ಜಲಧಿಯೋ ಕೈಗಾವುದೆಂದೆಱಗಿದನು ಹರಿಪದಕೆ ೨೭

ಏಳು ಭೂಪತಿ ಭಾಗ್ಯವಂತರ
ವಹೊಳಿರತ್ನವೆ ಸುರಕುಲವ ನೆಱಿ
ಪಾಲಿಸಿದ ಪರಹಿತಹಿತೈಕ ಸ್ವಾರ್ಥವಿಗ್ರಹನೆ
ಏಳೆನುತ ನೆಗಹಿದನು ಭೂಪನ
ವಹೊಳಿಯನು ಮೈದಡವಿ ಪರಮ ಕೃ
ಪಾಳು ಕರುಣಿಸಿದನು ಮೃದುಸ್ಮಿತ ಮಧುರಸೂಕ್ತಿಯಲಿ ೩೮

ಅಹುದು ತನ್ನೇಕಾಂತಭಕ್ತರ
ಸಹಜವಿದು ನಿಜಚರಣಸೇವಾ
ನಿಹಿತಮತಿಗಳು ಬಯಸಲಱಿವರೆ ಬೇಱಿ ತನ್ನಿಂದ
ಇಹಪರದ ವಿಷಯೋಪಭೋಗದ
ಕುಹಕಸುಖವನು ಸಹಜಮತಿ ಸ
ನ್ನಿಹಿತವಾಯ್ತೆನ್ನಲ್ಲಿ ಪಾವನವೆನಲು ನಿನಗೆಂದ ೩೯

ಚಿತ್ರದಲಿ ಬಿಡದೆನ್ನ ನೆನೆವುತ
ಕೀರ್ತಿಸುತ್ತೆನ್ನಮಲ ಗುಣಗಣ
ವಿಸ್ತರವನಭಿವರ್ಣಿಸುತ ಮದ್ಭಕ್ತ ಸಂಗದಲಿ
ವರ್ತಿಸುತ ಪೂರ್ವೋತ್ತರಾಘವ
ನುತ್ತರಿಸಿ ನಿಜ ಪಾದಪಲ್ಲವ
ಭಕ್ತಿಯಲಿ ಮುಕ್ತಿಯನು ಪಡೆವೆ ನಿರಾಯಸದಲೆಂದ ೪೦

ಅವನಿಪತಿ ಕೇಳೆನ್ನ ಸಾಯು
ಜ್ಯವನು ಪಡೆವಡೆ ತನ್ನ ಹಂಗೇ
ಕವಿರಳಿತ ಪದಾಬ್ಜಭಕ್ತಿಯೆ ತಾನೆ ಕೊಡುವುದಲೈ
ಜವಗೆಡದಿರದು ನಿನಗೆ ಮೇಲಣ
ಭವದಲಹುದೆಂದೊಲಿದು ಕರುಣಾ
ರ್ಣವನು ಕಾರುಣ್ಯದಲಿ ಮುಕ್ತಿಯನಿತ್ತನಾತಂಗೆ ೪೧

ಎಂದನುಗ್ರಹಿಸಲು ನೃಪೋತ್ತಮ
ನಂದು ಹರುಷೋತ್ಕರುಷದಲಿ ಗೋ
ವಿಂದನಂಘ್ರಿಸರೋಜಯುಗಳಪರಾಗವನು ಧರಿಸಿ
ಕಂದೆಱಿದು ಕಮನೀಯ ಮೂರುತಿ
ಯಂದವನು ನಡೆನೋಡಿ ಹೃದಯದ
ಮಂದಿರದಲಪ್ಪಿದನು ಬಲವಂದೆಱಗಿ ಬೀಳ್ಕೊಂಡು ೪೨

ಆ ಗುಹೆಯ ಹೊಱವಂಟು ಕರುಣಾ
ಸಾಗರನ ಸಂದರುಶನಕೆ ತಲೆ
ದೂಗಿ ಪುಳಕಿತನಾಗುತೊಯ್ಯನೆ ಬದರಿಕಾಶ್ರಮಕೆ
ಹೋಗಿ ನರನಾರಾಯಣಾಶ್ರಮ
ಕಾಗಿ ತತ್ಪದಕಮಲಸೇವಾ
ಯೋಗದಲಿ ಪೂಜಿಸಿದನಚ್ಯುತನನು ಸಮಾಧಿಯಲಿ ೪೩

ನೂಕಿದನು ತದ್ದೇಹವನು ವಿ
ಪ್ರಾಕೃತಿಯನನುಕರಿಸಿ ಕೃಷ್ಣಪ
ದೈಕಭಕ್ತಿಯಲೈದಿದನು ತಜ್ಜನ್ಮದಲಿ ನಿಜವ
ಲೋಕನಾಥಾಧೀಶ್ವರನು ನಿ
ರ್ವ್ಯಾಕುಲತೆಯಲಿ ಬಿಲಮುಖವ ಕರು
ಣಾಕರನು ಹೊಱವಂಟು ಮಧುರಾಪುರಕೆ ನಡೆತಂದ ೪೪

ಬಂದು ಯವನೇಶ್ವರನ ಬಲವನು
ಕೊಂದು ತದ್ಧನ ಕೋಶ ವಾಹನ
ವೃಂದವನು ತಲೆಯೆತ್ತು ಬಂಡಿಗಳಿಂದ ಹೇಱಿಸಿದ
ಮುಂದೆ ಬರಲಾ ದ್ವಾರಕಿಗೆ ಗೋ
ವಿಂದ ರಾಮರು ಮಾರ್ಗದಲಿ ಮಗ
ಧೇಂದ್ರನಡ್ಡವಿಸಿದನು ಬಹಳ ನೃಪಾಲಬಲಸಹಿತ ೪೫

ಹರಹರಾಯುಧವಿಲ್ಲ ರಥವಿ
ಲ್ಲುರು ಪರಿಚ್ಛದವಿಲ್ಲ ಬಲವಿ
ಲ್ಲರರೆ ಕಳವರದೆಂತು ಮಾಗಧ ಸೈನ್ಯಸಾಗರವ
ಸರಸಿಜೋದ್ಭವೆಯೋಲೆವಾಗ್ಯ
ಕ್ಕಿರದೆ ಕಡೆಯಾಯ್ತೆಂದೆನುತ್ತಂ
ಬರದಲಮರರು ಬಾಯ ಬಿಡೆ ಮುತ್ತಿದನು ಮಗಧೇಶ ೪೬

ಮೊಹರಿಸಿದಿಪ್ಪತ್ತುಮೂಱ
ಕ್ಷೋಹಿಣಿಯ ಬಲದಿಂದ ಮಕರ
ವ್ಯೂಹವನು ರಚಿಸಿದನು ಗಜ ರಥ ತುರಗ ಪತ್ತಿಗಳ
ಮೋಹಿ ದೆಸೆದೆಸೆಗಳಲಿ ಮಾಯಾ
ದೇಹಿಗಳೆನಿಪ್ಪಾ ಮುಕುಂದ ಮ
ಹಾಹಿಪತಿಗಳನೊಳಗುಮಾಡಿದನೊಂದು ನಿಮಿಷದಲಿ ೪೭

ಹೆಗ್ಗಡಲ ತೆರೆಯಂತೆ ಮೊಳಗುವ
ಲಗ್ಗೆಗಳಲೋರಂತೆ ಸುಭಟರ
ಬಗ್ಗಣೆಯ ಬಲುಭುಜರ ಘನತರ ಸಿಂಹನಾದದಲಿ
ತಗ್ಗಿದುದು ಧರೆ ರಸೆಗೆ ಹೆಡೆಗಳು
ನೆಗ್ಗಿದವು ಫಣಿಪತಿಗೆ ಕೆಡೆದವು
ದಿಗ್ಗಜಂಗಳೆನಲ್ಕೆ ಮೆಱೆದುದು ಸಮರ ಸೌರಂಭ ೪೮

ಹಿಂದಣಪಜಯದಂಧಕಾರ
ಕ್ಕಿಂದಿದೇ ರವಿಯುದಯ ಜಯಸಿರಿ
ಗಿಂದು ಮದುವೆಯ ಲಗ್ನವೀ ಮಗಧೇಶ್ವರನ ಭುಜಕೆ
ಎಂದು ಗಜರಥಪಾಯದಳ ಹಯ
ವೃಂದದಲಿ ಮುಸುಕಿದರು ರಾಮ ಮು
ಕುಂದರನು ಮುಂಕೊಂಡು ಮೂದಲಿಸುತ್ತ ನೃಪಕಟಕ ೪೯

ನೋಡಿದರು ಪರಬಲದ ಸುಭಟರ
ಮೂಡಿಗೆಯ ಮುತ್ತಿಗೆಯನಿಂದಿನ
ಲೋಡಿ ಕೊಡುವೆವು ಜಯವನೀತಂಗೀ ನೃಪಾಲರಿಗೆ
ಝಾಡಿಸುವೆನೀ ಬಲವನಿದನೆಂ
ದಾಡಿ ತಮ್ಮೊಳು ಮಂತ್ರನಿಶ್ಚಯ
ಮಾಡಿದರು ನಿತ್ಯಾತ್ಮ ರಾಮರು ರಣಪಲಾಯನಕೆ ೫೦

ಐವತ್ತೆರಡನೆಯ ಸಂಧಿ ಮುಗಿಯಿತು.

## ಐವತ್ತಮೂರನೆಯ ಸಂಧಿ

ರಾಯಬಲವನು ಸದೆದು ಬಲ ನಾ
ರಾಯಣರು ಗೋಮಂತದಿಂದ ನಿ
ರಾಯುಧರು ನಡೆತಂದು ಹೊಕ್ಕರು ದ್ವಾರಕಾಪುರಿಯ

ಚಿತ್ರವಿಸು ಭೂಪಾಲ ಮಗಧ ನೃ
ಪೋತ್ತಮನೊ ಕಲ್ಪಾಂತ ರುದ್ರನೊ
ಮೃತ್ಯುವಿನ ಪರಿವಾರವೋ ನೃಪ ಬಲ ಮಹಾಂಬುಧಿಯೊ
ಯೆತ್ತ ನೋಡಿದಡಗಿವ ಸಿಂಧದ
ಸತ್ತಿಗೆಯ ಚಾಮರದ ರಾಯರ
ಮೊತ್ತವಿಭರಥ ವಾಜಿ ಪತ್ತಿ ಪ್ರಕರಮಯವಾಯ್ತು ೧

ಸಿಕ್ಕಿದರು ಸಿಕ್ಕಿದರು ಕವಿ ಕವಿ
ಕಕ್ಕುಲಿತೆಯಿನ್ನೇಕೆ ರಣದಲಿ
ಹೊಕ್ಕೆಸುವಡಂಬಿಲ್ಲ ಕೈದುಗಳಿಲ್ಲ ರಥವಿಲ್ಲ
ಇಕ್ಕೆಲಕೆ ಭಟರಿಲ್ಲ ವಿಧಿ ತಂ
ದಿಕ್ಕಿತೀ ತಮಗಿಂದು ಜಯವಧು
ವೊಕ್ಕತನವಿಂದಾಯ್ತೆನುತ್ತೊಱಲಿದುದು ನೃಪಕಟಕ ೨

ಕಂಡು ಕವಿವ ಚತುರ್ಬಲದ ಭೂ
ಮಂಡಲಾಧೀಶ್ವರರ ಪಡೆಯನು
ಪುಂಡರೀಕದಳಾಕ್ಷ ರಾಮರು ನಿಮಿಷ ಕೈಮಱೆದು
ಗಂಡುಗಲಿಗಳು ಪಳಹಳಿಸಿ ಭಯ
ಗೊಂಡವೋಲನುಕರಿಸಿದರು ದಿಗು
ಮಂಡಲವನೀಕ್ಷಿಸುತ ಮಾಯಾ ಮರ್ತ್ಯಭಾವನೆಯ ೩

ಮುಱಿದು ಹೆಮ್ಮರಗಳನು ಪ್ರಳಯದ
ಬಱಸಿಡಿಲ ಸಂಕುಳದ ಘಾಯವ
ಮೆಱೆಸಿದರು ಮುಂಕೊಂಡು ಮೋಹರಿಸುವ ಮಹಾಬಲವ
ಎಱಗಿದರು ಗಜ ವಾಜಿ ರಥಗಳ
ನುಱುವ ಜೋದರ ರಾವುತರ ತನು ತಾ
ತ್ರಱಗೆಲೆಯವೋಲಾಗಲೊಂದೇ ನಿಮಿಷ ಮಾತ್ರದಲಿ ೪

ಒಂದು ದೆಸೆಯಲಿ ಮೊಳಗಿದನು ನೃಪ
ವೃಂದದೊಡನೆ ಹಲಾಯುಧನು ಗಿರಿ
ಯಂದದಲಿ ಮುಷ್ಟಿ ಪ್ರಹಾರಂಗಳಲಿ ಸಿಡಿಲಂತೆ
ಸಂದ ಗಜ ರಥ ತುರಗ ಪತ್ತಿಗ
ಳಂದಗೆಡಲು ಮಹಾ ಪ್ರಳಯವಾ
ಯ್ತೆಂದೆ ನಿಮಿಷಾರ್ಧಾರ್ಧಮಾತ್ರದಲಖಿಳ ಪರಬಲಕೆ ೫

ಮುಷ್ಟಿಹತಿಯಲಿ ವೈರಿ ಬಲ ಹುಡಿ
ಹಿಟ್ಟೆನಿಸಿ ಹಾಱಿದುದು ಹರ ಹರ
ಮುಷ್ಟಿಕಾರಿಯ ಮುಂದೆ ಕರಿ ರಥ ತುರಗ ಪತ್ತಿಗಳು
ಧಟ್ಟುಗೆಡೆದಜಿಗಿಜಿಯೆನಿಸಿ ಕಡ
ಲಿಟ್ಟು ಹರಿವರುಣಾಂಬುಗಳ ಕುಣಿ
ವಟ್ಟೆಗಳಲತಿರೌದ್ರವೆನೆ ರಂಜಿಸಿತು ರಣಭೂಮಿ ೬

ಕಿತ್ತು ಹೊಡೆದಡೆ ಮರನ ಹತಿಯಲಿ
ಹತ್ತಿದುದು ರಥ ಸೂತ ವಾಜಿಗ
ಳೊತ್ತರಿಸಿ ಕಡಿಖಂಡವಾಗಿರೆ ನೆಲದಲವನಿಯನು
ಹೊತ್ತ ಗಜ ನಾಗೇಂದ್ರ ಕಮಠರ
ಮಸ್ತಕಂಗಳು ಬಿರಿಯೆ ಮುರರಿಪು
ವೃತ್ಯುವಾದನು ಬಹಳ ಮಾಗಧ ಸೈನ್ಯಸಾಗರಕೆ ೭

ಚಲ್ಲಿದುದು ನೃಪಕಟಕ ಲಕ್ಷ್ಮೀ
ವಲ್ಲಭನ ಹೆಮ್ಮರದ ಗಾಯದ
ಘಲ್ಲಣೆಗೆ ಬಲಭದ್ರನುನ್ನತ ಮುಷ್ಟಿಹತಿಗಳಲಿ
ಬಿಲ್ಲ ಬಿಸುಟರು ಸುಭಟರಪ್ರತಿ
ಮಲ್ಲರಾ ವ್ಯೂಹವನು ಮುಱಿದೆದೆ
ದಲ್ಲಣವ ಮಾಡಿದರು ಮಗಧ ನೃಪಾಲಮುಖ್ಯರಿಗೆ ೮

ಅತ್ತಲನ್ನೆಗ ಮಗಧ ನೃಪ ಬೆಂ
ಬತ್ತಿ ಯಾದವ ಸುಭಟರನು ಕೆಡೆ
ಕುತ್ತಿ ಕೊಂಡನು ಮಾರ್ಗದಲಿ ಯವನೇಶ್ವರನ ಧನವ
ಎತ್ತು ಭಂಡಿ ಭಟಾಳಿ ಸಹಿತರಿ
ಮತ್ತಗಜ ಪಂಚಾಸ್ಯನಲ್ಲಿಂ
ದೊತ್ತರಿಸಿ ಹಾಯ್ಸಿದನು ಹರಿ ಬಲಭದ್ರರಭಿಮುಖಕೆ ೯

ಬರವ ಕಾಣುತ ಕಾಣುತವೆ ಸಂ
ಕರುಷಣಾಚ್ಯುತರಸ್ತ್ರಧಾರಾ
ವರುಷದಲಿ ತನು ಮುಳುಗಿ ಭಯಗೊಂಡಂತೆ ಹಳಹಳಿಸಿ
ನರರ ಲೀಲಾ ನಾಟಕವನನು
ಕರಿಸಿ ಕೋಮಲ ಚಾರು ಚರಣಾಂ
ಬುರುಹ ಯುಗಳದಲೋಡಿದರು ಕಾಲೂಱಿ ಕಲುನೆಲಕೆ ೧೦

ಓಡಿದರು ಲೋಕೈಕ ವೀರರು
ನೋಡಿ ನಕ್ಕನು ಮಗಧನೃಪ ನೀ
ನೋಡಿದರೆ ತಾ ಬಿಡುವೆನೇ ಕಲ್ಪಾಂತಭೈರವನ
ಬೇಡಿಕೋ ಬೆಂಬಲಕೆ ಶೇಷನ
ದಾಡೆಯನು ಮಱೆಹೊಗು ಕೃತಾಂತನ
ಬೀಡನಱಿಯಾ ತನ್ನ ಬಲವನೆನುತ್ತ ಬೊಬ್ಬಿಱಿದ ೧೧

ಕಾಲಯವನನೆ ಕಲಿಸಿದವನೀ
ಕಾಲ ಜೇಗವನಹುದು ಮತ್ತೀ
ನಾಳುಗಳು ಬಲ್ಲಿದರಲ್ಲೈ ನೀವೀ ಪಲಾಯನಕೆ
ಮೇಲು ಜಗವನು ಮೇಣವನಿ ಪಾ
ತಾಳವನು ಹೊಗಲಿನ್ನು ಬಿಡುವೆನೆ
ಕಾಲನಲ್ಲಾ ನಿನ್ನ ಭಾಗಕ್ಕೆಂದನವನೀಶ ೧೨

ಎನುತ ಬೆನ್ನಲಿ ಮೂದಲಿಸುತಾ
ಜನಪನೈತರಲಖಿಳ ಸೇನಾ
ವನಧಿಯಲಿ ನೃಪನಿಕರ ಬೊಬ್ಬಿಡೆ ಬಹಳ ಹರುಷದಲಿ
ದನುಜಹರ ಬಲರಾ ಭಗೀರಥ
ರೆನೆ ಮಹಾ ನೃಪಕಟಕ ಗಂಗಾ
ಘನತರಂಗದ ಕಡಲ ಕಳಕಳದಂತೆ ರಂಜಿಸಿತು ೧೩

ಕಳಿದು ದುಸ್ತರ ದುರ್ಗಮಾರ್ಗಂ
ಗಳನು ಗಿರಿ ನದಿ ಕಾನನ ಪುರಾ
ವಳಿಗಳನು ಬರಬರಲು ಗೋಮಂತಾದ್ರಿಯುಪವನಕೆ
ಬಲ ಮುರಾಂತಕರಹಿತರಟ್ಟಲು
ಬಳಲಿದರು ತನ್ನೊಡೆಯರೆನುತಾ
ನಳಿನಸಖನಡಹಾಯ್ಸಿದನು ಕತ್ತಲೆಯ ಪಡಿಬಲವ ೧೪

ಹೊಕ್ಕರಾ ಕರವೀರಪುರವನು
ಚಕ್ರಧರ ಹಲಧರರು ಕತ್ತಲೆ
ಸಿಕ್ಕಿಸಿತು ಸಂಸಾರ ತಿಮಿರದವೋಲು ಪರಬಲವ
ಕಕ್ಕುಲಿತೆ ಮೂವತ್ತು ಘಳಿಗೆಯ
ಲೆಕ್ಕಿಸುವಡಾಯುಷ್ಯವೆನುತೊಳ
ಗಿಕ್ಕಿಬಿಟ್ಟುದು ರಾಯದಳ ಗೋಮಂತವನು ಬಳಸಿ ೧೫

ಮಗಳಿ ಬೆಳಗಾಯ್ತಾ ಮುಕುಂದನ
ಚರಣವನು ತೋಱಿಸಲು ನೆಱೆಯದು
ನಿರುತವೀ ಲೌಕಿಕ ವಿವೇಕ ಜ್ಞಾನದಂದದಲಿ
ಗಿರಿಯ ತುದಿಗೇಱಿದರು ಜಗದೀ
ಶ್ವರರು ಬಳಿಕಾ ಮಗಧ ಪೃಥ್ವೀ
ಶ್ವರನ ಬಲ ಹೊಕ್ಕಱಸಿದರು ತದ್ಗಿರಿ ವನಂಗಳಲಿ ೧೬

ಅಱಸಿ ತೊಳಲಿದುದೆಂಟು ದೆಸೆಯಲಿ
ವರ ನದೀ ಕಾನನ ಗುಹಾ ಗ
ಹ್ವರಗಳಲಿ ಗೋವಿಂದ ರಾಮರನೈದೆ ನೃಪಕಟಕ
ಪರಿಪರಿಯ ಬಹು ಶಬ್ದ ಶಾಸ್ತ್ರಾಂ
ತರಗಳಲಿ ನೆಱೆ ತೊಳಲುವಂತಃ
ಕರಣಶುದ್ಧಿವಿಹೀನ ವಿಷಯುವಿಮೂಢರಂದದಲಿ ೧೭

ಮರಳಿ ಮರಳಿ ಮುಕುಂದನಿದ್ದಾ
ಗಿರಿಯ ಶೃಂಗವನುಳಿದು ವಿಪಿನಾಂ
ತರದೊಳಗೆ ಹೊಕ್ಕಱಸಿ ಕಾಣದೆ ಮರಳಿದುದು ಕಟಕ
ನಿರುಪಮಾತ್ಮನ ತೋರ್ಪ ನಿಗಮದ
ಶಿರವನುಳಿದಿತರರದಲಿ ವಿಶ್ವಂ
ಭರನ ನೆಲೆಯನು ಕಾಣದಳಲುವ ಕರ್ಮಠರತರಂತೆ ೧೮

ಹೊಂದಿದರು ಹರಿ ರಾಮರೆನುತೈ
ತಂದು ಕಾಣದೆ ಮಗಧ ಭೂಪತಿ
ಗಂದು ಬಿನ್ನವಿಸಲು ಮಹಾನೃಪವೃಂದವನು ನೋಡಿ
ಎಂದನಾ ಕುಹಕಿಗಳು ಗಿರಿ ವನ
ಕಂಧರಂಗಳಲಡಗಿಕೊಂಡಿಹ
ರಿಂದು ಕಡಿದೇಱುವುದು ಗಿರಿ ಕಾನನವನಿದನೆಂದ ೧೯

ಎಲೆ ಕಳಿಂಗ ಜಯದ್ರಥರೆಲೆ
ಯೆಲೆ ಸುದಕ್ಷಿಣ ಸೋಮದತ್ತಕ
ಯೆಲೆ ವಿರಾಟದ್ರುಪದ ಶಕುನಿ ಪ್ರಮುಖಮುಖ್ಯರಿರೆ
ತೊಲಗದೇಱಿ ಮಹಾದ್ರಿಯನು ಬಲು
ಹಳುವವನು ಕಡಿ ಕಡಿದು ಮೂಡಣ
ವಳಯದಲಿ ಶೋಧಿಸಿ ಮಹಾಕಾನನವನಿದನೆಂದ ೨೦

ದ್ರುಪದ ದಮಘೋಷಕನು ಲಕ್ಷ್ಮಕ
ವಿಪುಳಬಲ ವಿಂದಾನುವಿಂದರು
ನೃಪ ಯುಧಾಮನ್ಯು ಕ್ಷಿತೀಶ್ವರ ಪೌಂಡ್ರಕಾದ್ಯರಿರ
ನೃಪತಿ ಬಾಹ್ಲಿಕ ಸಾಲ್ವರಿರ ಗಿರಿ
ವಿಪಿನವನು ಕಡಿಕಡಿದು ನೀವಿಂ
ದಪದಶರನಟಿಸುವುದು ತೆಂಕಣ ಭಾಗದೊಳಗೆಂದ ೨೧

ವೀರನೃಪ ಭೂರಿಶ್ರವನನತಿ
ವೀರಭಂಜನ ವಂಗನೃಪ ಸೌ
ವೀರಪತಿಗಳನಾ ಬೃಹದ್ರಥ ಮಿಗೆ ಶತಧ್ವಜನ
ಭೂರಿಬಲಸಹಿತಟಿಸ ಹೇಳಿದ
ನಾರಿ ಪಡುವಣದೆಸೆಗೆ ಮಾಗಧ
ಭೂರಮಣನಾಟೋಪ ಮಿಗಲಾಹವದ ಪಟುಭಟರ ೨೨

ಆಕುಣಿಂದ ತ್ರಿಗರ್ತ ಭೀಷ್ಮಕ
ಕೇಕಯರ ಶಿಶುಪಾಲಮುಖ್ಯರ
ನೇಕಬಲದಲಿ ಬಹಳ ಕೋಪಾಟೋಪದಲಿ ಜಡಿದು
ಆ ಕುಬೇರನ ದೆಸೆಯಲಾ ಜಗ
ದೇಕವೀರನು ನಡೆದು ತಾನೇ
ನೂಕಿ ಹತ್ತಿದನವನಿ ಕುಸಿಯಲು ಮಗಧ ಭೂಪಾಲ ೨೩

ಏಟಿ ಕಡಿದರು ಕೊಡಲಿಹಾವಳಿ
ಗಾಟಿರದ್ರಿಯನೆಂಟುದಿಕ್ಕಿನ
ಲೋಟುಗುಡಿಸುತ್ತಿರ್ದುದಡವಿ ಮಹೀಶರುರವಣೆಗೆ
ಜಾಟಿದವು ತೆಂಗುಗಳು ಕೆಡೆದವು
ನೇಟಲುಗಳಾ ಪನಸ ಘನ ಖ
ರ್ಜೂರ ಪೂಗಾವಳಿಗಳೊಟಗಿದವೊಂದು ನಿಮಿಷದಲಿ ೨೪

ಬೀಳುತಿರ್ದವು ಬಹಳ ರಭಸದ
ಲೀಳೆಗಳು ಫಲಭಾರದಲಿ ಕಿ
ತ್ರೀಳೆ ಬಾಳೆಯ ವನಗಳಕ್ಕಾಡಿದುವು ಗೊನೆಸಹಿತ
ಮೇಲೆ ಮುಗಿಲನು ತುಡುಕುವುನ್ನತ
ತಾಳವನ ದಾಳಿಂಬವನ ಶ್ರೀ
ತಾಳವನವೆಂಬಿವು ನಿರಾಶ್ರಯವಾಯ್ತು ನಿಮಿಷದಲಿ ೨೫

ಹಿಂಗದೇಟಿದರಾ ಪ್ರವರ್ಷಣ
ಶೃಂಗವನು ಕಡಿ ಕಡಿದರಸ ಯದು
ಪುಂಗವರ ನೆಲೆಗಾಣದಪಗತರಾದರೆಂದೆನುತ
ತುಂಗ ಗಿರಿಗಹ್ವರಗಳೊಳಗರಿ
ಭಂಗರಿದ್ದರೆ ಮಾಳ್ಪೆವೀಗಳೆ
ಮಂಗಳವನೆಂದೊಡ್ಡಿ ಸುಟ್ಟರು ಬೊಬ್ಬಿಟಿದು ಗಿರಿಯ ೨೬

ಬೆಂದವಗಣಿತ ಖಗ ಮೃಗಂಗಳು
ಹೊಂದಿದವು ವನ ಜಲಚರಂಗಳು
ಕಂದಿದವು ದಶ ದಿಕ್ಕುಗಳು ಕಜ್ಜೊಗೆಯ ಹೊಯ್ಲಿನಲಿ
ಮುಂದುಗೆಟ್ಟವು ರವಿಯ ರಥಹಯ
ವೃಂದವಂಬರಚಾರಿಗಳು ಮನ
ಗುಂದಿದರು ನಮಗಾರು ಗತಿಯಿನ್ನೆನುತ ತಲ್ಲಣಿಸಿ ೨೭

ಹರನ ಹಣೆಗಣ್ಣಿಚ್ಚು ಭುವನವ
ನುರುಹಲುದ್ಯೋಗಿಸಿತೊ ಸಲೆ ಸಂ
ಹರಣಸಮಯವೊ ಜಗಕೆ ಜೋಯಿಸರಟೀತ ಕಾಲಾಯ್ತೊ
ಹರಿಬಲರಿಗಿನ್ನಾವ ವಿಧಿಯೋ
ಗಿರಿನಿವಾಸಿಗಳಿಂಗೆ ಝುಳ ಹೊ
ಯ್ದುರಿವುತಿವೆ ತಾರಕೆಗಳೆಂದಳಲಿದುದು ಸುರನಿಕರ ೨೮

ಸಂಕಲೆಯ ಕಡಿ ವಿಲಯ ಮೇಘದ
ಬಿಂಕ ಬಿರಿಯಲಿ ನಂದಿಸಲಿ ತಾ
ಬೆಂಕಿಯನು ಬೇಗದಲಿ ತೆಗೆ ತೆಗೆ ರಾಮ ಮಾಧವರ
ಅಂಕ ನಮ್ಮದೆನುತ್ತ ನಭದಲಿ
ಪಂಕಜಾಸನನಮರರಿಂಗೆನೆ
ಭೋಂಕೆನಲು ಧಾವರಿಸಿತುರಿ ಬ್ರಹ್ಮಾಂಡ ಮಂಡಲವ ೨೯

ಆ ಮಹಾ ಗಿರಿದಾಹ ದುರ್ಧರ
ಭೂಮಕೇತು ಜ್ವಾಲೆಯಲಿ ಹರಿ
ರಾಮರಾಡುತ ಕಂದಮೂಲ ಫಲಾಶನಂಗಳಲಿ
ಕ್ಷೇಮ ಮೂರ್ತಿಗಳಿರ್ದರಾತ್ಮಾ
ರಾಮ ಯೋಗಿಗಳಂತೆ ತಾಪ
ಸ್ತೋಮದೂರರು ಕುಧರವರಕೂಟಸ್ಥರೆಂದೆನಿಸಿ ೩೦

ಬಳಿಕ ಗಿರಿವರ ದಾಹ ಧೂಮ
ಜ್ವಳನ ತೀವ್ರ ಜ್ವಾಲೆಯಲಿ ವಸ
ವಳಿದವೋಲನುಕರಿಸಿ ಮತ್ರ್ಯಾಕೃತಿ ವಿಡಂಬನವ
ಘಳಿಲನದ್ರಿಯ ಮಸ್ತಕವನೊದೆ
ದಿಳೆಗೆ ಹಾಯ್ದರು ಲಘಿಮೆಯಲಿ ಹರಿ
ಬಲರು ನೆತ್ತಿಯನೊದೆದು ಗುಣಯೋಗಿಗಳು ನಡೆವಂತೆ ೩೧

ಇಂದಿರಾಪತಿ ರಾಮರಾ ಹ
ನ್ನೊಂದು ಯೋಜನದದ್ರಿಮಸ್ತಕ
ದಿಂದ ಧುಮ್ಮಿಕ್ಕಿದರು ಬಳಿಕಾ ದ್ವಾರಕಾಪುರಕೆ
ಬಂದರರಿಬಲವಟಿಯದಂದದ
ಲಂದು ಪುರಜನವಿದಿರುಗೊಳಲಾ
ನಂದದಲಿ ಬಹು ಶಂಖ ದುಂದುಭಿ ವಾದ್ಯರವಗಳಲಿ ೩೨

ಅತ್ತಲಾ ಮಾಗಧ ಮಹೀಪತಿ
ಸುತ್ತಿ ಮುತ್ತಿ ಮಹಾದ್ರಿಯನು ಕಡಿ
ದೊತ್ತರಿಸಿ ಕವಿದಳಿಸಿ ಕಾಣದೆ ಸುಟ್ಟು ಗಿರಿ ವನವ
ಸತ್ತರಚ್ಯುತ ರಾಮರೆಂದೇ
ಚಿತ್ತದಲಿ ನಿಶ್ಚೈಸಿ ರಾಯರ
ಮೊತ್ತ ಸಹಿತೈದಿದನು ಹರುಷದಲಂದು ನಿಜಪುರವ ೩೩

ಜನಪ ಕೇಳಾ ಮಗಧ ಮುಖ್ಯಾ
ವನಿಪರಿಗೆ ವಿಜಯವನು ಹ
ದಿನೆಂಟನೆಯ ಸಮರದಲಿತ್ತು ಭುವನಾಧೀಶ್ವರೇಶ್ವರರು
ಅನಿಮಿಷಾರಾಧಿತರು ಲೀಲಾ
ಮನುಜ ವಿಗ್ರಹರೆಸೆದರಾ ಸ
ಜ್ಜನವಿನುತ ನಿತ್ಯಾತ್ಮ ರಾಮರು ದ್ವಾರವತಿಯೊಳಗೆ ೩೪

ಐವತ್ತಮೂರನೆಯ ಸಂಧಿ ಮುಗಿಯಿತು.

# ಐವತ್ತನಾಲ್ಕನೆಯ ಸಂಧಿ

ಹಂಸ ಡಿಬಿಕರು ಮಾಡಿದಧಿಕ ನೃ
ಶಂಸಕರ್ಮವನದನು ಕಂಸ
ಧ್ವಂಸನಲ್ಲಿಗೆ ಬಂದು ದೂಱಿದನಂದು ದೂರ್ವಾಸ

ದ್ವಾರಕಾಪುರವರದಲಂದಾ
ಶ್ರೀರಮಣ ಸಂಕರುಷಣರು ಯದು
ವೀರ ಸಭೆಯೊಳಗೊಂದು ದಿನ ಭೂಪಾಲಮಧ್ಯದಲಿ
ಭೂರಿ ವಿಭವದಲೆಸೆದಿರಲು ಮುನಿ
ವೀರ ಶಿಷ್ಯ ಸಹಸ್ರದಲಿ ದು
ರ್ವಾರ ರೋಷೋಜ್ವಲನೆನಿಸ ದುರ್ವಾಸನೈತಂದ ೧

ಹಱಿದ ಕೃಷ್ಣಾಜಿನದ ಹೊಱೆಗಳ
ಮುಱಿದು ಕಟ್ಟಿದ ದಂಡಗಳ ಸೀ
ಕಱಿಗಳೆದ ಕೌಪೀನ ವಸನದ ಸೀಳಿದುಡಿಗೆಗಳ
ಹಱಿದ ಜಪಮಣಿ ಮಾಲೆಗಳ ವಿ
ಸ್ತರದ ಸುಡಿಗೆಯ ಸೀದ ದರ್ಭಾಂ
ಕುರದೊಡೆದು ನೆಗ್ಗಿದ ಕಮಂಡಲುಗಳಲಿ ನಡೆತಂದ ೨

ಉಡಿದ ಕೊಡೆ ಪಾದುಕೆಗಳಲಿ ಬರ
ಲೆಡಬಲದಲುರವಣಿಸಿ ಶಿಷ್ಯರ
ಗಡಣದೈನೂರ್ವರಲಿ ಬೆವರುವ ಸರ್ವಗಾತ್ರದಲಿ
ಪೊಡವಿಯಲಿ ಕಾಲಿಡುತ ಮೆಟ್ಟದ
ಹುಡಿ ನೆನೆಯೆ ಕಡು ಬಿಸಿಲ ತಾಪದ
ನಡುಹಗಲು ನಡೆತಂದನಾ ಮುನಿ ಮುರಹರನ ಸಭೆಗೆ ೩

ಮಿಡುಕುವಧರದ ಬಿಟ್ಟ ಕಂಗಳ
ಕಡುಗುದಿಯ ಸುಯ್ಲುಗಳ ತೊಳಗುವ
ಬಿಡುಜಡೆಯ ಬೀಸುವ ಕರಾಗ್ರದ ಪತ್ರಪುಟಕೆಗಳ
ಒಡಲ ದಗೆಯನು ತೋಱುತಭಿನವ
ಮೃಡನವೊಲು ಓಲಗಕೆ ಶಿಷ್ಯರ
ಗಡಣದಲಿ ನಡೆತಂದು ಕಂಡನು ಮುನಿಪನಚ್ಯುತನ ೪

ಉರಿಮೊಗದ ಮುನಿವೀರನೈತರೆ
ಬರವ ಕಾಣುತ ದೂರದಿಂದಾ
ನೆರವಿ ಸಹಿತಿದಿರೆದ್ದು ಸುರಮುನಿ ವಂದ್ಯನಭಿನಮಿಸಿ
ಕರವ ಮುಗಿದಾಸನವನಿತ್ತುಪ
ಚರಿಸಿದನು ಮುನಿ ನಿಕರವನು ಸ
ತ್ಕರಿಸಿ ಪಾದ್ಯಾರ್ಘ್ಯಾಸನಾದಿಗಳಿಂದ ಮನ್ನಿಸಿದ ೫

ತೊಳೆದು ಕರಚರಣಂಗಳನು ಶೀ
ತಳವೆನಿಪ ಪರಿಮಳಿತ ಜಲದಲಿ
ಬಳಲಿಕೆಯನಾಱಿಸುತ ತಾಳದ ಬಿಜ್ಜಣಿಗೆಗಳಲಿ
ಒಲಿದು ತಾನೇ ಬೀಸಿದನು ಮುನಿ
ಕುಲವನಾ ದುರ್ವಾಸನಂತ
ರ್ಜ್ವಲಿತ ರೋಷಾಗ್ನಿಯನು ನಂದಿಸಿದನು ನಯೋಕ್ತಿಯಲಿ ೬

ಹೇಳಿದೇನೆಂತಾಯ್ತು ಮುನಿಶಾ
ರ್ದೂಲ ನಿಮ್ಮಡಿಗಳಿಗೆ ಕೋಪ ಭ
ಡಾಳಿಸಿತ್ತಾರಿಂದ ಪರಿಭವವಿದು ಭವತ್ಪದಕೆ
ಮೇಳವಿಸಿತಚ್ಚರಿಯಲಾ ದು
ಶ್ಶೀಲರಾರೋ ನರಕಕೂಪದ
ಲಾಳಲುದ್ಯೋಗಿಸಿದರೆಂದಸುರಾರಿ ಬಿಸುಸುಯ್ದ ೭

ಸುರರು ಸಹಿತಾವನ ಸರೋಷ
ಸ್ಫುರಿತ ವದನಭ್ರೂವಿಭಂಗವ
ಸಿರದೆ ಕಂಡಂಜುವರು ಭಯದಲಿ ಶಾಪಶಂಕೆಯಲಿ
ನರರಿದೆಂತೋ ನೆಱೆ ವಿರೋಧಾ
ಚರಣೆಯಲಿ ಜೀವಿಸುವರೆಂದಾ
ಮುರಹರನು ಕೈಮುಗಿದು ಮಧುರೋಕ್ತಿಯಲಿ ಮನ್ನಿಸಿದ ೮

ಅಸುರನೋ ಸುರನೋ ಮಹೇಂದ್ರನೊ
ವಸುಮತೀಶನೊ ವಾಸುಕಿಯೊ ದು
ರ್ವ್ಯಸನವನು ಮಾಡಿದನದಾವನೊ ಮೂಱು ಲೋಕದಲಿ
ಅಸುವ ಕೊಂಬೆನು ಕೊಂಬೆನಾತನ
ಬೆಸಸುವುದು ತನಗೆಂದು ಕೈಮುಗಿ
ದಸುರರಿಪು ಪಾದವನು ಮುಟ್ಟಿದನಾ ಮುನೀಶ್ವರನ ೯

ಕಾಳುರಿಯ ಕೋಟರದ ತರು ಮಳೆ
ಗಾಲವನು ಕಂಡಂತೆ ಲಕ್ಷ್ಮೀ
ಲೋಲನಮೃತೋಕ್ತಿಯನು ಕೇಳುತ್ತಾ ಮುನಿಪನೆದೆಯ
ತೂಳುವಂತಸ್ತಾಪ ತಗ್ಗಿದು
ದಾಲಿಗಳ ಕೆಂಪಡಗಿ ರೋಷವ
ಬೀಳುಕೊಟ್ಟನು ನುಡಿದನವನತನಾಗಿ ಹರಿಪದಕೆ ೧೦

ಜಯ ನಮೋ ಭಾಗವತರಘಸಂ
ಕ್ಷಯನೆ ಜಯ ಜಯ ಚಕ್ರಪಾಣಿಯೆ
ಜಯ ಮಹಾವಿಷ್ಣುವೆ ನಮೋ ಭುವನೈಕಕಾರಣನೆ
ಜಯ ನಮೋ ಗರುಡಧ್ವಜನೆ ಜಯ
ಜಯ ನಮೋ ಗುಣನಿಧಿಯೆ ಭುವನ
ತ್ರಯಮಹೋದಯಮೂರ್ತಿ ಜಯಜಯಜಯ ನಮೋಯೆಂದ

ಅಱಿಯನೆಂದೆಲೆ ದೇವ ಹೇಳಿದೆ
ಬಱಿದೆ ಹುಸಿಯನು ಲೋಕಚೇಷ್ಟೆಯ
ನಱಿವರಾರಖಿಳಾತ್ಮಕನೆ ನೀನುಳಿಯೆ ಬೇಱಿದನು
ಅಱಿಯದಂತೀ ಮರ್ತ್ಯವೇಷದಿ
ಮೆಱೆವ ನಿನ್ನೊಂದಾಜ್ಞೆಯಲಿ ತಾ
ನಱುಪುವೆನು ಚಿತ್ತೈಸು ತನ್ನ ಪರಾಭವವನೆಂದ ೧೨

ಉತ್ತಮನೆ ಸಾಲ್ವಾವನೀಶರೊ
ಳತ್ಯಧಮರಾ ಬ್ರಹ್ಮದತ್ತನ
ಪುತ್ರರವಧರಿಸುವಡೆ ನಾಲ್ವರು ಧರ್ಮಕಂಟಕರು
ಮತ್ತೆ ಹಂಸನು ಡಿಬಿಕನುಲ್ಕಲ
ನುತ್ತಮೋತ್ತಮನಾ ಸುಪರ್ವನು
ವೃತ್ತಿಶಾವತವೆಂಬ ನಗರದಲೆಸವರವರೆಂದ ೧೩

ಅನಿಬರೊಳಗಗ್ಗಳೆಯರಿಬ್ಬರು
ಘನತರದ ಬಲವೀರ್ಯದಲಿ ಹಂ
ಸನು ಡಿಬಿಕರೆಂಬುವರು ವರ ಕೈಲಾಸವಾಸಿಯನು
ತನುನಿರೋಧನ ತಳೆದು ತಪದಲಿ
ಜನಪರೊಲಿಸಲು ಕಂಡು ಕರುಣಾ
ವನಧಿ ವ್ಯೈದೋಱಿದನು ಹನ್ನೆರಡಬ್ದ ದಂತ್ಯದಲಿ ೧೪

ಬೇಡಿ ವರವನೆನಲ್ಕೆ ತನುವನು
ನೀಡಿ ಪದದಲಿ ದಂಡದಂತಿರೆ
ಬೇಡಿದರು ಭೂತಂಗಳೆರಡನು ರಣಸುದುರ್ಮದರ
ನೋಡುವರೆ ರಣತೃಪ್ತರನು ನೆಱೆ
ರೂಢಿಗಧಿಕರನಧಿಕ ಬಲರನು
ಕೂಡೆ ಹಾಹಾ ಹೀಹಿಯೆಂಬರನಾಹವಾಗ್ರದಲಿ ೧೫

ಕೊಟ್ಟಡತಿಲೇಸೆನುತ ವರವನು
ದುಷ್ಟರಿಬ್ಬರು ಪಡೆದು ಬಂದರು
ಪಟ್ಟಣಕೆ ಪರಿತೋಷದಲಿ ಬಳಿಕಾ ಕುಮಾರರಿಗೆ
ಪಟ್ಟವನು ರಾಜ್ಯಕ್ಕೆ ದುರ್ಮತಿ
ಕಟ್ಟಿದನು ಪರಿವಾರ ಮಂತ್ರಿಗ
ಳಿಷ್ಟಜನಸಹಿತಿಬ್ಬರಿಂಗಾ ಬ್ರಹ್ಮದತ್ತನೃಪ ೧೬

ಗಾಳಿ ಬೆಂಬಲವಾಗಲುರಿಯ ಛ
ಢಾಳ ಘನವಹವೋಲು ವರ ಭೂ
ಪಾಲ ಪಟ್ಟವ ಧರಿಸಲಾಯ್ತತ್ಯಧಿಕತರ ಗರ್ವ
ಪಾಲಿಸಿದರವನಿಯನು ನೃಪಕುಲ
ಮೌಳಿಮಂಡಿತ ಚರಣರಾ ದು
ಶ್ಶೀಲನಿಧಿಗಳು ದುರ್ವಿನೀತರು ಪಾಪಚೇಷ್ಟಿತರು ೧೭

ಒಂದು ದಿನ ಬೇಟೆಗೆ ದುರಾತ್ಮರು
ಬಂದರೆಮ್ಮಾಶ್ರಮಕೆ ಮೃಗಕುಲ
ವೃಂದ ಮಾರಿಗಳಾಗಿ ಮೃಗಯಾವ್ಯಸನಲೋಲುಪರು
ಮಂದಮತಿಗಳು ಕಂಡರೀ ಮುನಿ
ವೃಂದವನು ಘನತರ ತಪೋವ್ರತ
ದಿಂದ ಕರುಷಿತರಾಗಿರಲು ನಗುತೆಂದರಿವರೊಡನೆ ೧೮

ಒಡಲ ದಂಡಿಸಿ ಬಱಿದೆ ದುಃಖಂ
ಬಡುವಿರೇತಕೆ ವಿಪ್ರಕುಲವೀ
ಕಡುನಿರೋಧಕ್ಕೆಂದು ಜನಿಸಿತೆ ಶಿವ ಮಹಾದೇವ
ತಡೆಯದೀಯಾಶ್ರಮವ ಬಿಟ್ಟೆ
ಮ್ಮೊಡನೆ ಬಂದರೆ ಕೊಡುವೆವೆವಿಶ್ರಾ
ಮಡದಿಯರನೇಕಕಟ ಬಳಲುವಿರೆಂದರಾ ಖಳರು ೧೯

ಮಾಡಿ ತಪವನು ಮತ್ತೆ ದೈವವ
ಬೇಡುವುದು ತಾನೇನು ನಾಕದ
ಜೋಡೆಯರಲ್ಲೈ ನಿಮಗೆ ಮಾಳ್ಪೆವು ನಿಜ ಮನೋರಥವ
ನಾಡು ಮೆಚ್ಚಲು ನಾವು ಮದುವೆಯ
ಮಾಡುವೆವು ಮೇಣಿಲ್ಲಿಯೇ ಕೈ
ಗೂಡಿಸುವೆವೇಳೇಳಿ ಯೆಂದರು ಕೈಗಳನು ಹಿಡಿದು ೨೦

ಏಳದಿದ್ದರೆ ಕೈವಿಡಿಸಿದರು
ಬಾಲೆಯರ ಕೈಯಿಂದ ತಮ್ಮಾಯ
ಮೇಲುದುವನುಡಲಿತ್ತು ಕೃಷ್ಣಾಜಿನಗಳನು ಹಱಿದು
ಸೀಳಿ ಕೌಪೀನವನು ದೋರದ
ನೂಲ ಹಱಿದಿಡಿಕಿದರು ದರ್ಭೆಯ
ಮೇಲೆ ತಂಬುಲವುಗುಳಿ ಬಿಸುಟರು ದುರ್ವಿದಗ್ಧೆಯರು ೨೧

ಕವಿಸಿದರು ನಾಯ್ಗಳನು ಹೋಮದ
ಭವನ ಮಂಟಪಗಳಲಿ ಮೆದ್ದರು
ಹವಿಗಳನು ಸವಿಯಾದವೆನುತೆಸೆನಗ್ನಿಹೋತ್ರದಲಿ
ಗವಲು ಮಸಗಲು ಸುಟ್ಟು ಮೃಗ ಮಾಂ
ಸವನು ಮುಱಿದರು ದಂಡುಗಳನೊಡೆ
ದವನಿಗೀಡಾಡಿದರು ಕರವತಿಗಳನು ಖಳರೆಂದ ೨೨

ಏನ ಹೇಳುವೆನವರ ಪಾಪ ವಿ
ಧಾನವನು ಸರ್ವಾತ್ಮಕನಲೈ
ನೀನು ದಿಟಕಿದನಱಿಯದವನೇ ತಮ್ಮ ಜಪತಪದ
ಹಾನಿಯನು ಹುರಿಗೊಳಿಸಿ ಹೋದರು
ಮಾನವೇಂದ್ರಾಪಶದರೆಮ್ಮಾ
ಹಾನಿ ವೃದ್ಧಿಗಳಾರವೆಂದನು ಮುನಿ ಮುರಾಂತಕಗೆ ೨೩

ಎಂದು ಮುನಿ ಮುಳಿದೊಡೆದ ಸೀಳಿದ
ಬೆಂದ ದಂಡ ಕಮಂಡಲಂಗಳ
ವೃಂದವನು ಕೃಷ್ಣಾಜಿನಾಚ್ಛಾದನದ ಹೊಱಿಗಳನು
ತಂದು ಶಿಷ್ಯರ ಕೈಯ್ಯಲಿದೆ ನೋ
ಡೆಂದು ತೋಱಿಸಿದನು ಸಭಾಗ್ರದ
ಲಂದು ನೋಡುವ ಜನನಿಕರ ಬೆಱಗಾಗಲೋಲಗದ ೨೪

ನೋಡಿ ಬಿಸುಸುಯ್ದುಸುರರಿಪು ತೂ
ಗಾಡಿ ಮಣಿಮಕುಟವನು ನುಡಿದನು
ಕೇಡನೇ ಸಿಕ್ಕೈಸಿದರು ಪಾಪಿಗಳು ತಮಗಿಂದು
ಆಡಲೇಕದನಾಹವದಲಾ
ನೋಡಿದಂದಿಂದಿತ್ತ ಕೇಡನು
ಹೂಡಿದರು ಸುರ ವಿಪ್ರ ಧರ್ಮಂಗಳಿಗೆ ನೃಪರೆಂದ ೨೫

ಸುತ್ತಿ ಗೋಮಂತವನುರಿಗೆ ಕೈ
ವರ್ತಿಸಿದಡಾನಂದೆ ಸಂದೆನು
ಮೃತ್ಯುವಿನ ವಶಕೆಂದು ನಿಶ್ಚಿಂತೆಯಲಿ ನೃಪನಿವಹ
ಮತ್ತರಾದರು ಪೈಮಱಿದು ದು
ರ್ವೃತ್ತತನದಲಿ ದೋಷವೆನಗದ
ಚಿತ್ತವಿಸಲಾಗದು ವಿಗತಕಿಲ್ಬಿಷರು ತಾವೆಂದ ೨೬

ಕ್ಷಮಿಸುವುದು ಮುನಿನಾಥ ತನ್ನ
ಕ್ರಮವನಿದನಾನಿರಲು ನಿರಹ
ಮ್ಮಮರಿಗಾಯ್ತೆ ವಿರೋಧ ಶಿವಶಿವ ಖಳರ ದೆಸೆಯಿಂದ
ಕುಮತಿಗಳು ತಮ್ಮಿಂದ ತಾಪಸ
ಗಮಿಸದಿಹರೇ ಸಜ್ಜನಾತಿ
ಕ್ರಮವಿದಾರಿಗೆ ಪಥ್ಯವೆಂದನು ಸುಯ್ದು ಮುರವೈರಿ ೨೭

ಇನ್ನು ಬದುಕಿದರಾದಡಹುದಾ
ಕುನ್ನಿಗಳು ದಿನವೆರಡು ಮೂಱಿನು
ಮನ್ನಿಪುದು ಪರಿಹರಿಸುವೆನು ಖಳಕುಲದಹಂಕೃತಿಯ
ಗನ್ನಗತಕದ ಮಾತಿದಲ್ಲೆಲೆ
ಧನ್ಯರರಸನೆ ನಿಮ್ಮಡಿಗಳಾ
ಣಿನ್ನು ನೋಡೆಂದಸುರರಿಪು ಸಂತವಿಸಿದನು ಮುನಿಯ ೨೮

ತರಿಸಿ ಹೊಸ ವಸ್ತ್ರಂಗಳನು ಹೊಸ
ಕರವತಿಗೆ ಕೃಷ್ಣಾಜಿನಂಗಳ
ನುರುಪರಿಚ್ಛದಗಳನು ಕೊಡಿಸಿದನಾ ಮುನಿವ್ರಜಕೆ
ನಿರುತ ಮಜ್ಜನ ಪಾನ ಭೋಜನ
ಪರಿಹೃತಶ್ರಮರಾಗಿ ರಾತ್ರಿಯ
ನುರುಳೆ ನೂಕಿದರದಱೊಳಗೆ ಮುನಿವರರು ಹರುಷದಲಿ ೨೯

ಮುನಿಯ ಕೋಪವ ಬಳಿದು ಮುರರಿಪು
ವನಧಿಗಿಡುಕಿದನೆನಲು ರವಿರಥ
ವನುಕರಿಸಿ ರೌದ್ರವನು ಹಾಯ್ದುದು ಪಶ್ಚಿಮಾಂಬುಧಿಗೆ
ತನಗೆ ತಾನೇ ಮತ್ತೆ ಮೂಡಣ
ವನಧಿಯಲಿ ಮೈದೋಱಿದನು ಮುನಿ
ಮನಕೆ ಹರುಷವನೀವವೋಲುದಯಾದ್ರಿಗೈತಂದು ೩೦

ನಿತ್ಯವಿಧಿಗಳನಂದು ಋಷಿಕುಲ
ವಿಸ್ತರಿಸಿ ಕವಿತರಲು ಮುರಹರ
ನಿತ್ತನೋಲಗವನು ಸುಧರ್ಮಾ ಸಭೆಯೊಳೊಲವಿನಲಿ
ಸುತ್ತಿ ಕುಳ್ಳಿರೆ ನೃಪಕುಮಾರರ
ಮೊತ್ತವಂಘ್ರಿಸರೋಜಪೀಠವ
ನುತ್ತಮೋತ್ತಮಕೀರ್ತಿ ಮೆಱಿದನು ವಿದಿತವಿಭವದಲಿ ೩೧

ಸದಮುಳರು ಕುಳ್ಳಿರಲು ಬಲವಂ
ಕದಲಿ ದೂರ್ವಾಸಾದ್ಯರೆಡವು
ಕದಲಿ ಸಾತ್ಯಕ್ಯುದ್ಧವಾಕ್ರೂರಾದಿ ಯಾದವರು
ಇದಿರಲಾ ವ್ರತಿನಿವಹವಿರಲ
ಗ್ಗದ ಹಲಾಯುಧ ಯಾದವೇಶ್ವರ
ರುದಿತತೇಜದಲೆಸೆಯಲೆಸೆದನು ದಾನವಧ್ವಂಸಿ ೩೨

ಸೂತ ಮಾಗಧ ವಂದಿಗಳ ಹಾ
ಸ್ಯಾತಿಶಯ ಕೋವಿದರ ನಾಟ್ಯ ಸು
ಗೀತ ವಿದ್ಯಾಪರಿಣತರ ಶಾಸ್ತ್ರಾಗಮಾನ್ವಿತರ
ಜೋತಿಷಜ್ಞರ ಬುಧರ ನೃಪಕುಲ
ನೀತಿವಿದರ ಸಮಸ್ತ ಸುಜನ
ವ್ರಾತದಲಿ ಭುವನಾಧಿಪತಿಯಾಸ್ಥಾನ ರಂಜಿಸಿತು ೩೩

ರಾಯರಧಿಕರ ರಾವುತರ ಬಲ
ನಾಯಕರ ನಾನಾವಿಧಾನ ವಿ
ಧಾಯಕರ ಸಾಮಂತ ಮಂಡಲಿಕರ ಮಹಾಭಟರ
ಪಾಯದಳ ಪರಿವಾರ ಜನ ಪರಿ
ಯಾಯದಿಂದೋಲಗಿಸುತಿರೆ ನಾ
ರಾಯಣನ ನರರಾಯತನ ರಂಜಿಸಿತು ಮೂಜಗಕೆ ೩೪

ಆರು ಬಣ್ಣಿಸಲಜೀವರದನಾ
ಶ್ರೀರಮಣನೋಲಗದ ಸಿರಿಯನು
ಮೇರೆಯನು ಮೀಱುತ್ತು ಭುವನ ಚತುರ್ದಶದ ಸಿರಿಯ
ಸಾರಸಂಗ್ರಹವಾಯ್ತು ಸೊಬಗಿನ
ವಾರಿಧಿಯ ಸೌಂದರ್ಯ ಪಾರಾ
ವಾರವೆನೆ ರಂಜಿಸಿತು ರಚನೆ ಮುಕುಂದನೋಲಗದ ೩೫

ವೀರರಸವಾರಿಧಿಯೊ ಘನ ಶೃಂ
ಗಾರರಸ ಸಾಗರವೊ ರೌದ್ರದ
ಸಾರಶರಧಿಯೊ ಅದುಭುತದ ಕಡುಗಡಲೊ ರಂಜಿಸುವ
ಭೂರಿ ಹಾಸ್ಯರಸೈಕ ಪಾರಾ
ವಾರವೋ ಹೇಳೆನಲು ಮಿಗೆ ದೈ
ತ್ಯಾರಿಯೋಲಗದೊಪ್ಪವನುವಾಯಿತ್ತು ಕವಿಮನಕೆ ೩೬

ಆ ಸಭಾಸಾಗರದಲೆಸೆವ ನೃ
ಪಾಸನದಲೊಪ್ಪಿರಲು ವಿವಿಧ ವಿ
ಳಾಸದಲಿ ವಿಶ್ವಾಧಿಪತಿ ಕುಳ್ಳಿರ್ದ ಸಮಯದಲಿ
ಭೂಸುರೋತ್ತಮನೊಬ್ಬನಾ ಲ
ಕ್ಷ್ಮೀಶನಂಘ್ರಿಸರೋಜ ದರುಶನ
ದಾಸೆ ಮಿಗಲೈತಂದನೆಂದಾ ದ್ವಾರಕಾಪುರಕೆ ೩೭

ಕಳೆದು ಕನಕದ್ವಾರ ಸಿಕರಂ
ಗಳನು ರತ್ನೋಜ್ವಲ ಕವಾಟಂ
ಗಳನು ವಿವಿಧ ವಿಚಿತ್ರ ಭವನಾವಳಿಯ ರಚನೆಗಳ
ಒಲಿದು ನೋಡುತ ಬಾಗಿಲವರಿ
ಕ್ಕೆಲದ ಪೊಡವಡಿಕೆಯನು ನೆಱೆ ಕೈ
ಕೊಳುತ ಕಮಲದಳಾಕ್ಷನೋಲಗದೆಡೆಗೆ ನಡೆತಂದ ೩೮

ಚಾರುವದನ ಸರೋಜ ಮಧುರ
ಸ್ಮೇರನಯನಾಪಾಂಗದಲಿ ಮುರ
ವೈರಿಯೋಲಗದೊಪ್ಪವನು ಕಾಣುತ್ತ ಕೈಮುಗಿದು
ದೂರದಿಂದವೆ ಪೊಡಮಡುತ ಲ
ಕ್ಷ್ಮೀರಮಣ ಜಯ ಜಯತು ಕರುಣಾ
ವಾರಿಧಿಯೆ ಜಯ ಜಯ ಯೆನುತ ವೈಯಿಕ್ಕುತೈತಂದ ೩೯

ಬಂದು ಕಂಡನು ಬಹಳ ತಾರಾ
ವೃಂದ ಮಧ್ಯಪ್ರವಿಲಸಿತ ಪೂ
ರ್ಣೇಂದು ಮಂಡಲದಂತೆ ಮೆಱೆವ ಮುಕುಂದನಂಘ್ರಿಗಳ
ಅಂದವನು ಮುನಿ ಯಾದವೇಶ್ವರ
ವೃಂದದಲಿ ನಾನಾ ಜನೌಘದ
ಸಂದಣಿಯ ಸಂಭ್ರಮದಲೆಸೆವಾಸ್ಥಾನ ಮಧ್ಯದಲಿ ೪೦

ಕರಪುಟವ ಧರಿಸುತ್ತ ಶಿರದಲಿ
ಧರೆಗೆ ವೈಯಿಕ್ಕುತ್ತ ಜಯ ಜಯ
ಪರಮಪುರುಷ ಪರೇಶ ವಂದ್ಯಪದಾಬ್ಜ ವರದೇಶ
ಸುರನರಾರ್ಚಿತಚರಣ ಸುಜನಾ
ಭರಣ ಭವಭಯಹರಣ ರಕ್ಷಿಸು
ಶರಣಜನವನೆನುತ್ತ ಬಂದೆಱಗಿದನು ಹರಿಪದಕೆ ೪೧

ಎಱಗಿ ಪುಳಕಿತನಾಗಿ ಕಂಗಳ
ಲೊಱೆವ ಹರುಷರಸಾಬ್ಧಿಯಲಿ ನೈ
ಮಱೆದು ಹೊರಳಿದನಡಿಗಡಿಗೆ ಗೋವಿಂದನಂಘ್ರಿಯಲಿ
ಬೆಱಗನಿತ್ತನು ಸಭೆಗೆ ನಿಗಮದ
ಸಱಗಳನು ಸವೆಸಿದನು ವಚನದ
ಉರುವ ವೈಷ್ಣವನಿರದೆ ವಿಸ್ತರಿಸುತ್ತ ಮಹಿಮೆಗಳ ೪೨

ವಿಸ್ತರಿಸುತಡಿಗಡಿಗೆ ಮಹಿಮೆಯ
ನತ್ಯಧಿಕ ಭಕ್ತಿಯಲಿ ಭಾಗವ
ತೋತ್ರಮನು ಚರಣದಲಿ ವೈಯಿಕ್ಕಿರಲು ಕೈ ನೀಡಿ
ಎತ್ತಿದನು ತಲೆದಡವಿ ಭಕ್ತನ
ಮಸ್ತಕವನಪ್ಪಿದನು ಕಾರು
ಣ್ಯೋತ್ತರದ ಸುಸ್ನೇಹರಸದಲಿ ಮುಳುಗಿ ಮುರವೈರಿ ೪೩

ಕುಳ್ಳಿರಿಸಿ ವರಪೀಠದಲಿ ಸಿರಿ
ವಲ್ಲಭನು ಪಾದ್ಯಾರ್ಘ್ಯ ಸೂನೃತ
ಸಲ್ಲಲಿತ ಪೂಜಾವಿಧಾನದಲೊಲಿದು ಪೂಜಿಸುತ
ಎಲ್ಲಿ ಮನೆ ನೀನಾರು ಹೇಳೇಕಿ
ಲ್ಲಿಗಿಂದ್ಯೆತಂದೆ ಭಕುತಿಯ
ಬಲ್ಲಹನೆ ಹೇಳಾರು ಕಳುಹಿದರೆಂದಡಿಂತೆಂದ ೪೪

ಚಿತ್ತವಿಸು ಬಿನ್ನಪವನೆಲೆ ಪುರು
ಷೋತ್ತಮನೆ ತಾ ಬಂದೆನೊಪ್ಪುವ
ಮೃತ್ತಿಕಾವತದಿಂದ ದೇವರ ಚರಣ ದರುಶನಕೆ
ಕೃತ್ಯದಲಿ ಸಾಲ್ವಾವನೀಶನಿ
ಯುಕ್ತನಾದೆನು ಕಷ್ಟ ಪೌರೋ
ಹಿತ್ಯದಲಿ ಸನ್ನಿಹಿತನಾಗಿಹೆನೆಂದನಾ ವಿಪ್ರ ೪೫

ಹೆಸರು ತನಗೆ ಜನಾರ್ದನಾಖ್ಯೆಯ
ಲೆಸೆವುದೆನಗಾ ಬ್ರಹ್ಮದತ್ತನು
ಬೆಸಸಿದನು ಪಾಪಿಷ್ಠನೆನಿಸುವ ಭೃತ್ಯಕರ್ಮದಲಿ
ವಿಷಮಮತಿ ಹಯಮೇಧ ಕರ್ಮವ
ನೆಸಗುವನು ಮೇಲುಳ್ಳದನು ಪರ
ವಶದಲಾ ಹೇಳುವೆನು ಪಾಪಿಯ ಮಾತ ನಾನೆಂದ ೪೬

ಏವೆ ನಾನೆಲೆ ದೇವ ಹೀನರ
ಸೇವೆ ಸುಡು ಸುಡು ಕಷ್ಟವಲ್ಲೈ
ಭಾವಿಸುವಡಿದು ತನ್ನ ಬಹಳಾಶುಭ ಪರಂಪರೆಯು
ದೇವ ನಿಮ್ಮಡಿಗಳಿಗೆ ತಾನದ
ನೋವಿ ಹೇಳುವುದಿಲ್ಲ ಪಾತಕ
ಜೀವಿ ಕಳುಹಿದ ಮಾತುಗಳನವಧರಿಸಿ ಕೇಳೆಂದ ೪೭

ಯಜಿಸುವನು ಗಡದಾರನೋ ಭೂ
ಭುಜಕುಲಾಧಮನಖಿಳ ವಿಪ್ರ
ವ್ರಜಕೆ ಭೋಜನ ಗಂಧ ತತ್ಸಂಭಾರ ಸಂಪದವ
ವಿಜಯದಲಿ ಜೋಡಿಸಿದನೀ ಭೂ
ಭುಜರೊಳಿ ನಿಮ್ಮಡಿಯ ಚರಣಾಂ
ಬುಜಕೆ ಬಿನ್ನಹ ಮಾಡಬಂದೆನು ಕಾರಿಯವನೆಂದ ೪೮

ಲವಣಸಾಗರವಾಸಿಗಳು ಯಾ
ದವರು ನೀ ಹೋಗೀಸಿ ತಾರಾ
ಲವಣವನು ಧನಹೀನರಲಿ ತನ್ನಧ್ವರಕ್ಕೆಂದು
ಸವನಿಸಿದ ಗರ್ವದಲಿ ರಾಜ
ಬ್ರುವನು ಕಳುಹಿದನಿಂದು ಕರುಣಾ
ರ್ಣವನೆ ನಿಮ್ಮಡಿಯಂಘ್ರಿಸನ್ನಿಧಿಗೆಂದನಾ ವಿಪ್ರ ೪೯

ಏಕೆ ಹೆತ್ತಳು ತಾಯಿ ತನ್ನನು
ಲೋಕದಲಿ ಪಾಪಿಯನು ಪಾತಕಿ
ಗೇಕೆ ತಾನಾಚಾರ್ಯನಾದೆನು ಶಿವ ಮಹಾದೇವ
ಏಕೆ ಕಳುಹಿದನೆನ್ನನಿದಕಾ
ನೇಕೆ ಬಂದೆನು ತನ್ನವೋಲವಿ
ವೇಕಿಗಳದಾರೆನುತ ಧೊಪ್ಪನೆ ಬಿದ್ದನಂಘ್ರಿಯಲಿ ೫೦

ಬಿದ್ದು ಶರಣಾಗೆಲೆ ಮುಕುಂದ ಜ
ನಾರ್ದನಾಚ್ಯುತ ಭಕ್ತವತ್ಸಲ
ಹೃದ್ಯ ಚಾರುಚರಿತ್ರ ಜಗದಾರಾಧ್ಯ ಜಗದಾದ್ಯ
ವಿದ್ವದರ್ಚಿತಚರಣ ನೀನಿರ
ವದ್ಯ ರಕ್ಷಿಸನಾಥ ನಾನೆನು
ತಿರ್ದನಚ್ಯುತನಂಘ್ರಿಯಲಿ ತಲೆವಾಗಿ ಕೈಮುಗಿದು ೫೧

ಇರದೆ ಕಾಣುತ ಗದ್ದುಗೆಯಿನಿಳಿ
ದೆರಡು ಕೈಯಲಿ ನೆಗಹಿ ನಿಜಪದ
ಶರಣನನು ತಕ್ಕೈಸಿ ನೀನಿದಕಂಜಬೇಡೆನುತ
ಪರಮ ಕಾರುಣ್ಯದಲಿ ಭಕುತಿಯ
ದೊರೆಯನಾಸನದರ್ಧದಲಿ ಕು
ಳ್ಳಿರಿಸಿಕೊಂಡೋರಂತೆ ಸಂತೈಸಿದನು ಮುರವೈರಿ ೫೨

ನಗುತ ಸಾತ್ಯಕಿಯೊಡನೆ ಬೆಸಸಿದ
ನಗಣಿತಾಮಳಕೀರ್ತಿ ಹೋಗಾ
ವಿಗಡನಲ್ಲಿಗೆ ವಿಪ್ರನೊಡನಾ ಮೃತ್ತಿಕಾವತಕೆ
ವಿಗತಬಲದಲಿ ವೀರ ನಡೆ ನಡೆ
ಬಗೆಯ ಬಯಕೆಯದಾಯ್ತು ಕರೆ ಕಾ
ಳಗಕೆ ಕಪ್ಪವನೀವನೊಪ್ಪುವ ಕೈದುಗಳನೆಂದ ೫೩

ಕರವನೀವೆನದಾವ ಠಾವಿನ
ಲರಿಗದಾ ಶಾರ್ಙ್ಗಾದಿ ಶಸ್ತ್ರೋ
ತ್ಕರಗಳೊಳಗಾವುದನು ಕೊಡಲೆಂಬುದನು ನೆಱೆ ತಿಳಿದು
ಇರದೆ ಬಹುದಲ್ಲಿಂದ ಬಳಿಕೀ
ಪರಮ ಋಷಿಗಳ ಬಯಕೆ ಸೇರಲಿ
ಧರಣಿ ಭಾರವಿಹೀನೆಯಾಗಲಿಯೆಂದನಸುರಾರಿ ೫೪

ಒಬ್ಬನೇ ಹೋಗೆಂದು ರಥದಲಿ
ದುರ್ಬಿನೀತರ ಹೊರೆಗೆ ಸಕಲ ಸು
ಪರ್ಬರಿಗೆ ಸಂತೋಷವಾಗಲಿ ಖಳರ ವಿಜಯದಲಿ
ನಿರ್ಬಹಿಸಲೀ ಋಷಿಗಳಿಗೆ ಸುಖ
ಸರ್ಬವನು ನೆಱೆ ತಿಳಿದುಬಹುದು ಸ
ಗರ್ಬದಲಿ ಹೋಗೆಂದು ನಿತ್ಯಾತುಮನು ನೇಮಿಸಿದ ೫೫

ಐವತ್ತನಾಲ್ಕನೆಯ ಸಂಧಿ ಮುಗಿಯಿತು.

# ಐವತ್ತೈದನೆಯ ಸಂಧಿ

ಶ್ರೀಯರಸನಾಜ್ಞಾಪಿಸಲು ರಿಪು
ರಾಯಗಜಪಂಚಾಸ್ಯನಾ ಶೈ
ನೇಯನೇಕಾಂಗದಲಿ ನಡೆದನು ಮೃತ್ತಿಕಾವತಕೆ

ಅರಸ ಕೇಳಸುರಾರಿ ಭಕ್ತಾ
ಭರಣನನು ಸತ್ಕರಿಸಿ ಪರಿ ಪರಿ
ಯುರುತರಾಮೃತಪಾನ ಭೋಜನ ಷಡುರಸಾನ್ನದಲಿ
ವರ ವಿಭೂಷಣ ಗಂಧ ಮಾಲ್ಯಾಂ
ಬರಗಳಲಿ ಕೈಮುಟ್ಟಿ ತಾನುಪ
ಚರಿಸುತಿರ್ದನು ಕರುಣಿಗಳ ದಾತಾರನುಚಿತದಲಿ ೧

ಸುರಿವ ಸುಖಬಾಷ್ಪದಲಿ ನಿಜಪದ
ಸರಸಿಜಕ್ಕಭಿಷೇಕವನು ವಿ
ಸ್ತರಿಸಿ ಬಲವಂದೆಱಗಿ ಕೈಮುಗಿದವನಿಸುರನಿರಲು
ಪರಮ ಕರುಣಾಸಿಂಧು ಕೈವಿಡಿ
ದುರುತರ ಪ್ರೇಮದಲಿ ವಿರಹಾ
ತುರನು ಕಳುಹಿದನೀ ಜನಾರ್ದನನಾ ಜನಾರ್ದನನ ೨

ಅವನಿಸುರನಾನಂದಬಾಷ್ಪಾ
ರ್ಣವದಲೋಲಾಡುತ್ತ ಕರುಣಾ
ರ್ಣವನ ಪದವನು ಧರಿಸಿ ಮನದಲಿ ಭಾವ ಭಕುತಿಯಲಿ
ಸವನಿಸಿದ ತದ್ದರುಶನದ ಲಾ
ಭವನು ನೆನೆವುತ ನೆನೆವುತವೆ ಭಾ
ಗವತರರಸನು ಬೀಳುಕೊಂಡನು ಹರಿಪದಾಂಬುಜವ ೩

ಏಱೆ ರಥವನು ವಿಪ್ರನೊಡನಾ
ವೀರ ಸಾತ್ಯಕಿ ನಡೆದನತುಳೋ
ದಾರಮತಿ ಮನದಿಂದ ಮುಂದೆನೆ ಮೃತ್ತಿಕಾವತಕೆ
ತೀರನಿಳಿದೈತರಲು ಕಾಣುತ
ದೂರದಿಂದಾ ಬ್ರಹ್ಮದತ್ತ ಮ
ಹೀರಮಣನಿದಿರಾಗಿ ಬಂದುಪಚರಿಸಿದನು ಭಟನ ೪

ಮಾನನಿಧಿಯನು ಮನ್ನಿಸುತ ಕುಶ
ಲಾನುರಂಜಿತ ಸೂಕ್ತಿಯಲಿ ನೃಪ
ಸೂನುಗಳು ಪಾದ್ಯಾಸನಾರ್ಘ್ಯಂಗಳನು ವಿಸ್ತರಿಸಿ
ಏನನೆಂದನು ಕೃಷ್ಣನಿತ್ತಲು
ನೀನಿದೇನೈ ಬಂದೆ ತಂದೆಯ
ದೇನನಧ್ವರಸಾಧನವನೆನಲೆಂದನವರೊಡನೆ ೫

ಕೇಳಿರೈ ಸಾಲ್ವಾವನೀಶರು
ಕೇಳಿರೈ ನೆರೆದವನಿಪಾಲರು
ಕೇಳಿರೈ ವಿಪ್ರೋತ್ತಮರು ಸಮ್ಮಿತ ಸಭಾಸದರು
ಕೇಳಿರೈ ರಿಪುರಾಯ ವಿಪಿನ ವಿ
ಶಾಲವಹ್ನಿಯೆನಿಪ್ಪ ಕೃಷ್ಣನ
ಹೇಳಿಕೆಯನವನೀಶ್ವರರಿಗಾಜ್ಞಾಪಿಸಿದ ಹದನ ೬

ಈವೆನರಿಬಕ ಬಹಳ ಕಾನನ
ದಾವ ಶಿಖಿಯೆಂದೆನಿಪ ಚಕ್ರವ
ನೀವೆನೀಶಾರ್ಙ್ಗವನು ಗದೆಯನು ಮೇಣು ಖಡುಗವನು
ಈವೆನಾವಸ್ತ್ರವನು ಕೊಂಬಿರ
ದಾವಠಾವಿನಲೆಂಬುದನು ನೆಱೆ
ನೀವೆ ಹೇಳಿಯೆನುತ್ತ ಬೆಸಸಿದನಖಿಳ ಭೂಪರಿಗೆ ೭

ವಿದಿತ ಪುಷ್ಕರದಲಿ ಕುರುಕ್ಷೇ
ತ್ರದಲಿ ನೈಮಿಷದಿ ಪ್ರಯಾಗಾ
ಖ್ಯದಲಿ ಮೇಣಾವೆಡೆಯಲೀವೆನು ಕಪ್ಪವನು ನಿಮಗೆ
ಅದನು ಹೇಳುವುದವನಿಪಾಲಕ
ರದಕೆ ತಾ ಬಹೆನಿಂದೆ ನೀವೀ
ವಿದಿತ ಸನ್ನಾಹದಲಿ ಬಹುದು ಸಮಗ್ರ ಬಲಸಹಿತ ೮

ಬಕನ ಕೇಶಿಯನಾ ತೃಣಾವ
ರ್ತಕನ ವೃಷಭನನಜಗರನ ಧೇ
ನುಕನ ವತ್ಸನ ಬಲುಭುಜರ ಚಾಣೂರಮುಷ್ಟಿಕರ
ಶಕಟನುರಗನನಾ ಪ್ರಲಂಬನ
ವಿಕಟ ಮಯಸುತ ಶಂಖಚೂಡರ
ನಿಕರವನು ನೀವನುಕರಿಸುವಡೆ ಬೇಗ ಬಹುದೆಂದ ೯

ಕಾಲಯವನನನು ಕೊಂಡ ಕಪ್ಪವ
ಕೇಳಿದಿರೆ ಮಗಧೇಶ ಕಂಸಸೃ
ಗಾಲ ಭೂಪರು ದಣಿದರೆನ್ನಲಿ ಕಪ್ಪವನು ಕೊಂಡು
ಹೇಳಲೇಕದನೆನ್ನ ನಿಶಿತ ಶ
ರಾಳಿಗಳು ಬಿದ್ದಿಹವು ನಿಮ್ಮಯ
ಕಾಳಗಕೆ ಕಡುಗುವರೆ ತಡೆಯದೆ ಬೇಗ ಬಹುದೆಂದ ೧೦

ಎಂದಡದನಾ ಬ್ರಹ್ಮದತ್ತನ
ನಂದನರು ಕೇಳುತ್ತ ಬಿಱುಸಿಡಿ
ಲಂದದಲಿ ತೊಡೆವೊಯ್ದು ಗರ್ಜಿಸಿ ನೋಡಿ ಸುಡುವಂತೆ
ಎಂದನಾ ಸಾತ್ಯಕಿಯೊಡನೆ ಜನ
ವೃಂದ ಬೆದಱಲು ಬಹಳ ರೋಷದ
ಲಂದು ಡಿಬಿಕಾಗ್ರಜನು ಯಾದವವೀರರನು ಜಡಿದು ೧೧

ಎಲವೊ ಗೋಪರ ಮಗನೆ ಮಾತಿನ
ಗೆಲವ ಕೊಂಡೈ ಸಾಕು ನಿಂದಿರು
ಗಳಹತನವಂತಿರಲಿ ಹೊಱವಡು ಮನೆಯನಿನ್ನಿರಲು
ತಲೆಯ ಕೊಂಬೆನು ದೂತನನು ದಿಟ
ಕೊಲುವುದನುಚಿತವಾಹವಕೆ ಗೋ
ವಳನ ತಾ ಬಲಸಹಿತ ಪುಷ್ಕರಕಾಗಿ ನೀನೆಂದ ೧೨

ನಾಲಗೆಗಳುಂಟೆಂದು ಗೆಡೆವರೆ
ಬಾಲಕರವೋಲಳವನಱಿಯದೆ
ಖೂಳತನವಿದು ಗೋಪರಿಂಗೆ ನಿಸರ್ಗಸಿದ್ಧವಲ
ಕಾಳಗದ ಕಲಿತನವದುಳ್ಳಡೆ
ನಾಳೆ ಕಾಂಬೆವೆನುತ್ತ ಜಱೆದು ನೃ
ಪಾಲಕರು ಗಜಱಿದರು ಗರ್ಜಿಸಿ ಸಿಂಹನಾದದಲಿ ೧೩

ಎಲವೊ ಬಲುಗೊಳ್ಳೇಳು ನಿಂದಿರು
ಕಳನ ಕಾಳಗದೊಳಗೆ ನಿನ್ನ
ಗ್ಗಳಿಕೆಯನು ತೋಱುವಡೆ ತಾನಿಹೆನೇಳು ನಿನ್ನಸುವ
ತೊಲಗಿಸುವೆನಿದೆ ನೋಡೆನುತ ಘುಳು
ಘುಳಿಸಿ ಸಾತ್ಯಕಿ ಗದ್ದುಗೆಯನ
ಪ್ಪಳಿಸಿ ನಿಂದನು ನೋಡಿ ಸುಡುವಂದದಲಿ ನೃಪಕುಲವ ೧೪

ದುರುಳರತಿ ದುರ್ಬುದ್ಧಿಗಳು ನೀವ್
ಜಱೆದಡೀತನು ನಿಮ್ಮ ಪಿತ ಮೂ
ವರಿಗೆ ಕಾಣೆನು ಸರಿಯನತಿಶಯ ಪಾಪಚೇಷ್ಟೆಯಲಿ
ನರಕಯಾತನೆಗಳಿಗೆ ನೋಂತಿರಿ
ಹರನ ವರವುಂಟೆಂದು ನೀವು
ಬ್ಬಱಿಸಿ ಬಱಿದೇ ಗರ್ವತನದಲಿ ಕೆಟ್ಟಿರಕಟೆಂದ ೧೫

ಕೊಳ್ಳೆವಾವಣುವಿಂಗೆ ಗೌರೀ
ವಲ್ಲಭನ ವರದಿರವನದ ಸಿರಿ
ವಲ್ಲಭನ ಚರಣೈಕ ಶರಣರು ಹಲವು ಮಾತೇಕೆ
ನಿಲ್ಲಿ ಸಮರಕೆ ತನ್ನೊಡನೆ ಬಿಲು
ಗೊಳ್ಳಿ ನಿಮಗೇಕೆನ್ನೊಡೆಯನೀ
ಜಳ್ಳುಗಳ ತೂಱುವಡೆ ವಿಲಯ ಸಮೀರನೇಕೆಂದ ೧೬

ಕಳುಹಿದನಲಾ ದೂತಮಾತ್ರದ
ಕೆಲಸಕೆನ್ನನು ನಿಮ್ಮ ಮೂವರ
ಕೊಲೆಗೆ ನೇಮವ ಕೊಡದೆ ಕರುಣಾಸಿಂಧು ತನಗಿಂದು
ಎಲವೊ ಕೇಳಿನ್ನೊಂದು ಭಾಷೆಯ
ಬಲುಹನೆನ್ನಲಿ ಹಂಸ ನಿನ್ನಯ
ಕುಲಸಹಿತ ಸಂಹಾರವನು ಮಾಡಿಸುವೆ ನಾನೆಂದ ೧೭

ಆತು ಬೆಂಬಲವಾಗಿ ಮೇಣಾ
ಭೂತನಾಥನೆ ಬರಲಿ ನಿಮ್ಮನು
ಘಾತಿಸುವನಸುರಾರಿ ಸೈರಿಸು ನಾಲ್ಕು ಯಾಮವನು
ಮಾತ ಮಱೆಯದಿರೆನುತ ಸತ್ಕ್ರೋ
ಧಾತಿಶಯ ತಾಮ್ರಾಕ್ಷನಂದಾ
ಭೂತಳೇಶಾಪಸದರರಮನೆಯಿಂದ ಹೊಱವಂಟ ೧೮

ಏಱಿಸಿದ ಬಿಲ್ಲಿನಲಿ ಬಿಂಕವ
ಬೀಱಿ ತನ್ನೆಡಗಾಲ ತೊಡರನು
ತೋಱಿ ಧರಣಿಯನೊದೆದು ಹೊಱವಂಟನು ನೃಪಾಲಯವ
ಏಱಿ ರಥವನು ಬಂದನೊಬ್ಬನೆ
ಮೂಱು ಲೋಕದ ವೀರನಂದೀ
ರಾಱು ಲಕ್ಷಣದೊಡಲ ನಿಜ ಪರಮಾತ್ಮನಿದ್ದೆಡೆಗೆ ೧೯

ಬಂದು ನಿಜದಾತಾರನಂಘ್ರಿ
ದ್ವಂದ್ವದಲಿ ತಲೆವಾಗಿ ನೃಪತಿಗ
ಳೆಂದ ಮಾತನು ಮುಗಿದ ಕರಪುಟದಿಂದ ಬಿನ್ನೈಸೆ
ಮಂದಹಾಸದಲಾಗಲದಕೇ
ನಿಂದು ನಾಳಿನ ದಿನದಲೀಕ್ಷಿಪೆ
ವೆಂದು ಸಭ್ಯರ ನೋಡಿ ದನುಜಾರಾತಿ ನೇಮಿಸಿದ ೨೦

ನಾಳೆ ಕೊಲುವನು ಸಾಲ್ವ ಪೃಥ್ವೀ
ಪಾಲರನು ಗಡ ತಳುವಿದಡೆ ಸಿರಿ
ಲೋಲನೊಲವೊಡಗೂಡದೆಂದಿನನಪರವಾರಿಧಿಗೆ
ಬೀಳುಕೊಂಡನು ಮತ್ತೆ ಮೂಡಣ
ಶೈಲದಲಿ ನಿಜರಥವ ನೂಕಿದ
ನೋಲಗಕೆ ಮೈದೋಱುವಂತಿರಲೆಸೆದನಭ್ರದಲಿ ೨೧

ಮಱುದಿವಸ ಯಾದವರನೆಲ್ಲರ
ಕರೆಸಿ ಸಮರೋದ್ಯೋಗವನು ವಿ
ಸ್ತರಿಸಿ ವೃಷ್ಣ್ಯಂಧಕರು ಭೋಜರೆನಿಪ್ಪವರು ಸಹಿತ
ಇರಿಸಿ ವಸುದೇವಾಹುಕರನಿ
ಬ್ಬರನು ನಿಜಪುರರಕ್ಷೆಗಖಿಳೇ
ಶ್ವರನು ವಿದಿತೋತ್ಸಾಹದಲಿ ಪುಷ್ಕರಕೆ ಹೊಱವಂಟ ೨೨

ಕರಿ ತುರಗ ರಥ ಪತ್ತಿಗಳು ಮೋ
ಹರಿಸಿ ಹೊಱವಡಲೆಂಟು ದೆಸೆಗಳು
ಜರಿಯೆ ಮೊಳಗುವ ಕಹಳೆಗಳ ನಿಸ್ಸಾಳ ಕೋಟಿಗಳ
ವರ ಪತಾಕೆಯ ಸತ್ತಿಗೆಯ ಚಾ
ಮರದ ಸಿಂಧದ ಸಡಗರದಲಂ
ಬರದ ಬುಸುಱ್ಡೆಗೆಡಲು ನಡೆದುದು ಸೇನೆ ಸಂದಣಿಸಿ ೨೩

ಎಡಬಲದಲ್ಯೆತರಲು ಯಾದವ
ರೊಡನೆ ಗಜ ರಥ ವಾಜಿಗಳ ಸಂ
ಗಡದ ಸಮ್ಮೇಳದಲಿ ಸಾತ್ಯಕಿಮುಖ್ಯ ಭಟನಿಕರ
ಆಡಸಿ ಕವಿಯಲು ವಂದಿಜನದು
ಗ್ಗಡಣೆ ಮೆಱೆಯಲು ಮುಂದೆ ಮುನಿಜನ
ನಡೆಯೆ ನಯನಾನಂದನಿಧಿ ನಡೆತಂದನಾಹವಕೆ ೨೪

ಬರಲಿ ಸಮರಕೆ ಬೇಗದಲಿ ಕರೆ
ಕರೆ ಕುಠಾರರನವನಿಪಾಲರ
ನೊರಜುಗಳನೀ ಕೃಷ್ಣಸೇನಾಕೃಷ್ಣವರ್ತ್ಮನಲಿ
ಬೆರಸಿ ಬದುಕುವೆನೆಂಬ ವಿಲಯದ
ಹರನ ತೋಱೌ ಯೆನುತ ಭಟರ
ಬ್ಬಱಿಸಿ ಬಿಟ್ಟುದು ಬಹಳ ರಭಸದಲಂದು ಯದುಸೇನೆ ೨೫

ಕೇಳಿ ತದ್ವಾರ್ತೆಯನು ಸಾಲ್ವ ನೃ
ಪಾಲರಾ ಪುಷ್ಕರಕೆ ಘನ ಸ
ಮ್ಮೇಳವಲಿ ಕರಿ ತುರಗ ರಥ ಪದಾತಿ ಪರಿಜನದ
ಜಾಲದಕ್ಷೋಹಿಣಿಗಳಲಿ ಕೆಂ
ಧೂಳಿ ದೆಸೆಗಾವರಿಸೆ ಧರೆ ಪಾ
ತಾಳವನು ಬಿಗಿದಿಳೆಯಲ್ಯೆತಂದುದು ಮಹಾಹವಕೆ ೨೬

ಆ ಮುರಾಂತಕನೊಡನೆ ಸಾಲ್ವ ಮ
ಹಾ ಮಹೀಶ್ವರರಿಂಗೆ ಘನ ಸಂ
ಗ್ರಾಮವೆಂಬುದ ಕೇಳಿ ಮಗಧನೃಪಾಲನಾಹವಕೆ
ಭೂಮಿಲಂಬದ ಬಲಸಹಿತ ಸಂ
ಗ್ರಾಮಧೀರನು ಬರುತ ಮಾರ್ಗದ
ಲಾ ಮುನಿಪ ದುರ್ವಾಸನಿದ್ದುದ ಕೇಳಿದನು ಬಳಿಕ ೨೭

ಭೂಪ ಕೇಳಾ ಮಗಧನೃಪ ಮುನಿ
ಶಾಪ ಭಯದಲಿ ತಿರುಗಿ ಹಾಯ್ದನು
ಭೂಪಜನಸಹಿತಖಿಳ ಬಲದಲಿ ನಿಜಗಿರಿವ್ರಜಕೆ
ಭೂಪರುಳಿದವರಾಹವದ ಮೋ
ಳಾಪವನು ಮಾಡುತ್ತ ಮುನಿಪತಿ
ಕೋಪಿಸುವನೆಂದುಳಿದರುದ್ಯೋಗವನು ಗಮನದಲಿ ೨೮

ಅತ್ತಲಾ ಹಲಧರನು ಭೂಪರ
ನೊತ್ತ ನೃಪರಿಗೆ ಪಡಿಬಲಕೆ ಬಹ
ವಾರ್ತೆಯನು ನೆಱೆ ಕೇಳಿ ಪಡಿಬಲವಾಗಿ ಪುಷ್ಕರಕೆ
ಎತ್ತಿ ಬಹಳಾಕ್ಷೋಹಿಣೀಬಲ
ದತ್ಯಧಿಕಸನ್ನಾಹದಲಿ ಪುರು
ಷೋತ್ತಮನ ಸನ್ನಿಧಿಗೆ ಬಂದನು ಬಹಳ ರಭಸದಲಿ ೨೯

ಆ ಮಹಾಪುಷ್ಕರನಿವಾಸಿ ಮ
ಹಾ ಮನೀಂದ್ರರು ತಾಪಸರು ಸು
ಕ್ಷಾಮಕಾಯರು ವರನಿರಾಹಾರವ್ರತಸ್ಥಿತರು
ಶ್ರೀಮನೋರಮನಾಗಮನ ವಾ
ರ್ತಾಮೃತಶ್ರವಣದಲಿ ತತ್ಪದ
ತಾಮರಸದರುಶನಕೆ ನೆರೆದೈತಂದುದಖಿಳಜನ ೩೦

ಬಂದು ಸಂಸ್ತುತಿಪಾಠ ಜಯರವ
ವಂದನಾಲಂಕಾರ ಪೂಜೆಗ
ಗಳಿಂದ ಭಜಿಸುತ್ತಿರಲು ತತ್ತದಭೀಷ್ಟಸಿದ್ಧಿಗಳ
ಅಂದು ಕರುಣಿಸುತಖಿಳಮುನಿಜನ
ವೃಂದದಲಿ ಭಕ್ತಾಭಯಪ್ರದ
ಮಂದಹಾಸೇಕ್ಷಣದಲಸುರಾರಾತಿ ರಂಜಿಸಿದ ೩೧

ಆಡಸಿದುಗ್ರತಪಂಗಳಲಿ ಸಲೆ
ಬಡತನಕೆ ಮೈಗೊಟ್ಟ ಋಷಿಗಳು
ದಡಿಗಳಾದರು ದರುಶನದಲಾಹರಿಪದಾಂಬುಜದ
ಬಡನದಿಗಳರ್ಕಾಂಶುತಾಪದ
ಲೊಡರಿಸಿದ ಕಾರ್ಶ್ಯವನು ವೃಷ್ಟಿಯ
ಬಿಡಯದಲಿ ಬಿಡುವಂತೆ ಬಲಯುತವಾಯ್ತು ಮುನಿನಿಕರ ೩೨

ಸೂತ ಮಾಗಧ ವಂದಿಗಳ ಸಂ
ಗೀತ ವಾದ್ಯಸ್ತುತಿರವಂಗಳ
ಭೂತಳಾಮರನಿಕರದಾಶೀರ್ವಾದಘೋಷದಲಿ
ಖ್ಯಾತವೆನಿಪ ಸರಸ್ವತೀನದಿ
ಯಾತಡಿಯಲೋಲಗವನಿತ್ತು ಮ
ಹಾತಿಶಯ ವಿಭವದಲಿ ದನುಜಾರಾತಿ ರಂಜಿಸಿದ ೩೩

ನೆರೆದುದುಭಯ ಚತುರ್ಬಲಾಂಬುಧಿ
ಧರೆ ರಸಾತಳಕಿಳಿಯೆ ಶೇಷನ
ಕೊರಳು ಕುಸಿಯಲು ಕೂರ್ಮನುದರದಲಿಡಲು ಮಸ್ತಕವ
ಜರಿಯಲೆಣ್ದೆಸೆ ಲಗ್ಗೆಗಳ ದು
ರ್ಧರ ಮಹಾನಕಶಂಖರವದ
ಬ್ಬರಣೆಗಳಲೇಕಾರ್ಣವವೆ ಮಿಗಿಲಾಯ್ತು ಸನ್ನಾಹ ೩೪

ಆಟವಿಕರೊಡ್ಡಿದರು ಘನ ಶೃಂ
ಗಾಟಕಾಖ್ಯವ್ಯೂಹವನು ರವಿ
ಕೋಟಿಯಲಿ ಕಾಲೂಱಲುದಯಾಚಲದ ಮಸ್ತಕದ
ನೀಟದಲಿ ನಿಲೆ ರಥಗಜಾವಳಿ
ಘೋಟಕವ್ರಜಪತ್ತಿಗಳ ಕಾ
ಲಾಟವೆಸೆಯಲು ಹಂಸಡಿಬಿಕರು ರಚಿಸಿದರು ಬಲವ ೩೫

ಮುಂದೆ ಮೊನೆಯಲಿ ಬ್ರಹ್ಮದತ್ತನು
ನಿಂದನೆಸೆವ ವ್ಯೂಹಪಾರ್ಶ್ವ
ದ್ವಂದ್ವದಲಿ ನಿಲೆ ಹಂಸಡಿಬಿಕರು ಬಿಗಿದ ಬಿಲ್ಲಿನಲಿ
ಅಂದವಡೆದುದು ಸಕಲಸುಭಟರ
ವೃಂದವಂತರ್ಗತವೆನಲು ಸುರ
ವೃಂದ ದುರ್ಜಯವೆನಲು ವೈರಿವ್ಯೂಹ ಸಂಸ್ಥಾನ ೩೬

ಸಾಹಸದಲಸುರಾರಿ ಸೂಚೀ
ವ್ಯೂಹವನು ರಚಿಸಿದನು ಸುಭಟ
ವ್ಯೂಹದಲಿ ಮುಮ್ಮೊನೆಗೆ ಸಾತ್ಯಕಿ  ನಿಲಲು ಸಂಗರಕೆ
ರೋಹಿಣೀಸುತಸಹಿತ ವಿಹಿತ
ವ್ಯೂಹಪಾರ್ಶ್ವದ್ವಂದ್ವದಲಿ ಬಹ
ಳಾಹವಕೆ ತಾನಿರಲು ಸಮರಾರಂಭ ರಂಜಿಸಿತು ೩೭

ಉರಿ ಉರಿಗೆ ಮಲೆವಂತೆ ಘನಸಾ
ಗರಕೆ ಸಾಗರವಾಂತವೊಲು ಬಲ
ವೆರಡು ವಿಹಿತವ್ಯೂಹದಲಿ ಸನ್ನದ್ಧವಾಗಿರಲು
ಸುರನಿಕರಸಹಿತಬುಜಭವ ಭವ
ರಿರದೆ ಕೈವಾರಿಸಿದರಂದಾ
ಪರಮಪುರುಷನೆನಿಪ್ಪಾ ನಿತ್ಯಾತುಮನ ಗುಣಗಣವ ೩೮

ಐವತ್ತೈದನೆಯ ಸಂಧಿ ಮುಗಿಯಿತು.

# ಐವತ್ತಾರನೆಯ ಸಂಧಿ

ರಾಯ ದೈತ್ಯವಿರೋಧಿ ದೈತ್ಯ ನಿ
ಕಾಯಕದಳೀ ಪ್ರಳಯಪವನಾ
ನಾಯತಾಸ್ತ್ರನು ಸಂಹರಿಸಿದನು ಸಾಲ್ವನೃಪಬಲವ

ಅರಸ ಕೇಳುದಯಾದ್ರಿಶಿಖರಕೆ
ತರಣಿಮಂಡಲವೈತರಲು ಸಂ
ಗರಕೆ ವಿಹಿತವ್ಯೂಹದಲಿ ಪೂರ್ವಾಭಿಮುಖರಾಗಿ
ಧರಣಿಪಾಲರು ನಿಲಲು ವಿಶ್ವಂ
ಭರನು ರಚಿತವ್ಯೂಹದಲಿ ಸಂ
ಗರಕೆ ನಿಂತನು ಪಶ್ಚಿಮಾಂಬುಧಿಗಭಿವದನನಾಗಿ ೧

ಹಳಚಿದುದು ಬಲವೆರಡು ಬಾಣದ
ಬಲುಮಳೆಯ ಬಿಱುಸಿನಲಿ ಬಿದ್ದವು
ಹಲವು ಗಿರಿಸನ್ನಿಭಗಜಂಗಳು ಧರೆಗೆ ಕಡಿವಡೆದು
ಕಳಲಿದವು ಕಡೆಯಿಲ್ಲದಶ್ವಾ
ವಳಿಗಳಾ ರಥಚಯವನಾ ಬಾ
ಹುಲಿಕಸಿಂಧುಸಮುದ್ಭವಂಗಳು ಕಡಿದ ಕೊರಳಿನಲಿ ೨

ಖಂಡಿಸಿದ ತೋಳ್ಗಳಲಿ ವರಕೋ
ದಂಡಶರನಿಕರದಲಿ ಸುಭಟರು
ದಿಂಡುಗೆಡೆದರು ಧರೆಗೆ ಕಾಲ್ಗಳು ಜರಿದು ತೊಡೆಯುಡಿದು
ತುಂಡಿಸಿದ ಹಯಸೂತರಲಿ ರಥ
ಮಂಡಲಂಗಳು ಮುಗ್ಗಿದವು ರಣ
ಮಂಡಲದಲಸ್ತ್ರಾವಳೀದುರ್ಧರಮಹಾಗ್ನಿಯಲಿ ೩

ಚೂಣಿ ಮುಱಿದುದು ಹರಿಬಲರ ಬಲು
ಬಾಣಹತಿಯಲಿ ಸೆಡೆದು ಸಾಲ್ವ
ಕ್ಷೋಣಿಪತಿಗಳ ಸೇನೆ ಬೆನ್ನಿಕ್ಕಿದುದು ಪರಬಲಕೆ
ಶೋಣಿತದ ಕಡುಗಡಲು ಹರಿದವು
ಕಾಣಲರಿದಾಯ್ತಾಹವದ ಬಲು
ಹೂಣಿಗರನೆನುತೊಱಲಿದುದು ಭಟನಿವಹ ತವತವಗೆ ೪

ಸಂಗರದ ಕಲಿಗಳನು ಕರೆ ಭೂ
ತಂಗಳನು ಹಾಯೆನುತ ಸಲೆ ಚತು
ರಂಗಬಲ ಬಾಯ್ಬಿಡಲು ಹೋ ಹೋ ಮಾಣು ಮಾಣೆನುತ
ಸಂಗಡಿಸಿ ಹರಿತಂದವಾಹವ
ರಂಗವನು ಬಿಗಿಯುತ್ತ ಘನಮಾ
ತಂಗಘಟೆಯನು ತುಳಿದು ಬಲುಭೂತಂಗಳಾಹವಕೆ ೫

ಎತ್ತಿ ಬೀಸಾಡುತ್ತ ರಥವನು
ಮತ್ತೆ ಗಜಘಟಿಗಳನು ತೆಗೆದು ವಿ
ಯತ್ತಳಕೆ ತಿರುಹಿಡುತ ತುರಗಂಗಳನು ಪಟುಭಟರ
ಮೊತ್ತವನು ಮೋದುತ್ತ ಮೋರೆಯ
ನೆತ್ತಿ ಮಾಂಸವ ಮೆಲುತ ಬಿಸಿನೊರೆ
ನೆತ್ತರನು ಕುಡಿವುತ್ತ ಬಂದವು ಬಹಳಸಂಗರಕೆ ೬

ಆರುತವನಿಯಲಹಿತಬಲವನು
ಹೊರಳಿ ಹೊಡಕರಿಸುತ್ತ ಚಿಗಿದಂ
ಬರಕೆ ಹಾರುತ ಬೀಳುತಾಹವರಂಗಮಧ್ಯದಲಿ
ಧರೆಯನಲ್ಲಾಡಿಸುತ ಮಿಗೆ ಹೆ
ಮ್ಮರಂಗಳ ಮುಱಿವುತ್ತ ನಾಟ್ಯದ
ಹರನ ಜೋಡಿಗಳಂತೆ ಬಂದರು ಪ್ರಮಥರಾಹವಕೆ ೭

ಜೇನಹುಟ್ಟಿಗೆ ಹದ್ದು ತುಂಡವ
ನಾನಿಸಿದವೋಲಾಯ್ತು ಹೆಚ್ಚಿದ
ಕಾನನಕೆ ಬಱಿಸಿಡಿಲು ಬಿಂಕದಲೆಱಗಿದಂತಾಯ್ತು
ಏನನೆಂಬೆನು ಭೂಪ ಯಾದವ
ಸೇನೆ ನಿಮಿಷಾರ್ಧಾರ್ಧಮಾತ್ರದ
ಲೂನವಾದುದು ಜೀವದಲಿ ಬಲವೀರ್ಯಗುಣಗಳಲಿ ೮

ಖಂಡಿಸದು ರೋಮಂಗಳಿಱಿದಡೆ
ಖಂಡೆಯದಲಲಗಂಬು ಮುಱಿದವು
ಖಂಡಪರಶುವಿನಾಳ್ಗಳಂಗದಲಂದು ಜಯಲಕ್ಷ್ಮಿ
ಭಂಡೆಯಾದಳು ಬಾಹಿರರ ಕೆಳೆ
ಗೊಂಡಳಕಟಕಟೆನುತ ಬಲ ಗೋ
ಳುಂಡೆಗೊಂಡುದು ಯಾದವಾಧೀಶ್ವರರು ಬೆಱಗಾಗೆ ೯

ಆ ಮಹಾಭೂತದ್ವಯದ ಸಂ
ಗ್ರಾಮದಲಿ ನಿಜಬಲವನಧಿ ನಿ
ರ್ಧಾಮಧೂಮವೆನಲ್ಕೆ ಕೆಡುವುದ ಕಂಡು ಕಳನೊಳಗೆ
ಭೀಮಪಾರ್ಶ್ವದಲಾಹವಕೆ ಹರಿ
ಭೂಮಿಗಿಳಿದನು ರಥವನಿಳಿದು ಸ
ನಾಮರೋ ನೀವೆನುತ ನಡೆದನು ಭಟರ ಸಮ್ಮುಖಕೆ ೧೦

ನಿಲ್ಲಿರೋ ನೀವೆಲವೊ ಸುಭಟರು
ಬಲ್ಲಿದರು ನೀವಹಿರಿ ಸಮರಕೆ
ಜಳ್ಳುಗಳಲೇನಹುದು ತಾನಿಹೆನಿತ್ತ ಬಹುದೆನುತ
ಬಿಲ್ಲ ರಥದೊಳಗಿರಿಸಿ ನಿಜಪದ
ಪಲ್ಲವದಲೈತರಲು ಲಕ್ಷ್ಮೀ
ವಲ್ಲಭನನೀಕ್ಷಿಸುತ ಪ್ರಮಥರು ಬಂದರಿದಿರಾಗಿ ೧೧

ಅಟ್ಟಹಾಸವ ಮಾಡಿ ಕೈವಱಿ
ಗುಟ್ಟಿ ಹೊಱಳುತ ಬೀಳುತೇಳುತ
ಥಟ್ಟುಗಳನರೆವುತ್ತ ರಥಗಜವಾಜಿಪತ್ತಿಗಳ
ಬೆಟ್ಟದಂದದಲಾರ್ದು ಹರಿತಂ
ದಿಟ್ಟಣಿಸಿ ಗೋವಿಂದನಂಸವ
ಮೆಟ್ಟಿ ನಿಂದರು ಕಚ್ಚಿದರು ಕಿವಿಗಳನು ಕಡುಮುಳಿದು ೧೨

ಕಿವಿಯ ಕಚ್ಚುವಿರೇಕೆನುತ ಖವ
ಖವಿಸಿ ಹರಿ ನಗುತೆರಡು ಕೈಯಲಿ
ಜವಳಿವಿಡಿದಿಬ್ಬರನು ವರ ಕೈಲಾಸಪರ್ವತಕೆ
ಅವದಿರನು ತಿರುಹಿಟ್ಟಡಂದವ
ಯವದ ಸಂಧಿಗಳುಡಿಯೆ ಬಿದ್ದರು
ಭವಗಿರಿಯ ತಪ್ಪಲಲುಘೇ ಯೆನುತಿರ್ದುದಮರಗಣ ೧೩

ಬಂದೆವೆಲ್ಲಿಂದೆಲ್ಲಿಗಾರೋ
ತಂದು ಬಿಸುಟರು ತಮ್ಮನಿತ್ತಲು
ಮಂದಿರಕೆ ಮರುಳು ಭಾಪು ಕೃಷ್ಣನ ಮಹಿಮೆ ಗಹನವಲ
ಎಂದು ವಿಸ್ಮಿತರಾಗಿ ಪ್ರಮಥರು
ನೊಂದು ಹದುಳಿಸಿಕೊಳುತ ಗಮಿಸಿದ
ರಂದು ನಿಳಯಕೆ ಕರ್ಣಧಾರಮಹೋದರರು ಹರನ ೧೪

ಕದವ ತೆಱೆದಂತಾಯ್ತು ಭೂಪರ
ಕದನರಂಗವದಾನೆಗಳು ಬಲು
ಗುದುರೆಗಳು ಕಾಲಾಳು ತೇರುಗಳಚ್ಯುತಾಸ್ತ್ರದಲಿ
ಮೆದೆಗೆಡದು ಮಾವಂತ ರಾವುತ
ರುದುರಿದರು ಕಡಿವಡೆದು ರಥಿಕರು
ಬಿದಿರಿದರು ಜೀವನನು ಸವೆದುದು ಸೇನೆ ನಿಮಿಷದಲಿ ೧೫

ಮುಱಿದುದೋ ಮುಂಗುಡಿ ಮಹಾಭಟ
ರಿಱಿತದಲಿ ಬಲ ಹಂಸಡಿಬಿಕರ
ಮಱೆಯ ಹೊಕ್ಕುದು ಹರಿಬಲರ ಶರಹತಿಗೆ ಮಿಗೆ ಸೆಡೆದು
ಒಱಗಿದುದು ಚದುರಂಗಬಲವೆ
ಚ್ಚಱಿಯದಂತಿರೆ ಹಾಯೆನುತ ಭಟ
ರೊಱಲಿದರು ಪಿಂಗುಡಿಗೆ ಬಿದ್ದುದು ಸಮರಸೌರಂಭ ೧೬

ಎಲವೊ ಹೊಯಿ ಹೊಯಿ ಬಱಿದೆ ಬೆದಱಿಸಿ
ಬಲವನಂಜಿಸುವವರನೀ ಗೋ
ವಳರ ಗೊಡ್ಡಾಟಕ್ಕೆ ಫಡ ಫಡ ಹಿಂಗಲೇಕೆನುತ
ಬಿಲುಸರಳ ತುಡುಕುತ್ತ ಬೆದಱುವ
ಬಲಕೆ ಕೈವೀಸುತ್ತ ನಡೆದನು
ಹಲಧರನ ಸಮ್ಮುಖಕೆ ಹಂಸಾನುಜನು ಬೊಬ್ಬಿಱಿದು ೧೭

ಅತ್ತಲಂದಾ ಬ್ರಹ್ಮದತ್ತನೃ
ಪೋತ್ತಮನು ಹರಿಸಿದನು ರಥವನು
ಸಾತ್ಯಕಿಯಸಮ್ಮುಖಕೆ ವೃದ್ಧನು ವಿಪುಳವಿಕ್ರಮನು
ತೆತ್ತಿಸಿದರೊಬ್ಬೊಬ್ಬರನು ಶ
ಶ್ತ್ರಾಸ್ತ್ರನಿಕರಂಗಳಲಿ ಸುರರು ವಿ
ಯತ್ತಳದಲೀಕ್ಷಿಸುತಲಿರ್ದರು ಸಮರಸಂಭ್ರಮವ ೧೮

ಆ ಸಮಯದಲಿ ಹಂಸನಾ ಲ
ಕ್ಷ್ಮೀಶನಲ್ಲಿಗೆ ರಥವ ಬಿಟ್ಟನು
ಸಾಸಿಗನು ನೀ ನಿಲ್ಲೆಲೆ ಕೃಷ್ಣ ನಿಲ್ಲೆನುತ
ಸೂಸಿದನು ದಿವ್ಯಾಸ್ತ್ರಚಯವಾ
ರಾಸಿಯನು ದಶದಿಕ್ಕುಗಳಲಾ
ಕಾಶದಲಿ ಧರಣಿಯಲಿ ಬಾಣವ್ರಾತಮಯವೆನಲು ೧೯

ಆ ಡಿಬಿಕನೊಡನಾಯ್ತು ಸಮರದ
ಜೋಡಣೆ ಹಲಾಯುಧಗೆ ಬಾಣದ
ಮೂಡಿಗೆಯ ಸಮೆಸಿದನು ರಿಪುಭಟನಂಗದಲಿ ಬಳಿಕ
ಕೂಡೆ ಕವಿಸಿದನಂಬುಗಳನಾ
ಕೇಡಿಗನು ಕೈಯೊಡನೆ ಬಾಣದ
ಬೀಡು ಬಿಟ್ಟುದು ಭಟನ ಮೈಯಲಿ ಭೂಪ ಕೇಳೆಂದ ೨೦

ಎಚ್ಚರೊಬ್ಬೊಬ್ಬರನು ಬಾಣದ
ಕಿಚ್ಚು ಕಿಡಿಕಿಡಿಗೆದಱಲಂಬರ
ಮುಚ್ಚಿ ಮುಸುಕಲು ರಾಮಡಿಬಿಕರು ರೋಷಪಾವಕನ
ಹೆಚ್ಚುಗೆಯ ಮಾಡಿದರು ಗಗನದ
ಲಚ್ಚರಿಯೆನುತ್ತಮರಚಯ ಮನ
ಮೆಚ್ಚಿ ಮಝು ಭಾಪೆನುತ ಕೊಂಡಾಡಿದರು ತಮತಮಗೆ ೨೧

ಇಱಿದು ಸವೆದುವು ಕೈದುಗಳು ನೆ
ತ್ತರಲಿ ನೆನೆದಾ ಧಾರೆ ಬಱಿಸಿಡಿ
ಲೆಱಗಿದಂತಾಯ್ತುಮನು ಮುಸಲಮಹಾಪ್ರಹಾರದಲಿ
ಒಱಲಿ ಕವಿದವು ಕರಿಘಟೆಗಳೆ
ಚ್ಚಱಿಯದಾದವು ತುರಗತತಿ ಮೈ
ಮಱೆದು ಮಲಗಿದರವನಿಯಲಿ ಕಾಲಾಳು ಕಡಿವಡೆದು ೨೨

ಅತ್ತಲಾ ಡಿಬಿಕನನು ಸರಳಲಿ
ಕೆತ್ತಿಸುತ ಕೆಲಬಲದಲೌಕುವ
ಮತ್ತಗಜಹಯರಥಪದಾತಿಭಟರೌಘಸಂಕುಲದ
ಮೊತ್ತವನು ಮಱಮುಱಿದು ನೇಗಿಲ
ಲೊತ್ತಿ ಕೊಂದನು ಮುಸಲಹತಿಯಲಿ
ಮೃತ್ಯು ಮೈಮುರಿದಂತೆ ಮೋಹರಿಸಿದನು ಬಲಭದ್ರ ೨೩

ಹೊಡೆ ಹೊಡೆದು ಮುಸಲದಲಿ ನೆತ್ತರ
ಕಡಲುಗಳ ಕಾಱಿಸಿದನವನಿಯ
ಲಡಿಗೆಡೆದ ಚತುರಂಗಬಲವಾ ಗಾಣವಿಟ್ಟಂತೆ
ಹೊಡಕರಿಸಿ ಹರಣವನು ಬಿಟ್ಟುದು
ಪೊಡವಿ ಲಘುವಾಯ್ತೆಂದು ನಿಮಿಷಕೆ
ಮೃಡನ ನರ್ತನರಂಗವಾದುದು ಬಹಳ ರಣಭೂಮಿ ೨೪

ಮುಗ್ಗಿ ಕೆಡೆದುದು ಸೇನೆ ಮುಸಲದ
ಮುಗ್ಗುಲಲಿ ಮೆದೆಗೊಂಡು ನೆತ್ತರ
ಹೆಗ್ಗಡಲು ಮಸಗಿದುದು ರೌದ್ರಾಕಾರವೆನೆ ಧರೆಗೆ
ಕೊಗ್ಗೆಸರು ಕಡಿ ಖಂಡ ಮಾಂಸದ
ನೆಗ್ಗಿದೆಲುಗಳ ಶಸ್ತ್ರನಿಕರದ
ನುಗ್ಗುಗಳ ರೌದ್ರದಲಿ ರಂಜಿಸಿತು ರಣಭೂಮಿ ೨೫

ಗಜಘಟೆಯ ನಕ್ರದಲಿ ತುರಗ
ವ್ರಜತಿಮಿಂಗಿಲಗಳಲಿ ವೀರರ
ಭುಜಲತಾ ದುರ್ಧರ ಮಹೋರಗ ನಿಕರದಲಿ ಸರಳ
ಕುಜನಿಕರಗುಲ್ಮದಲಿ ಚಾಪ
ವ್ರಜತರಂಗಂಗಳಲಿ ಕಾಲನ
ವಿಜಯರಂಗದವೋಲು ರಂಜಿಸಿತೆಂದು ರಣಜಲಧಿ ೨೬

ಅಗಿವ ಕಂಕಲಕಾಕಗೃಧ್ರಾ
ಳಿಗಳ ಬಹಳಸ್ಫೀತಗೋಮಾ
ಯುಗಳ ರಣಬೇತಾಳಭೂತಪ್ರಕರಸಂಕುಲದ
ಜಗಕೆ ಭೀಕರವೆನಲು ಮಿಗೆ ಕಾ
ಳಗದ ಖಳನತಿರೌದ್ರರಸವನು
ಮೊಗೆದುದೊಂದೇ ನಿಮಿಷಮಾತ್ರದಲರಸ ಕೇಳೆಂದ ೨೭

ಅತ್ತಲಾ ಹಂಸಾಖ್ಯನಾ ಪುರು
ಷೋತ್ತಮನ ಶರಹತಿಗೆ ಬೆದಱದೆ
ತೆತ್ತಿಸಿದನಂಬಿನಲಿ ಕೈಯೊಡನಾ ಮುರಾಂತಕನ
ಎತ್ತಲಂಬರವೆತ್ತಲಿಳೆ ದೆಸೆ
ಯೆತ್ತಲೆನಲೋರಂತೆ ಸಂಯುಗ
ಕೃತ್ತಿವಾಸನು ಮೆಱೆದನಾಹವಶೌರ್ಯಸಾಹಸದಿ ೨೮

ಮುರಹರನನೈದಂಬಿನಲಿ ಕಡು
ಕೆರಳಿ ಖಳನೆಸಲಸುರಹರನಂ
ಬರದಲನಿತನು ಕಡಿದು ಬಿಸುಟು ದುರಾತ್ಮಕನ ರಥವ
ತುರಗನಾಲ್ಕನು ಸೂತನನು ತ
ದ್ಧರಣಿಪನನಾಱಂಬಿನಲಿ ತನು
ಬಿರಿಯಲೆಚ್ಚನು ಕಡಿದನಭ್ರದಲನಿತುವನು ಹಂಸ ೨೯

ಆಯಿತಹುದೋ ಹಂಸ ಸುಭಟರ
ರಾಯನಲ್ಲಾ ಕಡಿದು ಬಿಸುಟೈ
ಸಾಯಕಂಗಳನಿಹುದು ವೀರರಿಗಂಗವಿನ್ನೊಂದು
ಸಾಯಕವನಿದೆ ಕೊಳ್ಳೆನುತ ಪೂ
ರಾಯದಲಿ ತೆಗೆದಿಟ್ಟನಾ ನಾ
ರಾಯಣನು ಭಲ್ಲೆಯದಲಾ ಹಂಸಾವನಿಪನೆದೆಯ ೩೦

ಎಚ್ಚಡೆದೆಯನು ತಾಗಿ ಥಟ್ಟುಗಿ
ದಚ್ಯುತನ ಶರ ಹಾಱೆ ಬೆನ್ನಲಿ
ಬೆಚ್ಚಿಬಿದ್ದನು ವೀರ ಕೈಕಾಲ್ಗಳನು ರಥದೊಳಗೆ
ಬೆಚ್ಚಿದನು ತನು ನಡುಗುತಾಡನು
ಕಚ್ಚಿದನು ಕಾಱಿದನು ರಕುತವ
ನೆಚ್ಚಱನು ಮಾಱಿದನು ಮೂರ್ಛೆಗೆ ಸೇನೆ ಕಳವಳಿಸೆ ೩೧

ಮಿಡುಕಿದನು ರಥದೊಳಗೆ ಮಿಗೆ ಕಡಿ
ವಡೆದ ಕಾಳೋರಗನವೋಲಡ
ವಡಿಸಿದನು ಬಿಸುಸುಯ್ಲು ಸೂಸಲು ಮೂಗು ಬಾಯ್ಗಳಲಿ
ಸೆಡೆದು ಕಣ್ಣಿದಿರಡಗಿ ಮೂರ್ಛಿಸಿ
ಕೆಡೆದನತ್ತಲು ಧಾರುಣಿಯ ರಿಪು
ಪಡೆ ನಿರಾಶ್ರಯವಾಯ್ತು ಕಂಗೆಟ್ಟೋಱಲಿದುದು ಮಱುಗಿ ೩೨

ಮತ್ತೆರಡು ಘಳಿಗೆಯಲಿ ಚಿತ್ತದ
ಕತ್ತಲೆಯನೊದೆವುತ್ತ ಬಾಣವ
ಕಿತ್ತು ಬೀಸಾಡಿದನು ಕೊಂಡನು ಚಾಪಮಾರ್ಗಣವ
ತೆತ್ತಿಸಿದನಂಬಿನಲಿ ಹರಿಯನು
ಮತ್ತಗಜ ಸಿಂಹವನು ಕಡುಗನ
ಲುತ್ತ ಹಳಚುವವೋಲು ಹಂಸನು ಹಳಚಿದನು ಮಗುಳೆ ೩೩

ಕೊಂಡನಾ ಸಾಲ್ವಾಧಿಪತಿ ಕೋ
ದಂಡವನು ಮುಷ್ಟಿಯಲಿರಲು ಹರಿ
ಖಂಡಿಸಿದನದನರ್ಧಚಂದ್ರಾಕೃತಿಯ ಬಾಣದಲಿ
ಕೊಂಡನದನುಳಿದಪರಧನುವನು
ತುಂಡಿಸಿದನಸುರರಿಪು ನೃಪಕೋ
ದಂಡವನು ತುಡುಕಿದನು ಮತ್ತದ ಕಡಿದನಸುರಾರಿ ೩೪

ಮತ್ತೆ ಕೊಂಡನು ಧನುವನವನಿಪ
ಕತ್ತರಿಸಿದನು ಕೃಷ್ಣನದ ಕನ
ಲುತ್ತ ಕಂಗಳು ಕಿಡಿಯನುಗುಳಲು ಹಂಸನಬ್ಬಱಿಸಿ
ಎತ್ತಿದೆತ್ತಿದ ಚಾಪನಿಕರವ
ಹಸ್ತದೊಳಗಿಕ್ಕಡಿಗಳೆದು ಮೂ
ವತ್ತುನೂಱು ಶರಾಸನಂಗಳನಿಳುಹಿದನು ಧರೆಗೆ ೩೫

ಆದಡುಹುದೋ ಕೃಷ್ಣ ನೀನೀ
ಯಾದವರೊಳಗ್ಗಳೆಯನಲ್ಲಾ
ಸೇದುವೆನು ಜೀವವನು ನೋಡೀ ಕ್ಷಣದಲಿದೆಯೆನುತ
ಕಾದ ಕಂಗಳ ರೌದ್ರವದನದ
ಬೀದಿಗಿಚ್ಚಿನ ರೋಷದಲಿ ದಾ
ಮೋದರನ ತಿರುಹಿಟ್ಟನೊಂದು ಶತಘ್ನಿಯಲಿ ಹಂಸ ೩೬

ಉರಿಯನುಗುಳುತ ಬಹ ಶತಘ್ನಿಯ
ನುರುಳೆಗಡಿದನು ಬಾಣವೊಂಭ
ತ್ತರಲಿ ಬಲಭದ್ರಾನುಜನು ಬೊಬ್ಬಿಱಿದು ಬವರದಲಿ
ಬರಸೆಳೆದು ಚಾಪವನು ಪಡೆದವ
ಸರವನಸ್ತ್ರಮಹಾಂಬುಧಿಯ ಮಳೆ
ಗಱೆದನರೆನಿಮಿಷದಲಿ ಕೃಷ್ಣನ ಮೇಲೆ ಕಲಿಹಂಸ ೩೭

ಕಡಿದು ಬಿಸುಟನು ಕೃಷ್ಣನನಿತುವ
ನೊಡನೆ ಸಿತಬಾಣಾವಳಿಯ ಬಲು
ಗಡಣದಲಿ ಹಂಸನನು ರಥವನು ಹಯಸಿಕಾಯವನು
ಬಿಡದೆ ಸೂತನನೆಚ್ಚನಂಬಿನ
ಕಡಲಲದ್ದುದು ಜಗವನೆನುತ್ತಡಿ
ಗಡಿಗೆ ಭೀತಿ ಮಹಾರ್ಣವದಲದ್ದುದು ಭಟಸ್ತೋಮ ೩೮

ಅತ್ತಲಾ ಸಾತ್ಯಕಿಯೊಡನೆ ತಲೆ
ಯೊತ್ತಿ ನೊಂದಾ ಬ್ರಹ್ಮದತ್ತ ನೃ
ಪೋತ್ತಮನು ಕೆಡೆಯೆಚ್ಚನಾ ಸಾತ್ಯಕಿಯ ಸಾರಥಿಯ
ಮತ್ತೆ ಹಯವೀರೆರಡನೆಚ್ಚನು
ಮತ್ತವನ ಸಾಹಸವ ನೋಡೆನು
ತತ್ಯಧಿಕರೋಷದಲಿ ಸುಭಟನ ನೊಸಲನೊಡೆಯೆಚ್ಚ ೩೯

ಭಲ್ಲೆಯದ ಬಲುಗಾಯದಲಿ ತನು
ತಲ್ಲಣಿಸಿ ಡೆಂಢಣಿಸಿ ರಥದಲಿ
ಬಿಲ್ಲ ಬಿಸುಟನು ಬಟ್ಟ ಕಂಗಳ ಬಿಗಿದ ಹುಬ್ಬಿನಲಿ
ಥಿಳ್ಳಿಸಿದ ಕಲಿತನದಲಪ್ರತಿ
ಮಲ್ಲನೊಱಗಿದನರುಣಜಲದಲಿ
ಮಿಳ್ಳಿಱಿವ ಮೇಲುಸುರುಗಳ ಗದುಗದಿಪ ಕಂಠದಲಿ ೪೦

ಎರಡು ಘಳಿಗೆಗೆ ವೀರ ಮೂರ್ಛೆಯ
ಲಿರಲು ಸಾರಥಿ ರಥವ ಹಿಂದಕೆ
ಮುರುಹಿದನು ಮೂಗಿನಲಿ ಪವನನ ಗತಿಯನೀಕ್ಷಿಸುತ
ಶಿರವನೊಲವುತ್ತಿರಲು ಘಳಿಗೆಯ
ನೆರಡನಾ ವೇದನೆಗೆ ಕೊಟ್ಟಾ
ಸರಸಿಜಾಕ್ಷನ ದಾಸನೆದ್ದನು ಮುರಿದು ಕಂದೆಱೆದು ೪೧

ಎಲವೊ ನಿಲು ನಿಲ್ಲೆನುತ ಸಾತ್ಯಕಿ
ಸೆಳೆದು ಚಾಪವ ಕಾಯ್ದುಕೊಳ್ಳಿದೆ
ತಲೆಗೆ ತಡವಿಲ್ಲೆನುತ ಚಂದ್ರಾರ್ಧಾರ್ಧಾಕೃತಿಯ ಶರವ
ಮುಳಿದು ತೆಗೆದೆಸಲೊಂದು ನಿಮಿಷಕೆ
ಕಳಲಿದುದು ತಲೆ ಬ್ರಹ್ಮದತ್ತನ
ಬಳಗ ಬೆದಱಲು ರತ್ನಕುಂಡಲಮಣಿಮುಕುಟಸಹಿತ ೪೨

ಕಟ್ಟೆಯೊಡೆದಂತಾಯ್ತು ಭೂಪತಿ
ಯಟ್ಟಿ ಕೆಡೆಯಲು ಸೇನೆ ಮಿಗೆ ಕಂ
ಗೆಟ್ಟು ಹೊಕ್ಕುದು ಮಱೆಯನಂದಾ ಹಂಸಡಿಬಿಕರನು
ಇಟ್ಟಣಿಸಿದುದು ಸಮರ ದನುಜಘ
ರಟ್ಟ ರಾಮುರಿಗಿರದೆ ರಥವನು
ಬಿಟ್ಟನಾ ಸಾತ್ಯಕಿ ಮುರಾರಿಯ ರಥದ ಹೊರೆಗಾಗಿ ೪೩

ಮುಸುಕಿದನು ಬಾಣದಲಿ ಹಂಸನ
ನಸುರರಿಪು ಶತಸಂಖ್ಯೆಯಲಿ ಸೇ
ರಿಸಿದನನಿತುವನಿಳೆಗೆ ಮಗುಳಾ ಹಂಸನಚ್ಯುತನ
ದೆಸೆಗೆ ಕವಿಸಿದನಂಬುಗಳ ನಿಂ
ತಸಮಸಮರಾರಂಭ ಮಿಗೆ ರಂ
ಜಿಸಿತು ಸುರನರಲೋಕವೆರಡಱಲನುಪಮಿತವೆನಿಸಿ ೪೪

ಸರಳಸೃಷ್ಟಿಗೆ ಹಂಸನಭಿನವ
ಸರಸಿಜೋದ್ಭವನಾದನಯ್ಯನ
ಮರಣವನು ಕಾಣುತ್ತ ಶೋಕಾಮರ್ಷವೇಗದಲಿ
ಹರಿಯನಾ ಹರಿರಥವನಾ ರಥ
ತುರಗಸಾರಥಿಗಳನು ಶರಸಾ
ಗರದಲದ್ದಿದನೊಂದು ನಿಮಿಷಾರ್ಧಾರ್ಧಮಾತ್ರದಲಿ ೪೫

ಇರಲು ಹರಿ ಸಾಲ್ವಾವನೀಶನ
ಭರವಸವ ಕಾಣುತ್ತ ಮಱು ಭಾ
ಪರರೆ ಬಲುಬಿಲ್ಲಾಳಲಾ ಮತ್ಸರವೆ ಗುಣದೊಡನೆ
ಸುರನರೋರಗರೊಳಗೆ ನಿನ್ನಂ
ತುರುಪರಾಕ್ರಮರಾರೆನುತ ಸಂ
ಹರಿಸಿದನು ಲೀಲೆಯಲಿ ಹಂಸನ ಸರಳಪಂಜರವ ೪೬

ಒದೆದು ಹಾವನು ಕೆಣಕಿದಂತಾ
ಯ್ತುಭಟನೆಚ್ಚನು ಭೀತಿಯನು ಹ
ಚ್ಚಿದನು ಸುರರಿಗೆ ಮುಚ್ಚಿದನು ನಿಮಿಷದಲಿ ಯದುಬಲವ
ಹೆದಱಿದನು ಸಾರಥಿ ಮಹಾಸ್ತ್ರದ
ಹೊದಱ ಹೊಯಿಲಲಿ ಹರಿವರೂಥದ
ಕುದುರೆಗಳು ಕಳವಳಿಸಿದುವು ಕೆಂಗೋಲ ಮಳೆಗಳಲಿ ೪೭

ಕೊಳಚೆಯುದಕದಲಕಟ ಮಂದರ
ಮುಳುಗುವುದೆ ನಡುಹಗಲ ಸೂರ್ಯನ
ನಳುಕಿಸುವುದೇ ಮಂಜು ಕಡಿದನು ರಿಪುಶರಾವಳಿಯ
ಬಳಿಕ ಮುರರಿಪು ಬಹಳ ರೋಷನ
ತಳೆದು ಹಂಸನ ವಧೆಗೆ ಕಲ್ಪ
ಪ್ರಳಯ ರುದ್ರನವೋಲು ರೌದ್ರಾವೇಶವನು ತಳೆದ ೪೮

ಕರೆದು ಸಾರಥಿತನಕೆ ನೇಮವ
ಕರುಣಿಸಿದನಾ ಸಾತ್ಯಕಿಗೆ ರಥ
ತುರಗತತಿಯನು ಸಂತವಿಸಿ ಹಿಂದಿರಿಸಿ ದಾರುಕನ
ಸುರನಿಕರಸಹಿತಭ್ರದಲಿ ಸರ
ಸಿರುಹಭವಭವಮುಖ್ಯರಾ ಸಂ
ಗರವನೀಕ್ಷಿಸಲೆಂದು ನೆರೆದುದು ಜಯರವಂಗಳಲಿ ೪೯

ಆ ಮಹಾಮರನಿಕರ ನೆರೆದಾ
ವ್ಯೋಮತಳದಲಿ ನೋಡಿ ಸುಜನ
ಸ್ತೋಮ ಸಹಿತೋರಂತೆ ಜಯರವಪುಷ್ಪವೃಷ್ಟಿಗಳ
ಸ್ತೋಮದಲಿ ರಂಜಿಸಲು ಘನಸಂ
ಗ್ರಾಮದಲಿ ಮುರವೈರಿ ತೊಟ್ಟನು
ಧೂಮಕೇತುಸನಾಮ ಶರವನು ಭಟನ ಪಡಿಮುಖಕೆ ೫೦

ಎಸಲು ಧೂಮಜ್ವಾಲೆ ಗಗನವ
ಮುಸುಕಿದುದು ಸುರವರವಿಮಾನ
ಪ್ರಸರ ಚೆಲ್ಲಿದವೆಂಟುದೆಸೆಗನಲಾಸ್ತ್ರತೇಜದಲಿ
ವಸುಧೆ ಸೀಕರಿಯೋಗಲದ ನೀ
ಕ್ಷಿಸುತ ಬೆದಱದೆ ವರುಣಬಾಣದ
ಲಸಮಬಲನಾ ಹಂಸನೆಚ್ಚನು ಜಱೆದು ಬೊಬ್ಬಿಱದು ೫೧

ಆದಡಿದ ಕೊಳ್ಳೆನುತ ಕೆನ್ನೆಗೆ
ಸೇದಿ ವಾಯವ್ಯಾಸ್ತ್ರವನು ದಾ
ಮೋದರನು ತೆಗೆದೆಸಲು ಕಾಣುತ್ತಭ್ರಮಾರ್ಗದಲಿ
ಭೇದಿಸಿದನೊಂದಸ್ತ್ರದಲಿ ಹಱು
ವಾದುದಿನ್ನೇನುಂಟು ಶರವೆನು
ತಾ ದುರಾತ್ಮಕನಟ್ಟಹಾಸವ ಮಾಡಿ ಗರ್ಜಿಸಿದ ೫೨

ಉಂಟು ನಿನಗೀ ನಿನ್ನ ಹೊದ್ದಿದ
ನಂಟರಿಗೆ ನಲ್ಲರಿಗೆ ಸುತರಿಗೆ
ಗಂಟಲಿಂದೊಳಗಿಳಿವಡಿದ ಕೊಳ್ಳೆನುತ ಕೋಪದಲಿ
ಕಂಟಣಿಸುತರಿಭಟನ ತೆಗೆವೆನು
ಸುಂಟಿಗೆಯನೆಂದೆನೆನುತ ದಾನವ
ಕಂಟಕನು ತೆಗೆದೆಚ್ಚನಾ ಬ್ರಹ್ಮಾಸ್ತ್ರದಲಿ ನೃಪನ ೫೩

ಇಲ್ಲ ನೋಡದು ಹುಸಿಯೆನುತ ಬಲು
ಬಿಲ್ಲ ಜಡಿದೈತಹ ಮಹಾಸ್ತ್ರದ
ದಳ್ಳುರಿಯ ಧಾಳಿಯನು ನೀರ್ದಾಟಿಸಿ ತದಸ್ತ್ರದಲಿ
ಬಲ್ಲಿದನು ನೀನಹೆಯಲಾ ನೆಱೆ
ಗೊಲ್ಲರಿಗೆ ಸಮರಾಂಗವಿದ್ಯೆಯ
ದೆಲ್ಲಿಯದು ನಿನಗೆನುತ ಗಹಗಹಿಸಿದನು ಕಲಿಹಂಸ ೫೪

ದಿಟ್ಟನಹೆಯೋ ವೀರ ಮಾಡಿ
ನ್ನಟ್ಟಹಾಸವನೆನುತ ದನುಜಘ
ರಟ್ಟನಧಿಕಾಟೋಪದಲಿ ನಾರಾಯಣಾಸ್ತ್ರವನು
ಮುಷ್ಟಿಯೊಳಗಿರೆ ನಮಿಸಿ ಮನದಲಿ
ತೊಟ್ಟನಾ ಶಾರ್ಙ್ಗದಲಿ ದಿವವನು
ಬಿಟ್ಟು ವೈಮಾನಿಕರು ಚಲ್ಲಲು ಝಳದ ಹೊಯ್ಲಿನಲಿ ೫೫

ಭುಗು ಭುಗಿಲು ಭೋರೆಂದು ಕಬ್ಬೊಗೆ
ನೆಗೆದುದಬುಜಭವಾಂಡಮಂಡಲ
ಬಗೆಯೆ ಬಹಳ ಜ್ವಾಲೆಯಲಿ ದೆಸೆ ಧಾತುಗೆಡಲಿಳೆಗೆ
ಜಗುಳಿದವು ತಾರೆಗಳು ಸೀದುದು
ಗಗನಮಣಿಮಂಡಲ ಮಹಾಸ್ತ್ರದ
ಸೆಗಳಿಕೆಯನೇನೆಂಬೆ ತಲ್ಲಣಿಸಿದುದುಭಯಕಟಕ ೫೬

ಕಂಡನೋಡುವ ನಭದ ದಿವಿಜರ
ತಂಡವನು ನಾರಾಯಣಾಸ್ತ್ರದ
ಚಂಡಿಮೆಯ ತೇಜದ ಧಡಾಳದ ಹೊಗರು ದೆಸೆದೆಸೆಯ
ಮಂಡಲವನಾವರಿಸುತಿರಲದ
ಕಂಡು ಹಂಸನ ಮನದೊಳಗೆ ಭಯ
ಗೊಂಡು ಕೃತ್ಯವಿಮೂಢನಾದನು ನಿಮಿಷಮಾತ್ರದಲಿ ೫೭

ಮೃತ್ಯು ಬಾಯ್ದೆಱೆದಂತೆ ಭುಗುಭುಗಿ
ಸುತ್ತಿರಲು ಶಾರ್ಙ್ಗದಲಿ ಬಹಳ ಮ
ಹಾಸ್ತ್ರವೈತರಲಿನ್ನು ನಿಲುವವರಾರು ಸಮ್ಮುಖಕೆ
ಹೊತ್ತುತಿದೆ ಜಗವೆನುತ ಭಯರಸ
ವೆತ್ತು ನೋಡುವಡಂಜಿ ಕಳವಳಿ
ಸುತ್ತ ರಥದಿಂದಿಳಿದು ಹಾಯ್ದನು ಹಂಸನಳವಳಿದು ೫೮

ಬಿಲ್ಲ ಬಿಸುಟೋಡಿದನು ಧುರದಲಿ
ಸಾಲ್ವ ಕುಲಪಾಲಕನು ಲಕ್ಷ್ಮೀ
ವಲ್ಲಭನು ಬೆಂಬತ್ತಿದನು ಬಳಿಕಾತನನು ಬಿಡದೆ
ನಿಲ್ಲೆಲವೊ ಶರಣೆನ್ನು ನಿನ್ನನು
ಕೊಲ್ಲೆನೆನುತಸ್ತ್ರವನು ಸೆಳೆದರಿ
ಮಲ್ಲನನು ಮೂದಲಿಸುತೈದಿದನಿಳಿದು ನಿಜರಥವ ೫೯

ಮುರಿಮುರಿದು ನೋಡುತ್ತ ಭಯದಲಿ
ಧರಣಿಪತಿ ಬೆಂಬತ್ತಿಬಹ ಮುರ
ಹರನನಾ ಯಮುನಾನದಿಯ ನಡುಗಡಲ ಮಧ್ಯದಲಿ
ಇರದೆ ಧುಮ್ಮಿಕ್ಕಿದನು ಕಂಡಾ
ಸುರರುಘೇಯೆನಲವನ ಮಸ್ತಕ
ಜರಿಯೆ ಕಾಲೂಱುತ್ತ ಧುಮ್ಮಿಕ್ಕಿದನು ಮುರವೈರಿ ೬೦

ರಂಗನಾಥನ ಪದಹತಿಗೆ ರಣ
ರಂಗಭೀತನು ಬಿದ್ದನಿರದೆ ಭು
ಜಂಗಲೋಕಕೆ ಬಹ ದುರಾತ್ಮನ ಕಂಡು ಕಡುಹಸಿದು
ನುಂಗಿದನು ಧೃತರಾಷ್ಟ್ರನೆಂಬ ಭು
ಜಂಗಮೇಂದ್ರನು ಕಜ್ಜಲಶ್ಯಾ
ಮಾಂಗನೆದ್ದನಸುರಾರಾತಿ ಧುರದೆಡೆಗೆ ೬೧

ಲೇಸೆನುತ ಸುರವರರು ನೆರೆದಾ
ಕಾಶದಲಿ ಘನಪುಷ್ಪವೃಷ್ಟಿಯ
ಸೂಸಿದರು ಜಯ ಜಯ ಜನಾರ್ದನ ಕೃಷ್ಣ ಜಯಯೆನುತ
ಭೂಸುರರು ಋಷಿವರರು ಹರುಷಾ
ವೇಶದಲಿ ಮುಳುಗಿದರು ವರಲ
ಕ್ಷ್ಮೀಶ ನಿತ್ಯಾತುಮನ ಬಹಳ ಪರಾಕ್ರಮವ ಕಂಡು ೬೨

ಐವತ್ತಾರನೆಯ ಸಂಧಿ ಮುಗಿಯಿತು.

# ಐವತ್ತೇಳನೆಯ ಸಂಧಿ

ಹಂಸಡಿಬಿಕರನೊರಸಿ ಧುರದಲಿ
ಕಂಸಮಥನನು ಮರಳಿ ಯಾದವ
ವಂಶಸಹಿತೈತಂದು ಹೊಕ್ಕನು ದ್ವಾರಕಾಪುರವ

ಅರಸ ಕೇಳಸುರಾರಿ ಹಂಸನ
ಹರುವ ಕಾಣುತ ನಿಜ ವರೂಥದ
ಹೊರೆಗೆ ಬಿಜಯಂಗೈದನಾ ಸಾತ್ಯಕಿಸಮನ್ವಿತದ
ಸುರರು ಜಯ ಜಯ ಯೆನುತ ಗಗನದ
ಲಿರದೆ ಕೈವಾರಿಸಲು ಕೇಳಿದ
ನುರುಪರಾಕ್ರಮಿ ಡಿಬಿಕನತ್ತಲು ಹಂಸನಪಗತವ ೧

ಬಿಟ್ಟು ರಥವನು ಧನುಸಹಿತ ಕಂ
ಗೆಟ್ಟು ಹಂಸನ ಮರಣವಾರ್ತೆಯ
ನೆಟ್ಟನಾಲಿಸಿ ರಾಮನೊಡನೆಯ ಸಂಗರವ ಬಿಸುಟು
ಕೆಟ್ಟೆನೆನುತೈತಂದು ದನುಜಘ
ರಟ್ಟನಲ್ಲಿಗೆ ಮೇಘರವದಲಿ
ದುಷ್ಟನೃಪನಿಂತೆಂದನವನೀಪಾಲಮಧ್ಯದಲಿ ೨

ಕರುಣಿಸೆನಗೆಲೆ ಕೃಷ್ಣ ಯಾದವ
ರರಸ ಮಾಯಾಮನುಜವಿಗ್ರಹ
ಗರುಡವಾಹನ ಶತ್ರುಹರ ಧರ್ಮಜ್ಞ ಗೋವಿಂದ
ಪರಮಪುರುಷ ಸುರೇಂದ್ರವಂದಿತ
ಚರಣ ತನ್ನೊಡವುಟ್ಟಿದವರಿ
ದ್ದಿರವದಾವೆಡೆ ಸತ್ಯವನೆ ಹೇಳೆನಗೆ ನೀನಿಂದು ೩

ಹೇಳು ಹಂಸನು ಹೋದ ಪಥವ ಕೃ
ಪಾಳು ಗಡ ನೀನೆನಲು ಲಕ್ಷ್ಮೀ
ಲೋಲನಾತನ ನುಡಿಗೆ ಮೆಚ್ಚಿ ಮನೋನುರಾಗದಲಿ
ಹೇಳಿದನು ನಸುನಗುತ ಹಂಸನ
ಕಾಳು ಮೂಢನ ಮಾತು ನೃಪಕುಲ
ಮೌಳಿಮಣಿ ನಿನಗೇಕೆ ನಡೆ ನಿಜಪುರಕೆ ನೀನೆಂದ ೪

ಬೆಂಬಲಕೆ ತಾನಿಹೆನು ಹಂಸನ
ಹಂಬಲನು ಬಿಡು ಧರೆಯ ರಾಜ್ಯವ
ನುಂಬುದುಪಚಿತ ರಾಷ್ಟ್ರವಾಹನಕೋಶಪರಿಜನವ
ನಂಬು ನಡೆ ತಾನೀವೆನೆನ್ನುವ
ನೆಂಬ ಹರಿಯನು ನೋಡಿ ಕಂಬನಿ
ದುಂಬಿದನು ಶೋಕಾತುರನು ಮಗುಳೆಂದನುತ್ತರವ ೫

ಮೇದಿನಿಯ ಮೇಲಿಲ್ಲ ನಿನ್ನೋ
ಪಾದಿ ಸತ್ಯವ್ರತರು ಬಹಳ ಕೃ
ಪೋದಧಿಯೆ ಕರುಣಿಸುವುದೆನಗೆನ್ನಣ್ಣನೇನಾದ
ಹೋದನೆಲ್ಲಿಗೆ ಹೇಳು ತನಗೀ
ಮೇದಿನಿಯ ರಾಜ್ಯವಿದು ನಿಸ್ತೀ
ರ್ಣೋದಕಾಹಿತಸೇತುವೆಂದನು ಡಿಬಿಕನಳವಳಿದು ೬

ತಂದೆ ತಾಯೊಡಹುಟ್ಟಿದವರಿವ
ರೆಂದು ನೋಳ್ಪರೆ ರಾಜ್ಯಕಾಮುಕ
ರಿಂದಿನೀ ಕ್ಷತ್ರಿಯರ ಕುಲಜರು ವರ್ತಮಾನದಲಿ
ಇಂದು ನಿನ್ನಲಿದಾಯ್ತು ಹೊಸತೆಲೆ
ಮಂದಮತಿ ಬದುಕು ನಡೆ ನಡೆ ನಿಜ
ಮಂದಿರಕೆ ಕೈಗಾವೆನಂಜದಿರೆಂದನಸುರಾರಿ ೭

ಏಕೆ ಕೃಷ್ಣ ವೃಥಾಪಳಾಪವಿ
ದಾಕುಲನು ತಾನಲ್ಲ ರಾಜ್ಯ
ಶ್ರೀಕರಕೆ ಮೇಣ್ಕೊಲುವೆ ನೀನೆಂದೆಂಬ ಭಯವಿಲ್ಲ
ಸಾಕು ತನಗಿನ್ನೇನು ಹಂಸನ
ಲೋಕವೇ ತನಗಲ್ಲದುಂಟೇ
ಲೋಕ ಬೇಱಿನ್ನೆಂದು ಕಂಬನಿದುಂಬಿದನು ಡಿಬಿಕ ೮

ಖೂಳ ಭೂಪರ ಮಗನೆ ಹೋಗಾ
ಕೇಳು ಯಮುನೆಯನಣ್ಣನಿರವನು
ಹೇಳುವಳು ನಿನಗೆಂದು ಬೆಸಸಿದನಸುರರಿಪು ನಗುತ
ಬಾಳಲಾಱದೆ ಭೂಪನಾ ಶ್ರೀ
ಲೋಲನಾಜ್ಞೆಯಲೈದಿದನು ಬಲು
ಗಾಳಗವ ಬೀಸಾಡಿ ಯಮುನಾನದಿಗೆ ಹಳವಿಸುತ ೯

ಕರೆಕರೆದು ಹಂಸನನು ದುಃಖಾ
ತುರನು ಯಮುನೆಯಲಱಸಿ ಕಾಣದೆ
ಭರದಲಾಳುತ್ತೇಳುತಲಿ ನಿರ್ಮಳಸರೋಜಲವ
ಇರದೆ ಕದಡಿದನದನು ಭೂಪತಿ
ಮರಳು ಮರಳೆಲೆಯಣ್ಣ ತನ್ನನು
ಹೊಱಗಿರಿಸಿ ನೀ ಹೋದೆಯೆಲ್ಲಿಗೆನುತ್ತ ಹಳವಿಸುತ ೧೦

ಕೇಳೆ ನೀನೇಕಣ್ಣ ಮಾತನು
ಹೇಳೆ ತನ್ನೊಡನೇಕೆನುತ ಪಾ
ತಾಳಪರಿಯಂತಱಸಿ ಕಾಣದೆ ಹಂಸನಿದ್ದಿರವ
ಬಾಳಲೇಕಿನ್ನೆನುತ ತನ್ನಯ
ನಾಲಗೆಯನುಱೆ ಹಿಡಿದು ಕೈಯಲಿ
ಕೀಳಲನುಗೈದನು ಮಹಾಪಾತಕಿ ತಟಾಕದಲಿ ೧೧

ಮತ್ತೆ ಪಾತಕಿ ನಾಲಗೆಯನದ
ಕಿತ್ತು ತಾನೇ ತನ್ನ ಕೈಯಲಿ
ಸತ್ತನದುವೇ ಮಹದತಿಕ್ರಮಪಾತಕದ ಫಲವು
ಅತ್ಯಧಿಕಪಾತಕವ ಮಾಡಲಿ
ಹತ್ತಿರದೆ ನೆಱೆ ಫಲಿಸದಿರದೆಂ
ದುತ್ತಮರು ತಮ್ಮೊಳಗೆ ನುಡಿದರು ಖಳರ ಮರಣದಲಿ ೧೨

ಮೂಱು ವರುಷಂಗಳಲಿ ಮೇಣದು
ಮೂಱು ಮಾಸಂಗಳಲಿ ತೋರ್ಪುದು
ಮೂಱು ಪಕ್ಷಂಗಳಲಿ ಮೂಱು ದಿನಂಗಳಲಿ ದಿಟಕೆ
ತಾಱುಥಟ್ಟನ ಪಾಪಫಲ ವೈ
ದೋಱುವುದು ಮೇಣ್ಪುಣ್ಯವಾಗಲಿ
ತೋಱುವುದು ದಿಟ ತಾರತಮ್ಯದಲೆಂದುದಖಿಳಜನ ೧೩

ಇಂತೆನುತ್ತಿರೆ ಸಕಲ ಸುರಜನ
ಸಂತತಿಗಳಾ ಸಾಲ್ವಭೂವರ
ರಂತಕನ ಪುರಕೈದಿದರು ಮೂವರು ದುರಾತ್ಮಕರು
ಸಂತವಿಟ್ಟನು ಸಕಲ ಮುನಿಗಳ
ಸಂತತಿಯನೊಲವಿನಲಿ ಲಕ್ಷ್ಮೀ
ಕಾಂತನವರವರೀಪ್ಸಿತಾರ್ಥವರಪ್ರದಾನದಲಿ ೧೪

ಬಳಿಕ ಸಂಸ್ತುತಿಪಾಠ ಜಯರವ
ಗಳಲಿ ಸಕಲ ಮುನೀಶ್ವರರು ಮನ
ವೊಲಿದು ಭಜಿಸುತ್ತಿರಲು ದೂರ್ವಾಸಾದಿ ಮುನಿನಿವಹ
ಬಳಿಸಲಲು ಯಾದವಚತುರ್ಬಲ
ವುಲಿಯೆ ಸಾಗರಘೋಷದಲಿ ಮಂ
ಗಳಮಹಿಮನೈತಂದು ಹೊಕ್ಕನು ದ್ವಾರಕಾಪುರವ ೧೫

ತಳಿಗೆಗಳ ತೋರಣದ ಮುಕ್ತಾ
ವಳಿಯ ಗುಡಿಗಳ ಚಿತ್ರರಚನೆಯ
ಕಳಸಕನ್ನಡಿಗಳ ಸುಮಂಗಳವಾದ್ಯಘೋಷದಲಿ
ಹೊಳಲಜನವಿದಿರ್ಗೊಂಡು ಹರುಷಾ
ಕುಳಿತ ನಯನಾಪಾಂಗ ಭೃಂಗಾ
ವಳಿಗಳಲಿ ಸೇವಿಸುತಲಿರ್ದರು ತನ್ಮುಖಾಂಬುಜವ ೧೬

ಕುಡಿಕುಡಿದು ಕಂಗಳಲಿ ತುಷ್ಟಿಯ
ಪಡೆಯರಾ ಪುರವನಿತೆಯರು ಜಗ
ದೊಡೆಯನಾನನ ಕಮಲವನು ಸುಸ್ಮಿತಸುಧೇಕ್ಷಣದ
ಕಡಲ ಮಗಳಾವನಪದಾಬ್ಜವ
ಬಿಡದೆ ಭಜಿಸುವಳೆನಲು ಲೋಕದ
ಮಡದಿಯರು ಮರುಳಹುದು ಚಿತ್ರವೆ ಭೂಪ ಕೇಳೆಂದ ೧೭

ದಣಿದು ದಣಿಯವು ಕಂಗಳಿಂದ್ರಿಯ
ಗಣದೊಡನೆ ಮನಸಿಲುಕಿ ನಿಂದೋ
ರಣದ ಚಿತ್ರದವೋಲು ಪುಳಕಿತಗಾತ್ರೆಯರು ನೆರೆದು
ಮಣಿದು ಮನುಮಥನಲಗುಸಾರದ
ಕಣೆಯ ಘಾಯದ ಘಾತಿಯಲಿ ಡೆಂ
ಢಣಿಸುತಿರ್ದುದು ಬಹಳನಯನಪ್ರೀತಿವಾರ್ಧಿಯಲಿ ೧೮

ತೊಗಲು ಹಱಿಯದು ರೋಮ ಸೀಯದು
ಸೆಗಳಿಕೆಯ ಮನುಮಥನ ಬಾಣಾ
ಳಿಗಳು ಹೊಕ್ಕುವು ಮನವನಿಕ್ಕಡಿಗಳೆದವಬಲೆಯರ
ಢಗೆ ತಳಿತುದೊಡಲೊಳಗೆ ಕಣ್ಣಲಿ
ಮೊಗೆಮೊಗೆದು ತನ್ಮೂರ್ತಿಸುಧೆಯನು
ಜಗುಳಿದರು ಜವಗುಂದಿದರು ಜೋಲಿದರು ಝೊಮ್ಮಿನಲಿ ೧೯

ಧಾತು ಮೂಱಱಲೊಗೆದ ಮಲಸಂ
ಘಾತದೊಡಲಿನ ಚೆಲುವಿಕೆಗೆ ಮನ
ಸೋತು ಮರುಳಹರೆಂದಡಧ್ರುವದಲಿ ಚರಾಚರದ
ಚೇತನಕೆ ಚೇತನವೆನಿಪ ಸಾ
ಕ್ಷಾತ ಚೆಲುವಿನ ಪುತ್ಥಳಿಯ ಪರ
ಮಾತುಮಗೆ ಸೋಲುವುದು ಚಿತ್ರವೆ ಭೂಪ ಕೇಳೆಂದ ೨೦

ಕೀಳಲರಿದಾಯ್ತುಮಮ ಮೊದಲಲಿ
ಕೀಲಿಸಿದ ಕಂಗಳನು ಲಕ್ಷ್ಮೀ
ಲೋಲನೊಂದಂಗಸೌಂದರ್ಯಾಮೃತಾಬ್ಧಿಯಲಿ
ಸಾಲಭಂಜಿಕೆಯಾದರೆಂದಾ
ಬಾಲೆಯರು ಕಡೆಗಣ್ಣಲನಿಬರ
ನಾಲಿಸುತ ಮುರವೈರಿ ಹೊಕ್ಕನು ರಾಜಮಂದಿರವ ೨೧

ಕಳುಹಿದನು ಕೈಸನ್ನೆಯಲಿ ನೃಪ
ಕುಲವನಾಪ್ತರನಖಿಳವಿಪ್ರಾ
ವಳಿಗಳನು ಕೈಮುಗಿದು ವಿನಯೋಕ್ತಿಯಲಿ ಮುನಿಕುಲವ
ಮೆಲುನಗೆಯಲಕ್ರೂರ ಸಾತ್ಯಕಿ
ಗಳನು ಕೃತವರ್ಮಾದಿ ಸುಭಟಾ
ವಳಿಗಳನು ಕಳುಹಿದನು ಕಾರುಣ್ಯದಲಿ ಮನೆಗಳಿಗೆ ೨೨

ಇಳಿದು ರಥವನು ರತ್ನಪಾದುಕೆ
ಗಳಲಿ ಪದಕಮಲಂಗಳೆಸೆಯಲು
ನಲವು ಮಿಗಲುದ್ಧವನ ಕೈವಿಡಿದೊಲಿದು ದಾರುಕನ
ತಲೆದಡವಿ ತುರಗಾವಳಿಯ ಮೈ
ಗಳನೊಱಸಿ ಬೀಳ್ಕೊಳಿಸಿ ಕರುಣಾ
ಜಲಧಿ ಬಂದೆಱಗಿದನು ಮಾತಾಪಿತೃಗಳಡಿಗಳಿಗೆ ೧೩

ನೋಡಿದರು ಕಣ್ದಣಿಯೆ ಕೈಗಳ
ನೀಡಿ ತೆಗೆದಪ್ಪಿದರು ಹರುಷದ
ಘಾಡಿಕೆಯ ಘನಪುಳಕರಸ ಸೌರಂಭದಲಿ ಮುಳುಗಿ
ಕೋಡಿದರು ಕಂಬನಿಯ ಕಡಲಲಿ
ರೂಢಿಯಲಿ ಮುನ್ನಾವ ತಪವನು
ಮಾಡಿ ಜನಿಸಿದರೋ ಮಹಾತ್ಮರು ಭೂಪ ಕೇಳೆಂದ ೧೪

ಭಕ್ತಹಿತಸಂಸಾರಿಕನು ನಿಜ
ಭಕ್ತಭವಸಂತಾಪಹರ ಸು
ವ್ಯಕ್ತಕಾರಣವಿಗ್ರಹನು ಮನವೊಲಿದು ನಿಜಜನಕೆ
ಭಕ್ತಿಮುಕ್ತಿಸುಖಂಗಳನು ನಿ
ರ್ಮುಕ್ತಮಾಯನು ಮಾಡುತಖಿಳಾ
ಸಕ್ತಸಂತಸನಿರ್ದನಂತಾನರ್ತನಗರಿಯಲಿ ೧೫

ಒಂದು ದಿನ ಸಭೆಯೊಳಗೆ ಯಾದವ
ವೃಂದದಲಿ ನಾನಾನೃಪಾಲರ
ಗೊಂದಣದ ಮಣಿಮುಕುಟನಿಕರದ ಕಾಂತಿಗಳು ಮೆಱೆಯೆ
ವಂದಿಗಳ ಮಾಗಧರ ಸೂತರ
ಸಂದಣಿಯದೆಸದಿರಲು ವಿಪ್ರನು
ಬಂದನೊಬ್ಬನು ಕೃಷ್ಣಪದಸಂದರ್ಶನಾರ್ಥದಲಿ ೧೬

ಹೇಳಿದನು ಕುಂತೀಕುಮಾರರು
ಬಾಲಕರು ಕಲಿತನದಲಾ ಪಾಂ
ಚಾಲರಾಜನ ದ್ರುಪದನನು ಕಟ್ಟಿದರು ತಾವೆಂಬ
ಕಾಳಗದ ಕಥನವನು ಕೌತುಕ
ದೇಳಿಗೆಯ ಸಂತೋಷರಸಪುಳ
ಕಾಳಿಗಳಲದ್ದಿದನು ವಸುದೇವಾದಿ ಯಾದವರ ೧೭

ನಸುನಗುತ ಮುರವೈರಿ ಮಿಗೆ ಮ
ನ್ನಿಸುತ ವಿಪ್ರನನಧಿಕಪುಳಕ
ಪ್ರಸರದಲಿ ತನು ಮುಳುಗಿ ದಿಟವನು ತಿಳಿದು ಬಹುದೆಂದು
ಬೆಸಸಿದನು ಕೃತವರ್ಮನನು ಬಳಿ
ಕಸಮವಿಕ್ರಮನೆಯ್ದಿದನು ವರ
ಶಶಿಕುಲದ ರಾಯರಲಿ ಮೆಱೆವಾ ಹಸ್ತಿನಾಪುರಕೆ ೧೮

ಕಂಡನಾ ಧೃತರಾಷ್ಟ್ರನೃಪನನು
ಕಂಡನಾ ದುರ್ಯೋಧನಾದ್ಯರ
ಕಂಡನಾ ಕುರುವೃದ್ಧಭೀಷ್ಮದ್ರೋಣಗೌತಮರ
ಕಂಡನಶ್ವತ್ಥಾಮವಿದುರಾ
ಖಂಡಲಾತ್ಮಜಭೀಮಧರ್ಮಜ
ಚಂಡವಿಕ್ರಮನಕುಲಸಹದೇವರನು ಕೃತವರ್ಮ ೧೯

ಕುಂತಿಯನು ಸಂಭಾವಿಸುತ್ತ ಕೃ
ತಾಂತಸುತಭೀಮಾದಿಗಳನ
ತ್ಯಂತ ಕುಶಲಪ್ರಶ್ನದಿಂದಪ್ಪಿದನು ಹರುಷದಲಿ
ತಿಂಥಿಣಿಯ ತನುಪುಳಕರಸದಲಿ
ತಂತಮಗೆ ಪಾಂಡವರು ಮುಳುಗಿದ
ರಂತವಿಲ್ಲದ ಬಂಧುದರುಶನಬಹಳಸೌಖ್ಯದಲಿ ೨೦

ಲಾಲಿಸಿದರುಚಿತೋಕ್ತಿಗಳಲಿ ವಿ
ಶಾಲಭೋಜನಪಾನಭೂಷಣ
ಜಾಲದಲಿ ಕೃತವರ್ಮನನು ತದ್ಬಂಧುಕೃತ್ಯದಲಿ
ಕೇಳಿದರು ಕೃಷ್ಣನ ಪರಾಕ್ರಮ
ಶೀಲಗುಣಸಾಹಸವನುನ್ನತ
ಲೀಲೆಯನು ಸಂಗ್ರಾಮಸಮ್ಮತ ಬಾಹುವಿಕ್ರಮವ ೨೧

ವಿಗಡಕಂಸಾಸುರನ ವಧೆಯನು
ಮಗಧಪೃಥ್ವೀಪಾಲನಾಹವ
ದೊಗುಮಿಗೆಯ ಬಹುರಾಜವಿಜಯವನತುಳಸಾಹಸವ
ತಗುಳಿದಡೆ ಯವನನನು ಭೂಪನ
ದೃಗುಯುಗಳ ವಹ್ನಿಯಲಿ ಸುಟ್ಟುದ
ನಗಧರನ ಲೀಲೆಯನು ವಿಸ್ತರಿಸಿದನು ಕೃತವರ್ಮ ೨೨

ಆ ಸೃಗಾಲನ ಹಂಸಡಿಬಿಕರ
ನಾಶವನು ತದ್ಬ್ರಹ್ಮದತ್ತಮ
ಹೀಶವಧೆಯನು ಸಾಗರದ ಮಧ್ಯದಲಿ ದುರ್ಗವನು
ಲೇಸೆನಿಸಿ ನಿರ್ಮಿಸಿದ ಕಥನವ
ನಾ ಸುಮತಿ ವರ್ಣಿಸುತ ಘನಪರಿ
ತೋಷಮಯಸಾಗರದಲದ್ದಿದನಂದು ಪಾಂಡವರ ೨೩

ಎಂದಡದನೆಲ್ಲವನು ಧರ್ಮನ
ನಂದನನು ಕೇಳುತ್ತ ಪುಳಕದ
ಸಂದಣಿಯ ಸಂತೋಷ ಜಲದೊಳಗದ್ದನಡಿಗಡಿಗೆ
ಬಂದುದೆನ್ನಯ ಕರತಳಕೆ ಗೋ
ವಿಂದನಿರೆ ಸಾಮ್ರಾಜ್ಯವಿಭವವಿ
ದೆಂದು ಹಿಗ್ಗಿದನನುಜಬಾಂಧವಭೃತ್ಯಜನಸಹಿತ ೨೪

ಇಂತು ಲಕ್ಷ್ಮೀಕಾಂತನಮಳೋ
ದಂತಕಥನಶ್ರವಣಸುಖದಲಿ
ಸಂತವಿಸಿ ಸತುಕರಿಸಿ ಪಾಂಡುಕುಮಾರಕರನೊಲಿದು
ಕುಂತಿಯಳಲನು ಕಳೆದು ಬಾಂಧವ
ಸಂತತಿಯ ಬೀಳ್ಕೊಂಡು ಕೃಷ್ಣಪ
ದಾಂತಿಕಕೆ ಕೃತವರ್ಮನೆಯ್ತಂದನು ಸರಾಗದಲಿ ೩೫

ಬಂದನಿನನಸ್ತಮಯಸಮಯದ
ಲಂದು ಸಕಲಾವನಿಯ ರಾಯರ
ವೃಂದದಲಿ ಯಾದವಮಹಾಭಟನಿಕರಮಧ್ಯದಲಿ
ನಿಂದು ಹೊಗಳುವ ಸೂತಮಾಗಧ
ನಂದಿಗಳ ಕಳಕಳದಲೆಸೆವ ಮು
ಕುಂದನೋಲಗದೆಡೆಗೆ ವಿನಯಾನ್ವಿತನು ವಹಿಲದಲಿ ೩೬

ಸುಳಿವ ಚಾಮರರಾಜಹಂಸಾ
ವಳಿಯ ಧವಳಚ್ಛತ್ರಪೀನೋ
ಜ್ವಲ ಮಹಾನರ್ತದ ನೃಪಾಲರ ಮಕುಟಮಣಿಗಣದ
ಕೆಲದ ಝುಲ್ಲರಿಗಳ ತರಂಗಾ
ವಳಿಯ ಹೊಗಳುವ ಸೂತಮಾಗಧರ ಕಳ
ಕಳದ ಕೃಷ್ಣಸಭಾಮಹಾಂಬುಧಿ ರಂಜಿಸಲು ಕಂಡ ೩೭

ವಿನುತ ಮಣಿಮಯಹೇಮಸಿಂಹಾ
ಸನದಲಖಿಳೈಶ್ವರ್ಯತೇಜೋ
ವನಧಿಯೆನಿಸಿ ಮುಕುಂದನೊಪ್ಪಿರೆ ಕಂಡು ಚರಣದಲಿ
ತನುವನೀಡಾಡಿದನು ಪಾಂಡವ
ರನುನಯದ ಸುಸ್ನೇಹವಚನವ
ನನಿತುವನು ಕೈಮುಗಿದು ಬಿನ್ನಹಮಾಡಿದನು ಹದನ ೩೮

ಕೇಳಿದನು ಕುಂತೀಕುಮಾರಕ
ರೇಳಿಗೆಯನಾ ದ್ರುಪದಪೃಥ್ವೀ
ಪಾಲವಿಜಯಾರಂಭಸಂಭೃತಬಾಹುಸತ್ವವನು
ತೂಳಿದವು ತನುಪುಳಕರಸ ಕ
ಣ್ಣಾಲಿಗಳಲೊಸರಿದುದು ಭಕ್ತ ಕೃ
ಪಾಳು ಹೊಂಪುಳಿಯೋದನಾನಂದಾಬ್ಧಿಯಲಿ ಮುಳುಗಿ ೩೯

ಅತ್ತಲಾ ಪಾಂಡವರು ಯಾದವ
ರಿತ್ತಲೆನ್ನವರೆಂಬ ಮಮತೆಯ
ದೆತ್ತಣದು ಸರ್ವಾತ್ಮಕಂಗೇಕಾತ್ಮರೂಪಂಗೆ
ಎತ್ತಲಿದನಾರಜೀವರೆಲೆ ಭೂ
ಪೋತ್ತಮನೆ ತನಗೆಂತುಟೋ ನಿಜ
ಭೃತ್ಯಜನವಾತ್ಸಲ್ಯವಾ ನಿತ್ಯಾತ್ಮಕೃಷ್ಣಂಗೆ ೪೦

ಐವತ್ತೇಳನೆಯ ಸಂಧಿ ಮುಗಿಯಿತು.

# ಐವತ್ತೆಂಟನೆಯ ಸಂಧಿ

ಇತ್ತನಾನರ್ತಾಧಿಪತಿ ನಿಜ
ಪುತ್ರಿಯನು ರೈವತನು ಲೋಕದ
ಮುತ್ತಯನ ನೇಮದಲಿ ಬಲಭದ್ರಂಗೆ ರೇವತಿಯ

ಅರಸ ಕೇಳಾನರ್ತವಿಷಯೇ
ಶ್ವರನು ರೈವತನೆಂಬನೆಸೆದನು
ಧರೆಯಲತಿಶಯಧರ್ಮತತ್ವರಹಸ್ಯಕೋವಿದನು
ಇರಲು ರೇವತಿಯೆಂಬ ಸುತೆಯವ
ತರಿಸಿದಳು ತತ್‌ಕ್ಷೇತ್ರದಲಿ ಸ
ಚ್ಚರಿತಗುಣನಿಧಿ ರೂಪನಿಧಿ ಸೌಭಾಗ್ಯನಿಧಿಯೆನಿಸಿ ೧

ಅರಸನಾಕೆಗೆ ಯೋಗ್ಯರಹ ಗಂ
ಡರನು ಕಾಣದೆ ಬೇಡುವವನೀ
ಶ್ವರಕುಮಾರರಿಗೀಯದಬುಜಾಸನನ ಸನ್ನಿಧಿಗೆ
ನಿರುತ ಬೆಸಗೊಳಲೆಂದು ಸುತೆಸಹಿ
ತಿರದೆ ನಡೆದನು ಸತ್ಯಲೋಕಕೆ
ಸುರಮುನೀಂದ್ರನಿಷೇವ್ಯಮಾಣಮಹಾಸಭಾಂತರಕೆ ೨

ಹೋಗಲಾ ಸಮಯದಲಿ ಮುಂದಣ
ಬಾಗಿಲಲಿ ಗಂಧರ್ವರಿಬ್ಬರು
ರಾಗಜಾತಿಗ್ರಾಮಮೂರ್ಛಾಸ್ವರವಿಚಕ್ಷಣರು
ಭೋಗಿಶಯನನ ಮಗನ ಮುಂದನು
ರಾಗದಲಿ ಪಾಡುತ್ತಲಿರಲದ
ನಾಗಲಾ ನೃಪನಾಲಿಸುತ ನಿಮಿಷಾರ್ಧವನು ತಡೆದ ೩

ಗೀತದವಸಾನದಲಿ ನೃಪನಾ ವಿ
ಧಾತನಂಘ್ರಿಗೆ ನಮಿಸಿ ಬಿನ್ನಹ
ವೀ ತಳೋದರಿ ತನ್ನ ಸುತೆ ಚಿತ್ತೈಸು ತಾನಾವ
ಭೂತಳಾಧೀಶ್ವರನಿಗೀವೆನು
ಭೂತಕರ್ತೃವೆ ಕರುಣಿಸೆನಗೆನ
ಲಾತನೊಡನಜನಾರು ಭೂಪರು ಹೆಸರು ಹೇಳೆಂದ ೪

ಹೇಳಿದನು ಭೂತಳದ ಪೃಥ್ವೀ
ಪಾಲರನು ನಾನಾಪರಾಕ್ರಮು
ಶೀಲಗುಣಸಂಪನ್ನರನು ದೇಶಾಧಿಪತಿಗಳನು
ಲೋಲಮತಿ ವಿಸ್ತರಿಸುತಿರಲದ
ಕೇಳಿ ಗಹಗಹಿಸಿದನಿದೆಂದಿನ
ಕಾಲದವನೀಶ್ವರರ ಮಾತೆಲೆ ಭೂಪ ಕೇಳೆಂದ ೫

ಹೊಂದಿದರು ನೀ ಹೆಸರುಗೊಂಡವ
ರಂದೆ ತದ್ಗೋತ್ರಜರು ಸಹಿತೆಲೆ
ತಂದೆ ಕಾಲಭ್ರಮಣವೇಗವನಱಿವರಾರದನು
ಸಂದವತ್ತಲನೇಕಯುಗಗಳಿ
ಗೊಂದು ನಿಮಿಷಾರ್ಧದವೊಲಾಯ್ತೀ
ವಂದಿಗಳ ಸಂಗೀತಸಂಶ್ರವಣದಲಿ ನಿನಗೆಂದ ೬

ಇಲ್ಲ ನೃಪರೀ ನಿನ್ನ ಮಗಳಿಗೆ
ವಲ್ಲಭರನಱಸುವಡೆ ಕಾಲನ
ಘಲ್ಲಣೆಯ ಘಾತಿಗಳಿಗೊಳಗಾಗದ ಶರೀರಿಗಳು
ಇಲ್ಲ ಸಕಲಾಮರಮುನೀಂದ್ರರಿ
ಗೆಲ್ಲರಿಗೆ ಹಿತವೆನಿಸಿ ಲಕ್ಷ್ಮೀ
ವಲ್ಲಭನು ಜನಿಸಿರ್ದನವನಿಗನಂತಸಖನೆಂದ ೭

ದೇವಕಿಯು ಸುತರಾಗಿ ಯದುಭೂ
ಪಾವಳಿಯ ಮಧ್ಯದಲಿ ಘನತೇ
ಜೋವಿಶಿಷ್ಟರು ರಾಮಕೃಷ್ಣರು ಚಾರುಮೂರ್ತಿಗಳು
ಸೇವಕರು ಸುರನರರು ತಾವನು
ಜೀವಿಗಳು ತತ್ಪದಕೆ ನೀನಿಂ
ದೀವುದಾ ರಾಮಂಗೆ ಮಗಳನು ಮಗನೆ ಹೋಗೆಂದ ೮

ಎನೆ ಹಸಾದವೆನುತ್ತ ನೃಪನಾ
ವನಜಭವನಡಿಗೆಱಗಿ ಬೀಳ್ಕೊಂ
ಡನುಪಮನು ನಡೆತಂದನಂದಾ ದ್ವಾರಕಾಪುರಕೆ
ಮನದೊಳಗೆ ನಾಚುತ್ತ ತನ್ನಯ
ತನುಜೆಯನು ತಂದಿತ್ತನಬುಜಾ
ಸನನ ನೇಮದಲಚ್ಯುತಾಗ್ರಜನೆನಿಪ ರಾಮಂಗೆ ೯

ನಿಲುಕಿ ಮುಗಿಲನು ಮುಟ್ಟುವಾ ಮದ
ವಳಿಗೆಯನು ನೋಡುತ್ತ ಮಕುಟವ
ನೊಲೆದು ವಿಸ್ಮಿತನಾಗಿ ಹರಹರ ಯೋಗಶಕ್ತಿಗಳ
ಬಲುಹದೆಂತುಟೊ ಕಂದರವ ನೇ
ಗಿಲಲಿ ಕುಸಿದಡೆ ಕಾಂತೆ ಸುಮುಕೋ
ಮಲಸಮಂಜಸರೂಪೆಯಾದಳು ನಿಮಿಷ ಮಾತ್ರದಲಿ ೧೦

ಭಲರೆ ಭಾಪುರೆ ಯೋಗಸಿದ್ಧರ
ಕುಲಗುರುವಲಾ ಮಝು ಯೆನುತ ಸುರ
ಲಲನೆಯರು ಹೊಗಳುತ್ತ ಕಱೆದರು ಪುಷ್ಪವೃಷ್ಟಿಗಳ
ತಳಿಗೆದೋರಣವಾದ್ಯಕನ್ನಡಿ
ಕಳಶವಿಭವದಲಂದು ತತ್ಪುರ
ದೊಳಗೆ ಮೆಱೆದುದು ರಾಮವೈವಾಹಿಕಮಹೋತ್ಸಾಹ ೧೧

ಅಂಬುಜಾಕ್ಷನು ಬಳಿಕ ಭೀಷ್ಮಕ
ನೆಂಬ ನೃಪನ ಕುಮಾರಿ ರುಕ್ಮಿಣಿ
ಯೆಂಬಳನು ಗುಣರೂಪಶೀಲೌದಾರ್ಯಯುಕ್ತೆಯನು
ಅಂಬುಜೋದ್ಭವೆಯಂಶೆಯನು ನೀ
ಲಾಂಬುದಾಭನು ಸದೆದು ರಾಯಕ
ದಂಬವನು ವರಿಸಿದನು ವೈವಾಹಿಕವಿಧಾನದಲಿ ೧೨

ನೆರೆದು ಶಿಶುಪಾಲಂಗೆ ಪೃಥ್ವೀ
ಶ್ವರರು ಮಾಗಧಸಾಲ್ವಮುಖ್ಯರು
ವಿರಚಿಸಲು ವೈವಾಹಿಕವನಾಕ್ರಮಿಸಿ ನಡೆತರಲು
ಬೆರಸಿ ಪರಬಲಜಲಧಿಯನು ಸಂ
ಹರಿಸಿ ತಂದನು ರುಕ್ಮಿಣಿಯನೆನ
ಲರಸನವನತನಾಗುತಿಂತೆಂದನು ಮುನೀಶ್ವರಗೆ ೧೩

ಕರುಣಿಸೈ ಮುನಿನಾಥನ ಕೃಷ್ಣನ
ಚರಿತವನು ಕಲಿಮಲವಿನಾಶನ
ಪರಮಮಂಗಳ ಪುಣ್ಯಗುಣನಾಮಾನುಭರಿತವನು
ನಿರುತ ರಾಕ್ಷಸವೆನಿಪ ವಿಧಿಯಲಿ
ವರಿಸಿದನು ಗಡ ಹೇಳೆನಗೆ ವಿ
ಸ್ತರವೆನಲು ರುಕ್ಮಿಣಿಯ ವೈವಾಹಿಕಕಥಾಂತರವ ೧೪

ತೃಪ್ತಿವಡೆವರದಾರು ರಸಿಕರು
ನಿತ್ಯನೂತನವೆನಿಪ ಕೃಷ್ಣಚ
ರಿತ್ರಸುಧೆಯನು ಸವಿದು ಕರ್ಣಪುಟಂಗಳಲಿ ದಣಿಯೆ
ಮುಕ್ತಿಸುಖವಿದಱೊರೆಗೆ ಬಾರದು
ಮುತ್ತುಳಿದ ಮಾತೇಕೆ ಕರುಣಿಪು
ದುತ್ತಮನೆ ತನಗೆನುತ ಹಣೆ ಚಾಚಿದನು ಮುನಿಪದಕೆ ೧೫

ಎಂದಡವನಿಪನರ್ಥಿಯನು ಮುನಿ
ಮಂದಹಾಸದಲಾಲಿಸುತ ನಗು
ತೆಂದನಂತರ್ಗತ ಮುಕುಂದಪದಾಬ್ಜದಲಿ ಮತಿಯ
ನಿಂದಿರಿಸಿ ಕಾರುಣ್ಯಲೀಲಾ
ಸ್ಪಂದಿತಾಕ್ಷನು ಸಕಲಮುನಿಜನ
ವೃಂದಮಧ್ಯದಲೊಲಿದು ಪಾಂಡವವಂಶಧರನೊಡನೆ ೧೬

ಕೇಳು ನೃಪ ಭೀಷ್ಮಕನೆನಿಪ್ಪ ನೃ
ಪಾಲನೆಸೆದನು ಕುಂಡಿನಾಖ್ಯ ವಿ
ಶಾಲಪುರದಲಿ ವಿಪುಳಕೀರ್ತಿವಿದರ್ಭ ದೇಶದಲಿ
ಹೇಳುವಡೆ ಪಂಚಾತ್ಮಜರು ಕುಲ
ಪಾಲಕರು ಜನಿಸಿದರು ಕಡೆಯಲಿ
ಬಾಲೆಯೊಬ್ಬಳು ಜನಿಸಿದಳು ರುಕ್ಮಿಣಿಸಮಾಖ್ಯೆಯಲಿ ೧೭

ರುಕ್ಮಿ ಹಿರಿಯನು ರುಕ್ಮರಥವರ
ರುಕ್ಮಬಾಹು ಸರುಕ್ಮಕೇಶಕ
ರುಕ್ಮಭೂಷಣಗಾತ್ರ ರುಕ್ಮಾಖ್ಯರೈವರೆನೆ
ರುಕ್ಮಿಣಿಯೆನಿಪ್ಪಾಕೆ ಕಿರಿಯಳು
ರುಕ್ಮರತ್ನಪ್ರಕರಭೂಷಣೆ
ರುಕ್ಮವರ್ಣಸಮಾನವರ್ಣೆ ನೃಪಾಲ ಕೇಳೆಂದ ೧೮

ಕೇಳಿದಳು ರುಕ್ಮಿಣಿ ಮುಕುಂದನ
ಶೀಲಗುಣಮಾಧುರ್ಯ ಶೌರ್ಯ ವಿ
ಶಾಲರೂಪೌದಾರ್ಯಲಕ್ಷ್ಮಿಯನತುಳಸಾಹಸವ
ಲೋಲಲೋಚನೆ ಗಾಯಕರ ಮುಖ
ಲಾಲಿತೋದಂತವನು ಕಾಮನ
ಬೇಳುವೆಗೆ ಬೆಂಡಾದಳಚ್ಯುತಪಾರವಶ್ಯದಲಿ ೧೯

ಆ ಪರಮಮಾನಿನಿಯ ನಿರ್ಮಲ
ರೂಪುಗುಣಮಾಧುರಿಯ ಲಕುಮಿಯ
ನಾ ಪರಿಯಲಾ ಗಾಯಕರ ಮುಖದಿಂದ ನೆಱೆ ಕೇಳಿ
ಶ್ರೀಪತಿಯ ಚಿತ್ತದಲಿ ಮನುಮಥ
ರೂಪುಗೊಂಡನು ಬಳಿಕ ತತ್ಕೃತ
ತಾಪದಲಿ ತತ್ಸಿದ್ಧಿಕಾಮುಕನಾದನಸುರಾರಿ ೨೦

ಮದುವೆ ನಾಡಿದು ತಂಗಿ ಸುಯಿಧಾ
ನದಲಿರಲಿ ಶಿಶುಪಾಲನೀಕೆಗೆ
ಮದವಳಿಗ ಮುರವೈರಿ ತನಗೆ ವಿರೋಧಿಯೆಂದೆನುತ
ಮದಮುಖನು ನೆರಹಿದನು ನೃಪರನು
ಕದನಗಲಿಗಳನಾಹಿತೋತ್ಸಾ
ಹದಲಿ ತರಿಸಿದನಖಿಳವೈವಾಹಿಕದ ಸಾಧನವ ೨೧

ಅದನಱಿದು ವೈದರ್ಭಿ ತನ್ನಯ
ಹೃದಯದಲಿ ಸಂತಾಪವನು ತಾ
ಳಿದಳು ಪುಣ್ಯವಿಹೀನೆಯಾದೆನಲಾ ದುರಾತ್ಮಕನ
ಉದರಸವಿತಿಯಲೇಕೆ ಸಂಚರಿ
ಸಿದೆನು ತಾನಲ್ಲದಡೆ ಸೇರೆನೆ
ಸದಮಳನ ಸಿರಿಚರಣಸೇವೆಗೆನುತ್ತ ಹಲುಬಿದಳು ೨೨

ಅಳಲಿದಳು ಮನದೊಳಗೆ ಕೃಷ್ಣನ
ಚಲುವಮೂರ್ತಿವಿಳಾಸಲಕುಮಿಯ
ಬಲೆಗೆ ಬಿದ್ದವು ಬಾಲೆಯಂತಃಕರಣಸರ್ವಸ್ವ
ಕಳವಳಿಸಿದಳು ಕರ್ಣಪಥಪರಿ
ಲುಳಿತಕೃಷ್ಣೋದಂತಸುಧೆಯಲಿ
ಲಲಿತಮೂರ್ತಿಯ ಕಂಡಡೆಂತುಟೊ ಕಂಗಳಿಂದೆನುತ ೨೩

ಊಟವನು ವರ್ಜಿಸಿದಳಂಗನೆ
ನೋಟವನು ನೀಗಿದಳು ಪರರಲಿ
ನಾಟಿಸಿತು ಸಂತಾಪ ಸರ್ವಾಂಗದಲಿ ಮಾನಿನಿಯ
ದೂಟಿದಳು ಲಜ್ಜೆಯನು ಮೂರ್ಛೆಯ
ಥಾಟಿಯಲಿ ಧೃತಿಗೆಟ್ಟಳಳಲಿನ
ತೋಟಿಯಲಿ ತನುಗುಂದಿದಳು ತರಳಾಕ್ಷಿ ಬಸವಳಿದು ೨೪

ಕರೆದು ವಿಪ್ರೋತ್ತಮನನೊಬ್ಬನ
ನಿರದೆ ಬೆಸಸಿದಳಾಪ್ತನನು ಪಂ
ಕರುಹಮುಖಿ ಬಳಿಕಾದುದಾಗಲಿ ನೋಡುವೆನು ಕಳುಹಿ
ದೊರಕದಿರ್ದಡೆ ನಿಜಮನೋರಥ
ಪರಿಹರಿಸಿ ಜೀವವನು ಜನ್ಮಾಂ
ತರಕೆ ಪಡೆವೆನು ಪರಮಪುರುಷನ ಸನ್ನಿಧಿಯನೆನುತ ೨೫

ಕಳುಹಿದಳು ಕೃಷ್ಣಾಂಘ್ರಿಸನ್ನಿಧಿ
ಗೊಲಿದು ವಿಪ್ರೋತ್ತಮನನಾತನು
ಛಳಿಯದಲಿ ನಡೆತಂದು ಹೊಕ್ಕನು ದ್ವಾರಕಾಪುರಿಯ
ತಿಳಿದು ಕಾರ್ಯ ವಿಶೇಷವನು ಪಡಿ
ವಳರು ಹೊಗಿಸಲು ಬಂದು ಕಂಡನು
ಲಲಿತಸಿಂಹಾಸನದಲೆಸೆವ ಮುಕುಂದನಂಘ್ರಿಗಳ ೨೬

ಬರವ ಕಾಣುತ್ತಾಸನವನಿಳಿ
ದುರುದಯಾನಿಧಿ ಕೃಷ್ಣನೇಱಿದ
ಪರಮಸಿಂಹಾಸನದಮೇಲಾತನನು ಕುಳ್ಳಿರಿಸಿ
ಚರಣಯುಗಳವ ತೊಳೆದು ಡಗೆಯನು
ಪರಿಹರಿಸಿ ಮೃದುಸೂಕ್ತಿಯಿಂದಾ
ದರಿಸಿ ಪೂಜಿಸಿದನು ಸುರಾರ್ಚಿತಚರಣನಾ ದ್ವಿಜನ ೨೭

ಅಮಿತಕರುಣಾಸಿಂಧು ಮಾರ್ಗ
ಶ್ರಮವಡಗಲಾದರಿಸಿ ವಿಪ್ರೋ
ತ್ತಮನನಮೃತಾಹಾರ ಭೋಜನಪಾನದಲಿ ದಣಿಸಿ
ಕಮಲನಾಭನು ನಗುತ ನುಡಿಸಿದ
ನಮಳದಂತದ್ಯುತಿಗಳಿರದಾ
ಕ್ರಮಿಸಲಧರದ್ಯುತಿಗಳನು ಸಪ್ರೇಮಸೂಕ್ತಿಯಲಿ ೨೮

ಬಂದೆ ನೀನೆಲ್ಲಿಂದ ಹೇಳೆಲೆ
ತಂದೆ ಕಾರ್ಯವಿಶೇಷವೇನುಂ
ಟೆಂದು ಬೆಸಸುವುದೆನಗೆ ಭೃತ್ಯರು ನಾವು ನಿಮ್ಮಡಿಗೆ
ಮಂದಿರಕೆ ಸುಕ್ಷೇಮವೈ ಸುಖ
ದಿಂದ ಶಿಶುಪಶುಭೃತ್ಯವನಿತಾ
ವೃಂದ ಸಂಜೀವಿಸುವುದೇ ಭಯವಿಲ್ಲಲೈ ಯೆಂದ ೨೯

ದಿಷ್ಟಲಬ್ಧಧನಂಗಳಲಿ ಸಂ
ತುಷ್ಟರಾಗಿಹ ವಿಪ್ರರವರೆನ
ಗಿಷ್ಟರೆಂದಱ ಕಾಮಲೋಭವಿಮೋಹವರ್ಜಿತರು
ತುಷ್ಟಿಯಿಲ್ಲದಡಾವನಾಗಲಿ
ವಿಷ್ಟಪಾಧೀಶ್ವರನೆಯಾಗಲಿ
ಕಷ್ಟಜೀವನನಾತನೆಂದನು ದಾನವಧ್ವಂಸಿ ೩೦

ಹಿಂದ ನೆನೆಯದೆ ಮುಂದೆ ಬಯಸದೆ
ಬಂದುದನು ಭೋಗಿಸುತಹಂಕೃತಿ
ಯಿಂದ ವಿರಹಿತರಾಗಿ ನಿರ್ಮಮರಾಗಿ ಸಕಲದಲಿ
ಒಂದೆನಿಸಿ ನೆಱೆ ಕಾಣಬಲ್ಲವ
ರಿಂದಧಿಕರಿಲ್ಲವರ ಚರಣಕೆ
ವಂದಿಸುವೆನನವರತ ತಾನೆಲೆ ವಿಪ್ರ ಕೇಳೆಂದ ೩೧

ಅರಸುಗಳು ನಿನ್ನುವನು ನೆಱೆ ಪತಿ
ಕರಿಸುವರೆ ಕುಲದೈವವೆಂದಾ
ದರಿಸುವರೆ ಹೇಳಾವನಾಗಲಿ ವಿಪ್ರಮಾತ್ರನನು
ಕರೆದು ಮನ್ನಿಸಬೇಹುದವನೀ
ಶ್ವರರು ತಾನವರಿಂಗಭೀಪ್ಸಿತ
ವರವನೀವೆನು ವಿಪ್ರಪೂಜಕಭೂವರರಿಗೆಂದ ೩೨

ಬರಲಿದೇನು ನಿಮಿತ್ತ ನೀನಿದ
ನೊರೆವುದಧಿಕ ರಹಸ್ಯವಲ್ಲದ
ಡುರುತರಶ್ರಮದಿಂದ ಬಂದೆ ಸುದೂರಪಥದಿಂದ
ಹರಹರಾವುದು ಕೃತ್ಯವದನೇನ
ಗೊರೆದು ಮಾಡಿಸಿಕೊಂಬುದಾವ್ ಕಿಂ
ಕರರು ಸಂಶಯವಿಲ್ಲ ಕಾರಿಯವೇನು ಹೇಳೆಂದ ೩೩

ಎಂದಡಾ ವಿಪ್ರೋತ್ತಮನು ತಾ
ಬಂದ ಕಾರ್ಯದ ಹೊಱಗೆ ನೆಗಳಿದು
ದೆಂದು ಮಿಗೆ ಹಾರೈಸುತೇಱಿದ್ದಾಸನವನಿಳಿದು
ವಂದಿಸುತ ತತ್ಪಾದಕಮಲ
ದ್ವಂದ್ವದಲಿ ನಗುತಿರಿಸಿದನು ಪೂ
ರ್ಣೇಂದುಮುಖಿ ಕಳುಹಿದ ಸುವಿಜ್ಞಾಪನದ ಪತ್ರಿಕೆಯ ೩೪

ನಗುತ ನಿಜಪದನಿಹಿತಲಿಖಿತವ
ನೊಗುಮಿಗೆಯ ಹರುಷದಲಿ ಕೈಯಲಿ
ತೆಗೆದು ಸುಸ್ಮಿತ ಮಧುರನಯನಾಪಾಂಗದಲಿ ನೋಡಿ
ಜಗದ ಪತಿ ದಂತಾವಳಿಯ ದೀ
ಪ್ತಿಗಳು ಪಸರಿಸೆ ಹರುಷದಲಿ ದೃಗು
ಯುಗಳವೊಸರಲು ತಾನೆ ವಾಚಿಸಿದನು ಸರಾಗದಲಿ ೩೫

ಕೇಳಿ ನಿನ್ನಯ ಗುಣಗಳನು ಕಿವಿ
ಸೋಲಿದವು ಮನವದಱ ಬಳಿಯಲಿ
ಬೀಳುಕೊಂಡುದು ದೇವ ನಿನ್ನ ಪದಾಬ್ಜಸನ್ನಿಧಿಗೆ
ಹೇಳಲಱಿಯೆನು ಭುವನಮೋಹನ
ಮೂಲಮಂತ್ರಕುಲಾಧಿದೈವವೆ
ಪಾಲಿಸೆನ್ನಿಷ್ಟಾರ್ಥವನು ಚಿತ್ತವಿಸಿ ಬಿನ್ನಪವ ೩೬

ಹಜ್ಜೆಯಿಟ್ಟುದು ಮುಂದೆ ಮನ ನಿ
ರ್ಲಜ್ಜತನದಲಿ ಮಾಳ್ಪನೇನ ಸು
ವರ್ಜಿಸಿದೆನಭಿಮಾನವನು ನಿನಗೋತು ಮನದೊಡನೆ
ಸಜ್ಜನಸ್ತುತಗುಣನೆ ನಿನ್ನಲಿ
ಲಜ್ಜಿಸುವ ಸತಿಯಾರು ನಿಜಚರ
ಣಾಬ್ಜಸೇವಾಸಾರಸೌಖ್ಯವನೀವುದೆನಗೊಲಿದು ೩೭

ಕುಲವನಭಿಮಾನವನು ತೊಱೆಯದ
ಲಲನೆಯಾವಳು ದೇವ ನಿನ್ನಯ
ಚೆಲುವು ರೂಪುಗುಣಂಗಳನು ತ್ರೈಲೋಕ್ಯ ಮೋಹನದ
ಲಲಿತ ಮೂರ್ತಿಯನೊಮ್ಮೆ ಕೇಳ್ದವ
ಳೆಲೆ ಮುಕುಂದ ಮಹಾಲಕುಮಿಸಹಿ
ತೊಲಿದು ಭಜಿಸುವಳಾವನಂಘ್ರಿಸರೋಜ ರೇಣುಗಳ ೩೮

ಬಯಸಿದೆನಲಾ ಕೃಷ್ಣ ಭಕ್ತ
ಪ್ರಿಯನೆನಿಪ ನಿನ್ನಾಂಘ್ರಿಕಮಲಾ
ಶ್ರಯವನತಿದುರ್ಲಭವಿದೆಂಬುದನೀಕ್ಷಿಸದೆ ಮನದ
ಪ್ರಿಯವ ಸಲಿಸುವುದೆನಗನಾಥಗೆ
ನಯವಿದನೆ ನಿನ್ನಂತೆ ಕರುಣಾ
ಲಯರದಾರಾಶ್ರಿತ ಮನೋರಥಕಾರಿಗಳು ಧರೆಗೆ ೩೯

ಚಿತ್ತಶುದ್ಧಿಯಲಖಿಳಭೂತದ
ಯೋತ್ತರದ ವೃತ್ತಿಗಳಲಿಷ್ಟಾ
ಪೂರ್ತದಾನವ್ರತಗಳಿಂದೆಲೆ ದೇವ ಪೂರ್ವದಲಿ
ಎತ್ತಲಾನಾರಾಧಿಸಿದ ಸ
ದ್ವೃತ್ತಿಯಾದರೆ ಕರುಣಿಸುವುದೆಲೆ
ಮರ್ತ್ಯಲೋಕ ಮನೋಭಿರಾಮ ಮನೋರಥವನೆನಗೆ ೪೦

ಬೇಡುವೆನು ಪೊಡವಂಟು ದೇವರು
ಮಾಡುವುದು ಕಾರುಣ್ಯವನು ಕೃಪೆ
ಮಾಡುವುದು ದಾಸ್ಯವನು ದಮಘೋತಾತ್ಮಜಾದಿಗಳು
ಮಾಡಲಾಗದು ಪರಿಣಯದ ಪರಿ
ಪಾಡಿಯನು ಕಕ್ಕುಲಿತೆಯನು ತಾ
ಮಾಡುವೆನೆ ಲೋಗರಿಗೆ ನಿನಗಲ್ಲದೆ ದುರಾತ್ಮರಿಗೆ ೪೧

ನಾಳೆ ಕೊಡುವರು ತನ್ನನಾ ಶಿಶು
ಪಾಲನೆಂಬ ದುರಾತ್ಮಕಗೆ ನೀ
ನೇಳಿದಿಟವನು ಮಾಡದೆಲ್ಲಾ ಸೇನೆಗಳು ಸಹಿತ
ಶ್ರೀಲಲಾಮನೆ ಬಂದು ಮಾಗಧ
ಸಾಲುವಾದಿ ಸಮಸ್ತ ದುಷ್ಟ ನೃ
ಪಾಲಕುಲವನು ಸದೆದು ಮಾಳ್ಪದು ನಿಜಕರಗ್ರಹವ ೪೨

ಪರಿಭವಿಸಿ ಬಂಧುಗಳನಂತಃ
ಪುರದಲಿದ್ದ ಬಲೆಯನು ತಾ ದಿಟ
ಪರಿಣಯವ ಮಾಳ್ಪಂದವೆಂತೆನಬೇಡುಪಾಯವನು
ಒರೆವೆ ನಾನಾ ದಿನದ ಹೊತ್ತರೆ
ಪುರವ ಹೊಱವಂಟಂಬಿಕಾಪದ
ದರುಶನಕೆ ಬಹುದುಂಟು ನಿಜಕುಲವಿಹಿತವಿದು ತನಗೆ ೪೩

ಬಹಳ ಬಲಸಹಿತಲ್ಲಿಗೈತಂ
ದಹಿತರೆನಿಸುವ ಸಾಲ್ವಮಾಗಧ
ಕುಹಕಿ ಚೈದ್ಯನೃಪಾಲ ಬಲವನು ಸದೆದು ನಿಜಪುರಕೆ
ವಹಿಸಿ ಪಾಣಿಗ್ರಹಣ ಮಾಳ್ಪದು
ಸಹಚರಿಯರೊಡನಿಂತಿದೇ ಬಿ
ನ್ನಹವು ಕರುಣಿಸು ಕೃಷ್ಣ ಕರುಣಾನಿಧಿಯೆ ನೀನೆನಗೆ ೪೪

ದೇವ ನೀ ನಿನಗೆನ್ನನೀ ಸ್ವಜ
ನಾವಳಿಗಳಿತ್ತವರಲ್ಲೈ ನಿಜ
ಭಾವದಲಿ ಸಂಕಲ್ಪಿಸಿದುದಂದೇ ಭವತ್ಪದದ
ಸೇವಕಿಯಲಾ ಹಾನಿ ತನಗಿ
ನ್ನಾವುದಾದಡೆ ನಿನ್ನದೈಸಲೆ
ಕಾವುದೆನ್ನನನಾಥೆಯನು ಚಿತ್ತವಿಸಿ ಬಿನ್ನಪವ ೪೫

ಇಂತು ಭೀಷ್ಮಕನಂದನೆಯ ಪ
ತ್ರಾಂತಗತವೆಂದೆನಿಸಿದಾ ವೃ
ತ್ತಾಂತವನು ನೋಡುತ್ತ ಸಸ್ನೇಹಾರ್ದ್ರನಯನದಲಿ
ತಿಂಥಿಣಿಯ ಪುಳಕದಲಿ ಲಕ್ಷ್ಮೀ
ಕಾಂತನೋಲಾಡುತ್ತ ನಿಜನಯ
ನಾಂತದಲಿ ನೋಡಿದನು ವಿಪ್ರೋತ್ತಮನನೊಲವಿನಲಿ ೪೬

ಎನ್ನನೀಕ್ಷಿಸಲೇಕೆ ಬಹಳ ಕೃ
ಪಾರ್ಣವನೆ ಚಿತ್ತವಿಸುವುದು ವರ
ವರ್ಣನಿಯ ವಿಜ್ಞಾಪನೋಚಿತಕಾರ್ಯ ಸಂಗತಿಯ
ಮನ್ನಿಸುವುದವಿಳಂಬಿತದಲುಪ
ಸನ್ನವೆಂದೇ ನಿಮ್ಮಡಿಗೆ ಸಂ
ಪನ್ನವಾದಡೆ ಬೇಗ ಮಾಡುವುದೆಂದನಾ ವಿಪ್ರ ೪೭

ಎನಲು ದಾರುಕನೊಡನೆ ರಥವನು
ದನುಜರಿಪು ಹೂಡೆಂದು ಯಾದವ
ಜನಪನೊಡನೆಚ್ಚಱಿಸಿ ಸಾತ್ಯಕಿಗಖಿಳಸೈನಿಕವ
ಅನುವರಕೆ ನೆರಹೆನುತ ಬಲರಾ
ಮನನಿರಿಸಿ ಪುರರಕ್ಷೆಗಾ ಮಱು
ದಿನವೆ ಹೊಱವಾಳೆಯವ ಬಿಡಿಸಿದನಂದು ನಿಜಬಲವ ೪೮

ಏಱಿ ರಥವನು ವಿಪ್ರನೊಡನೆ ಮು
ರಾರಿ ನಡೆದನು ಕಿಱಿದು ಬಲಸಹಿ
ತಾರುವಱಿಯದವೋಲು ಮಾಗಧ ಚೈದ್ಯನೃಪರೊಡನೆ
ದೂರಪಥವನು ಕಳಿದು ಭುವನಾ
ಧಾರಮೂರ್ತಿ ವಿದರ್ಭದೇಶವ
ಸಾರಿದನು ನಿಲಿಸಿದನು ರಥವನು ಪುರದ ಬಾಹೆಯಲಿ ೪೯

ಹೋಗು ನೀನೆಲೆ ವಿಪ್ರಯೆನೆ ತಲೆ
ವಾಗಿ ನುಡಿದನು ನಂಬಿ ಕರುಣಾ
ಸಾಗರನೆ ವೈದರ್ಭಿಗೀ ವೃತ್ತಾಂತಸಂಗತಿಯ
ಈಗಳಱುಪುವೆನೆನ್ನ ಭಾಷೆಯ
ನೀಗಲಾಗದು ಸತ್ಯ ನಿಷ್ಫಲ
ವಾಗದಂತಾರೈದು ನಡೆವುದೆನಲ್ಕೆ ಹರಿ ನುಡಿದ ೫೦

ಮರುಳಲಾ ನೀನೆನ್ನ ಚಿತ್ತವ
ನಱಿಯೆ ಕಾಂತೆಯ ಚಿಂತೆಯಲಿ ಹೋ
ದಿರುಳು ತನ್ನನು ಬೀಳುಕೊಂಡುದು ನಿದ್ರೆ ನಯನದಲಿ
ಪುರಕೆ ನಡೆನಡೆ ಚಿಂತೆ ಬೇಡಂ
ಬುರುಹಮುಖಿಯೊಡನೆನ್ನ ನೀನೆಂ
ದಿರದೆ ಕಳುಹಿದನಸುರರಿಪು ನಸುನಗುತ ಭೂಸುರನ ೫೧

ಬೀಳುಕೊಂಡವನತಿಯಲಾ ಸಿರಿ
ಲೋಲನನು ಕೈವಿಡಿದು ನಂಬಿ ನೃ
ಪಾಲಯಕೆ ಸಂತೋಷದಲಿ ಭೂಸುರನು ನಡೆತಂದು
ಹೇಳಿದನು ಸತಿಗದನು ಚಿಂತಾ
ಲೋಲಚಿತ್ತೆಗೆ ಬರವನಾ ಕರು
ಣಾಳು ನಿತ್ಯಾತುಮನ ಬಹಳೋದಾರ ಲೀಲೆಗಳ ೫೨

ಐವತ್ತೆಂಟನೆಯ ಸಂಧಿ ಮುಗಿಯಿತು.

# ಐವತ್ತೊಂಭತ್ತನೆಯ ಸಂಧಿ

ಮಥಿಸಿ ಪರಬಲಜಲಧಿಯನು ಮುರ
ಮಥನನಿಂದಿರೆಯಂಶೆಯನು ನಿ
ರ್ವ್ಯಥನದಲಿ ನಿಜಪುರಕೆ ತಂದನು ನಲಿದು ರುಕ್ಮಿಣಿಯ

ಅರಸ ಕೇಳಾ ಕುಂಡಿನಾಧೀ
ಶ್ವರನು ಭೀಷ್ಮಕನಂದು ತನುಜೆಯ
ಪರಿಣಯಕೆ ಪರುಠವಿಸಿ ಗುಡಿತೋರಣಗಳಲಿ ಪುರವ
ಪರಿಪರಿಯ ವಿಭವಂಗಳಲಿ ವಿ
ಸ್ತರಿಸಿ ಮಂಗಳವಸ್ತುಗಳ ನೆಱೆ
ತರಿಸಿ ವಿದಿತೋತ್ಸಾಹದಲಿ ಮಾಡಿಸಿದನುತ್ಸವವ ೧

ಬಂದನಾ ಶಿಶುಪಾಲನುತ್ಸವ
ದಿಂದ ಕೈಗೈದಖಿಳ ಭೂಪರ
ವೃಂದವಾತನ ಬೆಂಬಲಕೆ ಮಗಧೇಶ್ವರಾದಿಗಳು
ಬಂದರಲ್ಲಿಗೆ ಧರಣಿ ಬೆಸಲಾ
ದಂದದಲಿ ನಾನಾ ದಿಗಂತದ
ಸಂದಣಿಯ ಸಂಭ್ರಮದ ಚತುರಂಗದಲಿ ನೃಪಕಟಕ ೨

ಇದಿರುಗೊಂಡರ್ಚಿಸುವ ಸವನಿಸಿ
ಸದನವನು ಸೇರಿಸುವ ರಾಯರಿ
ಗುದಿತ ವಿಭವಂಗಳಲಿ ಮನ್ನಣೆಗಳನು ಮಾಡಿಸುವ
ಮದುವೆವರೆಗಳ ಕಹಳೆಗಳ ವರ
ಸುದತಿಯರ ಶೋಭನಸುಸಂಗೀ
ತದ ಮಹೋತ್ಸವದುಬ್ಬರಣೆ ರಂಜಿಸಿತು ಮೂಜಗಕೆ ೩

ಹೊಳೆವ ಕನ್ನಡಿ ಕಳಶ ದೀಪಾ
ವಳಿ ಫಲಾಕ್ಷತ ಲಾಜ ಪುಷ್ಪಾ
ವಳಿಯುಲಿಸೆವ ಗೃಹಂಗಳಲಿ ಕಸ್ತೂರಿ ಚಂದನದ
ಚಳೆಯದಲಿ ರಂಜಿಸುವ ರಥ್ಯಾ
ವಳಿಯ ಚತ್ವರರಚನೆಯಲಿ ಮಂ
ಗಳವೆಸೆದುದುತ್ತುಂಗತೋರಣಗಳಲಿ ಗುಡಿಗಳಲಿ ೪

ಹಿಡಿದ ಚಮರದ ಝಲ್ಲರಿಯ ಬೆಳು
ಗೊಡೆಯ ಸಿಂಧದ ಗಡಣದಲಿ ನಭ
ವಡಗಿದುದು ಕೆಂಧೂಳಿ ದೆಸೆಗಳ ಮುಸುಕಲವನಿಯನು
ನಡುಗಿಸಿತು ಚತುರಂಗ ಬಲವಡಿ
ಗಡಿಗೆ ಕಂಪಿಸಿ ಕುಲಗಿರಿಗಳಿಳೆ
ಯೊಡೆಯಲ್ಬೈತರುತಿರ್ದುದಗಣಿತ ವಾದ್ಯರಭಸದಲಿ ೫

ನೆರೆದು ಶಿಶುಪಾಲಂಗೆ ವರ ಪಂ
ಕರುಹಮುಖಿಯನು ಸಾಧಿಸುವ ಮನ
ದುರವಣೆಯ ಭರದಿಂದೆ ಬಂದರು ಪೌಂಡ್ರಕಾದಿಗಳು
ಬರಲಿ ವಿಷ್ಣುವೆ ಮೇಣು ರುದ್ರನೆ
ಬರಲಿ ಬೆಂಬಲವಾಗಿ ಕೃಷ್ಣಂ
ಗರಸುಮಗಳನು ತುಡುಕಲೀಸೆವೆನುತ್ತ ತಮುತಮಗೆ ೬

ಕರೆಸಿ ವಿಪ್ರೋತ್ತಮರನವನೀ
ಶ್ವರನು ಭೀಷ್ಮಕನಂದು ತನ್ನಯ
ವರಕುಮಾರಿಗೆ ಬಳಿಕ ವೈವಾಹಿಕವಿಧಾನದಲಿ
ಪರಮ ಮಂಗಳ ಕೃತ್ಯವನು ವಿ
ಸ್ತರಿಸಿ ಬಹುವಿಧಕನಕರೂಪ್ಯಾಂ
ಬರವಿಭೂಷಣಗಳಲಿ ಮನ್ನಿಸಿದನು ಮಹೀಸುರರ ೭

ಕೇಳಿ ನಿಜವೈವಾಹಿಕಕೆ ಶಿಶು
ಪಾಲನೈತಂದುದನು ಪೃಥ್ವೀ
ಪಾಲರಾಗಮನವನು ತತ್ಕಾರ್ಯೈಕ ಸಿದ್ಧಿಯಲಿ
ಬಾಲೆ ಕಳವಳಿಸಿದಳು ಮನದಲಿ
ತೂಳುವಂತಸ್ತಾಪವಹ್ನಿ
ಜ್ವಾಲೆಯಲಿ ತನುಬೆಂದವೋಲುಮ್ಮಳಿಸಿದಳು ಮಱುಗಿ ೮

ಚಾರನಾನತಬಂಧು ಕೃಷ್ಣನು
ದಾರಗುಣನಿಧಿ ಕಳುಹಿದಾತನು
ಚಾರನೇತಕೆ ವಿಪ್ರನೇನಾದನೊ ಮನೋವ್ಯಥೆಯ
ಆರಿಗೆಂಬೆನು ದೈವಹೀನೆಗ
ದಾರು ಹಿತಕಾರಿಗಳು ಕಾಣೆನು
ಕಾರಣವ ನಾನಿದಕೆನುತ ಚಿಂತಿಸಿದಳಬುಜಾಕ್ಷಿ ೯

ದೋಷವನು ಕಂಡೆನ್ನಲಾ ಗುಣ
ರಾಶಿಯುಳಿದನೊ ಬರವನದನಾ
ಭೂಸುರನು ದೇಶಾಂತರವನೈದಿದನೊ ಭಂಗದಲಿ
ಲೇಸ ನೆನೆವರಿಗಕಟ ವಿಘ್ನವ
ದೇಸೊ ಹರ ಹರ ಬಱದೆ ಮನದಭಿ
ಲಾಷೆ ನಿಷ್ಫಲವಾಯ್ತಲಾ ಹಾ ಯೆನುತ ಮಱುಗಿದಳು ೧೦

ಇಲ್ಲ ಪುಣ್ಯೋದಯವು ಲಕ್ಷ್ಮೀ
ವಲ್ಲಭನ ದುರ್ಲಕ್ಷ್ಯವಹ ಪದ
ಪಲ್ಲವದ ಪರಿಚರ್ಯೆ ಸೇರುವಡೆನಗೆ ದುರ್ಮತಿಗೆ
ಸಲ್ಲಲಿತ ಸಜ್ಜನ ಮನೋಗತಿ
ದುರ್ಲಭನ ಪದದರುಶನವು ತನ
ಗೆಲ್ಲಿಯದು ಬಹು ಪಾಪಿಗೆಂದಳಲಿದಳು ಲಲಿತಾಂಗಿ ೧೧

ನಿರುತ ತಾ ನಿರ್ಭಾಗ್ಯೆಯಲ್ಲದ
ಡಿರದೆ ತನ್ನೊಡವುಟ್ಟಿದಣ್ಣನೆ
ಕೊರಳ ಕೊಯ್ವನೆ ಹಗೆಯೆನಿಸಿ ತಂಗಿಯ ಮನೋರಥಕೆ
ಚರಣಸೇವಕಿಯೆಂದು ಪರಮೇ
ಶ್ವರನು ನೆನೆವನೆ ನಂಬಿದೆನ್ನನು
ಕರುಣದಲಿ ನೋಡಿದಳೆ ಗಿರಿಜೆಯೆನುತ್ತ ಹಲುಬಿದಳು ೧೨

ಆರಿಗುಸುರುವೆನೆಳಲನಿದನಿ
ನ್ನಾರು ಕೇಳುವರಕಟನಾಥೆಗ
ದಾರು ಹಿತವರು ಕೃಷ್ಣ ಕರುಣಾನಿಧಿಯಲಾ ನೀನು
ದೂರವಾದರೆ ತನ್ನೊಡಲಿಗಸು
ಸೇರಲಱವುದೆ ಹಾ ಯೆನುತ ಸರ
ಸೀರುಹಾನನೆ ಮಱುಗಿದಳು ಮನದೊಳಗೆ ವಸವಳಿದು ೧೩

ಅರಳುಗಂಗಳ ಮುಚ್ಚಿ ಕೃಷ್ಣನ
ಚರಣವನು ನೆನೆವುತ್ತ ಚಿಂತಾ
ತುರೆ ಮಹಾಶೋಕಾಶ್ರುಸಾಗರದೊಳಗೆ ಮುಳುಗಿರಲು
ಸರಸಿಜಾನನೆಗೆಡದಲಂಗ
ಸ್ಫುರಣೆಯಾದವು ಕಂಡು ಸಖಿಗದ
ನೊರೆವುತಿರಲೈತಂದನಾ ದ್ವಿಜವರನು ನಸುನಗುತ ೧೪

ಅಱದಳಿಂಗಿತದಿಂದ ವಿಪ್ರನ
ಬರವ ದೂರದಲೀಕ್ಷಿಸುತ ಪಂ
ಕರುಹಮುಖಿ ಗಂಭೀರಗಮನದ ಮೊಗದ ಹರುಷದಲಿ
ತರಳೆ ತರಹರಿಸಿದಳು ಶೋಕೋ
ತ್ಕರುಷದುದ್ರೇಕವನು ಕೃಷ್ಣನ
ಚರಣವನು ಕಂಡಂತೆ ಪುಳಕಿತೆಯಾದಳಡಿಗಡಿಗೆ ೧೫

ಏನು ಮತ್ತೇನವ್ವ ಭಾಗ್ಯವ
ಹಾನಿಧಿಯಲಾ ನೀನು ಬಂದನು
ದಾನವಾಂತಕನಧಿಕಕಾರುಣ್ಯದಲಿ ನಿನಗೊಲಿದು
ಏನನೆಂಬೆನು ಕೃಷ್ಣನಂತೆ ಕೃ
ಪಾನಿಧಿಗಳಿನ್ನಾರು ಭಕ್ತಾ
ಧೀನವಿಗ್ರಹನೆಂಬ ಬಿರುದನು ಕಂಡೆ ನಾನೆಂದ ೧೬

ಜನ್ಮ ಸಫಲವಿದಾಯ್ತು ಬಿಟ್ಟೆಯ
ಧರ್ಮದಲಿ ಕಟಕವನು ಕಂಡಂ
ತಮ್ಮ ನಿಜಸಂದೇಶದಲಿ ಮುನಿವಂದಿತಾಂಘ್ರಿಯನು
ನಿರ್ಮಮರು ನೆಱೆ ಕಾಣರೀ ನಸು
ಗರ್ಮಿ ಪಾತಕಿ ಹೋಗಿ ಸಾಕ್ಷಾ
ದ್ಬ್ರಹ್ಮಮೂರುತಿ ಕೃಷ್ಣನಂಘ್ರಿಯ ಕಂಡೆ ನಾನೆಂದ ೧೭

ಎಂದು ವಿಪ್ರೋತ್ತಮನು ವಿಪುಳಾ
ನಂದದಲಿ ಮುಳುಗಾಡುತಿರಲರ
ವಿಂದಮುಖಿ ಕೇಳುತ್ತ ಕೃಷ್ಣಾಗಮನವಾರ್ತೆಯನು
ತಂದ ವಿಪ್ರೋತ್ತಮನ ಚರಣ
ದ್ವಂದ್ವದಲಿ ವೈಯಿಕ್ಕಿದಳು ಮುದ
ದಿಂದ ಮಾಳ್ಪುಚಿತವನು ಕಾಣದೆ ಬೇಱೆ ಮತ್ತೊಂದ ೧೮

ಅರಸ ಕೇಳಾ ಕೃಷ್ಣನೊಬ್ಬನೆ
ಪರಿಹರಿಸಿ ಪರಿವಾರವನು ಹೋ
ಗಿರಲು ಕುಂಡಿನಿಪುರಕೆ ನಾನಾದೇಶದರಸುಗಳು
ಧುರಕೆ ಚೈದ್ಯನ ಪಕ್ಷದಂಗೀ
ಕರಣದಲಿ ಬಹ ವಾರ್ತೆಯನು ಸಂ
ಕರುಷಣನು ಕೇಳುತ್ತ ನೆರಹಿದನಖಿಳ ನಿಜಬಲವ ೧೯

ವಹಿಲದಲಿ ನಡೆತಂದನುರ ವಿ
ಗ್ರಹವ ಶಂಕಿಸಿ ನೆರಹಿ ಯಾದವ
ಬಹುಳ ಬಲವನು ಕರಿತುರಗರಥಪತ್ತಿಸಂಕುಳದ
ನಿಹತ ಪದರಜದೊಳಗೆ ಮುಳುಗಲು
ಮಿಹಿರಮಂಡಲವಾವರಿಸಿ ದಿ
ಕ್ಕುಹರವನು ಮೋಹರಿಸಿ ಬಿಟ್ಟನು ಪುರದ ಬಾಹೆಯಲಿ ೨೦

ಬಂದು ಕಂಡುದು ಸಕಲ ಪುರಜನ
ವೃಂದವಾ ಶ್ರೀರಾಮಕೃಷ್ಣರ
ಮಂದಹಾಸೋದಾರಮಧುರಾಪಾಂಗವೀಕ್ಷಣದ
ಕುಂದರದನಾವಳಿಯ ಮೌಕ್ತಿಕ
ದಿಂದೆಸೆವ ಬಿಂಬಾಧರದ್ಯುತಿ
ಕಂದಳಿತ ಕಮನೀಯವದನಾಂಬುಜನನಖಿಳಜನ ೨೧

ರಾಮಕೃಷ್ಣರ ಬರವನದನಾ
ಭೂಮಿಪತಿ ಕೇಳುತ್ತ ಹರುಷೋ
ದ್ದಾಮಮತಿ ನಡೆದಿದಿರುಗೊಂಡನು ವಿದಿತವಿಭವದಲಿ
ಧಾಮರೂಪರಿಗಿತ್ತು ನಿರ್ಮಳ
ಧಾಮವನು ಮನ್ನಿಸಿದನಧಿಕ
ಪ್ರೇಮದಲಿ ಮಂಗಳ ಸುಭೋಜನಪಾನಶಯನದಲಿ ೨೨

ಕುಡಿಕುಡಿದು ಕಂಗಳಲಿ ಕೃಷ್ಣನ
ಕಡುಚೆಲುವ ಮೂರ್ತಿಯನು ತೃಪ್ತಿಯ
ತಡಿಯಕಾಣದು ಮನವು ಮಝು ಭಾಪಾವ ಸೌಭಗದ
ಕಡಲೊ ಕಾಮನ ತಂದೆಗೀಸು
ಗ್ಗಡದ ರೂಪಿಲ್ಲದಡೆ ಗೋಪಿಯ
ರೊಡಲನುಳಿವರೆ ಕೃಷ್ಣವಿರಹದಲೆಂದುದಖಿಳ ಜನ ೨೩

ಈತನರ್ಧಶರೀರವೆನಿಸುವ
ಡಾ ತಳೋದರಿ ಯೋಗ್ಯೆ ರುಕ್ಮಿಣಿ
ಗೀತನೇ ಪಾಣಿಗ್ರಹಣಯೋಗ್ಯನು ವಿಚಾರಿಸಲು
ಮಾತು ಬೇಱನ್ನೇಕೆ ವಿಬುಧ
ವ್ರಾತವೆಣೆಯಿಲ್ಲಣ್ಣನೇ ದಿಟ
ಪಾತಕನಲಾ ರುಕ್ಮಿಯೆನುತಿರ್ದುದು ಜನಸ್ತೋಮ ೨೪

ಎಲೆ ವಿಧಾತ ಮಹಾ ಸತಿಗೆ ನೀ
ನೊಲುವೆಯಾದಡೆ ಸೇರಿಸೀತನ
ಲಲಿತಪಾಣಿಗ್ರಹಣವನು ಮಾಳ್ಪಂತೆ ಕೋಮಲೆಯ
ಹಲವು ಮಾತೇಕೆಮ್ಮ ಜನ್ಮಾ
ವಳಿಯ ಸುಕೃತದ ಫಲಗಳುಳ್ಳಡೆ
ಲಲನೆ ಸೇರಲಿ ಸೇರಲೀತನ ಚರಣಕಮಲದಲಿ ೨೫

ಕಂಡು ಕಮಲಾಕ್ಷಿಯರು ಕೃಷ್ಣನ
ಖಂಡ ಸೌಭಾಗ್ಯೋದಧಿಯ ಪರಿ
ಮಂಡನದ ಮೂರ್ತಿಯನು ಮಱೆದರು ಲೋಕವಿಭ್ರಮವ
ಕಂಡವರು ಬಳಿಕಿತರ ವಿಷಯವ
ಕಂಡರಾದರೆ ಕೊಱತೆ ಸೃಜಿಸಿದ
ಪುಂಡರೀಕಾಸನಗೆನುತ್ತಿರ್ದುದು ಬುಧಸ್ತೋಮ ೨೬

ಎನುತ ನಗರನಿವಾಸಿಗಳು ವರ
ವನಿತೆಯರು ನಾನಾ ದಿಗಂತದ
ಜನಗಳಾ ವೈವಾಹಿಕೋತ್ಸವದರ್ಶನಕೆ ನೆರೆದು
ಅನಿಬರಾ ಶ್ರೀರಾಮಕೃಷ್ಣಾ
ನನಸರೋಜಸುಧಾಬ್ಧಿಯಲಿ ಲೋ
ಚನಗಳಿಂದೋಲಾಡುತಿರ್ದುದು ಕೂಡೆ ತಮತಮಗೆ ೨೭

ಅತ್ತಲನ್ನೆಗ ಮೊಳಗಿದುವು ಮಾ
ಹೂರ್ತಿಕರ ನಿಸ್ಸಾಳ ಭೇರಿಗ
ಳೊತ್ತರಿಸಲಂಬಿಕೆಯನಾರಾಧಿಸಲು ಭೀಷ್ಮಕನ
ಪುತ್ರಿ ಹೊಱವಂಟಳು ಮಹಾ ದ್ವಿಜ
ಮತ್ತಕಾಶಿನಿಯರಲಿ ನಿರ್ಮಳ
ಚಿತ್ತದಲಿ ನೆನೆವುತ್ತ ಕೃಷ್ಣಪದಾಬ್ಜವಿಷ್ಟರವ ೨೮

ಕಿತ್ತ ಖಡುಗದಲೈದಿದರು ಸುಭ
ಟೋತ್ತಮರು ಪರಿವಾರ ನಡೆದುದು
ವೇತ್ರಜರ್ಝರ ಪಾಣಿಗಳು ಕಂಚುಕಿಗಳೊಗ್ಗಿನಲಿ
ಸುತ್ತಿಸುಳಿದರು ಮಾಂತ್ರಿಕರು ವಿ
ಪ್ರೋತ್ತಮರು ವರಸೂತ ಮಾಗಧ
ರೊತ್ತರಿಸಲುತ್ಸಾಹದಲಿ ಹೊಱವಂಟಳರಮನೆಯ ೨೯

ಉರಗರಾಜ ಫಣಾಸಹಸ್ರ
ಸ್ಫುರಿತಮಧ್ಯಮಹಾಮಣಿಯೊ ದು
ರ್ಧರಮಹಾವೇತಾಳಬಲರಕ್ಷಿತ ಮಹಾನಿಧಿಯೊ
ದುರವಗಾಹ್ಯಮಹಾಸಿಧಾರಾ
ಭರಿತ ಮಧುವೋ ರಾಜಭಟ ಪಂ
ಜರಪರೀತ ಮಹಾವಧುವೊಯೆನುತಿರ್ದುದಖಿಳ ಜನ ೩೦

ಭರಿತ ಯಾದೋನೀಕಮಧ್ಯ
ಸ್ಫುರಿತ ಲಕ್ಷ್ಮಿಯೊ ದೈತ್ಯಹಸ್ತಾಂ
ತರಿತಸುಧೆಯೋ ರಾಹುವದನನಿಶೀರ್ಣಚಂದ್ರಿಕೆಯೊ
ಪರಿಗತಾವಿದ್ಯಾವಿಮೋಹಾ
ತುರನ ಧೃತಿಯೋ ಕ್ರೋಧಶೀಲರ
ಕರಣ ಶಾಂತಿಯೊ ಸುಭಟಗಣವೇಷ್ಟಿತ ಮಹಾಸತಿಯೊ ೩೧

ನೋಡಿದವರಕ್ಷಿಗಳು ಮನೆಯನು
ಮಾಡಿದವು ಮಹಿಳೆಯಲಿ ಮನಗಳು
ಮೂಡಿಗೆಗಳಾದವು ಮಹಾಮದನಾಸ್ತ್ರಸಂತತಿಗೆ
ಬಾಡಿದುದು ತನು ಮನದ ಬಳಿಯಲಿ
ಕೂಡೆ ನಿಶ್ಚೇಷ್ಟೆಯಲಿ ಜನ ಮುಳು
ಗಾಡುತಿರ್ದುದು ತತ್ಕೃತಾಂತಸ್ತಾಪವಹ್ನಿಯಲಿ ೩೨

ಏಕೆ ಸುರಪತಿಗಕಟ ಗರ್ವೋ
ದ್ರೇಕವೀ ಸತಿಯವಯುವದಲೊಂ
ದೇಕದೇಶವ ಹೋಲುವರೆ ಸುರಲೋಕವನಿತೆಯರು
ಈ ಕಮಲಮುಖಿಯಿದ್ದಡಂದು ಪಿ
ನಾಕಿ ಸುಡುವನೆ ಶಿವಶಿವಾ ಸ್ಮರ
ನಾಕೃತಿಯನೆಂದೆನುತಲಿರ್ದುದು ಸಕಲ ಜಗನಿವಹ ೩೩

ಆ ಸಕಲ ಪುರಜನ ಮಹಾಜನ
ವಾ ಸರೋರುಹಮುಖಿಯ ರೂಪವಿ
ಳಾಸಗತಿಗಂಭೀರತೇಜೋಗುಣವಿಶೇಷವನು
ವಾಸನಿಸಿ ಕಂಗಳಲಿ ಕಾಮಾ
ವೇಶದಲಿ ಮನ ಮುಳುಗುತಿರಲಂ
ತಾ ಸುಭಟರೊಗ್ಗಿನಲಿ ಬಂದಳು ಗಿರಿಜೆಯಂತಿಕಕೆ ೩೪

ಕಾಲು ಮೊಗವನು ತೊಳೆದು ಸತಿಯರ
ಮೇಳದಲಿ ನಡೆತಂದು ಹೊಕ್ಕಳು
ಲೋಲಲೋಚನೆ ದೇವತಾಮಂದಿರವನೊಲವಿನಲಿ
ಸೂಳಗಿವ ಕಹಳೆಗಳ ವರ ನಿ
ಸ್ಸಾಳ ಭೇರೀ ಶಂಖರವ ದಿ
ಗ್ಜಾಲವನು ಬಿಡೆ ಹಳಚಲಾರಾಧಿಸಿದಳಂಬಿಕೆಯ ೩೫

ಪೊಡವಡಿಸಿ ಹರುಷದಲಿ ವಿಪ್ರರ
ಮಡದಿಯರು ಹರಗಿರಿಜೆಯರ ಮೆ
ಲ್ಲಡಿಗಳಿಗೆ ನವವಧುವನಾ ವಿಧಿತಮಾರ್ಗದಲಿ
ಇಡಿದ ಗಂಧಾಕ್ಷತೆಗಳಲಿ ಮಣಿ
ದೊಡಿಗೆ ಧೂಪಾರತಿಗಳೊಪ್ಪುವ
ಸೊಡರುಗಳ ನವರತ್ನನಿಕರಂಗಳಲಿ ತವತವಗೆ ೩೬

ವಿನುತವಹ ವನಮಾಲ್ಯದಲಿ ಬಲಿ ಬಾ
ಗಿನಗಳಲಿ ಧವಳೇಕ್ಷು ಫಲ ಪಾ
ವನ ಮಧುರವಹ ಭಕ್ಷ್ಯ ಭೋಜ್ಯಂಗಳಲಿ ಮೂಜಗದ
ಜನನಿಯನು ತದ್ವಿಪ್ರಕಾಂತಾ
ಜನಗಳನು ಪೂಜಿಸಿದಳಂದಾ
ವನಿತೆ ಮಂಗಳಸೂತ್ರವಸನವಿಭೂಷಣಂಗಳಲಿ ೩೭

ಹರಸಿದರು ಕಾಂತೆಯರು ಕೃಷ್ಣಂ
ಗರಸಿಯಾಗೆಲೆ ತಾಯೆ ನೀನೆಂ
ದಿರದೆ ಕೊಟ್ಟರು ಶೇಷವನು ಮಾಲ್ಯಾಕ್ಷತಾದಿಕವ
ಸರಸಿಜಾನನೆ ಬಳಿಕ ದೇವಿಯ
ಚರಣದಲಿ ಪೊಡವಟ್ಟು ವರ ವಿ
ಪ್ರರಿಗೆ ಸತಿಯರಿಗೆಱಗಿ ಹೊಱವಂಟಳು ಶಿವಾಲಯವ ೩೮

ಬಳಿಕ ಮೌನವ್ರತವನುಳಿದಾ
ಲಲನೆ ಹೊಱವಂಟದಱ ಸನಿಹದ
ಬಲವಿರೋಧಿಶಚೀಗೃಹಂಗಳಿಗೊಲಿದು ನಡೆತಂದು
ನಳಿನಮುಖಿ ಕುಲದೇವತೆಗಳನು
ನಲಿದು ಪೂಜಿಸಿ ಬೇಡಿದಳು ಮನ
ದೊಲವನೀವುದು ನೀವೆನುತ ಸದುಭಾವಭಕುತಿಯಲಿ ೩೯

ಬೀಳುಕೊಂಡಳು ಸತಿ ಸಮಸ್ತಸು
ರಾಳಿಗಭಿನಮಿಸುತ್ತ ಲಕ್ಷ್ಮೀ
ಲೋಲನನು ಭಾವಿಸುತ ಮನದಲಿ ಬಳಿಕ ಸುರಪತಿಯ
ಆಲಯವ ಹೊಱವಂಟಳಂದಾ
ಬಾಲೆ ಕೃಷ್ಣನ ಬರವನಿದ್ದೆಸೆ
ಗಾಲಿಸುತ ಸಂಬ್ರೀಳನಯನಾಪಾಂಗವೀಕ್ಷೆಯಲಿ ೪೦

ಮೊಲೆಮುಡಿಯ ಭಾರದಲಿ ಬಡನಡು
ಬಳುಕೆ ಬಹಳನಿತಂಬ ಭಾರ
ಸ್ಖಲಿತಗತಿಯಲಿ ಮೃದುಳತರಚರಣಾರವಿಂದದಲಿ
ಅಳುಕಿ ನಡೆವುತ ರತ್ನಮುದ್ರಿಕೆ
ಗಳಲಿ ಮೆಱೆವ ಕರಾಗ್ರಧಾತ್ರಿಯ
ತಳದಲೆಸೆಯಲು ಕಾಂತೆ ಹೊಱವಂಟಳು ಸುರಾಲಯವ ೪೧

ಮುಳುಗಿದುದು ನಭ ಸತ್ತಿಗೆಯ ಸಾ
ಲೊಳಗೆ ಚಲಿಸುವ ಚಾಮರದ ಸಂ
ಕುಲದಲದ್ದುದು ದೆಸೆಗಳೆಂಟರ ವಿವರವಾ ಕ್ಷಣಕೆ
ಕಲಿತ ಸನ್ನಾಹದಲಿ ರಥವನು
ಸುಳಿಸಿದರು ವಾಮಾಕ್ಷಿಯಿದಿರಲಿ
ತಳುವ ಮಾಡದಿರೆನುತ ಮೌಹೂರ್ತಿಕರು ಸಂದಣಿಸಿ ೪೨

ಬಂದಳೊಯ್ಯನೆ ಚರಣಕಮಲ
ದ್ವಂದ್ವದಲಿ ನೂಪುರಗಳುಲಿಯಲು
ಮಂದಹಾಸೇಕ್ಷಣದಲೆಡಬಲವಂಕವನು ನೋಡಿ
ಕೊಂದನೋ ವಿಧಿಯೆನುತ ಮಾನಿನಿ
ಮುಂದೆ ಹೆಜ್ಜೆಯನಿಡಲು ಶಂಕಿಸು
ತಂದು ಮೃದುತರಗತಿಯಲೆಯ್ದಿದಳಾ ರಥದ ಹೊರೆಗೆ ೪೩

ನಿಲುಕಿ ಕಾಣದೆ ಕಲ್ಪಕುಜಕ
ವ್ವಳಿಪ ಲತೆಯೋ ತತ್ವಸುಖದಲಿ
ನಿಲವನೈದಲು ನೆಱೆಯದಾತ್ಮಜ್ಞಾನಸಂಪದವೋ
ಕಳವಳಿಸಿದಳು ಕಮಲಮುಖಿ
ತಲ್ಲಣಿಸಿ ಕಾಣದೆ ಕೃಷ್ಣಪದಯುಗ
ನಳಿನವನು ನಸುಬೆಮರುವಂಗೋಪಾಂಗದಲಿ ತರಳೆ ೪೪

ಏಱಿ ಮದುವೆಯ ರಥವನಂದಾ
ನೀಱೆಯಿದ್ದಳು ತನ್ನ ಮತಿಯನು
ಬೇಱೂರಿಸಿ ಕೃಷ್ಣಾಂಘ್ರಿಕಮಲಧ್ಯಾನನಿಷ್ಠೆಯಲಿ
ತೋಱುವೀ ಸಂಸಾರವಿಷಯಕೆ
ಮಾಱುವೋಗದ ಮನದ ವಿರತಿಯ
ಲಾ ರುರುಕ್ಷುವಿನಂತೆ ನಿಸ್ಪೃಹೆಯಾಗಿ ಚೈದ್ಯನಲಿ ೪೫

ಇರಲು ಹಾಯ್ದನು ಕೃಷ್ಣನಾಕೆಯ
ಹೊರೆಗೆ ರಥವನು ನೂಕಿಸುತ್ತಿರ
ಲುರವಣಿಪ ನೃಪಭಟರುಗಳ ವೋಹರವನೊಡೆತುಳಿದು
ಸರಸಿಜಾಕ್ಷಿಯನೆತ್ತಿಕೊಂಡ
ಬ್ಬರಣೆ ಮಸಗಲು ತನ್ನ ರಥದೊಳ
ಗಿರಿಸಿದನು ಸಂಸಾರ ಪತಿತರನೆತ್ತುವಂದದಲಿ ೪೬

ಎಲವೊ ಕವಿ ಕವಿಯೆಂದೆನುತ ಬಲ
ಜಲಧಿ ನೂಕಿದುದೆಂಟುದಿಕ್ಕಿನ
ಲಿಳೆಗಧೀಶ್ವರರಾಜ್ಞೆಯಲಿ ಕರಿತುರಗರಥನಿಕರ
ಬಳಸಿ ಕೃಷ್ಣನ ರಥವ ಪರಿಮಂ
ಡಳಿಸಿ ನಿಮಿಷಾರ್ಧಾರ್ಧಮಾತ್ರದ
ಲೊಳಗುಮಾಡಿದುದಸ್ಥಿರಾಂತಃಕರಣರಂದದಲಿ ೪೭

ಅರೆದನನಿತು ಚತುರ್ಬಲವನದ
ನರೆನಿಮಿಷಮಾತ್ರದಲಿ ಬಲವನು
ಬೆರಸಿದನು ಬಲಭದ್ರಮುಖ್ಯರನಿರಿಸಿ ಸಂಗರಕೆ
ಹರಿಣಲೋಚನೆಸಹಿತ ಹಾಯ್ದನು
ನರಿಗಳನು ಕೆಡೆಯೊದೆದು ಬಹ ಕೇ
ಸರಿಯವೊಲು ನಿತ್ಯಾತ್ಮ ಕೃಷ್ಣನು ನಲಿದು ನಿಜಪುರಕೆ ೪೮

ಐವತ್ತೊಂಭತ್ತನೆಯ ಸಂಧಿ ಮುಗಿಯಿತು.

# ಅರವತ್ತನೆಯ ಸಂಧಿ

ಚಂಡವೀರ ನೃಪಾಲಕದಳೀ
ಖಂಡನೋರ್ಜಿತಬಹಳಬಲದೋ
ರ್ದಂಡದಲಿ ರುಕ್ಮಿಯನು ಗೆಲಿದನು ರುಕ್ಮಿಣೀರಮಣ

ಅರಸ ಕೇಳಾ ಸಕಲ ಪೃಥ್ವೀ
ಶ್ವರರು ಮಸಗಿದರಂತ್ಯಕಾಲದ
ಧರಧುರದ ದುರ್ವಾರಸಾಗರದಂತೆ ತವತವಗೆ
ಉರಿಮೊಗದ ಕೆಮ್ಮೀಸೆಗಳ ತುದಿ
ವೆರಳು ಬದ್ಧಭ್ರುಕುಟಿತಟಭೀ
ಕರ ಭಟಾವಳಿಯೊಡನೆ ಗರ್ಜಿಸುತೇಱಿದರು ರಥವ ೧

ಕೊಂಡರಭಿಮಾನವನು ಗೋಪರು
ಕಂಡಿರೈ ನೀವದನು ಕೊಡಿರೈ
ಹೆಂಡಿರನು ಬಳುವಳಿಯನೆಲ್ಲರು ಭೀಷ್ಮನಂದನೆಗೆ
ಗಂಡನೊಬ್ಬನೆ ಕೃಷ್ಣನಧಿಕೋ
ದ್ದಂಡಸಾಹಸಿಯೆನುತ ಕೆದಱಿದ
ಮಂಡೆಯಲಿ ಬೆಂಬತ್ತಿದರು ಮೂದಲಿಸಿ ಮುರಹರನ ೨

ರಾವುತರು ರಥಗಳನು ರಥಿಕರು
ಭಾವಿಸದೆ ಕುದುರೆಗಳನೇಱಿದ
ರೋವೊ ವಾಹನ ಕವಚ ಶಸ್ತ್ರಾಸ್ತ್ರಂಗಳನು ಮಱೆದು
ಜೀವವನು ಸೇದುವೆವು ಕೃಷ್ಣನ
ದಾವಘನ ಬಿಡದಿರ್ದಡಾ ರಾ
ಜೀವಮುಖಿಯನು ಕಾಣಬಹುದೆನುತೈದಿದರು ಭಟರು ೩

ಅಬ್ಬಱಿಸಿ ನೃಪನಿವಹ ಕವಿದುದು
ಸರ್ಬದಳ ಭಾರದಲಿ ಪದಹತಿ
ಗರ್ಬಿತಳ ಮೇಲಾಯ್ತೆನಲು ಕೆಂಧೂಳಿ ದೆಸೆದೆಸೆಗೆ
ಹಬ್ಬಿದುದು ಹರ ಹರ ಯೆನುತ್ತ ಸು
ಪರ್ಬಜನ ಬೆಱಗಾಗಲಾ ಶತ
ಪರ್ಬಧರನನುಜನನು ಮುತ್ತಿದುದೆಂಟು ದಿಕ್ಕಿನಲಿ ೪

ಬಂದಿರೇ ನಿಬ್ಬಣಿಗರೇತಕೆ
ಮುಂದುವರಿವಿರಿ ಕೊಳ್ಳಿ ಮತ್ತೊಂ
ದೊಂದು ಬಾಣದಲನಿಬರನು ಕೆಡೆಯೆಚ್ಚು ಪರಬಲವ
ಅಂದಗೆಡಿಸಿದನಸುರರಿಪು ನೀ
ಮುಂದೆ ನಡೆ ಸಂಗರಕೆ ತಾನಿಹೆ
ನೆಂದು ನೊಳಗುವ ಪರಬಲಕೆ ಮಾಱಾಂತನಾ ರಾಮ ೫

ಕವಿದೆಸುತ ಪರಬಲವ ಬಾಣಾ
ರ್ಣವದಲದ್ದುದು ಯಾದವರ ಬಲ
ನಿವಹವದನೇನೆಂಬೆನೀಕ್ಷಿಸುತಾ ವಿದರ್ಭಸುತೆ
ಅವಯವದ ಕಂಪದಲಿ ನಿಜಪರಿ
ಭವವ ಶಂಕಿಸಿ ತನ್ನ ಮುಖಕಮ
ಲವನು ನೋಡಲು ನುಡಿದನಸುರಾರಾತಿ ಸತಿಯೊಡನೆ ೬

ಅಂಜಬೇಡಲೆ ಕಾಂತೆ ನಿನ್ನವ
ರಂಜಲಜುವರೆ ಶರನಿದಾಘದ
ಮಂಜಲಾ ಮಲೆವಹಿತರಾಯರ ಮೋಹರವಿದೆನುತ
ಕಂಜನಯನೆಯನಪ್ಪಿ ನಿಜಕರ
ಕಂಜದಲಿ ಮೈದಡವಿ ಭವಭಯ
ಭಂಜನನು ಬೋಳೈಸಿದನು ಮಾನಿನಿಯ ನಲವಿನಲಿ ೭

ಕಿಱಿದೆನಿಪ ರವಿಮಂಡಲವನಾ
ವರಿಸಿ ಕವಿವ ಮಹಾಭ್ರಮಂಡಲ
ದಿರವ ತಳೆದುದು ವೈರಿಬಲ ಹರಿರಥವನಾಕ್ರಮಿಸಿ
ಇರದೆ ಬಿಡೆಬೀಸಿದುದು ಗಡ ಸಂ
ಕರುಷಣೋದ್ಧವ ಸಾತ್ಯಕಿ ಪ್ರಮು
ಖರ ಶರಾವಳಿ ತೀವ್ರಮಾರುತನೆಂಟುದೆಸೆಗಳಿಗೆ ೮

ಕುದುರೆಗಳು ಶರಹತಿಗೆ ಕುಕ್ಕುಱಿ
ಸಿದವು ತೇರ್ಗಳು ಥಟ್ಟುಗೆಡದವು
ರದನಿಗಳು ಕರ ಹರಿದು ಬಿದ್ದವು ಪಾದಚಾರಿಗಳು
ಉದುರಿದರು ರಣದೊಳಗೆ ಕಡಿ ಖಂ
ಡದಲಿ ಪಲ್ಲಟವಾಯ್ತು ಚತುರಂ
ಗದಲಿ ದಳದುಳವಾದುವಂಬುಗಳಾ ಯದೂತ್ತಮರ ೯

ಔಕುವುದು ಪರಬಲಮಹಾಂಬುಧಿ
ನೂಕುವುದು ಯಾದವಶರಾವಳಿ
ತೇಕಿದರು ನೃಪವರರು ತಲೆಕೆಳಕಾಗಿ ಭಂಗದಲಿ
ಓಕರಿಸಿದರು ಕರುಳನೊಡಲೊಳ
ಗೇಕಸರವಾಯ್ತಸ್ತ್ರಹತಿಪರ
ಲೋಕಯಾತ್ರೆಗೆ ಯೋಚಿಸಿದರಂದಾತ್ಮಸಂಬಳವ ೧೦

ಚೆಲ್ಲಿದುದು ನೃಪಕಟಕ ಜೋದರು
ಬಿಲ್ಲಬಿಸುಟೋಡಿದರು ಕೆಲರೆದೆ
ದಲ್ಲಣದ ಹೇಡಿಗಳು ಹೊಕ್ಕರು ಹಲಧರನ ಮಱೆಯ
ಕೊಲ್ಲದಿರಿ ನಮ್ಮವರೆನುತ ಸಿರಿ
ವಲ್ಲಭನ ಸಾಱಿದರು ಮಾಗಧ
ಸಾಲ್ವ ಮುಖ್ಯರು ಹಾಯ್ದರಾ ಶಿಶುಪಾಲನಿದ್ದೆಡೆಗೆ ೧೧

ಏಳು ನಡೆ ನಿಜಪುರಕೆ ನಮಗೀ
ಕಾಲವಿದು ಶುಭವಲ್ಲ ಧರೆಯಲಿ
ಬಾಲೆಯರು ನಮಗೇಸುಬೇಕ್ಕೈಸುಂಟು ನವ್ಮೊಡಲ
ಕೋಲ ಕೋಳಾಹಳವ ನೋಡೆ
ಮ್ಮೇಳಿಗೆಯ ಭುಜಬಲವನಿದು ಪಶು
ಪಾಲರಲಿ ಪರಿಭೂತವಾಯ್ತೆಂದರು ಮಹೀಶ್ವರರು ೧೨

ಜಯಪರಾಭವಗಳಿಗೆ ಲಾಭ
ವ್ಯಯಗಳಿಗೆ ಸೇರುವುದು ಲೋಕ
ತ್ರಯವಿದೀಶ್ವರತಂತ್ರದಲಿ ದಿಟ ಬಲ್ಲೆ ನಾನಿದನು
ನಯವಿದನೆ ಗೋಪಾಲನೆನ್ನನು
ಜಯಿಸಿದನು ಬಹುಪಾರವಾತನ
ಜಯಿಸಿದೆನು ತಾ ಬಳಿಕಲೆಂದನು ಮಗಧಭೂಪಾಲ ೧೩

ಮರುಳೆ ತಾ ಹದಿನೇಳುಸೂಳನು
ವರವ ಸೋತೆನು ಕಾದಿ ಗೋಪಾ
ಲರಲಿ ಗೆಲಿದೆನು ಕಡೆಗೆ ಹದಿನೆಂಟನೆಯ ಸಮರದಲಿ
ಪರಿಭವಕೆ ಮನಗುಂದೆನಾಹವ
ದುರುಜಯಕೆ ಹಾರೈಸುತಿಹುದೀ
ಶ್ವರನ ವಶದಲಿ ಲೋಕವೆಂದೆಱೆದಣ್ಣ ಕೇಳೆಂದ ೧೪

ಭಂಗವಡೆಯದೆ ನೋಡು ಮತ್ತೀ
ಗಂಗವಿಸಿ ಲೋಕೈಕವೀರರು
ಸಂಗರದಲತ್ಯಲ್ಪಬಲರೆಂದೆನಿಪ ಗೋಪರಲಿ
ಕಂಗೆಡದಿರೀ ಕಾಲವೇ ನ
ಮ್ಮಿಂಗಿತಕೆ ಬರೆ ಬಳಿಕ ಜಯಿಸುವೆ
ವಂಗನಾಚೋರರನು ನೀನಿದಕಂಜಬೇಡೆಂದ ೧೫

ಎಂದು ತಿಳುಹಲು ಸಕಲ ಭೂಪರ
ವೃಂದಸಹಿತೈದಿದನು ತನ್ನಯ
ಮಂದಿರಕೆ ಮುದವಳಿಗನತ್ತಲು ಮನದ ದುಗುಡದಲಿ
ಎಂದನಿತ್ತಲು ರುಕ್ಮಿ ತಂಗಿಯ
ತಂದಡಲ್ಲೀ ಪುರವ ಹುಗೆ ನಾ
ನೆಂದು ರಾಯರ ಮುಂದೆ ಭಾಷೆಯ ಬರೆಸಿ ಹೊಱವಂಟ ೧೬

ದುಷ್ಟಮತಿ ತಾನಾರು ದನುಜಘ
ರಟ್ಟನಾರೆಂಬುದನು ನೋಡದೆ
ಬಿಟ್ಟನಾ ನಿಜರಥವನಾ ಗೋವಿಂದನಭಿಮುಖಕೆ
ಬಟ್ಟೆಯಲಿ ನರ್ಮದೆಯನಸುರಘ
ರಟ್ಟನುತ್ತರಿಸುತ್ತಲಿರಲಡ
ಗಟ್ಟಿದನು ಹೋಗದಿರು ಹೋಗದಿರೆಲವೊ ನಿಲ್ಲೆನುತ ೧೭

ಎಲವೆಲವೊ ಹೆಂಗಳ್ಳ ಹೋಗದಿ
ರಳವಿಗೊಡು ಸಂಗರಕೆ ನೀ ಭುಜ
ಬಲವ ತೋಱೌ ತೋಱು ಜಿತಭೂಪಾಲನುಂಡಲದ
ಬಲುಹ ಮೆಱೆಯದಿರೆನ್ನೊಡನೆ ಕೊಳು
ಗುಳಕೆ ಹಿಡಿ ಚಾಪವನು ಬಾಣಾ
ವಳಿಯ ಮೊನೆಯಲಿ ಮಾತನಾಡೆಂದೆನುತ ತೆಗೆದೆಚ್ಚ ೧೮

ಮೂಱು ಬಾಣದಲಸುರರಿಪುವನು
ಕೀಱೆ ಖಳನುರುವಣಿಸಿದರೆ ನಗು
ತೇಱಿಸಿದ ಚಾಪವನು ಖಂಡಿಸಿ ಬಾಣವನು ತೆಗೆದು
ಆಱಱಲಿ ರುಕ್ಮಿಯನು ರಥವನು
ತೂಱಲೆಚ್ಚನು ತುರಗ ನಾಲ್ಕನು
ಹಾಱಿಸಿದನಾ ಧ್ವಜವನೆಂಟೆರಡೊಂದು ಬಾಣದಲಿ ೧೯

ಮತ್ತೆ ಕೊಂಡನು ರುಕ್ಮಿ ಧನುವನು
ತೆತ್ತಿಸಿದನೈದಂಬಿನಲಿ ಪುರು
ಷೋತ್ತಮನನಾಹವದಲಹುದೋ ವೀರ ಭಾಪೆನುತ
ಕತ್ತರಿಸಿದನು ಕೈಯ ಧನುವನು
ಮತ್ತೆ ಕೊಂಡನು ರುಕ್ಮಿ ಧನುವನ
ದೆತ್ತಿಬಿಸುಟನು ಕೃಷ್ಣನಧಿಕಾಮುರುಷದಲಿ ಧನುವ ೨೦

ಇಟ್ಟಿಯನು ಸಬಳವನು ಪರಿಘವ
ಪಟ್ಟಿಸವನಸಿಚರ್ಮ ಶೂಲೋ
ತ್ಕೃಷ್ಟ ತೋಮರವೆಂಬ ಹಲವು ಮಹಾಸ್ತ್ರಸಂತತಿಯ
ದುಷ್ಟಮತಿ ಸೆಳೆವುತ್ತಿರಲು ಕಡಿ
ದೊಟ್ಟಿದನು ಮುರವೈರಿ ಸುಭಟನ
ಮುಷ್ಟಿಯೊಳಗಿರಲನಿತುವನು ಬೆಱಗಾದುದುಖಿಳಜನ ೨೧

ಕೆಡಹಿದನು ಸಾರಥಿಯ ತಲೆಯನು
ಕೊಡಹಿ ಬಿಸುಟನು ತುರಗ ನಾಲ್ಕಱ
ಗಡಣವನು ಸತ್ತಿಗೆಯನಾ ಹೊಂದೇರನಾ ಧ್ವಜವ
ಎಡಬಲದ ಪಟುಸುಭಟರನು ಗೋ
ಳಿಡಿಸಿದನು ನಿಮಿಷಾರ್ಧಮಾತ್ರದ
ಲಡವಿಯನು ಕಡಿವಂದದಲಿ ಬಯಲಾಯ್ತು ರಣಭೂಮಿ ೨೨

ನಿಲ್ಲು ನಿಲ್ಲೆಲೆ ಕೃಷ್ಣ ನೀನಹೆ
ಬಲ್ಲಿದನು ಗೋವಳರ ಬಳಗ
ಕ್ಕೆಲ್ಲ ನೀನುತ್ತಮನಲಾ ತಪ್ಪೇನು ತನ್ನೊಡನೆ
ಬಿಲ್ಲ ಹಿಡಿ ರಥವೇಕೆ ತನಗೀ
ಗೊಲ್ಲರೊಡನೆಯ ಸಮರಕೆನುತರಿ
ಮಲ್ಲನಸಿಚರ್ಮವನು ಕೊಂಡನು ಕೃಷ್ಣನಭಿಮುಖಕೆ ೨೩

ಸಂಗರಕೆ ನಿಲಲಾಱದಿರ್ದರೆ
ತಂಗಿಯನು ಬಿಡು ಸೋತೆನೆನಗೆಂ
ದಂಗುಲಿಯ ಕಡಿ ಕೃಷ್ಣ ಕಾಲ್ಗಳಿಗೆಱಗಿ ಮಱೆವೊಗಲು
ಅಂಗರಕ್ಷೆಯ ಮಾಳ್ಪೆನಲ್ಲದ
ಡಂಗಜಾರಿಯೆ ಬರಲಿ ನಿನ್ನಸು
ವಿಂಗೆ ತಾನೆ ಕಾಲನೆನುತ್ತೈತಂದನುರವಣಿಸಿ ೨೪

ಭಾವನಲ್ಲಾ ನೀನು ದಿಟಸ
ದ್ಭಾವದಲಿ ಬರಲಾವು ಪೊಡವಡ
ಲಾವುದೈತವಗೆ ಕಡಿವೆವು ಬೆರಳನೊಲುವರಿಗೆ
ಗಾವಿಲನೆ ಮಱೆವೊಗುವೆನಜ್ಞರ
ಭಾವನೆಗೆ ಸಹಜದಲಿ ನಿನಗೇ
ಕೀ ವಿಡಂಬನವೆಂದೆನುತ ಮುಱಿಯೆಚ್ಚನರಿಭಟನ ೨೫

ಎಚ್ಚಡಹಿತನ ಹರಿಗೆ ಕಡಿತಲೆ
ನುಚ್ಚುನೂಱೆನೆ ಹಾಱಿದವು ನಭ
ಕಚ್ಚರಿಯನೇನೆಂಬೆನಭ್ರದಲಮರರುಘೆಯೆನಲು
ನೆಚ್ಚಿದೆನೆನುತೌಡುಗಳನೊಡೆ
ಗಚ್ಚಿಮುಷ್ಟಿಯ ಬಲಿದು ಹಾಯಿದ
ನಚ್ಯುತಂಗಿದಿರಾಗಿ ದಂಡಾದಂಡಿಗನುವಾಗಿ ೨೬

ಫಡ ತೊಲಗು ಹಸು ಸೊಕ್ಕಿ ಸಿಂಹವ
ಹಿಡಿಯಬಂದುದೆ ಸಾರೆಲವೊ ಕುಲ
ಗೆಡುಗ ಬಂಧುದ್ರೋಹಿ ಪಾತಕಿಯೆನುತ ಮುಂದಲೆಯ
ಹಿಡಿದು ಧರೆಗಡಗೆಡಹಿ ಕೊರಳಿಗೆ
ಖಡುಗವನು ಹರಿ ಮೋಹುತಿರಲಾ
ಮಡದಿ ರುಕ್ಮಿಣಿ ನಡುಗಿದಳು ಕಾಣುತ್ತ ಭೀತಿಯಲಿ ೨೭

ಕೆಟ್ಟೆನಣ್ಣನ ವಧೆ ನಿರರ್ಥಕೆ
ಮುಟ್ಟದಿಹುದೇ ತನಗೆ ಕಾಣುತ
ದೃಷ್ಟಿಪಥದಲಿ ಕೊಲುವುದನು ಸೈರಿಸಿದಡಕಟೆನುತ
ಬಿಟ್ಟ ಮಂಡೆಯಲಬಲೆ ಮಿಗೆ ಕಂ
ಗೆಟ್ಟು ಕೃಷ್ಣಪದಾಬ್ಜಯುಗಳದ
ವಿಷ್ಟರದಲೆಱಗಿದಳು ಬಾಯರಳಿದಳು ಬಸವಳಿದು ೨೮

ದೇವ ರಕ್ಷಿಸು ರಕ್ಷಿಸವನತ
ದೇವ ರಕ್ಷಿಸು ಕೋಲುವೆಯೆಂತೈ
ಭಾವನನು ನಿಜಯೋಗಮಾಯಾಮೋಹಿತಾತ್ಮನನು
ಕೋವಿದರಿಗರಿದಱಿವಡೆಂತೈ
ಸಾವುದನು ನಾಕಾಣೆನಣ್ಣನ
ಜೀವದಾನವನೀವುದೆಂದಳು ಕಾಂತೆ ಕಳವಳಿಸಿ ೨೯

ನಿನಗಿದಿರೆ ಹುಲುಮನುಜಗಿನುಜರು
ನೆನೆದಡಜಸುರರುದ್ರಕೋಟಿಗ
ಳೆನಿತು ತೋಱವು ಮಗುಳಡಂಗವೆ ನಿನ್ನ ಪೇಕ್ಷೆಯಲಿ
ವನಿತೆ ತಾನೆಂತಱಿವೆನೀ ನಿ
ನ್ನನುಪಮಿತ ಮಾಹಾತ್ಮ್ಯವನು ಕೊಡು
ತನಗೆ ಕುಹಕಿ ನೃಪಾಧಮನನೆಂದಳಲಿದಳು ತರಳೆ ೩೦

ಎಂದು ನಿಜಚರಣಾರವಿಂದ
ದ್ವಂದ್ವದಲಿ ತಲೆವಾಗಿ ನಡುಗು
ತ್ತಿಂದುಮುಖಿ ಕಂಬನಿಯ ಕಡಲಲಿ ಮುಳುಗಿರಲು ಕಂಡು
ಮಂದಹಾಸದಲಬಲೆಯನು ಗೋ
ವಿಂದನಪ್ಪುತ್ತಾನನದ ಜಲ
ಬಿಂದುಗಳನೊರಸಿದನು ಬೋಳೈಸಿದನು ಭಾಮಿನಿಯ ೩೧

ಕೊಟ್ಟನಂಗನೆಗಭಯವನು ಕೈ
ಮುಟ್ಟಿಕೊಲ್ಲೆನು ಕೊಲ್ಲೆ ನೆನುತವೆ
ದುಷ್ಟಮರ್ದನನಧಿಕಕೋಪಾಟೋಪದಲಿ ಜಡಿದು
ಕಟ್ಟಿದನು ಹೆಡಗುಡಿಯನೆಲವೋ
ದುಷ್ಟ ಹೋಗೆನುತವನ ಮುಡಿಯನು
ಮುಟ್ಟಿಸಿದನಸಿಧಾರೆಯಲಿ ಮುನಿವಂದಿತನು ಮುನಿದು ೩೨

ಬಂದನಾ ಸಮಯದಲಿ ರಾಯರ
ವೃಂದವನು ನೆಱೆ ಗೆಲಿದು ಯಾದವ
ವೃಂದದೊಡನಾ ಹಲಧರನು ಹರಿರಮೆಯರಿದ್ದೆಡೆಗೆ
ಕಂದಿದಧರದ ಕಣ್ಣಹನಿಗಳ
ಕಂದಿದಾನನ ಕಾಂತಿಗಳ ತರಿ
ಸಂದ ತಲೆನವಿರುಗಳ ರುಕ್ಮಿನೃಪಾಲನನು ಕಂಡ ೩೩

ಬಿಟ್ಟನಾತನ ಹೆಡಗುಡಿಯ ಬಲು
ಗಟ್ಟನವನಕಟಕಟ ಮಾಡಿದೆ
ಕಷ್ಟವನು ಕಡುಮೂರ್ಖತನದಲಿ ಕೃಷ್ಣ ನೀನಿದನು
ಮೆಟ್ಟಿ ಕೊಯಿವರೆ ತಲೆಯನಂಗನೆ
ಗಟ್ಟಿದೇ ಘನತಾಪವೆನುತಾ
ಮುಷ್ಟಿಕಾರಿ ಮನೋನುರಾಗದಲೆಂದನನುನಯುವ ೩೪

ಉಮ್ಮಳಿಸದಿರು ಪೂರ್ವಕೃತಿಯನು
ಕರ್ಮಫಲದಲಿ ದುಃಖಕೃತ ಸ
ತ್ಕರ್ಮದಲಿ ಸೌಖ್ಯವಿಂತಿದು ನಿಯತಜೀವರಿಗೆ
ದೌರ್ಮನಸ್ಯವಿದೇಕೆ ನೀನಿರ
ಹಮ್ಮಮತೆಯಲಿ ನೋಡು ಬಱಿದೇ
ಯೆಮ್ಮಲಾಚರಿಸದಿರಸೂಯೆಯನೆಂದನಾ ರಾಮ ೩೫

ತಾಯೆ ಚಿಂತಿಸಬೇಡ ತೋರ್ಪುದು
ಮಾಯೆಯಿದು ಸಹಜಾತಬಂಧು ಸ
ಹಾಯನೆಂಬೀ ಭೇದಭಿನ್ನಭ್ರಾಂತಿಬುದ್ಧಿಯಲಿ
ನೋಯಿಸದಿರಾತ್ಮನನು ಮಱವೆಗೆ
ದಾಯಿಗನು ತಾನಾಗಲಿವು ನಿ
ರ್ದಾಯದಲಿ ಸಂಸಾರಿಯೆನಿಸಿಹನಾತ್ಮನಿವನೆಂದ ೩೬

ಒಬ್ಬನೇ ಪರಮಾತ್ಮನಖಿಳದೊ
ಳೊಬ್ಬನೇ ಜೀವಾತ್ಮನೆನಿಸಿಹ
ನೊಬ್ಬನೇ ಮೃತಜಾತನಾದಂತಿಹನು ಮೂಢರಿಗೆ
ಒಬ್ಬನೇ ಕನಸಿನಲಿ ತನ್ನನು
ಸರ್ಬವಿಧದಲಿ ಕಾಂಬವೋಲಿಂ
ತೊಬ್ಬನಲಿ ತೋರ್ಪುದು ಚರಾಚರ ಜೀವಚಯವೆಂದ ೩೭

ಹಲವು ಪರಿಯಲಿ ತತ್ವವಿದ್ಯೆಯ
ನೊಲಿದು ಬೋಧಿಸಿ ರುಕ್ಮಿಣಿಯ ಮನ
ದಳಲನೂಣಿಸಿ ಸಂತವಿಸಲಾ ರುಕ್ಮಿ ದುಗುಡದಲಿ
ತೊಲಗಿದನು ತನುಗುಂದಿ ಕುಂಡಿನ
ನಿಳಯವನು ಹುಗದಿರ್ದನತ್ತಲು
ನೆಲೆಗೊಳಿಸಿ ನೆಱೆ ಭೋಜಕಟಕವದೆಂಬ ಪುರವರವ ೩೮

ಪುಂಡರೀಕಾಕ್ಷನನು ಕೊಲ್ಲದೆ
ಕೊಂಡುಬಾರದೆ ತಂಗಿಯನು ತಾ
ಕುಂಡಿನಿಯ ಹುಗೆನೆಂದು ಭಾಷೆಯ ಮಾಡಿ ನೃಪರೊಡನೆ
ಭಂಡನದನಾಲಿಸಲು ನೆಱೆಯದೆ
ಮಂಡೆಯನು ತಡವುತ್ತ ಕಳವಳ
ಗೊಂಡು ಭೋಜಕಟಾಖ್ಯಪುರದೊಳಗಿದ್ದನಾ ಭೂಪ ೩೯

ಇತ್ತಲಸುರಾರಾತಿ ರಾಯರ
ಮೊತ್ತವನು ಮಾನಚ್ಯುತಿಗೆ ಕೈ
ವರ್ತಿಸುತ ಕಮಲಾಕ್ಷಿ ರುಕ್ಮಿಣಿಸಹಿತ ನಲವಿನಲಿ
ಉತ್ತರಿಸಿ ನರ್ಮದೆಯನಾ ಪುರು
ಷೋತ್ತಮನು ನಿಜಬಲಸಹಿತ ವಾ
ದ್ಯೋತ್ತರದಬಹಳೋತ್ಸವದಲೈದಿದನು ನಿಜಪುರವ ೪೦

ಕೇಳಿ ಕೃಷ್ಣಾಗಮನವನು ನೃಪ
ಜಾಲ ವಿಜಯಾವಾಪ್ತಿ ಕನ್ಯಾ
ಮೌಳಿರತ್ನದ ಲಾಭವನು ವಸುದೇವ ಮೊದಲಾದ
ಪೀಳಿಗೆಯ ಯದುವೃದ್ಧರೆದ್ದರು
ಹೇಳಲೇನುತ್ಸವದ ಸಮ್ಮತ
ದೇಳಿಗೆಯಲಂದಖಿಳಪುರಜನಸಹಿತ ವಿಭವದಲಿ ೪೧

ಕಳಸ ಕನ್ನಡಿಗಳಲಿ ಬಹು ಮಂ
ಗಳ ಮಹಾವಾದ್ಯದಲಿ ಬಹುವಿಧ
ಲಲನೆಯರ ಶೋಭನ ಮಹಾಸಂಗೀತ ಸೂಕ್ತಿಯಲಿ
ಉಲಿವ ಮಾಗಧವಂದಿಸೂತರ
ಕಳಕಳದಲಂದಖಿಳ ಪುರಜನ
ಜಲಧಿ ಬರಲಿದಿರಾಗಿ ಕಾಣಿಸಿಕೊಂಡನುಚಿತದಲಿ ೪೨

ಹೊಕ್ಕನಸುರಾರಾತಿ ಪುರವನು
ಮಿಕ್ಕು ಮೀಱುವ ಜನದ ಹರುಷದ
ತೆಕ್ಕೆಯಲಿ ಬಲಭದ್ರ ಸಾತ್ಯಕಿ ಯುದ್ಧವಾದಿಗಳು
ಇಕ್ಕೆಲದ ಮೇಳದಲಿ ಹಯರಥ
ದಿಕ್ಕರಿಗಳೊತ್ತೊತ್ತೆಯಲಿ ಪುರ
ವೊಕ್ಕವುತ್ಸವದೇಳಿಗೆಯ ಜನನಿವಹದೊಸಗೆಯಲಿ ೪೩

ಕರೆಸಿ ಕುರು ಸೃಂಜಯ ವಿದರ್ಭೇ
ಶ್ವರರನಾ ಕಾಂಭೋಜ ಕಾಶೀ
ಶ್ವರರನಾಪ್ತ ನೃಪಾಲವರ್ಗವನಖಿಳಬಾಂಧವರಾ
ಪರಮ ಹರುಷದಲಾ ಮುಕುಂದನ
ಪರಿಣಯಕೆ ಪರುಠವವನಾವಿ
ಷ್ಕರಿಸಿದನು ವಸುದೇವನಖಿಳಾಮಾತ್ಯಜನಸಹಿತ ೪೪

ಅರು ಬಣ್ಣಿಸಬಹುದು ಮದಜಲ
ಧಾರೆಯಲಿ ಕೆಸಱಾಯ್ತು ನೆಲನಾ
ಭೂರಿ ಭೂಪರ ಗಜಘಟಾವಳಿಗಳ ಮಹೋತ್ಸವದ
ಭೇರಿಗಳ ಬಹುಶಂಖಪಟಹಮ
ಹಾರವದಲಂದಖಿಳ ಬಾಂಧವ
ಭೂರಮಣರೈತಂದು ಕಂಡರು ಕಾಣಿಕೆಯನಿತ್ತು ೪೫

ವರನಲಾ ಸಾಕ್ಷಾತ ವಿಶ್ವಂ
ಭರನು ವಧುವೆ ಲಕ್ಷುಮಿ ದಿಬ್ಬಣಿ
ಗರು ವಿರಿಂಚಿ ಭವೇಂದ್ರ ಮುಖ್ಯಾಮರರು ಭೂವರರು
ಸಿರಿಯನದನೇನೆಂಬೆನಲ್ಲಿಯ
ಪುರಜನದ ಪರಿಜನದ ಹರುಷದ
ಪರಮವಿಭವದ ವಿಪುಳತೆಯನದನೆಂದನಾ ಮುನಿಪ ೪೬

ವರವಿವಾಹವಿಧಾನವನು ವಿ
ಸ್ತರಿಸಿದರು ವರಋಷಿಗಳಂದಾ
ವರವಧುಗಳೆಂದೆನಿಪ ಹರಿರಮೆಯರಿಗೆ ಮನವೊಲಿದು
ವರಚತುರ್ಥಿಯ ನಾಗವಲಿ ವಿ
ಸ್ತರಣವೆಸೆಯಲು ಸಭ್ಯರನು ಸತು
ಕರಿಸಿದನು ವಸುದೇವನಧಿಕ ಮನೋನುರಾಗದಲಿ ೪೭

ದಣಿದುದಗಣಿತ ವಿಪ್ರಕುಲ ಚಾ
ರಣರು ವಂದಿವ್ರಾತ ಬಹುವಿಧ
ಮಣಿಕನಕ ಭೂಷಣ ವಸನ ಗೋಭೂಮಿದಾನದಲಿ
ತೃಣವೊದಲು ಚತುರಾಸ್ಯ ಕಡೆಯೆನ
ಲೆಣಿಸಲೇಕೋಲಾಡಿದರು ಮ
ನ್ನಣೆಯ ಮಧುರೋಕ್ತಿ ಮಹಾವಿಭವದಲಿ ಮೂಲೋಕ ೪೮

ನೆರೆದ ನಾರೀಪುರುಷ ಜನವಾ
ವರ ವಧುಗಳನು ನೋಡಿ ದಣಿಯರು
ಮರಳುದಲೆಯನು ಕಂಗಳಿಗೆ ವಿಷಯಾಂತರಂಗಳಿಗೆ
ನೆರೆ ಸಮಸ್ತೇಂದ್ರಿಯದ ಸೌಖ್ಯದ
ಸರಣಿಯಾದವು ಕಂಗಳೆಂತುಟೊ
ಪರಮಮಂಗಳ ಮೂರ್ತಿಯಾ ಗೋವಿಂದನೀ ಧರೆಗೆ ೪೯

ಜನ್ಮಫಲ ಸೇರಿದವು ಕಂಗಳು
ಜನ್ಮದಲಿ ಜೀವರಿಗೆ ನೆರೆ ನಿರ
ಹಮ್ಮಮರು ಸೇರಿದರು ಸೋಹಮ್ಮಮತಿಗಳ ಗತಿಗೆ
ಸಮ್ಮತವದಾಯ್ತಖಿಳಲೋಕದ
ಕರ್ಮ ನಿರ್ಮೂಲನಕೆ ನಿಜಗುಣ
ರಮ್ಯತರ ನಿತ್ಯಾತ್ಮಕೃಷ್ಣ ವಿವಾಹ ವಿಸ್ತಾರ ೫೦

ಅರವತ್ತನೆಯ ಸಂಧಿ ಮುಗಿಯಿತು.

# ಅರವತ್ತೊಂದನೆಯ ಸಂಧಿ

ಶಂಕರನನಾಶ್ರಿತಜನಾಘ ಭ
ಯಂಕರನನರ್ಚಿಸಲು ಶ್ರೀವ
ತ್ಸಾಂಕನಂದ್ಯೈತರುತ ಬಂದನು ಬದರಿಕಾಶ್ರಮಕೆ

ಒಂದು ದಿನ ನಿಜಶಯನದಲಿ ಗೋ
ವಿಂದನಿರಲೇಕಾಂತದಲಿ ಪೂ
ರ್ಣೇಂದುಮುಖಿ ಬೇಡಿದಳು ಪುತ್ರನನಾ ವಿದರ್ಭಸುತೆ
ಇಂದುಧರನ ಲಲಾಟಶಿಖಿಯಲಿ
ಬೆಂದ ಕಾಮನನೀಸಿ ತಹೆ ನಾ
ನೆಂದು ಹರಿ ಮಱುದಿವಸ ಕರೆಸಿದನಾಪ್ತಬಾಂಧವರ ೧

ಕರೆಸಿದನು ವಸುದೇವನನು ಸಂ
ಕರುಷಣೋದ್ಧವ ಸಾತ್ಯಕಿ ಪ್ರಮು
ಖರನು ಕೃತವರ್ಮೋಗ್ರಸೇನ ನೃಪಾಲಮುಖ್ಯರನು
ಪುರದ ರಕ್ಷೆಗೆ ನೀವಿಹುದು ತಾ
ನುರಗಭೂಷಣನಂಘ್ರಿಗಳನುಪ
ಚರಿಸಿ ಬಹೆನೆಂದಸುರರಿಪು ಹೇಳಿದನು ನಿಜಮತವ ೨

ಪುರವ ಹೊಱವಂಟಖಿಳಬಾಂಧವ
ಪರಿಜನವ ನಿಲಿಸುತ್ತ ನೆನೆದನು
ಗರುಡನನು ತತ್ಪುರದ ಬಾಹ್ಯೋಪವನಸೀಮೆಯಲಿ
ನೆರವಿ ನೋಡುತ್ತಿರಲು ನಿಮಿಷಾಂ
ತರಕೆ ಬಂದನು ಬಾಲಸೂರ್ಯೋ
ತ್ಕರವನೇಡಿಸುವಂಗಕಾಂತಿಯಲಂದು ಖಗರಾಜ ೩

ಬಂದು ನಿಜದಾತಾರನಂಘ್ರಿ
ದ್ವಂದ್ವದಲಿ ತಲೆವಾಗಿ ವಿನತಾ
ನಂದನನು ವಿನಯದಲಿ ಮುಕುಳಿತಕರಸರೋಜದಲಿ
ನಿಂದು ಬಿನ್ನಹ ಮಾಡಿದನು ತಾ
ಬಂದೆನಾವುದು ಕಾರ್ಯವದನೆನ
ಗಿಂದು ಬೆಸಸುವುದೊಡೆಯರೆಂದನು ಭಾವಭಕುತಿಯಲಿ ೪

ಎನಲು ನಗುತಸುರಾರಿ ವಿನತಾ
ತನಯನನು ತಲೆದಡವಿ ಕರುಣಾ
ವನಧಿ ನುಡಿದನು ಮಗನೆ ರಜತಾಚಲನಿವಾಸಿಯನು
ಅನುಪಮನ ಕಾಂಬರ್ಥಿಯಲಿ ತಾ
ನೆನೆದೆನೇಳೇಳೆನುತ ಹೆಗಲಲಿ
ದನುಜರಿಪು ಕುಳ್ಳಿರಲು ಹಾಯ್ದನು ಗಗನಮಂಡಲಕೆ ೫

ಅತ್ತಲಾ ದ್ವಾರಕೆಯ ಜನ ಮೊಗ
ವೆತ್ತಿ ನೋಡುತ್ತಿರಲು ವಿಸ್ಮಯ
ಚಿತ್ತದಲಿ ವಿಹಗೇಂದ್ರನಿತ್ತಲು ಗಗನಮಾರ್ಗವನು
ಉತ್ತರಿಸಿ ನಡೆದನು ಸಮಸ್ತ ಸು
ರೋತ್ತಮರು ಮುನಿವರರು ಗಂಧ
ರ್ವೋತ್ತಮರು ಪರಿವರಿಸಿ ಬರೆ ಸುರಸೂತಮಾಗಧರು ೬

ನೃತ್ಯ ಗೀತಂಗಳಲಿ ವಿವಿಧ
ಸ್ತೋತ್ರ ಪಾಠಂಗಳಲಿ ಚಾಮರ
ಸತ್ತಿಗೆಗಳಿಂಬಧಿಕ ನಿಜವಿಭವೋಪಚಾರದಲಿ
ಸುತ್ತಿ ಸುರರೋಲಗಿಸುತ್ತೈತರ
ಉತ್ತಮಶ್ಲೋಕನನು ವರ ವಿಹ
ಗೋತ್ತಮನು ವಹಿಸಿದನು ಗಗನಾಂಗಣದ ಮಾರ್ಗದಲಿ ೭

ಇಳಿದನನ್ನೆಗ ಸೂರ್ಯನಸ್ತಾ
ಚಲಕೆ ಗರುಡನ ಕಾಂತಿಗಳು ಬೆಂ
ಬಲಕೆ ಬಾರದೆ ಮಾಣದೆನಲರುಣಚ್ಛವಿಗಳೆಸೆಯೆ
ಬಳಿಕ ಭುವನಾನಂದನಿಧಿ ಮನ
ವೊಲಿದು ಸಾಯಂಕಾಲಸಮಯದ
ಲಿಳಿದು ಗರುಡನನಂದು ಹೊಕ್ಕನು ಬದರಿಕಾಶ್ರಮವ ೮

ಆ ಮಹರ್ಷಿಗಳಧಿಕ ತೀವ್ರತ
ಪೋಮಹೋಗ್ರವ್ರಾತನಿರಶನ
ಕ್ಷಾಮಗಾತ್ರರು ಬಹುವಿಧದ ವನ್ಯೋಪಜೀವಿಗಳು
ಆ ಮುಕುಂದಮನೋಜ್ಞಪದಯುಗ
ತಾಮರಸದರುಶನದಲಾಯ್ತು
ದ್ದಾಮಪೂರ್ಣಮನೋರಥರು ಬದರೀನಿವಾಸಿಗಳು ೯

ಇದಿರುಗೊಂಡರ್ಘ್ಯಾದಿ ಘನಸಂ
ಪದದಲಾ ಮುನಿನಿಕರ ಘನಹರು
ಷದಲಿ ಪೂಜಿಸಿದರು ಮಹೋತ್ಸವವೆಸೆಯಲಚ್ಯುತನ
ಪದುಮನಾಭನು ಪರಮಋಷಿಸಂ
ಗದಲಿ ಸುಖದಿಂದಿರಲಿರಲು ನೂ
ಕಿದುದು ಕತ್ತಲೆ ಕಂಗಳಿಗೆ ವಿಘ್ನಂಗಳಂದದಲಿ ೧೦

ಅನ್ನೆಗಾ ಸಮಯದಲಿ ಘಂಟಾ
ಕರ್ಣರೆಂಬವರಧಿಕಸತ್ವರು
ಪನ್ನಗೇಂದ್ರವಿಭೂಷಣನ ಪಾರುಷದರುತ್ತಮರು
ಉನ್ನತಾಮಳಕೀರ್ತಿ ಕೃಷ್ಣನ
ಸನ್ನಿಧಿಗೆ ನಡೆತಂದರಾಶ್ರಮ
ಸನ್ನಿವೇಶಂಗಳಲಿ ವಿಹರಿಸುತಧಿಕವಿಭವದಲಿ ೧೧

ಅವರ ಬರವಿನಲಾಯ್ತು ಘನವಿ
ಪ್ಲವ ತದಾಶ್ರಮವಾಸಿ ಖಗಮೃಗ
ನಿವಹಗಳಿಗೋರಂತೆ ಮೃಗಯಾವ್ಯಸನಲೋಲುಪರು
ಕವಿಸಿದರು ನಾಯ್ಗಳನು ಮುನಿಪುಂ
ಗವರ ದಳಮಂದಿರಗಳಲಿ ಘನ
ರವಕುಳದ ರೌದ್ರದ ಘಡಾವಣೆ ಘಳ್ಲಿಸಿತು ವನವ ೧೨

ಎಲವೊ ಬಿಡು ನಾಯ್ಗಳನು ತೆಗೆ
ಬಲೆಗಳನು ಬಾಣಂಗಳಲಿ ಮೃಗ
ಕುಲವ ಕೆಡೆಯೆಸು ಬೀಳಹೊಯಿ ಹಂದಿಗಳನಡಹಾಯ್ದು
ಹುಲಿಯನೆಸು ಕಾಡ್ಗೋಣನಸುವನು
ತೊಲಗಿಸಾ ತೋಹಿನಲೆನುತ ಕಳ
ಕಳದಲೆದ್ದಲ್ಲಲ್ಲಿ ಮಸಗಿತು ಬಹಳ ಭೂತಗಣ ೧೩

ಬೆಳಗಿದವು ವನದೊಳಗೆ ದೀವಿಗೆ
ಗಳು ದಿಗಂತವನಳ್ಳಿಱುವ ಹೊಗೆ
ಗಳಲಿ ಮೆಳೆಗೊಂದೊಂದೆನಲು ಶತಲಕ್ಷ ಸಂಖ್ಯೆಯಲಿ
ಕಳವಳಿಸಿ ಮೃಗನಿಕರವಾ ಮುನಿ
ಕುಲದ ಪುಣ್ಯಾಶ್ರಮದ ಮನೆಗಳ
ತುಳಿದು ಹೊಕ್ಕವು ಹಿಂಡು ಹಿಂಡುಗಳಾಗಿ ಭೀತಿಯಲಿ ೧೪

ಅಟ್ಟಿ ತುಡುಕುವ ನಾಯ್ಗಳಲಿ ಬೆ
ನ್ನಟ್ಟಿ ಕವಿದೆಸುವಾ ಮರುಳ್ಗಳ
ಥಟ್ಟುಗಳ ತನಿರೌದ್ರ ಘನಗರ್ಜನೆ ರವಂಗಳಲಿ
ಅಟ್ಟುಳಿಗೆ ಸೈರಿಸದೆ ಋಷಿಗಳು
ಕೆಟ್ಟೆವೆನುತೈತಂದು ದನುಜಘ
ರಟ್ಟನನು ಮಱೆಯೊಕ್ಕುದೇನೆಂಬೆನು ಮಹಾದ್ಭುತವ ೧೫

ಬಸಿವ ಮೈಗಳ ನೆತ್ತರಿನ ನಾಯಿ
ಮುಸುಡುಗಳ ಸೆರೆಯೆದ್ದ ಬತ್ತಿದ
ಬಸುಱ ಹೊರಡಿನ ಬೆನ್ನ ನೀಡಿದ ಕೆತ್ತ ನಾಲಗೆಯ
ಉಸುರ ಹೊಗೆಗಳ ಕಣ್ಣ ಕುಳಿಗಳ
ನೊಸಲ ಡೋಱಿಯ ಜೋಲುವೈಗಳ
ವಿಷಮನಯನನ ಪಡೆ ಪರಾಭವಿಸಿತ್ತು ಮಹವನವ ೧೬

ಬಿಗಿದ ಬಿಲ್ಲಿನ ಬೆನ್ನ ಬತ್ತಳಿ
ಕೆಗಳ ಕಿವಿಗಡಿಗುಗಿದ ಬಾಣದ
ಜಗ ಬೆದಱಲುಗ್ಘಡಿಪ ಹಾಹಾಹೀಹಿಗಳ ರವದ
ಮೃಗಗಣದ ಮೃತ್ಯುಗಳು ಕವಿದುದು
ಝುಗಝುಗಿಪ ದೀವಿಗೆಯ ಬೆಳಗಿನ
ಲಗಡಿಸಿದರಡವಿಯನು ಬಱಗೈದರು ಮಹಾವನವ ೧೭

ಶ್ರೀಯ ವಲ್ಲಭನಿಂತಿದುವೆ ನಾ
ರಾಯಣನು ನರಸಿಂಹ ಹರಿ ಯದು
ರಾಯನಿದು ಕೇಶವನು ರುದ್ರನು ವಿಷ್ಣುವೆಂದೆನುತ
ನಾಯ ಬಿಡುವರು ಮೃಗಕೆ ಹೆಸರಿನ
ಸಾಯಕಂಗಳನದನು ಕೇಳುತ
ಮಾಯೆಯರಸನು ಮುಗುಳುನಗೆಯಲಿದೇನೆನುತ್ತಿರ್ದ ೧೮

ಎನ್ನ ಹೆಸರಿನ ನಾಯ್ಗಳಾರಿಂ
ಗೆನ್ನ ಹೆಸರಂಬುಗಳು ಹರ ಹರ
ವರ್ಣಿಸುವವೋಲಿದೆ ಮದೀಯಗುಣಾಭಿಧಾನವನು
ಕರ್ಣಕರ್ಕಶರವವಿದೆತ್ತಲು
ತನ್ನ ಸಂಸ್ತುತಿ ಮಾಳ್ಪದೆತ್ತಲು
ಧನ್ಯರಾರೋ ಯೆನುತ ವಿಸ್ಮಿತನಾದನಸುರಾರಿ ೧೯

ಎನುತಿರಲು ನಡೆತಂದರಿಬ್ಬರು
ದನುಜಹರನಿದ್ದೆಡೆಗೆ ವಿಕಟಾ
ನನರು ದೀರ್ಘಶರೀರಿಗಳು ತ್ರಿಭುವನ ಭಯಂಕರರು
ಘನತರಧ್ವಾನದಲಿ ಹಾಹಾ
ಯೆನುತ ಹೀಹೀ ಯೆನುತ ತವ್ಮೊಳಿ
ದನುವಿನಲಿ ಚೇಷ್ಟಿಸುತ ಘಂಟಾಕರ್ಣಸಂಜ್ಞಿಕರು ೨೦

ಹೊರಳುವರು ವನದಿದಿರಲಾರ್ದಂ
ಬರಕೆ ಹಾಱುವರಿರದೆ ಬೀಳುವ
ರರೆವರಾ ಗಿಡುಮರನನಂಡಲೆವುತ್ತ ತೋಳ್ಗಳಲಿ
ಹರಿವರತ್ತಿತ್ತಲು ಮಹಾ ವೀ
ರರು ಮೆಲುವರಾ ಮಾಂಸವನು ಕುಡಿ
ದರುಣಜಲವನು ತೇಗುವರು ಗಹಿಗಹಿಸುವರು ನಗುತ ೨೧

ಸುತ್ತಿ ಸರ್ವಾಂಗದಲಿ ಕರುಳನು
ಮೆತ್ತಿ ಮೃಗಮಾಂಸವನು ಬಿಸಿನೊರೆ
ನೆತ್ತರಿನ ಸರ್ವಾವಯವದಾಸಾರಧಾರೆಗಳ
ಮತ್ತರವರೈತಂದು ಮುನಿಗಳ
ನೆತ್ತಿಬಿಸುಟರು ಹೋಗಿ ನೀವಾ
ರೆತ್ತಣವರೇಕಿಲ್ಲಿ ಕಾರಿಯವೇನು ನಿಮಗೆನುತ ೨೨

ಎಂದನೊಬ್ಬನು ಹೋಗೆನುತ ಗೋ
ವಿಂದನನು ಮತ್ತೊಬ್ಬ ಹೋಗದಿ
ರೆಂದು ಕೈಗಳ ಮುಗಿದು ವಂದಿಸಿದನು ಪದಾಬ್ಜದಲಿ
ಎಂದನೇಕಿವರೇಕೆ ದಿಟ ನ
ಮ್ಮಂದದಲಿ ಕೃಶಗಾತ್ರರಿವರಾ
ರೆಂದು ಮಾಡಿದರಟ್ಟಹಾಸವನಾ ಮಹಾಭುಜರು ೧೩

ಏಕೆ ನಡೆ ನಮಗಿವರ ಚಿಂತೆ ಪಿ
ನಾಕಿ ಮುನಿಯನೆ ಹೋಹೆವಾ ಜಗ
ದೇಕನಾಥ ಮುಕುಂದನಿದ್ದಾ ದ್ವಾರಕಾಪುರಕೆ
ಸೋಕಿ ಸುಕೃತಿಗಳಹೆವು ನಿಗಮಾ
ನೀಕನುತನಂಘ್ರಿಯನೆನುತ್ತಾ
ವ್ಯಾಕುಳರು ನುಡಿಯಲ್ಕೆ ನಗುತಿಂತೆಂದನಸುರಾರಿ ೧೪

ಆರು ನೀವೆಲವೆಲವೊ ವಿಕೃತಾ
ಕಾರರಿರ ಹೇಳುವಿರಿ ನಿಗಮದ
ಸಾರ ಸುರಹಸ್ಯವನು ಬಂದಿರಿದೇಕೆ ನೀವಿದಕೆ
ಆರು ಕಳುಹಿದರಿಲ್ಲಿಗಾವುದು
ಕಾರಿಯವು ನಿಮಗೆನಲು ನುಡಿದನು
ಭೂರಿವಿಕೃತದಲಟ್ಟಹಾಸವ ಮಾಡಿ ಕಲಿಘಂಟ ೧೫

ಹೇಳು ನೀನಾರೆಂದು ಹೆಸರನು
ಕೇಳುವಾತನು ಮರ್ತ್ಯಲೋಕದ
ಮೌಳಿರತ್ನವೆ ನಿನ್ನ ಹೆತ್ತವರಾರು ಹೆಸರೇನು
ನೀಲಮೇಘಶ್ಯಾಮಲಕ್ಷ್ಮೀ
ಲೋಲನಾಕೃತಿ ನಿನಗಿದೆಂತೈ
ಹೇಳೆನಲು ಹರಿ ನುಡಿದನಂದು ಪಿಶಾಚಗುತ್ತರವ ೧೬

ದುಷ್ಟನಿಗ್ರಹಕೆಂದು ಧರೆಯಲಿ
ಹುಟ್ಟಿದೆನು ಯದುವಂಶದಲಿ ನೃಪ
ವಿಷ್ಟರಕ್ಷಾನರುಹನೆಂಬರು ತನ್ನನೀ ದ್ವಿಜರು
ನೆಟ್ಟನಾವಿದಕೋಸುಗವೆ ಕಾ
ಲಿಟ್ಟವಿತ್ತಲು ನೀವಿದೇತಕೆ
ದುಷ್ಟತನವನು ಮಾಳ್ಪಿರೀ ಮೃಗಕುಲದ ಹತ್ಯೆಯಲಿ ೧೭

ಋಷಿಗಳಾಶ್ರಮವಿದಕೆ ಮೃಗಯಾ
ವ್ಯಸನ ಯೋಗ್ಯವೆ ಯಾಜ್ಞಿಕರು ತಾ
ಪಸರು ವರ್ತಿಸುವೆಡೆಗಳಿವು ಬರಲೇಕೆ ನೀವಿದಕೆ
ಅಸಮ ಪುಣ್ಯಮೃಗಂಗಳನು ಬಾ
ಧಿಸುವಿರಿದಱೊಳಗೇಕೆ ನೀವಾ
ರುಸುರುವುದು ನಿಮ್ಮಂತರಂಗವನೆಂದನಸುರಾರಿ ೧೮

ಎನಲು ಹೇಳುವೆನೆನುತ ಪಿಶಿತಾ
ಶನನು ಕಂಗಳ ಮುಚ್ಚಿ ಭದ್ರಾ
ಸನದಲಾ ದ್ವಾರಾವತಿಗೆ ಮುಂತಾಗಿ ಕೈಮುಗಿದು
ಮನದೊಳಗೆ ಪುರುಷೋತ್ತಮ ಜನಾ
ರ್ದನ ನಮೋ ನಾರಾಯಣಾ ಯೆಂ
ದೆನುತ ನಿಜವೃತ್ತಾಂತವನು ಕಂದೆಱೆದು ವಿವರಿಸಿದ ೧೯

ಘಂಟ ನಾನೆಲೆ ದುರ್ವಿನೀತರ
ಕಂಟಕನೆ ಕೇಳಾ ಮಹೇಶನ
ಭಂಟನಧಿಕಪ್ರಿಯನು ತನಗಾ ಬಾಲಶಶಿಮೌಳಿ
ಎಂಟೊಡಲ ಹರನೊಡನೆ ನಸುಮುನಿ
ಸುಂಟು ಗಡ ಕೃಷ್ಣಂಗೆ ನೆಗಳಲು
ನೆಂಟತನವನು ಬಂದೆವೀ ಮಾರ್ಗದಲಿ ನಾವೆಂದ ೨೦

ಕಾದುತಿರಲಾ ಹಂಸನೊಡನೆ ಮ
ಹಾ ದಯಾನಿಧಿ ಕೃಷ್ಣನಲಿ ಸಂ
ಪಾದಿಸಿದರೊಂದಘವನಾ ಮೂಢಾತ್ಮರೀಶ್ವರನ
ಪಾದಸೇವಕ ಕರ್ಣಧಾರಮ
ಹೋದರಾಖ್ಯರು ಸಂಪ್ರಿಯವ ಸಂ
ಪಾದಿಸಲು ಕಳುಹಿವಡೆ ತಾವೀ ಬಂದೆವಿದೆಯೆಂದ ೨೧

ಬರುತ ತಾವೀಬಂದೆವಿಲ್ಲಿಗೆ
ಹರನ ಸಂದೇಶದಲಿ ಮೃಗಕುಲ
ಹರಣವಿದು ತವಗೋಸುಗಲ್ಲೆಲೆ ವೀರ ಹರಿಪದಕೆ
ನಿರುತ ನೈವೇದ್ಯಾರ್ಥವೆಮ್ಮನು
ದುರಿತ ಮುಟ್ಟದು ತತ್ಪ್ರಸಾದ
ಸ್ಥಿರಶರೀರಿಗಳಿಂಗದೆತ್ತಣ ಹಿಂಸೆ ಹೇಳೆಂದ ೨೨

ಮುನ್ನ ಮಾಡಿದ ಪಾಪದಿಂದು
ತ್ಪನ್ನರಾದೆವು ಕಷ್ಟಜನ್ಮದ
ಲಿನ್ನು ಮಾಳ್ಪವದೆಂತು ತಾವಿದನಱಿತು ದುಷ್ಕೃತವ
ಧನ್ಯರಹೆವೀಗಳೆ ಮುಕುಂದನ
ಸನ್ನಿಧಿಗೆ ಹೋಗಿಂದು ಪರಮ ಕೃ
ಪಾರ್ಣವನಲಾ ಕೃಷ್ಣನೆಂದನು ಘಂಟನಚ್ಯುತಗೆ ೨೩

ಕೇಳಿದೆಯಲಾ ತನ್ನ ಕಥನವ
ನೇಳು ನಡೆ ನಡೆ ವಿಪ್ರಕುಲವೇ
ತಾಳರಿವರಿಲ್ಲಿಂದ ಹೊಱವಡಲೆನುತ ಕೆಲಸಾರ್ದು
ಶೂಲವನು ಹೊಱಗಿರಿಸಿ ತೊಳೆದನು
ಕಾಲು ಮೊಗವನು ನೆತ್ತರಲಿ ಪ್ರ
ಕ್ಷಾಳಿಸಿದನವನಿಯನು ಮತ್ತಾ ರುಧಿರವಾರಿಯಲಿ ೨೪

ನೋಕಿದನು ನಾಯ್ಗಳನು ಕೆಲಕೆ ನಿ
ರಾಕುಳನು ಕುಳ್ಳಿರ್ದು ನೆತ್ತರ
ನೋಕರಿಪ ಕೃಷ್ಣಾಜಿನದ ಮೇಲೆಸೆಯಲಾ ಘಂಟ
ಆಕರಿಸಿ ನಿಖಿಳೇಂದ್ರಿಯವನಂ
ದೇಕಚಿತ್ತದಲಾಂತ್ರಮಾಲಾಂ
ಗೀಕೃತಾಂಗದಲಚ್ಯುತಾಂಘ್ರಿಧ್ಯಾನಪರನಾದ ೩೫

ಮುಕುಟಕುಂಡಲಹಾರಮಣಿಮೌ
ಕ್ತಿಕದ ತೊಳಗುವ ಚಾರುಭೃಂಗಾ
ಳಕ ಮೃದುಸ್ಮಿತ ರಂಜಿತಾಬ್ಜದಳಾಯತೇಕ್ಷಣದ
ಮುಕುರನಿಭಗಂಡಸ್ಥಳದ ನಾ
ಸಿಕದ ಚಲುವಿನಲೆಸೆವ ದಂತ
ಪ್ರಕರ ನವಕುಟ್ಮಳದ ಹರಿಯನು ಬಿಡದೆ ಭಾವಿಸಿದ ೩೬

ಗಳದ ಮೂರೇಖೆಗಳ ಕೌಸ್ತುಭ
ಲಲಿತ ಕಾಂತಿಯ ವಿಪುಳವಕ್ಷ
ಸ್ಥಳದ ಕಂಕಣಮುದ್ರಿಕೆಯಲೊಪ್ಪುವ ಚತುರ್ಭುಜದ
ನಳಿನನಾಭಿಯ ಪೀತವಸ್ತ್ರೋ
ಜ್ವಲನಿತಂಬದ ಮುನಿಹೃದಯಮಂ
ಗಳಮನೋಜ್ಞಾಂಘ್ರಿಯನು ನಿಜಮನದೊಳಗೆ ಭಾವಿಸಿದ ೩೭

ಚಕ್ರಶಂಖಗದಾಬ್ಜಧಾರಿಯು
ರುಕ್ರಮನೆ ತ್ರಿಣಯನಕೃತಾಂಘ್ರಿಪ
ರಿಕ್ರಮನೆ ಪರಮೇಷ್ಠಿವಂದ್ಯನೆ ಪರಮಗುಣನಿಧಿಯೆ
ವಿಕ್ರಮಿತ ತ್ರಿಭುವನನೆ ಸಂಸ್ಕೃತಿ
ಚಕ್ರ ಭಾವಾಭಾವ ಲೀಲಾ
ಚಕ್ರ ಶರಣಾಗೆನುತಲಿರ್ದನು ವರಸಮಾಧಿಯಲಿ ೩೮

ನೀನಲಾ ತ್ರಿಭುವನವನಿಚ್ಛಾ
ಧೀನ ಮಾಯಾಶಕ್ತಿಗಳ ಸಂ
ಧಾನದಲಿ ರಕ್ಷಿಸುವೆ ಸೃಜಿಸುವೆ ಮರಳಿ ಸೇರಿಸುವೆ
ಹಾನಿಗೆಲೆ ಗೋವಿಂದ ವರನೋ
ಪೀನಯನಪೂಜಿತನೆ ರಕ್ಷಿಸು
ದೀನನನು ನಿಜಚರಣಶರಣನ ಕಿಂಕರನನೆಂದ ೩೯

ಎಂದು ಕಾಂಬೆನೊ ಕೃಷ್ಣ ಮುನಿಜನ
ವೃಂದಚಿಂತಿತಮೂರ್ತಿಯನು ತಾ
ನೆಂದು ನಿಜದಾಸಾನುದಾಸನೆನಿಪ್ಪೆನೀ ತನ್ನ
ನಿಂದ್ಯವಹ ಜನ್ಮಕ್ಕೆ ಕಡೆಯಿ
ನ್ನೆಂದಹುದೊ ತನಗೆನುತ ದೃಗುಜಲ
ಬಿಂದುಗಳಲೋಲಾಡುತಿರ್ದನು ಘಂಟನಡಿಗಡಿಗೆ ೪೦

ಇರಲು ಹರಿ ನಿಜಮೂರ್ತಿಯನು ಸಂ
ವರಿಸಿದನು ಕಾಣುತ್ತ ಕಾಣದೆ
ಭರದಲೆದ್ದನು ಘಂಟನಾಕ್ಷಣದೊಳಗೆ ಕಂದೆಱೆದು
ಕರಣಸಾಕ್ಷಿಕನಾದ ಕೃಷ್ಣನ
ಪರಮಮಂಗಳಮೂರ್ತಿಯನು ಮುಂ
ದಿರಲು ಕಂಡನು ಭುಜಚತುಷ್ಟಯಗಳಲಿ ರಂಜಿಸಲು ೪೧

ಅರರೆ ಭಾಪುರೆ ಬಹಳ ಭಾಗ್ಯದ
ದೊರೆಯಲಾ ತಾನೆನುತ ಚಿಗಿದಂ
ಬರಕೆ ನೆಗಹಿದ ತೋಳ್ಗಳಲಿ ಮುಕುಳಿತಕರಾಬ್ಜದಲಿ
ಹರಹರಾಯ ನಮೋಸ್ತು ವಿಶ್ವಂ
ಭರಹರಾಯ ನಮೋಸ್ತು ಜಯಜಯ
ಪರಮಪುರುಷಯೆನುತ್ತ ವೈಯಿಕ್ಕಿದನು ಹರಿಪದಕೆ ೪೨

ದಂಡದಂತಿರೆ ಧರೆಯಲೊಡಲನು
ದಿಂಡುಗೆಡಹುತ್ತೇಳುತಭ್ರದ
ಮಂಡಲಕೆ ಲಂಘಿಸುತ ಮಿಗೆ ಹಾಡುತ್ತ ಹೊಗಳುತ್ತ
ಮಂಡೆಯನು ಧರೆಗೂಱಿ ಧರೆಯಲಿ
ತಾಂಡವವನಾಡುತ್ತ ಮಾಂಸದ
ಖಂಡವನು ಕಲ್ಪಿಸಿದನುಪಹಾರವನು ಕೃಷ್ಣಂಗೆ ೪೩

ಇರಲವನ ಭಕುತಿಯನು ಕಾಣುತ
ಪರಮಕರುಣಾಸಿಂಧು ತರಳನ
ಪರಮಪರಿತೋಷವನು ಭಕ್ತಪ್ರಿಯರಲಾ ಸುರರು
ಮರುಳೆ ಮೆಚ್ಚಿದೆನೇಳು ಕೊಟ್ಟೆನು
ವರವನೊಂದನು ಬೇಡಿಕೊಳ್ಳೆನೆ
ಕರಪುಟದ ಭಾಳದಲಿ ಬಿನ್ನಹ ಮಾಡಿದನು ಘಂಟ ೪೪

ತುಷ್ಟನಾದ್ಯೆ ದೇವಸನ್ನುತ
ವಿಷ್ಟಪಾಧೀಶ್ವರನೆ ಬೇಡುವೆ
ನಿಷ್ಟವರವನು ಹಂಸನಾಹನದೊಳಗೆ ಶಂಕರನ
ಶಿಷ್ಟರಿಂದಾದಘವ ಮಱೆವುದ
ಭೀಷ್ಟವೆಮ್ಮಾಳ್ದಂಗೆ ತಾನಿದು
ದೃಷ್ಟಿಗೋಚರವಾದಿರಿದಱಲಿ ಧನ್ಯರಾವೆಂದ ೪೫

ಎಂದಡಾತನ ನುಡಿಗೆ ನಗುತಿಂ
ತೆಂದನಾ ಶ್ರೀಹರಿ ಮಹಾ ಋಷಿ
ವೃಂದ ಸಾಕ್ಷಿಗಳಿದಕೆ ಮಱೆದೆನು ಮಾಡಿದವಮತಿಯ
ಇಂದುಧರನಲಿ ತತ್ಸಮಾಶ್ರಿತ
ವೃಂದದಲಿ ತಪ್ಪಿಲ್ಲ ಬೇಡಿ
ನ್ನೊಂದು ವರವನು ಬೇಡೆನಲು ಕೈಮುಗಿವುತಿಂತೆಂದ ೪೬

ಈವುದೆನಗೆಲೆ ದೇವ ವರವನು
ಭಾವದಲಿ ನಿನ್ನಂಘ್ರಿಕಮಲದ
ಭಾವನೆಯನನವರತ ನಿಜಭಕ್ತಾಂಘ್ರಿಪಂಕಜದ
ಸೇವೆಯನು ಭವಭವಸಹಸ್ರದ
ಲೀವುದೆಂದಡಿಗೆಱಗಿರಲು ಕರು
ಣಾವನಧಿ ಕಾರುಣ್ಯದಲಿ ಮೈದಡವಿದನು ಭಟನ ೪೭

ಏಳೆನುತ ಮೈದಡವಿ ಪರಮು ಕೃ
ಪಾಳು ಕಾರುಣ್ಯದಲಿ ನೋಡಲು
ಬೀಳುಕೊಂಡುದು ಘಂಟನೊಡಲ ಪಿಶಾಚಜನ್ಮನದು
ಬಾಲಸೂರ್ಯಸಹಸ್ರತೇಜವ
ತಾಳಿದನು ದಿವ್ಯಾಂಗದಲಿ ಭೂ
ತಾಳಿಯುಘೆಯೆನೆಯೆಸೆದನತಿಶಯರೂಪವಿಭವದಲಿ ೪೮

ಹೀನರಿವರುತ್ತಮರಿವರ್ಗಳು
ಮಾನನೀಯರೆನುತ್ತ ಪರಮಕೃ
ಪಾನಿಧಿಯಲಾ ಕಾಣಲಱಿವನೆ ಕೃಷ್ಣನಖಿಳದಲಿ
ಏನನೆಂಬೆನು ಭೂಪ ಭಕ್ತಾ
ಧೀನವಿಗ್ರಹನೆಂಬುದನು ಸಕ
ಲಾನುಮತವೆನೆ ತೋಱಿಸಿದನಂದಾ ಪಿಶಾಚನಲಿ ೪೯

ಆ ಸಕಲ ಮುನಿನಿಕರ ಜನವಾ
ರೈಸಿ ಕೇಳುತ್ತಿರಲು ವರಪರಿ
ತೋಷವನು ಪುನರಪಿ ವಿಕುಂಠಾಧೀಶನಂಘ್ರಿಯಲಿ
ಹಾಸಿಬಿದ್ದನು ತನುವನವನತ
ಭಾಸುರಾಂಗನು ಬಹಳ ಹರುಷಾ
ವೇಶದಲಿ ಮನ ಮುಳುಗಿ ಬಿನ್ನಹ ಮಾಡುತಿಂತೆಂದ ೫೦

ಧನ್ಯನಾದೆನು ದೇವ ದೇವರು
ಸನ್ನಿಧಿಯ ದರುಶನದಲತಿಶಯ
ಮಾನ್ಯನಾದೆನು ಕರುಣಾನಿಧಿಯಲಾ ನೀನು
ನಿನ್ನ ಪದಕಮಲೈಕಭಕ್ತನು
ಕರ್ಣನೆಂಬುವನನುಜನೆನಗಿವ
ನಿನ್ನ ದೇವರೆ ಬಲ್ಲಿರುಚಿತವನೆಂದನಾ ಘಂಟ ೫೧

ಎನಲು ಚರಣದಲೆಱಗಿದಾ ಕ
ರ್ಣನನು ಕಾರುಣ್ಯದಲಿ ಕರುಣಾ
ವನಧಿ ಮೈದಡವಿದನು ಸಕಲಾಮರರು ಭಾವಿಸಲು
ತನುವದೇ ಪೈಶಾಚಯೋನಿಯ
ಜನನವದೆ ಹರಹರ ನಿಜಾಂಗದ
ಘನತರದ ತೇಜದಲಿ ಮೆಱೆದನು ಕರ್ಣನಾ ಕ್ಷಣಕೆ ೫೨

ದಿವ್ಯಗಂಧ ವಿಭೂಷಣಾಂಬರ
ದಿವ್ಯವನಮಾಲಾವಿಭೂಷಿತ
ದಿವ್ಯಗಾತ್ರರು ರೂಪಜಿತಕಂದರ್ಪರೆಂದೆನಿಸಿ
ದಿವ್ಯಸಂಸ್ತುತಿ ಪಾಠ ಜಯರವ
ದಿವ್ಯ ಸಂಗೀತದಲಿ ಭಜಿಸಿದ
ರವ್ಯಯನನಂದಾ ಪಿಶಾಚೋತ್ತಮರು ಭಕುತಿಯಲಿ ೫೩

ಇಂತು ಪೂರ್ಣಮನೋರಥರು ವೇ
ದಾಂತವಿಶ್ರುತಕೀರ್ತಿಯನು ವಿಪಿ
ನಾಂತರದಿ ನೆಱೆ ಭಜಿಸಿ ಬಹುವಿಧಭಾವಭಕುತಿಯಲಿ
ಅಂತವಿರಹಿತನಾಳ್ಗಳಾರಾ
ತ್ರ್ಯಂತದಲಿ ನಿತ್ಯಾತ್ಮಲಕ್ಷ್ಮೀ
ಕಾಂತ ಕಳುಹಲು ಹೋದರಾ ಕೈಲಾಸಪರ್ವತಕೆ ೫೪

ಅರವತ್ತೊಂದನೆಯ ಸಂಧಿ ಮುಗಿಯಿತು.

# ಅರವತ್ತೆರಡನೆಯ ಸಂಧಿ

ಕಂಡನಸುರಾರಾತಿ ಭುವನೋ
ದ್ದಂಡ ದೈವದ ದೈವ ಶಿವನನು
ಕಂಡನಾ ಖಂಡೇಂದುಮೌಳಿ ಮುಕುಂದನಂಘ್ರಿಗಳ

ಅರಸ ಕೇಳಿಸ್ವಾರ್ಥ ಸಿದ್ಧಿಯ
ನುರು ದಯಾನಿಧಿ ಕರುಣಿಸಿದನಾ
ಮರುಳಗಳಿಗೋಲೈಸಿದರೆ ನಿಜಭಾವಭಕುತಿಯಲಿ
ಕರುಣಿಸನೆ ನಿಜಚರಣಭಕುತಿಯ
ನಿರದೆ ತನಗೆಂದೆಂಬವೋಲಂ
ಬುರುಹಸಖನೈತಂದನುದಯಾಚಲದ ಮಸ್ತಕಕೆ ೧

ಅರಳಿದವು ಕಮಲಾವಳಿಗಳಂ
ಬುರುಹದೃಶನಕ್ಷಿಗಳೊಡನೆ ಮಧು
ಭರಿತವಾದುದು ಕಮಲದಲಿ ಕಮಲಾಕ್ಷನಕ್ಷಿಗಳ
ಪರಮ ಕರುಣಾಮೃತದೊಡನೆ ಮಧು
ಕರನಿಕರವದನುಂಡು ದಣಿದವು
ವರಮುನಿಗಳಕ್ಷಿಗಳೊಡನೆ ಯೆನಲಾಯ್ತು ರವಿಯುದಯ ೨

ಬಳಿಕ ಕರುಣಾಸಿಂಧು ನಿರ್ಮಲ
ಸಲಿಲದಲಿ ನಿತ್ಯೋಕ್ತವಿಧಿಗಳ
ನೊಲಿದು ವಿರಚಿಸಿ ವಿವಿಧನಿಯಮತಪೋವ್ರತಂಗಳಲಿ
ಬಳಲುವರಿಗಿಷ್ಟಾರ್ಥವನು ನೆಱೆ
ಸಲಿಸಿದನು ಋಷಿಗಳಿಗೆ ತತ್ಫಲ
ಗಳನು ಸಾರೋದಾರವೃತ್ತಿಯಲಂದು ಮುರವೈರಿ ೩

ಬಂದು ನಿಜಚರಣಾರವಿಂದ
ದ್ವಂದ್ವದಲಿ ತಲೆವಾಗಿ ವಿನತಾ
ನಂದನನು ಮುಕುಳಿತಕರಾಬ್ಜದಲಾಭಿಮುಖ್ಯದಲಿ
ನಿಂದಿರಲು ಬದರೀನಿವಾಸದ
ಮಂದಿಯನು ಬೀಳ್ಕೊಟ್ಟು ಮುನಿಜನ
ವಂದ್ಯನೇಱಿದನಾ ವಿಹಂಗಾಧಿಪನನೊಲವಿನಲಿ ೪

ಏಱೆ ಹರಿ ಕುಳ್ಳಿರಲು ಖಗಪತಿ
ಹಾಱಿದನು ಹರಗಿರಿಯ ಸಮ್ಮುಖ
ಕೋಱುಗುಡಿಸಿದುದವನಿ ವಿಹಗಾಧಿಪನ ಪದಹತಿಗೆ
ಜಾಱಿದವು ತಾರೆಗಳು ನೆಲೆಯನು
ಮೀಱಿದವು ಗ್ರಹನಿಕರ ರವಿರಥ
ದೋಱಿಯೋದುದು ಪಕ್ಷಪುಟನಿರ್ಘಾತಪವನನಲಿ ೫

ಜಯತು ಜಯ ಜಯ ಜೀಯ ನರ ಹರಿ
ಹಯಹುತಾಶನ ಯಮನಿರುತಿ ವಾ
ರಿಯ ಪವನ ಧನದ ಪಶುಗಳೊಡೆಯರು ಪ್ರಜೇಶ್ವರರು
ಮಯುಗಳಾ ಗಂಧರ್ವ ಯಕ್ಷಾ
ನ್ವಯರು ಕಿಂಪುರುಷೋತ್ತಮರು ಮಹಿ
ಮೆಯನು ಪೊಗಳುತ್ತೋಲಗಿಸುತ್ತೈತಂದರಚ್ಯುತನ ೬

ಬಂದುದೋಲಗಿಸುತ್ತ ಪನ್ನಗ
ವೃಂದ ವಿದ್ಯಾಧರರ ಚಾರಣ
ವೃಂದ ವೀಣಾವೇಣುಪಟಹ ಮೃದಂಗನಾದದಲಿ
ಮುಂದೆ ಸುರನಾರಿಯರ ಕಳರವ
ದಿಂದೆಸೆವ ಸಂಗೀತ ತಾಂಡವ
ನಂದವಡೆದುದು ಪಯಣದಲಿ ಪರಮೇಷ್ಠಿವಂದಿತನ ೭

ಅಜನಿಳಿದನಂದಪ್ರಮೇಯನ
ಭಜನೆಗಾ ನಿಜಕಲ್ಪವಾಸಿ
ವ್ರಜಮುನೀಂದ್ರಸಮಸ್ತವೇದಪುರಾಣಮೂರ್ತಿಗಳ
ಭಜನೆಗಳು ರಂಜಿಸಲು ಕುಮುದಾಂ
ಬುಜಸಖರು ಸಹಿತೊಲವಿನಲಿ ಸುರ
ಸುಜನಸೇವಿತ ಪಾದಪೀಠನ ಚರಣಸನ್ನಿಧಿಗೆ ೮

ಪದವ ಮಿಗೆಯರ್ಚಿಸುವ ವಂದಿಸು
ತಿದಿರುಗೊಂಡೀಕ್ಷಿಸುತ ಸಂಸ್ತುತಿ
ಪದವ ಮಾಡುವ ಹೊಗಳುವಭಿವರ್ಣಿಸುವ ಕೀರ್ತಿಸುವ
ತ್ರಿದಶಗಣದಲಿ ಪರಮಋಷಿ ಪಾ
ರ್ಶ್ವದಲಿ ವರಸುರಸೂತಮಾಗಧ
ಸುದತಿಯರ ಸೇವೋತ್ಸವದಲಂದೆಸೆದನಸುರಾರಿ ೯

ಸತ್ತಿಗೆಯ ಚಾಮರದ ವೀಜನ
ಸುತ್ತುಗುಡಿಗಳ ಗಡಣದಲಿ ನಭ
ಕೆತ್ತುದಕ್ಕುಳಿಸಿದವು ದೆಸೆಗಳು ಸುರಮುನೀಶ್ವರರ
ಮೊತ್ತದಲಿ ವಂದಿಗಳ ಮಾಗಧ
ರೊತ್ತುಗಳ ಕಳಕಳರವಂಗಳ
ನೆತ್ತಿ ಬಿಸುಟವು ಜಯರವಂಗಳು ಸಕಲ ಸುರವರರ ೧೦

ಮೊಳಗಿಸಿದರಡಿಗಡಿಗೆ ಸಿದ್ಧಾ
ವಳಿಗಳುನ್ನತ ಶಂಖಪಟಹಾ
ವಳಿಗಳನು ಸುರದುಂದುಭಿಸ್ವನದೊಡನೆ ವೀಣೆಗಳ
ಕಳರವಂಗಳು ಮುಳುಗಿದುವು ಮು
ಕ್ಕುಳಿಸಿದುವು ದೆಸೆಗಳನು ಘನನಿ
ಸ್ಸಳಮಹಾನಕಗೋಮುಖಾದಿ ಸುವಾದ್ಯನಿರ್ಘೋಷ ೧೧

ದಟ್ಟವಿಸಿದುದು ಮೇಘಘಟೆ ಮೇ
ಲ್ಕಟ್ಟನಂತಿರಲಭ್ರದಲಿ ಹುರಿ
ಗಟ್ಟದೆಳೆಮಿಂಚಿನಲಿ ಮೃದುಮಂದರದ ರವಗಳಲಿ
ವಿಷ್ಟರಶ್ರವನಡಿಗೆ ಸುಮನೋ
ವೃಷ್ಟಿಯನು ಕಱೆವುತ್ತ ಸೇವೆಗೆ
ನೆಟ್ಟನಿನ್ನಾರಕಟ ಬಾರದವರ್ಗಳಚ್ಯುತನ ೧೨

ಬೀಸಿದುದು ತಂಗಾಳಿ ದೆಸೆಗಳು
ವಾಸನಿಸಿ ಸೌರಭ್ಯಮಾಂದ್ಯ ಮ
ಹಾಸಮಗ್ರ ಗುಣಂಗಳಲಿ ಸಂಪನ್ನವಿಭವದಲಿ
ಆ ಸಕಲ ಸುರವರ ಮುನೀಂದ್ರರ
ಬೀಸಿಗೆಯ ಬಹುಜನನಿಕರ ವಾ
ರಾಸಿಯಲಿ ಹರಗಿರಿಗೆ ಬಿಜಯಂಗೈದನಸುರಾರಿ ೧೩

ಬಂದು ಮಾನಸ ವರಸರೋವರ
ದಿಂದ್ರದಿಗುಭಾಗದಲಿ ಸುರತರು
ವೃಂದಶೋಭಿತ ಶೋಭನಾರಣ್ಯದಲಿ ಹರಿಯಿರಲು
ಇಂದುಧರನದನಱಿದು ಮನದಲಿ
ಬಂದು ಘಂಟಾಕರ್ಣರಿಂದವೆ
ನಂದಿಯನು ಬಿಗಿ ಬೇಗ ಮಾಡೆಂದೆನುತ ನಿಂದಿರ್ದ ೧೪

ಜಡೆಗಳನು ಕಟ್ಟಿದನು ಭಾಳದ
ಲಡಿಯಿಡುವ ಶಶಿಕಳೆಯ ಕೌಮುದಿ
ಯೊಡರಿಸಲು ಶಾಂತಿಯನು ಪಾವಕನಯನದುಗ್ರತೆಗೆ
ಹೆಡೆವಣಿಯ ನಾಗೇಂದ್ರನಿಕರದ
ತೊಡಿಗೆಗಳು ರಂಜಿಸಲು ಕೊಂಡನು
ಖಡುಗ ಸೂಲ ಕಪಾಲ ಖಟ್ವಾಂಗಂಗಳನು ನಲಿದು ೧೫

ತೋಱಿ ಕರತಳ ಸಂಜ್ಞೆಯನು ಪರಿ
ವಾರಪಾರ್ಶ್ವದಮುಖ್ಯರಿಗೆ ನಗು
ತೇಱಿದನು ನಂದಿಯನು ನಡೆತರೆ ದೇವಿಯರು ಸಹಿತ
ವೀರಗುಹಗಣಪತಿಗಳಿದ್ದೆಸೆ
ಗೋರಣಿಸಲೆಡಬಲದಲಹಿಕುಲ
ವೈರಿ ಮೂಷಕವಾಹನಂಗಳ ಬಹಳ ರಭಸದಲಿ ೧೬

ನೂಕಿ ನಡೆದುದು ಕೂಡೆ ವಿಕೃತಾ
ನೇಕವದನ ಕರಾಳದಂಷ್ಟ್ರಾ
ನೀಕ ದುರ್ಧರ ಭೂತಗಣ ವೇತಾಳಕೋಟಿಗಳು
ಓಕರಿಸಿದವೊ ದೆಸೆಗಳೆಂಟು ಮ
ಹಾಕದಂಬವನೆನಲು ಕವಿದು ಪಿ
ನಾಕಿಯೆಡಬಲವಂಕದಲಿ ಸಂದಣಿಸಿದುದು ಕಟಕ ೧೭

ಮೇಲೆ ಮೊಳಗುವ ಯಕ್ಷ ಕಿನ್ನರ
ಜಾಲದಲಿ ವನವದಿರಲಾ ಧನ
ಪಾಲನೆಡಬಲವಂಕದಲಿ ನಿಧಿನಿಕರವೋಲಗಿಸೆ
ಆಳುದೋಱಿದರೆಂಟು ದೆಸೆಗಳ
ಮೂಲೆ ಬಿರಿಯಲು ಬ್ರಹ್ಮ ರಾಕ್ಷಸ
ಜಾಲ ಕವಿತರುತಿರ್ದುದಾ ಜಗಧೀಶ್ವರನ ಹೊರೆಗೆ ೧೮

ನಂದಿಯನು ಹರನೇಱೆ ಮೊಳಗುವ
ದುಂದುಭಿಯ ಕಹಳೆಗಳ ಪಾರ್ಶ್ವ
ದ್ವಂದ್ವಸಂಸ್ತುತಿಪಾಠ ಜಯ ಜಯ ಜಯರವಂಗಳಲಿ
ಬಂದನಭಿಮುಖವಾಗಿ ಸುರಮುನಿ
ವೃಂದಸೇವಿತಪಾದಪೀಠ ಮು
ಕುಂದನಿದ್ದಾ ಸ್ಥಳಕೆ ಬಹಳ ಮನೋನುರಾಗದಲಿ ೧೯

ಬರುತ ಕಂಡನು ದೂರದಲಿ ಮುರ
ಹರನ ಮಂಗಳಮೂರ್ತಿಯನು ಸುರ
ವರ ಮಹಾಮಣಿಮುಕುಟಕಿರಣವಿರಾಜಿತಾಂಘ್ರಿಯನು
ಗರುಡಭುಜಮೂಲಾಂತರಿತ ಮೇ
ದುರನಿತಂಬ ನಿವೀತಿಪೀತಾಂ
ಬರವಿಲಂಬಿತ ರತ್ನಕಾಂಚೀಗುಣಮಣಿದ್ಯುತಿಯ ೨೦

ಎಸೆವ ನಾಭಿಯ ಕಂಬುಕಂಠದ
ನೊಸಲ ತಿಲಕದ ಚಾರುಕುಂತಳ
ನಿಸರರಂಜಿತಮುಕುಟಮಣಿಗಳ ಮಕರಕುಂಡಲದ
ಮಿಸುಪ ಕದಪಿನ ದಂತಪಂಕ್ತಿಯ
ನಸುನಗೆಯ ನಾಸಾಪುಟದ ಮೆಱೆ
ವೆಸಳುಗಂಗಳ ಮಂಗಳಾನನ ಕಮಲವನು ಕಂಡ ೨೧

ಕೊರಳಮಣಿ ಕೌಸ್ತುಭದ ಚಂದನ
ಪರಿಮಳದ ಪೇರುರದ ರಂಜಿತ
ತರುಣತುಳಸೀಮಾಲೆಗಳ ವರವೈಜಯಂತಿಗಳ
ಸಿರಿಯ ಸಿರಿವತ್ಸದ ಮಹಾಮಣಿ
ಕಿರಣವಿಲಸಚ್ಛನ್ನ ವೀರ
ಸ್ಫುರಿತಜಠರದ ಜಗದುದರನಾಕಾರವನು ಕಂಡ ೨೨

ಕಂಕಣದ ಕರಯುಗದ ಮಣಿಮು
ದ್ರಾಂಕಿತಾಂಗುಳಿದಳದ ರತ್ನಾ
ಲಂಕೃತೋರುಭುಜದ್ವಯದ ಪೀನಾಂಸಮಂಡಲದ
ಶಂಖಚಕ್ರಗದಾವಿರಾಜಿತ
ಪಂಕಜಂಗಳಲೆಸೆವ ಹರಿಯನು
ಶಂಕರನು ಕಾಣುತ್ತ ಜಯ ಜಯಯೆನುತ ಕೈಮುಗಿದ ೨೩

ಸುರರ ಜಯರವವೊಂದೆಸೆಗೆ ಮುನಿ
ವರರ ಸಂಸ್ತುತಿಯೊಂದೆಸೆಗೆ ಭಾ
ಸುರ ಸುರಸ್ತ್ರೀನೃತ್ಯಗೀತವಿನೋದವೊಂದೆಸೆಗೆ
ನೆರೆದು ಭಜಿಸುವ ಸಿದ್ಧವಿದ್ಯಾ
ಧರಮಹೋರಗನಿಕರದೋಲಗ
ದುರವಣೆಯುದೊಂದೆಸೆಗೆಸೆಯಲಸುರಾಂತಕನ ಕಂಡ ೨೪

ಭೂರಿ ಭುವನಾನಂದ ಪಾರಾ
ವಾರವೋ ಐಶ್ವರ್ಯಸಿದ್ಧಿಯ
ಸಾರಸಂಗ್ರಹವೋ ಸಮಸ್ತಾಶ್ಚರ್ಯಸಂಪುಟವೊ
ಪಾರಮೇಷ್ಠ್ಯವ ಪರಮ ವಿಭವದ
ಮೇರೆಯೋ ಮಝು ಭಾಪೆನುತ ಮುದ
ನಾರಿ ಮುಳುಗಿದನಧಿಕತರಹರುಷಾಮೃತಾಬ್ಧಿಯಲಿ ೨೫

ಅಹಹ ಕಾಣುತ ಕಾಣುತವೆ ಘನ
ಮಹಿಮನಿಳಿದನು ನಂದಿಯನು ಕರ
ನಿಹಿತಪುಷ್ಪಾಂಜಲಿಯಲಾ ಗಿರಿರಾಜಸುತೆಸಹಿತ
ಗುಹನಿಳಿದನಹಿರಿಪುವನಾಗಳೆ
ಮಹಿಗೆ ಕಾಲೂಱಿದನು ಗಜಮುಖ
ಸಹಿತ ಸಕಲಧನೇಶಮುಖ್ಯರು ಪಾರ್ಷದೋತ್ತಮರು ೨೬

ನಂದಿಯನು ಹರನಿಳಿದುದನು ಗೋ
ವಿಂದನೀಕ್ಷಿಸುತಾಕ್ಷಣವೆ ಖಗ
ವಂದ್ಯನಂಸಾಸನವನಿಳಿದನು ಸಕಲಸುರವರರ
ವೃಂದವಿಳಿದುದು ವಾಹನವನಾ
ನಂದಮೂರ್ತಿಗಳಂದು ಕಾಲ್ನಡೆ
ಯಿಂದ ನಡೆತರುತಿರ್ದರಧಿಕಮನೋನುರಾಗದಲಿ ೨೭

ಬೆರಸಿದುದು ಪರಿವಾರವೆರಡು
ಬ್ಬರದ ಬಹುವಿಧವಾದ್ಯದಲಿ ಸಾ
ಗರವೆರಡು ತಮ್ಮೊಳಗೆ ಬೆರಸುವವೋಲು ಮೋಹರಿಸಿ
ಹರಿಹರರು ನಡೆತಂದರೋರೊ
ಬ್ಬರನು ನೋಡುತ ಮುಗಿದ ಕರಪುಟ
ಸರಸಿಜದ ಮುಕುಳಂಗಳಲಿ ಮುನಿಜನಸಭಾಜಿತರು ೨೮

ಅಂದು ಹರನಸುರಾರಿಯಂಘ್ರಿ
ದ್ವಂದ್ವದಲಿ ಮೈಯಿಕ್ಕುತರ್ಘ್ಯವಿ
ದೆಂದು ಪುಷ್ಪಾಂಜಲಿಯನಿತ್ತನು ಪಾದಯುಗಳದಲಿ
ತಂದೆ ಸಾಕೆನೆ ನೀನದಾರಿಂ
ಗೆಂದು ಕೈಯನು ಹಿಡಿದು ತೆಗೆದು ಮು
ಕುಂದನಪ್ಪಿದನೆಱಗಿ ನಾಲ್ಕು ಭುಜಂಗಳಲಿ ಹರನ ೨೯

ಸ್ತುತಿಸಿದನು ಕೈಮುಗಿದು ಹರನ
ಚ್ಯುತನನಖಿಳಾಮ್ನಾಯ ವಾಗ್ವಿ
ಶ್ರುತನನಖಿಳಮುನೀಂದ್ರಹೃದಯಸರೋಜಸಂಸ್ಥಿತನ
ಕ್ರತುಮುಖನನವ್ಯಾಕೃತಾವ
ಸ್ಥಿತನನವಿನಾಶಿಯನಗಮ್ಯನ
ನತಿಗಮಿತನಮಾಯನನು ವಿಶ್ರುತನಮಾಯನನು ನಲಿದು ೩೦

ಜಯ ನಮೋ ದೇವೇಶ ದೇವ
ತ್ರಯಸಮಾಶ್ರಿತರೂಪ ವೇದ
ತ್ರಯವಿಶೇಷಿತತತ್ವ ವಿಶ್ವಾಧಾರ ಜಿತಪಾರ
ಜಯ ಸುರೇಂದ್ರಾನಲ ಯಮಾತ್ಮಕ
ಜಯ ನಿರುತ ವರುಣಾನಿಲಾತ್ಮಕ
ಜಯ ಕುಬೇರಗಣೇಶಗುಹಮೂರ್ತಿಯೆ ನಮೋ ಯೆಂದ ೩೧

ಬ್ರಹ್ಮರೂಪನೆ ನಾಭಿಕಮಲ
ಬ್ರಹ್ಮಯೋನಿಯೆ ವದನವಿಹಿತ
ಬ್ರಹ್ಮ ಬಾಹುಕ್ಷತ್ರವೈಶ್ಯೋರ್ವಂಘ್ರಿಶೂದ್ರಜನೆ
ಬ್ರಹ್ಮಚಾರಿಗೃಹಸ್ಥವನಗ
ಬ್ರಹ್ಮತದ್ವಿಪರೀತ ಹೇತುವೆ
ಬ್ರಹ್ಮವಾಗ್ವೃತ್ತಿಯೆ ಜಗತ್ಕರ್ತುವೆ ನಮೋ ಯೆಂದ ೩೨

ಜಯ ನಮೋಸ್ತು ಸಹಸ್ರಮೂರ್ತಿಯೆ
ಜಯ ನಮೋಸ್ತು ಸಹಸ್ರಕೀರ್ತಿಯೆ
ಜಯ ನಮೋಸ್ತು ಸಹಸ್ರಬಾಹು ಸಹಸ್ರಪಾದಾಕ್ಷ
ಜಯ ನಮೋಸ್ತು ಸಹಸ್ರಜಿಹ್ವನೆ
ಜಯ ನಮೋಸ್ತು ಸಹಸ್ರನಾಮನೆ
ಜಯ ನಮೋಸ್ತು ಸಹಸ್ರಗುಣಧಾರಿಯೆ ನಮೋ ಯೆಂದ ೩೩

ಆನು ಮೊದಲಜಶಕ್ರರವಿಪವ
ಮಾನಸಖಶಶಿತಾರಕಾಗ್ರಹ
ರೀ ನಿಖಿಳಸುರವರರು ನಿನ್ನಂಶಾಂಶಸಂಭವರು
ನೀನಿದೇನೆಲೆ ದೇವ ಬಂದೆ ನಿ
ಜಾನುಚರ ನಾನೆಂದು ನೋಡದೆ
ದಾನವಾಂತಕ ತನ್ನ ದರುಶನಕೇನು ಹೇಳೆಂದ ೩೪

ಕೃತ್ಯವಾವುದು ತನಗೆ ದೇವರು
ಚಿತ್ತವಿಸುವುದು ಬರವಿದೇತಕೆ
ಭೃತ್ಯ ನಾನೆನ್ನೀ ನಿವಾಸವೆನಿಪ್ಪ ಗಿರಿವರಕೆ
ಅತ್ಯಧಿಕ ವಿಸ್ಮಯದ ಬೀಜವ
ಬಿತ್ತಿದೆಯಲಾ ಯೆನ್ನ ಸದಮಳ
ಚಿತ್ತದಲಿ ನಿತ್ಯಾತ್ಮಸುಖವಿಗ್ರಹನೆ ಹೇಳೆಂದ ೩೫

ಅರವತ್ತೆರಡನೆಯ ಸಂಧಿ ಮುಗಿಯಿತು.

# ಅರವತ್ತಮೂರನೆಯ ಸಂಧಿ

ಒಂದೆ ನಿಜವೆರಡೆನಿಸಿ ಹರಿಹರ
ರೆಂದುಪಾಧಿವಿಭೇದದಲಿ ತೋ
ರ್ಕೆಂದು ಸುರಮುನಿವರರಿಗಸುರಾರಾತಿ ನೇಮಿಸಿದ

ಅರಸ ಕೇಳದ್ಭುತವನೀ ಪರಿ
ಹರನ ಸಂಸ್ತುತಿಗೇಳುತವೆ ಮುರ
ಹರನುಮಾಪತಿಯಂಘ್ರಿಯಲಿ ತಲೆವಾಗಿ ಕೈಮುಗಿದು
ನೆರದ ಸುರಮುನಿವರರು ಕೇಳಲು
ಪರಕೆ ಪರತರವೆನಿಪ ಶೈವದ
ಪರಮತತ್ವರಹಸ್ಯವನು ವರ್ಣಿಸಿದನೊಲವಿನಲಿ ೧

ಜಯ ಸಮುಗ್ರಾಶೇಷಭುವನ
ಕ್ಷಯವಿಹಾರವರೇಣ್ಯ ವರದಾ
ಶ್ರಯ ವಿಶುದ್ಧಜ್ಞಾನವಿಗ್ರಹ ವಿಶ್ವಮೂರುತಿಯೆ
ಜಯ ಸದಾನಂದಸ್ವರೂಪನೆ
ಜಯ ಸದಾ ಸತ್ವಸ್ವರೂಪನೆ
ಜಯ ಸದಾಸತ್ಯಾಶ್ರಯನೆ ಸತ್ಯಾತ್ಮಕನೆ ಜಯತು ೨

ಘೋರರೂಪಾಘೋರ ಘೋರಾ
ಘೋರಸಾಕ್ಷಿಯೆ ಘೋರನಯನನೆ
ಘೋರಸತ್ವನಿಸೇವಿತನೆ ಘೋರೇಶ್ವರಾತ್ಮಕನೆ
ಘೋರತರ ಸಂಸಾರಭಯಸಂ
ಹಾರಕನೆ ಜಿತಘೋರರೂಪನೆ
ಘೋರಭಯಹೇತುವೆ ನಮೋ ಘೋರಾತ್ಮಕನೆ ಎಂದ ೩

ಜ್ಞಾನರೂಪನೆ ವಿದಿತವಿಮಲ
ಜ್ಞಾನಗಮ್ಯನೆ ಪಾಲಿತಾತ್ಮ
ಜ್ಞಾನನಿಷ್ಠನೆ ನಿರುಪಮಿತವಿಜ್ಞಾನಸಾಧಕನೆ
ಜ್ಞಾನಮಾರ್ಗನಿವೇಶಕನೆ ತತ್
ಜ್ಞಾನಸಾಧನವಿಗ್ರಹನೆ ಆ
ಜ್ಞಾನಹರಗುಣನಾಮಧೇಯನೆ ಜಯನಮೋ ಎಂದ ೪

ಶಕ್ತಿರೂಪನೆ ವಿಜಿತಮಾಯಾ
ಶಕ್ತಿಗುಣಸಂಸ್ಥಿತನೆ ಪರಿಣತ
ಶಕ್ತಿಸೇವ್ಯನೆ ಶಕ್ತಿಭಾವ್ಯನೆ ಶಕ್ತಿವಿಗ್ರಹನೆ
ಶಕ್ತಿನಿರ್ವರ್ತಿತ ಜಗತ್ರಯ
ಶಕ್ತಿನಿರ್ಭಾಸಿತ ಜಗತ್ರಯ
ಶಕ್ತ್ಯತೀತ ಸದಾಶಿವಾತ್ಮಕ ಜಯ ನಮೋ ಎಂದ ೫

ನಾದರೂಪನೆ ನಾದಗಮ್ಯನೆ
ನಾದಸಂಸ್ಥಿತ ದೃಷ್ಟಿಹೇತುವೆ
ನಾದಬಿಂದು ಕಳಾವಿಹೀನನೆ ನಾದಗೋಚರನೆ
ನಾದಮಯವಿಗ್ರಹನೆ ನಾದಾಂ
ತಾದಿಲಕ್ಷಿತ ಚಿತ್ಸ್ವರೂಪನೆ
ನಾದಸಂಸ್ಥಿತ ಭೇದತುಷ್ಟನೆ ಜಯ ನಮೋ ಎಂದ ೬

ಅನು ನೀನಜ ನೀನು ಸುರಪತಿ
ನೀನು ಪಾವಕ ಯಮ ಕುಬೇರರು
ನೀನು ನಿಋುಋುತಿ ವರುಣ ವಾಯುಗಳೆಂಬವರು ನೀನು
ಭಾನು ಶಶಿ ತಾರಾ ಗ್ರಹಾವಳಿ
ನೀನು ಗುಹ ಗಣಪತಿಗಳೆಂಬರು
ನೀನು ನೀನೇ ನೋಳ್ಪಡೀ ಸಚರಾಚರವಿದೆಂದ ೭

ನೀನು ತಾನೆಂದೇನು ಭೇದವಿ
ಹೀನರಲ್ಲೈ ನಾವು ನಮ್ಮೊಳ
ಗಾನು ನೀನೆಂಬೆರಡಿದೌಪಾಧಿಕದ ಭೇದವಲ
ನೀನಲಾ ಶ್ರೀಯೆನಿಸಿ ನಿಜವ
ಕ್ಷೋಣಿವಾಸಿಯೆನಿಪ್ಪೆ ನಿಜಗಾ
ತ್ರಾನುಮತ ಗೌರೀಸ್ವರೂಪನು ತಾನಲಾ ಯೆಂದ ೮

ಒಂದೆ ನಿಜವೆಮಗಿಬ್ಬರಿಗೆ ಮುನಿ
ವಂದ್ಯರಿರ ನೀವಱಿವುದಿದು ತಾ
ಕಂದಲೊಳಗಣ ಹಾಲು ಜೂಳಿಗೆಯೆರಡು ಬಹವೇನು
ಇಂದುಧರನೆನ್ನೊಳಗೆ ಭೇದವ
ನಿಂದು ಮೊದಲೀಕ್ಷಿಸಿದಿರಾದರೆ
ಕೊಂದುಕೊಂಡಿರಿ ನಿಮ್ಮನೇ ನೀವೆಂದನಸುರಾರಿ ೯

ಮುಕುತಿಗಿಬ್ಬರೆ ವೊಡೆಯರಾವಿದ
ನಕಟ ತಿಳಿಯದೆ ಬಱದೆ ಮಾಯಾ
ವಿಕಳಮತಿಗಳು ಶೈವ ವೈಷ್ಣವವೆಂಬ ಭೇದವನು
ಸುಕೃತಹೀನರು ಮಾಡಿ ಘನ ನಾ
ರಕದೊಳಾಳುವರಜ್ಞರವರೆಂ
ಬುಕುತಿಯನು ಕೇಳದ ದುರಾತ್ಮರು ಶಿವ ಶಿವಾಯೆಂದ ೧೦

ನಿಂದಿಸಿದಡೆನ್ನುವನು ಶಿವನನು
ನಿಂದಿಸಿದರಹರೀತನನು ನೆಱೆ
ನಿಂದಿಸಿದರೆನ್ನುವನು ನಿಂದಿಸಿದವರು ಭಾವಿಸಲು
ವಂದಿಸಿದಡೆನ್ನುವನು ಶಿವನನು
ವಂದಿಸಿದರಹರೀತನನು ನೆಱೆ
ವಂದಿಸಿದಡಭಿವಂದನೆಯ ಮಾಡಿದವರೆನಗೆಂದ ೧೧

ಎನ್ನ ಭಕುತಿಗೆ ಶಿವಭಕುತಿ ಸಂ
ಪನ್ನಸಾಧನವೆನಿಸುವುದು ಶಿವ
ನುನ್ನತೋನ್ನತ ಭಕುತಿಗೆನ್ನಯ ಭಕುತಿಯೇ ಬೀಜ
ಎನ್ನನೊಲುವಡೆ ಶಿವನ ಭಜಿಸುವು
ದೆನ್ನನೇ ಭಜಿಸುವುದು ಶಿವನ ಕೃ
ಪಾರ್ಣವದಲೋಲಾಡುವರೆ ನೀವೆಂದನಸುರಾರಿ ೧೨

ಎನಲದನು ಕೇಳುತ್ತ ಸುರಮುನಿ
ಜನ ಮಹಾಹರುಷದಲಿ ಜೀಯೆಂ
ದೆನುತ ಕೈಗಳ ಮುಗಿದು ಮುದದಲಿ ಕೃಷ್ಣಶಂಕರರ
ವಿನುತಗುಣ ಚಾರಿತ್ರವನು ವ
ರ್ಣನೆಗಳನು ಮಾಡಿದರು ಸಂಪುಟ
ವೆನಲು ಸಕಲ ಶ್ರುತಿಮನೋಹರ ದಿವ್ಯಸೂಕ್ತಿಯಲಿ ೧೩

ಜಯ ನಮೋ ವಿಶ್ವಾತ್ಮ ಶಿವಮಯ
ಜಯ ನಮೋ ವಿಶ್ವೇಶ ಹರಿಮಯ
ಜಯ ನಮೋ ಮುರವೈರಿ ಜಯ ಜಯತು ಪುರವೈರಿ
ಜಯ ಗದಾ ಚಕ್ರಾಬ್ಜಧರ ಜಯ
ಜಯ ತ್ರಿಶೂಲ ಕಪಾಲಧರ ಜಯ
ಜಯ ರಮೇಶ ಮಹೇಶ ಗೌರೀವರ ನಮೋ ಜಯತು ೧೪

ಜಯ ಸರೋರುಹಲೋಚನನೆ ಜಯ
ಜಯ ವಿರೂಪವಿಲೋಚನನೆ ಜಯ
ಜಯ ಮಹಾಮಣಿಕಂಧರನೆ ಜಯ ನೀಲಕಂಧರನೆ
ಜಯ ನಮೋಸ್ತು ರಥಾಂಗಧಾರಿಯೆ
ಜಯ ನಮೋ ಖಟ್ವಾಂಗಧಾರಿಯೆ
ಜಯ ವಿಸರುಹಾಂಬಕನೆ ಜಯ ಜಯತು ತ್ರಿಯಂಬಕನೆ ೧೫

ಜಯ ನಮೋ ವೈಕುಂಠ ಜಯ ಜಯ
ಜಯ ನಮೋ ಶ್ರೀಕಂಠ ಗೌರೀ
ಪ್ರಿಯ ಮುಕುಂದ ಮಹೇಶ ನಾರಾಯಣ ಜಗನ್ನಾಥ
ಜಯ ಕನಕಮಣಿಗಣವಿಭೂಷಣ
ಜಯ ಮಹೋರಗಗಣ ವಿಭೂಷಣ
ಜಯತು ಸಿರಿವತ್ಸಾಂಕ ಶೇಖರಿತಾರ್ಧ ಹರಿಣಾಂಕ ೧೬

ಇಂತು ಸುರಮುನಿವರ ಮಹೋರಗ
ಸಂತತಿಗಳಾ ಸಿದ್ಧ ಚಾರಣ
ರಂತರಿಕ್ಷನಿವಾಸಿಗಳು ಶಂಕರ ಸಮಾಶ್ರಿತರು
ತಂತಮಗೆ ಹೊಗಳುತ್ತಲಿರಲಂ
ದಂತರಾತ್ಮಕನೊಲಿದು ಲಕ್ಷ್ಮೀ
ಕಾಂತನೊಡನಿಂತೆಂದನಧಿಕ ಮನೋನುರಾಗದಲಿ ೧೭

ದೇವ ನೀನಿಂದೀ ಮಹರ್ಷಿ ಸು
ರಾವಳಿಗಳೀ ಸಕಲ ಪರಿಜನ
ವೀ ವಿಳಾಸದಲೈತರಲು ತಾನೀ ವನಾಂತರಕೆ
ಆವುದಿದು ಕರ್ತವ್ಯವೀ ವಿಬು
ಧಾವಳಿಗೊ ಮುನಿಗಳಿಗೊ ಪರಿವಾ
ರಾವಳಿಗೊ ತನಗೇನು ಬೆಸನಾಜ್ಞಾಪಿಸುವುದೆಂದ ೧೮

ಬಂದೆ ನಾನೀ ನಿನ್ನ ಚರಣ
ದ್ವಂದ್ವ ದರುಶನದರ್ಥಿಯಲಿ ನೀ
ನಿಂದಿದಕೆ ವಿಸ್ಮಯವ ಮಾಡಲದೇಕೆ ಪುತ್ರನನು
ತಂದೆ ಪಡೆವರ್ಥಿಯಲಿ ತಪದಲಿ
ನಿಂದೆನೇತಕೆ ಮುಚ್ಚು ಮಱೆ ಕೊಡು
ಕಂದನನು ಕಾಮನನು ತನಗೆಂದನು ಮುರಧ್ವಂಸಿ ೧೯

ಇತ್ತೆನಂದೇ ಕೃಷ್ಣ ನಿನಗಾ
ಪುತ್ರನನು ನೀ ಬೇಡಿಕೊಳಲೇ
ಕುತ್ತಮನೆ ತಡವೇಕೆ ತನ್ನನು ನಾಚಿಸಲದೇಕೆ
ಮತ್ತೆ ರುಕ್ಮಿಣಿಯುದರಭವನಹ
ನತ್ಯಧಿಕ ಸಾಹಸಿಕನುನ್ನತ
ಕೀರ್ತಿಯಲಿ ಪ್ರದ್ಯುಮ್ನ ಸಂಜ್ಞಿತನೆಂದನಖಿಳೇಶ ೨೦

ಆತನೀ ನಿನ್ನಂತೆ ವೈರಿ
ವ್ರಾತ ದುಸ್ಸಹ ವೀರ್ಯ ಶೌರ್ಯೋ
ಪೇತನಹನೀ ತ್ರಿಜಗದಲಿ ಗುಣರೂಪವಿಭವದಲಿ
ಖ್ಯಾತವಹುದಾ ರುಕ್ಮಿಣೀ ಸಂ
ಜಾತನಲಿ ಯದುವಂಶಲತೆ ಸಕ
ಲಾತುಮನೆ ಕಲ್ಪಾಂತ ಪರಿಯಂತೆಂದನಖಿಳೇಶ ೨೧

ಒಂದು ನೆನವನು ಮಾಡಿ ತನ್ನಯ
ಮಂದಿರಕೆ ಮನವೊಲಿದು ದೇವ ಮು
ಕುಂದ ಬಿಜಯಂಗೈದೆ ಭಕ್ತಾನುಗ್ರಹಾರ್ಥದಲಿ
ಕಂದಣಿಯೆ ನಿನ್ನಂಘ್ರಿಕಮಲ
ದ್ವಂದ್ವವನು ತಾ ಕಾಣಪಡೆದೆನು
ಕುಂದದೀ ಸಂಸಾರ ಸಾರ್ಥಕವಾಯ್ತು ತನಗೆಂದ ೨೨

ಧನ್ಯನಾದೆನು ನಿನ್ನ ಚರಣದ
ಸನ್ನಿಧಿಯ ಸಂದರುಶನದಲತಿ
ಮಾನ್ಯರಾದರು ಗುಹ ಗಣಾಧೀಶ್ವರರು ದೇವಿಯರು
ಧನ್ಯರೀ ಸುರವರರು ಋಷಿಗಳು
ಧನ್ಯರೀ ವನ ಖಗ ಮೃಗಂಗಳು
ಧನ್ಯರೀ ಗಿರಿ ತರು ನದೀ ಗುಲ್ಮಾಧಿಕವಿದೆಂದ ೧೩

ಒಣಮರಂಗಳು ತಳಿರುತಿವೆ ಹೂ
ದೊಣೆ ಕೊಣಂಗಳು ಹೆಚ್ಚುತಿವೆ ಮೃಗ
ಗಣಗಳಿವೆ ನಿರ್ವೈರದಲಿ ತಮ್ಮೊಳಗೆ ಭೂಮಿಯಿದು
ತೃಣಜಲಾದಿ ಸಮೃದ್ಧವಾಗಿದೆ
ಯೆಣಿಸಲೇಕಿನ್ನಿದನು ನಾರಾ
ಯಣನೆ ನಿನ್ನಂಘ್ರಿಯ ಸಕಾಶದಲೆಂದನಖಿಳೇಶ ೧೪

ಹೇಳದಿರು ಮಱೆದಾಗಿ ತಪದಲಿ
ಶೂಲಪಾಣಿಯ ಭಜಿಸಿ ಪಡೆದೆನು
ಬಾಲಕನನೆಂಬೊಂದು ಬಳಕೆಯ ನಾಚಿಕೆಯ ಮಾತ
ಶೂಲಪಾಣಿಗಳೇಸು ಮೇಣು ಮ
ರಾಳವಾಹನರೇಸು ನಿನ್ನಯ
ಲೀಲೆಯಲಿ ಸಂಭವಿಸರಳಿಯರಸಂಖ್ಯತಮರೆಂದ ೧೫

ಬೀಳುಕೊಡು ತನಗಿನ್ನು ನೀನಿ
ನ್ನಾಲಯಕೆ ನಡೆ ಭೂಮಿಭಾರವ
ಬೇಳು ಭುಜಬಲವಹ್ನಿಯಲಿ ಹೋಗೆನುತ ಬೀಳ್ಕೊಡಲು
ನೀಲಲೋಹಿತನೆಂದ ನುಡಿಗಳ
ನಾಲಿಸುತ ಕೈವಿಡಿದು ಲಕ್ಷ್ಮೀ
ಲೋಲನುಚಿತೋಕ್ತಿಗಳಲೀಶನನಂದು ಬೀಳ್ಕೊಂಡ ೧೬

ಆ ಸಕಲ ಪರಿವಾರ ನಿಕರ ಗ
ಣೇಶ ಗುಹ ಗೌರೀ ಸಮಸ್ತ ಧ
ನೇಶ ಕಿನ್ನರ ಯಕ್ಷ ರಾಕ್ಷಸ ಭೂತಗಣ ಸಹಿತ
ಈಶನಂತರ್ಧಾನವೆಂಬಾ
ವಾಸವನು ಗಮಿಸಿದನು ನೆರೆದ ಮ
ಹಾಸುರಾಸುರ ಮುನಿನಿಕರವೀಕ್ಷಿಸಲು ನಿಮಿಷದಲಿ ೧೭

ಮರಳಿದನು ಬಳಿಕಿತ್ತಲಖಿಳಾ
ಮರರ ಜಯರವ ವಾದ್ಯಗೀತೋ
ತ್ಕರದ ಘನವಿಭವದಲಿ ಶಂಖಮೃದಂಗ ರವಗಳಲಿ
ಗರುಡವಾಹನನಾಗಿ ಮುನಿವರ
ವಿರಚಿತ ಸ್ತುತಿಪಾಠವೆಸೆಯಲು
ಪರಮ ಮಂಗಳಮೂರ್ತಿ ಬಂದನು ಬದರಿಕಾಶ್ರಮಕೆ ೧೮

ಸೇವೆಯನು ಮಾಡುತ್ತ ಬಹು ಭೂ
ತಾವಳೀನಾಥರನು ಪರಮ ಕೃ
ಪಾವಲೋಕನದಿಂದ ಕಳುಹಿದನಿಷ್ಟವರಗಳನು
ಈವುತವೆ ಮುವ್ಮಾರ್ಗದಲಿ ರಾ
ಜೀವಭವನನು ಬೀಳುಕೊಟ್ಟು ಸು
ರಾವಳೀಸೇವಿತನು ಬಂದನು ಬದರಿಕಾಶ್ರಮಕೆ ೧೯

ಕಳುಹಿ ಮರಳಿದನನ್ನೆಗಸ್ತಾ
ಚಲಕೆ ರವಿ ರಾಜೀವನಾಭನ
ಲಲಿತ ಚರಣಪರಾಗರಾಗಾನ್ವಿತನು ತಾನೆನಿಸಿ
ಹಲವು ಕಾಲಾರ್ಘ್ಯಾದಿ ಸತ್ಕೃತಿ
ಗಳನು ಮಾಡಿದ ಮುನಿಗಳೆಡೆಯಲಿ
ನಿಲಿಸುವೆನು ಕೃಷ್ಣನನು ತಾನೆಂಬಂತೆ ಮನವೊಲಿದು ೨೦

ಮರಳಿ ಬಂದನು ಮೂಱನೆಯ ದಿನ
ಕಿರದೆ ಮುನಿವರರಾಶ್ರಮಕೆ ಮುರ
ಹರನು ಮನ್ನಿಸುತಖಿಳದಿಕ್ಪಾಲರನು ಬೀಳ್ಕೊಳಿಸಿ
ಹರುಷ ಮಿಗಿಲಾ ಸಕಲ ವಿಪ್ರೋ
ತ್ಕರದ ಮಂತ್ರಾಕ್ಷತೆಯ ರವದ
ಬ್ಬರಣೆಯಲಿ ನಿತ್ಯಾತ್ಮನೆಸೆದನು ಪರ್ಣಶಾಲೆಯಲಿ ೨೧

ಅರವತ್ತ ಮೂರನೆಯ ಸಂಧಿ ಮುಗಿಯಿತು.

# ಅರವತ್ತನಾಲ್ಕನೆಯ ಸಂಧಿ

ವಾಸುದೇವನ ಪುರಕೆ ಪೌಂಡ್ರಕ
ವಾಸುದೇವನೆನಿಪ್ಪ ನೃಪನ
ತ್ಯಾಸುರದಲೈತಂದು ಮುತ್ತಿದನಿರುಳು ಮೋಹರಿಸಿ

ಕ್ಷಿತಿಪ ಕೇಳೈ ಕಾಶಿರಾಜನ
ಸುತೆ ಸುತನುವೆಂಬವಳು ರೂಪಾ
ನ್ವಿತೆ ಗುಣಾನ್ವಿತೆಯಾಗಿರಲು ವಸುದೇವನಾಕೆಯನು
ಕೃತವಿವಾಹದಲೊಲಿಸಿದನು ಸಂ
ತತಿವಿಹೀನನು ಕಾಶಿರಾಜನು
ಸುತೆಯ ಗಂಡಂಗಿತ್ತನಾ ನಿಜರಾಜ್ಯಸಂಪದವ ೧

ಇರಲು ಜನಿಸಿದನಾಕೆಯಲಿ ಭಾ
ಸ್ಕರಸಮಾನನು ಪೌಂಡ್ರಕಾಹ್ವಯ
ವರತನಯನಾತನಲಿ ರಾಜ್ಯವನಿರಿಸಿ ವಸುದೇವ
ಬರುತ ಕಂಸನ ತಂಗಿಯನು ಮ
ತ್ತಿರದೆ ಮದುವೆಯ ಮಾಡಿಕೊಂಡಂ
ಬುರುಹಮುಖಿ ದೇವಕಿಯನಿರ್ದನು ಸಂದು ಸೆಱೆವನೆಗೆ ೨

ಮತ್ತೆ ಬಾರದೆ ಹೋಗದಿಹುದೊಂ
ದತ್ಯಧಿಕ ಸಂತಾಪವಾ ಭ್ರಾ
ತೃತ್ವವದಱಿಂ ಮೇಲೆ ದೇವಕಿದೇವಿಯುದ್ವಾಹ
ಹೆತ್ತ ತಾಯಿಗೆ ಸವತಿಯಹ ದು
ಶ್ಚಿತ್ತತೆಗಳಿಂತಿವಱ ಶಿಖಿಯಲಿ
ಹೊತ್ತಿದುದು ಪೌಂಡ್ರಕನ ಹೃದಯ ಮಹಾನುತಾಪದಲಿ ೩

ವಾಸುದೇವಾಖ್ಯೆಯಲಿ ಜನಿಸಿದ
ನೀಶನಾ ದೇವಕಿಗೆ ತಾತಾ
ವಾಸುದೇವನಲಾ ತದುದ್ಭವನಾಗಿ ಪೌಂಡ್ರಕನು
ಸಾಸಿಗನು ಸಂಗ್ರಹಿಸಿ ಮತ್ಸರ
ದೋಷವನು ತಾನೊಬ್ಬನೇ ದಿಟ
ವಾಸುದೇವನು ಮತ್ತೆ ಬೇಱಿಲ್ಲೆಂದು ಸಾಱಿಸಿದ ೪

ಖ್ಯಾತನಾದನು ಕೃಷ್ಣನೆಂಬಾ
ಮಾತ ನೆಱೆ ಕೇಳುತ್ತ ಘನರೋ
ಷಾತಿರೇಕವ ತಳೆದು ಹರಿವಿರಹಿತವಿದೆಂದಱಿದು
ಭೂತಳಾಧಿಪನಿರುಳು ಯಾದವ
ಜಾತವಿದ್ದಾ ಪುರಕೆ ಘನ ಬಲ
ಜಾತದಲಿ ನಡೆತಂದು ಮುತ್ತಿದನೆಂಟು ದಿಕ್ಕಿನಲಿ ೫

ಏಕಲವ್ಯಾಹ್ವಯ ನಿಷಾದಾ
ನೀಕಪತಿಯು ಸಹಾಯವನು ಮ
ತ್ತಾ ಕುಮತಿಗಾಚರಿಸುತೆಂಭತ್ತೆಂಟು ಸಾವಿರದ
ಭೀಕರಾಕಾರದ ನಿಷಾದಾ
ನೀಕದಲಿ ನಡೆತಂದನಿರುಳು ನಿ
ರಾಕುಳನು ದೆಸೆಗೆಸೆವ ಕೈದೀವಿಗೆಯ ಬೆಳಕಿನಲಿ ೬

ಬಂದು ಪೂರ್ವದ್ವಾರದಲಿ ಪಡೆ
ಸಂದಣಿಸಿ ಬಿಟ್ಟುದು ದುರಾತ್ಮರು
ನಿಂದರಾಕರ್ಣಾಯತಾಸ್ತ್ರರು ಬಿಗಿದ ಬಿಲ್ಲಿನಲಿ
ಬೆಂದುದೋ ಜಗವೆನಲು ನೈಗೊಂ
ಡಂದು ದೀವಿಗೆ ಬೆಳಗಿದವು ನಡೆ
ತಂದನಾ ಪೌಂಡ್ರಕನು ರಾಜದ್ವಾರದಭಿಮುಖಕೆ ೭

ಎಲವೊ ಕರೆ ಕರೆ ಕಾಳಗಕೆ ಗೋ
ವಳನ ಕರೆ ಬರಹೇಳು ಬರಹೇ
ಳೊಳಗೆ ತನಗಿರಲೇಕೆ ಪೌಂಡ್ರಕವಾಸುದೇವನಲಾ
ಕೊಳುಗುಳಕೆ ಬಂದವನು ನಿಜ ಗುಣ
ಬಲವ ತೋಱುವುದೆನ್ನೊಡನೆ ಹೆಂ
ಗೊಲೆಯ ಹಸುವಿನ ಕೊಲೆಯ ಹವಣಲ್ಲೆನುತ ಗರ್ಜಿಸಿದ ೮

ಮುಱಿದು ಹೊಗಿ ಕೋಟೆಯನು ಸಮರಕೆ
ಹೊಱವಡದಡೆಮಗೇನು ಹಿಡಿ ತುಱು
ಸೆಱೆಗಳನು ಧನ ಕೋಶ ವನಿತಾ ವಾಹನಾದಿಕವ
ಹೊಱವಡಿಸಿ ನೂಕೆನುತ ತನ್ನೃಪನ
ಬ್ಬರಿಸಲೆಡ ಬಲವಂಕದವರೀ
ಡಿಱಿದು ಹೊಕ್ಕರು ಹಾರೆ ಗುದ್ದಲಿಕಾಱರುರವಣಿಸಿ ೯

ಕಡಿ ಕಡಿದು ಕೆಡಹಿದರು ಗುದ್ದಲಿ
ಗಡಿತದವರೋರಂತೆ ಕೋಟೆಯ
ನೊಡೆದು ಪ್ರಾಕಾರವನು ವೀರರು ಲಕ್ಷಸಂಖ್ಯೆಯಲಿ
ಬಿಡದೆ ತತ್ಪುರವಾಸಿಗಳ ಕಿವಿ
ಗೆಡಿಸಿದರು ಕಟಕಟ ಕಟಧ್ವನಿ
ಜಡಿದುದೋರಂತಬುಜಜಾಂಡಕಟಾಹ ಮಂಡಲವ ೧೦

ಭೋರೆನಲು ವೊಳಗಿದವು ಘನ ಗಂ
ಭೀರ ಭೇರೀ ಪಟಹ ಪಾತಾ
ಳೋರಗಂಗಳು ಕಂದೆಱೆದು ಕಡೆಗಣ್ಣ ಲಾಲಿಸಲು
ಮೇರೆದಪ್ಪಿದುದಹಿತಬಲ ಯದು
ವೀರರದನಾಲಿಸುತ ಬಂದಿವ
ನಾರು ತಲೆಗೊಳ್ಳೆನುತ ನೆರೆದುದು ಭಟರು ಬೊಬ್ಬಿಱಿದು ೧೧

ಬಂದವನು ಪೌಂಡ್ರಕನು ಗಡ ಗೋ
ವಿಂದನಿಲ್ಲದ ಹೊತ್ತೆನಱಿದೈ
ತಂದನೇ ತಪ್ಪೇನೆನುತ ಸಾತ್ಯಕಿ ಹಲಾಯುಧರು
ಸ್ಯಂದನವನೇಱಿದರು ಕಂಸನ
ತಂದೆ ಯುದ್ಧವ ಶೌರಿಮುಖ್ಯರು
ಸಂದಣಿಸಲೆಡಬಲದಲಾ ಗದ ಸಾರಣಾದಿಗಳು ೧೨

ಏಱಿಸಿದ ಬಿಲುಗಳಲಿ ತುರಗವ
ನೇಱಿದರು ರಾವುತರು ರಥವನು
ಹೇಱಿಸಿದರಸ್ತ್ರದಲಿ ರಥಿಕರು ಗಜ ಘಟಾವಳಿಯ
ಏಱಿದರು ಮಾವಂತರಂಕೆಯ
ಮಿಾಱಿದರು ಪಟುಭಟರು ಬಿರುದನು
ಸಾಱಿದವು ಕಹಳೆಗಳು ಗಡಬಡಿಸಿದವು ನಿಸ್ಸಾಳ ೧೩

ಬಿಗಿದ ಕವಚದ ಬೆನ್ನಬತ್ತಳಿ
ಕೆಗಳ ತಿರು ಪೊಡೆ ಸೀಸಕಂಗಳ
ಜಗಿಯ ರತ್ನದ ಕಾಲಕಡೆಯದ ಮಕುಟಮಂಡಲದ
ವಿಗಡರೇಱಿದರಾಹವಕೆ ಧಗ
ಧಗಿಪ ಕೈದೀವಿಗೆಯ ಬೆಳಗಿನ
ಲೊಗುಮಿಗೆಯ ಕೋಪದಲಿ ಪೂರ್ವದ್ವಾರದಲಿ ಜಡಿದು ೧೪

ಸಾರೆಲವೊ ಪೌಂಡ್ರಕನೆನಿಪ್ಪದೊ
ಠಾರನವನನು ತೋಱಿರೈ ಕೈ
ವಾರಿಸಲದೇಕಿನ್ನು ತೋಱಿಸಿರೀ ದುರಾತ್ಮಕನ
ಕಾರಿರುಳು ಕಾಳಗದ ಶೌರ್ಯದ
ಚೋರನನು ನೃಪಕುಲದ ಸುದುರಾ
ಚಾರನನು ತೋಱೆನುತ ಸಾತ್ಯಕಿ ಜಱಿದು ಗರ್ಜಿಸಿದ ೧೫

ಐದೆ ನಾನೆಲವೆಲವೊ ಬಾರನೆ
ಮಾಧವನು ನೀನಾರು ರೋಷ
ವ್ಯಾಧಿತನೆ ತೊಲಗೆಲವೊ ಸಾಯದ ಮುನ್ನ ತನ್ನೊಡನೆ
ಸಾಧುವಲ್ಲಿದು ಸಮರ ಮಾತಿನ
ಬಾಧೆಯನು ಸೈರಿಸೆನು ತೋಱೌ
ರಾಧೆಯಳಿಮಿಂಡನನು ತನಗೆನುತೆಚ್ಚನಾ ಭೂಪ ೧೬

ಆರು ತಾನೆಂದೆಂಬಡದಱಿ ವಿ
ಚಾರ ನಿನಗೇಕೆಲವೊ ಮಾಳ್ಪೆನು
ಕೂರಲಗಿನಕ್ಷರದ ಲಿಪಿಯಲಿ ನಿನ್ನ ಗಾತ್ರದಲಿ
ಸಾರು ಮಾಧವನೇಕೆ ನಿನ್ನಯ
ಬೇರುಗೊಲೆಗಾನಿರಲು ಸಾತ್ಯಕಿ
ವೀರಗಜಪಂಚಾಸ್ಯನಱಿಯಾ ಎನುತ ತೆಗದೆಚ್ಚ ೧೭

ನಿಪುಣನಹೆ ಲಿಪಿಗಾಱಿರಂಗದ
ಲಪಸದನೆ ಹೋಗೆನುತ ಪೌಂಡ್ರಕ
ನೃಪತಿ ಹೂಳಿದನಸ್ತ್ರದಲಿ ಸಾತ್ಯಕಿಯ ರಥಹಯವ
ಅಪಹರಿಸಿ ಸಾತ್ಯಕಿ ನೃಪಾಧಮ
ನಪರಿಮಿತ ಬಾಣೌಘವನು ನಿ
ಷ್ಕೃಪೆಯಲೆಚ್ಚನು ನಿಶಿತ ಶರನಿಕರಂಗಳಲಿ ನೃಪನ ೧೮

ಅತ್ತಲೊಂದೆಸೆಗೇಕಲವ್ಯನು
ತೆತ್ತಿಸಿದನಂಬಿನಲಿ ವೊಳಗುವ
ಮತ್ತಗಜ ರಥ ತುರಗಗಳನು ಪದಾತಿಗಳ ಕೆಡಹಿ
ಇತ್ತಲಾ ಯದುವೀರರಿಗೆ ನಿ
ವರ್ತಿಸಿದುದಾಹವ ನೃಪಾಲರ
ವೊತ್ತಡೊಡನೇನೆಂಬೆನಾಹವದುರುಭಯಾನಕವ ೧೯

ದೀವಿಗೆಯ ಬೆಳಗಿನಲಿ ಹಳಚಿದು
ದಾವುಭಯಬಲ ಜಲಧಿ ನಿಸ್ಸಾ
ಳಾವಳಿಯ ನಿರ್ಘಾತರವವಳ್ಳಿಱಿಯೆ ದಿಕ್ತಟವ
ಜಾವವಿರಲುದಯಕ್ಕೆ ಸುಪ್ರ
ಸ್ಥಾನವಡೆದುದು ಸಮರ ಕೊಂಡರು
ಜೀವವನು ಜಗದೇಕವೀರರು ಸರಳಮೊನೆಗಳಲಿ ೨೦

ನೇಗಿಲಲಿ ತೆಗೆ ತೆಗೆದು ಮುಸಲದ
ಲಾಗಿನಲಾ ನೈಷಧಬಲದ ಘನ
ಸಾಗರವನೊರಸಿದನು ಗಜರಥ ತುರಗ ಪತ್ತಿಗಳ
ಜಾಗರವ ಮಾಣಿಸಿದನಿನಿಜನ
ಮಾಗಣೆಯ ಹಾಳೂರ ಹೂಟೆಯ
ನಾಗಿಸಿದನೊಂದೇ ಮುಹೂರ್ತದಲಂದು ಬಲಭದ್ರ ೨೧

ಅತ್ತಲಾ ಸಾತ್ಯಕಿಯ ಶರಗಳ
ಗುತ್ತರಿಸಿ ಧೈರ್ಯವನು ಬಾಯಲಿ
ನೆತ್ತರನು ಕಾಱುತ್ತ ಪೌಂಡ್ರಕನೆದ್ದು ಹಲು ಮೊರೆದು
ಸತ್ತೆ ಹೋಗಿನ್ನೇನು ಬದುಕಲಿ
ಮೃತ್ಯುವಿನ ಪರಿವಾರವೆನುತ ಯ
ದೂತ್ತಮನ ಭಾಳವನು ನಾರಾಚದಲಿ ಕೀಲಿಸಿದ ೨೨

ಹಾ ಮುರಾಂತಕ ಯೆನುತ ಸಾತ್ಯಕಿ
ಭೂಮಿಗಿಳಿದನು ಮೂರ್ಛೆಯಲಿ ಸಂ
ಗ್ರಾಮಧೀರನು ಪೌಂಡ್ರಕನ ಶರಹತಿಗೆ ವಸವಳಿದು
ತಾಮಸನು ಮಗುಳೆಚ್ಚನಶ್ವ
ಸ್ತೋಮವನು ಸಾರಥಿಯನಾತನ
ವೈಮನಸ್ಯದ ಸಂಸ್ಥಿತಿಯ ಕಾಣುತ್ತ ಕಡು ಮುಳಿದು ೨೩

ಎದ್ದನೊಂದೇ ಘಳಿಗೆಗಾಹವ
ನಿದ್ರಿತನು ನಾರಾಚ ಮುದ್ರಾ
ಮುದ್ರಿತನು ನೋಡಿದನು ತುರಗಂಗಳನು ಸೂತನನು
ಅದ್ರಿಧರನಾಳಾದ ತನಗಿದ
ಭದ್ರವಾಯ್ತು ಕಟೆನುತ ತಾಂಡವ
ರುದ್ರನಾದನು ರೋಷದುದ್ರೇಕದಲಿ ಯದುವೀರ ೨೪

ಆದಡಿದಕೋ ಗೆಲಿವ ಗರ್ವ ಮು
ಹೋದಧಿಗೆ ವಡಬಾಗ್ನಿಯಿದೆಯೆನುತಾ
ಯಾದವೋತ್ತಮನಧಿಕ ಕೋಪಾಟೋಪದಲಿ ಜಡಿದು
ಸೇದಿಬಿಡಲಸ್ತ್ರವನು ಪೌಂಡ್ರಕ
ಮೇದಿನೀಶನ ವಕ್ಷದಲಿ ತೆಱ
ಹಾದುದಸುವಿಂಗುಗುವ ಘನರುಧಿರಾಂಬುಪೂರದಲಿ ೨೫

ಹಾಱ ಬಿದ್ದನು ಧರೆಗೆ ನೆತ್ತರು
ಕಾಱುತಡಿಗಡಿಗವನಿಪತಿ ಬಾ
ಯಾಱದನು ವಸವಳಿದು ಕಂಗಳು ತಿರುಗಿ ಮೂರ್ಛೆಯಲಿ
ಮಾಱದನು ಮತಿವೃತ್ತಿಯನು ಮಿಗೆ
ಡೋಱವೋದುದು ಕೊರಳು ದೀವಿಗೆ
ಗಾಱರಸುವನು ನೋಡುತಿರ್ದುದು ಬೆರಳ ಮೂಗಿನಲಿ ೨೬

ಮತ್ತೆ ನಿಮಿಷಾಂತರಕೆ ಮೂರ್ಛೆಯ
ನೊತ್ತಿ ರಥದಲಿ ನಿಂದು ತರಹರಿ
ಸುತ್ತ ಕೊಂಡನು ಧನುವನೊರಸುತ್ತುರದ ರಕುತವನು
ಇತ್ತಲಿತ್ತಲು ವೀರ ನಿಲು ನಿ
ಲ್ಲೆತ್ತಣದು ರಣಭಂಗವೆನಗೆನು
ತತ್ಯಧಿಕರೋಷದಲಿ ತೆಗೆದನು ನಿಶಿತ ಮಾರ್ಗಣವ ೨೭

ಎಸದ ಮುನ್ನವೆ ಚಾಪವನು ಖಂ
ಡಿಸಿದನಾ ಶಿನಿವೀರನೆಲವೋ
ಹುಸಿಯೆನುತ ಮತ್ತೊಂದ ಕೊಂಡನು ವೀರನಂತದನು
ಕುಸುಱದಱದನು ಸೂತನನು ಹಯ
ವಿಸರವನು ಸಾತ್ಯಕಿ ಕೃತಾಂತನ
ವಸತಿಯನು ಹೊಗಿಸಿದನು ಮೊಳಗಿದನಟ್ಟಹಾಸದಲಿ ೨೮

ವಿರಥನಾದನು ವೀರ ಪೌಂಡ್ರಕ
ಧರಣಿಪತಿ ಹಾಯೆನುತ ಬಲವ
ಬ್ಬರಿಸೆ ಕಾಲಾಳಾಗಿ ನಿಂದನು ಚಾಪವನು ಸೆಳೆದು
ಸರಳಮಳೆಗಱೆವುತ್ತಲಿರಲದ
ನಿರದೆ ತಱದೊಟ್ಟಿದನು ಸಾತ್ಯಕಿ
ಧರಣಿಪಾಲರ ಯುದ್ಧವದುಭುತವಾಯ್ತು ಮೂಜಗಕೆ ೨೯

ಮತ್ತೆ ಸಾತ್ಯಕಿ ಪೌಂಡ್ರಕನನೆ
ಪ್ಪತ್ತು ಸಾವಿರ ಬಾಣನಿಕರದ
ವೊತ್ತದಲಿ ಮುಳುಗಿಸಿದನೊಂದೇ ನಿಮಿಷಮಾತ್ರದಲಿ
ತೆತ್ತಿಸಿದನಾ ಪಾದತಳ ಮಣಿ
ಮಸ್ತಕಾಂತವೆನಲ್ಕೆ ಧೈರ್ಯದ
ಸತ್ವವೆಂತುಟೊ ಹಳಚುತಿರ್ದನು ಬಿಡದೆ ಯದುವರನ ೩೦

ಕಡಿದನಾತನ ಚಾಪವನು ಕೈ
ಯ್ಯೆಡೆಯಲಿಕ್ಕಡಿಯಾಗಲವನಿಗೆ
ಕೆಡಹಿದನು ಹಯನಿಕರವನು ಸೂತನನು ನೋಯಿಸಿದ
ಪೊಡವಿಗಿಳಿದನು ಬಳಿಕ ಸಾತ್ಯಕಿ
ಕಡಿದನಾತನ ಧನುವನಿಬ್ಬರ
ಕಡುಹು ಕೈಮನದಳತೆಯನು ಮಿಱದುದು ಸಮರದಲಿ ೩೧

ಕೊಂಡರಿಬ್ಬರು ಭಟರು ಯಾದವ
ಪೌಂಡ್ರಕರು ಗದೆಗಳನು ಧುರದಲಿ
ಮಂಡಲವನಾವರಿಸಿ ಹೊಯಿದಾಡಿದರು ಕೈದಣಿಯೆ
ಕಂಡರಾ ಗದೆಗಳಿಗೆ ಕಡೆಯನು
ಗಂಡುಗಲಿಗಳು ಮುಷ್ಟಿಯುದ್ಧವ
ಕೊಂಡರೊಬ್ಬರನೊಬ್ಬರಸುಗೊಂಬಧಿಕ ರೋಷದಲಿ ೩೨

ಹಳಚಿ ಹೊಯ್ದಾಡಿದರು ಕತ್ತಲೆ
ಯೊಳಗೆ ಕಲಿಪೌಂಡ್ರಕ ಯದೂತ್ತಮ
ರಿಳೆ ರಸಾತಳಕಿಳಿಯೆ ಬಗೆದುದು ಚರಣ ಹತಿಗಳಿಗೆ
ನಿಳಿ ನಿಟಿಲು ಶಬ್ದಂಗಳನು ಜನ
ವೊಲಿದು ಕೇಳುತ ಭಾಪು ಭುವನ
ಪ್ರಳಯಮೇಘದ ಸಿಡಿಲಗಾಯವೊ ಯೆನುತ ಬೆಱಗಾಯ್ತು ೩೩

ಅತ್ತಲಾಯ್ತು ನಿಷಾದಪತಿಯಲಿ
ಚಿತ್ತವಾ ಹಲಧರಗೆ ಹಲಧರ
ನತ್ತಲಾದುಮ ವೈರಬುದ್ಧಿ ನಿಷಾದಬಲಪತಿಗೆ
ಕೆತ್ತುದಂತರ್ಹೃದಯ ರೋಷದ
ಮುತ್ತಿಗೆಯಲಂತಕನ ಕೈಯಲಿ
ಗುತ್ತಿಗೆಯ ಕೊಂಡಂತೆ ಬಿಡದೌಕಿದರು ಪಟುಭಟರು ೩೪

ಎಚ್ಚರೊಬ್ಬರನೊಬ್ಬರಂಬನು
ಕೊಚ್ಚಿದರು ಕೈಮನದ ಕಡುಹನು
ಬಿಚ್ಚಿದರು ಬೀಱಿದರು ಭೀತಿಯನಹಿತಸಂತತಿಗೆ
ಮುಚ್ಚಿದರು ಸಮತೆಯನು ಮದದಲಿ
ಹೆಚ್ಚಿದರು ನೋಟಕರ ಕಂಗಳಿ
ಗಚ್ಚರಿಯ ತೋಱಿದರು ಕೈದೋಱಿದರು ಕಳನೊಳಗೆ ೩೫

ಕಡಿದನಹಿತನ ಚಾಪವನು ಹಲ
ದೊಡೆಯನದನೀಡಾಡಿ ಖಡುಗವ
ತುಡುಕಿದನು ಕೈವರ್ತಿಸಿದನಂಬಿಂಗೆ ಬಲಭದ್ರ
ಹಿಡಿದನಾತನು ಪರಿಘವನು ಕೈ
ಯ್ಯೊಡನೆ ಕಡಿದನು ರಾಮನಂತದ
ನೊಡನೊಡನೆ ಕಡಿದೊಟ್ಟುತಿರ್ದನು ಖಳನ ಕೈದುಗಳ ೩೬

ಮತ್ತೆ ಕೊಂಡನು ರಣದಲಿ ನಿಷಾ
ದೋತ್ತಮನು ಮಣಿ ಘಂಟೆ ಚವುರಿಗ
ಳೊತ್ತರಿಸಲಭ್ರದಲಿ ತೊಳತೊಳತೊಳಪ ಶಕ್ತಿಯನು
ಇತ್ತನೋಡೆಲೆ ರಾಮ ಕಡಿ ಕಡಿ
ಸತ್ವವುಳ್ಳಡೆ ತೋಱು ನಿಂದಿರೆ
ನುತ್ತ ಹಲಧರನೆದೆಯನಿದೆಕೊಳ್ಳೆನುತ ತೆಗೆದಿಟ್ಟ ೩೭

ಮಿಾಱಿ ಗಗನಾಂಗಣದ ತಮವನು
ಕೀಱಿ ನಡೆತಹ ಶಕ್ತಿಬಱಿ ವೈ
ದೋಱಿ ಹೋಗದೆನುತ್ತ ಯದುನಾಯಕನು ಕಳವಳಿಸಿ
ಹಾಱಿ ಹಲಧರನಂಬರಾಗ್ರವ
ನೇಱಿ ತಪ್ಪಿಸಿಕೊಂಡು ಧರಣಿಗೆ
ಮಾಱಿದನು ಶಕ್ತಿಯನು ಭಾಪೆನುತಿರ್ದುದಖಿಳ ಜನ ೩೮

ಇಟ್ಟನಾ ಶಕ್ತಿಯಲಿ ಹಲಧರ
ನಿಟ್ಟವನ ಪೇರುರವನೆದೆಯಲಿ
ಬಟ್ಟೆದೆಗೆದುದು ಶಕುತಿ ನಡುಬೆನ್ನಿಂಗೆ ಖಳನೊಡಲು
ಥಟ್ಟುಗೆಡೆದುದು ಧರೆಗೆ ವಜ್ರದ
ಲಿಟ್ಟ ವೃತ್ರನವೋಲು ಸುಭಟರು
ಕೆಟ್ಟೆನೆನುತ ನಿಷಾದಪಡೆ ಮುಸುಕಿತ್ತು ಹಲಧರನ ೩೯

ಅಸಿ ಮುಸಲ ಮುದ್ಗರ ಮುಸುಂಡಿ
ಪ್ರಸರದಲಿ ಬಹಳಾಸ್ತ್ರ ಶಸ್ತ್ರದ
ವಿಸರದಲಿ ವೆಂಠಣಿಸಿ ಬಿಡದಾವರಿಸಿ ಮೋಹರಿಸಿ
ಮುಸುಕುವರಿಬಲಜಲಧಿಯನು ಕೋ
ಪಿಸದೆ ಕೊಂದನು ನೇಗಿಲಲಿ ಘನ
ಮುಸಲದಲಿ ಮೊಳಗುತ್ತ ಘನತರ ಸಿಂಹನಾದದಲಿ ೪೦

ಉರುಳಿದುವು ಗಜ ಘಟೆಗಳವನಿಗೆ
ಹೊರಳಿದುವು ಕುದುರೆಗಳು ಕಾಲಾ
ಳರೆಗಡಿದ ತಲೆ ತೋಳು ತೊಡೆ ಬಸುಱುಗಳಲೊಱಗಿದುದು
ತೆರಳಿದುವು ತೇರುಗಳು ರಥಿಕರು
ವಿರಹಿತದಲೇನೆಂಬೆನಾಹವ
ದುರುಭಯಾನಕರಸದಲದ್ದುದು ರುಧಿರಜಲಧಿಯಲಿ ೪೧

ಕುಣಿವ ಮಾಂಸಾಶನರ ಬಹು ಶಾ
ಕಿನಿಯರುರುವೇತಾಳ ಕೋಟಿಯ
ಗಣನೆಗೆಟ್ಟವಲಾ ಕಬಂಧವಿಹಂಗಸಂಕುಲದ
ಹೆಣನನೆಳೆದೆಳೆದೊಯ್ವ ಮಿಗೆ ವಾ
ರಣೆಯ ಮಾಡುವ ಯಕ್ಷ ರಾಕ್ಷಸ
ಗಣದ ಹರಕೆಗಳೆಸೆದವಾ ರಣದಲಿ ಹಲಾಯುಧನ ೪೨

ಇರಲಿರಲು ಸಂಗ್ರಾಮಕೇಳಿಗೆ
ನೆರವನಟ್ಟಿದನೋ ಮುರಾಂತಕ
ಕೆರಳುವನು ತನಗೆಂದು ಕಳೆದನೊ ಕತ್ತಲೆಯ ಮಱೆಯ
ತರಣಿಯೆನೆ ಬೆಳಗಾಯ್ತು ಪೌಂಡ್ರಕ
ಧರಣಿಪಾಲಾಧಮನು ತನ್ನಯ
ಪುರವ ಹೊಕ್ಕನು ಕಡಲಮಧ್ಯವನಾ ನಿಶಾಧೀಶ ೪೩

ಮರಳಿ ಮಂಗಳವಾಯ್ತು ಯಾದವ
ಪುರಕೆ ಬಂದರು ರಾಮ ಸಾತ್ಯಕಿ
ವರಮಹಾರಥಗದನು ವಸುದೇವಾದಿ ಯಾದವರು
ಪುರಜನಾವಳಿ ಪರಮಹರುಷೋ
ತ್ಕರುಷದಿಂದಿದಿರಾಗಿ ಬರೆ ಜಯ
ಸಿರಿ ಸಮಾಹಿತವಾಯ್ತು ನಿತ್ಯಾತ್ಮಕನ ಪುರಜನಕೆ ೪೪

ಅರವತ್ತನಾಲ್ಕನೆಯ ಸಂಧಿ ಮುಗಿಯಿತು.

# ಅರವತ್ತೈದನೆಯ ಸಂಧಿ

ಶೌರಿ ಸಂಗ್ರಾಮದಲಿ ಪೌಂಡ್ರಕ
ಧಾರುಣೀಶಾಪಸದನಸುವನು
ಸೇರಿಸಿದನಂತಕನಪುರಕೆ ಸುದರ್ಶನಾಸ್ತ್ರದಲಿ

ಅರಸ ಕೇಳಿನನುದಯವಾಗಲು
ಪರಮಪುರುಷೋತ್ತಮನು ಬದರೀ
ಸುರವನನಿವಾಸಿ ಮುನಿಗಳಿಗಿಷ್ಟಾರ್ಥಸಿದ್ಧಿಯನು
ಕರುಣಿಸುತ ಬೀಳ್ಕೊಂಡು ವಹಿಲದ
ಲಿರದೆ ಗರುಡನನೇಱಿ ತನ್ನಯ
ಪುರಕೆ ಬಂದನು ಮಾಡಿದನು ಹರುಷವನು ಪುರಜನಕೆ ೧

ಕಳಸ ಕನ್ನಡಿ ವಾದ್ಯರವ ಮಂ
ಗಳದಲೆಸೆಯಲು ಸಾರ್ಘ್ಯಪಾದ್ಯಾ
ದ್ಯಲಘುಸತ್ಕಾರದಲಿ ಗುಡಿ ತೋರಣ ಪತಾಕೆಯಲಿ
ಒಲಿದು ಪುರಜನವಿದಿರುಗೊಳಲಾ
ಕಳಕಳದ ವರ ಸೂತ ಮಾಗಧ
ಲಲಿತಸಂಸ್ತುತಿಪಾಠವೆಸೆಯಲು ಹೊಕ್ಕನರಮನೆಯ ೨

ಬಂದನಸುರಾರಾತಿ ಯಾದವ
ವೃಂದವೈತರಲಾ ಸುಧರ್ಮೆಯ
ಲಂದೆಸೆವ ಸಿಂಹಾಸನಕೆ ಸಾತ್ಯಕಿ ಹಲಾಯುಧರು
ಸಂದ ಸಾತ್ವತ ವೃಷ್ಣಿಮುಖ್ಯರು
ಸಂದಣಿಸಲೆಡಬಲದಲುದ್ಧವ
ಗಾಂದಿನೀಸುತ ಪೃಥು ವಿಪೃಥು ಗದ ಸಾರಣಾದಿಗಳು ೩

ಹೇಳಿದರು ವೃತ್ತಾಂತವನು ಬಲು
ಗಾಳಗವನಾ ಪೌಂಡ್ರಕಾಖ್ಯ ನೃ
ಪಾಲನಲಿ ಮಾಡಿದುದನಾತನ ಸೈನ್ಯ ಸಾಗರವ
ಕೋಲ ವಡಬಾಗ್ನಿಯಲಿ ಸಲೆ ಕೈ
ಮೇಳವಿಸಿದುದನದನು ಮುರರಿಪು
ಕೇಳಿ ತಲೆದೂಗಿದನು ಹರಹರ ಯೆನುತ ಬೆಱಗಿನಲಿ ೪

ಆಗಲದಕೇನಾಯ್ತು ವೀರ ನೃ
ಪಾಗಮ ಕ್ರಮವೈಸಲೇ ನರಿ
ಕಾಗೆ ಹದ್ದುಗಳಿಂಗೆ ಹಬ್ಬವ ಮಾಡಿದನೆ ಕುಮತಿ
ಲಾಗಿನಲಿ ನಮ್ಮೊಡನೆ ಧುರದಲಿ
ಕಾಗಿ ಮರಳಿದನೆನುತ ಮುರರಿಪು
ಮೂಗಿನಲಿ ಬೆರಳಿಟ್ಟು ಚಿಂತಿಸಿ ತೂಗಿದನು ಶಿರವ ೫

ಇರಲು ಬಂದನು ದೂತನೊಬ್ಬನು
ಹೊಱಗೆ ಬಾಗಿಲ ಮುಂದೆ ನಿಂದವ
ಸರದವರ ಬೆಸಗೊಂಡು ಹೊಗಿಸಲು ಹೊಕ್ಕನೋಲಗವ
ನೆರೆದ ಯದುರಾಯರ ಮಹಾಸಭೆ
ಯಿರವನೀಕ್ಷಿಸುತೊಡಲು ಕಂಪಿಸಿ
ಕರಯುಗವ ಮುಗಿದೆಱಗಿ ಬಿನ್ನಹವಾಡಿ ಕೆಲಸಾರ್ದ ೬

ಆರೆಲವೋ ನೀನಾರು ಕಳುಹಿದ
ರಾರ ಭೃತ್ಯನು ಹೇಳೆನಲು ದೈ
ತ್ಯಾರಿ ಬಿನ್ನಹ ಚಿತ್ತವಿಸು ಕಾಶೀಶನೆಂದೆನಿಪ
ಭೂರಿ ಭುಜಬಲ ಪೌಂಡ್ರಕಾಖ್ಯ ಮ
ಹೀರಮಣನಟ್ಟಿದನು ದೇವರ
ಚಾರುಚರಣಾಂಬುಜದ ಸನ್ನಿಧಿಗೆಂದನಾ ದೂತ ೭

ವಾಸುದೇವನು ಗಂಡ ತಾನೇ
ದೇಶದಲಿ ವಿಖ್ಯಾತನೆನಲಿದು
ವಾಸುದೇವನೆನಿಪ್ಪ ಹೆಸರಿದು ನಿನಗಿದೆತ್ತಣದು
ಪಾಶುಪಾಲ್ಯವಲಾ ನಿನಗೆ ರಾ
ಜಾಸನಕೆ ನೀನಾರು ಬಱಿಯಭಿ
ಲಾಷೆಯಲ್ಲದೆ ಕಾರ್ಯಸಿದ್ಧಿಗಳಿಲ್ಲ ನಿನಗೆಂದ ೮

ಅಱಿಯದವರಜ್ಞಾನಿಗಳು ನೀ
ನುಱುವ ದೈವವು ವಿಷ್ಣು ಧರೆಗವ
ತರಿಸಿದನೆನುತ್ತೊಲಿದು ಕೊಂಡಾಡಿದರೆ ಬೆಱೆತಿಯಲಾ
ನೆಱೆ ವಿಚಾರಿಸಿ ನೋಡಲೀ ಜಗ
ಕುಱುವ ದೈವವೆ ತಾನು ಜಗವಿದ
ನಱಿಯದಾಡುವರಿದಕೆ ನೀಮುಯ್ಯಾನ ಬೇಡೆಂದ ೯

ಅವತರಿಸಿದೆನು ತಾನು ಭೂಭಾ
ರವನು ಕಳೆಯಲು ಬೇಡಿಕೊಂಡರು
ದಿವಿಜರೆನ್ನನು ಸಕಲಭೂತಂಗಳಲಿ ನೆಱೆ ಕೃಪೆಯ
ಸವಸಿಸಲು ನೀನಾರು ಬಿಡು ನಾ
ಮವನು ಮೂಢಾರೋಪಿತವನಾ
ಹವವ ಕೊಡು ಬಿಡಲಾಱದಿರ್ದರೆ ಮುಱೆಯೊಗುವುದೆಂದ ೧೦

ಎನ್ನ ಚಿಹ್ನವೆಸಿಪ್ಪ ಚಕ್ರವ
ನೆನ್ನದೆನಿಸುವ ಗದೆಯ ಶಾರ್ಙ್ಗವ
ನೆನ್ನವನು ನೀನೇಕೆ ಧರಿಸುವೆ ಪಾಂಚಜನ್ಯವನು
ಎನ್ನನುಜ್ಞೆಯದಿಲ್ಲದವನಿಯ
ಲನ್ಯರಿದಕಾರರುಹರೇತಕೆ
ಪನ್ನಗಾರಿಧ್ವಜಗಿಜಂಗಳ ವಿಭವ ನಿನಗೆಂದ ೧೧

ಕಕ್ಕುಲಿತೆ ಬೇಡೆಲ್ಲವನು ಬಿಡು
ಮಕ್ಕಳಾಟಕೆಯೇಕೆ ಮೇಣ್ಮಱೆ
ವೊಕ್ಕೆಯೆಂದೆನ್ನೆನ್ನ ದಿವ್ಯಪದಾಬ್ಜವಿಪ್ಟರವ
ಸೊಕ್ಕಿ ನೀನೆನ್ನೊಡನೆ ಸಮರಕೆ
ಹೊಕ್ಕೆಯಾದರೆ ಬದುಕುವುದು ಹುಸಿ
ಒಕ್ಕ ತುಪ್ಪದ ಗಾದೆಯಹುದೆಂದೆಂದನಾ ಭೂಪ ೧೨

ಎಂದರಾ ದೂತನ ನುಡಿಗೆ ಘೊ
ಳ್ಳೆಂದುದಾ ಸಭೆ ಸೂಸಿದವು ಬಾ
ಯಿಂದ ತಂಬುಲಗಳು ಮಹಾ ಯದುವೀರಮುಖ್ಯರಿಗೆ
ಮಂದಹಾಸದಲಸುರರಿಪು ನಗು
ತೆಂದನಾತನ ನುಡಿಗೆ ಹೇಳಿಲೆ
ತಂದೆ ಹೇಳಿನ್ನೊಮ್ಮೆ ಹೇಳಿನ್ನೊಮ್ಮೆ ಹೇಳೆಂದು ೧೩

ಏಕೆ ನಗುವಿರಿ ತನ್ನ ನಾನವಿ
ವೇಕಿಯೇ ತನ್ನೊಡೆಯನಂತೆ ನಿ
ರಾಕುಳನು ನಗೆಗಂಜದಟ್ಟಿದನೆನ್ನನಿಂದಿದಕೆ
ಸಾಕು ತಾನೇನೆಂಬೆನೊಡೆಯಂ
ಗೇಕೆ ಮಧ್ಯದಲದನು ಬೆಸಸುವು
ದಾಕೆವಾಳರೆನಲ್ಕೆ ನಗುತಿಂತೆಂದನಸುರಾರಿ ೧೪

ಅಱಿಯದವನೇ ಪೌಂಡ್ರಕನು ನೀ
ವಱಿಪದಿರಿ ತಾ ವಿಷ್ಣುವೆಂಬುದ
ನಱಿಯದವರಾಡುವರು ತನಗಾನೆಂಬಹಂಕೃತಿಯ
ಹೊಱಗೆಯಿಲ್ಲದಱಿಂದ ನಿರಹ
ಮ್ಮೆಱೆವುದೆನ್ನಯ ಸಹಜವದಱಲಿ
ತೆಱಹು ಹುಗದೀ ನಾಮ ರೂಪ ಕ್ರಿಯೆಗಳಿಂಗೆಂದ ೧೫

ತಪ್ಪಿ ನುಡಿವನೆ ಪೌಂಡ್ರಕನು ತನ
ಗೊಪ್ಪಲಱಿಯದು ವಾಸುದೇವನೆ
ನಿಪ್ಪ ಹೆಸರಿದು ಸಹಜ ಚಕ್ರಾದ್ಯಾಯುಧಂಗಳಿವು
ಒಪ್ಪುವವೆ ಹಗೆಯಿಲ್ಲ ಬೇಱೆನಿ
ಸಿಪ್ಪ ವಸ್ತುವೆ ಯಿಲ್ಲ ಬಿಡುವೆನು
ತಪ್ಪದಾತನ ಮೇಲೆ ಕಲಹವದೆಂದನಸುರಾರಿ ೧೬

ಬಹೆನು ನಡೆ ನಡೆ ನಿನ್ನೊಡೆಯನೀ
ಗೆಹಗೆ ಪೇಳಿದನಾ ಪರಿಯ ನಾ
ನಹೆನು ಸಂಶಯವಿಲ್ಲ ಬಲ್ಲವರಿಲ್ಲ ತನ್ನೊಂದು
ಸಹಜವನು ನೀ ಹೋಗೆನುತ ಘನ
ಮಹಿಮನಾತನ ಕಳುಹಿ ರಥ ಸ
ನ್ನಿಹಿತವಾಗಲೆನುತ್ತ ದಾರುಕನೊಡನೆ ನೇಮಿಸಿದ ೧೭

ಬಂದುದಾ ಕ್ಷಣದಲಿ ಮಹಾರಥ
ವೊಂದೆಸೆಗೆ ಗಜ ಘಟೆಗಳೊಡ್ಡಿದ
ವಂದವಡೆದಶ್ವಾವಳಿಗಳೊಡನೊಡನೆ ರಥನಿಕರ
ಸಂದಣಿಸಲಡರಿದನು ರಥವನು
ದುಂದುಭಿಯ ಕಹಳೆಗಳ ಮಾಗಧ
ವಂದಿಗಳ ಕಳಕಳದಲಸುರಾರಾತಿ ವಹಿಲದಲಿ ೧೮

ಭೂರಿ ಭುಜಬಲ ಶೌರ್ಯಯುತರ
ಕ್ರೂರಸಾತ್ಯಕಿ ಪೃಥು ವಿಪೃಥು ಗದ
ಸಾರಣೋದ್ಧವಮುಖ್ಯ ವರಯಾದವ ಮಹಾಭಟರು
ಮೇರೆದಪ್ಪಲು ಬಹಳ ಸೇನಾ
ಭಾರದಲಿ ಕಲ್ಪಾಂತ ಪಾರಾ
ವಾರವೆನೆ ನಡೆತಂದು ಬಿಟ್ಟುದು ವಾರಣಾಸಿಯಲಿ ೧೯

ಪುರದ ಹೊಱಬಾಹೆಯಲಿ ಶಂಖವ
ನಿರದೆ ಮೊಳಗಿಸಿ ಪೌಂಡ್ರಕನ ಕರೆ
ಕರೆ ಮಹಾವಿಷ್ಣುವನು ಕಾಂಬೆವೆನುತ್ತ ದೂತರನು
ಭರದಲಟ್ಟಿದರವರು ನೃಪನನು
ಕರೆದರೇಳೇಳಾಹವಕೆ ನಿಂ
ದಿರು ಮನದ ಧೃತಿಯುಳ್ಳೊಡೆಂದರು ಚರರು ಕೈನೆಗಹಿ ೨೦

ಕೇಳುತವೆ ಹೊಸ ಹೊನ್ನಗರುಡನ
ಮೇಳವಿಸಿ ರಥದೊಳಗಿರಿಸಿ ತರ
ಹೇಳಿದನು ಕೃತ್ರಿಮದ ಶಾರ್ಙ್ಗಗದಾಬ್ಜವೆಂಬಿವನು
ಮೇಲುಗಪ್ಪಿನ ಮೈಸಿರಿಯ ಭೂ
ಪಾಲನೆದ್ದನು ತುರಗ ರಥ ಕಾ
ಲಾಳು ಗಜ ಘಟೆಯೆಸೆವ ಬಹಳಕ್ಷೋಹಿಣಿಗಳೊಡನೆ ೨೧

ಹೊಡೆವ ಭೇರಿಯ ನಿಸ್ಸಳದ ಗಡ
ಬಡೆಯ ಕೈವಾರಿಗಳ ಬಿಡದು
ಘ್ಘಡಿಪ ಬಿರುದಿನ ಕಹಳೆಗಳ ಸುಭಟರ ಮಹಾರವದ
ಖಡುಗ ಶರ ಶೂಲಾದಿ ಶಸ್ತ್ರದ
ಗಡಣ ಗಗನವನಳ್ಳಿಱಿಯಲಾ
ಪೊಡವಿಪತಿ ಕಡು ಬಿಂಕದಲಿ ನಡೆತಂದನಾಹವಕೆ ೨೨

ದೂರದಿಂದಾ ಪೌಂಡ್ರಕಾಖ್ಯ ಮ
ಹೀರಮಣನಾಗಮನವನು ದೈ
ತ್ಯಾರಿ ಕಂಡನು ಭುಜಚತುಷ್ಟಯಗಳಲಿ ರಂಜಿಸುವ
ಭಾರಿಗದೆಯನು ಶಂಖಚಕ್ರೋ
ದಾರ ಶಾರ್ಙ್ಗಂಗಳನು ಕೌಸ್ತುಭ
ವೇರುರದ ಸಿರಿವತ್ಸ ಪೀತಾಂಬರಗಳೆಸೆದಿರಲು ೨೩

ಕೃತ್ರಿಮವೆನಿಪ್ಪೊಂದು ಗರುಡನ
ಪುತ್ಥಳಿಯನಿರದೇಱೆ ಕೈಗಳ
ನೆತ್ತಿ ಕೆಲದವಱಿಂಗೆ ಕೈವಾರಿಸುವುದೆಂದೆನುತ
ಮತ್ತೆ ತನ್ನನು ತಾನೆ ನೋಡಿ ನ
ಗುತ್ತ ಬಹ ಭೂಪಾಧಮನ ಕಾ
ಱುತ್ತ ಗಹಗಹಿಸಿದನು ದನುಜಾರಾತಿ ಕೈವೊಯ್ದು ೨೪

ನಟ್ಟುವಿಗನೋ ನೃಪನೊ ಮರುಳ ಯೆನು
ತಟ್ಟಹಾಸವ ಮಾಡೆ ಕೈವಱೆ
ಗುಟ್ಟಿ ನಗುವ ಯದುಪ್ರವೀರರ ಬಹಳ ನಿರ್ಘೋಷ
ಘಟ್ಟಿಸಿತು ಭುವನವನು ಕಾಣುತ
ಮನದ ದುಷ್ಟ ನೃಪಾಲರೆಡಬಲ
ಕಿಟ್ಟಳಿಸೆ ಕೈವೀಸಿದನು ಕೈಸನ್ನೆಯಲಿ ಭೂಪ ೨೫

ಸಿಡಿಲುಗಳು ಸಹಿತಭ್ರಚಯುವವ
ಗಡಿಸಿ ರವಿ ತಾರಾ ಗ್ರಹಾವಳಿ
ಯಡಸಿ ಕವಿವಂದದಲಿ ಪೌಂಡ್ರಕರಾಜ ಭಟನಿಕರ
ಖಡುಗ ಪಟ್ಟಿಸ ಪರಿಘ ಶೂಲದ
ಗಡಣದಲಿ ಮುಸುಕಿದರು ಬಾಣದ
ಕಡಲ ಕವಿಸಿದರೊಂದು ನಿಮಿಷಾರ್ಧಾರ್ಧಮಾತ್ರದಲಿ ೨೬

ಆಟಗಾಱಱ ಪಡೆಯಲಾ ನಿ
ಮ್ಮಾಟವಿದು ಲೇಸಾಯ್ತು ಕಾಲನ
ನೋಟವಿದು ನಿಮಗೆನುತ ತೆಗೆದು ಮಹಾಸ್ತ್ರಸಂಚಯವ
ನಾಟಿಸಿದನವರವರ ಕಾಯದ
ಕೋಟರದ ಕುಱುವದಲಿ ಕಾಲನ
ಚೀಟುಗಳು ಕವಿದಂತೆ ಕವಿದವು ಹರಿರವ್ರಾತ ೨೭

ತೊಲಗಿರೈ ಬಣಗುಗಳು ನೀವೆಲ
ವೆಲವೊ ತೋಱಿರೆ ನಿಮ್ಮ ವಿಷ್ಣುವ
ನೊಲಿದು ಕಾಣಿಸಿಕೊಂಬುದೆಮ್ಮನು ಬಾಣಪೂಜೆಯನು
ಸಲಿಸುವೆವು ನಾವೆನುತ ತನ್ನೃಪ
ಬಲವನದನೊಡೆತುಳಿದು ಹಾಯ್ದನು
ಕೊಳುಗುಳದಲಾ ಪೌಂಡ್ರಕಾಖ್ಯನೃಪಾಲನಿದ್ದೆಡೆಗೆ ೨೮

ಎಲವೊ ಬಱಿದೇ ದೂತಮುಖದಲಿ
ಗಳಹಿದೆಯಲಾ ಸಮರಮುಖದಲಿ
ತೊಲಗಿ ನಿಲ್ಲದೆ ಕೊಂಬುದೆನ್ನ ಮಹಾಸ್ತ್ರಸಂತತಿಯ
ಛಲವ ಬಿಟ್ಟರೆ ಮಱೆಯೊಗುವೆ ನೀ
ಗಳೆಯದಲ್ಲದಡವನಿತಳದಲಿ
ಮಲಗಿಸುವೆನಸ್ತ್ರೌಘಶಯನದಲೆಂದನಸುರಾರಿ ೨೯

ಎನುತ ತೆಗೆದಾ ಪೌಂಡ್ರಕನ ತನು
ನನೆಯಲೆಚ್ಚನು ಬಾಣನಿಕರದ
ಲನಿತುವನು ಕಡಿದೆಚ್ಚನಾ ನೃಪನಸುರವೈರಿಯನು
ದನುಜರಿಪು ಬಳಿಕವನ ರಥವನು
ಧನುವನಶ್ವಾವಳಿ ಮಣಿಧ್ವಜ
ಕನಕಚಮರ ಚ್ಛತ್ರನಿಕರಂಗಳನು ಖಂಡಿಸಿದ ೩೦

ಉಡಿದ ರಥವನು ಬಿಸುಟು ಖಡುಗವ
ತುಡುಕಿ ಫಡ ಫಡ ನಿಲ್ಲೆನುತ ನೃಪ
ನಡರಿದಾಟೋಪದಲಿ ಬರುತಿರಲವನ ಮಸ್ತಕವ
ಕಡುಗಿ ಚಕ್ರದಲಿಡಲು ತಲೆಯನು
ಕಡಿದು ಹಾಱಿದುದಂಬರಕೆ ಸುರ
ರೊಡನೆ ಜಯ ಜಯ ಕೃಷ್ಣ ಜಯ ಯೆನುತಿರ್ದರಭ್ರದಲಿ ೩೧

ಕಾಶಿರಾಜನ ಮಕುಟ ಮಣಿಗಣ
ಭಾಸುರದ್ಯುತಿಯೆನಿಪ ತಲೆಯನು
ಕೀಸಿ ಕೂರಲಗಿನಲಿ ಕೆಡಹಿದನವನ ಪುರದೊಳಗೆ
ಆ ಸಕಲ ಪುರಜನ ಸತೀಜನ
ದೇಶಜನಗಳು ಕಂಡು ತಲೆಯನು
ಹಾಸಿ ಕೆಡೆದರು ಧರೆಗೆ ಪತಿಯಳಿವಿನಲಿ ಹಳವಿಸುತ ೩೨

ಇಂತು ಪೌಂಡ್ರಕ ಕಾಶಿರಾಜನ
ನಂತಕನ ಪುರಕಟ್ಟಿ ದನುಜಕು
ಲಾಂತಕನು ಮರಳಿದನು ಜಯರವ ಪುಷ್ಪವೃಷ್ಟಿಯಲಿ
ಅಂತರಿಕ್ಷದಲಮರಚಯವೋ
ರಂತೆ ಹೊಗಳುತ್ತಿರಲು ಲಕ್ಷ್ಮೀ
ಕಾಂತನಂದೆಯಿತಂದು ಹೊಕ್ಕನು ದ್ವಾರಕಾಪುರವ ೩೩

ಅತ್ತಲಾ ಪೌಂಡ್ರಕನೃಪಾಲನು
ಹೆತ್ತ ಮಗನು ಸುದಕ್ಷಿಣನು ಪಿತೃ
ಕೃತ್ಯವನು ನೆಱೆಮಾಡಿ ಶೋಕಾಮರುಷವೇಗದಲಿ
ಹೊತ್ತುವಂತಸ್ತಾಪದಲಿ ಮಱು
ಗುತ್ತುಪಾಧ್ಯರುಸಹಿತ ಹೊಕ್ಕನು
ಕೃತ್ತಿವಾಸನ ಮಱೆಯನಧಿಕ ಮನಸ್ಸಮಾಧಿಯಲಿ ೩೪

ದಕ್ಷಮಖವಿಧ್ವಂಸಿ ಬಳಿಕ ಸು
ದಕ್ಷಿಣಗೆ ವೈದೋಱಿ ನುಡಿದನು
ದಕ್ಷಿಣಾಗ್ನಿಯ ಬೇಡಿಕೋ ನಿನ್ನಿಷ್ಟಸಿದ್ಧಿಯನು
ಲಕ್ಷಿಸಬ್ರಹ್ಮಣ್ಯವೆನಿಪ ವಿ
ಪಕ್ಷದಲಿ ಯೋಜಿಸಿದಡಹುದೆನು
ತಕ್ಷರದಲವಿಮುಕ್ತನಂತರ್ಧಾನದಲಿ ನಿಂದ ೩೫

ಬಳಿಕ ಹರನಾದೇಶದಲಿ ನೃಪ
ಕುಲವಿನಾಶನಮೂರ್ತಿ ಕೃಷ್ಣನ
ಕೊಲುವ ಭರದಲಿ ಬೇಳಿಸಿದನಂದಾಭಿಚಾರವನು
ನಿಲುಕಿ ಹವಿಯನು ಮೆಲುತ ಕೊಂಡದ
ತಳವ ಬಗಿದು ಹುತಾಶನನು ಘುಳು
ಘುಳಿಸುತೆದ್ದನು ಘೋರತರಮೂರ್ತಿಯನು ನೆಱೆ ತಳೆದು ೩೬

ಕಂಗಳಲಿ ರವಿರಥದ ತೇಜವ
ನುಂಗುವಂತಿರೆ ನೆಗೆದು ನಡೆವುತ
ಜಂಗಮಾಚಲಗುಹೆಯವೋಲುಗ್ರಾಸ್ಯವಿವರದಲಿ
ಹಿಂಗದವ್ವಳಿಸುತ್ತ ನಭವನು
ಚಂಗುವಾಱುತ ತಾಳಮರಗಳ
ಭಂಗಿಸುವ ಕಾಲ್ಗಳಲಿ ನಿಂದನು ವೀರನಭಿಮುಖಕೆ ೩೭

ಉಗ್ರಮುಖದಂಷ್ಟ್ರವನು ಬಹಳೋ
ದಗ್ರ ಭ್ರುಕುಟೀಬದ್ಧ ವಿಕಟ
ವ್ಯಗ್ರಜಿಹ್ವನನಾ ಸುದಕ್ಷಿಣನೆಱಗಿ ಕೈಮುಗಿದು
ನಿಗ್ರಹಿಸು ಯಾದವರನೆಂದ
ವ್ಯಗ್ರಮತಿ ಬೆಸಸಿದಡೆ ನಡೆದ ನ
ಭಗ್ರಹಾವಳಿಗಳನು ಮೆಲುವಂದದಲಿ ಬಾಯ್ದೆಱೆದು ೩೮

ಚಂಡಭೂತ ಪ್ರಮಥನಿಕರದ
ತಂಡದಲಿ ಮೋಹರಿಸಿ ದಶದಿಗು
ಮಂಡಲವನಾವರಿಸುತೈತಹ ಕೃತ್ಯೆಯುರವಣೆಯ
ಕಂಡುದಾ ದ್ವಾರಕಿಯ ಜನ ಭಯ
ಗೊಂಡು ಕೆಟ್ಟೆವೆನುತ್ತ ಹರಿದಾ
ಪುಂಡರೀಕಾಕ್ಷನನು ಮಱೆವೊಗುತೆಂದರೊಳಿಗವ ೩೯

ದೇವ ರಕ್ಷಿಸು ರಕ್ಷಿಸೆಮ್ಮನ
ದಾವುದೆಂದಾವಱಿಯೆವುರಿಯಲಿ
ಬೇವುತಿದೆ ಜಗವೈದೆ ಭುವನಪ್ರಳಯದಂದದಲಿ
ಓವೊ ನೋಡುವಡಂಜುವೆವು ಗತ
ಜೀವರಾದೆವು ಕೃಷ್ಣ ನೀನೇ
ಕಾವುದೆಮ್ಮನು ನಿನ್ನ ಭಕುತರನೆಂದುದಖಿಳ ಜನ ೪೦

ನೆತ್ತವನು ಜಗದೇಕನಾಥನು
ಚಿತ್ತವಿಸುತುದ್ಧವನೊಡನೆ ನಗು
ತತ್ತಲಾಡುತ್ತಾಡುತವೆ ನೀವಂಜಬೇಡೆನುತ
ಎತ್ತಿ ನಿಜವಾಮೋನ್ನತಾಮಳ
ಹಸ್ತಪಂಕಜದಳವನಭಯವ
ನಿತ್ತನಾ ಪರಿಜನಕೆ ಬೆಸಸಿದನಾ ಸುದರ್ಶನವ ೪೧

ಭಾನುಕೋಟಿಪ್ರಭೆಯ ಜನ್ಮ
ಸ್ಥಾನವೋ ಕಲ್ಪಾಂತಕಾಲ ಕೃ
ಶಾನುವಿನ ತಾಯ್ಮನೆಯೊ ಮೇಣಾ ಜ್ವಲಿಸುವಂತಕನ
ಆನನವೊ ಹರಹರ ಯೆನುತ ಭ
ಗ್ನಾನನಾಕ್ಷಿಗಳಾಯ್ತು ಪುರಜನ
ಜಾನಪದ ಜನನಿಕರ ನೋಡಿ ಮಹಾಸುದರ್ಶನವ ೪೨

ನೆಲನನಾಕಾಶವನು ದಶದಿಗು
ವಳಯವನು ಪಾತಾಳಲೋಕಂ
ಗಳನು ತಾರಾಗ್ರಹನಿಕರ ಕಲ್ಪಾಂತವಾಸಿಗಳ
ನಿಳಯವನು ಜಾಜ್ವಲ್ಯಮಾನೋ
ಜ್ವಲ ಮಹಾನಿಜತೇಜದಲಿ ಮು
ಕ್ಕುಳಿಸಿದುದು ಹರಿಚಕ್ರವೊಂದೇ ನಿಮಿಷಮಾತ್ರದಲಿ ೪೩

ಉರಿದುದೋ ಜಗವೆನುತ ಸುರರಂ
ಬರದಲುಲಿಯಲು ಜಯ ಜಯಖಿಳೇ
ಶ್ವರ ಪರಿತ್ರಾಹೀಶ ರಕ್ಷಿಸು ರಕ್ಷಿಸೆಂದೆನುತ
ಸುರಿಯೆ ಸುಮನೋವೃಷ್ಟಿಯನು ಖೇ
ಚರರು ಭಯದಲಿ ಮಾಱಿ ನಡೆದುದು
ಪರಮಪುರುಷ ಮಹಾಸ್ತ್ರನಾ ಕೃತ್ಯಾಭಿಮುಖವಾಗಿ ೪೪

ಅತ್ತಲಾ ಮಾಹೇಶ್ವರಾಹ್ವಯ
ಕೃತ್ಯೆಯದು ಚಕ್ರಾನಲಾಹತ
ವಕ್ತ್ರದಲಿ ತಿರುಗಿತ್ತು ಮಗುಳೆ ಸುದಕ್ಷಿಣನ ಪುರಕೆ
ತುತ್ತುಗೊಂಡುದು ಮೊದಲಲವನನೆ
ಮೃತ್ಯುವಾದುದು ಪುರಜನಕೆ ಪುರ
ಹೊತ್ತಿ ಹೊಗೆದುದು ಕೊಂಡುದಲ್ಲಿಯ ಕುಂಡವನು ಬಗಿದು ೪೫

ಚಕ್ರರಾಜನು ಹರಿದು ಕೃತ್ಯೆಯ
ನಾಕ್ರಮಿಸಿ ಜಯಿಸುತ್ತ ಮೊಳಗು
ತ್ತುತ್ಕ್ರಮಿತಕೋಪದಲಿ ನೆಱೆ ಸುಟ್ಟುರುಹಿ ಮುರಿಮುರಿದು
ಅಕ್ರಮಾತ್ಮನ ಪುರವನಾ ಪರ
ಚಕ್ರವನು ನಿರ್ಧಾಮ ಧೂಮೋ
ಪಕ್ರಮವ ನೆಱೆ ಮಾಡಿ ಮರಳಿದುದೊಡೆಯನಂತಿಕಕೆ ೪೬

ಇದು ಶುಭೋದಯವಖಿಳ ಲೋಕ
ಕ್ಕಿದು ಮನೋರಥಸಿದ್ಧಿಕರವಿಂ
ತಿದು ಮಹಾಘವ್ಯೂಹನಾಶನವಿದನು ಕೇಳಿದಡೆ
ಮುದದಲಭಿವರ್ಣಿಸಿದಡಚ್ಯುತ
ಪದವನೀವುದು ದೇಹಸಂತ್ಯಾ
ಗದಲಿ ಹರಿಗುಣಗಣ ಪರಾಕ್ರಮವರ್ಣನವಸೆಂದ ೪೭

ಕೇಳುವುದು ಸಚ್ಛ್ರದ್ಧೆಯಲಿ ನೆಜಿ
ಹೇಳುವುದು ಹರಿಬುದ್ಧಿಯಲಿ ಹರಿ
ಲೀಲೆಯನು ಸಲೆ ಭುಕ್ತಿಮುಕ್ತಿ ಸುಖಪ್ರದವಸಿದನು
ಹಾಲು ಮದ್ದಾದಂತೆ ಕರ್ಣವಿ
ಶಾಲಸುಖ ಭವದುಃಖಹರ ಕರು
ಣಾಳು ಸಿತ್ಯಾತುಮ ಮುಕುಂದಚರಿತ್ರವಿದು ಧರೆಗೆ ೪೮

ಅರವತ್ತೈದನೆಯ ಸಂಧಿ ಮುಗಿಯಿತು.

# ಅರವತ್ತಾರನೆಯ ಸಂಧಿ

ಶಂಬರನ ತಲೆಗೊಂಡು ಸಮರದ
ಲಂಬುಜಾನನೆಸಹಿತ ಕಮಲದ
ಳಾಂಬಕನ ಹೆಮ್ಮಗನು ಬಂದನು ದ್ವಾರಕಾಪುರಿಗೆ

ಅರಸ ಕೇಳಬುಜಾಕ್ಷಿಗರ್ಭವ
ಧರಿಸಿದಳು ರುಕ್ಮಿಣಿ ಮುಕುಂದನ
ಪರಮತೇಜವ ಧರಿಸುತಂತಿರಲಿರಲು ನವಮಾಸ
ಭರಿತವಾದುದು ಬಳಿಕ ಪಡೆದಳು
ವರಕುಮಾರನನೊಯ್ದನಾ ಶಂ
ಬರನು ತನಗೆ ವಿರೋಧಿಯೆಂಬುದನಱಿದು ಬಾಲಕನ ೧

ಜಲಧಿಯಲಿ ಬೀಸಾಡಿ ಹೊಕ್ಕನು
ನಿಳಯವನು ಸುರವೈರಿ ಹಸುಳೆಯ
ನಳಲಳಲು ನುಂಗಿತ್ತು ಮತ್ಸ್ಯವದೊಂದು ಬಾಲಕನ
ಬಳಿಕ ಮೀನಗ್ರಾಹಿಗಳು ಬಲು
ವಲೆಗಳನು ಬೀಸುತ್ತ ಮತ್ಸ್ಯಾ
ವಳಿಯೊಡನೆ ಹಿಡಿದರು ಮಹಾಮತ್ಸ್ಯವನು ಧೀವರರು ೨

ಹಿಡಿದು ತೊಳತೊಳ ತೊಳಗುವಾ ಹೇ
ರೊಡಲ ಮತ್ಸ್ಯವು ಯೋಗ್ಯವಿದು ನ
ಮ್ಮೊಡೆಯ ಶಂಬರಗೆನುತ ದೂತರು ದಾನವೇಶ್ವರಗೆ
ಕೊಡಲದನು ಕೊಡಿಸಿದನು ಬಾಣಸಿ
ನೆಡೆಗೆ ತರಲದ ಸೀಳುತೊಬ್ಬಳು
ಮಡದಿ ಕಂಡಳು ಮತ್ಸ್ಯದುದರದಲೆಸವ ಬಾಲಕನ ೩

ಆಲಿಗಳು ಕೋರೈಸುತಿವೆ ನರ
ಬಾಲಕನು ಶಿಶುವೆನುತ ತೆಗೆದಾ
ಬಾಲೆ ಮಾಯಾವತಿಯ ಕೈಯಲಿ ಕೊಟ್ಟಳರ್ಭಕನ
ಲೋಲಲೋಚನೆ ನೋಡಿ ಬೆಱಗಿನ
ಲಾಲಿಸುತ್ತಿರೆ ವಿಷ್ಣುಭಕುತಿಯ
ಭಾಳನೇತ್ರನು ಬಂದನಲ್ಲಿಗೆ ನಾರದವ್ರತಿಪ ೪

ಗಂಡನೀತನು ನಿನಗೆ ಸಂಶಯ
ಗೊಂಡು ನೋಡದಿರಬಲೆ ಪೂರ್ವದ
ಹೆಂಡತಿಯಲಾ ನೀನು ಕಾಮನ ಸತಿಯು ರತಿದೇವಿ
ಖಂಡಪರಶುವಿನಕ್ಷಿಶಿಖಿ ಕೈ
ಗೊಂಡ ಕಾಮನು ಜನಿಸಿದನಲಾ
ಪುಂಡರೀಕಾಕ್ಷಂಗೆ ರುಕ್ಮಿಣಿದೇವಿಯರಲೆಂದ ೫

ತನಗೆ ಹಗೆಯೆಂದೊಯ್ದು ಶಂಬರ
ನನುಪಮನನಿಡುಕಿದನು ಶಿಶುವನು
ವನಧಿಯಲಿ ತದ್ಭೃತ್ಯರೈತಂದಿತ್ತರೀತಂಗೆ
ದನುಜನಱಿಯದವೋಲು ರಕ್ಷಿಸು
ಮನುಮಥನನೆಂದೊರೆದು ನಾರದ
ಮುನಿ ನಮೋ ನಾರಾಯಣಾ ಯೆನುತಡಱಿದನು ನಭವ ೬

ಮುನಿಪ ಬಿಜಯಂಗೈದನತ್ತಲು
ವನಿತೆ ಮಾಯಾವತಿ ಮುಕುಂದನ
ತನಯನನು ಪತಿಬುದ್ಧಿಯಲಿ ಸಲಹಿದಳು ಬಾಲಕನ
ಅನುಪಮಾಮೃತಪಾನ ವರಭೋ
ಜನಗಳಲಿ ಬೆಳವುತ್ತಲಿರ್ದನು
ದನುಜನಂತರ್ಗೃಹದಲಾ ಬಾಣಸಿನ ಮನೆಯೊಳಗೆ ೭

ವೀರ ಬಳೆದನು ರತಿಯ ಮನದ ವಿ
ಕಾರವೇ ಬೆಳೆವಂತೆ ಸೊಬಗಿನ
ವಾರಿಧಿಯಲಾ, ಕಾಮನೇನೆಂಬೆನು ಮಹಾದ್ಭುತವ
ಚಾರುತರ ಸರ್ವಾಂಗಲಕ್ಷ್ಮಿಯ
ಭೂರಿತೇಜದ ಸೌಕುಮಾರ್ಯೋ
ದಾರಗುಣನಿಧಿ ಹರಿಸಿದನು ನೋಡುವರ ಕಣ್ಮನವ ೮

ಮಾತೃಬುದ್ಧಿಯಲಿಹನು ಬಾಲಕ
ನಾ ತಳೋದರಿಯಲಿ ಸತಿಗೆ ಸಾ
ಕ್ಷಾತು ನಿಜಪತಿಯೆಂಬ ಬುದ್ಧಿಯೆ ಬಲಿದುದಾತನಲಿ
ಮಾತಿನಲಿ ಚೇಷ್ಟೆಯಲಿ ನಯನ
ಪ್ರೀತಿಯಲಿ ಪಂಕರುಹಮುಖಿ ವಿಪ
ರೀತಭಾವದಲಿರಲು ಕಂಡನು ಕಾಮನಂಗನೆಯ ೯

ತಾಯೆ ಹೇಳೇನೌ ಮನೋಭಿ
ಪ್ರಾಯವಿದು ಸಂಪ್ರತಿ ವಿಪರ್ಯಯ
ವಾಯಿತಾತ್ಮಜನಾದ ತನ್ನಲಿ ಯನ್ಯಥಾ ಬುದ್ಧಿ
ಹೇಯವಲ್ಲಾ ಪಾತಕಕೆ ದಿಟ
ಬೀಯ ಮಾಳ್ಪರೆ ಮನವನೇತಕೆ
ಜಾಯೆಯಂತಿರೆ ನೋಳ್ಪೆ ತನ್ನನು ಶಿವಶಿವಾ ಯೆಂದ ೧೦

ಎಂದಡಲ್ಲಲ್ಲಲ್ಲ ತನ್ನನು
ಕೊಂದೆ ಪಾಪಿ ವೃಥಾಭಿಯೋಗವ
ನಿಂದು ತನ್ನಲಿ ಸಾಚಿದೆಯಲಾ ತನ್ನ ಮಗನೆಂದು
ಎಂದರಾರಿದ ನಿನಗೆ ತಾನಾ
ರೆಂದು ಕಂಡೆ ವೃಥಾ ಶಿಶುತ್ವದ
ಮಂದಮತಿಯನು ಮೆಱೆಯಬೇಡೆಂದಳು ಸರೋಜಮುಖಿ ೧೧

ನೀನಲಾ ಪೂರ್ವದಲಿ ಕಾಮನು
ತಾನಲಾ ರತಿ ನಿನ್ನ ಸತಿ ಮುನಿ
ದಾ ನಿಟಿಲಲೋಚನನು ಸುಟ್ಟಡೆ ಬೆಂದು ಮತ್ತಿಂದು
ಮಾನನಿಧಿ ಜನಿಸಿದೆ ಮುಕುಂದನ
ಮಾನಿನಿಗೆ ಮಗನಾಗಿ ಬಳಿಕದ
ನೇನಹೇಳುವೆ ಮಾನಭಂಗವನೆಂದಳಬುಜಾಕ್ಷಿ ೧೨

ಕೊಂಬೆ ತಲೆಯನು ನೀನೆನುತ್ತೀ
ಶಂಬರನು ಜನಿಸಿದ ಶಿಶುವನೊ
ಯ್ದಂಬುಧಿಗೆ ಬೀಸಾಡಿ ಬರೆ ನುಂಗಿದುದು ವರಮತ್ಸ್ಯ
ಶಂಬರಗೆ ಬಂದುದದ ಸೀಳಿದ
ರಂಬುಚರನಲಿ ನಿನ್ನ ಕಂಡೆನು
ನಂಬಿದೆನು ನಾರದನ ಮಾತಿನಲೆಂದಳಬುಜಾಕ್ಷಿ ೧೩

ಕೊಲ್ಲು ಹಗೆಯನು ಬೇಗ ಮಾಡೆಲೆ
ವಲ್ಲಭನೆ ಸಂಶಯವ ಮಾಡದಿ
ರೆಳ್ಳನಿತನಿದಱೊಳಗೆ ಮಱುಗುವರಿಲ್ಲ ನಿನ್ನವರು
ಬಲ್ಲಿದನು ಮಾಯೆಯಲಿ ಸುರರಿಗೆ
ತಲ್ಲಣವ ಮಾಡುವನು ದಾನವ
ಮಲ್ಲನೀತನು ಬಡವನಲ್ಲೆಂದಳು ಸರೋಜಮುಖಿ ೧೪

ಅತುಳಬಲನಮುರಾರಿ ಮಾಯಾ
ಶತವಿದನು ನೀನಾತನನು ತ
ತ್ಪ್ರತಿವಿದಿತಮಾಯೆಗಳಲೇ ಕೊಲ್ಲೆನುತ ನಿಜಪತಿಗೆ
ಸತಿಶಿರೋಮಣಿ ಕಲಿಸಿದಳು ಸ
ಮ್ಮತವೆನಿಪ ತದ್ವಿಹಿತಮಾಯಾ
ಶತವನಾ ಮಾಯಾವಿನಾಶನವಿದ್ಯೆಗಳು ಸಹಿತ ೧೫

ಏಳು ಕರೆ ಕರೆ ದುಷ್ಟರಿಪುವನು
ಕಾಳಗಕೆ ಹಿಡಿ ಗದೆಯನೆನುತಾ
ಬಾಲೆ ಕೊಟ್ಟಳು ಗದೆಯನೊಪ್ಪುವ ಕವಚಸೀಸಕವ
ಬಾಳೆನುತ ನವರತ್ನ ಭೂಷಣ
ಜಾಲವನು ಕೈಕೊಂಡು ಮಿಗೆ ಬಿ
ಲ್ಲಾಳುಗಳ ದಾತಾರ ಹೊಱವಂಟನು ಮಹಾಹವಕೆ ೧೬

ಹೊಯ್ದು ಭುಜವನು ನಿಂದನಿದಿರಲಿ
ಕೈದುಕಾಱಿ ದೇವನೊಪ್ಪಿರೆ
ನೆಯ್ದ ಹಿಣಿಲನು ಬೆಂಗಲೆವ ಗೊಂಡೆಯದ ತೊಂಗಲಲಿ
ಐದೆ ನಯ ಕಡೆಗಣಿಸುತಸುರನ
ಬೈದು ಕರೆದನು ಬಾರದಿದ್ದರೆ
ಕೊಯ್ದು ಬಿಟ್ಟೆನು ಮೂಗನೊಬ್ಬನನಸುರನಿದ್ದೆಡೆಗೆ ೧೭

ಆರೆಲವೊ ಕರೆವವನು ತನ್ನನು
ವಾರಿಧಿಯ ಮನೆಯವನೊ ಬೆಟ್ಟದ
ಭಾರಣೆಯ ಮುಕ್ಕಣ್ಣನೋ ವೈಗಣ್ಣ ಮದಮುಖನೊ
ಆರೆನುತ ಕಲ್ಪಾಂತ ಕಾಲದ
ಭೈರವನ ಹೆತ್ತೈಯ್ಯನೆನಲಮು
ರಾರಿ ತಳೆದನು ಕಂಗಳಲಿ ಘನರೌದ್ರಮಯ ರಸವ ೧೮

ಕೊಂಡು ಗದೆಯನು ಜಗವನುರುಹುವ
ದಂಡಧರನಂದದಲಿ ಕಣ್ಣಲಿ
ಕೆಂಡವನು ಕಾಱುತ್ತ ಗರ್ಜಿಸಿ ಗಜಱಿ ಮಿಾಸೆಗಳ
ದಿಂಡುದಿರುಹುತ್ತುಗಿದು ಸಮರಕೆ
ಗಂಡುಗಲಿ ಹೊಱವಂಟನಬುಜಭ
ವಾಂಡಮಂಡಲ ಬಿರಿಯಲುಬ್ಬುವ ಸಿಂಹನಾದದಲಿ ೧೯

ಆರು ನೀನೆಲವೆಲವೊ ಬೆಟ್ಟವ
ನೇಱು ಮೃತ್ಯುವ ಕರೆವೆ ನೀ ಹೇ
ಳಾರ ಶಿಶುವನು ತಂದು ಬೀಸಾಡಿದೆ ಮಹಾಬ್ಧಿಯಲಿ
ವೀರ ನೀನೆಂತುಳಿದೆ ದೈವವ
ದಾರ ರಕ್ಷಿಸದೆಲವೊ ತಂದವ
ನಾರು ಹೇಳೆನೆ ತಿಂದ ಮತ್ಸ್ಯದ ಕೇಳು ಹೋಗೆಂದ ೨೦

ರಕ್ಷಿಸಲಿ ನೋಡುವೆನು ನಿನ್ನನು
ರಕ್ಷಿಸುವ ದೈವವನೆನುತ ರೋ
ಷಾಕ್ಷಿಬದ್ಧಭ್ರುಕುಟಿಭೀಷಣವದನನಬ್ಬರಿಸಿ
ಅಕ್ಷಯನ ಹೆಮ್ಮಗನ ದೃಢತರ
ವಕ್ಷವನು ತೆಗೆದಾರ್ದು ಗದೆಯಲಿ
ರಕ್ಷಿಸುವುದಿದೆ ಕೊಳ್ಳೆನುತ ತಿರುಹಿಟ್ಟನಮರಾರಿ ೨೧

ಏನ ಹೇಳುವೆ ಪಾಪಿ ದೈವವಿ
ಹೀನರಿಗೆ ಜಯವುಂಟೆ ದೈವಾ
ಧೀನವಲ್ಲಾ ಜೀವಜಾತ ಜಯಾಜಯಂಗಳಿವು
ನೀನೆ ಕಂಡೆಯಲಾ ದುರಾತ್ಮಕ
ಮೀನಜಠರದಲುಳಿದ ತನ್ನ ಸ
ಧಾನವನು ನೋಡೆನುತ ಗದೆಯಲಿ ಕೆಡವಿದನು ಗದೆಯ ೨೨

ಇಟ್ಟನಾತನು ಶೂಲದಲಿ ಕಡಿ
ದೊಟ್ಟಿದನು ಖಡುಗದಲಿ ಬಳಿಕೀ
ದುಷ್ಟಮರ್ದನನಮರರಿಪು ಬೆಱಗಾಗಿ ಕಡು ಮುಳಿದು
ಪಟ್ಟಸವನಸಿ ಮುಸಲ ಪರಶುಗ
ಳಿಟ್ಟ ಸಬಳವೆನಿಪ್ಪವನು ಮೊಗೆ
ದಿಟ್ಟಡನಿತುವನವರ ಬಳಿಯಲಿ ಕಳುಹಿದನು ಕಾಮ ೨೩

ತೀದವೇ ಕೈದುಗಳು ನೋಡಿ
ನ್ನಾದಡಿದೆಕೊಳ್ಳೆನುತ ಗದೆಯಲಿ
ಭೇದಿಸಿದನವನುರವನುರು ವಿಕ್ರಮನು ಕಡುಮುನಿದು
ಮೇದಿನಿಗೆ ಬೀಳುತ್ತ ಬೀಳು
ತ್ತಾ ದುರಾತ್ಮಕ ನಡಗಿ ನಿಂದನು
ಮೈದೆಗೆದು ಮಾಯೆಯಲಿ ಸಮರೋದ್ಯೋಗಮುಖನಾಗಿ ೨೪

ಸರಳ ಮಳೆಯನು ಕಱೆದನಖಿಳೇ
ಶ್ವರನು ಮಗನಲಿ ಧರೆ ನಡುಗಲಾ
ವರಿಸಿದುದು ಕೆಂಧೂಳಿ ಮುಸುಕಿತು ಕೂಡೆ ದೆಸೆದೆಸೆಗೆ
ಉರುಳಿದವು ಹೆಮ್ಮರಸಹಿತ ಕುಲ
ಗಿರಿಗಳಿದಿರಲಿ ನೂಕಿದವು ಸಾ
ಗರಗಳೇಳೊಂದಾಗಿ ಕತ್ತಲೆ ಕವಿದುದಾ ಕ್ಷಣಕೆ ೨೫

ಕೊಲ್ಲು ಕಡಿಸಿನ್ನೆನುತ ದೆಸೆಗಳು
ತಲ್ಲಣಿಸಲಾವರಿಸಿ ರಾಕ್ಷಸ
ಮಲ್ಲರುಱುಬಿದರುರುಭಯಂಕರ ವದನಭೀಷಣರು
ಭಲ್ಲೆಯದ ಸಬಳದ ಕಠಾರಿಯ
ದಳ್ಳುರಿಯನುಗುಳುವ ಮಹಾಸ್ತ್ರದ
ಘಲ್ಲಣೆಯ ಗಜಱಿನ ಮಹಾಭಟರೆಂಟು ದಿಕ್ಕಿನಲಿ ೨೬

ಬೀಸಿದುದು ಬಿರುಗಾಳಿ ಕಣ್ಣಲಿ
ಸೂಸಿದುದು ಮಣ್ಮಳಲನಭ್ರದ
ಬೀಸಿಗೆಯ ಬಲುಮಳೆಗಳಾದವು ಮಾಂಸಶೋಣಿತದ
ಘಾಸಿಯಾದನು ಹರಹರೆಂತಿದ
ನೀಸುವನೊ ಮಾಯಾಮಹಾವಾ
ರಾಸಿಯನು ಬಾಲಕನೆನುತ ಬಾಯ್ಬಿಟ್ಟುದಮರಗಣ ೨೭

ಜಲಧಿಯಲಿ ಬಿದ್ದವನು ಪುಣ್ಯದ
ಲುಳಿದನಿಂದೀ ದೈತ್ಯ ಮಾಯಾ
ಜಲಧಿಯಲಿ ಮುಳುಗಿದನಲಾ ಹಾಯೆನುತ ಜನ ಬೆದಱೆ
ಘಳಿಲನಾ ಪ್ರದ್ಯುಮ್ನನಾ ನಿಜ
ಲಲನೆ ಕಲಿಸಿದ ಸಕಲ ಮಾಯಾ
ಬಲವಿನಾಶನವಿದ್ಯೆಯನು ನೆನೆದನು ರಣಾಗ್ರದಲಿ ೨೮

ಇನನುದಯದೆಸೆವಂಧಕಾರದ
ಘನತೆಯೋ ಹರಿನಾಮ ಸಂಕೀ
ರ್ತನದಿದಿರ ಪಾತಕವೊ ತತ್ವಜ್ಞಾನ ಮನಃಕ್ಷತವೊ
ಮನುಮಥನ ಮಾಯಾವಿನಾಶನ
ವಿನುತ ವಿದ್ಯೆಯ ಮುಂದೆ ಮೆಱೆವಾ
ದನುಜಮಾಯೆಯೊ ಮಾಯೆನಲು ಬಯಲಾಯ್ತು ನಿಮಿಷದಲಿ ೨೯

ಫಡ ತೊಲಗು ತೊಲಗೆನುತ ಬಾಣದ
ಗಡಣದಲಿ ಮುಸುಕಿದನು ಮಾಯೆಯ
ಕೆಡಿಸಿದಡೆ ಕೆಡುವುದೆ ನಿಜೋನ್ನತ ಬಾಹುಬಲವೆನುತ
ತೊಡಕಿ ಕಾದುವ ಭಟನ ತಲೆಯನು
ಕಡಿದು ಬಿಸುಟನು ವೀರನಮರರು
ಕಡುಗಲಿಯ ಹೊಗಳುತ್ತ ಕಱೆದರು ಪುಷ್ಪವೃಷ್ಟಿಗಳ ೩೦

ಶಂಬರನ ತಲೆಗೊಂಡು ಬಳಿಕ ನಿ
ಜಾಂಬುಜಾನನೆ ಸಹಿತ ವಿಬುಧಕ
ದಂಬ ಕೈವಾರಿಸಲು ಜಯರವ ಪುಷ್ಪವೃಷ್ಟಿಯಲಿ
ಅಂಬುಜಾಕ್ಷನ ಕುವರನೈತಂ
ದಂಬರದ ಮಾರ್ಗದಲಿ ಮಿಂಚೆಸೆ
ವಂಬುದದವೋಲಿಳಿದನಂದಾ ದ್ವಾರಕಾಪುರಕೆ ೩೧

ಚಲದಳಕದೀಧಿತಿಯ ಮಣಿಕುಂ
ಡಲದ ತಾಂಡವದೆಸೆವ ಗಂಡ
ಸ್ಥಳದ ಚಾರುಲಲಾಟ ಕಾಂತಿವಿರಾಜಿತಾನನದ
ತೊಳಪ ರದನದ ಮೌಕ್ತಿಕದ ಮಂ
ಜುಳಮೃದುಸ್ಮಿತ ಮುದ್ರಿತಾಯತ
ನಳಿನದಳಲೋಚನದ ಚಲುವರ ದೇವನಿಳಿತಂದ ೩೨

ನೀಲಮೇಘನಿಭದ್ಯುತಿಯ ನಿಡು
ದೋಳುಗಳ ಕಂಕಣದ ವಿಪುಳವಿ
ಶಾಲವಕ್ಷಸ್ಥಳದ ಮುಕ್ತಾಹಾರ ಭೂಷಣದ
ಸ್ಥೂಲರತ್ನಾಂಗದ ಕಿರೀಟ ಗು
ಡಾಳಕಾಲಂಕೃತ ವದನನಾ
ಬಾಲೆ ಸಹಿತಿಳಿತಂದನಂದಾ ದ್ವಾರಕಾಪುರಿಗೆ ೩೩

ದೂರದಿಂದಂಬರದಲಿಳಿವಕು
ಮಾರನನು ದಿವ್ಯಾಂಗನೆಯನಾ
ದ್ವಾರಕಾಪುರವಾಸಿಗಳು ಕಾಣುತ್ತ ತವತವಗೆ
ಆರಿವನು ನೋಡಿತ್ತ ನಭದಲಿ
ನಾರಿಯೊಡನಿಳಿವವನು ರವಿಯೊ ಸ
ಮೀರಸಖನೋ ಚಂದ್ರನೋಯೆನುತಿರ್ದದಖಿಳಜನ ೩೪

ಈತನಾರಿವಳಾರು ಸತಿ ಸಾ
ಕ್ಷಾತು ಮುರಹರನಂಗಲಕ್ಷ್ಮಿಯೊ
ಜಾತಶೋಭೆಯ ಹೋಲುತಿದೆ ಸದಮಳನ ತನುಲಕ್ಷ್ಮಿ
ಈತನಲಿ ಸಂಭವಿಸಿತೆಂತಿದು
ಕೌತುಕವೆನುತ್ತಖಿಳ ಪುರಜನ
ಜಾತವೀಕ್ಷಿಸುತಿರ್ದುದಖಿಳ ಮನೋನುರಾಗದಲಿ ೩೫

ಕೆಲರು ಸಾಕ್ಷಾತ್‌ಕೃಷ್ಣನೆಂದೇ
ಕೆಲಕೆಲರು ಸಾರಿದರು ಸತಿಯರು
ಲಲನೆ ರುಕ್ಮಿಣಿದೇವಿ ಮಗನಾಗಮನವನು ಕಂಡು
ಹಳಹಳಿಸಿ ನೋಡುತ್ತಕೃಷ್ಣನ
ಚಲುವಮೂರ್ತಿಯ ಸಾಮ್ಯವೆಂತಿದು
ಸುಲಭವಾಯ್ತೀತಂಗೆನುತ ಬೆಱಗಾದಳಬುಜಾಕ್ಷಿ ೩೬

ನೆನೆದಳಂದು ವಿದರ್ಭನೃಪನಂ
ದನೆ ಮಹಾತ್ಮನ ಕಾಣುತವೆ ನಿಜ
ತನಯನನು ಸೂತಿಕಗೃಹಾಕಸ್ಮಿಕವಿನಷ್ಟನನು
ಇನಿತು ಹರೆಯದ ವೀರನಹನೆ
ನ್ನನುಪಮನು ಬದುಕಿರ್ದನಾದಡೆ
ಯೆನುತ ಕಂಬನಿದುಂಬಿದಳು ಸುಕುಮಾರಕನ ಕಂಡು ೩೭

ನೆರೆದು ಸತಿಯರು ನೋಡುತಿರೆ ಪಂ
ಕರುಹಮುಖಿ ಬೆಱಗಾಗಿ ಮೊಲೆಗಳು
ತೊರೆದು ಪುಳಕಿತಗಾತ್ರೆಯಾದಳು ಕಂಡು ಮನದೊಳಗೆ
ಹರುಷವನು ತಳೆದಬಲೆ ವಿಶ್ವಂ
ಭರನ ಸಾರೂಪ್ಯವನು ಹರಹರ
ಹರ ಮಹಾತ್ಮನು ತಳದನೆಂತೆಂದಳಲಿದಳು ತರಳೆ ೩೮

ಕೆತ್ತುತಿಱೆ ತನ್ನೆಡದ ತೋಳ್ಗಳು
ಚಿತ್ತದಲಿ ಸಂತೋಷ ತಳಿತಿದೆ
ನುತ್ತಿವನನೇಲಧಿಕತರ ಸಂಪ್ರೀತಿ ಬೆಳೆವುತಿದೆ
ಎತ್ತಣಿಂದೈತಂದ ತನ್ನಯ
ಹೆತ್ತಬಾಲಕನಾಗದಿರನೆಂ
ದತ್ಯಧಿಕ ಸಂಪ್ರೀತಿಯಲಿ ಮುಳುಗಾಡಿದಳು ತರಳೆ ೩೯

ಆರ ಮಗಳೇನಹಳು ಮತ್ತೀ
ನಾರಿ ನರಸತಿಯಲ್ಲ ನರನ
ಲ್ಲೀ ರುಚಿರಗುಣಮೂರ್ತಿ ತನ್ನ ಕುಮಾರನಲ್ಲದಡೆ
ಚಾರುಗಮನಸ್ವರಗಳಿವು ದೈ
ತ್ಯಾರಿಯನು ಹೋಲುವವೆನುತ ಕು
ಮಾರರತ್ನನ ನೋಡಿ ದಣಿಯಳು ಕಾಂತೆ ಕಂಗಳಲಿ ೪೦

ಇರಲಿರಲು ದೈತ್ಯಾರಿ ನಿಜಮಂ
ದಿರದೊಳಗೆ ವಸುದೇವದೇವಕಿ
ಯರು ಸಹಿತ ಯದು ವೃಷ್ಣಿವೀರನೃಪಾಲಕರು ಸಹಿತ
ಪರಮಋಷಿ ನಾರದನೊಡನೆ ನಗೆ
ವೆರಸಿ ಮಾತಾಡುತ್ತ ಸುರರಂ
ಬರದಲಾರಾಧಿಸಲು ಬಿಜಯಂಗೈದನಾಕ್ಷಣಕೆ ೪೧

ಅಱಿದು ದೈತ್ಯಾರಾತಿ ತಾನದ
ನಱಿಯದವನಂದದಲಿ ಕುಳ್ಳಿರ
ಲಱುಹಿದನು ನಾರದನು ಬಳಿಕ ಕುಮಾರನುದುಭವವ
ಅಱಿತು ಶಂಬರನೊಯ್ದುದನು ಬೇ
ಸಱದೆ ಮತ್ತವ ಕೊಂಡು ಬಂದುದ
ನಱಿವವೋಲ್ವಿಸ್ತರಿಸಿದನು ವೃತ್ತಾಂತಸಂಗತಿಯ ೪೨

ಕೇಳುತವೆ ವಸುದೇವನೊಡಲಲಿ
ತೂಳಿದುದು ಸಂತೋಷ ದೇವಕಿ
ಯಾಲಿಗಳು ನೀರೇಱಿದವು ರುಕ್ಮಿಣಿಯ ಮನದಳಲು
ಹೂಳಿದುದು ಹುರಿಗೊಂಡುದುರು ರೋ
ಮಾಳಿ ರಾಮಾಚ್ಯುತರಿಗದನೇ
ವೇಳುವೆನು ಸಂಭ್ರಮಿಸುತಿರ್ದುದು ಸಕಲಜನನಿವಹ ೪೩

ಎತ್ತಿ ತೊಡೆಯಲಿ ಕುಳ್ಳಿರಿಸಿಕೊಂ
ಡುತ್ತಮಾಂಗನೆ ತೊರೆದ ಮೊಲೆಗಳ
ಲೊತ್ತಿ ತಕ್ಕೈಸಿದಳು ಸುರಿವಾನಂದಬಾಷ್ಪದಲಿ
ನೆತ್ತಿಯನು ನಾದಿದಳು ತನು ಪುಳ
ಕೋತ್ಕರದ ಪರವಶತೆಯಲಿ ನೆನೆ
ದತ್ತಳಬಲೆ ಕುಮಾರನಾಯಾಸದ ಪರಂಪರೆಗೆ ೪೪

ಅಪ್ಪಿದರು ತವತವಗೆ ತೆಗೆದಾ
ದರ್ಪಕನನಡಿಗಡಿಗೆ ಬಾಂಧವ
ರುಪ್ಪರದ ಹರುಷಾಶ್ರುಪುಳಕಾಲಂಕೃತಾಂಗದಲಿ
ಒಪ್ಪಿಸಿತೆ ವಿಧಿ ಹಗೆಗೆ ಮಗುಳದ
ತಪ್ಪಿಸಿತೆ ಹರಹರಯೆನುತ ಜನ
ವೊಪ್ಪುತಿರ್ದುದು ಕಂಗಳಲಿ ಕೈಗಳಲಿ ಬಾಲಕನ ೪೫

ಹೊಂದಿದಂದಿನ ರುಕ್ಮಿಣೀಯನು
ಬಂದ ಗಡ ನೋಡುವೆವೆನುತ ಜನ
ವೃಂದವಾ ಪುರವಾಸಿ ವೃದ್ಧರು ಬಾಲವನಿತೆಯರು
ಸಂದಣಿಸಿ ನಡೆತಂದುದಧಿಕಾ
ನಂದದಲಿ ಕಂದರ್ಪನಾಕೃತಿ
ಯಂದವನು ನಡೆನೋಡುತಿರ್ದುದು ಬಿಗಿದ ಬೆಱಗಿನಲಿ ೪೬

ಏನನೆಂಬೆನು ಪುರಜನದ ಸು
ಮ್ಮಾನವನು ಸಂತಸದ ಬಹಳಾಂ
ಬೋನಿಧಿಯಲೋಲಾಡುತಿರ್ದುದು ಕಂಡು ರುಕುಮಿಣಿಯ
ಸೂನುವನು ಯದುಕುಲಕುಶೇಶಯ
ಭಾನುವನು ನಡೆ ನೋಡಿ ನಿತ್ಯಾ
ತ್ಮಾನುಭಾವದ ಮಹಿಮೆಗಚ್ಚರಿವಟ್ಟುದಖಿಳಜನ ೪೭

ಅರವತ್ತಾರನೆಯ ಸಂಧಿ ಮುಗಿಯಿತು.

# ಅರವತ್ತೇಳನೆಯ ಸಂಧಿ

ಹೊತ್ತ ದುರಿತವ ಪರಿಹರಿಸಲೆಂ
ದಿತ್ತನಾ ಸತ್ರಾಜಿತಾಖ್ಯನು
ಸತ್ಯಭಾಮಾದೇವಿಯನು ನಿತ್ಯಾತ್ಮಕಂಗೊಲಿದು

ಅರಸ ಕೇಳಾ ದ್ವಾರಕಾಪುರ
ವರದಲಾ ಸತ್ರಾಜಿತಾಖ್ಯನು
ತರಣಿಯನು ಭಜಿಸಿದನು ತತ್ವದ ಭಾವಭಕುತಿಯಲಿ
ಕರುಣಿಸಿದನಾತಂಗೆ ರತ್ನವ
ನಿರದೆ ನಿಜಭಕ್ತಂಗೆ ಬಳಿಕಾ
ಪರಮಗುಣನಿಧಿ ಬಂದನಂದಾ ದ್ವಾರಕಾಪುರಕೆ ೧

ತರಣಿ ತನಗಿತ್ತಮಳ ರತ್ನವ
ಧರಿಸಿ ಕೊರಳಲಿ ಬಂದನಂದಂ
ಬುರುಹಮಿತ್ರನ ಭಕ್ತನಾ ಸತ್ರಾಜಿತನು ಪುರಕೆ
ಬರುತಿರಲು ಪುರವಾಸಿಜನ ಕಂ
ಡಿರದೆ ನೋಡುವೆವೆನುತ ಹರಿತಂ
ದೊರೆದು ಬಿನ್ನಹ ಮಾಡಿದರು ಕೃಷ್ಣಂಗೆ ಕೈಮುಗಿದು ೨

ಕೃಷ್ಣ ಜಯ ಸಾಂಖ್ಯೋಪಲಾಲಿತ
ಕೃಷ್ಣ ಜಯ ನೀಲೋತ್ಪಲದ್ಯುತಿ
ಕೃಷ್ಣ ಜಯ ನಿಜಭಕ್ತದುರಿತಧ್ವಾಂತನಾಶ ಜಯ
ವೃಷ್ಣಿವರ ಜಯ ನತವಿಪದ್ವನ
ಕೃಷ್ಣವರ್ತ್ಮನೆ ವಿಷ್ಣುವೇ ಪ್ರಭ
ವಿಷ್ಣುವೇ ಜಯಯೆನುತ ಬಿನ್ನಹ ಮಾಡಿದರು ಹದನ ೩

ದೇವದೇವನ ಚರಣಕಮಲ ಯು
ಗಾವಲೋಕನಕಿಂದಿದಿರೆ ರಾ
ಜೀವಸಖನೀ ಬಂದನೀಕ್ಷಿಸುವವರ ದೃಷ್ಟಿಗಳು
ಸೀವುತಿವೆ ರಕ್ಷಿಸುವುದಧಿಕಕೃ
ಪಾವಲೋಕನದಿಂದೆನಲು ರಾ
ಜೀವನಾಭನು ನೋಡಿ ನಗುತಿಂತೆಂದನವರೊಡನೆ ೪

ಕಂಜಸಖನಲ್ಲಲ್ಲ ಬಾಲಕ
ರಂಜದಿರಿ ಬೆದಱದಿರಿ ಬಱಿದೇ
ಗುಂಜಿ ಮಾಣಿಕವೆಂಬ ಮರುಳುಗಳಂತೆ ಮತಿಗೆಟ್ಟು
ಅಂಜದಿರಿ ಸತ್ರಾಜಿತನು ವರ
ಕಂಜಸಖನಿತ್ತಮಳ ರತ್ನಸು
ರಂಜಿತನು ಬರುತೈದನೆಂದನು ನಗುತ ಮುರವೈರಿ ೫

ಎನುತಿರಲು ಜನನಿಕರ ತನ್ನಯ
ಮನೆಯ ಹೊಕ್ಕನು ಮಣಿಧರನು ಸಂ
ಜನಿಸಿದನು ಧನವಂತನಾದನು ಪೂಜಿಸುತ್ತಿರಲು
ದಿನದಿನದಲೆಂಟೆಂಟು ಭಾರದ
ಕನಕವನು ಮಣಿ ಕೊಡುವುದದಱೊಳು
ಜನಿಸದಾಧಿ ವ್ಯಾಧಿ ದುರ್ಭಿಕ್ಷಾದಿ ಭಯವೆಂದ ೬

ಒಂದು ದಿನ ತದ್ರತ್ನವನು ಗೋ
ವಿಂದನಾ ಸತ್ರಾಜಿತನ ಕರೆ
ದೆಂದನೀವುದು ಯದುನೃಪಾಲಂಗೆಂದಡೆಯು ಕೊಡದೆ
ಮಂದಮತಿ ಧನಲೋಭದಲಿ ನಿಜ
ಮಂದಿರದಲೇ ಪೂಜಿಸುತ್ತ ಮು
ಕುಂದನಾಜ್ಞೆಯ ಮೀಱಿ ಲೆಕ್ಕಿಸದಿರ್ದನುಬ್ಬಿನಲಿ ೭

ಇರಲು ಸತ್ರಾಜಿತನ ತಮ್ಮನು
ಧರಿಸಿ ಮಣಿಯನು ಹೋದನಡವಿಗೆ
ತುರಗದಲಿ ಮೃಗಯಾವಿಹಾರ ವಿನೋದದಿಂದಿರಲು
ಕೆರಳಿ ಕೊಂದುದು ಸಿಂಹವಾ ಕೇ
ಸರಿಯ ಕೊಂದನು ಜಾಂಬವನು ಬಳಿ
ಕರಸ ಕೇಳಾ ಮಣಿಸಹಿತ ಹೊಕ್ಕನು ಮಹಾಬಿಲವ ೮

ಅತ್ತಲಱಸಿದರಾ ಪ್ರಸೇನನ
ತೆತ್ತಿಗರು ಸತ್ರಾಜಿತಾದ್ಯರು
ಸತ್ತ ತಮ್ಮನ ಕಂಡು ಕೃಷ್ಣನ ಮೇಲೆ ಶಂಕಿಸಲು
ಅತ್ತಲಾ ವಾರ್ತೆಯನು ನಿರ್ಮಳ
ಮೂರ್ತಿ ಕೇಳಿದು ತನ್ನ ಮೇಲಣ
ಹೊತ್ತ ವಿಲಗವ ಕಳೆಯಲಸುರಾಂತಕನು ಹೊಱವಂಟ ೯

ಅಱಸಿ ಮುರಹರನಾ ಪ್ರಸೇನನ
ಮರಣ ಸಿಂಹದಲಾದುದನು ಕಂ
ಡಿರದೆ ಬೆಂಬತ್ತಿದನು ಸಿಂಹದ ಹೆಜ್ಜೆಯನು ಬಿಡದೆ
ಉರವಣಿಸಿ ಸಿಂಹವದು ವಿಪಿನಾಂ
ತರದಲಡಗೆಡೆದಿರಲು ಕಂಡನು
ಕರಡಿಯುಗುರಿನ ಘಾಯದಲಿ ಬೆಱಗಾದನಸುರಾರಿ ೧೦

ಸಿಂಹವನು ಕೊಲುವಂಥ ಕರಡಿಯ
ಸಿಂಹವಿಕ್ರಮವೆಂತೆನುತ ನರ
ಸಿಂಹನೈದಿದನದಱ ಹೆಜ್ಜೆಗೆ ಹೆಜ್ಜೆಯನು ಸಲಿಸಿ
ಗಂಹರವನಪವಾದ ಶಿಖಿದಂ
ದಹ್ಯಮಾನಾಂತರವ ಹೊಕ್ಕನ
ಸಹ್ಯ ತಾಪತ್ರಯ ವಿದೂರನು ಋಕ್ಷಪನ ಬಿಲವ ೧೧

ನಿಲಿಸಿ ನಿಜ ಪರಿವಾರವನು ಬಾ
ಗಿಲಲಿ ದಿನ ಹನ್ನೆರಡನೀಕ್ಷಿಸಿ
ತೊಲಗುವುದು ನೀವೆನುತ ತದೃಕ್ಷಾಧಿಪನ ಬಿಲವ
ಜಲಜನಾಭನು ಹೊಕ್ಕು ಬಲುಗ
ತ್ತಲೆಯ ಮಾರ್ಗವ ಕಳಿದು ಕಂಡನು
ಲಲಿತ ರತ್ನವನರ್ಭಕನು ಕೊಂಡಾಡುತಿರಲಲ್ಲಿ ೧೨

ನಿಂದನವನ ಸಮೀಪದಲಿ ಗೋ
ವಿಂದನಾ ರತ್ನಾಭಿಲಾಷೆಗೆ
ಸಂದು ಸುಳಿವುತ್ತಿರಲು ಕಂಡಾ ಧಾತ್ರಿ ಮುರಹರನ
ಬಂದನಾರಿವನೆನುತ ವೊಱೆಯಿಡ
ಲಂದದನು ನೆಱೆ ಕೇಳುತವೆ ಹರಿ
ತಂದನಾ ಋಕ್ಷಾಧಿಪತಿ ಜಾಂಬವನು ಕಡುಮುನಿದು ೧೩

ಅಱಿಯದಾತ್ಮ ಸ್ವಾಮಿಯೆಂಬುದ
ನೆಱೆ ವಿಚಾರ ವಿಹೀನನಾಗಿಯೆ
ತಱುಬಿ ಕಾದಿದನಾಯುಧಂಗಳಲಸ್ತ್ರಶಸ್ತ್ರದಲಿ
ಮುಱಿದು ತರುನಿಕರಂಗಳಲಿ ಹಾ
ಸಱೆಗಳಲಿ ತೋಳ್ಗಳಲಿ ಬಿಡದ
ಬ್ಬರಿಸಿ ಕಾದಿದರೊಬ್ಬರೊಬ್ಬರ ಜಱೆದು ಮೂದಲಿಸಿ ೧೪

ಮುಷ್ಟಿಯುದ್ಧವ ಮಾಡುತಿರಲಂ
ದಷ್ಟವಿಂಶತಿ ದಿವಸ ಪರಿಯಂ
ತಿಷ್ಟಭಕ್ತನ ಕೂಡೆ ಲೀಲೆಯಲಾಡುವಂದದಲಿ
ನಷ್ಟವಾದುದು ಸತ್ವವಾತನ
ರಿಷ್ಟವೈರಿಯ ಕರಹತಿಗೆ ನಿ
ಷ್ಪಿಷ್ಟಗಾತ್ರನು ಜಾಂಬವಂತನು ಬಳಲುತಿಂತೆಂದ ೧೫

ಆರು ನೀನೆಲೆ ವೀರ ಜೀವರ
ಭೂರಿ ಸತ್ವಾತ್ಮಕನೊ ಕೌಸ್ತುಭ
ಧಾರಿಯೋ ಶಂಕರನೊ ಮೇಣ್ಸರಸೀರುಹೋದ್ಭವನೊ
ಆರು ತನ್ನೊಡನಕಟ ಕಾದುವ
ವೀರರೀಯುಗದೊಳಗೆ ವಿಸ್ಮಯ
ಕಾರಿಯಾದೆಯಲಾ ಯೆನುತ ನೋಡಿದನು ಮನದೊಳಗೆ ೧೬

ಮತ್ತೆ ಹರಿ ಕರುಣಿಸಲು ಕಂಡನು
ಚಿತ್ತದಲಿ ರಘುನಾಥನೆಂಬುದ
ನತ್ಯಧಿಕ ಭಕುತಿಯಲಿ ಮೈಯಿಕ್ಕಿದನು ಚರಣದಲಿ
ಸತ್ಯಸಂಧನೆ ತನಗೆ ಮಱವೆಯ
ನಿತ್ತಿನಿತು ದಿನ ಕಾಡಿದೆಯೆನು
ತ್ತತ್ತನಾ ಜಾಂಬವನು ಕೃಷ್ಣನ ಕಾಲ್ಗಳನು ಹಿಡಿದು ೧೭

ಏಳೆನುತ ನೆಗಹಿದನು ಪರಮು ಕೃ
ಪಾಳು ತಕ್ಕೈಸಿದನು ಭಕುತನ
ಮೌಳಿಯನು ತನ್ನೆರಡು ಕರತಳದಿಂದ ವೈದಡವಿ
ಹೇಳಿದನು ಕಾರ್ಯವನು ತನ್ನಯ
ಮೇಲೆ ಮಣಿಕೃತದೋಷವನು ಜನ
ಜಾಲವಾವಿರ್ಭವಿಸಿದುದನಾ ಜಾಂಬವಂತಂಗೆ ೧೮

ಇತ್ತನಾತನು ಬಳಿಕ ತನ್ನಯ
ಪುತ್ರಿಯನು ಜಾಂಬವತಿಯೆಂಬಳ
ನತ್ಯಧಿಕ ಗುಣರೂಪಸಂಪನ್ನೆಯನು ಮಣಿಸಹಿತ
ಮತ್ತೆ ಬಹುವಿಧ ವಸ್ತುಗಳನೊಲಿ
ದಿತ್ತು ಪೂಜಿಸಿದನು ಪರಾತ್ಪರ
ವಸ್ತುವನು ವೇದಾಂತವಿಶ್ರುತ ಕೀರ್ತಿಯನು ನಲಿದು ೧೯

ಇತ್ತಲೀ ಪರಿ ಹಲವು ದಿನ ಸಂ
ವೃತ್ತವಾಗಲು ಬಳಿಕ ಬಿಲಮುಖ
ದತ್ತ ಬಂದುದು ಸಕಲ ಬಾಂಧವಭೃತ್ಯವೀ ಜನಕೆ
ಚಿತ್ತದಂತಸ್ತಾಪ ಭಯ ಶೋ
ಕೋತ್ತರದ ದುಮ್ಮಾನದಲಿ ಪುರ
ದತ್ತಲೈದಿದರಿತ್ತ ದಿನದವಧಿಯನು ನೆಱೆ ನೋಡಿ ೨೦

ಕೇಳಿ ವಸುದೇವಾದಿ ಯಾದವ
ಜಾಲವಾ ದೇವಕಿಯ ಸಹಿತವರ
ಬಾಲೆಯರು ಬಸವಳಿದು ಕೃಷ್ಣವಿನಾಶ ದುಃಖದಲಿ
ಜ್ವಾಲೆಯೊಳು ನಿಂದಂತೆ ಶೋಕ
ವ್ಯಾಳವಿಷಮೂರ್ಛಿತರು ಹೊಕ್ಕರು
ಶೈಲನಂದನೆಯಂಘ್ರಿಕಮಲದ ಮಱೆಯಲಖಿಳಜನ ೨೧

ತಾಯೆ ಕುರುಣಿಸು ತನಗೊಲಿದು ನಾ
ರಾಯಣನ ಜೀವವನು ರಕ್ಷಿಸು
ಮಾಯೆ ಭುವನಾಧಾರೆ ಶೋಕ ಭಯಾಭಿತಪ್ತರನು
ಕಾಯಬಲ್ಲವರಾರು ನಿನ್ನಂ
ತೀ ಯಶೇಷ ಸುರಾವಳಿಯೊಳೆಂ
ದಾ ಯುವತಿಜನ ವೃದ್ಧಜನ ಮಱವೊಕ್ಕುದಂಬಿಕೆಯ ೨೨

ಅಂಬಿಕೆಯನಿಂತಖಿಳ ಪೌರಕ
ದಂಬವಾರಾಧಿಸಲು ತತ್ಫಲ
ವಿಂಬಿನಲಿ ತೋರ್ಪಂತೆ ಬಿಲವಾಸವನು ಹೊಱವಂಟು
ನಂಬಬಲ್ಲಡೆ ದೈವವನು ಜಯ
ನೆಂಬವೊಲಸುರಾರಿ ಬಂದನು
ಜಾಂಬವತಿ ಸಹಿತಾ ಕುಶಸ್ಥಲಿಗಧಿಕ ಹರುಷದಲಿ ೨೩

ರತ್ನವರವನು ಕೊಂಡು ಕನ್ಯಾ
ರತ್ನ ಸಹಿತಾನಂದದಲಿ ವರ
ರತ್ನಮೂರುತಿ ಪುರಕೆ ಬಿಜಯಂಗೈಯುತಿರೆ ಕಂಡು
ಯತ್ನದಲಿ ಪುರವಾಸಿಜನ ನವ
ರತ್ನ ಮಣಿತೋರಣಗಳೆಸೆಯಲು
ನೂತ್ನವೆನೆ ನಡೆದಿದಿರುಗೊಂಡರು ವಿದಿತ ವಿಭವದಲಿ ೨೪

ಹೋದ ಜೀವವ ಪಡೆದೆವೆನುತ
ತ್ಯಾದರದಲಂದಖಿಳಜನ ಹರು
ಷೋದಧಿಯಲೋಲಾಡುತಿರ್ದುದು ಸಕಲಬಂಧುಜನ
ಮೇದಿನೀಪತಿ ಕೇಳು ವಸುದೇ
ವಾದಿಗಳು ತಂತಮಗೆ ಹರಿತಂ
ದಾದಿಮೂರ್ತಿಯನಪ್ಪಿ ಮಱೆದರು ಲೋಕವಿಭ್ರಮವ ೨೫

ಕರೆದು ಸತ್ರಾಜಿತನನಾ ಮುರ
ಹರನು ಸಭೆಯಲಿ ನೆರೆದ ಪೃಥ್ವೀ
ಶ್ವರರ ಬಾಂಧವನಿಕರದೊಡ್ಡೋಲಗದ ಮಧ್ಯದಲಿ
ಹರುಷವಿಗಲಂದಾ ಸ್ಯಮಂತಕ
ವರ ಮಹಾರತ್ನವನು ಕೊಟ್ಟನು
ಪರಮಧಾರ್ಮಿಕನೆನುತ ಕರುಣಾವನಧಿ ಕೈ ನೆಗಹಿ ೨೬

ಬಱದೆ ಹೇಳಿದೆನಕಟ ಲೋಕ
ಕ್ಕುಱುವದೈವದ ಮೇಲೆ ದೋಷವ
ನಱಿಯದಜ್ಞಾನಿಗಳದಾರೆನ್ನಂತೆ ಭುವನದಲಿ
ಕೊಱತೆ ಹೊತ್ತುದು ತನ್ನ ಮೇಲೆನು
ತೆಱಗಿ ಲಜ್ಜಾಭಾರದಲಿ ಕೈ
ಮಱೆಯ ಮೊಗದಲಿ ಕೊಂಡನಾ ಸತ್ರಾಜಿತನು ಮಣಿಯ ೨೭

ತನತನಗೆ ಜನನಿವಹ ಬಳಿಕಾ
ತನನು ಬೈದುದು ಬಱದೆ ತ್ರಿಜಗ
ಜ್ಜನಕನಲಿ ದೋಷವನು ಚಾಚಿದೆ ಪಾಪಿ ನೀನೆನುತ
ಜನರ ಪರಿವಾದವನು ಕೃಷ್ಣನ
ಮುನಕತನನಾಲಿಸುತ ತನ್ನನು
ವಿನಯಹೀನನು ಬೈದುಕೊಂಡನು ಮಾಡಿದವಮತಿಗೆ ೨೮

ಕಂದು ಕಸರಿಕೆ ಹೋಗಬೇಕು ಮು
ಕುಂದನಲಿ ತನಗೆಂದು ತನ್ನಯ
ನಂದನೆಯನಾ ಸತ್ಯಭಾಮಾದೇವಿಯೆಂಬಳನು
ತಂದು ಕೊಟ್ಟನು ರತ್ನಸಹಿತಾ
ನಂದಮೂರುತಿಗೊಲಿದು ಕೊಡಲಿಂ
ತೆಂದನಸುರಾರಾತಿ ಕನ್ಯಾರತ್ನವನು ಕೊಂಡು ೨೯

ಇರಲಿ ಮಣಿ ನಿನ್ನಲ್ಲಿ ದಿವಸೇ
ಶ್ವರನ ಭಕ್ತನಲೆನುತ ಕೊಟ್ಟನು
ವರ ಮಣಿಯನಾತಂಗೆ ಫಲಭೋಗಿಗಳು ನಾವೆನುತ
ಮರಳಿದನು ಬಳಕವನು ನಿಜಮಂ
ದಿರಕೆ ಬಂದುದು ವಾರ್ತೆ ಕೃಷ್ಣನ
ಹೊರೆಗೆ ಕೌರವಭವನದಾಹವಿಪನ್ನ ಪಾಂಡವರ ೩೦

ಶೌರಿ ಬಿಜಯಂಗೈದನತ್ತಲು
ಕೌರವನ ಪಟ್ಟಣಕೆ ಸಾತ್ಯಕಿ
ಸೀರಧರನೊಡಗೂಡಿ ಬಾಂಧವವಿಹಿತಹತ್ಯದಲಿ
ದ್ವಾರಕೆಯಲೀ ಹೃದಿಕತನಯಾ
ಕ್ರೂರರಿರೆ ಶತಧನ್ವನೊಡನೆ ವಿ
ಚಾರಿಸುತ್ತಾ ಮಣಿಯ ಕೊಡಬೇಡೆಂದನುರೆ ಜಱೆದು ೩೧

ಕನ್ನಿಕೆಯ ನಿನಗೀವೆನೆಂದು
ತ್ಪನ್ನವಿಶ್ವಾಸದಲಿ ನಂಬಿಸಿ
ಮನ್ನಿಸದೆ ಕೃಷ್ಣಂಗೆ ಕೊಟ್ಟನಲೈ ಮಹಾ ಸತಿಯ
ತನ್ನ ತಮ್ಮನ ಗತಿಗೆ ದುರ್ಮತಿ
ನನ್ನಿಗಮಿಸುವುದೆಂದೆನುತ ಸಂ
ಭಿನ್ನಮತಿ ಸತ್ರಾಜಿತನ ವಧಿಸಿದನು ರಾತ್ರಿಯಲಿ ೩೨

ಕೊಂದು ಮಣಿಯನು ಕೊಂಡು ಗೋಳಿಡು
ವಿಂದುಮುಖಿಯರ ಬೈದು ಹಾಯ್ದನು
ಮಂದಿರಕೆ ಶತಧನ್ವನತ್ತಲು ಕೇಳಿ ಪಿತೃವಧೆಯ
ಕೊಂದವನ ಕೊಂವಲ್ಲದೈಯಂ
ಗೊಂದುವನು ಮಾಡದಿರೆನುತ್ತ ಮು
ಕುಂದನರ್ಥಶರೀರೆ ಹೋದಳು ಹಸ್ತಿನಾಪುರಕೆ ೩೩

ಕೇಳಿದಾಗಡೆ ಮರಳಿದನು ಭೂ
ಪಾಲರನು ಬೀಳ್ಕೊಟ್ಟು ಲಕ್ಷ್ಮೀ
ಲೋಲನಿರದೈತಂದನಾ ದ್ವಾರಕಾಪುರಕೆ
ಕೇಳಿ ಶತಧನ್ವನು ಮುಕುಂದನ
ಭಾಳರೋಷಾಗಮನವಾರ್ತೆಯ
ಹೇಳಿದನು ಮತಿಗೆಟ್ಟು ಭಯದಲಿ ಗಾಂದಿನೀಸುತಗೆ ೩೪

ಸಮರಸಾಹಾಯ್ಯವನು ಬೇಡಿದ
ಡಮಳಮತಿ ಶಿವಶಿವ ಯೆನುತ ಸಂ
ಗಮಿತ ಕರ್ಣಕರಾಗ್ರದಲಿ ಶತಧನ್ವನನು ಬೈದು
ಅಮಿತ ನಿಜಮಾಯಾವಿಳಾಸಾ
ಕ್ರಮಿತ ಭುವನನನನ್ಯಯನ ವಿ
ಕ್ರಮನ ತೊಡರುವ ತೋಟ ತನಗೇಕೆಂದನಕ್ರೂರ ೩೫

ಎಱಗಿದನು ಗಡ ಸಕಲ ಭುವನೇ
ಶ್ವರನದಾವನಪದಕೆ ಕಾಣವು
ನಿಱುಗೆಯನು ವೇದಾಂತಕೋಟಿಗಳಾವನಂಘ್ರಿಗಳ
ಮಱೆಯ ಹೊಗುವಳು ಮಾಯೆ ಭೂಮಿಯ
ಹೊಱೆಯ ಕಳೆಯಲು ಜನಿಸಿದೀ ಧರೆ
ಗುಱುವ ದೈವದ ದೈವ ಕೃಷ್ಣನೊಳು ಕದನ ಬೇಡೆಂದ ೩೬

ಹಸುಳೆತನದಲಿ ಘೋರ ರಾಕ್ಷಸಿ
ಯಸುವ ಕೊಳ್ಳನೆ ಹೆಮ್ಮರಂಗಳ
ವಸುಧೆ ನಡುಗಲು ಕಿತ್ತು ಕೆಡಹನೆ ಬಾಲಕೇಳಿಯಲಿ
ವಿಷಧರೇಂದ್ರನನುದಧಿಗಿಡುಕನೆ
ವೃಷಭ ಧೇನುಕ ವತ್ಸ ಬಕರೆಂ
ಬಸುರರನು ಕೊಂದವನ ಕೂಡಣ ಕಲಹ ಬೇಡೆಂದ ೩೭

ಏಳು ವರುಷದ ಬಾಲಕನು ತಾ
ನೇಳುದಿನ ಪರಿಯಂತ ಧರಿಸನೆ
ಲೀಲೆಯಲಿ ಗೋವರ್ಧನಾಚಲವನು ಕರಾಗ್ರದಲಿ
ಮೇಲೆ ಮಾಗಧ ಯವನ ಸಾಲ್ವನೃ
ಪಾಲರನು ಸದೆದಾ ಮಹಾತ್ಮನ
ಹೇಳನವ ನೆನೆವರೆ ಮಹಾ ಪಾತಕಿಯೆ ಹೋಗೆಂದ ೩೮

ಎಂದಡಾ ಕೃತವರ್ಮನಲ್ಲಿಗೆ
ಬಂದು ಸಮರಸಹಾಯವನು ಗೋ
ವಿಂದನೊಡನರ್ಥಿಸಲು ಮಗುಳಕ್ರೂರನೆಂದಂತೆ
ಎಂದು ಜಱೆದು ನಿರಾಕರಿಸಿ ಬಿಡ
ಲಂದು ಜೀವವಿನಾಶಭಯದಲಿ
ಮುಂದುಗೆಟ್ಟೋಡಿದನು ಕಳವಳಿಸಿದನು ಶತಧನ್ವ ೩೯

ಆ ಸಮಯದಲಿ ಯಾಜ್ಞಸೇನ ಮ
ಹೀಶನಟ್ಟಿದ ದೂತರಾ ಲ
ಕ್ಷ್ಮೀಶನನು ಕರೆದರು ನೃಪಾತ್ಮಜೆಯ ಸ್ವಯಂವರಕೆ
ವಾಸುದೇವಾನಂತರಾ ನೃಪ
ದೇಶವನು ಗಮಿಸಿದರು ಕಂಡರು
ಭಾಸುರಪ್ರಭರೆನಿಪ ಪಾಂಡುನೃಪಾಲನಂದನರ ೪೦

ಅವನಿಸುರವೇಷದಲಿರಲು ಪಾಂ
ಡವರನಾ ಪಾಂಚಾಲದೇಶ
ಪ್ರವರದಲಿ ಜಿತಲಕ್ಷಲಬ್ಧಮನೋರಥರನಂದು
ದಿವಿಜನುತನಾ ಕುಂಭಗಾಱರ
ಭವನದಲಿ ತಾಯಿಸಹಿತಿರಲು
ತ್ಸವದಲಪ್ಪಿದನನಿಬರನು ಸುಪ್ರೇಮ ಪುಳಕದಲಿ ೪೧

ಅಂದೆ ಕಳುಹಿಸಿಕೊಂಡು ಕುಂತೀ
ನಂದನರನಲ್ಲಿಂದ ದೇವ ಮು
ಕುಂದನಾ ನಿಜಸತಿಯು ತಂದೆಯ ಕೊಂದವನ ಕೊಲುವ
ಒಂದು ಮನದುತ್ಸಾಹದಲಿ ಬರ
ಲಂದದನು ಕೇಳುತ್ತ ಭಯದಲಿ
ಮಂದಮತಿ ಶತಧನ್ವನೊಳಕೊಂಡನು ಪಲಾಯನವ ೪೨

ಮರಣಭಯ ಸಂತ್ರಾಸದಿಂದಾ
ದುರುಳನಕ್ರೂರನಲಿ ರತ್ನವ
ನಿರಿಸಿ ಹಾಯ್ದನು ನೂಱುಯೋಜನ ದಿನದಿನಕೆ ನಡೆವ
ತುರಗದಲಿ ಬಲವದ್ವಿರೋಧಾ
ತುರನು ದೇಶಾಂತರಕೆ ಬಳಿಕಾ
ಹರಿಬಲರು ಬೆಂಬತ್ತಿದರು ರಥದಲಿ ದುರಾತ್ಮಕನ ೪೩

ತುಟ್ಟಿಸಿದುದಾ ತುರಗ ಹರಿಬಲ
ರಟ್ಟಿಬರೆ ಮಿಥಿಲೋಪವನದಲಿ
ಬಿಟ್ಟು ಮೃತತುರಗವನು ಕಾಲಾಳಾಗಿ ಭೀತಿಯಲಿ
ಬಟ್ಟುಕೊಂಡನು ಮುಂದೆ ಮುರರಿಪು
ದುಷ್ಟನನು ಬೆಂಬತ್ತಲೇಕೆನು
ತಿಟ್ಟು ಕೆಡಹಿದನವನ ತಲೆಯನು ಚಕ್ರದಲಿ ಮುನಿದು ೪೪

ದನುಜರಿಪು ರತ್ನವನು ಶತಧ
ನ್ವನಲಿ ಕಾಣದೆ ರಾಮನೊಡನೆಂ
ದನು ವೃಥಾ ವಧೆಯಾಯ್ತುಲಾ ಕೊಂಡವರು ಬೇಱದನು
ಎನಲು ಶಂಕಿಸಿ ರಾಮ ಮೈಥಿಲ
ಜನಪನನು ತಾ ಕಂಡು ಬಹೆ ನೀ
ಮನೆಗೆ ನಡೆಯೆಂದೆನುತ ಹೊಕ್ಕನು ಮಿಥಿಲನೃಪಪುರವ ೪೫

ಆ ಹಲಾಯುಧ ಬರಲು ಬಹಳೋ
ತ್ಸಾಹದಲಿ ಬಂದಿದಿರುಗೊಂಡು ವಿ
ದೇಹನೃಪನುಪಚರಿಸಿದನು ನಿಜಗೃಹದಲುಚಿತದಲಿ
ಸಾಹಸಿಕ ಧೃತರಾಷ್ಟ್ರಸುತನಾ
ಬಾಹುಬಲಯುತನಲಿ ಗದಾಭ್ಯಾ
ಸಾಹಿತಾಂಗದ ವಿದ್ಯೆಯನು ಕಲಿತನು ಸರಾಗದಲಿ ೪೬

ಅತ್ತಲಾ ಶತಧನ್ವನನು ಬೆಂ
ಬತ್ತಿ ಕೊಂದು ಸರೋಷದಲಿ ಪುರು
ಷೋತ್ತಮನು ಬರುತಿರಲು ತದ್ವಾರ್ತೆಯನು ನೆಱೆ ಕೇಳಿ
ಮೃತ್ಯುಭಯದಲಿ ಹಾಯ್ದರಾತನ
ಕಿತ್ತಿಗರು ಕೃತವರ್ಮ ಗಾಂದಿನಿ
ಪುತ್ರರಾ ದ್ವಾರಾವತಿಯ ಹೊಱವಂಟು ವಹಿಲದಲಿ ೪೭

ಸಾರಿ ದುರ್ಭಿಕ್ಷಂಗಳಾಯ್ತು
ಕ್ರೂರನಪಗಮನದಲಿ ಬಳಿಕಾ
ದ್ವಾರಕಿಯಲದನಱಿತು ವೃದ್ಧವಚೋವಿಶೇಷದಲಿ
ಶೌರಿ ಕರೆಸಿದನಾತ್ಮವಿದ್ಯಾ
ಪಾರದರ್ಶಿಯನೊಲಿದು ಮನದಲಿ
ಸೀರಧರಸಹಿತಾತನೊಡನಿಂತೆಂದನುಚಿತದಲಿ ೪೮

ನನ್ನಿ ಹೇಳಲೆ ತಂದೆ ದೇಶಾ
ಪನ್ನನಾದೆಯದೇಕೆ ನಮ್ಮನು
ಮನ್ನಿಸದೆ ನೀನಿಲ್ಲದೆಮ್ಮಾ ಜೀವನವಿದೇಕೆ
ಭಿನ್ನಭಾವವಿದೇಕೆ ಮಣಿಯದು
ನಿನ್ನಲಿಹುದೇನಿರಿಸಿದಡೆ ಶತ
ಧನ್ವನಾವುದು ತಪ್ಪು ನಿನಗೆಂದನು ಮುರಧ್ವಂಸಿ ೪೯

ಆರಲಿಹುದೇನೆನಗೆ ಮಣಿಯ ವಿ
ಚಾರದಲಿ ಫಲವೇನು ಕೇಳೈ
ಕಾರಣವನೀ ಬಾಂಧವರಿಗಾಯ್ತೆನ್ನಲಭಿಶಂಕೆ
ಸೇರಿದನು ದೇಶಾಂತರಕ್ಕೀ
ಸೀರಧರನಿನ್ನೆಗ ತದರ್ಥವೆ
ತೋಱಿಸಾ ನಂಬುಗೆಗೆ ಸರ್ವರಿಗೆಂದನಸುರಾರಿ ೫೦

ಎನಲು ನಗುತಾ ಗಾಂದಿನೀನಂ
ದನನು ಮುದ್ರಿತರತ್ನವರವನು
ವಿನಯದಲಿ ಗೋವಿಂದನಂಘ್ರಿಯಲಿರಿಸಿ ಪೊಡವಡಲು
ದನುಜಹರನಾ ರತ್ನವನು ಜನ
ಜನಿತ ತೋಱಿಸಲೆಲ್ಲರಿಗೆ ತನ
ತನಗೆ ಕಾಮಿಸಿದರು ಮಹಾ ರತ್ನವನು ಬಾಂಧವರು ೫೧

ತನ್ನದೆಂದಳು ಜಾಂಬವತಿ ಮಣಿ
ತನ್ನದೆಂದಳು ಸತ್ಯಭಾಮೆ ಅ
ದೆನ್ನದೆಂದನಪುತ್ರಿಕದ ಧನವೆನುತ ಯದುರಾಜ
ನನ್ನಿ ರುಕ್ಮಿಣಿ ಬಯಸಿದಳು ಬಲ
ನನ್ಯರಾರಿದಕರುಹನೆಂದನು
ಭಿನ್ನವಾದುದು ಮತಿ ಮಹಾಮಣಿಯಲಿ ಮಹಾಜನಕೆ ೫೨

ಇರಲಿ ನಿನ್ನಲಿ ಧರಿಸಲರಿದ
ನ್ಯರಿಗೆ ಮಣಿಯಿದೆನುತ್ತ ಕೊಟ್ಟನು
ಕರೆದು ಮಗುಳಕ್ರೂರಹಸ್ತದಲಾ ಮಹಾಮಣಿಯ
ಅರಸ ಕೇಳಸುರಾರಿ ನೆಱೆ ಪರಿ
ಹರಿಸಿ ಬಂಧುಕೃತಾಭಿಶಂಕೆಯ
ನುರುದಯಾನಿಧಿ ಸಂತವಿಟ್ಟನು ಸಕಲ ಬಾಂಧವರ ೫೩

ಕೇಳುವನು ತಾನಾವನೀ ಹರಿ
ಲೀಲೆಯನು ಸಶ್ರದ್ಧೆಯಿಂದಲಿ
ಹೇಳುವನು ಮೇಣಾವನೀ ನಿರುಪಮ ಪವಿತ್ರವನು
ಹೇಳುವಾ ಕೇಳುವ ಮಹಾತ್ಮರ
ಪಾಲಿಸುವನಚ್ಯುತನು ಪಾತಕ
ಜಾಲವನು ಜಗದೀಶ ನಿತ್ಯಾತುಮನು ಪರಿಹರಿಸಿ ೫೪

ಅರವತ್ತೇಳನೆಯ ಸಂಧಿ ಮುಗಿಯಿತು.

## ಅರವತ್ತೆಂಟನೆಯ ಸಂಧಿ

ಇಂದ್ರಸಂಜ್ಞಪ್ರಸ್ಥದಲಿ ಕೃತ
ಮಂದಿರರೆನಿಪ್ಪಮಳ ಕುಂತೀ
ನಂದನರನೀಕ್ಷಿಸಲು ಬಿಜಯಂಗೈದನಸುರಾರಿ

ಒಂದು ದಿನ ಮುರವೈರಿ ಕುಂತೀ
ನಂದನರನೀಕ್ಷಿಸಲು ಸಾತ್ಯಕಿ
ಗಾಂದಿನೀತನಯೋದ್ಧವಾದಿ ಯದೂತ್ತಮರು ಸಹಿತ
ಸ್ಯಂದನದಲೈದಿದನು ಪರಮಾ
ನಂದಮೂರುತಿ ಪರಮವಿಭವದ
ಲಂದು ಶಕ್ರಪ್ರಸ್ಥವನು ಸುರರಂಬರದಲುಲಿಯೆ ೧

ಹರಿದು ದೂತರು ಮುಂದೆ ಕೌಂತೇ
ಯರಿಗೆ ಕೃಷ್ಣಾಗಮನ ವಾರ್ತಾ
ಪರಮ ಸಂತೋಷವನು ಬಿನ್ನಹ ಮಾಡಲುರವಣಿಸಿ
ನೆರೆದ ಸಭೆ ಸಂಪನ್ನ ಹರುಷೋ
ತ್ಕರುಷದಲಿ ಹಾರೈಸಲೆದ್ದರು
ಧರಣಿಪಾಲ ಕುಮಾರಕರು ಕೃಷ್ಣಾಂಘ್ರಿದರುಶನಕೆ ೨

ಇದಿರುಗೊಂಡರು ಕಳಶ ಕನ್ನಡಿ
ವಿದಿತ ಮಂಗಳ ಘೋಷವೆಸೆಯಲು
ಸದಮಳರು ಸಂಪನ್ನಕರುಣಾಸಿಂಧುವಿನ ಪದಕೆ
ಮೃದುಮಧುರ ಮಂದಸ್ಮಿತಾಮೃತ
ವದನವನು ಕಾಣುತ್ತ ಮುಳುಗಾ
ಡಿದುವು ಕಂಗಳು ಹರುಷರಸಪೂರದಲಿ ಪಾಂಡವರ ೩

ಅದ್ದವಾಲಿಗಳಾ ಮುಕುಂದನ
ಹೃದ್ಯವದನ ವಿಳಾಸಹಾಸಸು
ಧಾದ್ರ್ರನಯನಪ್ರೇಮ ಕರುಣಾಮೃತಸಮುದ್ರದಲಿ
ಇದ್ದವಿತರೇಂದ್ರಿಯಗಳೊಂದೇ
ಬುದ್ಧಿಯಲಿ ತತ್ಸುಖಗಳೊಂದೇ
ಮುದ್ದೆಯಾದುದು ಕೃಷ್ಣಮೂರ್ತಿ ಸಮಸ್ತ ಜನಗಳಿಗೆ ೪

ಬರವ ಕಾಣುತ ರಥವನಿಳಿದಂ
ಬುರುಹನಾಭನು ನಮಿಸಿದನು ನೃಪ
ವರ ಯುಧಿಷ್ಠಿರ ಭೀಮರಿಗೆ ತಕ್ಕೈಸಿದನು ನರನ
ಎಱಗಲಪ್ಪಿದನೊಲಿದು ಮಾದ್ರೇ
ಯರನು ಮುದದಲಿ ಹರುಷಮಯ ಸಾ
ಗರದಲೋಲಾಡಿಸಿದನಾ ಕುಂತೀಕುಮಾರಕರ ೫

ನುಡಿಸಿ ಕೇಳುತ ಕುಶಲವನು ಕೈ
ವಿಡಿದು ನಡೆದನು ಕೂಡೆ ಪಾರ್ಥರ
ಗಡಣದೆಡಬಲವಂಕದಲಿ ಹೊಕ್ಕನು ನೃಪಾಲಯವ
ಇಡಿದ ರತುನದ ಮಂಚದಲಿ ಜಗ
ದೊಡೆಯನೊಪ್ಪಿರೆ ಕುಳ್ಳಿರಲು ಬಂ
ದಡಿಗಳಿಗೆ ಲಜ್ಜಿಸುತ ತಲೆವಾಗಿದಳು ದ್ರುಪದಸುತೆ ೬

ಬಳಿಕ ಸಾತ್ಯಕಿ ಮುಖ್ಯರಾಸನ
ಗಳಲಿ ಪೂಜಿತರಾಗಿ ಕುಳ್ಳಿರ
ಲಲಘುಮಹಿಮನ ಹೊರೆಗೆ ಕುಂತೀದೇವಿ ನಡೆತರಲು
ಘಳಿಲನೆದ್ದತಿಗೌರವದಲಡಿ
ಗಳಿಗೆ ತಲೆವಾಗಿದನು ಮುದದಲಿ
ಸೆಳೆದು ಬಿಗಿಯಪ್ಪಿದಳು ಸೌಹಾರ್ದದಲಿ ಮುರಹರನ ೭

ಕುಶಲವಾರ್ತೆಗಳೆಸೆಯಲಂದಾ
ಕುಸುಮನಾಭನ ಚಾರುಹಾಸೋ
ಚ್ಛ್ವಸಿತ ಕರುಣಾಪಾಂಗ ರಂಜಿತವದನಲಕ್ಷ್ಮಿಯನು
ಶಶಿವದನೆ ನೋಡುತ್ತ ಮುಳುಗಿದ
ಳಸಮಸುಖ ಜಲಪೂರ್ಣ ಪುಳಕ
ಪ್ರಸರ ಪರಿತೋಷಾಬ್ಧಿಯಲಿ ತಲೆವಾಗಿ ಹರಿಪದಕೆ ೮

ತನಗೆ ಬಂದ ವಿಪತ್ಪರಂಪರೆ
ಯನುಭವವನದನೆಲ್ಲವನು ನೆನೆ
ನೆನೆದು ಕುಂತೀದೇವಿ ಬಾಷ್ಪನಿರುದ್ಧ ಕಂಠದಲಿ
ಜನಿತ ವೈಕ್ಲವ್ಯದಲಿ ನೆಱೆ ಕಂ
ಬನಿಯ ಕಡಲೊಳಗಾಳುತೇಳು
ತ್ತನುಪಮಂಗಿದನೆಂದಳತಿ ಗದುಗದಿತ ಕಂಠದಲಿ ೯

ಅಂದೆ ಕುಶಲಿಗಳಾದೆವಾವೆಲೆ
ತಂದೆ ನಾವಂದೇ ಸನಾಥರ
ದೆಂದು ನೆನೆದೆಲೆ ದೇವ ಕಳುಹಿದೆ ಗಾಂದಿನೀಸುತನ
ಬಂದು ಪಾಂಚಾಲದಲಿ ನಾವಿರ
ಲಂದು ಕಳುಹಿಸಿ ಕುಂಭಗಾಱರ
ಮಂದಿರದಲಿತ್ತೈ ಭವತ್ಪದಯುಗಳ ದರುಶನವ ೧೦

ಆದೆವಂದೇ ಸುಖನಿವಾಸಿಗ
ಳಾದೆವಂದೇ ವೊಡೆಯರುಳ್ಳವ
ರಾದೆವಂದೇ ಕೃಷ್ಣ ಕರುಣಾನಿಧಿಯೆ ನಿನ್ನೆಸೆವ
ಪಾದಕಮಲ ಪರಾಗ ದರುಶನ
ವಾದುದೆಮಗಂದಂದೆ ನಿರ್ಭಯ
ರಾದೆವೆಂದಳು ಕುಂತಿ ಕಂಬನಿಗಡಲಲೋಲಾಡಿ ೧೧

ಅಱಿದು ಮಱೆದಾವನ ಪದಾಬ್ಜ
ಸ್ಮರಣೆಯನು ಮಾಡಿದಡೆ ಭವಭಯ
ಹರಿವುದೀ ಸಂಸಾರಿಗಳಿಗೆಂದಡೆ ಭವತ್ಪದದ
ದರುಶನವು ಬಹು ಪುಣ್ಯವೆಂತಿದು
ದೊರಕಿದುದು ತನಗೆನುತ ಹರುಷೋ ,
ತ್ಕರುಷದಲಿ ಹೊಗಳುತ್ತಲಿದ್ದಳು ಕುಂತಿ ಮುರಹರನ ೧೨

ಎಂದಡೆಂದನು ನಗುತ ಮುರರಿಪು
ಮಂದಹಾಸದಲಂದು ನಿನ್ನಯ
ನಂದನರನೀ ದ್ರುಪದನಂದನೆಯ ಸ್ವಯಂವರಕೆ
ಬಂದು ಕಂಡೆವು ಕುಂಭಗಾಱರ
ಮಂದಿರದಲಾ ದಿನವೆ ಹೋದೆವ
ದೊಂದು ಕಾರ್ಯವಿಶೇಷ ಸಾಧಕರಾಗಿ ನಿಜಪುರಕೆ. ೧೩

ಸತ್ಯಭಾಮೆಯ ತಂದೆಯನು ಕೆಡೆ
ಗುತ್ತಿದಾ ಶತಧನ್ವನನು ಕೊಲ
ಲುತ್ತಮಾಂಗನೆ ಹೋದೆವಾ ದುರ್ಮತಿಯ ಬೆಂಬತ್ತಿ
ಮೃತ್ಯುವನು ಕಾಣಿಸಲು ಶಂಕಿತ
ಚಿತ್ತನಾದನು ರಾಮನೆನ್ನಲಿ
ಮತ್ತೆ ಕೇಳು ವಿದೇಹನಗರವನೈದಿದನು ಬಳಿಕ ೧೪

ಇನಿತು ದಿನಪರಿಯಂತ ಬಾರದೆ
ಮನೆಯ ಮನ್ನೆಯರಾದೆವಗ್ರಜ
ನನುನಯವನನುಸರಿಲಾ ರತ್ನವನು ಕಾಣಿಸಲು
ಜನಪರೊಳಗೆ ವಿರೋಧ ಸಲೆ ಸಂ
ಜನಿಸಿ ಹೋದವು ಕೆಱೆದು ದಿನ ನಿ
ಮ್ಮಿನಿಬರನು ಸಂಭಾವಿಸುವೊಡರಿದಾಯ್ತು ತನಗೆಂದ ೧೫

ಪ್ರಾಣವೈವರು ತನಗೆ ನೀನೇ
ಪ್ರಾಣ ಚೇತನರೂಪು ನಿಮ್ಮಾ
ಕ್ಷೋಣಿತಳವನು ನಿಮಗೆ ಸಾಧಿಸಿಕೊಡುವೆನೆಂದೆಂಬ
ಕೇಣಿ ತನ್ನದು ತಾಯೆ ಚಿಂತೆಯ
ಮಾಣು ನೀನೆಂದೊಲಿದು ಮೃದುತರ
ಪಾಣಿತಳದಲಿ ವೈದಡವಿದನು ತೊಡೆದು ದೃಗುಜಲವ ೧೬

ಶ್ರೀರಮಣನಿಂತೆನಲು ನುಡಿದಳು
ದಾರಮತಿ ಗೋವಿಂದ ಸರ್ವಾ
ಧಾರ ಸರ್ವಾತ್ಮಕನೆ ಸರ್ವಸುಹೃತ್ಪ್ರಿಯಾತ್ಮಕನೆ
ಆರು ನಿನಗಾತ್ಮೀಯರಥವಾ
ವೈರಿಗಳು ನಿನಗುಳ್ಳ ಮಹಿಮೆಯ
ನಾರಱಿವರೆಂದೆಱಗಿದಳು ಮುರಹರನ ಚರಣದಲಿ ೧೭

ಇಂತು ಸಪ್ರೇಮದಲಿ ಲಕ್ಷ್ಮೀ
ಕಾಂತನಾ ಬಾಲಕರು ಸಹಿತಾ
ಕುಂತಿಯನು ಸಂಭಾವಿಸುತ ಸಸ್ನೇಹಸೂಕ್ತಿಯಲಿ
ಸಂತಸವ ಮಾಡುತ್ತ ಸಜ್ಜನ
ಸಂತತಿಗೆ ತತ್ಪುರಜನಕೆ ಸೀ
ಮಂತಿನೀ ಜನಗಳಿಗೆ ಹರುಷವನಿತ್ತನೊಲವಿನಲಿ ೧೮

ಪರಮಸುಖ ಸಪ್ರೇಮ ಸಂಭೃತ
ಪರವಶತೆಯಲಿ ಸಂದವಂದಿನ
ವರುಷರುತು ಮಾಸಂಗಳಿಂದ್ರಪ್ರಸ್ಥವಾಸದಲಿ
ಸರಸ ನಯನಾಪಾಂಗಸಸ್ಮಿತ
ಭರಿತಮಂಗಳಸೂಕ್ತಿಗಳಲಪ
ಹರಿಸುತಿರ್ದನು ಸಕಲಪುರವಾಸಿಗಳ ಕಣುಮನವ ೧೯

ದಣಿದು ದಣಿಯವು ತಂಗಳಿಂದ್ರಿಯ
ಗಣಕೆ ದಳಪತಿಯಾದವಕ್ಷಿಗ
ಳೆಣಿಸಲೇಕಿಂದ್ರಿಯವೊ ತಜ್ಜನನಿವಹವೆಂದೆನಲು
ಗುಣನಿಧಿಯ ಸೌಂದರ್ಯಲಕ್ಷ್ಮಿಯ
ಕಣಿಯೆನಿಪ ಕೃಷ್ಣನ ಪದಾಬ್ಜೇ
ಕ್ಷಣದ ಸುಖಸಾಮ್ರಾಜ್ಯಪದವನು ಪಡೆದುದಖಿಳಜನ ೨೦

ಓಲಗಿಸಿ ವೈದಣಿಯಲೀಕ್ಷಿಸು
ವಾಲಿಗಳು ನೆಱೆ ದಣಿಯವದ್ಭುತ
ಲೀಲೆಯನು ಕೇಳುತ್ತ ದಣಿಯವು ಕಿವಿಗಳನವರತ
ನಾಲಿಗೆಗಳನುಪಮಚರಿತ್ರವ
ಹೇಳಿ ದಣಿಯವು ಸಲೆ ಪರಸ್ಪರ
ವಾಳಿಗೊಂಡುದು ಕೃಷ್ಣಮೂರ್ತಿ ಸಮಸ್ತಜನಮನವ ೨೧

ಒಂದು ದಿನ ಫಲುಗುಣಸಹಿತ ಗೋ
ವಿಂದನೊಪ್ಪುವ ರಥದಲೈದಿದ
ನೊಂದು ವಿಪಿನಾಂತರಕೆ ಮೃಗಯಾವ್ಯಸನಲಾಲಸರು
ವೃಂದದಲಿ ನಾನಾಮೃಗೌಘವ
ಕೊಂದು ಮಾಂಸದ ಹೊಱೆಗಳನು ಯಮ
ನಂದನನ ಹೊರೆಗಟ್ಟಿದರು ಕಂಬಿಗಳು ತನಿ ಜಡಿಯೆ ೨೨

ಕಳುಹಿ ಪಾರ್ವಣಯೋಗ್ಯಮಾಂಸಂ
ಗಳನು ರಾಜಾಲಯಕೆ ವನದಲಿ
ಸುಳಿದು ಮೃಗಯಾವ್ಯಸನದಲಿ ವರ ನೃತ್ಯಗೀತದಲಿ
ಬಳಲಿ ಬಸವಳಿವುತ್ತ ಹೋದನು
ಫಲುಗುಣನು ಯಮುನಾಜಲಾಂತಿಕ
ಕಲಘೌತೃಷ್ಣಾತುರನು ಬೀಳ್ಕೊಂಡನು ಮುರಾಂತಕನ ೨೩

ತೊಳೆದು ಕರಚರಣಂಗಳನು ಮು
ಕ್ಕುಳಿಸಿ ಜಲವನು ತಿರುಗಿ ಕಂಡನು
ಲಲನೆಯೊಬ್ಬಳನಾ ನದೀತೀರದಲಿ ಸುರಪತಿಯ
ಹೊಳೆವ ರಂಭೆಯೊ ಮೇಣು ಲಕ್ಷ್ಮಿಯೊ
ಲಲಿತ ವನದೇವತೆಯೊ ಧರೆಯಲಿ
ಸುಳಿವ ತೇಜಸ್ವಿಗಳ ತೇಜೋಮೂರ್ತಿಯೋಯೆನಲು ೨೪

ಆರು ನೀನೆಲೆ ಕಾಂತೆ ಹೇಳೆನ
ಗಾರ ವಧು ಹೆಸರೇನು ಹೆತ್ತವ
ರಾರು ಘೋರಾರಣ್ಯವಾಸವಿದೇಕೆ ನೀನೇಕೆ
ಕಾರಣವ ಹೇಳೆನಲು ಪಾರ್ಥನು
ದಾರವಚನವನಾಲಿಸುತ ಮಧು
ರಾರವದಲಿಂತೆಂದಳಂಗನೆ ನಿಜಮನೋರಥವ ೨೫

ತಂದೆ ಕೇಳಾದಡೆ ತನಗೆ ಕಾ
ಳಿಂದಿಯೆಂಬುದು ಪೆಸರು ಪತಿ ಗೋ
ವಿಂದನೆನಲೆಮ್ಮಯ್ಯನಾತನ ನೇಮದಲಿ ತಪಕೆ
ನಿಂದೆನಿದಱೊಳು ಸಕಲ ಮುನಿಜನ
ವಂದ್ಯಪಾವನ ಚರಣಕಮಲ
ದ್ವಂದ್ವದರುಶನದರ್ಥಿಯಲಿ ಕೇಳೆಂದಳಬುಜಾಕ್ಷಿ ೨೬

ಆಸೆಗೊಂಡುದು ಚಿತ್ತವೆನಗಾ
ವಾಸುದೇವನ ಚರಣ ಕಮಲದ
ದಾಸಿಯಹೆನೆಂಬೊಂದು ಭಾಗ್ಯೋದಯದ ಬೆಳೆಸಿರಿಗೆ
ಶ್ರೀಸತಿಯ ಲಾಲಿತ ಪದಾಬ್ಜವಿ
ಳಾಸವನು ಕಾಂಬನ್ನವೆನಗುಪ
ವಾಸವೆಂದಳು ಕಾಂತೆ ಕಂಬನಿದುಂಬಿ ಪಾರ್ಥಂಗೆ ೨೭

ಎಂದಡಾ ಸತಿಯಿರವನಾ ಗೋ
ವಿಂದನಲ್ಲಿಗೆ ಹರಿದು ಕುಂತೀ
ನಂದನನು ಕೈಮುಗಿದು ಬಿನ್ನಹ ಮಾಡಿದನು ಹದನ
ಮಂದಹಾಸದಲಸುರರಿಪು ಸಾ
ನಂದದಲಿ ಕೇಳುತ್ತ ನಡೆ ಕಾ
ಳಿಂದಿಯೆಂಬಳದಾರು ನೋಳ್ಪೆವೆನುತ್ತ ನಡೆತಂದ ೨೮

ಬರವ ಕಾಣುತ ಮುಕುಳಕರಪುಟ
ಸರಸಿಜದಲಂದಬಲೆ ಸನ್ನತ
ಶಿರದಲಿರಲಬುಜಾಕ್ಷಿಯಂತಃಕರಣದಭಿಮತವ
ಮುರಮಥನನಾಲಿಸುತ ರಥದಲಿ
ತರುಣಿಯನು ಕುಳ್ಳಿರಿಸಿಕೊಂಡಂ
ಬರುಹದೃಶನೈತಂದನಿಂದ್ರಪ್ರಸ್ಥಪುರವರಕೆ ೨೯

ವಿಶ್ವಕರ್ಮನ ಕರೆಸಿ ಬಳಿಕಾ
ವಿಶ್ವತೋಮುಖನೊಲಿದು ಪಾಂಡು ಮ
ಹೇಶ್ವರನ ಸಂತತಿಗಳಿಗೆ ಸಂಪನ್ನಪುರವರವ
ವಿಶ್ವವಿಸ್ಮಯಕರವೆನಲು ವಿ
ಶ್ವೇಶ್ವರಾರ್ಚಿತ ಚರಣನಂದಮ
ರೇಶ್ವರನ ಪುರಕಧಿಕವೆನೆ ಮಾಡಿಸಿದನರಮನೆಯ ೩೦

ಕನಕ ರತುನ ದ್ವಾರ ಗೋಪುರ
ಜನಿತ ಬಹಳಾಟ್ಟಾಲಶೋಭಾ
ವಿನುತಹರ್ಮ್ಯಾವಳಿಯ ರತ್ನಾವಳಿಯ ಭವನದಲಿ
ಘನ ಪತಾಕಾ ತೋರಣಂಗಳ
ಲನಿಮಿಷರ ಪುರಲಕ್ಷ್ಮಿಗತಿಶಯ
ವೆನಲು ಮಿಗೆ ರಂಜಿಸಿದುದಿಂದ್ರಪ್ರಸ್ಥ ಪುರಲಕ್ಷ್ಮಿ ೩೧

ಬಳಿಕ ಪಾಂಡು ಕುಮಾರಕರ ಮನ
ದೊಲವಿನಭಿಮತ ಸಿದ್ಧಿಯನು ನೆಱೆ
ಸಲಿಸಿ ಹಲವು ದಿನಂಗಳನು ತತ್ಪುರದಲನುಸರಿಸಿ
ಅಲಘು ವಿರಹ ವಿಮೋಹ ಜಲಪರಿ
ಲುಳಿತ ನಯನರನಪ್ಪಿ ಹರಿ ಬೀ
ಳ್ಕೊಳಿಸಿ ಮರಳಿದುಬಂದು ಹೊಕ್ಕನು ದ್ವಾರಕಾಪುರವ ೩೨

ಮಿತ್ರಶುತೆಯ ವಿವಾಹವನು ಸುಮು
ಹೂರ್ತದಲಿ ವಿರಚಿಸಿ ಸುಯೋಧನ
ನತ್ತಲಿಹ ವಿಂದಾನುವಿಂದರ ತಂಗಿಯನು ತನಗೆ
ಅತ್ತೆಯಹ ರಾಜಾಧಿದೇವಿಯ
ಪುತ್ರಿಯನು ನಾನಾನೃಪಾಲರ
ಮೊತ್ತವನು ಪರಿಭವಿಸಿ ತಂದನು ಮಿತ್ರವಿಂದೆಯನು ೩೩

ಅರಸ ಕೇಳೈ ಕೋಸಲಾಧೀ
ಶ್ವರಗೆ ನಗ್ನಜಿದಾಖ್ಯ ನೃಪತಿಗೆ
ಪರಮ ಕನ್ಯಕೆ ಲೀಲೆಯಿಂದಾ ನಗ್ನಜಿತೆಯೆಂದು
ಧರೆಯಲೆಸೆದಳು ರೂಪ ಗುಣ ಬಂ
ಧುರ ಮಹಾತೇಜದಲಿ ವಿಜಿತಾ
ಪ್ಸರೆಯೆನಿಸಿ ವಿಖ್ಯಾತೆಯಾದಳು ಭುವನಭವನದಲಿ ೩೪

ಏಳು ವೃಷಭಂಗಳನು ಕಟ್ಟಿದ
ದೇಳಿದಿಟವಲ್ಲೀವೆನೆನ್ನಯ
ಬಾಲಕಿಯನೆಂದವನಿಪತಿ ಹೊಯಿಸಿದನು ಡಂಗುರವ
ಕೇಳುತವನಿಯ ನೃಪಕುಮಾರರು
ತೋಳಬಲುಹನು ಮೆಱೆದು ಹೊಕ್ಕರು
ಕಾಲನೂರನು ಕಟ್ಟಲಱಿಯದೆ ವೃಷಭಸಪ್ತಕವ ೩೫

ಕೇಳಿದನು ಬಳಿಕದನು ಲಕ್ಷ್ಮೀ
ಲೋಲನಾ ವೃಷವಿಜಯಲಭ್ಯವಿ
ಶಾಲನೇತ್ರೆಯ ಲಾಭವನು ಚತುರಂಗಬಲಸಹಿತ
ಮೇಲೆ ಚಲಿತಚ್ಛತ್ರ ಚಾಮರ
ದೇಳಿಗೆಯ ಘನವಿಭವದಲಿ ಭೂ
ಪಾಲ ಕೋಸಲನರಮನೆಗೆ ನಡೆತಂದನೊಲವಿನಲಿ ೩೬

ಬರವ ಕಾಣುತ ಕೋಸಲಾಧೀ
ಶ್ವರನು ಬಹು ಮಂಗಳ ಸುವಾದ್ಯೋ
ತ್ಕರ ಮಹಾವಿಭವದಲಿ ಗುಡಿ ತೋರಣ ಪತಾಕೆಗಳ
ಪರಮರಚನೆಯಲಿದಿರುಗೊಂಡಂ
ಬುರುಹನಾಭನನಧಿಕ ಹರುಷೋ
ತ್ಕರುಷದಲಿ ಪೂಜಿಸಿದನಾತ್ಮಧನಾನುಸಾರದಲಿ ೩೭

ಆ ಸಕಲ ಪುರವಧುಗಳಂದಾ
ವಾಸುದೇವನ ದಿವ್ಯಮೂರ್ತಿ ವಿ
ಳಾಸ ಹಾಸೋದಾರ ಸುಧೆಯನು ಕುಡಿಕುಡಿದು ಕುಡಿದು
ಆಸರುವ ಕಂಗಳಲಿ ಮನದಲಿ
ಹಾಸು ಹೊಕ್ಕಾಗುತ್ತ ಸುಖವಾ
ರಾಶಿಯಲಿ ಮುಳುಗಾಡುತಿರ್ದುದು ಬಿಗಿದ ಬೆಱಗಿನಲಿ ೩೮

ವೀರರಾಜಕುಮಾರಿ ಕಂಡಾ
ಶ್ರೀರಮಣನಮಳಾಂಗಲಕ್ಷ್ಮಿಯ
ಚಾರುಸೌಂದರ್ಯವನು ಬಿದ್ದಳು ಕಾಮಮೂರ್ಛೆಯಲಿ
ಸಾರತರ ಜನ್ಮಾಂತರಾರ್ಜಿತ
ಭೂರಿ ಸುಕೃತ ಫಲಂಗಳುಳ್ಳಡೆ
ಸೇರಲೀತನ ದಾಸ್ಯವೆಂದಳಲುತ್ತ ಮನದೊಳಗೆ ೩೯

ಧನ್ಯರಾರೆನ್ನಂತೆ ಜಗದಲಿ
ಮಾನ್ಯರಾರೆಲೆ ಕೃಷ್ಣ ಬಹಳ ಕೃ
ಪಾರ್ಣವನೆ ನಿನ್ನಂಘ್ರಿ ಕಮಲಪರಾಗ ದರುಶನಕೆ
ತನ್ನ ಮಾಂಸಾಕ್ಷಿಗಳಿವೆಂತುಪ
ಪನ್ನವಾದವು ನಿಗಮಕೋಟಿಯ
ವರ್ಣನೆಗೆ ಮೈಗುಡದೆನುತ ಮೈಯ್ಯಿಕ್ಕಿದನು ಭೂಪ ೪೦

ಆರು ತೊಳೆದರು ದೇವ ನಿನ್ನೀ
ಚಾರು ಚರಣನಖಾಗ್ರವನು ಮ
ತ್ತಾರು ಧರಿಸಿದರಮಳನಖನಿರ್ಣೇಜನದ ಜಲವ
ವಾರಿಜಾಸನ ರುದ್ರನತ ಚರ
ಣಾರವಿಂದನೆ ತನ್ನ ಹೋಲುವ
ಭೂರಿಭಾಗ್ಯರದಾರೆನುತ ಪೂಜಿಸಿದನಚ್ಯುತನ ೪೧

ದೇವ ಬಿಜಯಂಗೈದಿರಿತ್ತಲ
ದಾವುದೆನಗೆ ಭವತ್ಪದಾಂಬುಜ
ಸೇವಕಂಗೇಂ ವಿಧಿಯನೆಂಬುದ ಬೆಸಸಬೇಹುದೆನೆ
ದೇವಕಿಗೆ ನಸುನಗುತ ದೇವರ
ದೇವನಾ ಕೋಸಲ ನೃಪಾಲನ
ಭಾವಭಕುತಿಗೆ ಮೆಚ್ಚಿ ಮಗುಳಿಂತೆಂದನೊಲವಿನಲಿ ೪೨

ಬಂದೆವಾವೆಲೆ ಭೂಪ ನಿನ್ನೀ
ನಂದನೆಯನಭ್ಯರ್ಥಿಸಲು ಮನ
ಸಂದು ನೋಳ್ಪಡೆ ನಿನ್ನ ಸಂಬಂಧವನು ನೆಱೆ ಬಯಸಿ
ನಿಂದ್ಯವಲ್ಲಾ ಯಾಚ್ಞೆ ನೃಪರಿಂ
ಗೆಂದು ನೋಡದೆ ಕರೆಸಿಕೊಳ್ಳದೆ
ಬಂದೆವೀವೆಯದೇನನೆಂದನು ನಗುತ ಮುರವೈರಿ ೪೩

ಆರೊಡೆಯ ನೀನಲ್ಲದೆನ್ನ ಕು
ಮಾರಿಗತಿಶಯ ಯೋಗ್ಯರನ್ಯರ
ದಾರ ವಕ್ಷಸ್ಥಳವ ಮನೆಮಾಡಿಯೆ ಮಹಾಲಕ್ಷ್ಮಿ
ಚಾರುಚರಣನಿವಾಸಲಬ್ಧಿಗೆ
ಹೋರುವಳು ಗಡ ತುಳಸಿಯೊಡನೆನ
ಲಾರು ತನ್ನಂದದ ಸಭಾಗ್ಯರು ಭುವನದೊಳಗೆಂದ ೪೪

ಆಡಲವ್ಮೈನು ತನ್ನ ಬುದ್ಧಿಯ
ಕೇಡನದನೆಲೆ ಕೃಷ್ಣ ಸಮಯವ
ಮಾಡಿದೆನು ಮಗಳಿಂಗೆ ಪತಿಸಾಮರ್ಥ್ಯ ಸಂಪದವ
ನೋಡಲೆಂದೇ ಬಹಳ ಭಂಗವ
ಮಾಡಿದೆನು ನೃಪರಿಂಗೆ ಬಸವನ
ಬೇಡ ಕಟ್ಟದಡೀವೆನೆನ್ನಯ ಮಗಳನೆಂದೆನುತ ೪೫

ಹೇಳಿದೆನು ತಾ ಮುನ್ನ ಮಾಡಿದ
ಖೂಳತನವನು ಕೃಷ್ಣ ನೀನೇ
ಪಾಲಿಸುವುದೆನ್ನೀ ಪ್ರತಿಜ್ಞೆಯನೆಂದು ಬಿನ್ನೈಸೆ
ಏಳು ಬಸವಂಗಳನು ತೋಱಿಸು
ಪಾಲಿಸಿದೆನಿಷ್ಟವನೆನುತ ಸಿರಿ
ಲೋಲನೆದ್ದನು ಬಿಗಿದಪರಿಕರಗಳಲಿ ಕೈವೊಯ್ದು ೪೬

ಬೇಡ ಮಗಳ ವಿವಾಹ ನಿನಗಿದು
ಕೇಡ ತಂದುದು ಹಲಬರಿಗೆ ಕೈ
ಮಾಡಲರಿದಿವಱೊಡನೆ ನಿನ್ನೀ ಮೂರ್ತಿ ಬದುಕಿರಲು
ನೋಡಿ ಸಂತಸಬಡುವೆವೇತಕೆ
ಬೇಡ ಕಡು ನಿರ್ಬಂಧವೆನುತವೆ
ರೂಢಿಯಲಿ ಮೈಯಿಕ್ಕಿದನು ಕೋಸಲಮಹೀಪಾಲ ೪೭

ಅಂಜದಿರು ನೀನೇಳೆನುತ ಕರ
ಕಂಜದಲಿ ಮೈದಡವಿ ನತಪವಿ
ಪಂಜರನು ಪೀತಾಂಬರನ ಗಂಟಿಕ್ಕಿ ಬಿಗಿದುಟ್ಟು
ಮುಂಜೆಱಗ ಸಂವರಿಸಿ ಭವಭಯ
ಭಂಜನನು ಮುಂಗೈಯ ಕಂಕಣ
ರಂಜಿಸಲು ಹೊಱವಂಟನಾಸ್ಫೋಟಿಸುತ ನಿಜಭುಜವ ೪೮

ಸುರರು ನಭದಲಿ ಜಯತು ಜಯ ಜಯ
ಪರಮಪುರುಷ ಯೆನುತ್ತ ಹೊಗಳು
ತ್ತಿರಲು ಪುರವನಿತೆಯರು ಹಾಹಾಯೆನುತ ವಸವಳಿಯೆ
ವರಕುಮಾರಿ ಮನೋವಿಷಾದದ
ಲಿರದೆ ಹೊಗಳುತ್ತಿರಲು ಹೊಱವಂ
ಟುರವಣಿಸಿ ದೈತ್ಯಾರಿ ಕರೆದನು ವೃಷಭಸಪ್ತಕವ ೪೯

ಬೆರಳು ಚಿಟುಕಿಸಿ ಕರೆವ ಕೃಷ್ಣನ
ನಿರುಪಮಾಕ್ಷೇಪವನು ಕೇಳುತ
ಕೆರಳಿ ಕಂಗಳು ಕಿಡಿಯನುಗುಳಲು ಖುರಖುರಾಗ್ರದಲಿ
ಧರೆಯನಪ್ಪಳಿಸುತ್ತ ಬಾಲದ
ಲಿರದೆ ಮುಗಿಲನು ಕೆದಱಿ ಚಿಗಿದ
ಬ್ಬರಿಸಿ ಕವಿತಂದವು ವೃಷಂಗಳು ಕೃಷ್ಣನಭಿಮುಖಕೆ ೫೦

ಕೆರಳಿ ಸಪ್ತಕುಲಾಚಲಂಗಳು
ಧರೆಗೆ ವೃಷಭಾಕಾರದಲಿ ಮೈ
ಗರೆದವೊಲು ಖುರಖುರ ವಿಷಾಣಾಗ್ರಂಗಳಲಿ ನೆಲನ
ಇರದೆ ಗಗನವನಳ್ಳಿಱಿವುತೈ
ತರಲು ಸಪ್ತಾಕಾರವನು ನೆಱೆ
ಧರಿಸಿ ಘನಮಾಯಾವಿ ಹಿಡಿದನು ವೃಷಭಸಪ್ತಕವ ೫೧

ಹಿಡಿದು ಕಱುಗಳನೆಳೆವವೋಲವ
ಗಡಿಸಿ ಕಟ್ಟದನೇಳನೊಂದೇ
ಬಡಹುರಿಯ ನೇಣಿನಲಿ ಗಗನದಲಮರರುಘೆಯೆನಲು
ಪೊಡವಿ ಸಂತಸಬಿಟ್ಟುದೆಸೆವು
ಗ್ಗಡದ ಜಯ ಜಯ ಜಯರವಂಗಳ
ಗಡಣ ವೆಣ್ದೆಸೆಗೆಸೆದುದೊಂದೇ ನಿಮಿಷಮಾತ್ರದಲಿ ೫೨

ಮೊಳಗಿದವು ಭೇರಿಗಳು ಘನನಿ
ಸ್ಸಳದೊಡನೆ ಕೋಸಲನೃಪಾಲನ
ನಿಳಯದಲಿ ತಳಿತುದು ಮಹೋತ್ಸವದುಬ್ಬರದ ರಭಸ
ಪುಳಕ ಪಸರಿಸಿ ಪರಮಹರುಷವ
ತಳೆದು ನೃಪನಚ್ಯುತನ ಪದವನು
ತೊಳೆದು ಧಾರೆಯನೆಱೆದುಕೊಟ್ಟನು ಪೊಲಿದು ನಿಜಸುತೆಯ ೫೩

ಹತ್ತು ಸಾವಿರ ಧೇನುಗಳನೊಂ
ಬತ್ತುಸಾವಿರ ಕರಿಗಳನು ತೊಂ
ಬತ್ತುಸಾವಿರ ರಥಗಳನು ಮತ್ತಾ ರಥಂಗಳಿಗೆ
ಹತ್ತುಮಡಿ ತುರಗವನು ತುರಗಕೆ
ಹತ್ತುಮಡಿ ಕಾಲಾಳನವನಿಪ
ನಿತ್ತನಾ ನಿಜನಂದನೆಗೆ ಬಳುವಳಿಯನೊಲವಿನಲಿ ೫೪

ಇತ್ತನಖಿಳಾಭರಣ ಭೂಷಿತ
ಗಾತ್ರೆಯರನುರುಯೌವನಾನ್ವಿತ
ಮತ್ತಕಾಶಿನಿಯರನು ಮಗಳಿಗೆ ಮೂಱು ಸಾವಿರದ
ತೊತ್ತಿರನು ದಿವ್ಯಾಂಬರಂಗಳ
ನುತ್ತಮಾಮಳರತ್ನ ನಿಕರವ
ನಿತ್ತು ಮನ್ನಿಸುತಿರ್ದನಧಿಕ ಮನೋನುರಾಗದಲಿ ೫೫

ರಾಜಮಹಿಷಿಯರಾ ಮುಕುಂದನ
ರಾಜಮಾನ ಮನೋಜ್ಞ ಚರಣಾಂ
ಭೋಜಸೇವೆಗೆ ಸೇರಿದಾ ನಿಜಸುತೆಯನೀಕ್ಷಿಸುತ
ಮೂಜಗದಲೆಮ್ಮಿಂದ ಮಿಗಿಲು ಸು
ಭಾಜನೀಯರದಾರೆನುತ ನಿ
ರ್ವ್ಯಾಜಸುಖಸಾಗರದಲೋಲಾಡಿದರು ತವತವಗೆ ೫೬

ಹರುಷ ಮಿಗೆ ದಂಪತಿಗಳನು ಕು
ಳ್ಳಿರಿಸಿ ರಥದಲಿ ಕೋಸಲಾಧೀ
ಶ್ವರನು ನೆರವನು ಕೊಟ್ಟು ಕರಿರಥತುರಗಪತ್ತಿಗಳ
ಮೊರೆವ ನಿಸ್ಸಳ ಭೇರಿಗಳ ಭೂ
ಸುರರ ಮಂಗಳಘೋಷದಲಿ ಸತು
ಕರಿಸಿ ಕಳುಹಿದನುಚಿತದಲಿ ಸಂಪನ್ನವಿಭವದಲಿ ೫೭

ಗಳಿತ ನಯನಾನಂದಬಾಷ್ಪಾ
ಕುಳಿತನೆಸೆದನು ಕಳುಹಿ ದಂಪತಿ
ಗಳನು ಮರಳಿದನಧಿಕತರ ವೈಕ್ಲವ್ಯಹೃದಯದಲಿ
ಚಲ ಪತಾಕಾ ಛತ್ರ ಚಮರಾ
ವಳಿಯ ಗಡಣದಲಭ್ರವಡಗಲು
ನಳಿನನಾಭನು ವಿಭವದಲಿ ಪುರವರವ ಹೊಱವಂಟ ೫೮

ಪಾರಿಬರ್ಹಂಗಳನು ಕೊಂಡಸು
ರಾರಿ ಮಾಗಧ ವಂದಿಗಳ ಕೈ
ವಾರವೆಸೆಯಲು ಬಂದು ಹೊಕ್ಕನು ದ್ವಾರಕಾಪುರವ
ಭೂರಿಮಂಗಳ ಘೋಷದಲಿ ಪರಿ
ವಾರವಿದಿರ್ಗೊಳಲಖಿಳ ಯಾದವ
ವೀರಜನಸಹಿತಂದು ಬಂದನು ರಾಜಮಂದಿರಕೆ ೫೯

ಮತ್ತೆ ಕೇಳೆಲೆ ಭೂಪ ಮುರಹರ
ನತ್ತೆ ಕೇಕಯರಾಜಸತಿ ಶ್ರುತ
ಕೀರ್ತಿಯೆಂಬಳು ಮಗಳನಿತ್ತಳು ಭದ್ರೆಯೆಂಬಳನು
ಅತ್ತಲಾ ಮಾದ್ರಾವನೀಶನ
ಪುತ್ರಿ ಲಕ್ಷಣೆಯೆಂಬಳನು ಸುಚ
ರಿತ್ರೆಯನು ತಂದನು ವಿಭಾಡಿಸಿ ಸಕಲ ನೃಪಕುಲವ ೬೦

ಸಕಲ ಲೋಕೇಶ್ವರಗೆ ಲಲನಾ
ಷ್ಟಕ ವಿವಾಹೋತ್ಕರದಲಾದುದು
ಮುಕುತಿನಾಥಂಗವನಿಸುತವಿಜಯದಲಿ ತತ್ಪುರದ
ನಿಕಟರುದ್ಧ ನೃಪಾಲ ಕನ್ಯಾ
ಪ್ರಕರದಷ್ಟಸಹಸ್ರ ವೈವಾ
ಹಿಕ ಮಹೋತ್ಸವ ರಚನೆಗಳು ನಿತ್ಯಾತ್ಮಕೃಷ್ಣಂಗೆ ೬೧

ಅರವತ್ತೆಂಟನೆಯ ಸಂಧಿ ಮುಗಿಯಿತು.

# ಅರವತ್ತೊಂಬತ್ತನೆಯ ಸಂಧಿ

ಸುರರು ಭಾಪೆನೆ ಸಂಹರಿಸಿ ಮುರ
ನರಕರನು ಭಗದತ್ತನನು ತ
ದ್ಧರಣಿಪತಿಯನು ಮಾಡಿ ಸಂತೈಸಿದನು ಮುರವೈರಿ

ಕುರುಣಿಸೈ ಮುನಿನಾಥ ನರಕಾ
ಸುರನ ವಧೆಯನು ತತ್ಸಮಾಹಿತ
ಧರಣಿಪಾಲಕದಂಬ ಕನ್ಯಾವರ ವಿವಾಹವನು
ಪರಮಪುರುಷ ಚರಿತ್ರವನು ವಿ
ಸ್ತರದಲೆನಗೆನಲಧಿಕಹರುಷೋ
ತ್ಕರುಷದಲಿ ಕರುಣಿಸಿದನಾ ಮುನಿನಾಥನವನಿಪಗೆ ೧

ಅರಸ ಕೇಳೊಂದು ದಿನ ದಿವಿಜೇ
ಶ್ವರನು ಬಂದನು ಸಕಲ ಲೋಕೇ
ಶ್ವರನೆನಿಪ ಗೋವಿಂದನಂಘ್ರಿಸರೋಜ ದರುಶನಕೆ
ಕೊರಗಿದಾನನಕಮಲದಲಿ ನಿಜ
ಪರಿಭವವನೆಲ್ಲವನು ಹರಿಪದ
ಸರಸಿಜಕೆ ತಲೆವಾಗಿ ಬಿನ್ನಹ ಮಾಡಿದನು ನಮಿಸಿ ೨

ದೇವ ನರಕಾಸುರನ ದೆಸೆಯಲಿ
ಜೀವಿಸುವಡರಿದಾಯ್ತು ನಿಜಪದ
ಸೇವಕರಿಗವಧರಿಸುವುದು ತನ್ನೊಂದು ಬಿನ್ನಪವ
ದೇವವಧುಗಳಿಗಾಯ್ತು ತತ್ಪದ
ಸೇವೆ ತಾವೊದಲಾಗಿ ಸುರರುಪ
ಜೀವಿಗಳು ಲೋಕಾಧಿಪರು ತಾವೆಂದನಮರೇಂದ್ರ ೩

ಅರಿದು ತನಗಾ ದಾನವೇಂದ್ರನ
ಪುರವನದನೀಕ್ಷಿಸಡೆ ಶಸ್ತ್ರಾ
ವರಣಗಳ, ಬಲುದುರ್ಗ ಮುರಪಾಶಾವಳಿಯ ದುರ್ಗ
ಉರಿವ ಪಾವಕದುರ್ಗ ದುಸ್ತರ
ಭರಿತಪರಿಘಾ ದುರ್ಗ ದೇವರು
ಕರುಣಿಸುವುದೆಮಗೇನು ಬೆಸನಿನ್ನೆಂದನಮರೇಂದ್ರ ೪

ಲಲಿತ ನಿಜಮಣಿಪರ್ವತವನಾ
ಜಲಧಿಯನಮಳಛತ್ರವನು ಪಿಂ
ಗಳದೃಶನ ನಿಧಿಗಳನು ಜಗದೀಶ್ವರರ ಸಂಪದವ
ಹಲವು ಮಾತೇಕೆಮ್ಮ ಜನನಿಯ
ವಿಳಸದನುಪಮ ರತ್ನಮಯ ಕುಂ
ಡಲಗಳನು ಕಿವಿಗಳಲಿರಲು ಕೊಂಡೊಯ್ದನವನೆಂದ ೫

ಅರ್ಥದಿಂದಭಿಮಾನದಿಂದ ನಿ
ರರ್ಥರಾದೆವು ಕೃಷ್ಣ ಕಾರು
ಣ್ಯಾರ್ಥಿಗಳು ನಾವೆನುತ ಮಣಿಮುಕುಟಪ್ರವೇಶದಲಿ
ತೀರ್ಥಪಾದ ಪದಾಬ್ಜಯುಗಳವ
ನರ್ಥಿಸಲು ನಸುನಗುತ ನಿಜ ಪರ
ಮಾರ್ಥರೂಪನು ನೆಗಹಿ ಕರುಣೇಕ್ಷಣದಲಿಂತೆಂದ ೬

ಏಳು ಮರುಳೆ ಮನೋವಿಷಾದವ
ಬೀಳುಕೊಡು ನಾನಿರಲು ಭಕ್ತರ
ಮೇಲೆ ಬೀಸುವ ಗಾಳಿ ಬಿಱುಸಹುದೇ ನಿಧಾನಿಸಲು
ಶೀಲವನು ನೀನಱಿಯೆ ಖಳನನು
ನಾಳಿನಲಿ ತೋಱಿಸುವೆನಂತಕ
ನಾಲಯದಲೆಂದಸುರರಿಪು ಕಳುಹಿದನು ಸುರಪತಿಯ ೭

ಅತ್ತಲಮರಾಧೀಶ್ವರನ ಕಳು
ಹುತ್ತ ನೆನೆದನು ಮನದೊಳಗೆ ವಿಹ
ಗೋತ್ತಮನನಾ ಕ್ಷಣವೆ ಬಂದನು ಗರುಡನಾಳಿದನ
ಚಿತ್ತವೃತ್ತಿಯನನುಸರಿಸಿ ನತ
ಮಸ್ತಕದಲಿರಲೇಱಿ ನಡೆದನು
ಸತ್ಯಭಾಮಾದೇವಿಸಹಿತಮುರಾಂತಕನ ಪುರಕೆ ೮

ಕಂಡನಾ ಹಿಮಗಿರಿಯ ಬಹಳೋ
ದ್ದಂಡ ಶಿಖರಾಗ್ರದಲಿ ಮೆಱೆವಾ
ಖಂಡಲಾರಿಯ ಪುರವನಾ ಪ್ರಾಗ್ಜ್ಯೋತಿಷಾಹ್ವಯನ
ಚಂಡಗಿರಿ ಜಲಪಾವಕಾಸ್ತ್ರಾ
ಖಂಡ ಮುರಪಾಶಾವಳೀ ಪರಿ
ಮಂಡಿತಪ್ರಾಕಾರವನು ರಿಪುಭಟಸುದುರ್ಗವನು ೯

ಉರಗನಿಕರಾವೇಷ್ಟಿತದ್ರುಮ
ವರವೊ ಲೋಭಿಯ ಧನವೊ ನಕ್ರಾಂ
ತರಿತಜಲವೋ ಹೀನವನಿತಾ ರೂಪವಿಭ್ರಮವೊ
ವಿರತಿಯಿಲ್ಲದ ಮೋಕ್ಷ ಧರ್ಮಾ
ಚರಣೆಯೋ ಕ್ರೋಧಾನ್ವಿತರ ಶಮ
ದಿರವೊ ಹೇಳೆನಲೆಸೆದುದಸುರನ ಪುರಮಹಾವಿಭವ ೧೦

ಉರವಣಿಸಿ ಕೌಮೋದಕಿಯಲಿ
ಟ್ಟೊರಸಿದನು ಸಾಗರವನಲ್ಲಿಗೆ
ತೆರಳ್ದನಸುರಾರಾತಿ ಗಿರಿಮಯದುರ್ಗವನು ಕಳಿದು
ಉರುಳಿಸಿದನಸ್ತ್ರೌಘದಲಿ ದು
ರ್ಧರ ಮಹಾ ಶಸ್ತ್ರಾವಳಿಗಳು
ಬ್ಬರವನಾಗ್ನೇಯಾಸ್ತ್ರದಲಿ ಸೇದಿದನು ತಜ್ಜಲವ ೧೧

ಚಕ್ರದಲಿ ಮುರಪಾಶವನು ತಱಿ
ದಿಕ್ಕಿದನು ವಾರುಣದಲಗ್ನಿಯ
ಸೊಕ್ಕನುದುರಿಸಿ ಖಡುಗದಲಿ ಕ್ಷುರಮಾಲೆಗಳ ತಱಿದು
ಹೊಕ್ಕನಾ ದಾನವನ ಕೃತಕವ
ಮಿಕ್ಕು ನಿಮಿಷಾರ್ಧದಲಿ ಪುರವನು
ಜಕ್ಕುಲಿಸಿ ಮೊಳಗಿದನು ಶಂಖೋತ್ತಮವನಡಿಗಡಿಗೆ ೧೨

ಸಿಡಿಲು ಹೊಡೆದಂದದಲಿ ತಲೆ ಎದೆ
ಯೊಡೆದವೋಲುಬ್ಬರದ ಶಂಖದ
ಕಡು ಕಠೋರ ಧ್ವನಿಯನಾಲಿಸುತೆದ್ದು ಮೈಮುರಿದು
ಕಡುಗಿ ಮುರನೆಂಬವನು ಕಲ್ಪದ
ಕಡೆಯ ರುದ್ರನವೋಲು ಕಂಗಳು
ಕಿಡಿಗೆದಱೆ ಘನ ಸಿಂಹನಾದವ ಮಾಡಿ ಹೊಱವಂಟ ೧೩

ಐದು ಮುಖದಲಿ ಗಜಱಿ ಗರ್ಜಿಸಿ
ಕೈದುವನು ಬರಸೆಳೆದು ಭುಜವನು
ಹೊಯ್ದು ಮಲೆದವರಾರು ತನ್ನೊಡನಮರದೈತ್ಯರಲಿ
ಕೈದುಗೊಳ್ಳೇಳೆನುತ ಹರಿಯನು
ಬೈದು ಸವೆದುದು ನಿನ್ನ ಹೆಂಡತಿ
ಗೈದೆತನವೆನುತಿಟ್ಟನಾ ಶೂಲದಲಿ ಖಗಪತಿಯ ೧೪

ಉರಿಯನುಗುಳುತ ಗರುಡದೇವನ
ಶಿರದಲೆಱಗುವ ಶೂಲವನು ಕ
ತ್ತರಿಸಿ ಕೆಡಹಿದನೆಂಟು ಬಾಣದಲಸುರರಿಪು ನಗುತ
ಕೆರಳಿ ಮುರನಬ್ಬರಿಸಿ ಗದೆಯನು
ತಿರುಹಿ ತೀವ್ರ ಕ್ರೋಧದಲಿ ತನು
ಬಿರಿಯಲಿಟ್ಟನು ದುಷ್ಟಮರ್ದನನುರವನುರವಣಿಸಿ ೧೫

ಎದೆಯಲೆಱಗುವ ವೈರಿಸುಭಟನ
ಗದೆಯ ಗದೆಯಲಿ ಹೊಯ್ದು ನುಗ್ಗೊ
ತ್ತಿದನು ಸಾವಿರ ಹೋಳೆನಲು ಬಿದ್ದುದು ಧರಿತ್ರಿಯಲಿ
ತ್ರಿದಶರಿಪು ಬ್ರಹ್ಮಾಂಡ ಬಿರಿವಂ
ತೊದೆದು ಧರೆಯನು ಬೊಬ್ಬಿಡಲು ಬಹು
ವದನದಲಿ ಕಲ್ಪಾಂತಭೈರವನಂತೆ ಖತಿಗೊಂಡ ೧೬

ಅಬ್ಬರಿಸಿ ತೋಳ್ಗಳಲಿ ನಭವನು
ಗಬ್ಬರಿಸುತ್ತೈತರಲು ಚಕ್ರವ
ತುಬ್ಬಿದನು ತುದಿವೆರಳ ಸನ್ನೆಯಲವನ ತಲೆಗಳಿಗೆ
ಸರ್ಬಲೋಕೇಶ್ವರನು ಸಕಲ ಸು
ಪರ್ಬಜನವುಘೆಯೆನಲು ತಲೆಗಳ
ನುರ್ಬಿಗಿಳುಹಿದನೊಂದು ನಿಮಿಷಾರ್ಧಾರ್ಧಮಾತ್ರದಲಿ ೧೭

ಲೇಸೆನುತ ಮಲ್ಲಿಗೆಯ ಮಳೆಗಳು
ಸೂಸಿದವು ಸುರವರವಿಮಾನದ
ಬೇಸಿಗೆಯ ಬಲು ಮುಗಿಲ ಮೋಹರದಿಂದ ಭೂತಳಕೆ
ವಿಾಸಲಳಿದುದು ಮುರನ ಜೀವವಿ
ನಾಶದಲಿ ದುರ್ಜಯನೆನಿಪ ನರ
ಕಾಸುರನ ಸಾಮರ್ಥ್ಯವೆನುತಿರ್ದುದು ಸುರಸ್ತೋಮ ೧೮

ತಂದೆಯುಳಿವನು ಕಾಣುತಾ ಮುರ
ನಂದನರುಧೃತಮುಖ್ಯರೇಳ್ವರು
ಬೆಂದವೊಲ್ಬಸವಳಿದು ಶೋಕಕ್ರೋಧವಹ್ನಿಯಲಿ
ಸಂದಣಿಯಲೇಱದರು ರಥವನು
ಕೊಂದವನ ತೋಱೆನುತ ದೇವ ಮು
ಕುಂದನನು ಮುಸುಕಿದರು ಬಹಳ ಮಹಾಸ್ತ್ರವರುಷದಲಿ ೧೯

ಇಟ್ಟಿ ಮುಸಲ ಮುಸುಂಡಿ ಮುದ್ಗರ
ಪಟ್ಟಸಂಗಳ ಮಳೆಗಱೆವುತಗಿ
ದಿಟ್ಟಳಿಸಿ ಕವಿತಹ ಮುರಾತ್ಮಜರನು ರಣಾಗ್ರದಲಿ
ತೊಟ್ಟಿಸುತ ಸರಳುಗಳನೊಡಲೊಳ
ಗಿಟ್ಟು ಬಳಿಕಂತಕನ ಕೈಯೆಡೆ
ಗೊಟ್ಟನವರನು ಘನಮಹಿಮನೊಂದೇ ಮುಹೂರ್ತದಲಿ ೨೦

ಹಾಯೆನುತ ಹರಿದೈದಿ ದೂತನಿ
ಕಾಯವಾ ಮುರವಧೆಯನಾ ತಱು
ನಾಯಲಾ ತತ್ಪುತ್ರವಧೆಯ ವಿಚಿತ್ರಸಂಗತಿಯ
ಜೀಯೆನುತ ಬಿನ್ನವಿಸೆ ದೈತ್ಯರ
ರಾಯನೆದ್ದನು ಬಿಗಿದರೋಷದ
ಬೀಯಗವನೊಡೆಮುರಿದ ಕಂಗಳ ರೌದ್ರವದನದಲಿ ೨೧

ಹೂಂಕರಿಸುತಡಿಗಡಿಗೆ ರೋಷಭ
ಯಂಕರಾನನನೆದ್ದನೆಡಬಲ
ವಂಕದವರನು ನೋಡಿ ಬಹಳಾಟೋಪದಲಿ ಜಡಿದು
ಬಿಂಕ ಮಿಗಲೇಱದನು ಮದನಿ
ಶ್ಯಂಕಗಜವನು ಬದ್ಧಕವಚಾ
ಲಂಕೃತಾಂಗದಲಸುರರಿಪು ಹೊಱವಂಟನಾಹವಕೆ ೨೨

ಎಡಬಲದಲೈದಿದರು ರಥಿಕರ
ಗಡಣ ತುರಗಾರೋಹಕರು ವಂ
ಗಡದಲಾ ಮಾವಂತರೇಱದರಭ್ರಮಂಡಲವ
ತುಡುಕುವಿಭಘಟೆಗಳನು ಹಿಮಗಿರಿ
ಯೊಡೆದು ಸೂಸಿದವೋಲು ಕಾಲಾ
ಳಡಸಿ ಕವಿದುದು ಕೂಡೆ ನರಕಾಸುರನ ಪಾರ್ಶ್ವದಲಿ ೨೩

ನುಂಗುವಂತಿರೆ ಗಗನವನು ಮಾ
ತಂಗಮಲ್ಲನನೇಱ ದಾನವ
ಪುಂಗವನು ಬರುತಾ ಗರುತ್ಮನ ಪಕ್ಷ ಮೂಲದಲಿ
ರಂಗನಾಥನನೆಸೆವ ಶಂಖ ರ
ಥಾಂಗ ಗದೆ ಶಾರ್ಙ್ಗಂಗಳೆಸೆವ ಭು
ಜಂಗಳಲಿ ಭಾರ್ಯಾಸಮನ್ವಿತನಾಗಿರಲು ಕಂಡ ೨೪

ತೊಟ್ಟ ಮುಕ್ತಾಹಾರ ಕೌಸ್ತುಭ
ವಿಟ್ಟ ಮಣಿಕುಂಡಲದ ಮಕುಟ ನಿ
ವಿಷ್ಟರತ್ನಪ್ರಕರ ಕಂಕಣ ವರ ಚತುರ್ಭುಜದ
ಉಟ್ಟ ಪೀತಾಂಬರದ ಮೇಲಳ
ವಟ್ಟ ಮಣಿಮೇಖಲೆಯ ದನುಜಘ
ರಟ್ಟನೊಪ್ಪುವ ದಿವ್ಯಮೂರ್ತಿಯ ಕಂಡನಸುರೇಂದ್ರ ೨೫

ಬಾಲಸೂರ್ಯಸಹಸ್ರದೀಪ್ತಿಯ
ಮೇಲೆಸೆವ ಸುತಟಿತ್ಪ್ರಭಾನ್ವಿತ
ನೀಲಮೇಘವೊ ಗರುಡದೇವನಮೇಲೆ ರಂಜಿಸುವ
ಲೋಲಲೋಚನೆವೆರಸಿದಾ ಶ್ರೀ
ಲೋಲನೊ ಎನಲೆಸೆವ ಮೂರ್ತಿ ವಿ
ಶಾಲಶೋಭಾ ರಚಿತವಿಭವವ ಕಂಡನಸುರೇಂದ್ರ ೨೬

ಅತ್ತಲಸುರಾರಾತಿ ಬಹ ದೈ
ತ್ಯೋತ್ತಮನ ಕಾಣುತ್ತ ನಿಜ ಶಂ
ಖೋತ್ತಮುವ ಮೊಳಗಿಸಿದನುನ್ನತ ಸಿಂಹನಾದದಲಿ
ಹತ್ತುದೆಸೆಗಳು ಮಾರ್ಮೊಳಗಲು
ದೃತ್ತ ದನುಜೇಶ್ವರನ ಪಡೆಗಪ
ಮೃತ್ಯುವಾಯ್ತೆನೆ ಭೀತಿಯನು ಬೀಱದನು ಪರಬಲಕೆ ೨೭

ಕೇಳುತವೆ ಖಳನದನು ಕಿಡಿಗಳ
ನಾಲಿಗಳಲುಗುಳುತ್ತಲಕ್ಷ್ಮೀ
ಲೋಲನನು ಕೊಳ್ಳೆನುತ ತಿರುಹಿ ಮಹಾಶತಘ್ನಿಯಲಿ
ಬೀಳಲಿಟ್ಟನು ಬೊಬ್ಬಿಱದು ಪಡೆ
ಮೇಲೆ ಕವಿದೆಸಲೊಂದು ನಿಮಿಷಕೆ
ಕಾಳಗದ ಕೈಮಾಟ ಕಂಗೆಡಿಸಿತು ಜಗತ್ರಯವ ೨೮

ಅದ್ದನಸುರಾರಾತಿ ಬಾಣ ಸ
ಮುದ್ರದಲಿ ನಿಮಿಷಾರ್ಧಮಾತ್ರದ
ಲೆದ್ದ ನೌರ್ವಾನಳನ ಪೋಲೇನೆಂಬೆನದುಭುತವ
ಛಿದ್ರಿಸಿದನನಿಬರ ಶರೌಘವ
ನದ್ರಿಧರನಂಬಿನಲಿ ಭಟರನು
ಮುದ್ರಿಸಿದನಿಭತುರಗರಥ ಪತ್ತಿಗಳು ಕಡಿವಡೆಯೆ ೨೯

ಒರ್ಬನೊಂದೇ ಚಾಪದಲಿ ರಿಪು
ಗರ್ಭಭೇದನನೆಸುತಲಿರ್ದನು
ಸರ್ಬರನು ಸಮರದಲಿ ಕವಿವ ಸುರಾರಿಯೂಥಪರ
ಪರ್ಬತಂಗಳ ಪಕ್ಷವನು ಶತ
ಪೆರ್ಬದಲಿ ಕಡಿದೊಟ್ಟುವಾ ಶತ
ಪರ್ಬಧರನಂದದಲಿ ಚಿತ್ರವದಾಯ್ತು ಮೂಜಗಕೆ ೩೦

ಹಿಂಗಿದವು ಗಜಘಟೆಗಳಸುಗಳು
ಭಂಗವಡೆದವು ತೇರ್ಗಳಳಿವಿಂ
ಗಂಗವಿಸಿದುವು ತುರಗತತಿ ಕಾಲಾಳು ಕಡಿವಡೆದು
ಸಂಗವಿಸಿದುವು ಧರೆಯುಲಹಿತರ
ಮುಂಗುಡಿಯ ಮೋಹರ ಮುಱಿದು ಚತು
ರಂಗಬಲ ಬಯಲಾಯ್ತು ಬಲಿಮದಮಥನನಾಹವಕೆ ೩೧

ಇಱಿದಿಱಿದು ತುಂಡದಲಿ ನಖದಲಿ
ಜಱಿದು ಪಕ್ಷಂಗಳಲಿ ಪಕ್ಷಿಗ
ಳೆಱೆಯ ಖಳರನು ಬಹಳ ಗಜಘಟೆಗಳನು ತುರಗವನು
ಒಱಗಿಸಿದನರುಣಾಂಬುಗಳ ಹೆ
ದ್ದೊಱೆಯಲದ್ದಿದನಂಘ್ರಿಚಾರಿಗ
ಳುಱುವ ಬಲವನು ಬೀದಿವರಿವರಿದಾಹವಾಗ್ರದಲಿ ೩೨

ತುಂಗವಿಕ್ರಮ ಖಗಪತಿಯ ಪ
ಕ್ಷಂಗಳಲಿ ನಖಮುಖಗಳಲಿ ಚತು
ರಂಗಬಲ ಕಡಿವಡೆದು ಮೇಲೆ ಮುಕುಂದನಸ್ತ್ರದಲಿ
ಕಂಗೆಡುತ್ತಿರೆ ಕಂಡು ದಾನವ
ಪುಂಗವನು ನಿಲಿಸುವೆನು ಗರುಡನ
ಸಂಗರವನೆನುತಿಟ್ಟನನುಪಮ ತೀವ್ರಶಕ್ತಿಯಲಿ ೩೩

ಮೇರುಗಿರಿಯನು ವಜ್ರದಲಿ ಬಲ
ವೈರಿಯಿಡುವಂದದಲಿ ಸುರಕುಲ
ವೈರಿ ಶಕ್ತಿಯಲಿಡಲು ಗರುಡನ ಮೇಲೆ ಬರುತಿರಲು
ವಾರಣೇಂದ್ರನ ಮೇಲೆ ಬಿದ್ದಂ
ತೋರೆಗೆಡೆದುರುಳಿತ್ತು ಧರಣಿಗೆ
ಮೇರೆಯನು ಮೀಱಿತ್ತು ವಿಹಗಾಧಿಪನ ಬಲವಾರ್ಧಿ ೩೪

ಮತ್ತೆ ಕೊಂಡನು ಕಾರ್ಮುಕವನು
ದ್ವೃತ್ತನಾದೊಡೆ ನೋಡೆನುತ ಪುರು
ಷೋತ್ತಮನನೆಚ್ಚನು ಮಹಾಶರಜಾಲದಲಿ ಜಡಿದು
ಹೊತ್ತು ಹೋಗದ ಸಮರವೇತಕೆ
ನುತ್ತ ಬಹುಶರಜಾಲವನು ಕಡಿ
ದತ್ತಲೇ ಬೀಸಾಡಿದನು ನಸುನಗುತ ಮುರವೈರಿ ೩೫

ನಗುವೆ ನೀನೆಮ್ಮನು ಹರಹರ
ನಗುವಡಜ ಭವ ಮುಖ್ಯರಂಜುವ
ರುಗುಳಿಸುವೆನುಬ್ಬಾಳುತನವನೆನುತ್ತ ಕಡುಮುಳಿದು
ತೆಗೆದನರ್ಧೇಂದ್ವಾಕೃತಿಯ ಹೊಗ
ರೊಗುವ ಬಾಣವನದನು ತೊಡಲಾ
ಜಗದಪತಿ ಕಡಿಗಳೆದನಸುರನ ಕರದ ಕಾರ್ಮುಕವ ೩೬

ಅದಟನಬ್ಬರಿಸುತ್ತ ಕೊಂಡನು
ಗದೆಯ ಸುರಗಿರಿ ಶೃಂಗದಂತಿರ
ಲುದುರಿಸಿದನದನೊಂದು ಬಾಣದಲಸುರರಿಪು ನಗುತ
ಬದುಕಿದ್ಯೆ ಹೋಗೆನುತ ಮತ್ತಾ
ತ್ರಿದಶರಿಪು ಪರಶುವಿನಲಿಡಲ
ಭ್ರದಲಿ ಮತ್ತದನಭ್ರನಿಭನಸಿಯಲಿ ವಿಭಾಡಿಸಿದ ೩೭

ಮೂದಲಿಸಿ ಖಳನಿಟ್ಟನಿಪ್ಪ
ತ್ತೈದು ತೋಮರಗಳಲಿ ಜೀವವ
ಕಾಯ್ದುಕೊಳ್ಳೆನ್ನೆನುತ ಘನತರ ಸಿಂಹನಾದದಲಿ
ವಾದುಗುಟ್ಟಲದೇಕೆನುತ ದಾ
ಮೋದರನು ಬಹ ತೋಮರಂಗಳ
ಹಾದಿಯನು ಹತ್ತಿಸಿದನೊಂದೇ ಬಾಣದಲಿ ಕವಿದು ೩೮

ಅಕ್ಕಟೀ ಗೋವಿಂದನಲಿ ಬಲ
ವಿಕ್ರಮಕೆ ನೆಱೆ ಹಾನಿಯೇ ಕೈ
ಯಿಕ್ಕಿದನು ಕೃಷ್ಣನನು ಜಡಿದು ಮಹಾತ್ರಿಶೂಲದಲಿ
ನಕ್ಕನಸುರಾರಾತಿ ನಿನಗಿದು
ತಕ್ಕುದೆಲವೋ ಯೆನುತ ತಲೆಯನು
ಚಕ್ರದಲಿ ತಡೆಗಡಿದನಭ್ರದಲಮರರುಘೆಯೆನಲು ೩೯

ಬಿದ್ದನವನಿಗೆ ತಾಯ ಪದದಲಿ
ಬಿದ್ದು ಕಳುಹಿಸಿಕೊಂಬವೊಲು ತಲೆ
ಹೃದ್ಯ ಮಣಿಕುಂಡಲ ಮಕುಟಮಣಿ ಕಿರಣ ಥಳಥಳಿಸಿ
ಭದ್ರವಾಯ್ತೆನಲಮರರಭ್ರದ
ಲಿದ್ದುದೀಕ್ಷಿಸಿ ಹರುಷದಿಂದನ
ವದ್ಯನನು ಹೊಗಳುತ್ತ ಕಱೆದರು ಪುಷ್ಪವೃಷ್ಟಿಗಳ ೪೦

ನೃತ್ಯಗೀತಸ್ತುತಿಗಳಲಿ ವಿಬು
ಧೋತ್ತಮರು ತಮತಮಗೆ ಗಂಧ
ರ್ವೋತ್ತಮರು ಸುರಸಿದ್ಧ ವಿದ್ಯಾಧರ ಮಹೋರಗರು
ಉತ್ತಮಾಂಗನೆಯರು ಸಹಿತ ಪುರು
ಷೋತ್ತಮನ ನಾಮಾಂಕಿತೋಕ್ತ ಚ
ರಿತ್ರವನು ಪಾಡುತ್ತ ಭಜಿಸುತ್ತಿದ್ದರೊಲವಿನಲಿ ೪೧

ಆ ಮಹಾಸುರನಿಕರ ಸಹಿತಾ
ಭೂಮಿಜಾತನ ವೈಭವವ ಲ
ಕ್ಷ್ಮೀಮನೋರಮಣನೀಕ್ಷಿಸಿ ಪುರವಾಸಿ ಜನಸಹಿತ
ಕ್ಷೇಮಧಾಮನು ಹೊಕ್ಕನಮರ
ಸ್ತೋಮ ಕೈವಾರಿಸಲು ಪೌರ
ಪ್ರೇಮದತ್ತಾರ್ಘ್ಯಾದಿ ಸತ್ಕಾರವನು ಕೈಕೊಳುತ ೪೨

ಕೆಂಡನದಜಿಠೊಳು ಕಮಲದೃಶನು
ದ್ದಂಡಮಣಿಪರ್ವತವನಿದಿರಲಿ
ಕಂಡನಮೃತಸ್ರಾವಿ ವರುಣಚ್ಛತ್ರಮಂಡಲವ
ಕೊಂಡು ಹೋಗಿದನೆನುತ ತೆಗೆದಾ
ಖಂಡಲಂಗಾ ರತ್ನಗಿರಿಯನ
ಖಂಡವಿಮಳಚ್ಛತ್ರವನು ವರುಣಂಗೆ ನೇಮಿಸಿದ ೪೩

ಕಳುಹಿ ಸುರರನು ಹೊಕ್ಕನಸುರನ
ನಿಳಯವನು ತ್ರೈಲೋಕ್ಯವೈಭವ
ನಿಳಯವನು ಬಳಿಕಲ್ಲಿ ಕಂಡಳು ಬಂದು ಮುರಹರನ
ಲಲಿತಪದವನು ಭೂಲಲನೆ ತ
ಲ್ಲಳಿಸುವಾ ನಿಜಪೌತ್ರನನು ತಂ
ದಲಘುಮತಿ ಕೆಡಹಿವಳು ಪದದಲಿ ಕಮಲಲೋಚನನ ೪೪

ಸಾಲರತುನದ ಕುಂಡಲಂಗಳ
ಸಾಲ ಸಿತ ವರವೈಜಯಂತಿಯ
ಮಾಲೆಯನು ತಂದಿತ್ತು ಪದದಲಿ ನಮಿಸಿ ಕೈಮುಗಿದು
ಪಾಲಿಸೆನ್ನನು ಕೃಷ್ಣ ಪರಮ ಕೃ
ಪಾಲಯನೆ ನಿಜಚರಣದಾಸ್ಯವ
ನೇಳಿದಿಟವನು ಮಾಡದೆಂದಳು ಚರಣವನು ಹಿಡಿದು ೪೫

ಹಲವು ಪರಿಯಲಿ ಕೀರ್ತಿಸಿದಳಂ
ದಲಘುಮಹಿಮನ ಮಹಿಮೆಯನು ಭೂ
ಲಲನೆ ಭಜಿಸುತ ಬಹುಳತರ ನಿಜಭಾವ ಭಕುತಿಯಲಿ
ಪುಳಕಭಾರೋದ್ಭಿನ್ನನಯನೋ
ದ್ಗಳಿತ ಜಲಧಾರೆಯಲಿ ಕೃಷ್ಣನ
ಲಲಿತ ಪದನನು ನಾದುತಿಂತೆಂದಳು ಮನೋಗತವ ೪೬

ನೀನೊಲಿನು ತನಗಿತ್ತ ಮುನ್ನೀ
ಸೂನುವನು ಮತ್ತಿಂದು ಕೊಂದಡೆ
ಹಾನಿ ಯಾವುದು ತನಗೆ ಸುರಸುಜನೈಕರಕ್ಷಕನೆ
ಮಾನ ನಿನ್ನದು ನಿನ್ನ ಭಕ್ತರ
ಹಾನಿ ನಿನ್ನದು ರಕ್ಷಿಸೀ ಮ
ತ್ಸೂನುವನು ಕಾರುಣ್ಯಚಿತ್ತದಲೆಂದಳಬುಜಾಕ್ಷಿ ೪೭

ದೇವಿ ಸಾಕೇಳಂಜದಿರು ನಿಜ
ಭಾವಭಕ್ತಿಗೆ ಮೆಚ್ಚಿದೆನು ಕೈ
ಗಾವೆನೇಳೆನುತೆತ್ತಿದನು ಭಗದತ್ತನನು ಬಿಡದೆ
ಸೇವಕನೆ ನೀನಂಜಬೇಡೆನು
ತೋವಿ ವೈದಡವಿದನು ಕೊಟ್ಟನು
ದೇವರಿಪುರಾಜ್ಯವನು ಪಟ್ಟವ ಕಟ್ಟಿ ಪತಿಕರಿಸಿ ೪೮

ಬಳಿಕ ಭೌಮನಿರುದ್ಧ ಕನ್ಯಾ
ನಿಳಯವನು ದೈತ್ಯಾರಿ ಹೊಕ್ಕನು
ಬಳಲವುತ್ಪಲವನಕೆ ಪೂರ್ಣಶಶಾಂಕನಂದದಲಿ
ಲಲನೆಯರು ದೂರದಲಿ ಕೃಷ್ಣನ
ಚೆಲುವ ಮೂರ್ತಿಯನೀಕ್ಷಿಸುತ್ತವೆ
ಘಳಿಲನೆದ್ದರು ಕಾಣುತಸುವನು ತನುಗಳಂದದಲಿ ೪೯

ಪರಮ ಮಂಗಳಮೂರ್ತಿಯನು ಪಂ
ಕರುಹಮುಖಿಯರು ನೋಡಿ ಮನದಲಿ
ಮರುಳುಗೊಂಡರು ಮನುಮಥನ ಮಸೆದಲಗಿನುಪಟಳಕೆ
ವರಿಸಿದರು ತಮುತಮುಗೆ ಲಕ್ಷ್ಮೀ
ವರನೆ ವರನಾಗೆಮಗೆನುತ್ತಾ
ವುರುತರ ಪ್ರೇಮಾನುಬಂಧನಪಾರವಶ್ಯದಲಿ ೫೦

ಮುಂದೆ ಚಿತ್ರದವೋಲು ಸತಿಯರು
ಸಂದಣಿಸಿ ಕಂಗಳಲಿ ನೆಱೆ ಕುಡಿ
ವಂದದಲಿ ಕಮನೀಯಮೂರ್ತಿಯ ಮಾಣದೀಕ್ಷಿಸುತ
ನಿಂದಿರಲು ಕಮಲಾಕ್ಷಿಯರ ಮನ
ದಂದವನು ಕಾಣುತ್ತ ಕಳುಹಿದ
ನಂದಣಂಗಳೊಳನಿಬರನು ವಿಭವದಲಿ ನಿಜಪುರಕೆ ೫೧

ನೀಱೆಯರ ತನುರಕ್ಷೆಗೋಲೆಯ
ಕಾಱರನು ಕಳುಹಿದನು ಧನವನು
ಹೇಱಿಸಿದನೆತ್ತುಗಳಲೋರಂತಾ ಪುರಾಂತರದ
ಸಾಱಿಸಿದನೊಲಿದಭಯಹಸ್ತವ
ತೋಱಿದನು ಪರಿಜನಕೆ ಹರುಷವ
ಬೀಱಿದನು ನಿತ್ಯಾತ್ಮಕೃಷ್ಣನಶೇಷ ಸುರಕುಲಕೆ ೫೨

ಅರವತ್ತೊಂಬತ್ತನೆಯ ಸಂಧಿ ಮುಗಿಯಿತು.

# ಎಪ್ಪತ್ತನೆಯ ಸಂಧಿ

ಕುಂಡಲವ ನಿಜಜನನಿಗಿತ್ತಾ
ಖಂಡಲನ ಪುರಲಕ್ಷ್ಮಿಯನು ನೆಱೆ
ಕಂಡು ಕಳುಹಿಸಿಕೊಂಡನಸುರಾರಾತಿ ನಿಜಪುರಕೆ

ಅರಸ ಕೇಳಸುರಾರಿ ದೈತ್ಯನ
ನೊರಸಿ ಕನ್ಯಾನಿವಹವನು
ಪುರಕೆ ಕಳುಹಿ ಸುರಾರಿಪುರವರದಿಂದ ಹೊಱವಂಟು
ಗರುಡವಾಹನನಾಗಿ ಗಗನೇ
ಚರರ ಪಥದಲಿ ಸತ್ಯಭಾಮಾ
ಸರಸಿಜಾನನೆ ಸಹಿತ ನಡೆದನು ಬಳಿಕ ಸುರಪುರಕೆ ೧

ನಿಂದು ಪೂರ್ವದ್ವಾರದಲಿ ಗೋ
ವಿಂದನಾ ಸುರಲೋಕಪಾಲರ
ವೃಂದ ಕೇಳಲು ಮೊಳಗಿಸಿದನುರು ಪಾಂಚಜನ್ಯವನು
ಬಂದನೈ ದಾತಾರನೆನುತಾ
ನಂದದಲಿ ಸುರನಾಥನೆದ್ದನು
ದುಂದುಭಿಯ ಕಹಳೆಗಳ ಕೋಳಾಹಳದ ರಭಸದಲಿ ೨

ನಾರಿಯರ ಕರಕಲಿತ ದರ್ಪಣ
ಚಾರು ಕಲಶಂಗಳಲಿ ನಿಜಪರಿ
ವಾರ ಸಹಿತುತ್ಸವದಲಂದಮರೇಂದ್ರನೈತರಲು
ಮೇರುಶಿಖರವ ಮುಗಿಲು ಮಿಂಚುಗ
ಳೋರಣದಿನಿಳಿವಂತೆ ದಾನವ
ವೈರಿ ಸತಿಸಹಿತಿಳಿದನಾ ನಾಗಾರಿವಾಹನನ ೩

ಮುಂದೆ ಮಾತಲಿ ದಿವ್ಯರಥವನು
ತಂದು ಚಾಚಲು ಕೈವಿಡಿದು ಗೋ
ವಿಂದನೇಱಿದನಬುಜಮುಖಿಸಹಿತಾ ಮಹಾರಥವ
ಸಂದಣಿಸಿ ಬಲವಂಕದೊಳಗೆ ಪು
ರಂದರಾದ್ಯರು ವಾಮಭಾಗದ
ಲಂದು ವರುಣ ಕುಬೇರ ಮುಖ್ಯಾಮರರು ನಡೆತರಲು ೪

ಭೂತಳದ ಭಾರವನು ಕಳೆಯಲು
ಜಾತನಾದನು ಗಂಡ ದಿಟ ಸಾ
ಕ್ಷಾತ ಲಕ್ಷ್ಮೀಕಾಂತನೇ ಕೃಷ್ಣಾಭಿದಾನದಲಿ
ಮಾತು ಬೇಡಿನ್ನೆನುತ ಹರ್ಮ್ಯ
ವ್ರಾತವನು ಹತ್ತಿದರು ಹರುಷ ರ
ಸಾತಿರೇಕದಲಬಲೆಯರು ಹರಿಗಾಂಬ ತವಕದಲಿ ೫

ಸತ್ತಿಗೆಯ ಚಾಮರದ ನೆಳಲೊಳ
ಗುತ್ತಮೋತ್ತಮನಖಿಳವಿಬುಧರ
ಮೊತ್ತದಲಿ ಬರೆ ಸತ್ಯಭಾಮಾದೇವಿಯರು ಸಹಿತ
ಮತ್ತಕಾಶಿನಿಯರು ಮುಕುಂದನ
ಮೂರ್ತಿಯನು ನೋಡುತ್ತ ಹರುಷರ
ಸೋತ್ತರದ ಪುಳಕದಲಿ ಮುಳುಗಾಡಿದರು ತವತವಗೆ ೬

ಉದಧಿಯನು ನೆಱೆ ಬೆರಸಿ ಮರಳದ
ನದಿಗಳಂತಿರಲಾ ಮುಕುಂದನ
ವದನಕಮಲವನೀಕ್ಷಿಸುತ ರೂಪಾಂತ ಕಂಗಳಿಗೆ
ಪದವನಿಡಲಕ್ಷಿಗಳ ಪಂಕಜ
ವದನೆಯರ ತನು ಡಿಂಬದಂತೊ
ಪ್ಪಿದವು ಮಲಗಿ ಗವಾಕ್ಷನಿಕರಂಗಳಲಿ ಬಸವಳಿದು ೭

ನೋಡಿ ನೋಡಿ ಮುಕುಂದನನು ಮಿಗೆ
ಬಾಡಿದವು ಬಳಿಸಲಿಸಿದವು ಕಂಗಳು
ಕೂಡೆ ಮನುಮಥನಿಕ್ಕಿದಿಡಿಗಿಚ್ಚಿನಲಿ ತನು ಬೆಂದು
ನೋಡಲನಿಮಿಷತೆಯನು ವಿಧಿ ನೆಱೆ
ಮಾಡಿದುದಪಂಪನಲಿ ಫಲ ಕೈ
ಗೂಡಿತೆನುತಿರ್ದುದು ತದೀಕ್ಷಣಸುಖದಲಬಲೆಯರು ೮

ಹೊಕ್ಕನಸುರಾರಾತಿ ಸುರವರ
ರಿಕ್ಕಲಿಸಲಮರೇಂದ್ರಭವನವ
ನಕ್ಕಜದಲಮರಾಧಿಪತಿ ಪರಮೋತ್ಸವಂಗಳಲಿ
ಇಕ್ಕಿ ಕಾಣಿಕೆಯನು ಪದಾಬ್ಜದೊ
ಳೊಕ್ಕನೊಡಲನು ನರಕನೆಂಬನ
ನಿಕ್ಕಿದೈ ತಲೆಗಾದೆ ತನ್ನನೆನುತ್ತ ಶಚಿಸಹಿತ ೯

ದಿವ್ಯರತ್ನಾಭರಣನಿಕರವ
ದಿವ್ಯವನಮಾಲಾಂಬರಂಗಳ
ದಿವ್ಯಗಂಧವರಾನುಲೇಪನಗಳನು ತವಗುಳ್ಳ
ದಿವ್ಯಭೋಗಂಗಳನು ಕೊಟ್ಟನು
ದಿವ್ಯಮಂಗಳಪುಣ್ಯಮೂರ್ತಿಗೆ
ದಿವ್ಯಚಿತ್ರಕೃತಾನುರಾಗದಲಂದು ಸುರನಾಥ ೧೦

ಬಳಿಕ ಹೊಕ್ಕನು ಕೃಷ್ಣನದಿತಿಯ
ನಿಳಯವನು ಸತಿಸಹಿತ ಮಣಿಕುಂ
ಡಳಗಳನು ಕೊಟ್ಟಿರದೆ ಸಂಭಾವಿಸಲು ಮನವೊಲಿದು
ನಳಿನನಾಭನ ಬರವನಾ ವರ
ಲಲನೆ ಕಾಣುತ ದೂರದಿಂದೆ
ದ್ದಳು ಮಹಾಸನದಿಂದ ಮಗನನು ಕಾಂಬ ತವಕದಲಿ ೧೧

ವಂದಿಸಿದನಖಿಳಾನತಾಂಘ್ರಿ
ದ್ವಂದ್ವನಾ ಸುರಜನನಿಯಂಘ್ರಿ
ದ್ವಂದ್ವದಲಿ ತಲೆವಾಗಿ ಸಪ್ರೇಮಾರ್ದ್ರನಯನದಲಿ
ಇಂದುಮುಖಿ ತೆಗೆದಪ್ಪಿದಳು ಗೋ
ವಿಂದನನು ಹರಸುತ್ತ ಪರಮಾ
ನಂದರಸ ಪುಳಕದಲಿ ಮೂರ್ಧ್ನಾಘ್ರಾಣವನು ಮಾಡಿ ೧೨

ಎಲಗೆ ಬಾ ಪೊಡಮಡುವುದತ್ತೆಯ
ರಲಘುಚರಣಕ್ಕೆನುತ ಕರುಣಾ
ಜಲಧಿ ಬೆಸಸಲು ಸತ್ಯಭಾಮಾದೇವಿ ಹರುಷದಲಿ
ಲಲಿತ ಪದಕಮಲದಲಿ ಮಣಿಕುಂ
ಡಲಗಳನು ತಂದಿರಿಸಿ ತತ್ಪದ
ನಳಿನದಲಿ ತಲೆವಾಗಿ ಪೊಡವಂಟಳು ಸರಾಗದಲಿ ೧೩

ತಾಯೆ ಬಾರೆನ್ನಾತ್ಮಬಂಧು
ಪ್ರಿಯನರಸಿಯೆ ಬಾ ಸದಾಭಿ
ಪ್ರಾಯೆ ಬಾ ಭುವನಾಧಿಪತಿಯರ್ಧಾಂಗಿ ಬಾಯೆನುತ
ಮಾಯೆ ಮಿಗಲಪ್ಪಿದಳು ಕಮಲದ
ಳಾಯತಾಕ್ಷಿಯನೊಲಿದು ಕಾಶ್ಯಪ
ಜಾಯೆ ಕೈಗಳು ದಣಿಯಲಧಿಕ ಮನೋನುರಾಗದಲಿ ೧೪

ಬಳಿಕ ಮಣಿಕುಂಡಲಗಳನು ಕಿವಿ
ಗಳಲಿ ತೊಡಿಸಲು ಸತ್ಯಭಾಮೆಯ
ನೊಲಿದು ಹರಸುತ್ತೆಂದಳನುರಾಗಾಶ್ರುನಯನದಲಿ
ಪಲಿತ ಜರೆ ವೈರೂಪ್ಯ ರುಜೆ ಕುಂ
ದಲಸು ಲಂಘನೆಯೆಂಬಿವೊಂದೂ
ಲಲನೆ ಸಲೆ ಸಂಭವಿಸದಿರಲಾ ನಿತ್ಯ ವರದಿಂದ ೧೫

ಹೂಗಳನು ಮುಡಿಸಿದಳು ನೀರಸ
ವಾಗದಿರಲಿವು ನಿನಗೆನುತ ತನು
ಭೋಗವನು ಮಾಡಿಸಿದಳನುಲೇಪನ ವಿಧಾನದಲಿ
ಆಗದಿರಲಿದಕಳಿವೆನುತ್ತನು
ರಾಗದಲಿ ದಿವ್ಯಾಂಬರವನಾ
ಭೋಗಿಶಯನನ ವನಿತೆಗಿತ್ತಳು ಮಾಸದಿರಲೆಂದು ೧೬

ಇಂತು ಸಂಭಾವಿಸಲು ಲಕ್ಷ್ಮೀ
ಕಾಂತನಾ ಸುರಜನನಿಯನು ಸಲೆ
ಸಂತವಿಸಿ ಬೀಳ್ಕೊಂಡು ಬಳಿಕಮರೇಂದ್ರಮುಖ್ಯರನು
ಅಂತಕಾಂತಕನೇಱಿ ನಾಗಕು
ಲಾಂತಕನನಾ ಸತ್ಯಭಾಮಾ
ಕಾಂತೆ ಸಹಿತಮರಾವತಿಯ ಪುರದಿಂದ ಹೊಱವಂಟ ೧೭

ಬರುತ ಕಂಡರು ಸತ್ಯಭಾಮಾ
ಹರಿಗಳಾ ಸುರಲೋಕಲಕ್ಷ್ಮಿಗೆ
ಪರಮ ಭವನವೆನಿಪ್ಪ ವನವನು ನಂದನಾಹ್ವಯವ
ಭರಿತ ಪುಷ್ಪಾಮೋದಗುಣ ಬಂ
ಧುರಿತ ಪವನೋದ್ಧೂತ ಭೃಂಗ
ಸ್ಫುರಿತ ಬಹಳ ದಿಗಂತವನು ಸಂಗತಸುರದ್ರುಮವ ೧೮

ದೇವವನವನು ಸತ್ಯಭಾಮಾ
ದೇವಿ ಕಾಣುತ ನುಡಿದಳಾ ರಾ
ಜೀವನಾಭನ ಕೈವಿಡಿದು ಮೊಗನೋಡಿ ನಸುನಗುತ
ಈ ವನದ ಹೆಸರೇನು ಕರುಣಿಸು
ದೇವ ಬಿನ್ನಹ ನೋಳ್ಪವಿದಱ ಮು
ಹಾವಿಭವ ಕಂಗೊಳಿಸುತಿದೆಯೆಂದಳು ಸರೋಜಮುಖಿ ೧೯

ಎರಡು ಘಳಿಗೆ ವಿಳಂಬವಾಗಲಿ
ಸುರವನ ಕ್ರೀಡೆಯಲಿ ದೇವರು
ಕರುಣಿಸುವುದೆನಲಿಳಿದನಾ ಗರುಡನನು ಗುಣವನಧಿ
ಸರಸಿಜಾನನೆ ಸಹಿತ ಕಾಹಿನ
ಚರರ ನಂಬಿಸಿ ಕೈವಿಡಿದು ಸುರ
ತರುಗಳನು ನೋಡುತ್ತ ಹೊಕ್ಕನು ಸುರಪತಿಯ ವನವ ೨೦

ತೋಱಿದನು ತದ್ವನದ ಸಿರಿಯನು
ನೀಱೆಗಾ ತರು ಗುಲ್ಮಲತೆಗಳ
ತಾಱುಥಟ್ಟಿನಲೆಸವ ಶುಕ ಪಿಕ ನಾದ ನಿರ್ಭರದ
ಮಿಾಱುವಳಿಕುಲಗೀತ ಮನವನು
ಸೂಱುಗೊಳಲಾಲೋಲ ಪಲ್ಲವ
ದೋಱುಗುಡಿಸುವ ಫಲಭರದ ಶಾಖೆಗಳ ಶೋಭೆಯಲಿ ೨೧

ಸುಳಿಸುಳಿದು ಸುಮನೋರಜಂಗಳು
ನಿಲುಕಿ ಗಗನಾಂಗಣಕೆ ಪರಿಮಂ
ಡಲಿಸಿ ಪವನಾವೇಶದಲಿ ಭೃಂಗಾನುಗತವಾಗಿ
ತೊಳಲುತಿರಲೋರಂತೆ ದೆಸೆ ದೆಸೆ
ಗಳಲಿ ತದ್ವನಲಕ್ಷ್ಮಿಯನು ನಿಜ
ಲಲನೆಗಿದೆ ನೋಡೆನುತ ನಡೆದನು ಕೂಡೆ ಕೈವಿಡಿದು ೨೨

ಕಂಡಳಂಗನೆ ಮುಂದೆ ಮೆಱೆವಾ
ಖಂಡಲನ ಸರ್ವಸ್ವವೆನಿಪು
ದ್ದಂಡ ಕಲ್ಪದ್ರುಮವನೊಪ್ಪುವ ಪಾರಿಜಾತವನು
ಕಂಡು ಕರೆದಳು ಕೃಷ್ಣನನು ಕೈ
ಕೊಂಡು ಮನದಲಿ ಕಳವಳಿಸಿ ಬೆಸ
ಗೊಂಡಳೀ ಮರನಾವುದದ್ಭುತವಿತ್ತ ನೋಡೆನುತ ೨೩

ಆವುದೀ ತರುವಿದಱ ಫಲದುಪ
ಜೀವಿಗಳು ಮೂಲೋಕದಲಿ ಮೇ
ಣಾವ ಧನ್ಯರೊ ಭಾಗ್ಯವಂತರೊ ಶಿವ ಮಹಾದೇವ
ದೇವ ಕುರುಣಿಸು ತನ್ನ ಕಂಗಳಿ
ಗಾವ ಜನ್ಮಾಂತರದ ಸುಕೃತ ಫ
ಲಾವಳಿಯೊ ನೆಱೆ ಫಲಿತವಾಯ್ತೆಂದಳು ಸರೋಜಮುಖಿ ೨೪

ಎಲೆಗಳಿವೆ ಹರಿನೀಲಮಯ ತಾ
ನಲಘು ಕನಕಪ್ರಚಯ ಬೇ
ರ್ಗಳು ಮೊದಲು ವಿಲಸತ್ಪ್ರವಾಳ ಪ್ರವರ ರತ್ನಮಯ
ಫಲನಿಕರವೇ ಸ್ಥೂಲ ಮುಕ್ತಾ
ವಳಿಯ ಕಿಂಜಲ್ಕ ವಜ್ರೋ
ತ್ಪಲಮಯವಿದೆಲೆ ದೇವ ನೋಡೆಂದಳು ಸರೋಜಮುಖಿ ೨೫

ಸ್ಥಗಿತ ವರ ವೈಡೂರ್ಯಮಯ ವೇ
ದಿಗಳು ಮರಕತ ರತ್ನಮಯ ಶಾ
ಖೆಗಳು ಮೃದು ಮಾಣಿಕ್ಯ ಪುಷ್ಪಾಳಿಗಳು ರಂಜಿಸುವ
ಅಗಧರನೆ ಮರನೆನ್ನ ಕಂಗಳ
ತಗವುತಿದೆ ಸೋಡಿತ್ತಲಿದೆ ಸೋ
ಜಿಗದ ಮರನೆಲೆ ದೇವ ಹೆಸರೇನೆಂದಳಬುಜಾಕ್ಷಿ ೨೬

ಎಂದಡೆಲೆ ಕಮಲಾಕ್ಷಿ ಸುರತರು
ವೃಂದದಲಿ ಮಿಗಿಲಮರ ದಾನವ
ವೃಂದಮಥಿತ ಮಹಾಬ್ಧಿಜಾತವು ಪಾರಿಜಾತವಿದು
ಇಂದ್ರನಿದಕಾಳುವನು ನವಮಣಿ
ವೃಂದಮಯವಿದ ನೋಡಿವರೆ ಬಾ
ಮುಂದೆ ವನಲಕ್ಷ್ಮಿಯನು ನೋಡುವೆವೆಂದನಸುರಾರಿ ೨೭

ದೇವತರುಗಳಿಗೆಲ್ಲ ಮಿಗಿಲು ಗ
ಡೀ ವರದ್ರುಮವಿನ್ನು ತನಗಿ
ನ್ನಾವುದನು ದಿಟ ಕಾಣಬೇಕೆಲೆ ದೇವ ವನಸಿರಿಯ
ಜೀವವಿದಱಲಿ ಕಂಗಳಿದಱಲಿ
ಲಾವಣಿಗೆಗೊಂಡಿವೆ ನಿರೂಪವ
ನೀವುದಿದಱಡಿಗೊಚ್ಚಿ ವರವಿಹುದೆಂದಳಬುಜಾಕ್ಷಿ ೨೮

ಕಂಡೆ ಸಾಕಿನ್ನೇನು ನಡೆ ಪರ
ಭಂಡದಲಿ ಮನವೇಕೆಮಗೆ ಭೂ
ಮಂಡಲದಲೇಳುಂಟು ಕಾರ್ಯ ವಿಶೇಷವೆಂದೆನಲು
ಪುಂಡರೀಕಾಕ್ಷನ ನುಡಿಗೆ ಹೆಡ
ಮಂಡೆಯನು ತುಱುಸುತ್ತ ನಿಜಕರ
ಪುಂಡರೀಕದ ಮುಕುಳದಲಿ ಬಿನ್ನವಿಸಿದಳು ತರಳೆ ೨೯

ದೇವ ಬಹುಮತವಹಡೆ ಚಿತ್ತವ
ನೀವುದೆನ್ನಯ ಬಿನ್ನಹಕೆ ನಿನ
ಗಾವುದರಿದೆಲೆ ಕಾಂತ ಕಲ್ಪದ್ರುಮಪತಿಯುನಿದನು
ಓವದೊಯ್ವುದು ಧರೆಗೆ ನಿಜಪದ
ಸೇವಕಿಯಲನುರಾಗವುಳ್ಳಡೆ
ದೇವ ಕರುಣಿಸೆನುತ್ತ ಕಂಬನಿದುಂಬಿದಳು ತರಳೆ ೩೦

ಬೇಡ ಸಾಕೀ ಮಾತನೆನ್ನೊಡ
ನಾಡದಿರು ವನಪಾಲರಱಿತಡೆ
ಕೇಡು ಬಹುದೆಲೆ ಕಾಂತೆ ಕಲ್ಪದ್ರುಮದಲಳಿಮನವ
ಮಾಡದಿರು ಸುರರೊಡನೆ ಕದನವ
ಹೂಡದಿರು ನೀನಿದಕೆ ತನ್ನನು
ಕಾಡದಿರು ಕೋಡದಿರು ನಡೆನಡೆಯೆಂದನಸುರಾರಿ ೩೧

ಆರೊಡನೆ ಗೋವಿಂದ ಭೀತಿಯ
ತೋಱೆ ನುಡಿದಪೆ ನಿನ್ನ ಮಹಿಮೆಯ
ನಾರಱಿವರೆಲೆ ದೇವ ಚಿತ್ತವಿಸೊಂದು ಬಿನ್ನಪವ
ಭೂರಿನಯನನ ಮನೆಗೆ ಹೋಗಿರ
ಲಾರು ತಾನೆಂದೆನ್ನಳಾತನ
ನಾರಿ ಪರಿಭವಿಸಿದಳು ಗರ್ವದಲೆಂದಳಬುಜಾಕ್ಷಿ ೩೨

ಗರ್ವಕಾರಣವಿದುವೆ ದೇವ ಸು
ಪರ್ವನರ್ಧಾಂಗನೆಗೆ ಮಾಳ್ಪೆವು
ಗರ್ವನಿರ್ವಾಪಣವನೆಂದೊಂದುಂಟಲೇ ತನಗೆ
ಉರ್ವಿಯಲಿ ತನಗಿರಲಿ ಸುರತರು
ಸರ್ವ ವನಿತೆಯರಿಂಗೆ ಮಿಗಿಲೆನೆ
ಸರ್ವ ಲೋಕಖ್ಯಾತೆಯಹೆ ತಾನೆಂದಳಬುಜಾಕ್ಷಿ ೩೩

ಇನಿಯಳೀ ಸತಿಯೆನಿಸುವೆನು ನಿ
ನ್ನನುಪಮಾಂಗನೆಯರಿಗೆ ಸುರತರು
ಮನೆಯ ಮುಂದಿರಲಿದಱ ನೆಳಲೊಳಗಾನು ಕುಳ್ಳಿರಲು
ನಿನಗೆ ತಾನೆಲೆ ದೇವ ವಲ್ಲಭೆ
ಯೆನಿಸುವಡೆ ಕೀಳೀ ದ್ರುಮವ ನಡೆ
ಮನಕೆ ಬಾರದಡೆಂದಳಪಗತವದನಲಕುಮಿಯಲಿ ೩೪

ಸತ್ಯಭಾಮೆಯ ನುಡಿಗೆ ಹರಿ ಕೃಪೆ
ವೆತ್ತು ಕಾಪಿನ ಭಟರ ಜಱೆದು ನ
ಗುತ್ತ ನಳಿತೋಳ್ಗಳಲಿ ನಿರುಪಮ ಪಾರಿಜಾತವನು
ಕಿತ್ತು ನೆಗಹಿದನಿರಿಸಿದನು ವಿಹ
ಗೋತ್ತಮನ ಮೇಲೇಱಿದನು ಬಳಿ
ಕುತ್ತಮೋತ್ತಮಕೀರ್ತಿ ಸತಿಸಹಿತೆದ್ದು ಹೊಱವಂಟ ೩೫

ಕೆಲರು ಬೇಡಲೆ ಕೃಷ್ಣ ಬೇಡೆಂ
ದುಲಿದು ಕವಿದರು ಮರದ ಬಳಿಯಲಿ
ಕೆಲರು ಹರಿದರು ಬೇಗದಲಿ ಸುರರಾಯನೋಲಗಕೆ
ಕೆಲರು ಮುಂದಡಗಟ್ಟಿ ನಿಂದರು
ಕೆಲರು ಕೈಯಲಿ ಹುಲುವಿಡಿದು ಬಲು
ಗಲಹವಹುದೆಂದೊದಱಿದರು ವನಗಾಹಿಗಳು ಬಿಡದೆ ೩೬

ಹರಿದು ದೂತರ ಮೇಲೆ ದೂತರು
ಬರುತಿರಲು ಮುಂದೊಬ್ಬನೆಂದನು
ಪರಿಮಿತದ ಮಾತುಂಟು ದೇವರು ಚಿತ್ತವಿಪುದೆನಲು
ಪರಿಮಿತವ ಗಿರಿಮಿತವನಾವುದ
ನಱಿಯೆವಾವ್ಕಿತ್ತೊಯ್ವುತೈದಳೆ
ಹರಿಯರಸಿ ಸುರತರುವನೆಂದರು ಚರರು ಸುರಪತಿಗೆ ೩೭

ಶಚಿಯ ಮೊಗವನು ನೋಡಿ ಕೋಪ
ಪ್ರಚಲಿತೇಂದ್ರಿಯನೆದ್ದನಮರ
ಪ್ರಚಯ ಬೆದಱಲು ಬಿಂಕದಲಿ ಗದ್ದುಗೆಯನೊಡೆಹೊಯ್ದು
ಸುಚರಿತನ ಸಂಗರಕೆ ದಿಗಧಿಪ
ನಿಚಯವನು ಕರೆ ಕರೆಯೆನುತ್ತವೆ
ಖಚರರಿಗೆ ನೇಮಿಸಿದನಧಿಕಾಟೋಪದಲಿ ಜಡಿದು ೩೮

ಮೊಳಗಿದವು ಸನ್ನಾಹ ಭೇರಿಗ
ಳಳೆ ಬಿರಿಯೆ ದಿಗಧೀಶ್ವರರ ಬಲ
ಜಲಧಿ ನೆರೆದುದು ಕಹಳೆಗಳ ಕಳಕಳ ಮಹಾರವಕೆ
ಕುಲಿಶಧರನೆಡಬಲದಲಮರಾ
ವಳಿಯುಘೇಯನಲೇಱಿ ನಡೆದನು
ಕುಲಗಿರಿಯವೋಲೆಸೆವ ಬಲುಗಜವನು ಮಹಾಹವಕೆ ೩೯

ಏಱಿದನು ತಗರನು ಹುತಾಶನ
ನೇಱಿದನು ಮಹಿಷನನು ಯಮನಗಿ
ದೇಱಿದನು ಪುರುಷನನು ನಿರುರುತಿ ವರುಣನುರುಝುಷವ
ಏಱಿದನು ಎರಳೆಯನು ಮಾರುತ
ನೇಱಿದನು ತುರಗವ ಕುಬೇರನು
ಏಱಲೀಶ್ವರನೇಱಿದನು ನಂದಿಯನು ಸಂಗರಕೆ ೪೦

ತುಡುಕಿ ತಂತಮ್ಮಾಯುಧಂಗಳ
ನಡಸಿ ದಿಗಧೀಶ್ವರರು ಸುರಪತಿ
ಯೆಡಬಲದಲುರವಣಿಸಿ ಸುಭಟರ ಸಿಂಹನಾದದಲಿ
ಬಡಬಶಿಖಿಗಿದಿರಾಗಿ ಬಹ ಹೆ
ಗ್ಗಡಲವೋಲೈತಂದುದಾ ಜಗ
ದೊಡೆಯನಹ ಗೋವಿಂದನನು ಬೆಂಬತ್ತಿ ಸುರಸೇನೆ ೪೧

ನಿಲ್ಲು ನಿಲ್ಲಲೆ ಕೃಷ್ಣ ಹೋಹೆಯ
ದೆಲ್ಲಿಗಿರಿಸೀ ಸುರರ ತರುವನು
ಬಲ್ಲೆಯಾದರೆ ಬವರವಿದು ಲೇಸಲ್ಲ ಲೇಸಲ್ಲ
ಕೊಲ್ಲೆವಾವೊಮ್ಮಿಂಗೆ ನಿನ್ನಯ
ವಲ್ಲಭೆಯ ದುಷ್ಕೃತಕೆ ಮೇಣದ
ನೊಲ್ಲದಿರ್ದೊಡೆ ಹಿಡಿ ಧನುವನೆನುತೈದಿದರು ಭಟರು ೪೨

ಎನಗೆ ತನಗಾ ಮುನ್ನ ತಾ ಮು
ನ್ನೆನುತ ಕವಿದುದು ಭಟನಿವಹವು
ಬ್ಬಿನಲಿ ಘನತರ ಸಿಂಹನಾದವ ಮಾಡಿ ಬೊಬ್ಬಿಱಿದು
ಅನಲನನು ಶರಭಾಳಿ ನುಂಗುವ
ಮನದಲೈತಹವೋಲು ಬರಲಾ
ದನುಜರಿಪು ಕಾಣುತ್ತ ನಗುತಿಂತೆಂದನಂಗನೆಗೆ ೪೩

ದೇವಿ ಬಂದರು ಬಿದ್ದಿನರು ಸಂ
ಭಾವಿಸುವಡೇನುಂಟು ನಿನ್ನಯ
ಭಾವದಲಿ ಸಂವರಣೆ ಸಂತವಿಸೀ ಸುರಾವಳಿಯ
ನಾವು ಮುನ್ನವೆ ಹೇಳಿವೇ ನೀ
ನಾವ ಬುಧ್ಧಿಯ ಕಂಡೆ ಸಮರವ
ನೀವೆವೋ ಮೇಣ್ಮರನನೀವೆಯೊ ಯೆಂದನಸುರಾರಿ ೪೪

ಚಿತ್ತವಿಸು ನಿರ್ಬಂಧವೆನ್ನಯ
ಚಿತ್ತದಲಿ ಮುನ್ನಿಲ್ಲ ದೇವರ
ಚಿತ್ತದೊಳಗುಳ್ಳದನು ಮಾಳ್ಪುದು ತನ್ನ ನೆವದಿಂದ
ಭಕ್ತರೀ ಸುರರಿವರೊಡನೆ ತಲೆ
ಯೊತ್ತಲೇಕೆಲೆ ದೇವ ಯೆನುತಾ
ಮತ್ತಕಾಶಿನಿ ನುಡಿದಳಾ ನಿತ್ಯಾತ್ಮಕನ ಮೊಗ ನೋಡಿ ೪೫

ಎಪ್ಪತ್ತನೆಯ ಸಂಧಿ ಮುಗಿಯಿತು.

## ಎಪ್ಪತ್ತೊಂದನೆಯ ಸಂಧಿ

ಲೀಲೆಯಲಿ ಪರಿಭವಿಸಿ ನಿರ್ಜರ
ಜಾಲವನು ಸಂತೈಸಿ ಲಕ್ಷ್ಮೀ
ಲೋಲನಂದೈತಂದು ಹೊಕ್ಕನು ದ್ವಾರಕಾಪುರಿಯ

ಅರಸ ಕೇಳಸುರಾರಿ ಸತಿಯನು
ಸರಸಸೂಕ್ತಿಯಲಿಂತು ನುಡಿಸು
ತ್ತಿರಲು ಕವಿ ಕವಿಯೆನುತ ಬೊಬ್ಬಿಱುವುತ್ತ ಸುರಕಟಕ
ಸುರಪತಿಯ ನೇಮದಲಿ ಕವಿದೆಸು
ತಿರಲು ಕಾಣುತ ಕೃಷ್ಣನೊಪ್ಪುವ
ಕರದ ಶಾರ್ಙ್ಗವ ಕಳೆದುಕೊಂಡಳು ಕಾಂತೆ ನಸುನಗುತ ೧

ದೇವ ನೋಡೀ ನಿನ್ನ ಚರಣದ
ಸೇವಕಿಯ ಸತ್ವವನೆನುತ ರಾ
ಜೀವಲೋಚನೆ ತೆಬ್ಬನೊದಱಿಸಿ ಶಾರ್ಙ್ಗದಲಿ ಶರವ
ತೀವಿ ತೊಟ್ಟನಿಬರ ಶರೌಘವ
ನೋವದೆಚ್ಚಳು ಸತ್ಯಭಾಮಾ
ದೇವಿ ದಿವಿಜರ ಕಂಗಳಿಗೆ ಮೆಱೆದಳು ಮಹಾದ್ಭುತವ ೨

ನೂಕು ಫಡ ಹೆಂಗಸಿನ ಮನದತಿ
ರೇಕವನು ನೋಡಿದಿರೆ ವಿಬುಧಾ
ನೀಕವಿನ್ನೇನೇನ ಕಾಣಲು ಬಾರದದುಭುತವ
ಲೋಕದಲಿ ಬದುಕಿರ್ದವರಿಗೇನು
ತಾ ಕುಬೇರನು ಬಹಳ ಯಕ್ಷಾ
ನೀಕದಲಿ ತಾಗಿದನು ಭಾಮೆಯನಧಿಕ ರೋಷದಲಿ ೩

ತಾಳಮಾತ್ರವೆನಿಪ್ಪ ಚಾಪವ
ಮೇಳವಿಸಿ ಕಂಗಳಲಿ ರೋಷ ಕ
ರಾಳಮುಖನುರಿಗೆದಱಿ ಕೊಡು ಚಾಪವನು ನಿಜಪತಿಗೆ
ಬಾಲೆ ನೀನೇಕೆಮ್ಮೊಡನೆ ಬಲು
ಗಾಳಗವು ನಿನಗೇಕೆನುತ ಕೆಂ
ಗೋಲ ಮಳೆಯನು ಕಱೆದನಾ ಕಮಲಾಕ್ಷಿಯಭಿಮುಖಕೆ ೪

ಕಾದು ಸಾಕೆಲೆ ಹೂಹೆ ಹೆಂಗೂ
ಸಾದಡೀಕ್ಷಿಸೆನುತ್ತ ಕೆನ್ನೆಗೆ
ಸೇದಿ ಶರವೈದೆಱಲಿ ಧನದನ ಬಹಳ ಜಠರವನು
ಭೇದಿಸಿದಳಬುಜಾಕ್ಷಿ ಕೈಯೊಡ
ನಾಧರಿಸಿದಾ ಧನದನೆಚ್ಚನು
ಮೂದಲಿಸಿ ಮುರವೈರಿಯರಸಿಯ ಮೂಱು ಬಾಣದಲಿ ೫

ಸತಿಶಿರೋಮಣಿ ಧನದನೆಚ್ಚಾ
ತ್ರಿತಯ ಬಾಣವನರ್ಧಚಂದ್ರಾ
ಕೃತಿ ಶರತ್ರಯದಿಂದ ಕಡಿದೀಡಾಡಿದಳು ಧರೆಗೆ
ಸ್ಮಿತಮಧುರವದನಾಬ್ಜೆ ಮುಗುಳೆಂ
ಟತುಳ ಬಾಣಂಗಳಲಿ ಬಿಡದೆ
ಚ್ಚತುಳಬಲನ ಲಲಾಟವನು ಕೀಲಿಸಿದಳಬುಜಾಕ್ಷಿ ೬

ನೊಂದು ಸೈರಿಸಿ ಧನದನಿಪ್ಪ
ತ್ತೊಂದು ನಿಶಿತ ಶರಂಗಳನು ತೊ
ಟ್ಟೆಂದುಮುಖಿಯನು ಜಱಿದು ಕವಿದೆಸಲಭ್ರಮಾರ್ಗದಲಿ
ಸಂದಣಿಸುತ್ತೈತರಲು ನಗುತರ
ವಿಂದಮುಖಿ ಕಡಿದೊಟ್ಟಿದಳು ಸರ
ಳೊಂದು ನೂಱಿನೆ ಮೂಱು ಬಾಣಂಗಳಲಿ ರಿಪುಶರವ ೭

ಮತ್ತೆ ತೊಡಲಸ್ತ್ರವನು ಕಂಡಾ
ಸತ್ಯಭಾಮಾದೇವಿ ನಗುತ ಪು
ಲಸ್ತ್ಯಪುತ್ರನ ಕೈಯ ಚಾಪವನೆರಡು ಕಡಿಯಾಗಿ
ಕತ್ತರಿಸಿದಳು ಸುರರು ವಿಸ್ಮಿತ
ಚಿತ್ತರಾದರು ಸಮರಮುಖದಲಿ
ಶಸ್ತ್ರ ಚಂದ್ರಾರ್ಧಾಕೃತಿಯ ಬಾಣದಲಿ ಕಡು ಮುಳಿದು ೮

ಫಡ ಯೆನುತ ಮತ್ತೊಂದು ಚಾಪವ
ತುಡುಕಿದನು ನಿಮಿಷಾರ್ಧದಲಿ ಕಡಿ
ವಡೆದ ಕಾಳೋರಗನವೋಲುರವಣಿಸಿ ರೋಷದಲಿ
ಕೆಡೆಯೆನುತ ದಿವ್ಯಾಸ್ತ್ರನಿಕರವ
ಗಡಣಿಸಿದನದನೆಲ್ಲವನು ನೆಱೆ
ಕಡಿದು ಬಿಸುಟಳು ಸತಿ ಮಹಾದ್ಭುತವಾಯ್ತು ಮೂಜಗಕೆ ೯

ನೋಡಿದನು ಸುಡುವಂತೆ ಸತ್ಯೆಯ
ನೀಡಿಱಿವ ರೋಷಾಗ್ನಿಶಿಖಿಯಲಿ
ಮೂಡಿ ಮುಳುಗಾಡುತ್ತ ನುಡಿದನು ತನ್ನ ಪೌರುಷವ
ನೋಡು ಹೆಂಗೊಲೆಗಕಟ ಮನವನು
ಮಾಡಲೇಕಿಂದಿನ್ನೆವರ ಕೊಂ
ಡಾಡಿದರೆ ಗೆಲವಾಯ್ತೆ ನಿನಗೆ ಮಹಾಹವದಲೆಂದ ೧೦

ಸೀಳಿ ಬಿಸುಡುವೆನಬಲೆಯನು ತನ
ಗೇಳಿದಿಟವೇಕೆನುತ ರೋಷ ಕ
ರಾಳ ಮುಖನಬ್ಬಱಿಸಿದನು ಘನಸಿಂಹನಾದದಲಿ
ಬಾಲೆ ಕಾಯಿದುಕೊಳ್ಳು ನೋಡುವೆ
ನಾಳುತನವನೆನುತ್ತ ತೊಟ್ಟನು
ಕಾಳಗಕೆ ತೆಗೆದರ್ಧಚಂದ್ರಾಕೃತಿ ಮಹಾಶರವ ೧೧

ತೊಡದ ಮುನ್ನವೆ ಕಾಂತೆ ಬಿಲ್ಲನು
ಕಡಿದು ಬಿಸುಟಳು ಮುಷ್ಟಿಯೊಳಗಿ
ಕ್ಕಡಿಯೆನಲು ಬಾಣದಲಿ ಭಾಪೆಂದಖಿಳ ಜಗ ಹೊಗಳೆ
ನಡುಗಿದುದು ಸುರಸೇನೆ ಧನದನ
ಕಡುಹು ಕಲಿಯೇಱಿತ್ತು ಕಂಗಳ
ಕಿಡಿಗೆದಱಿ ವೋರಂತೆ ತಳೆದನು ರೌದ್ರಮಯ ರಸವ ೧೨

ನುಂಗುವಂತಿರೆ ನೋಡಿ ಮುರಹರ
ನಂಗನೆಯನಗಿದಾರ್ದು ಚಾಪವ
ಭಂಗಿಸಿದಡೆನಗಾದ ಭಂಗವೆಯೆನುತ ಕಡು ಮುಳಿದು
ತಂಗಿ ನೋಡಾದಡೆ ಯೆನುತ ರಣ
ರಂಗ ಭಗ್ನನುದಾರರವದಲಿ
ಸಂಗರಕೆ ಸೆಳೆದನು ಭಯಂಕರವೆನಿಪ ಮುದ್ಗರವ ೧೩

ಇಟ್ಟನಾ ಮುದ್ಗರದಲಬಲೆಯ
ನಟ್ಟ ಬಿರಿಯಲು ತಿರುಹಿ ಕಿಡಿ ಕಿಡಿ
ಗುಟ್ಟುವಾಲಿಗಳಿಂದ ಕಡಿಯಿನ್ನಾದಡಿದದೆನುತ
ಮುಟ್ಟಲೀಯದೆ ಸತಿಯ ದನುಜಘ
ರಟ್ಟನಾ ಮುದ್ಗರವನದನಿರ
ದಟ್ಟಹಾಸವ ಮಾಡಿ ಹಿಡಿದನು ವಾಮಹಸ್ತದಲಿ ೧೪

ಐಸಱಲಿ ಬಯಲಾಯ್ತು ರಣದಭಿ
ಲಾಷೆ ಬಳಿಕಪಗಮಿಸಿದನು ವಿ
ತ್ತೇಶನಪ್ಪಿದನಸುರರಿಪು ಹೊಗಳುತ್ತ ನಿಜಸತಿಯ
ಪಾಶಧರನೈತಂದನಾತನ
ವಾಸಿ ತನ್ನದೆನುತ್ತ ರೋಷಾ
ವೇಶದಲಿ ಕಂಗಾಣದಸುರಾಂತಕನ ಸಮ್ಮುಖಕೆ ೧೫

ವರುಣನಾಹವ ತನಗೆನುತ ಪಂ
ಕರುಹಮುಖಿಯನು ನಿಲಿಸಿ ನಡೆದನು
ಗರುಡದೇವನು ಗಾಢಗರ್ವದಲಾತನಭಿಮುಖಕೆ
ಇರದೆ ಹಳಚಿದನುಗ್ರನಖಮುಖ
ಪರಮ ಪಕ್ಷಪುಟ ಪ್ರಹಾರದ
ಲುರವಣಿಸಿತಿಬ್ಬರ ಮಹಾಹವ ಶೌರ್ಯದಬ್ಬರಣೆ ೧೬

ಪಾಶಪತಿ ಪಕ್ಷೀಶ್ವರನ ಕೊರಳಲಿ
ಪಾಶವನು ಪಡಿಸಲಿಸಿ ರೋಷಾ
ವೇಶದಲಿ ಹಿಡಿದೆಳೆದನಾಹವರಂಗಮಧ್ಯದಲಿ
ಘಾಸಿಯಾದನು ವರುಣನಾ ವಿಹ
ಗೇಶನುರುಬೆಗೆ ಸಿಂಹವೆರಡತಿ
ರೋಷದಲಿ ಹಳಚುವವೊಲುಱೆ ಹಳಚಿದರುಭಯಭಟರು ೧೭

ಆಡಿಸಲದೇಕೆನುತ ಪಕ್ಷವ
ನೀಡಿ ನೆಗಹಿ ಜಲೇಶನನು ನೀ
ನೋಡು ಚಿತ್ರವೆನುತ್ತ ನುಡಿದನು ಮಕರವಾಹನನ
ಬೇಡ ನೀ ಹೋಗೆನುತ ತೆಗೆದೀ
ಡಾಡಿದನು ಸಾಗರಕೆ ಪಾಶದ
ಕೂಡೆ ಕೈನೆಲಹಾದನಭ್ರಸ್ಥಾಯಿಯಲಿ ವರುಣ ೧೮

ಬಳಿಕ ಪಾಶವ ಕೊಂಡು ಹೋಹುದೆ
ಬಲುಗದನವಾಯ್ತಾ ಜಲೇಶಂ
ಗಿಳಿದನಬುಧಿಗೆ ಕಾಲುನಡೆಯಲಿ ಬಳಲುತವೆ ಪುರಕೆ
ತೊಲಗದಾ ಪವಮಾನ ಪಾವಕ
ರಳವಿಗೊಟ್ಟರು ಕೃಷ್ಣನೊಡನೆಯು
ಕೊಳುಗುಳಕೆ ಕಲ್ಪಾಂತಕಾಲದ ರೋಷವನು ತಳೆದು ೧೯

ನಿಲ್ಲು ನಿಲ್ಲೆಲೆ ಕೃಷ್ಣ ಸಮರಕೆ
ಬಿಲ್ಲ ಹಿಡಿ ನೀನೆನ್ನ ಹೆಸರನು
ಬಲ್ಲೆಯಲ್ಲೈ ಯೆನುತ ತೆಗೆದೈದಂಬಿನಲಿ ಹರಿಯ
ನಿಲ್ಲದೆಚ್ಚನು ಪವನಸಖನಿದ
ಕೊಳ್ಳೆನುತ ಪವಮಾನನಾ ಸಿರಿ
ವಲ್ಲಭನ ಮೂಱಂಬಿನಲಿ ತೆಗೆದೆಚ್ಚನುರವಣಿಸಿ ೨೦

ಹೆಸರ ಬಲ್ಲೆನು ಬಲ್ಲೆನಂಜದಿ
ರುಸುರು ವೈಯವನೆಂಬನೊಬ್ಬನು
ಬಿಸಿಯು ವೈಯವನಧಿಕರಾದಿರಿ ಸಮರ ವಿದ್ಯೆಯಲಿ
ಎಸುಗೆ ಲೇಸಾಯ್ತೆನುತ ಮುರರಿಪು
ನಸುನಗುತ ಸರಳೊಂದಱಲಿ ಕೀ
ಲಿಸಿದನಗ್ನಿಯನೇಳಱಿಂದೆಡೆಯಾಡುವವನನೆಚ್ಚ ೨೧

ಥಟ್ಟುಗಿದುದೊಂದಂಬು ಪಾವಕ
ನಟ್ಟೆಯಲಿ ಮೊನೆಯೂಱೆ ಬೆನ್ನಲಿ
ಕೆಟ್ಟೆನಾರಾಹವಕೆ ತಾನಾರಾರು ಹರಿ ಯೆನುತ
ಬಿಟ್ಟುಕೊಂಡನು ವಹ್ನಿ ವಹ್ನಿಯ
ಬಟ್ಟೆ ಪವನಂಗಾಯ್ತು ಕೋಲಡ
ಗಟ್ಟಿದಂಗದ ಭಂಗದಲಿ ಜಾಱಿದರು ಭಯಭಟರು ೨೨

ಚಂಡಮಹಿಷವನೇಱಿ ಯಮನು
ದ್ದಂಡ ನಿಜದಂಡವನು ತಿರುಹುತ
ಕಂಡವರ ಕಂಗಳಿಗೆ ಬೀಱುತ್ತವೆ ಭಯಾನಕವ
ಕೆಂಡವನು ಕಂಗಳಲಿ ಕೆದಱುತ
ಗಂಡುಗಲಿ ಬರಲವನ ಹಸ್ತವ
ದಿಂಡುದಿರುಹುತ ಗದೆಯಲಿಟ್ಟನು ದಾನವಧ್ವಂಸಿ ೧೩

ಮುರಹರನ ಗದೆ ತಾಗಿ ಮಿಗೆ ಜ
ರ್ಝರಿತವಾದುದು ಜವನ ಕೈ ಪೈ
ಸರಿಸಿ ಬಿದ್ದುದುದಂಡವವನಿಗೆ ನೋಟಕರು ಬೆದಱಿ
ಹರಿಯೊಡನೆಯಾಹವದ ಕೆಲಸಕೆ
ಶರಣೆನುತ ಹಿಂಗುಡಿಗೆ ಮಹಿಷನ
ಮರಳಿಸಿದನೇನೆಂಬೆನಾಹವದುಱು ವಿಡಂಬನವ ೧೪

ಕಂಡು ನೈಋತಿ ಮನದೊಳಗೆ ಭಯ
ಗೊಂಡು ತನಗಿನ್ನೇಕೆನುತ ಕೈ
ಕೊಂಡನಂತರ್ಧಾನವನು ನಂದಿಯನು ಹಲ್ಲಣಿಸಿ
ಖಂಡಪರಶು ಮಹಾಹವಕೆ ಮುಂ
ಗೊಂಡು ನಿಜಪರಿವಾರ ಸಹಿತಾ
ಪುಂಡರೀಕಾಕ್ಷನನು ತಾಗಿಧನಧಿಕರೋಷದಲಿ ೧೫

ಸರ್ವಲೋಕೇಶ್ವರರು ತಮ್ಮೊಳ
ಗೀರ್ವರೇ ಹಳಚಿದರು ಗೆಲಲೆಂ
ದೋರ್ವರೋರ್ವರನಧಿಕತರಬಲವೀರ್ಯಸಂಯುತರು
ಶರ್ವನೆಚ್ಚನು ಹತ್ತು ಶರದಲಿ
ನಿರ್ವಿಶೇಷನನೈದಱಲಿ ಜಿತ
ದರ್ವಿಕರ ರಾಜನನು ನಿಲ್ಲೆನುತ ಬೊಬ್ಬಿಱಿದು ೧೬

ಕೃತ್ತಿವಾಸನೆ ಬಂದವನು ದಂ
ಡೆತ್ತಿ ನಮ್ಮೊಡನಾಹವಕೆ ನಿ
ವರ್ತಿಸಿತೆ ಮನ ಯುಕ್ತವೈಸಲೆ ಲೋಕಪಾಲರಿಗೆ
ಇತ್ತುದಕ್ಕಿಮ್ಮಡಿಯ ಮುಪ್ಪರಿ
ಗಿತ್ತಪೆನು ಕೊಳ್ಳೆನುತ ಹರಿ ಮೂ
ವತ್ತು ಬಾಣದಲೆಚ್ಚನಾ ಹರನನು ರಣಾಗ್ರದಲಿ ೧೭

ಇಱಿದಿಱಿದು ತುಂಡದಲಿ ಪಕ್ಷಾಂ
ತರಗಳಲಿ ನಖಗಳಲಿ ಪಕ್ಷಿಗ
ಳೆಱೆಯನಱೆಯಿಟ್ಟದನು ನಂದಿಯನತ್ತಲೊಂದೆಸೆಗೆ
ಜಱಿದು ನಾರಾಚಂಗಳೈವ
ತ್ತಱಲಿ ಮುರರಿಪು ಮತ್ತೆ ಕನಲಿದು
ಪೆಱೆನೊಸಲ ಹರನನು ವಿಭಾಡಿಸಿದನು ರಣಾಗ್ರದಲಿ ೧೮

ಪ್ರಳಯವಾಗಲಿ ಜಗಕೆ ಥರೆಯಿದು
ಜಲಧಿಗಿಳಿಯಲೆನುತ್ತ ಹರ ಘುಳು
ಘುಳಿಪ ಕೋಪಾಟೋಪದಲಿ ಬಹಳ ತ್ರಿಶೂಲವನು
ಸೆಳೆದು ಸಾವಿರ ಸುತ್ತನಭ್ರದ
ಲೆಳೆದು ಬಿಸುಟನು ಹತ್ತು ದೆಸೆಗಳು
ಮುಳುಗಲುಗ್ರಜ್ವಾಲೆಯಲಿ ಮುರಹರನ ಸಮ್ಮುಖಕೆ ೧೯

ಒಂದುದೈ ಬಲುಮೃತ್ಯು ಪರಿಹರಿ
ಪಂದವಾವುದೆನುತ್ತ ಗದೆಗೆ ಮು
ಕುಂದ ನೇಮವನಿತ್ತು ಕಳುಹಿದನದಱ ಸಮ್ಮುಖಕೆ
ದ್ವಂದ್ವಯುದ್ಧವದಾಯ್ತು ಹರ ಗೋ
ವಿಂದರಾಯುಧಗಳಿಗೆ ರೋಧೊ
ಮಂದಿರದ ಹೊಱಗೊಳಗನಾವರಿಸಿತು ಮಹಾಜ್ವಾಲೆ ೨೦

ಹಳಚಿ ಬಿಟ್ಟವು ಕೂಡೆ ಹರಿಹರ
ರಲಘು ದಿವ್ಯಾಯುಧವರಂಗಳು
ಜಲಧಿಯಲಿ ಕೌಮೋದಕೀ ಶೂಲಂಗಳುರವಣಿಸಿ
ಜಲಜನಾಭನ ಹೊರೆಗೆ ಬಂದುದು
ಬಳಿಕ ಗದೆ ವಿಶ್ವೇಶ್ವರನ ಕರ
ತಳಕೆ ಹಾಯ್ದುದು ಶೂಲ ನಿಂದುದು ಸಮರ ಸೌರಂಭ ೨೧

ಕೆರಳಿ ಖಡುಗವ ಕೊಂಡು ಹರನೈ
ತರಲು ಸಾಲದೆ ಸಮ:ರವೆನುತಾ
ಗರುಡದೇವನು ನಗುತ ವೃಷಭನ ಕೋಡುಗಳ ಹಿಡಿದು
ಮರಳಲಿಟ್ಟನು ನೂಱು ಬಿಲ್ಲಂ
ತರಕೆ ಹರನಲ್ಲಿಂದಲೇ ಮುರ
ಹರನನತ್ತಲೆ ಬೀಳುಕೊಂಡನು ರಜತ ಗಿರಿವರಕೆ ೨೨

ಜಾಱಿದನು ಹರನತ್ತಲಾನೆಯ
ನೇಱಿದನು ದೇವೇಂದ್ರನಾಹವ
ಕೇಱಿಸಿದ ಬಿಲ್ಲಿನಲಿ ಕವಚ ಕೃಪಾಣವನು ಬಿಗಿದು
ಮೂಱು ಲೋಕದ ಗಂಡ ನಾನೆನ
ಗಾಱು ಸರಿ ಜಗದೊಳಗೆ ಚಿತ್ರವ
ತೋಱುವೆನು ನಿಲು ನಿಲ್ಲೆನುತ ಹಳಚಿದನು ಮುರಹರನ ೨೩

ಅಳಿಮನದಲಾ ಶಚಿಯ ಮೂದಲೆ
ಗಳನು ನೆನೆವುತ ರೋಷಪರಿಯಾ
ಕುಲಿತನಯನನು ಭರದಲೈತರಲಾಹವಾಗ್ರದಲಿ
ನಳಿನನಾಭನು ಪಾಂಚಜನ್ಯವ
ಮೊಳಗಿಸಿದನೋರಂತೆ ಸುರರ
ಗ್ಗಳೆಯನಾಟೋಪವನು ಕಾಣುತ ಭುವನಜನ ಬೆದಱಿ ೨೪

ಅಸಮ ಶಂಖಧ್ವನಿಯ ಕೇಳುತ
ಮುಸಗಿ ಕೋಪಾಟೋಪಾದಲಿ ಹೊಸ
ಮಸೆಯ ದಿವ್ಯಾಸ್ತ್ರವನು ತೆಗದೆಚ್ಚನು ಮುರಾಂತಕನ
ಮುಸೆವಡೆದುವಕ್ಷದಲಿ ಮುರರಿಪು
ನಸುನಗುತ ನೀನಹುದೊ ಕಡು ಸಾ
ಹಸಿಕನಾದೆಯಲಾ ಯೆನುತ ಕೊಂಡಾಡಿದನು ಭಟನ ೩೪

ಮತ್ತೆ ಸುರಪತಿ ಕೋಪವಶದಲಿ
ಹತ್ತು ಶರವನು ತುಡುಕಿ ತೆಗೆದೆಸು
ತತ್ಯಧಿಕರವದಿಂದ ಮಾಡಲು ಸಿಂಹನಾದವನು
ಹತ್ತನೊಂದೇ ಬಾಣದಲಿ ಕಡಿ
ದುತ್ತಮೋತ್ತಮ ಮತ್ತೆ ನೂಱನೆ
ಕತ್ತರಿಸಿ ಹರಿಹಯನನೆಚ್ಚನು ನಗುತ ಲೀಲೆಯಲಿ ೩೫

ತಾಗಿ ಥಟ್ಟುಗಿದುರದ ಕವಚವ
ನೀಗಿ ಹರಿವರುಣಾಂಬುರಂಜಿತ
ವಾಗಿ ಬೆನ್ನಲಿ ಬೀಳುಕೊಂಡು ಸುತೀವ್ರ ವೇಗದಲಿ
ಭೋಗಿನಿಕರದವೋಲಪರ ದಿಗು
ಭಾಗದಲಿ ಧರೆಗಿಳಿವುತಿರ್ದವು
ನಾಗಲೋಕಕ್ಕಿಳಿಯದಿರವೆನೆ ಹರಿಶರವ್ರಾತ ೩೬

ವಾಸವನು ಬಸವಳಿಯದೆಚ್ಚನು
ವಾಸುದೇವನನಧಿಕ ರೋಷಾ
ವೇಶದಲಿ ಹದಿನಾಱು ಬಾಣಂಗಳಲಿ ಕಡು ಮುಳಿದು
ಬೇಸಱದೆ ಮೂಱಂಬಿನಲಿ ಹೊಱ
ಬೀಸಿದನು ಬಹ ಬಾಣನಿಕರವ
ನಾ ಸಕಲ ಭುವನೇಶ್ವರನು ನಗುತಟ್ಟಹಾಸದಲಿ ೩೭

ಮತ್ತೆ ಮುರರಿಪು ಮುನಿದವೋಲ್ಮೂ
ವತ್ತು ಶರದಲಿ ತೆಗೆದೆಸಲು ಮೊಳ
ಗುತ್ತ ಮುಳುಗಿದವಮರಪತಿಯ ವಿಶಾಲವಕ್ಷವಲಿ
ಕೆತ್ತಿದವು ಮೀಸೆಗಳು ಹೂಂಕರಿ
ಸುತ್ತ ಸುರಪತಿ ನೊಂದು ಸುಯ್ದುರ
ಗೋತ್ರಮನವೋಲಧಿಕ ರೋಷಕರಾಳಮುಖನಾದ ೩೮

ತೀರದೀತನ ಸಮರ ಗರುಡನ
ತೀರಿಚಿದಡಲ್ಲದೆ ಯೆನುತ ನಿಜ
ವಾರಣೇಂದ್ರನನಂಕುಶದಲಿರದೊತ್ತಿ ಹಡಿಮುಖಕೆ
ಪ್ರೇರಿಸಿದೊಡೌಕಿದುದು ಗಜ ನಾ
ಗಾರಿಯನು ನಾಲ್ಕೆಸೆವ ದಂತದ
ಕೂರಲಗಿನಲಿ ಹಾಯ್ದು ಪುರ್ಬಂಗಳನು ಕಡು ಮುಳಿದು ೩೯

ಆಯಿತೇ ವಾಹನಸಮರ ಹರಿ
ನಾಯಿತೇ ನಿಜವಿಕ್ರಮದ ಸಿರಿ
ಗಾಯುವಂತನೆ ಬಳಲಿದೆಯಲಾ ಬಹಳ ಸಂಯುಗದ
ಆಯತಿಕೆಯಿಂದೆನುತಲಾ ಖಗ
ರಾಯನಾ ನಖಪಕ್ಷ ತುಂಡ ನಿ
ಕಾಯದಲಿ ಮುಂಕೊಂಡು ಮುರಿದೌಕಿದನು ಬಲುಗಜನ ೪೦

ಸಾಕಿದೇತಕೆ ಹಂಗು ಹೋರಲ
ದೇಕೆ ಹೊರೆಯೊಳು ನಿಧಿಯಿರಲು ತಿರಿ
ದೇಕೆ ಬಳಲುವೆನೆನುತ ಬಹಳಾಟೋಪದಲಿ ಜಡಿದು
ಪಾಕಶಾಸನನಪಗತಾತ್ಮ ವಿ
ವೇಕಶಾಸನಗಾಗಿ ವಿಬುಧಾ
ನೀಕ ನೋಡಲು ತುಡುಕಿದನು ವಜ್ರವನು ವಹಿಲದಲಿ ೪೧

ಇಟ್ಟನಾ ವಜ್ರದಲಿ ಕನಲುತ
ದುಷ್ಟಮರ್ದನದೇವನನು ಕಂ
ಗೆಟ್ಟು ಸುರಪತಿ ಸಕಲ ಸುರಮುನಿನಿಕರ ಹಾಯೆನಲು
ಬೆಟ್ಟ ಬಿರಿವಂದದಲಿ ಬವರದ
ಲಟ್ಟಹಾಸವ ಮಾಡಿ ಮುರರಿಪು
ಮುಟ್ಟಲೀಯದೆ ತುಡುಕಿ ಹಿಡಿದನು ವಾಮಹಸ್ತದಲಿ ೪೨

ಭಾರವಾದುದು ತಲೆಗೆ ಮಿಗೆ ಜಂ
ಭಾರಿ ವಿಫಲೋದ್ಯೋಗನಾದನು
ಸಾರ ಧರ್ನುವ ನೆನೆದು ಗರುಡನ ಕೈಯಲಾಹವದಿ
ಹೋರದೊಯ್ಯನೆ ಬಿಡಿಸಿಕೊಂಡು ಮು
ರಾರಿಪದವನು ನೆನೆದು ಮಿಗೆ ಸೈ
ದಾರಿದೆಗೆದನು ನಿಳಯದತ್ತಲು ಹಿಂದು ಮುಂದಾಗಿ ೪೩

ಎಂದಳಾ ಸುರಪನ ಪಲಾಯನ
ದಂದವನು ಕಾಣುತ್ತ ಕೈ ಹೊ
ಯ್ದಿಂದುಮುಖಿ ಕರೆದಟ್ಟಹಾಸವ ಮಾಡಿ ಮೊಗ ನೆಗಹಿ
ಬಂದು ಬಱಿದೇ ಹೋಗಲೇತಕೆ
ನಿಂದಿರಿತ್ತಲು ಸಮ್ಮುಖಕೆ ನಿ
ನ್ನಿಂದ್ರತನಕಿದು ಯೋಗ್ಯವಲ್ಲೆಂದಳು ಸರೋಜಮುಖಿ ೪೪

ಗಂಡನಲ್ಲಾ ಮೂಱು ಲೋಕಕೆ
ಗಂಡನಲ್ಲಾ ಪುಲೋಮಪುತ್ರಿಗೆ
ಕೊಂಡುಹೋಗಾ ವಜ್ರವನು ಮೇಣೀಸುರದ್ರುಮವ
ಗಂಡು ಗರ್ವದ ಸತಿಯ ಮುಸುಡನು
ಕಂಡು ನಾಚದೆ ರಣಪಲಾಯನ
ಪಂಡಿತನೆ ಹೋಗದಿರೆನುತ ಮೂದಲಿಸಿದಳು ಜಡಿದು ೪೫

ಬೈಗುಳನು ಕೇಳುತ್ತ ಸಮ್ಮುಖ
ವಾಗಿ ನಿಂದನು ನುಡಿದನೇತಕೆ
ಬೀಗಿ ಸಾವೆ ವೃಥಾ ಮಹಾತ್ಮನ ಕೈವಿಡಿದೆನೆಂದು
ಲೋಗರೇ ನಾವಾವನೊಬ್ಬನ
ಯೋಗಮಾಯಾ ಮೋಹಿತಾತ್ಮಕ
ನಾಗಿಹುದು ಜಗವೆಮ್ಮ ಜಱವಡೆ ನೀನದಾರೆಂದ ೪೭

ಜನಿಸುವೆವು ಶತಕೋಟಿ ಶಕ್ರರು
ಜನಿಸುವರು ಶತಕೋಟಿ ರುದ್ರರು
ಜನಿಸುವರು ಶತಕೋಟಿ ಕಮಲಜರಾವನಿಚ್ಛೆಯಲಿ
ಜನನ ವಿಲಯ ವಿಹೀನನಸ್ಮ
ಜ್ಜನಕನೀ ಮುರವೈರಿ ತಂದೆಗೆ
ತನಯರಪರಾಧಿಗಳೆ ನಿನಗೇನೆಂದನಮರೇಂದ್ರ ೪೮

ಕೊಂಬಡೀತನು ಕೊಡುವಡೀತನು
ನಂಬಿಹೆವು ನಾವಾತನಂಘ್ರಿಯ
ಬೆಂಬಲವನಧಿಕಾರಪೂರುಷರಾಗಿ ರಾಕ್ಷಸಿಯೆ
ತಿಂಬೆ ನೀನೇಕೆಮ್ಮನಿದ ಕೈ
ಕೊಂಬನೇ ಕಾರುಣ್ಯನಿಧಿ ಪೀ
ತಾಂಬರನು ನೀ ನೋಡೆನುತ ಹರಿಯತ್ತ ಮುಂತಾದ ೪೯

ಜಯ ನಮೋ ಜಗದಾದ್ಯ ಜಗದಾ
ಶ್ರಯ ಜಗತ್ರಯನಾಶ ರಕ್ಷೋ
ದಯ ವಿಹಾರವರೇಣ್ಯ ಶಕ್ತಿತ್ರಯ ಗುಣತ್ರಿತಯ
ಜಯ ನಮೋ ಜಗದೀಶ ಜನನ
ವ್ಯಯವಿದೂರ ವಿರಿಂಚಿವಂದಿತ
ಜಯ ನಮೋಯೆನುತೆಱಗಿ ಸಾಷ್ಟಾಂಗದಲಿ ಪೊಡವಂಟ ೫೦

ಕ್ಷಮಿಸುವುದು ಸರ್ವೇಶ ತನ್ನ
ಕ್ರಮವನಿದನೊಡೆಯರು ವಿಮೋಹ
ಭ್ರಮಿತನಾದೆನಲಾ ವೃಥಾ ಸಂಭಿನ್ನಭಾವದಲಿ
ಗಮಿಸಲಱಿಯದು ನಿನ್ನ ನಿಜವನು
ಕುಮತಿ ನಾನೆಂತಱವೆನೆಂದನು
ಮಮತೆಯಲಿ ಸಲಹೆನುತ ಕೈಗಳ ಮುಗಿದನಮರೇಂದ್ರ ೫೧

ಒಡೆಯರಾರೆಲೆ ದೇವ ದಿಟ ನೀ
ನೊಡಮುರಿದು ನೋಡಿದಡನಾಥಂ
ಗೊಡೆತನವನಿದನಾರು ಕೊಟ್ಟರು ತನಗೆ ಮೂಜಗದ
ಒಡೆಯರೊಡೆಯರಿಗೆಲ್ಲರಿಗೆ ಕ
ಟ್ಟೊಡೆಯನಲ್ಲವೆ ಕೃಷ್ಣ ನೀನಿ
ತ್ತೊಡೆತನವನನುಸರಿಸಿ ಗರ್ವಿತನಾದೆ ನಾನೆಂದ ೫೨

ಈ ನಿಜಸ್ವಾರಾಜ್ಯ ವೈಭವ
ವೀ ನಿಖಿಳ ಸತಿಸುತ ಗ್ರಹಾದಿಕ
ವೀನಿಳಿಂಪ ಮದೇಭತುರಗರಥಾಯುಧಾದಿಗಳು
ಸ್ಥಾನಮಾನವಿವೈದೆ ನಿನ್ನಾ
ಧೀನ ನೀನಿದನೊಯ್ದಡಾವುದು
ಹಾನಿ ನಿನ್ನಂಘ್ರಿಗಳ ದಾಸನು ತಾನಲಾಯೆಂದ ೫೩

ಮನಕೆ ಬಂದುದನೊಯ್ವುದೊಡೆಯರು
ಕನಕತರುವೆಂದೇನು ನೀನಂ
ದನಿತು ಮಾಡುವ ಭಂಟನಾದರೆ ಕೇಳುಕಾರಣವ
ಅನುವರಕೆ ಧರೆಗೀ ಸುರದ್ರುಮ
ವನುಗಮಿಸಲೀ ಸ್ವರ್ಗಲೋಕಕೆ
ಘನವಿದೆಂತಹುದೆಂದು ಸೆಣಸಿದೆನೆಂದನಮರೇಂದ್ರ ೫೪

ಮಾಡಿದೆನು ಕೃತ್ಯವನು ಘನವೆನೆ
ನೋಡಲಾಗದು ದೇವರೆನ್ನಯ
ಮಾಡಿದಪರಾಧವನು ನೀನೇ ಗತಿಯಲಾ ತನಗೆ
ಆಡಿಫಲವೇನೆನ್ನ ಬುದ್ಧಿಯ
ಕೇಡನೆನುತಾನೆಯನಿಳಿದು ಕೈ
ನೀಡಿ ಬಿದ್ದನು ದಂಡದಂತವನಿಯಲಿ ದೇವೇಂದ್ರ ೫೫

ಎಳು ನಿಂದಿರದಾವುದಪಕೃತಿ
ಹೇಳು ನೀಮಾಡಿದುದು ತನ್ನಯ
ಕಾಲು ಕೈಗಳು ಮಾಡಿದಪರಾಧಗಳು ತನಗುಂಟೆ
ತಾಳದಿರು ಮನದೊಳಗೆ ಖೇದವ
ನಾಲಿಸುವಡನ್ಯರೆ ಸಮಸ್ತ ಸು
ರಾಳಿಯಂಗೋಪಾಂಗವೆಂದನು ನಗುತ ಮುರವೈರಿ ೫೬

ಇರಲಿ ಧರೆಯಲಿ ತಾನಿಹನ್ನೆಗ
ಸುರತರುಪ್ರವರವಿದು ಬಳಿಕ್ಕೆ
ತರಲಿ ನಿನ್ನೀಸ್ವರ್ಗಭೂಮಿಗೆ ತನ್ನನುಜ್ಞೆಯಲಿ
ಮರುಳೆ ಮಾಯಾಭ್ರಮೆಗೆ ಮತಿ ಸೈ
ತಿರಿಸದಾಂ ಕಳುಹುವೆನು ನಿಮಗೆಂ
ದಱಿತಿಹುದು ಸಂಸಾರಸುಖವಿದು ನಿತ್ಯವಲ್ಲೆಂದ ೫೭

ಎಂದು ವಜ್ರವನಿತ್ತು ಮರಳಿ ಪು
ರಂದರಾದಿ ಸಮಸ್ತ ದಿವಿಜರ
ವೃಂದವನು ಸಂತವಿಸಿ ಸತ್ಕೃತನಾಗಿ ಸತಿಸಹಿತ
ಬಂದನಾ ದ್ವಾರಾವತಿಗೆ ಗೋ
ವಿಂದನಾ ಪುರಜನಕೆ ಪರಮಾ
ನಂದವನು ಮಾಡುತ್ತ ವಹಿಲದಲಮರತರುಸಹಿತ ೫೮

ನಲಿದು ಪುರಜನವಂದಿದಿರುಗೊಳ
ಲಲಘು ಮಂಗಳವಾದ್ಯ ವಿಪ್ರಾ
ವಳಿಯ ಮಂಗಳಘೋಷವೆಸೆಯಲು ಸೂತಮಾಗಧರ
ಕಳಕಳದಲಂದೊಲಿದು ಕರುಣಾ
ಜಲಧಿ ಪುರದಲಿ ಗರುಡದೇವನ
ನಿಳಿದನೊಪ್ಪುವ ಗಾಯಕರ ಪಾಠಕರ ರವವೆಸೆಯೆ ೫೯

ಸತ್ಯಭಾಮಾ ದೇವಿಯಂಗಣ
ದೊತ್ತಿನಲಿ ಕಲ್ಪದ್ರುಮವನದ
ನುತ್ತಮೋತ್ತಮ ನೆಡಿಸಿದನು ಕೌತುಕದಲಖಿಳಜನ
ಮುತ್ತಿ ಮುಸುಕಿ ವಿಚಿತ್ರವೆನುತವೆ
ಸುತ್ತಿ ನೋಡುತ್ತಿರಲು ಬಂದನು
ಕೃತ್ತಿವಾಸಪ್ರಿಯನು ನಿತ್ಯಾತುಮನ ನಿಜಗೃಹಕೆ ೬೦

ಎಪ್ಪತ್ತೊಂದನೆಯ ಸಂಧಿ ಮುಗಿಯಿತು.

# ಎಪ್ಪತ್ತೆರಡನೆಯ ಸಂಧಿ

ಭದ್ರಕಾಯನು ಮದುವೆಯಾಗಿ ಸು
ಭದ್ರೆಯನು ನರನೈದಿದನು ಬಲ
ಭದ್ರಸೋದರಿ ಸಹಿತ ಶಕ್ರಪ್ರಸ್ಥಪುರವರವ

ಅರಸ ಕೇಳಾ ದ್ವಾರಕಾಪುರ
ವರನಿವಾಸಿಗಳಾ ಮಹಾಸುರ
ತರುಸಹಿತ ಮುರವೈರಿ ಬಂದಾವಾರ್ತೆಯನು ಕೇಳಿ
ಹರಿಣನಯನೆಯರೈದೆ ನೆರೆದ
ಚ್ಚರಿಯಲಾ ನೋಡುವೆವೆನುತ ಬಂ
ದುರುತರ ಪ್ರೇಮದಲಿ ಕಾಣುತ್ತಿರ್ದರಚ್ಯುತನ ೧

ಬಂದರಾ ದೇವಕಿ ಮುಖಾನಕ
ದುಂದುಭಿ ಪ್ರಿಯ ನಾರಿಯರು ಗೋ
ವಿಂದನಂಘ್ರಿಯ ದರುಶನಕೆ ಬರಲವರ ಕಾಲ್ಗಳಿಗೆ
ವಂದಿಸಿದರವರಪ್ಪಿದರು ಸಾ
ನಂದದಲಿ ಹರಷುತ್ತ ಹರಿಯನು
ತಂದೆ ಹಲಕಾಲಾಯುಷವ ಪಡೆಯೆನುತ ಹರುಷದಲಿ ೨

ಬಳಿಕ ರುಕ್ಮಿಣ್ಯಾದಿ ಪಟ್ಟದ
ಲಲನೆಯರು ಬಂದೆಱಗಿದರು ಪದ
ನಳಿನದಲಿ ದಿವ್ಯಾಂಬರಾದಿ ವಿಭೂಷಿತೆಯರಾಗಿ
ಹಲಧರನ ಸತಿ ರೇವತೀ ವರ
ಲಲನೆ ಚಿತ್ರೆಯನಂಗೆಯೆಂಬಾ
ನಳಿನಮುಖಿಯರು ಬಂದು ಕಂಡರು ಕಮಲಲೋಚನನ ೩

ಪುರವಧುಗಳೈತಂದು ಕೃಷ್ಣನ
ಚರಣದಲಿ ತಲೆವಾಗಿ ಲಾಜಾಂ
ಕುರಫಲಾಕ್ಷತೆಗಳನು ತಳಿದರು ಹರಸಿ ವಿಭವದಲಿ
ಪರಮ ಮಂಗಳಪುಣ್ಯಮೂರ್ತಿಯ
ನಿರದೆ ಕಂಗುಡಿತೆಯಲಿ ಸೇವಿಸಿ
ಮರಳುತಿರ್ದರು ಮನೆಗಳಿಗೆ ತತ್ಪಾರವಶ್ಯದಲಿ ೪

ಬೇಱೆ ಬೇಱಸುರಾರಿ ಬಳಿಕಾ
ನೀಱೆಯರ ಹದಿನಾಱು ಸಾವಿರ
ನಾರಿಯರ ಪಾಣಿಗ್ರಹಣವೊಂದೇ ಮುಹೂರ್ತದಲಿ
ಶೌರಿ ಸಂಗ್ರಹಿಸಿದನು ಬಾಂಧವ
ಭೂರಿಹರುಷೋತ್ಸವದ ಭಾರದ
ತಾಱುಥಟ್ಟಿನ ಸಂಭ್ರಮದಲೆಸೆದುದು ಮಹಾನಗರ ೫

ನೆರೆದು ಬಹುಕನ್ಯಾಪಿತೃಕ್ಷಿತಿ
ವರರು ತದ್ಬಂಧುಜನ ತತ್ಪುರಿ
ಜನದ ನೆರವಿಗಳಲ್ಲಿ ಪರಿವಾರದ ಮಹಾಬ್ಧಿಯಲಿ
ಇರದೆ ಬಂದೋಲಗಕೆ ವಿಬುಧೇ
ಶ್ವರರ ಸಂದಣಿಗಳಲಿ ಮೆಱೆದುದು
ವರಕುಶಸ್ಥಳಿ ಪರಮವಿಭವಾಶ್ರಯವೆನಲು ಧರೆಗೆ ೬

ಆರು ಚಿತ್ರೆಯನಂಗೆಯೆಂಬವ
ರಾರ ಸುತೆಯರು ಕರುಣಿಸೈ ಮುನಿ
ವೀರ ತನಗಿದನೆನಲು ನಗುತ ಮುನೀಂದ್ರನೊಲವಿನಲಿ
ಧಾರುಣೀಪತಿಗೆಂದನನುಜೆ ಮು
ರಾರಿ ರಾಮರಿಗರಸ ಚಿತ್ರೆ ವ
ರೋರು ಮತ್ತೆ ಸುಭದ್ರೆಯೆಂಬಭಿಧಾನವುಂಟೆರಡು ೭

ಮದುವೆಯಾದನು ವರ ಸುಭದ್ರಾ
ಸುದತಿಯನು ಕಲಿ ಪಾರ್ಥನಱವಡೆ
ವಿದಿತವೆನೆ ಹೇಳುವೆನನಂಗೆಯ ಜನ್ಮಸಂಗತಿಯ
ಹದನನಂದೇ ಪೂರ್ವದಲಿ ಹೇ
ಳಿದೆನಲ್ಲೈ ದೇವಕಿಯ ಸೆಱೆವನೆ
ಯುದರದಲಿ ಸೇರಿದಳು ನಂದಕುಮಾರಿ ಕೇಳೆಂದ ೮

ಇಳಿದಳಂಬರದಿಂದ ಸುರಮುನಿ
ಕುಲನಿಷೇವಿತಚರಣೆ ನಿಜಪಿತೃ
ನಿಳಯದಲಿ ಬಳಿಕಾರುಮಱಿಯದವೋಲು ಗುಪಿತದಲಿ
ಲಲನೆ ಬೆಳವುತ್ತಿರ್ದಳಾ ಖಳ
ಕುಲಶಿರೋಮಣಿ ಕಂಸ ಮಡಿಯಲು
ಜಲಜಲೋಚನೆಗೊಪ್ಪಿಸಿದನಾಕೆಯನು ವಸುದೇವ ೯

ಪ್ರೀತಿಯಲಿ ತಂಗೆಯನನಂಗೆ ಗು
ಣಾತಿಶಯದಿಂದಾರ್ಯೆಯೆನೆ ಪರ
ಮಾತುಮನು ಹೆಸರಿಟ್ಟನಾಕೆಗೆ ಲೋಕವಿಶ್ರುತೆಗೆ
ನೀತಿವಿದೆ ಪತಿಗಳನು ಬಯಸದೆ
ಭೂತದಯೆಯಲಿ ಭುವನ ಭವನ
ಖ್ಯಾತೆಯೆಸದಳು ವರತಪೋವ್ರತನಿಷ್ಠೆಯೆಂದೆನಿಸಿ ೧೦

ಭೂಮಿಪತಿ ಕೇಳಾ ಸುಭದ್ರೆ ಪಿ
ತಾಮಹಿಯಲಾ ನಿನಗೆ ಸತಿಯನು
ರಾಮನಾ ದುರ್ಯೋಧನನಗೆ ಕೊಡಲೆಂದು ಮನದೊಳಗೆ
ನೇಮಿಸಲು ಮುರವೈರಿ ಮೊದಲಾ
ದಾ ಮಹಾಬಾಂಧವರು ಪಾರ್ಥಂ
ಗೀ ಮಹಿಳೆಯೆಂದಿಂತು ಮತವೆರಡಾಯ್ತು ತಮ್ಮೊಳಗೆ ೧೧

ಒಂದು ದಿನ ಕಲಿ ಪಾರ್ಥನಾ ನಿಜ
ಮಂದಿರವ ಹೊಱವಂಟು ತೀರ್ಥವ
ಮಿಂದು ಬಹ ನೆವದಿಂದ ವರುಷಭ್ರಮಣವನು ಕಳೆದು
ಬಂದನನುಪಮನಾ ಪ್ರಭಾಸ
ಕ್ಕಂದು ಕೇಳಿದನಾ ಸುಭದ್ರೆಯ
ಸಂದ ವೃತ್ತಾಂತವನು ರೂಪೌದಾರ್ಯಗುಣಗಣವ ೧೨

ಆ ಸಮಯದಲಿ ಪಾರ್ಥನಳಿಸ
ನ್ಯಾಸಿಯಾದನು ಬಂದನೊಪ್ಪುವ
ಕಾಶಿಯಿಂ ಹರಿಪುರಕೆ ಬಳಿಕ ತ್ರಿದಂಡಿಯೆಂದೆನಿಸಿ
ವಾಸುದೇವಯೆನುತ್ತ ತನ್ನಯ
ನಾಸಿಕಾಗ್ರೇಕ್ಷಣದ ಪದ ವಿ
ನ್ಯಾಸಪೂತ ಪದಪ್ರಯೋಜನು ಹೊಕ್ಕನರಮನೆಯ ೧೩

ಕಂಡವರು ಕೈಮುಗಿವುತಿರೆ ನಡೆ
ಗೊಂಡನಾ ಹಲಧರನ ಗೃಹಕೆ ತ್ರಿ
ದಂಡಧರ ಸನ್ಯಾಸಿ ಕೈಗೊಡೆ ಕರವತಿಗಳೆಸೆಯೆ
ದಿಂಡುದಿರುಹುತ್ತಕ್ಷನಮಾಲಾ
ಮಂಡಲವನೈತರಲು ಕಂಡಿದಿ
ರ್ಗೊಂಡು ಬಿಜಯಂಗೈಸಿ ತಂದನು ರಾಮನರಮನೆಗೆ ೧೪

ಬಂದು ಪರಮಾಸನದಲಾ ಯತಿ
ವಂದ್ಯನನು ಕುಳ್ಳಿರಿಸಿ ಚರಣ
ದ್ವಂದ್ವವನು ತೊಳೆದರ್ಘ್ಯಸತ್ಕಾರಂಗಳನು ಮಾಡಿ
ವಂದಿಸುತ ಬೆಸಗೊಂಡ ನೀವೆ
ಲ್ಲಿಂದ ಬಿಜಯಂಗೈದಿರಿತ್ತಲು
ಮಂದಿರವಿದಿಂದಿನಲಿ ಪಾವನವಾಯ್ತು ತಮಗೆಂದ ೧೫

ಬಂದೆನೆಂಬಡೆ ಹೋಹೆನೆಂಬಡೆ
ತಂದೆ ತೆಱಹಿಲ್ಲಿಯದು ಪೂರ್ಣಾ
ನಂದವಸ್ತುವಿನೊಳಗೆ ಮಾತಿಂಗುಂಟೆ ಸಲುಗೆಗಳು
ಒಂದು ಗಗನವೆ ಹಲವು ಘಟವಾ
ಗೊಂದಿ ನೆರೆ ನಾನಾತ್ವವನು ಪಡೆ
ವಂದದಲಿ ತೋಱುವುದುಪಾಧಿವಿಭೇದದಿಂದೆಂದ ೧೬

ಜಲಧಿಯಲಿ ಬುದ್ಬುದ ತರಂಗಾ
ವಳಿಗಳಾ ಜಲದೊಳಗೆ ತೋಱುವ
ವಳಿವವಾ ತದ್ರೂಪದಲಿ ದಿಟದಂತೆ ವ್ಯವಹಾರ
ಹೊಳೆದು ಸುರನರತಿರ್ಯಗಾದಿಗ
ಳಳಿವವಾತನೊಳೇಕರೂಪನೊ
ಳಳಿಯನುದಿಸನಖಂಡನಕ್ರಿಯನಾತ್ಮ ನೋಡೆಂದ ೧೭

ತಾನೆ ತನ್ನೊಳಗಲ್ಲದನ್ಯಥ
ವೇನುಮಿಲ್ಲೆಲೆ ತಂದೆ ಸತ್ಯ
ಜ್ಞಾನ ಘನಪರಿಪೂರ್ಣ ಪರಮಾತ್ಮನಲಿ ತೋರ್ಕೆಯಿದು
ದೀನತನದಲಿ ಬಱದೆ ತತ್ವ
ಜ್ಞಾನಶೂನ್ಯರು ತೊಳಲುತಿಹರ
ಜ್ಞಾನನಿರ್ಮಿತ ಭವಸಮುಗ್ರದಲಣ್ಣ ಕೇಳೆಂದ ೧೮

ಯೋಗಿವರರ ಪದಾಬ್ಜಸೇವೆಗ
ಳಾಗದನ್ನೆಗ ಹಱಿಯದೀ ಭ್ರಮೆ
ಭೋಗಿಭೂಷಣಗಾದಡೆಯು ಕೇಳವಗೆ ಬಹುಮಾತು
ಆಗವಾವೇಕಾಂತವಾಸಿಗ
ಳಾಗಿಹೆವು ಕೊಡು ನೇಮವನು ಲೇ
ಸಾಗೆನಲು ಹಲಧರನು ಬಿನ್ನಹ ಮಾಡುತಿಂತೆಂದ ೧೯

ಹಂತ ಹಿರಿಯರು ಹುಸಿಯ ನುಡಿವರೆ
ಸಂತವೇಕಾತ್ಮಕವು ಕಂಡೇ
ಕಾಂತವೆಂದಿನ್ನಾವುದಾವುದು ಹೇಳನೇಕಾಂತ
ಮುಂತೆ ಚಾತುರ್ಮಾಸ್ಯ ನಿಯಮ ಮ
ಹಾಂತ ಬಂದಿದೆ ಭವನದೊಳಗೇ
ಕಾಂತವಾಸವ ಮಾಡಿ ಬಿಜಯಂಗೈಯಿ ನೀವೆಂದ ೨೦

ಗೊಡವೆಯಿಲ್ಲದೆ ತನಗೆ ಲೋಗರು
ಬಡಿಸಲಾಗದು ಮಾಡಲಾಗದು
ಮಡದಿಯರು ಪಾಕವನು ಯೋಗ್ಯತೆಯಾದರಹುದೆನಲು
ಕೊಡುವೆನಾದರೆ ತಂಗಿಯನು ನಿ
ಮ್ಮಡಿಯ ವಶದಲೆನುತ್ತ ಹಲಧರ
ತಡೆದನತಿಯೋಗ್ಯನನು ಚಾತುರ್ಮಾಸ್ಯ ಸಂಸ್ಥಿತಿಗೆ ೨೧

ಎಂದಡಾಗಲಿ ಯೆನುತ ಕನ್ಯಾ
ಮಂದಿರವನೈದಿದನು ಯತಿ ಗೋ
ವಿಂದನದ ಕೇಳುತ್ತ ಮನದಲಿ ನೋಡಿ ನಸು ನಗುತ
ಎಂದನಾ ದೇವಕಿಗೆ ಕುಂತೀ
ನಂದನನ ಕೃತಕವ ಸುಭದ್ರೆಯ
ತಂದೆಗದನಱುಹಿದನು ಪರರದನಱಿಯದಂದದಲಿ ೨೨

ಸರಸಿಜಾನನೆಗಾಯ್ತು ಯತಿಪದ
ಸರಸಿರುಹಪರಿಚರ್ಯೆ ಯತಿಗಾ
ಸರಸಿಜಾಕ್ಷಿಯುಲಾಯ್ತು ಕಂಗಳ ವಿಷಯರಸತೃಷ್ಣೆ
ಬೆರಳಲಾಡುವುದಕ್ಷಮಾಲೆಯು
ಪರಿಗಣನೆ ಮನವಾ ಕುಮಾರಿಯ
ಬೆರಸಿಹುದು ಗತವಾದವೀಪರಿ ದಿವಸವಿಬ್ಬರಿಗೆ ೨೩

ಮಾತು ಮುನ್ನಿನವೋಲು ಬಳಕೆಯ
ರೀತಿ ಮುನ್ನಿನವೋಲು ಚಿತ್ತದ
ಧಾತು ಬೇಱೊಂದಾಯ್ತು ಕುಕವಿಯ ಕಾವ್ಯಕೃತಿಯಂತೆ
ಜ್ಞಾತವಿಲ್ಲದವೋಲು ನಟಿಸಿದ
ನೀತೆಱದಲೇ ದಿನಗಳನು ಕಪಿ
ಕೇತನನು ಕೊಂಡುಯ್ವುಪಾಯವ ನೆನೆವುತವೆ ಸತಿಯ ೨೪

ನಸುನಗುತ ಕಡೆಗಣ್ಣಲಂಗನೆ
ಯೆಸೆವ ಮುಖವನು ನೋಳ್ಪನಂಗಜ
ನೆಸುಗೆಯಲಿ ಬೆಂಡಾಗಿ ಯತಿಪತಿ ಬಿಗಿದ ಮೂರ್ಛೆಯಲಿ
ಶಶಿವದನೆ ಯತಿಯಲಿ ಕಟಾಕ್ಷವ
ಹಸರಿಸಿದಳಿಂತಿಬ್ಬರಿಗೆ ಮನ
ಬೆಸುಗೆವಡೆದುದು ನಯನ ಸಂಪ್ರೀತಿಯಲಿ ತಮ್ಮೊಳಗೆ ೨೫

ಇರಲಿರಲು ಮುರವೈರಿ ರಥದಲಿ
ಸರಸಿಜಾಕ್ಷಿಯ ಕುಳ್ಳಿರಿಸಿದನು
ಶರಸಹಿತ ಹೊಱವಡಿಸಿ ಗುಪಿತದಲತ್ತಲೊಂದೆಸೆಗೆ
ವರದಿವಸದಲಿ ದೇವಯಾತ್ರೆಗೆ
ನೆರಹಿ ಜನವನು ನಡೆದನಾ ಸಂ
ಕರುಷಣಾದ್ಯರುಸಹಿತ ತಾನೊಂದೊಸೆಗೆ ವಿಭವದಲಿ ೨೬

ಅತ್ತಲಾ ಸನ್ಯಾಸಿದೇವರ
ಚಿತ್ತ ನಿರ್ಮಳವಾಯ್ತು ಮತ್ತಾ
ಉತ್ತಮ ವ್ರತನಿಷ್ಠೆ ನಿಯಮ ತಪಸ್ಸಮಾಧಿಗಳು
ಕೃತ್ರಿಮದ ಸನ್ಯಾಸವದು ಸಂ
ನ್ಯಸ್ತವಾದುದು ರಥದ ಹೊರೆಗೆ ಮ
ಹಾತುಮನು ನಡೆತಂದನಧಿಕ ಮನೋನುರಾಗದಲಿ ೨೭

ಮುಱಿದು ಬಿಸುಟನು ದಂಡಕೋಲನು
ಹಱಿದು ಜಪಮಾಲೆಯನು ಜಪವನು
ಜಱಿದು ವಿಭೂತಿಯನು ತೊಱೆದು ಕಾಸೆಯನು ಕೆಲಕಿರಿಸಿ
ನಿಱಿವಿಡಿದು ದಿವ್ಯಾಂಬರವನು
ಟ್ಟೆಱಗಿ ಕೊಂಡನು ಚಾಪಶರವನು
ಹೊಱಗೆ ಬಹ ಹುಯ್ಯಲ ಭಟಾವಳಿಗಳನು ಮುಱಿಯೆಚ್ಚ ೨೮

ತಱುಬಿ ನಿಂದರು ಕೆಲರು ಕೆಲಬರು
ಹಱಿದರರ್ಜುನನೆಂದಱಿದು ಹಲ
ಧರನ ಬಳಿಗೆ ಯತೀಶ್ವರನ ಸಂಸ್ಥೆಯನು ಬಿನ್ನೈಸೆ
ಬೆರಳ ಮೀಸೆಯಲಿಡುತ ಮಿಗೆ ಹೂಂ
ಕರಿಸಿ ಹೊಸ ಕಲ್ಪಾಂತಕಾಲನ
ಗರುಡಿಕಾಱನು ಗಾಢಕೋಪಾಟೋಪವನು ತಾಳ್ದ ೨೯

ಹೋಗಲಿನ್ನೇನಿಳೆಯಪಾಂಡವ
ವಾಗಲಿದು ತಪ್ಪೇನು ತಪ್ಪೇ
ನಾಗಮುವಲೇ ತಂಗಿಗಿಂದಿನಲಾಯ್ತು ವೈಧವ್ಯ
ಆಗಲದಕೇನಾಯ್ತು ನೋಡುವ
ವೀಗಳೆಂದಡದೇನು ಫಲ ಕುನಿ
ಯೋಗವೀ ಕೃಷ್ಣನದು ಸಂಶಯವಿಲ್ಲ ನಡೆಯೆಂದ ೩೦

ಎಂದು ಕಿಡಿಕಿಡಿಯೋಗುತಂತಕ
ನಂದದಲಿ ಹಲ ಮುಸಲ ಹಸ್ತದ
ಲಂದು ಕೋಪಾಟೋಪದಲಿ ಬಲಭದ್ರ ಬರುತಿರಲು
ಮಂದಹಾಸದಲಸುರರಿಪು ನಗು
ತೆಂದನೆಲ್ಲಿಗೆ ಯಾತ್ರೆ ಕೋಪಿಸು
ವಂದವಾರೊಡನೆನಲು ನುಡಿದನು ರಾಮನುಱೆ ಜಡಿದು ೩೧

ನಿಲ್ಲು ಕೆಲಸಾರೀ ಪ್ರಪಂಚವಿ
ದೆಲ್ಲ ನಿನ್ನದು ತನ್ನ ಹೋಲುವ
ರಿಲ್ಲ ಸದಮಳ ಸರಳಹೃದಯರು ಮೂಱು ಲೋಕದಲಿ
ಎಲ್ಲಿಯ ವೃತಿ ಪಾರ್ಥನೆಂಬವ
ನೆಲ್ಲಿಯವ ನಿನಗುಂಟು ಛಲವಿದ
ಬಲ್ಲೆನೀಕ್ಷಿಸಿ ಬಹೆನು ಹೆಂಗಳ್ಳನನು ಸಾರೆಂದ ೩೨

ಹೋ ವಿರೋಧವಿದೇಕೆ ನಮ್ಮೊಳ
ಗಾವು ದಿಟಕಿದನಱಿದಡಾ ವಸು
ದೇವನಾಣೆಲ್ಲಿಲ್ಲ ಯತಿಯೇ ಪಾರ್ಥನೆಂಬುದನು
ದೈವವೇ ಘಟಿಸಿತ್ತು ಪಾರ್ಥಗೆ
ಮಾವನಲ್ಲೈ ಬೊಪ್ಪ ತಂಗಿಗೆ
ಭಾವನಾದನು ಯನುಜ ನೀನಿದಕಳಲಬೇಡೆಂದ ೩೩

ಅಱಿಯೆ ನಾನೀ ಮೊಱೆಯನಿದನೆನ
ಗಱಿತು ಹೇಳುವನಿಲ್ಲ ನಿನ್ನಂ
ತಱಿತಗಾಱನೆ ಹೇಳಬಹುದೈ ಕೃಷ್ಣ ನೀನಿದನು
ಬಱಿದೆ ಮರುಳಾಡದಿರು ತನ್ನದು
ಕೊಱತೆ ನೀ ನಡೆಯೆನುತ ಬಂದನು
ಬಱಸಿಡಿಲ ವೇಗದಲಿ ಪಾರ್ಥನ ರಥದ ಹೊರೆಗಾಗಿ ೩೪

ಬಳಿಕ ವಸುದೇವಾದಿಗಳು ನೆಱೆ
ತಿಳುಹಿ ರಾಮನ ಮನದ ಕಲುಷವ
ಕಳೆದು ಸಂಧಾನವನು ಮಾಡಿದರಂದು ಪಾರ್ಥನಲಿ
ಒಲಿದು ಕುಳ್ಳಿರಿಸಿದನು ದಂಪತಿ
ಗಳನು ಬಳಿಕಾ ಶೌರಿ ಕೊಟ್ಟನು
ಬಳುವಳಿಯನುನ್ನತ ರಥಾಶ್ವ ಗಜೌಘ ಪತ್ತಿಗಳ ೩೫

ಪಾರಿಬರುಹಂಗಳನು ಕೊಂಡು ಮು
ರಾರಿ ಪಾರ್ಥ ಸುಭದ್ರೆಯರು ಸಹಿ
ತೇಱಿ ರಥವನು ಸಕಲ ಪರಿಜನ ಸಹಿತ ನಲವಿನಲಿ
ಭೇರಿ ಮದ್ದಳೆ ಶಂಖ ಪಟಹ ಮ
ಹಾರವದಲಾ ಭಕ್ತಜನಸಂ
ಸಾರಿ ಬಿಜಯಂಗೈದನಿಂದ್ರಪ್ರಸ್ಥ ಪುರವರಕೆ ೩೬

ಹರಿದು ದೂತರು ಮುಂದೆ ವಾರ್ತೆಯ
ನೊರೆಯಲಾ ಪಾಂಡವರು ಕೃಷ್ಣನ
ಬರವ ಕೇಳುತ ಕೇಳುತೆದ್ದರು ಪರಮ ಹರುಷದಲಿ
ಪರಮ ಮಂಗಳ ವಾದ್ಯದಲಿ ಭೂ
ಸುರರು ಮಾಗಧ ಸೂತ ವಂದಿಗ
ಳುರವಣಿಯಲಂದಿದಿರುಗೊಂಡರು ವಿದಿತ ವಿಭವದಲಿ ೩೭

ಕಂಡು ದೂರದಲಾ ಮುಕುಂದನ
ಖಂಡ ಸುಖಮಯ ಮೂರ್ತಿಯನು ಕೈ
ಕೊಂಡವಂತರ್ಧಾನವನು ಬಹಿರಂಗವೃತ್ತಿಗಳು
ದಿಂಡುದಳಿತುದು ಪುಳಕ ದಣಿವನು
ಕಂಡರಾರಕ್ಷಿ ಗಳಿಗಿಳಿದರು
ಪಾಂಡವರು ವಾಹನಗಳನು ಮೈಯಿಕ್ಕಿದರು ಧರೆಗೆ ೩೮

ಎತ್ತಿದನು ಯಮಜನನಿದೇನೆನು
ತೆತ್ತಿ ತಕ್ಕವಿಸಿದನು ಭೀಮನ
ಮಸ್ತಕವನಪ್ಪಿದನು ಮಾದ್ರೀಸುತರನೊಲವಿನಲಿ
ಮತ್ತೆ ತೆಗೆದಾಲಿಂಗಿಸಿದನೊಲಿ
ದತ್ತೆಯಾ ಕುಂತಿಯನು ದ್ರುಪದನ
ಪುತ್ರಿಯನು ಸಂಭಾವಿಸಿದನುಚಿತದಲಿ ಮುರವೈರಿ ೩೯

ಕೊಟ್ಟನುಡುಗೊಱೆಗಳನು ಮದುವೆಯ
ಹುಟ್ಟಿಗೆಯನಾಭರಣ ನಿಕರದ
ಪೆಟ್ಟಿಗೆಯನೆಲ್ಲರಿಗೆ ಪಾರ್ಥ ಸುಭದ್ರೆಯರಿಗೊಲಿದು
ಕೊಟ್ಟನೆಲ್ಲಾ ವಸ್ತುಗಳ ಗುಡಿ
ಗಟ್ಟಿ ದಾಸೀ ದಾಸ ಜನವನು
ಸೃಷ್ಟಿಪಾಲಕರೊಡೆಯನಗಣಿತ ಗೃಹಪರಿಚ್ಛದವ ೪೦

ಸಂದವಲ್ಲಿಯೆ ಕೆಲವು ತಿಂಗಳು
ಮಂದರಾದ್ರಿಧರಂಗೆ ಪಾಂಡವ
ವೃಂದ ವಿಹಿತಪ್ರಣಯ ಪರಿಗತ ಪಾರವಶ್ಯದಲಿ
ಒಂದು ದಿನ ಬೇಂಟೆಗೆ ಮಹಾ ಭಟ
ವೃಂದಸಹಿತೈದಿದರು ಪಾರ್ಥ ಮು
ಕುಂದರಾ ಖಾಂಡವವೆನಿಪ್ಪ ಮಹಾ ವನಾಂತರಕೆ ೪೧

ಫಲಭರಾನತ ಬಹಳ ತರುಲತೆ
ಗಳಲಿ ಪುಷ್ಪಾಮೋದ ಭೃಂಗಾ
ವಳಿಗಳಲಿ ಬಹು ಪಕ್ಷಿ ಮೃಗಗಣದಿಕ್ಕೆಹಕ್ಕೆಯಲಿ
ಎಳಲತೆಗಳಾವರಿಸಿದಾ ದ್ರುಮ
ಗಳಲಿ ತಳಿರುಯ್ಯಾಲೆಗಳಲಿ ಶೀ
ತಳವೆನಿಪ ನೆಳಲೊಳಗೆ ನಿಂದರು ನೋಡಿ ವನಸಿರಿಯ ೪೨

ಬಳಲಿ ಮಧ್ಯಾಹ್ನದಲಿ ವೀರರು
ನೆಳಲೊಳಗೆ ಕುಳ್ಳಿರಲು ಬಂದನು
ಕಳವುವೇಷದ ವಿಪ್ರನೊಬ್ಬನು ಕೃಷ್ಣಪಾಂಡವರ
ಬಳಿಗೆ ಬೇಡಿದನೆನಗೆ ಭೋಜನ
ಗಳಲಿ ಮನವಾಯ್ತೀವುದುಳ್ಳರೆ
ಸಲಿಸಲಾಪರೆ ಹೇಳ್ವುದೆನುತವೆ ನುಡಿದನಾ ವಿಪ್ರ ೪೩

ಎನಲು ನುಡಿದನು ಪಾರ್ಥನಾವುದು
ನಿನಗೆ ಹೇಳೆನೆ ಖಾಂಡವಾಹ್ವಯ
ವನವಿದೆನಗುಪಯೋಗ್ಯ ವೈಶ್ವಾನರನು ತಾನೆನಲು
ನಿನಗಿದೇತರ ಸಾಧ್ಯವಾಯ್ತಿದ
ಕನಿಮಿಷಾಧಿಪನೊಡೆಯನಿಳಿಯದು
ತನಗೆ ಗಂಟಲೊಳೆಂದಡಾನಿಹೆನೆಂದನಾ ಪಾರ್ಥ ೪೪

ಇಲ್ಲ ರಥವೆನಗಾದಡೀ ಹೊ
ತ್ತಿಲ್ಲಿ ದಿವ್ಯಾಸ್ತ್ರಾಯುಧಾವಳಿ
ಯಿಲ್ಲ ಧನು ಮೃಗಯಾ ವಿಹಾರಿಗಳಾಗಿ ಬಂದವಲೈ
ಉಳ್ಳಡೀವುದು ಭೋಜನಕೆ ನೀ
ತಲ್ಲಣಿಸಬೇಡೆನಲು ಕೊಟ್ಟನು
ಸಲ್ಲಲಿತ ಸಂಗ್ರಾಮ ಸಾಧನಗಳನು ಪಾರ್ಥಂಗೆ ೪೫

ಇತ್ತನಾಶ್ವೇತಾಶ್ವಚಯ ಸಂ
ಯುಕ್ತ ರಥವನು ಗಾಂಡಿವವೆನಿ
ಪ್ಪುತ್ತಮೋತ್ತಮ ಚಾಪವನು ತೀರದ ಶರಾವಳಿಯ
ಬತ್ತಳಿಕೆಗಳ ನೆರಡನಿಂತಿವ
ನಿತ್ತರೆಲ್ಲವ ಕೊಂಡು ಬಳಿಕ ಮ
ಹೋತ್ತಮನೆ ನೀ ಬೇಗ ಮಾಡಿನ್ನೆಂದನಾ ಪಾರ್ಥ ೪೬

ನುಡಿಯ ಕೇಳದ ಮುನ್ನವೇ ಕಿ
ಚ್ಚಡರಿದುದು ಕಾನನವ ನಾಲುಕು
ಕಡೆಗೆ ಬಳಿಕಮರೇಂದ್ರನಾಚರಿಸಿದಡೆ ವಿಘ್ನವನು
ಬಿಡದೆ ಹೊಱಬೀಸಿದನು ಮಳೆಯನು
ತಡೆದು ಶರ ಪಂಜರದಲಿಂದ್ರನ
ಮಿಡುಕು ನಿಂದುದು ಸಂದುದುಬ್ಬಟೆ ಹವ್ಯವಾಹನನ ೪೭

ಬಳಿಕ ಕೃಷ್ಣಾರ್ಜುನರ ಶಿರದಲಿ
ತಳಿದು ಸುಮನೋ ವೃಷ್ಟಿಯನು ಸುರ
ನಿಳಯವನು ಸಾರಿದನು ಸುರಪತಿ ಪಾವಕನ ಮತವ
ಸಲಿಸಿ ಬಂದೆಱಗಿದನು ಕೃಷ್ಣನ
ಲಲಿತ ಪದದಲಿ ಪಾರ್ಥನಸ್ತ್ರಾ
ವಳಿ ರಥಾಶ್ವಶರಾಸನಂಗಳ ಲಾಭದಲಿ ನಲಿದು ೪೮

ಬಂದರಿಂದ್ರಪ್ರಸ್ಥ ಪುರವರ
ಕಂದು ಕೃಷ್ಣಾರ್ಜುನರು ಪರಮಾ
ನಂದ ಮೂರುತಿ ಕೆಲವು ದಿನವನು ಪಾರ್ಥಭವನದಲಿ
ಹಿಂದುಗಳೆದನು ಸಿಲುಕಿ ಕುಂತೀ
ನಂದನರ ಸೌಹಾರ್ದದಲಿ ತರಿ
ಸಂದ ದಿವಸವನಱಿಯದಂತಿರೆ ಖೇಳ ಮೇಳದಲಿ ೪೯

ಬಳಿಕ ಕುಂತಿಯನಾ ಕುಮಾರರ
ಬಳಗವನು ಸತಿಯರನು ತಂಗಿಯ
ನಲಘು ವಿರಹಾತುರರನೆಲ್ಲರನಪ್ಪಿ ಸಂತವಿಸಿ
ನಳಿನನಾಭನು ಬೀಳುಕೊಟ್ಟಾ
ಕುಳರನತಿ ದೂರಾನುಗತರನು
ಕಳುಹಿ ಮರಳಿದು ಬಂದು ಹೊಕ್ಕನು ದ್ವಾರಕಾಪುರಿಯ ೫೦

ಬಂದು ಸುಮುಹೂರ್ತದಲಿ ದೇವ ಮು
ಕುಂದನಾ ನಿಜಪುರವ ಹೊಕ್ಕನು
ಕುಂದನುದ್ಧವ ಸಾತ್ಯಕಿ ಪ್ರಮುಖಾತ್ಮ ಬಲಸಹಿತ
ತಂದೆ ತಾಯ್ಗಳಿಗೆಱಗಿ ವೃದ್ಧರ
ಸಂದಣಿಯ ಮನ್ನಿಸಿ ಮನೋಮುದ
ದಿಂದ ನಿಜರಾಜಾಲಯಕೆ ನಡೆತಂದನೊಲವಿನಲಿ ೫೧

ಬೇಱೆ ಬೇಱರಮನೆಗಳನು ಹದಿ
ನಾಱು ಸಾವಿರ ಸತಿಯರಿಗೆ ಮೇ
ಲೇಱಿಸಿದ ಹೊಂಗಳಸವನೆ ಮಣಿನಿಕರ ರಂಜಿಸುವ
ಮೂಱು ಲೋಕದ ಸಿರಿಯ ವದನದ
ಚಾರುತಿಲಕದವೊಲೆಸೆದುದಾ
ದ್ವಾರವತಿ ನಿತ್ಯಾತ್ಮ ಕೃಷ್ಣ ನಿವಾಸಗೃಹಗಳಲಿ ೫೨

ಎಪ್ಪತ್ತೆರಡನೆಯ ಸಂಧಿ ಮುಗಿಯಿತು.

# ಎಪ್ಪತ್ತಮೂರನೆಯ ಸಂಧಿ

ಅಂಬುಜಾಯತನಯನನಮರ ಕ
ದಂಬ ಭಾಪೆನಲೈದಿದನು ಸಕು
ಟುಂಬ ಯಾತ್ರೆಯಲಾ ಸ್ಯಮಂತ ಸಮಾಖ್ಯ ಪಂಚಕಕೆ

ಅರಸ ಕೇಳಾ ದ್ವಾರಕಾಪುರ
ವರದಲಿಂತಸುರಾರಿ ರಾಮರು
ಪರಮ ಮಂಗಳ ಮೂರ್ತಿಗಳು ಸಂತಸದಲೆಸೆದಿರಲು
ಪರಮ ಸೂರ್ಯಗ್ರಹಣವಾಯ್ತೊಂ
ದುರು ಶುಭಪ್ರದವೆನಲು ಬಂದುದು
ಧರೆಯ ಜನನಿಕುರಂಬವಂದು ಸ್ಯಮಂತ ಪಂಚಕಕೆ ೧

ಧರೆಯ ನಿಃಕ್ಷತ್ರವನು ಮಾಡುತ
ಪರಶುರಾಮನು ಮುನ್ನ ತೊಳೆತೊಳೆ
ದುರುಪರಶ್ವಧವನ್ನು ತದ್ಗತ ರುಧಿರವಾರಿಯಲಿ
ವಿರಚಿಸಿದನದಱೊಳು ಮಹಾ ಹ್ರದ
ವರವನೈದನು ಯಜಿಸಿದನು ಸುರ
ವರರನಘಹರವೆನಲು ಮಾಡಿದ ಲೋಕಸಂಗ್ರಹವ ೨

ಅದುವೆ ಪುಣ್ಯಕ್ಷೇತ್ರವೆನುತಾ
ಹ್ರದಕೆ ಪಾವನ ತೀರ್ಥವಾದುದು
ಪದುಮಸಖನುಪರಾಗ ಕಾಲಕ್ಕದುವೆ ಮುಖ್ಯವೆನೆ
ಅದಕೆ ಭಾರತವೆಂಬ ವರ ವರು
ಷದ ಮಹಾಜನವೈದೆ ಬಂದುದು
ವಿದಿತ ಪಾಪಕ್ಷಯವನರ್ಥಿಸಿ ಪೂರ್ವ ದಿವಸದಲಿ ೩

ಅರಸ ಕೇಳಸುರಾರಿ ಷೋಡಶ
ವರ ಸಹಸ್ರೋತ್ತರದ ಸಂಖ್ಯೆಯ
ಲರಸಿಯರ ದಂಡಿಗೆಗಳೆಸೆಯಲು ಪೌರ ಪರಿಜನದ
ಕರಿತುರಗ ರಥಪತ್ತಿಗಳು ವೋ
ಹರಿಸಿ ಸಾತ್ಯಕಿ ಮುಖ್ಯ ಯದುವರ
ರುರವಣಿಸಿ ಹೊಱವಂಟರೊಪ್ಪಿರೆ ತೀರ್ಥಯಾತ್ರೆಯಲಿ ೪

ಏಱಿ ನಡೆದರು ಕೂಡೆ ಪುತ್ರರು
ವೀರಪೌತ್ರರು ತುರಗ ಚಯವನು
ವಾರಕಾಂತಾನಿಕರ ಬರೆ ಹೆಣ್ಣಾನೆಗಳ ಮೇಲೆ
ಪೌರ ಪರಿಜನ ವನಿತೆಯರ ಸಿಂ
ಗಾರವೆಸೆಯಲು ತುರಗ ನಿಕರದಿ
ವೋರುಗುಡಿಸಲು ನಡೆದರಿಳೆ ಸಂದಣಿಸಿ ವಹಿಲದಲಿ ೫

ಪಂಕಜಾಕ್ಷನ ಬಲದಲಕ್ರೂ
ರಾಂಕ ವಸುದೇವಾದ್ಯರಿರಲೆಡ
ವಂಕದಲಿ ಗದ ಸಾರಣಾದಿ ಯದೂತ್ತಮರು ಬರಲು
ಬಿಂಕ ಮಿಗಲೇಕಾರ್ಣವದ ಮಾ
ಱಾಂಕವೆನೆ ಪರಿವಾರ ಪುರಜನ
ಮುಂಕೊಳಿಸಿ ಕವಿದೈದಲೆಸೆದುದು ಯಾತ್ರೆ ಮೂಜಗಕೆ ೬

ಇರಿಸಿ ಕೃತವರ್ಮೋಗ್ರಸೇನರ
ಪುರದ ರಕ್ಷೆಗೆ ಸಾಂಬ ಗದ ಸಂ
ಕರುಷಣೋದ್ಧವ ಮುಖ್ಯರೈತರೆ ವಾಹನಂಗಳಲಿ
ವರ ವಿಭೂಷಣ ಗಂಧ ಮಾಲ್ಯಾಂ
ಬರಗಳಲಿ ನರರೆಸೆಯೆ ವಿದ್ಯಾ
ಧರರವೊಲು ಸುರಸತಿಯರಂತೆಸೆದುದು ವಧೂನಿವಹ ೭

ಕೆರಳಿದುವು ನಿಸ್ಸಾಳಚಯವಿಳೆ
ಬಿರಿಯೆ ಭೇರೀ ಶಂಖ ವೀಣಾ
ಮುರಜ ಮೃದುರವದೊಡನೆ ಪಾಠಕರ ಗಾಯಕರ
ಪರಮ ಮಂಗಳಘೋಷ ದೆಸೆಗಘ
ಹರವೆನಲು ತೀವಿದರು ಸುರರಂ
ಬರದಲುರುಪುಷ್ಪಕದಲೊಸರುವ ಪುಷ್ಪ ವೃಷ್ಟಿಗಳ ೮

ಕೃಷ್ಣ ಕಥೆಗಳನೊಲಿದು ಪಾಡುವ
ಕೃಷ್ಣ ಚರಿತವನೊಲಿದು ಪೊಗಳುವ
ಕೃಷ್ಣ ನಾಮಾವಳಿಗಳನು ಮನವೊಲಿದು ಕೀರ್ತಿಸುವ
ಕೃಷ್ಣ ಗಾಯಕ ಪಾಠಕರ ವರ
ಕೃಷ್ಣ ಕೀರ್ತನ ಜನದಲೆಸೆದುದು
ಕೃಷ್ಣ ಮಯವೆನಲೈದೆ ಯಾತ್ರಾಗತ ಜನಸ್ತೋಮ ೯

ತುರಗನಿಕರದ ತೆಱಗಳಲಿ ಕರಿ
ವರ ಮಹಾನಕ್ರದಲಿ ಛತ್ರೋ
ತ್ಕರದ ಬೆಳುನೊರೆಗಳಲಿ ಚಮರ ಮರಾಳ ಮಾಲೆಯಲಿ
ಪರಿಜನದ ವೈಷ್ಣವರ ಮಧ್ಯದ
ಹರಿಬಲಾನಕ ನೆರವಿಯೆಸೆದುದು
ಸುರರು ಹೊಗಳಲು ಭೂವರ ಕ್ಷೀರಾಬ್ಧಿಯಂದದಲಿ ೧೦

ನಡೆದುದಂದಂಬರವನವನಿಯ
ನೆಡೆಗೆಡಿಸಿ ದೆಸೆಯೆಂಟನುಗಿದು
ಘಡಿಪ ಬಹುವಿಧ ವಾದ್ಯಗೀತಂಗಳ ವಿನೋದದಲಿ
ಬಿಡದೆ ಕುರುಜಾಂಗಲಕೆ ತೀರ್ಥದ
ತಡಿವಿಡಿದು ಬಳಿಕಿವರು ಬಿಟ್ಟರು
ಪೊಡವಿ ಬೆಸಲಾದಂತೆ ಬಹು ಯೋಜನವನಾವರಿಸಿ ೧೧

ಹುಲುಮನೆಗಳಲಿ ಕೆಲರು ಕೆಲಬರು
ದಳದ ಮಂದಿರಗಳಲಿ ಕಾಷ್ಠಾ
ವಳಿಯ ಗೃಹದಲಿ ಕಂಬಳಾಜಿನವಾಸದಲಿ ಕೆಲರು
ಇಳೆಯಧೀಶ್ವರರಿಂಗೆ ಪಟ್ಟಾ
ವಳಿಯ ಮನೆಗಳು ಮೇಲೆಸೆವ ಹೊಂ
ಗಳಸದಲಿ ರಂಜಿಸಲು ಸುಖದಿಂದಿರ್ದುದಖಿಳ ಜನ ೧೨

ಬಂದುದಖಿಳ ಧರಾಧರಾಮರ
ವೃಂದವಖಿಳ ಮಹಾ ಮಹೇಶ್ವರ
ವೃಂದವಖಿಳ ದಿಗಂತ ಸನ್ನುತ ವೈಶ್ಯಜನ ವೃಂದ
ಸಂದ ಪಾದಜ ಪಂಗು ವಾಮನ
ವೃಂದ ಬಧಿರಾಂಧಾದಿ ಮೂಕರ
ವೃಂದ ಪಾತಕ ಪಾವನೇಚ್ಛೆಯಲಾ ಸ್ಯಮಂತಕಕೆ ೧೩

ಬಂದರಾ ಪಾಂಚಾಲ ಮತ್ಸ್ಯರು
ಬಂದರಾ ಕೇಕಯ ಕಳಿಂಗರು
ಬಂದರಾ ಕಾಂಭೋಜ ಕೋಸಲ ಮಾದ್ರ ಮಾಳವರು
ಬಂದರಾ ಗಾಂಧಾರ ಚೈದ್ಯರು
ಬಂದರಾ ವೈದರ್ಭ್ಯ ಮುಖ್ಯರು
ಬಂದರಗಣಿತ ನೃಪರು ಸತಿ ಸುತ ಬಾಂಧವರು ಸಹಿತ ೧೪

ಬಂದರಾ ಪಾಂಡವರು ಕೌರವ
ವೃಂದ ಸಹಿತ ಮಹಾ ಮಹೀಶ್ವರ
ರಿಂದುಮುಖಿಯರ ದಂಡಿಗೆಗಳುಗ್ಘಡಣೆಗಳು ಸಹಿತ
ಬಂದು ರಾಮಹ್ರದದೆ ಕಲೆತರು
ಮಿಂದು ಸುರಗೋವಿಪ್ರರಿಂಗಭಿ
ವಂದಿಸಿದರನ್ನಾಂಬರಾಭರಣಾದಿಗಳನಿತ್ತು ೧೫

ಯಾದವೋತ್ತಮರಮಳತರ ತೀ
ರ್ಥೋದಕ ಸ್ನಾನವನು ವಿರಚಿಸಿ
ಮೇದಿನೀ ಸುರದೇವಪಿತೃಸಂತರ್ಪಣವ ಮಾಡಿ
ಆದರಿಸಿ ಮಣಿ ಕನಕ ವಸನಾ
ನ್ನಾದಿಕದಲರ್ಚಿಸಿದರಾ ದಾ
ಮೋದರನ ಪದಕಮಲಭಕುತಿಯನ್ನೈದೆ ತವತವಗೆ ೧೬

ಸಕಲಜನವಾ ರಾಮಕೃಷ್ಣರ
ಸುಕವಿನುತ ಮೂರ್ತಿಯನು ಮನದಾ
ಸಕುತಿಯಲಿ ನಸುನೋಡಿ ಚರಣ ಸರೋಜದಲಿ ನಮಿಸಿ
ಸುಕೃತಿಗಳು ತತ್ಪದ ಪರಾಗ
ಪ್ರಕರ ಪಾಲಿತ ಚಾರುತರ ಮ
ಸ್ತಕರೆನಿಸಿ ಮುಳುಗಾಡುತಿರ್ದುದು ಬಹಳ ಹರುಷದಲಿ ೧೭

ಬಂದರಲ್ಲಿಗೆ ಬಹಳ ಮುದದಲಿ
ನಂದಗೋಪಾದ್ಯಖಿಳಗೋಪರ
ವೃಂದ ಭಂಡಿಗಳೆಸೆಯೆ ತುಂಬಿದ ಗೋರಸಂಗಳಲಿ
ಬಂದಳಂದು ಯಶೋದೆ ಗೋಪೀ
ವೃಂದಸಹಿತುತ್ಸವದಲಾ ಗೋ
ವಿಂದನನು ಪಾಡುತ್ತ ಪರಮಾಹ್ಲಾದ ಭಾರದಲಿ ೧೮

ನಂದನಾ ಕ್ಷೇತ್ರದಲಿ ದೇವ ಮು
ಕುಂದನಾ ಬಾಂಧವರು ಸಹಿತೈ
ತಂದುದನು ಕೇಳುತ್ತ ಕೃಷ್ಣ ಪದಾಬ್ಜದರುಶನಕೆ
ಮುಂದುವರಿವುತ್ಸವದ ಭರದಲಿ
ಬಂದನಾ ಗೋ ಗೋಪ ಗೋಪೀ
ವೃಂದ ಸಹಿತಾಕ್ಷಣದಲಾ ಗೋವಿಂದನಿದ್ದೆಡೆಗೆ ೧೯

ಬರವ ಕಾಣುತ ದೂರದಿಂದವೆ
ಪರಮ ಸಂತೋಷದಲಿ ಹರಿ ಸಂ
ಕರುಷಣರು ವಸುದೇವ ಮುಖ್ಯಯದೂತ್ತಮರು ಸಹಿತ
ತೆರಳಿದಸುವನು ಕಂಡ ಕರಣೋ
ತ್ಕರಗಳಂತಿರಲಿದಿರುಗೊಂಡ
ಬ್ಬರದ ಪುಳಕಾಶ್ರುಗಳ ಪೂರದಲಪ್ಪಿದರು ಬಿಗಿದು ೨೦

ಮುಂದುವರಿದಪ್ಪಿದನು ಬಳಿಕಾ
ನಂದಗೋಪನನಧಿಕನಯನಾ
ನಂದಜಲ ಪರಿಲುಳಿತ ಗಾತ್ರದಲಂದು ವಸುದೇವ
ತಂದೆ ತಾಯ್ಗಳ ಚರಣದಲಿ ಗೋ
ವಿಂದ ರಾಮರು ಗಾಢ ಹರುಷಾ
ಸ್ಪಂದ ಸಲಿಲೇಕ್ಷಣರು ತಲೆವಾಗಿದರು ವಿನಯದಲಿ ೨೧

ಎದ್ದು ಸೆಳೆದಪ್ಪಿದರು ಹರುಷ ಜ
ಲಾರ್ದ್ರಹೃದಯೇಕ್ಷಣರು ಮುಕ್ತರ
ಮುದ್ದುಗಳನಡಿಗಡಿಗೆ ಬಹಳ ಪ್ರೇಮವಾರ್ಧಿಯಲಿ
ಅದ್ದರಾಲಿಸಿದರು ಮುಕುಂದನ
ಮುದ್ದು ಮೂರ್ತಿಯನಧಿಕ ಸುಖದೊಳ
ಗಿದ್ದರುಸುರದೆ ನಂದಗೋಪ ಯಶೋದೆಯರು ಬಳಿಕ ೨೨

ತೊರೆದ ಮೊಲೆಗಳಲಪ್ಪಿ ತೊಡೆಯಲಿ
ಪರಮ ಪುರುಷನ ಕುಳ್ಳಿರಿಸಿಕೊಂ
ಡುರುತರ ಪ್ರೇಮದಲಿ ಮೂರ್ಧ್ನಾಘ್ರಾಣವನು ಮಾಡಿ
ಕರಗಿದಳು ಕಂಗಳಲಿ ನೆನೆದಳು
ತರಳೆ ಸುಖಬಾಷ್ಪದಲಿ ಹಿಂದಣ
ವಿರಹದುಃಖವ ನೆನೆವುತತ್ತ್ತಳು ನೋಡಿ ಮುರಹರನ ೨೩

ಲಲನೆ ಬಾಲತ್ವದ ಮುಕುಂದನ
ಚಲುವ ಮೂರ್ತಿಯ ನೆನೆವುತೀಪರಿ
ಮಿಳಿತ ಸೌಭಗಸಾಂದ್ರ ಯವ್ವನದಂಗಲಕ್ಷ್ಮಿಯನು
ಒಲಿದು ನೋಡುತ ನೋಡುತದ್ದಳು
ಪುಳಕ ಜಲದಲಿ ಮೈದಡವಿ ಮೆಲು
ದಳದಲೋರಂತಪ್ಪಿ ಮಱೆದಳು ಲೋಕವಿಭ್ರಮವ ೨೪

ಬಂದು ಕಂಡರು ಗೋಪಿಯರು ಗೋ
ವಿಂದನನು ಹೃತ್ತಾಪ ಶಿಖಿಯಲಿ
ಬೆಂದ ಮನವಂಕುರಿಸಿ ಪಲ್ಲವಿಸಿತ್ತು ಹರುಷದಲಿ
ಕಂದಣಿಯೆ ಕಮನೀಯ ಮೂರ್ತಿಯ
ಸಂದು ನಡೆ ನೋಡುತ್ತ ಪುತ್ಥಳಿ
ಯಂದವಾದರು ಬಿಗಿದ ಪುಳಕೋದ್ಭವದ ಭಾರದಲಿ ೨೫

ಪ್ರೇಮಭರದಲಿ ಬಳಲುವಬಲಾ
ಸ್ತೋಮವನು ಕಾಣುತ್ತ ಭಕ್ತ
ಕ್ಷೇಮಕಾರಣಮೂರ್ತಿ ಕರುಣಾಸಿಂಧು ಪರಿಮಿತಕೆ
ಸೋಮಸನ್ನಿಭವದನೆಯರನು
ದ್ದಾಮಕೀರುತಿ ಕರೆಸಿ ಗಾಢ
ಪ್ರೇಮದಲಿ ತೆಗೆದಪ್ಪಿ ಕುಶಲೋಕ್ತಿಯಲಿ ಮನ್ನಿಸಿದ ೨೬

ಸತಿಯರಿರ ತನಗೋತ ಚರಿತ
ವ್ರತೆಯರಿರ ನೀವೆನ್ನ ನೆನೆವಿರೊ
ಮತಿಯೊಳಗೆ ಮಱೆದಿಹಿರೊ ದೇಶಾಂತರನಿವಾಸಿಗಳ
ಹತವಿಧಿಯ ವಿಹಿತವನು ತಪ್ಪಿಸು
ವತುಳಬಲರಾರೆಸೆವ ಭುವನ
ತ್ರಿತಯದಲಿ ಮತ್ಯಾರ್ಭಿಭಾಷಿತರಾದೆವಾವೆಂದ ೨೭

ಹಳಿಯ ನಲ್ಲನೆನುತ್ತ ನೀವ್ ಸಿಡಿ
ಗಳೆಯಿರೆಲೆ ತನ್ನನು ಗೃಹವ್ಯಾ
ಕುಳಿತೆಯರು ನಿಜಬಂಧುಸೌಹಾರ್ದದಲಿ ವೈಮಱೆದು
ಲಲನೆಯರಿರೆಮಗಾಯ್ತು ಬಹುನೃಪ
ಕುಲವಿರೋಧ ವಿಪತ್ಪರಂಪರೆ
ಜಲಧಿಯಲಿ ಮನೆಮಾಡಿ ಕಳೆದೆವು ಹಲವು ವತ್ಸರವ ೨೮

ಮಾಡಲಾಗದಸೂಯೆಯನು ಖಯ
ಖೋಡಿಯನು ಹಿಡಿಯದಿರಿ ತನ್ನಲಿ
ನೋಡಲಾಗದು ದೈವವಶದಲಿ ಮಾಡಿದವಮತಿಯ
ಕೂಡಿಸುವನಗಲಿಸುವನೊಬ್ಬನೆ
ಕೂಡೆ ಸಚರಾಚರವನೀಶ್ವರ
ನಾಡಿಸಿದವೊಲಾಡುತಿಹುದೀ ಜೀವಚಯವೆಂದ ೨೯

ಎನಲು ನುಡಿದರು ಕಾಂತೆಯರು ಕೇ
ಳಿನನೆ ಲೋಕದ ಮಾತನೇತ
ಕ್ಕನುಸರಿಸಿ ನೀ ಮಾತನಾಡುವೆ ಜೀವಚಯದಂತೆ
ಜನಿಸುವವನೈ ಕೃಷ್ಣ ನಿನ್ನಯ
ಜನನವನು ಮುನಿಮುಖ್ಯರಱಿಯರು
ವನಿತೆಯರ ಮೋಹಿಸುವಡಱಿದಿಲ್ಲೆಂದರಬಲೆಯರು ೩೦

ಗತಿಯದಾವುದು ಕೃಷ್ಣ ನಿನ್ನನು
ಮತಿಯೊಳಗೆ ದಿಟ ಮಱೆದಡೇಕನು
ಚಿತದ ಮಾತುಗಳಾತ್ಮ ವಿರಹಿತವಾದವೊಡಲುಗಳು
ಕೃತವಿದನೆ ಜೀವಿಸುವುದೆಂತ
ಪ್ರತಿಮ ನಿನ್ನಯ ಯೋಗಮಾಯಾ
ಕೃತಕ ಕೊಳ್ಳದು ಬಲ್ಲೆವೆಲ್ಲವನೆಂದರಬಲೆಯರು ೩೧

ಆರು ಬೇಱೆ ವಿಧಾತ್ರನೆಂಬವ
ನಾರು ಬೇಱೀಶ್ವರನೆನಿಪ್ಪವ
ನಾರು ಬೇಱೊಡೆಯರು ಲಯಸ್ಥಿತಿಹೇತುಗಳು ದಿಟಕೆ
ಆರು ಕಾರಣಮೂರ್ತಿಗಳು ದಿಟ
ಬೇರ ಬಲ್ಲರಿಗೆಲೆಯನೇತಕೆ
ತೋಱೆ ಕಾಡುವೆ ಕೃಷ್ಣಯೆಂದರು ಕಮಲವದನೆಯರು ೩೨

ದೇವದೇವಾಧೀಶ್ವರನೆ ನಿನ
ಗೇವುದೀ ನೃಪಕುಲ ವಿರೋಧಿಸಿ
ಭಾವಿಸಲು ಭೂಭಾರಹರಣ ಕೃತಾವತಾರನಲೆ
ದೇವ ನಿನ್ನಯ ಚರಣಕಮಲವ
ಭಾವದಲಿ ಮಱೆವೊಕ್ಕ ಮನುಜರಿ
ಗಾವ ಭಯವಿಲ್ಲ ಗಡ ಬಾಧಕರಾರು ದಿಟ ನಿನಗೆ ೩೩

ಮಾಡಿ ಮಾಡುವುದೇನಸೂಯೆಯ
ಮಾಡಿ ಮಾಡುವುದೇನು ಖತಿಯನು
ಮಾಡಿ ಮಾಡುವುದೇನು ನಿನ್ನಲಿ ದೋಷಸಂಗ್ರಹವ
ಮಾಡಿಕೊಂಡಳದಾವ ಗೆಲುವನು
ರೂಢಿಗಗ್ಗದ ಲಕ್ಷ್ಮಿ ಕೃಪೆಯನು
ಮಾಡಿದನಿತೇ ಲಾಭವೆಮಗೆಂದರು ಮಹಾತ್ಮೆಯರು ೩೪

ಬೆಂದೆವಲ್ಲೈ ಕೃಷ್ಣ ವಿರಹದ
ದಂದುಗದ ದಾವಾಗ್ನಿಯಲಿ ಕ್ಷಣ
ವೊಂದು ಶತಯುಗವಾಯ್ತು ತವುಗಿದನಾರಿಗುಸುರುವೆವು
ಎಂದು ಕಂಬನಿಗಡಲಲಬಲೆಯ
ರಂದು ಮುಳುಗಿ ಮುಕುಂದನಂಘ್ರಿ
ದ್ವಂದ್ವದಲಿ ಹೊರಳಿದರು ಮಱುಗಿದರಂದು ಕಳವಳಿಸಿ ೩೫

ಇರಲು ಸತಿಯರ ಮನದ ದುಸ್ಥಿತಿ
ಯಿರವ ಕಾಣುತ ಬೇಱೆಬೇಱೆ
ಲ್ಲರನು ತೆಗೆತೆಗೆದಪ್ಪಿದನು ಕಂಬನಿಗಳನು ತೊಡೆದು
ತರಳೆಯರಿರುಳ್ಳಡೆ ವಿವೇಕದ
ಪರಿಣತೆಯಿದೇಕೆನುತ ನಿಜಪದ
ಶರಣೆಯರ ಬೋಳೈಸಲೆಂದರು ಕೈಗಳನು ಮುಗಿದು ೩೬

ಆವ ತತ್ವವಿವೇಕವುಳ್ಳವ
ನಾವ ಪರಮ ವಿರಕ್ತಿಯುಳ್ಳವ
ನಾವನೀ ನಿನ್ನಂಘ್ರಿಕಮಲದ ದರುಶನವ ಪಡೆದು
ಓವೊ ಬಿಡುವನು ಸಕಲಜೀವರ
ಜೀವಭೂತನೆ ಭಕುತಿಸುಖವಿದು
ಭಾವಗೋಚರವಲ್ಲ ನಿನಗೆಂದರು ಸಭಾಗ್ಯೆಯರು ೩೭

ಅಱಿತಿರಾದರೆ ತನ್ನನೇತಕೆ
ಹೊಱಗೆ ನೀವಱಸುವಿರಿ ನಿಮ್ಮೊಳ
ಗಿಱನೆ ಸರ್ವಾತ್ಮಕನು ತಾನೆಂದಂತರಂಗದಲಿ
ನೆಱೆ ವಿಚಾರಿಸಿ ಮನದಲೆನ್ನನು
ತಱುಬಿ ತಾತ್ಪರಿಯದಲಿ ಮುನಿಗಳ
ತೆಱದಲಿರದೇಕೆನ್ನ ಕಾಡುವಿರೆಂದನಸುರಾರಿ ೩೮

ಮನದಲಲ್ಲದೆ ಕೃಷ್ಣ ನಿನ್ನನು
ತನುವಿನಲಿ ಕಾಡಿದೆವೆ ಸಕಲಾ
ತ್ಮನನು ನೆನೆನೆನೆದಿನ್ನೆಗನುಭವಿಸಿದೆವು ನಿಜಪದವ
ನೆನೆದು ನಿಜದಾಸಿಯರನುದ್ಧವ
ನನು ಸರಾಗದಲಟ್ಟಿದಂದಿನ
ದಿನವೊದಲು ಮನಕಾದುದನುಭವವೆಂದರಬಲೆಯರು ೩೯

ನೋಡದಿರಿ ರೂಪವನು ತನ್ನನು
ಕಾಡದಿರಿ ನೆಱೆ ನಂಬಿದವರನು
ಬಾಡಿದರೆ ಬಾಡುವೆನು ನೊಂದರೆ ನೋವೆನೆನ್ನವರು
ಕೂಡದಿರಿ ಕತ್ತಲೆಯನಗಲದೆ
ಕೂಡಿಹೆನು ನಿಮ್ಮೊಳಗೆ ನಿಮ್ಮನು
ಬೇಡಿಕೊಂಬೆನು ಬಳಲಬೇಡಿನ್ನೆಂದನಸುರಾರಿ ೪೦

ಜಗದೊಳಗೆ ತಾನೆನ್ನೊಳಗೆ ಜಗ
ವಗಲದಬ್ಧಿ ತರಂಗ ಫೇನಾ
ಳಿಗಳವೋಲೇಕಾತ್ಮತೆಯನಿಂತಱಿಯ ಬಲ್ಲರಿಗೆ
ಹಗರಣವಲಾ ತೋರ್ಕೆ ಮನ ನಂ
ಬುಗೆಗೆ ಬೇಱೊಂದಾಕೃತಿಯಲಿಂ
ತೊಗೆದು ತೋರ್ಪೆನು ತತ್ವವಿದ್ಯಾಪಥವನಿದನೆಂದ ೪೧

ವಿಷಯದಲಿ ಸೌಖ್ಯವನು ಗಗನದ
ಕುಸುಮದಲಿ ಪರಿಮಳವ ಮಳಲಲಿ
ರಸವನುದಕವನಾ ಮರೀಚಿಕೆಯೊಳಗೆ ನೆಳಲೊಳಗೆ
ಅಸುವನಱಸಿದರುಂಟೆ ಮಾಯೆಯ
ಹಸರವಿದು ಹುಸಿಯೆಂದು ತನ್ನಲಿ
ಶಶಿಮುಖಿಯರಿರ ಕೂಡಿ ನೀವ್ ನೆಱೆ ಸುಖಿಗಳಹುದೆಂದ ೪೨

ಎಂದಡಾ ಮುರವೈರಿ ಕರುಣಿಸಿ
ದಂದದಲಿ ನೆಱೆ ತಿಳಿದು ವಿರಹದ
ದಂದುಗವನೀಡಾಡಿ ಪೂರ್ಣಮನೋರಥೆಯರೆನಿಸಿ
ಎಂದರಾ ಗೋವಿಂದನಂಘ್ರಿ
ದ್ವಂದ್ವದಲಿ ತಂತಮ್ಮ ಹೃದಯದ
ಲಿಂದುವದನೆಯರಪ್ಪಿ ಪರಮಾನಂದದಲಿ ಮುಳುಗಿ ೪೩

ಇದೆಯಲಾ ಯೋಗಿಗಳ ಸದಮಳ
ಹೃದಯಪಂಕಜ ಪರ್ಯುಪಾಸಿತ
ವಿದೆಯಲಾ ಸಂಸಾರದುಸ್ತರಕೂಪ ಪತಿತರಿಗೆ
ವಿದಿತ ಸುದೃಢ ಕರಾವಲಂಬನ
ವಿದು ಭವಾಂತರಗಳಲಿ ತಮ್ಮಯ
ಹೃದಯದಲಿ ಗೋಚರಿಸುತಿರ್ಕೆಂದೆಱಗಿದರು ಪದಕೆ ೪೪

ಎಂದು ಸತಿಯರು ಕೃಷ್ಣನಂಘ್ರಿ
ದ್ವಂದ್ವದಲಿ ತಲೆವಾಗಿ ಪುಳಕಾ
ನಂದಜಲದಲಿ ಮುಳುಗಿ ಬೇಡಿದರಧಿಕತರ ಕೃಪೆಯ
ಇಂದು ನಾಳೆಯೆನುತ್ತ ಯಾತ್ರೆಗೆ
ಬಂದವರ ಬೀಳ್ಕೊಡದೆ ಪರಮಾ
ನಂದವನು ನಿತ್ಯಾತ್ಮ ಕೃಷ್ಣನು ಸಲಿಸಿದನು ಜಗಕೆ ೪೫

ಎಪ್ಪತ್ತ ಮೂರನೆಯ ಸಂಧಿ ಮುಗಿಯಿತು.

# ಎಪ್ಪತ್ತನಾಲ್ಕನೆಯ ಸಂಧಿ

ಭೂಮಿಲಂಬದ ಜನ ಸಹಿತ ಕರು
ಣಾ ಮಹೋದಧಿ ಮೂಱು ತಿಂಗಳ
ನಾ ಮಹಾಕ್ಷೇತ್ರದಲಿ ನೂಕಿದನಧಿಕ ವಿಭವದಲಿ

ಇಂತನುಗ್ರಹಿಸುತ್ತ ಲಕ್ಷ್ಮೀ
ಕಾಂತನಾ ಗೋಪಿಯರಿಗುರು ವೇ
ದಾಂತತತ್ವರಹಸ್ಯ ಸಂಸ್ಥಿತಿಯನು ಸರಾಗದಲಿ
ಸಂತವಿಸಿ ತಾನಲ್ಲದಿಲ್ಲೇ
ಕಾಂತ ಭಕ್ತರಿಗಾಪ್ತನೆಂಬುದ
ನಿಂತು ಮೆಱೆವುತ್ತಿರ್ದನಾ ಜನನಿವಹಮಧ್ಯದಲಿ ೧

ಬಂದು ರುಕ್ಮಿಣ್ಯಾದಿ ಮಹಿಷೀ
ವೃಂದವನು ತತ್ಪುತ್ರಪೌತ್ರರ
ಸಂದಣಿಯು ಸಂಭ್ರಮುವನಾ ಪಿತೃಮಾತೃಬಾಂಧವರ
ವೃಂದವನು ದೇವಕಿಯನಾನಕ
ದುಂದುಭಿಯನುಳಿದರಸಿಯರನಾ
ನಂದದಲಿ ತೆಗೆದಪ್ಪಿ ನುಡಿದನು ನಯನವಾರಿಯಲಿ ೨

ಬಳಿಕ ಬಂದು ಯುಧಿಷ್ಠಿರಾದ್ಯರ
ನೊಲಿದು ಕುಶಲಕ್ಷೇಮ ವಾರ್ತೆಯ
ಲಲಘು ಮಹಿಮನು ಮನ್ನಿಸಿದನಾ ಸಕಲ ನೃಪಕುಲವ
ಲಲನೆ ಕುಂತೀದೇವಿ ಬಂದಾ
ನಳಿನನಾಭನ ಹೊರೆಗೆ ಹರುಷಾ
ಕುಳಿತ ಲೋಚನೆಯಪ್ಪಿದಳು ಪುಳಕಾಶ್ರುಪೂರದಲಿ ೩

ಅಣ್ಣ ನೀವೇತಕ್ಕೆ ನೆನೆವಿರಿ
ಪುಣ್ಯಹೀನೆಯನೆನ್ನನಾನ
ಗ್ರಣ್ಯೆಯಾದೆನಲಾ ವಿಪದ್ಗತರಿಂಗನಾಥರಿಗೆ
ಬಣ್ಣಿಸುವೆನಾರ್ಗಣ್ಣ ದುಃಖದ
ತಿಣ್ಣವನು ನಿನಗಾಯ್ತು ಸಾವಿರ
ಕಣ್ಣವನ ಸಿರಿ ಕಾಂಬಿರೆಂತೆಂದಳಲಿದಳು ತರಳೆ ೪

ಒಡೆತನಕೆ ಬೆಸಕೈವವೋಲಾ
ರ್ಬಡತನಕೆ ಬಹರಣ್ಣ ಬಾಂಧವ
ರಡವಿಯನು ಸುಡುವಗ್ನಿಗಾ ಪವಮಾನ ಮಿತ್ರನಲ
ಬಡಿಯನೇ ದೀಪವನು ನೀವೆ
ನ್ನೊಡರನಾರೈದಿರೆ ವಿರೋಧವೆ
ಕಡೆಗಣಿಸುವುದು ದೈವವೆಂದಳು ಕುಂತಿ ಬಿಸುಸುಯ್ದು ೫

ತಾಯೆ ಚಿಂತಿಸಬೇಡ ಬಱದೇ
ನೋಯದಿರು ಮನದೊಳಗೆ ಜೀವನಿ
ಕಾಯವೀಶ್ವರತಂತ್ರವೆಂದಱಿಯರು ಚರಾಚರದ
ನೋಯಿಸುವನಾಗಿಸುವನೊಬ್ಬನೆ
ಮಾಯೆಯರಸನು ಮಿಕ್ಕ ಮನುಜರು
ಪಾಯದಲಿ ಹುರುಳಿಲ್ಲ ಮಱುಗದಿರೆಂದನಾ ಶೌರಿ ೬

ಕಿಱಿದು ದಿನ ಖಳ ಕಂಸನೆಮ್ಮನು
ಸೆಱೆಯಲಿಟ್ಟನು ರಾಮಕೃಷ್ಣರು
ಹೊಱಗೆ ಗೋಕುಲದೊಳಗೆ ಬೆಳವುತ್ತಿರ್ದರರ್ಭಕರು
ಮುಱಿದು ಕಂಸನನಖಿಳ ಬಾಂಧವ
ರಱಕೆಯಲಿ ಸಂತವಿಸಿ ಹೋದವು
ಕಿಱಿದು ದಿನ ಮಾಗಧಮಹೀಪತಿಯಟ್ಟುಳಿಯಲೆಂದ ೭

ಇನ್ನು ನೀ ಮಱುಗದಿರು ಮಾಳ್ಪನು
ತನ್ನ ಮಗನೀ ಕೃಷ್ಣನೆಲ್ಲವ
ನುನ್ನತಿಯನಂಜದಿರು ಸರಸಿಜಭವಭವಾದಿಗಳು
ಮನ್ನಿಸುವರೀತನನು ಮಿಕ್ಕವ
ರಿನ್ನು ಪಾಡೇ ತಂಗಿ ಬಹಳ ಕೃ
ಪಾರ್ಣವನು ಕೇಳೆನುತ ಸಂತವಿಸಿದನು ವಸುದೇವ ೮

ಬಳಿಕ ಧರ್ಮಜ ಭೀಮ ಪಾರ್ಥರ
ನೊಲಿದು ಯಮಳರನಪ್ಪಿದನು ನೃಪ
ಕುಲವ ಕಾಣಿಸಿಕೊಂಡನಾ ಪಾಂಚಾಲ ಸೃಂಜಯರ
ನಲಿದು ಭೀಷ್ಮ ದ್ರೋಣ ಮುಖ್ಯರ
ಬಳಗವನು ಕೃಪ ವಿದುರ ಕುರುಕುಲ
ತಿಲಕ ಧೃತರಾಷ್ಟ್ರಾದಿಗಳನಪ್ಪಿದನು ಹರುಷದಲಿ ೯

ಬಂದು ಸಕಲ ನೃಪಾಲ ಬಾಂಧವ
ವೃಂದವಾ ಲೋಕಾಭಿರಾಮ ಮು
ಕುಂದನನು ನೆಱೆ ನೋಡಿ ಪರಮಾಮೃತದಲೋಲಾಡಿ
ಎಂದರಾ ವಸುದೇವಮುಖ್ಯರಿ
ಗೆಂದು ಪರಮಾಹ್ಲಾದ ಸಲಿಲಾ
ಸ್ಪಂದ ನೇತ್ರರು ಹರುಷದಲಿ ತೆಗೆದಪ್ಪಿ ತವತವಗೆ ೧೦

ಕುಂತಿಭೋಜ ವಿರಾಟ ದ್ರುಪದಾ
ವಂತಿಭೀಷ್ಮಕ ನಗ್ನಜಿತು ನೃಪ
ಸಂತತಿಗಳವರಾದಿಯಾದ ಮಹಾ ಮಹೀಶ್ವರರು
ತಂತಮಗೆ ಪಾಂಡವ ಸಹಾಯಾ
ನಂತ ನೃಪರೀಕ್ಷಿಸುತ ಲಕ್ಷ್ಮೀ
ಕಾಂತನನು ಹೊಗಳಿದರು ವಸುದೇವಾದಿಗಳನೊಲಿದು ೧೧

ಆರು ನಿಮ್ಮಂದದ ಸಭಾಗ್ಯರ
ದಾರು ನಿಮ್ಮಂದದ ಸನಾಥರ
ದಾರು ಭುವನತ್ರಿತಯದಲಿ ನಿಮ್ಮಂತೆ ಸುಕೃತಿಗಳು
ಭೂರಿಭಾಗ್ಯರಿರಧಿಕ ಪುಣ್ಯೋ
ದಾರ ಚರಿತರಿಗಾಯ್ತು ಜನ್ಮದ
ಸಾರಸಫಲವು ನಿಮಗೆನುತ ಕೊಂಡಾಡಿದುದು ಕಟಕ ೧೨

ಮುಟ್ಟಲಱಿಯದು ಯೋಗಿಮನ ಕ
ಣ್ಣಿಟ್ಟು ಕಾಣರು ಭವ ವಿರಿಂಚಾ
ದ್ಯಷ್ಟ ದಿಗುಪಾಲಕರದಾವನ ಪಾದರೇಣುಗಳ
ಸೃಷ್ಟಿ ವಿಲಯ ಸ್ಥಾನವಾವನ
ಭೀಷ್ಟ ಮಾಯಾಗುಣಗಳಲಿ ನಿ
ರ್ದಿಷ್ಟನೆನಿಸುವನಾವನೀ ಸಚರಾಚರಂಗಳಲಿ ೧೩

ಆವನೊಬ್ಬನ ವಾಮಚರಣನ
ಖಾವನೇಜದ ವಾರಿಯನು ಗೌ
ರೀವರನು ನೆಱೆ ಧರಿಸಿ ಪಾವನನಾದನೀ ಜಗಕೆ
ಆವನೆಂದುದು ಶಾಸ್ತ್ರಪಾವನ
ಭೂ ವಿಜೃಂಭಿತ ಪ್ರಳಯದಲಿ ಭುವ
ನಾವಳಿಗೆ ಸಲೆ ಸೇವ್ಯತಮನೀ ಸುರ ಮುನೀಂದ್ರರಿಗೆ ೧೪

ಭೂಮಿಭಾರವ ಕಳೆಯಲೆಂದೇ
ಶ್ರೀಮನೋರಮನೆನಿಪ ವಿಷ್ಣುವೆ
ನಾಮರೂಪಕ್ರಿಯೆಗಳನು ಕೃಷ್ಣಾಭಿಧಾನದಲಿ
ಕ್ಷೇಮಧಾಮನೆ ಧರಿಸಿದನಲೈ
ಸ್ವಾಮಿ ನಿಮ್ಮಯ ಬಹಳ ಪುಣ್ಯ
ಸ್ತೋಮವನು ವಿಸ್ತರಿಸಿ ಸಲಹುವ ಸಕಲ ಸುರಕುಲವ ೧೫

ಮುನಿಮನೋದುರ್ಲಕ್ಷ್ಯಪದ ದರು
ಶನವು ಶಯ್ಯಾಸನ ಗಮನ ಭೋ
ಜನ ಸಯಾನ ನಿಬಂಧನದ ಸಂಬಂಧನವು ನಿನಗೆ
ಜನಿಸಿದವಲಾ ಭಲರೆ ಭಾಪುರೆ
ವಿನುತ ಧರೆಯಲಿ ನಿಮ್ಮ ಹೋಲುವ
ಧನಿಕರಾರಿನ್ನೆನುತ ಹೊಗಳಿದುದಖಿಳ ನೃಪನಿವಹ ೧೬

ಕರ್ದಮಲಿನ ಗೃಹಂಗಳೆತ್ತಲು
ಬ್ರಹ್ಮಮೂರುತಿ ವಿಷ್ಣುವೆತ್ತಲು
ಜನ್ಮವನು ನೆಱೆ ಪಡೆವುದೆತ್ತಲು ಶಿವ ಮಹಾದೇವ
ಒಮ್ಮೆ ನೆನೆದರೆ ಪಾಪಹರ ಕಂ
ಡೆಮ್ಮವೋಲಿನ್ನಾರು ಧನ್ಯರು
ಸಮ್ಮುಖದಲಚ್ಯುತನನೆಂದೆನುತಿರ್ದುದಖಿಳ ಜನ ೧೭

ಎಂದು ವಸುದೇವನನು ಜನಪದ
ವೃಂದವನು ಹೊಗಳುತ್ತ ಭೂಪರ
ವೃಂದ ನೆರೆದೈತಂದುದಾ ಗೋವಿಂದನಿದ್ದೆಡೆಗೆ
ಬಂದ ಭೂಪರ ವೃಂದವನು ಗೋ
ವಿಂದ ರಾಮರು ಕುಶಲವಾರ್ತೆಗ
ಳಿಂದೆಸೆಯಲಪ್ಪಿದರು ಸಂಭಾವಿಸಿದರುಚಿತದಲಿ ೧೮

ನುಡಿದರವನಿಪರಚ್ಯುತನ ಮೆ
ಲ್ಲಡಿಗಳಿಗೆ ತಲೆವಾಗಿ ಕಂಗಳ
ಕುಡಿತೆಗಳಲೋರಂತೆ ಕುಡಿ ಕುಡಿದುಗುವ ದೃಗುಜಲದ
ಮಡುವಿನಲಿ ಮೊಗ ನೆನೆದು ಕಂಠದ
ಲಿಡಿದ ಗದುಗದರವದಲಾ ಜಗ
ದೊಡೆಯನನು ಸಂಭಾವಿಸುತ ಸದು ವಿನಯ ಭಕುತಿಯಲಿ ೧೯

ನೆನೆವವರಿಗಿಲ್ಲಶುಭವಕ್ಕುಶಲ
ಜನಿಸಲಱಿವುದೆ ಕೃಷ್ಣ ನಿನ್ನವ
ರೆನಿಸಿದೆವಗೆಲೆ ದೇವ ದಿವ್ಯ ಕಟಾಕ್ಷಗುಪಿತರಿಗೆ
ಜನನ ಸಫಲವಿದಾಯ್ತು ನಮ್ಮೀ
ತನು ಪವಿತ್ರವಿದಾಯ್ತು ನಮಗಿಂ
ದಿನಲಿ ಭವದೀಯಾಂಘ್ರಿಸೇವೆಯಲೆಂದರವನಿಪರು ೨೦

ಆರ ದೆಸೆಯಿಂದೊಗೆದು ತೋರ್ಪುದು
ಭೂರಿ ಜಗವಿದು ಕಣ್ಗೆ ನೀ ಮೈ
ದೋಱಿದಮಳಜ್ಞಪ್ತಿ ಸುಖಪರಿಪೂರ್ಣರೂಪದಲಿ
ಆರಱಿವರೆಲೆ ದೇವ ಸಹಜಾ
ಕಾರವನು ನಿನ್ನೊಲವು ಸೇರದ
ಡಾರಿಗಹುದು ವಿವೇಕವೆಂದರು ನೃಪರು ಕೈಮುಗಿದು ೨೧

ಅಱಿಯದೆವಗೆ ನಿಜ ಸ್ವರೂಪವ
ನಱುಪಲೆಂದೆಲೆ ದೇವ ನೀನವ
ತರಿಸಿ ನಿಜಮಾಯೆಯಲಿ ಲೀಲಾವಿಗ್ರಹವ ಧರಿಸಿ
ಚರಿಸುವೆಯಲೈ ಸಕಲ ಸಚರಾ
ಚರ ಜಗದ್ಧಿತವಾಗಿ ನಿಜಪದ
ಶರಣರಕ್ಷಾಕರನೆ ಶರಣಾಗೆಂದರವನಿಪರು ೨೨

ಎಂದು ಕಾಣಿಕೆಗಳನು ಕೊಟ್ಟು ಮು
ಕುಂದನೊಪ್ಪುವ ಚಾರು ಚರಣ
ದ್ವಂದ್ವದಲಿ ಮೈಯಿಕ್ಕಿ ಮಣಿ ಮುಕುಟಂಗಳೋರಣಿಸಿ
ಸಂದಣಿಸಿ ಸಾಷ್ಟಾಂಗ ಸನ್ಮತಿ
ಯಿಂದ ಹೊಗಳುತ್ತಿರಲು ವನಿತಾ
ವೃಂದ ಕವಿದುದು ಮೇಲೆ ಕೃಷ್ಣಪದಾಬ್ಜ ದರುಶನಕೆ ೨೩

ಇಳಿದು ದಂಡಿಗೆಗಳನು ಕುಂತೀ
ಲಲನೆ ದ್ರೌಪದಿಮುಖ್ಯ ವನಿತಾ
ವಳಿಗಳಾ ಪಾಂಚಾಲ ಮತ್ಸ್ಯ ನೃಪಾಲರರಸಿಯರು
ನಲವು ಮಿಗೆ ಗಾಂಧಾರಿ ಸಹಿತಘ
ಕುಲವಿನಾಶನನಂಘ್ರಿಯನು ಕಂ
ಡಲಘು ಪುಳಕಾಮೃತ ಸಮುದ್ರದಲದ್ದರಡಿಗಡಿಗೆ ೨೪

ಪರಮ ಬಾಂಧವ ಸತಿಯರನು ಸತು
ಕರಿಸಿ ರಾಣೀವಾಸ ವರ್ಗದ
ಹೊರೆಗೆ ಕಳುಹಲು ಕಂಡರಾ ಗೋವಿಂದನರಸಿಯರ
ಹರುಷದಲಿ ಕೊರಳಪ್ಪಿ ತಮ್ಮೊಳ
ಗಿರದೆ ಕುಶಲಕ್ಷೇಮ ವಾರ್ತೆಯ
ಪರಮ ಸೌಹಾರ್ದದಲಿ ಸಂತೋಷಿಸಿದರಬಲೆಯರು ೨೫

ಬಂದು ದ್ರೌಪದಿ ಕೃಷ್ಣನರಸಿಯ
ರಂದಣಂಗಳ ಹೊರೆಗೆ ಪರಮಾ
ನಂದದಲಿ ತೆಗೆದಪ್ಪಿ ಪರಮಾಹ್ಲಾದ ಭಾವದಲಿ
ಎಂದಳೆಲೆ ವೈದರ್ಭಿ ಭದ್ರೆ ಮು
ಕುಂದವಲ್ಲಭೆ ಸತ್ಯೆ ಯೆಲೆ ಕಾ
ಳಿಂದಿ ಲಕ್ಷಣೆ ಜಾಂಬವತಿಯೆಂದೆಲ್ಲರನು ನೋಡಿ ೨೬

ಹೇಳಿರೈ ತಾಯ್ಗಳಿರ ಪರಮ ಕೃ
ಪಾಳುವನು ಕೈವಿಡಿದ ಬಹಳ ವಿ
ಶಾಲ ಭಾಗ್ಯೆಯರಿರ ಸನಾಥೆಯರಿರ ಮಹತ್ತರದ
ಶೀಲನಿಧಿಗಳಿರೆಂತು ಲಕ್ಷ್ಮೀ
ಲೋಲನೀ ನಿಮ್ಮೆಲ್ಲರಿಂಗನು
ಕೂಲನಾದನು ಪರಿಣಯ ಸ್ಥಿತಿಗೆಂದಳಬುಜಾಕ್ಷಿ ೨೭

ತಾಯೆ ಕೇಳಾ ಚೈದ್ಯನೆಂಬಾ
ನಾಯಿಗೆನ್ನನು ಕೊಡಿಸಲೆಲ್ಲಾ
ರಾಯರಧಿಕೋತ್ಸಾಹದಲಿ ನೆರೆದಿರಲು ನಡೆತಂದು
ರಾಯರನು ಸದೆದೆನ್ನ ತಂದ ಗ
ದಾಯುಧನು ನಿಜಲೀಲೆಯಲಿ ನಾ
ರಾಯಣನ ಗೃಹದಾಸಿ ತಾನೆಂದಳು ವಿದರ್ಭಸುತೆ ೨೮

ಸತ್ರ ತಮ್ಮನ ವಧೆಯನೀತನಿ
ಗೆತ್ತಿದೆನು ತಾನೆನುತ ತನ್ನಯ
ಚಿತ್ತದಲಿ ಕಡು ನೊಂದು ನೆಱೆ ಬಲವದ್ವಿರೋಧದಲಿ
ಹೊತ್ತ ದುಸ್ತರದೋಷ ಮಾರ್ಜನೆ
ಗಿತ್ತನೆನ್ನನು ಮಣಿಸಹಿತ ಪಿತ
ನುತ್ತಮಂಗೆಲೆ ತಾಯೆ ಯೆಂದರು ಸತ್ಯಭಾಮೆಯರು ೨೯

ಎಂದಳಾ ಜಾಂಬವತಿ ಪಿತ ರಘು
ನಂದನನೆ ರೂಪಾಂತರದಲಿಳಿ
ತಂದುದನು ನೆಱೆ ಮಱೆದು ಕೃಷ್ಣನನಕಟ ನರನೆಂದು
ದ್ವಂದ್ವಯುದ್ಧವ ಮಾಡಿ ತಪ್ಪಿದೆ
ನೆಂದು ತನ್ನನು ಕೊಟ್ಟು ಚರಣ
ದ್ವಂದ್ವದಲಿ ಮೈಯಿಕ್ಕಿದನು ದಾತಾರನೆಂದಱಿದು ೩೦

ಅರಸಿ ಯೆನ್ನದಿರವ್ವ ಚರಣ
ಸ್ಪರುಶಕಾಮ್ಯೆಯಲಾನು ತಪವನು
ಚರಿಸಿದೆನು ಹಲಕಾಲ ಬಳಿಕೆನಗೊಲಿದು ಕರುಣದಲಿ
ಪರಮಸಖ ಪಾರ್ಥನನು ಕಳುಹಿದ
ನುರುದಯಾನಿಧಿ ವರಿಸಿದನು ಮನ
ವಱಿದು ಗೃಹಪರಿಚರ್ಯೆಗೆಂದಳು ಕಾಂತೆ ಕಾಳಿಂದಿ ೩೧

ಅಟ್ಟಿ ಕೊಲುವುವು ಕಂಡವರನತಿ
ದುಷ್ಟಮದ ವೃಷಭಂಗಳೇಳನು
ಕಟ್ಟಿದನು ಲೀಲೆಯಲಿ ಮಾಯೆಗಳರಸನೆನಗೊಲಿದು
ಕೊಟ್ಟನಂಘ್ರಿಸರೋಜಯುಗಳ ವಿ
ಶಿಷ್ಟ ಸೇವೆಯನರಸಿ ಮುನಿಮನ
ಮುಟ್ಟಲಱಿಯದು ತಾಯೆಯೆಂದಳು ನೀಲೆ ವಿನಯದಲಿ ೩೨

ತಾಯೆ ಕೇಳೌ ನೆಱೆದುದವನಿಯ
ರಾಯರೆಲ್ಲರು ವರಿಸಲೀ ನಾ
ರಾಯಣನು ಬಳಿಕೆನ್ನ ಮನದಭಿಲಾಷೆಯನು ಸಲಿಸಿ
ನಾಯಿ ಸದೆಬಡಿದೆಲ್ಲರನು ಗೋ
ಮಾಯು ಮಧ್ಯದ ಸಿಂಹದಂತೆ ಮ
ಹಾಯುವಂತನು ತಂದನೆಂದಳು ಭದ್ರೆ ವಿನಯದಲಿ ೩೩

ಬಗೆದು ಫರಬುದ್ಧಿಯಲಿ ಮಾವನ
ಮಗನು ಮಗಳಿಂಗೆನುತ ಕೊಟ್ಟನು
ನಿಗಮದೂರಂಗೆನ್ನನೆನ್ನಯ ತಂದೆ ನಲವಿನಲಿ
ಅಗಲಲಱಿಯೆನು ತಾಯೆ ತತ್ಪದ
ಯುಗಳ ಸೇವೆಯಿದಕ್ಕೆ ಜನ್ಮಾ
ಳಿಗಳೊಳೆಂದಳು ಮಿತ್ರವಿಂದೆ ಸಬಾಷ್ಪಕಂಠದಲಿ ೩೪

ಲಕ್ಷಣಾನ್ವಿತೆ ತನ್ನ ಕಥೆಯನು
ಲಕ್ಷಣದಲೋದಿದಳು ಕಮಲದ
ಳಾಕ್ಷಿಗಾ ದ್ರೌಪದಿಗೆ ಲಕ್ಷಣೆಯಂಬಳೊಲವಿನಲಿ
ಲಕ್ಷಿಸುವಡೆಲೆ ತಾಯೆ ಕೇಳಲ
ಪೇಕ್ಷಿಸುವಡಾನೆಂಬೆನವಧರಿ
ಸಕ್ಷಯನ ಕೈವಿಡಿದ ಪರಿಗಳನೆಂದಳಬುಜಾಕ್ಷಿ ೩೫

ಅಡಿಗಡಿಗೆ ನಾರದನು ಪಾಡು
ತ್ತೊಡೆಯನುನ್ನತ ರೂಪಗುಣವನು
ಬಿಡದೆ ವಿಕ್ರಮಲಕ್ಷ್ಮಿಯನು ವರ್ಣಿಸಲು ತನಗಾಯ್ತು
ಒಡಲೊಳಗೆ ಘನತಾಪ ಕೇಳುತ
ಕಡಲ ಮಗಳಿಗೆ ಸವತಿಯಹೆನೆಂ
ದೊಡಱಿಸಿತು ಮನುಮಥನ ಮಸೆದಲಗಿಂದಲುಪಟಳಕೆ ೩೬

ಅದನಱಿದು ಪಿತನಖಿಳ ಚತುರಂ
ಗದ ಧರಾಧೀಶ್ವರರನೆಲ್ಲರ
ನುದಯದಲಿ ಬರಿಸಿದನು ತನ್ನ ಮಹಾ ಸ್ವಯಂವರಕೆ
ಹದನ ಕೇಳಿದು ಬಂದರೆನ್ನಯ
ಮದುವೆಯಹೆವೆಂದಖಿಳ ಭೂಲೋ
ಕದ ಮಹಾ ಮಂಡಲಿಕ ಸಾಮಂತ ಕ್ಷಿತೀಶ್ವರರು ೩೭

ದ್ರುಪದಸುತೆ ಕೇಳಭ್ರದಲಿ ಬಹು
ನೃಪರ ಗಂಟಲ ಗಾಳವೆನೆ ನಿ
ಕ್ಷಿಪಿತವಾದುದು ಯಂತ್ರ ನಿನ್ನ ವಿವಾಹದಂದದಲಿ
ಗುಪಿತ ಯಂತ್ರವನೆಸುವ ಭರದಲಿ
ನೃಪರು ಕೊಂಡರು ಚಾಪಶರವನು
ಕೃಪೆಗೆ ಪಾತ್ರೀಭೂತರಾದರು ಲಕ್ಷ್ಯಭೇದದಲಿ ೩೮

ನೆಗಹಲಾಱದೆ ಕೆಲರು ಚಾಪವ
ತೆಗೆಯಲಾಱದೆ ಕೆಲರು ತಿರುವನು
ನಿಗುಚಲಾರದೆ ಕೆನ್ನನೆ ಕುಕ್ಕುರಿಸಿದರು ಕೆಲ ಕೆಲರು
ಗಗನತಳವನು ನೋಡಿ ಯಂತ್ರವ
ತೆಗೆದು ನಿಟ್ಟಿಸಲಱಿಯದೆಡೆಯಲಿ
ನಗಿಸಿಕೊಂಡರು ನೃಪರು ಕೆಲರೆಂದಳು ಸರೋಜಮುಖಿ ೩೯

ಕೆಲರು ಬಿದ್ದರು ಬಿಲ್ಲ ಕೊಪ್ಪಿಗೆ
ಸಲಿಸಲಾರದೆ ತಿರುವನವನಿಗೆ
ಕೆಲರು ಕಾಣುತ ಕೆಲಕೆ ಸಾರಿದರವರ ಪರಿಭವವ
ಕೆಲರು ಮಾಗಧ ಮುಖ್ಯ ನೃಪರನು
ಕುಳ್ಳಿರಿಸಿದರು ಕಾಣಿಸದೆ ಯಂತ್ರದ
ನೆಲೆಯನೀ ದುರ್ಯೋಧನಾದ್ಯರು ವೀರವಿಶ್ರುತರು ೪೦

ಹಿಂಗಿದನು ಕಲಿ ಭೀಮನಾತನ
ಭಂಗವೆನ್ನದೆನುತ್ತ ಪಾರ್ಥನ
ಭಂಗ ಚಾಪವನೇಱಿಸಿದನಮಳಾಸ್ತ್ರವನು ತುಡುಕಿ
ಅಂಗವಿಸಿ ಕಾಣಿಸಿದನಾ ಗಗ
ನಾಂಗಣದ ಯಂತ್ರವನು ತೆಗೆದೆಸ
ಲಂಗವನು ಮುಟ್ಟಿದುದು ಬೀಳದು ಯಂತ್ರವವನಿಯಲಿ ೪೧

ತೀದುದೈಸಱ ಮೇಲೆ ವಿಕ್ರಮ
ಮೇದಿನೀಶರ ವದನ ನೀರಲಿ
ನಾದ ಪವನಪ್ರಿಯನಧಿಷ್ಠಾನಾಂಗದಂತಾಯ್ತು
ಈ ದಯಾನಿಧಿ ನೆಗಹಿ ಧನುವನು
ಸೇದಿ ಶರದಲಿ ಯಂತ್ರವನು ವಿಮ
ಳೋದಕವನೀಕ್ಷಿಸಿ ವಿಭಾಡಿಸಿ ಕೆಡಹಿದನು ಧರೆಗೆ ೪೨

ಲೇಸೆನುತ ಗಗನದಲಿ ಹೂಮಳೆ
ಸೂಸಿದವು ಸುರದುಂದುಭಿಗಳಾ
ಕಾಶದಲಿ ಗರ್ಜಿಸಿದವೀ ನರದುಂದುಭಿಗಳೊಡನೆ
ಮಿಸಲಾದುದು ತನ್ನ ಮನ ಲ
ಕ್ಷ್ಮೀಶನಂಘ್ರಿಗೆ ಬಂದೆ ನಾನು ವಿ
ಳಾಸದಲಿ ಬಳಿಕಾ ಮಹಾ ವೈವಾಹಮಂಟಪಕೆ ೪೩

ಕಾಲ ಕಡಗದ ಕಳರವದ ನಿಡು
ದೋಳುಗಳ ಕಂಕಣದ ಹೊಸ ಹೊ
ನ್ನೋಲೆಗಳ ಕದಪುಗಳ ಕಂಠಾಭರಣ ಕಾಂತಿಗಳ
ಸ್ಥೂಲ ಮುಕ್ತಾಹಾರ ರುಚಿಗಳ
ಜಾಲದಲಿ ರಂಜಿಸುತ ಪೃಥ್ವೀ
ಪಾಲರನು ಮೋಹಿಸುತ ಹೊಱವಂಟೆನು ನಿಜಾಲಯವ ೪೪

ಕಂಡವರ ಮನಕಾಯ್ತು ಕಾಮನ
ಖಂಡೆಯದ ಬಲು ಘಾಯವವನೀ
ಮಂಡಲಾಧೀಶ್ವರರಿಗಾದುದು ಬಹಳ ಹೃತ್ತಾಪ
ಗಂಡುಗೆಡಿಸಿತು ಸಕಲ ಭೂಪರ
ತಂಡವನು ತಾ ಬಂದನಾ ನೃಪ
ಮಂಡಲಾಲಂಕೃತವೆನಿಪ ವೈವಾಹಮಂಟಪಕೆ ೪೫

ನಸು ನಗುತ ಮೊಗನೆಗಹಿ ಭೂಪರ ವಿ
ರಸವನು ನೋಡುತ್ತ ಮನುಮಥ
ನೆಸುಗೆಯಲಿ ಖಂಡಿಸುತ ನೋಳ್ಪರ ಮನದ ಧೀವಸುವ
ಕುಸುಮನಾಭನ ಹೊರೆಗೆ ನಸು ಕಂ
ಪಿಸುವ ಗಾತ್ರದಲೊಯ್ಯನೊಯ್ಯನೆ
ವಸುಧೆಯಲಿ ಕಾಲಿಡುತ ಬಂದೆನು ಹರುಷ ಲಜ್ಜೆಯಲಿ ೪೬

ಮೆಱೆವ ಹೊಸ ಮಾಲೆಯನು ನಿಜ
ಕರದಲೊಯ್ಯನೆ ನೆಗಹಿ ಚಲುವನ
ಕೊರಳಿಗಿಕ್ಕಿದೆನವ್ವ ಕೇಳೀಕ್ಷಿಸಿ ಕಟಾಕ್ಷದಲಿ
ಮರನವೋಲಾಯ್ತೊಡಲು ಮನ ಜ
ರ್ಝರಿತವಾದುದು ನೋಡಿ ಚರಣಾಂ
ಬುರುಹವನು ತಲೆವಾಗಿ ಮನುಮಥನಸ್ತ್ರಹತಿಗಳಲಿ ೪೭

ವ್ಯಥೆಯನಿತ್ತೆನು ನೃಪರಿಗಂದಾ
ವ್ಯಥೆಯು ಬಂದುದು ನೂಱುಮಡಿ ಮನು
ಮಥನ ಶರದಲಿ ತಾಯೆ ಪರಪೀಡೆಯಲಿ ಸುಖವಹುದೆ
ಶಿಥಿಲಗಾತ್ರೆಯನೀಕ್ಷಿಸುತ ಮುರ
ಮಥನನೆನ್ನನು ತೆಗೆದು ನಿಜ ಮಣಿ
ರಥವನೇಱಿಸಿದನು ಸರಾಗದಲಮುರರುಘೆ ಯೆನಲು ೪೮

ಅಕ್ಕಟೀ ಸತಿ ನಮ್ಮನೆಲ್ಲರ
ಮಿಕ್ಕು ಹೂಮಾಲೆಯನು ಗೋಪಂ
ಗಿಕ್ಕಿದಳೆ ಫಡ ನೂಕು ನೂಕೆನುತೇಱೆ ರಥಗಳನು
ಮುಕ್ಕುಱಿಕಿ ಕವಿತರಲು ನೃಪಕಟ
ಕಕ್ಕೆ ತೊಟ್ಟನು ಶರವನೊಬ್ಬನೆ
ಮುಕ್ಕಳಾಟಕೆಯಾಯ್ತು ಬಳಿಕವನೀಶರಂಘವಣೆ ೪೯

ಉರುಳಿದರು ಮುಂಕೊಂಡು ಕಡಿವಡೆ
ದರುಣ ಜಲದಲಿ ಕೆಲರು ಕೆಲಬರು
ಮರಳಿದರು ಮುಗ್ಗಿದರು ಕೆಲರು ಮಹಾಸ್ತ್ರವಹ್ನಿಯಲಿ
ಹುರುಳುಗೆಟ್ಟರು ಕೆಲರು ಕೆಲರನು
ಸರಿಸಿದರು ಗಮನದಲಿ ಬಂದನು
ಪುರಕೆ ಪರಿತೋಷದಲಿ ಗೆಲಿದು ಮಹಾ ನೃಪಾನ್ವಯವ ೫೦

ವಾರಣದ ನವ ಚಿತ್ರರತ್ನದ
ತೋರಣದ ಗುಡಿಗಳ ಪತಾಕೆಯ
ಭೂರಿ ಮಂಗಳವಾದ್ಯ ಗಾಯಕ ಪಾಠಕರು ಸಹಿತ
ಪೌರಜನವೈದಿದರು ಕೊಳಲು
ಪ್ಪಾರತಿಯ ತಳಿಗೆಗಳಲೊಪ್ಪುವ
ನಾರಿಯರ ರಚನೆಯಲಿ ಹೊಕ್ಕನು ರಾಜಮಂದಿರವ ೫೧

ಕಳುಹಿದನು ಪಿತನೆನಗೆ ಬಳುವಳಿ
ಗಳನು ಗೃಹ ಧನ ಕೋಶ ವಾಹನ
ಗಳನು ವರ ಶಯ್ಯಾಸನಾದಿ ಪರಿಚ್ಛದಂಗಳನು
ಲಲನೆಯರ ವಸ್ತ್ರಾವಳಿಯನಾ
ಭರಣಗಣ ಪೂರ್ಣಂಗೆ ಶಕ್ತ್ಯೆಯ
ಲುಳಿಸದಿತ್ತನು ನಿತ್ಯತೃಪ್ತಂಗೆಂದಳಬುಜಾಕ್ಷಿ ೫೨

ನಿತ್ಯಸುಖರೂಪಂಗೆ ನಾವಾ
ರೆತ್ತಣರಸಿಯರವ್ವ ಮಾಳ್ಪೆವು
ತೊತ್ತುಗೆಲಸವ ಪಡೆದು ಜನ್ಮಾಂತರದ ಸುಕೃತದಲಿ
ಚಿತ್ತವಿಸಿ ಕೇಳೆನಲು ನೋಡಿದ
ಳುತ್ತಮನ ಹದಿನಾಱು ಸಾವಿರ
ಮತ್ತಕಾಶಿನಿಯರ ನಿಜೋನ್ನತ ಪುಣ್ಯಸಂಪದವ ೫೩

ಭೂಮಿಸುತನೆಮ್ಮವನು ಭೂತ
ಸ್ತೋಮವನು ನೆಱೆ ಜಯಿಸಿ ತಂದು
ದ್ದಾಮ ವಿಕ್ರಮನಿಟ್ಟು ಸೆಱೆಮನೆಗಳಲಿ ಕನ್ನೆಯರ
ಕಾಮತಪ್ತನು ಕಾಯ್ದಿರಲು ಕರು
ಣಾಮಹೋದಧಿ ಕೊಂದು ಬಳಿಕಾ
ತಾಮಸನನೆಮಗೊಲಿದನೆಂದರು ಕೃಷ್ಣನರಸಿಯರು ೫೪

ಸ್ವರ್ಗವನು ನಾವೊಲ್ಲೆವೀ ಭೂ
ಸ್ವರ್ಗವನು ಕಾಮಿಸೆವು ಮೇಣಪ
ವರ್ಗ ಸುಖವನು ಬಯಸುವವರಾವಲ್ಲ ಭವಭವಕೆ
ನಿರ್ಗಮಿತಮಾಯನ ಪದಾಬ್ಜ ನಿ
ಸರ್ಗ ಸೇವೆಯನಲ್ಲದೊಲ್ಲೆವು
ವರ್ಗ ಮೂಱಱ ಸೌಖ್ಯಸಿದ್ಧಿಯನೆಂದರಬಲೆಯರು ೫೫

ಬಯಸುವಳು ಗಡ ಲಕ್ಷ್ಮಿ ಯೌವನ
ಬಯಸುವರು ವರಮುನಿಗಳಾರನು
ಬಯಸುವರು ಗೋಪಿಯರದಾವನ ಪಾದರೇಣುಗಳ
ಬಯಸುವರು ಪೂಜಿಪರು ತೃಣಸಂ
ಚಯ ನಿಹಿತಪದಕುಂಕುಮನನ
ವ್ಯಯನನಾವಗಲುವೆವದೆಂತೆಂದರು ಮಹಾತ್ಮೆಯರು ೫೬

ತೊಱೆದು ಸಾಮ್ರಾಜ್ಯವನು ತಪವನು
ಚರಿಸಿ ಪಡೆಯರು ನೃಪರದಾವನ
ಪರಮಪಾವನ ಪಾದಪಂಕಜ ಸನ್ನಿಧಿಯನಿದನು
ಪರಿಹರಿಸಿ ದಿಟಕೆಂತು ಜೀವಿಸ
ಲಱಿಯೆವಾವೆಲೆ ತಾಯೆಯೆನುತಂ
ಬುರುಹಮುಖಿಯರು ಹೊಗಳಿದರು ನಿತ್ಯಾತ್ಮಸಂಸ್ಥಿತಿಯ ೫೭

ಎಪ್ಪತ್ತನಾಲ್ಕನೆಯ ಸಂಧಿ ಮುಗಿಯಿತು.

# ಎಪ್ಪತ್ತೈದನೆಯ ಸಂಧಿ

ತೀರ್ಥಯಾತ್ರಾವ್ಯಾಜದಲಿ ನಿಜ
ತೀರ್ಥಭೂತರು ಮುನಿಗಳೆಂಬುದ
ತೀರ್ಥಕೀರ್ತಿ ಸಮಸ್ತಲೋಕಂಗಳಿಗೆ ಕರುಣಿಸಿದ

ಅರಸ ಕೇಳಿಂತಖಿಳ ಪೃಥ್ವೀ
ಶ್ವರರ ಸತಿಯರು ಸಹಿತ ದ್ರೌಪದಿ
ವರ ಮಹಾಸತಿ ಪರಮ ಭಕುತಿಯಲಾ ಮುರಾಂತಕನ
ಚರಿತಗುಣ ಪೀಯೂಷವನು ಹರಿ
ಯರಸಿಯರು ವರ್ಣಿಸಲು ಸೇವಿಸು
ತುರುತರಾನಂದಾಬ್ಧಿಯೊಳಗೋಲಾಡಿದಳು ತರಳೆ ೧

ಧರಣಿಪತಿಗಳು ತಮ್ಮೊಳಗೆ ಭೂ
ಸುರರವರು ತಮ್ಮೊಳಗೆ ವರ ವೈ
ಶ್ಯರುಗಳಾ ತಮ್ಮೊಳಗೆ ಶೂದ್ರಾಂತ್ಯಜರು ತಮ್ಮೊಳಗೆ
ನೆರೆದು ಸತಿಯರು ತಮ್ಮೊಳೋರೊ
ಬ್ಬರಿಗೆ ಹರಿಗುಣ ಚರಿತವನು ವಿ
ಸ್ತರಿಸುತಿರ್ದುದು ಕೂಡೆ ಯಾತ್ರಾಗತ ಜನಸ್ತೋಮ ೨

ನೋಡಿ ದಣಿಯರು ಕೃಷ್ಣನನು ಸಲೆ
ಪಾಡಿ ದಣಿಯರು ತಮ್ಮೊಳಗೆ ಮಾ
ತಾಡಿ ದಣಿಯರು ಬಹಳ ರೂಪೌದಾರ್ಯ ಗುಣಗಣವ
ಮಾಡಿ ದಣಿಯರು ಸೇವೆಯನು ನೆಱೆ
ಬೇಡಿ ದಣಿಯರು ಕೃಪೆಯ ಭಕುತಿಯ
ಬೀಡು ಧರೆಯಗಲದಲಿ ಬಿಟ್ಟಂತೆಸೆದುದಖಿಳಜನ ೩

ಬಂದುದಾ ಸಮಯದಲಿ ಮುನಿಗಳ
ವೃಂದ ಶಿಷ್ಯ ಸಮಾಜ ಸಹಿತ ಮು
ಕುಂದ ಪದದರುಶನಕೆ ಪುಣ್ಯಾರಣ್ಯ ಗಿರಿತಟದ
ಸಂದ ನೈಮಿಷ ಬದರಿಕಾಶ್ರಮ
ದಿಂದ ಪುಣ್ಯನದೀಸಮಾಶ್ರಯ
ದಿಂದ ಸುರಋಷಿ ವಿಪ್ರಋಷಿ ರಾಜರ್ಷಿ ಜನಸಹಿತ ೪

ಚ್ಯವನ ದೇವಲ ಗಾಧಿತನುಸಂ
ಭವ ಪುಲಸ್ತ್ಯ ವಸಿಷ್ಠ ಭೃಗು ಗಾ
ಲವ ಶತಾನಂದ ಸಿತ ಭಾರದ್ವಾಜ ಗೌತಮರು
ಸವನ ಮೇಧಾತಿಥಿ ಬೃಹಸ್ಪತಿ
ಕವಿಶ ಮುದ್ಗಲ ಸುತಪ ಕುಂಭೋ
ದ್ಭವ ಪರಾಶರ ಯಾಜ್ಞವಲ್ಕ್ಯರು ಬಂದರಾಕ್ಷಣಕೆ ೫

ಸನಕ ನಾರದ ನೇಕತದ್ವಿತ
ಮುನಿ ಮೃಕಂಡುತನುಜದ್ವೈಪಾ
ಯನ ಭರದ್ವಾಜಾಂಗಿರಸ ಕಾಶ್ಯಪ ತದುದ್ಭವರು
ವಿನುತ ಶಿಷ್ಯಸಹಸ್ರ ಪರಿವೃತ
ರನಲಸನ್ನಿಭ ಪರಶುರಾಮಾ
ದ್ಯನಘ ಮುನಿಕುಲ ಬಂದುದಾ ಮುರಹರನ ದರುಶನಕೆ ೬

ಬರವ ಕಾಣುತ ಸಕಲ ಪೃಥ್ವೀ
ಶ್ವರರು ಸಹಿತ ಮುರಾರಿ ರಾಮರು
ಪರಮ ಸಂತೋಷದಲಿ ಪಾಂಡುನೃಪಾಲನಂದನರು
ಹರುಷದಿಂದೆದ್ದಿದಿರುಗೊಂಡಾ
ದರಸಿ ಜಯಜಯಜಯ ನಮೋಯೆನು
ತಿರದೆ ಮೈಯಿಕ್ಕಿದರು ಸುರವರವಂದ್ಯಮುನಿಸಭೆಗೆ ೭

ಕುಳ್ಳಿರಿಸಿ ಪರಮಾಸನಂಗಳ
ಲೆಲ್ಲರನು ಸತ್ಕರಿಸಿ ಮುನಿಪದ
ಪಲ್ಲವಂಗಳ ತೊಳೆದು ತೀರ್ಥೋದಕದಲೋಲಾಡಿ
ಸಲ್ಲಲಿತ ಧೂಪಾನುಲೇಪನ
ಮಾಲ್ಯ ವಸನಾಭರಣದಲಿ ಸಿರಿ
ವಲ್ಲಭನು ಭಕುತಿಯಲಿ ಪೂಜಿಸಿದನು ಮಹತ್ತಮರ ೮

ಬನ್ನಿರೈ ಭೂಪೋತ್ತಮರು ಸಂ
ಪನ್ನತೀರ್ಥದ ತೀರ್ಥವಿದೆಲಾ
ಧನ್ಯರಾದೆವೆನುತ್ತ ಮೆಯ್ಯಿಕ್ಕಿದನು ಮುನಿಜನಕೆ
ಮನ್ನಿಸುತ ಧರ್ಮವನು ಪರಮ ಕೃ
ಪಾರ್ಣವನು ನಿಂದಿರ್ದು ಬಹಳ ಸು
ಖಾರ್ಣವದಲಿಂತೆಂದನೀಕ್ಷಿಸಿ ಸಕಲಮುನಿಜನವ ೯

ಅಹಹ ಜನ್ಮದಿ ಸುಕೃತಫಲ ಸ
ನ್ನಿಹಿತವಾಯ್ತೆನಗಿಂದಿನಲಿ ನಿ
ರ್ವಹಿಸಿತೆಮ್ಮಯ ದೇವತಾ ಪಿತೃನಿಕರಸಂತುಷ್ಟಿ
ವಿಹಿತ ಜನ್ಮಸಹಸ್ರ ಸುಕೃತದ
ಮಹಿಮೆ ತಾನಲ್ಲದಡೆ ಸದನು
ಗ್ರಹಕೆ ಸೇರುವೆವೆಂತೆನುತ ಹೊಗಳಿದನು ಮುನಿವರರ ೧೦

ಕಾಣರೀ ನಿಮ್ಮಂಘ್ರಿಯುಗಳದ
ರೇಣುಗಳನಜಭವ ಸುರೇಂದ್ರರು
ಕಾಣಿಕೆಗೆ ತನಗೆಂತು ದೊರೆಕೊಂಡುದೊ ಮಹಾದೇವ
ಕ್ಷೋಣಿಪಾವನ ಮೂರ್ತಿಗಳು ನಿ
ಶ್ರೇಣಿಗಳಲಾ ಮೋಕ್ಷಪದವಿಗೆ
ಕಾಣೆನೀ ನಿಮ್ಮಿಂದಲಧಿದೈವವನು ತಾನೆಂದ ೧೧

ಹಲವು ಜನ್ಮಾಂತರದ ಸುಕೃತದ
ಫಲದಲಲ್ಲದೆ ಮಾನವರ ಕಂ
ಗಳಿಗಗಮ್ಯವು ದಿವ್ಯದೃಷ್ಟಿಗಳಂಘ್ರಿದರ್ಶನವು
ಸುಲಭವಾರಿಗೆ ಮೇಣು ಚರಣಂ
ಗಳನು ಪೂಜಿಸುವೀ ಸಭಾಗ್ಯತೆ
ಭಲರೆ ಭಾಪುರೆ ಪುಣ್ಯವಂತರು ನಾವಲಾ ಯೆಂದ ೧೨

ಮುಟ್ಟಿ ವಂದಿಸಿ ಪಡೆದೆವಂಘ್ರಿಯ
ನೆಟ್ಟನಾರಾಧಿಸಲು ಪಡೆದೆವು
ಸೃಷ್ಟಿಯಲಿ ತನ್ನಂತೆ ಧನ್ಯರದಾರು ನಿಮ್ಮಡಿಯ
ಬಟ್ಟೆದಪ್ಪಿ ಭವಾಟವಿಯ ಕಂ
ಗೆಟ್ಟು ಹೋಗುವ ಜೀವಜಾತಕೆ
ದೃಷ್ಟಿಯಲ್ಲಾ ನಿಮ್ಮ ದರುಶನವೆಂದನಸುರಾರಿ ೧೩

ಅಲ್ಲ ಜಲಮಯವಿದುವೆ ತೀರಿತ
ವಲ್ಲ ದೇವತೆ ಮೃಚ್ಛಿಲಾದಿಕ
ವಲ್ಲ ಪುಣ್ಯಕ್ಷೇತ್ರವೀ ದೇಶಾಂತರಂಗಳಿವು
ಬಲ್ಲ ಸತುಪುರುಷರಲಿ ತೀರಿತ
ಬಲ್ಲ ಸತುಪುರುಷರಲಿ ದೇವತೆ
ಬಲ್ಲವರು ನೆಲಸಿರ್ದುದೇ ಸುಕ್ಷೇತ್ರತಮವೆಂದ ೧೪

ಜಡ ಜಲಾಧಿಕ ತೀರ್ಥ ದೇವತೆ
ಪೊಡವಿ ಪುಣ್ಯಕ್ಷೇತ್ರವೆಂಬಿವು
ಕೆಡಿಸುವವು ಹಲಕಾಲದಲಿ ಸೇವಿಸಿದರಘಕುಲವ
ಬಿಡದೆ ನಿಮ್ಮಂಘ್ರಿಗಳ ದರುಶನ
ವೊಡರಿಸಿದಡಾ ಕ್ಷಣವೆ ಪಾತಕ
ದಡವಿ ಬೇವುದು ಬೆಳೆವುದೀಪ್ಸಿತಸಿದ್ಧಿ ಜಗಕೆಂದ ೧೫

ನಿಮ್ಮಿದಿರಲೀ ಚಂದ್ರ ಸೂರ್ಯರು
ನಿಮ್ಮಿದಿರಲೀ ಪವನ ಶಿಖಿಗಳು
ನಿಮ್ಮಿದಿರಲೀ ತಾರಕಾ ಗ್ರಹ ಭೂ ಜಲಾದಿಗಳು
ದುರ್ಮತಿಗಳಿಗೆ ದೈವವಲ್ಲದೆ
ಧರ್ಮಕೋವಿದರಿಂಗೆ ದೈವವೆ
ಕರ್ಮಗತಿ ಹೇತುಗಳು ದುಃಖಕರಂಗಳಿವಱಿಂದ ೧೬

ಎಂಬೆನೇನನು ಕುದಿಪದಲಿ ತಾ
ನೆಂಬ ಬುದ್ಧಿಯ ತೋಱಿ ಕೆಡುವ ಕು
ಟುಂಬದಲಿ ತನ್ನವರು ಹಿತಕರರೆಂಬ ಬುದ್ಧಿಯನು
ಅಂಬು ಮೃಚ್ಛಿಲೆ ತೀರ್ಥ ದೇವತೆ
ಯೆಂಬ ಬುದ್ಧಿಯ ಮಾಡಿ ನಿಮ್ಮನು
ನಂಬಲಱಿಯದ ನರನೆ ಗೋಜಾತಿಯಲಿ ಖರನೆಂದ ೧೭

ಅಱಿವುದಾನೆಂದಾತ್ಮರೂಪವ
ನಱಿವುದೆನ್ನವರೆಂದು ನಿಮ್ಮವ
ನಱಿವುದೀ ನಿಮ್ಮಂಘ್ರಿಜಲವೇ ತೀರ್ಥಜಲವೆಂದು
ಅಱಿವುದೀ ನಿಮ್ಮಮಳ ಮೂರ್ತಿಯ
ನುಱುವ ದೇವತೆಯೆಂದು ಸಜ್ಜನ
ರಱಿವುದಿಹಪರಸುಖವ ಬಯಸುವರೆಂದನಸುರಾರಿ ೧೮

ನೀವಱಿಪಲಹುದಾತ್ಮ ಸಂಸ್ಥಿತಿ
ಜೀವ ಜಾತಂಗಳಿಗೆ ನಿಶ್ಚಯ
ನೀವು ಮಾಡಲು ತೀರ್ಥದೇವತೆಯಹವಸಂಖ್ಯಾತ
ನೀವು ತೋಱದಡುಂಟೆ ಗತಿ ಜೀ
ವಾವಳಿಗೆ ತೀರ್ಥಂಗಳಿಗೆ ದಿಟ
ಪಾವನತೆ ನಿಮ್ಮಂಘ್ರಿಸಂಸ್ಪರುಶನದಲಹುದೆಂದ ೧೯

ಬಂದೆವಾವೀ ನಿಮ್ಮ ಚರಣ
ದ್ವಂದ್ವದರುಶನವಹುದು ತಮಗೆಂ
ಬೊಂದು ಮನದರ್ಥಿಯಲಿ ತೀರ್ಥವ್ಯಾಜಯಾತ್ರೆಯಲಿ
ವಂದ್ಯಚರಣರಿರಿಂದಿನಲಿ ನೆಱೆ
ಮಿಂದೆವೆಲ್ಲಾ ತೀರ್ಥವನು ನಿ
ಮ್ಮೊಂದು ನಿಮಿಷದ ಸಂಗಮಾತ್ರದಲೆಂದನಸುರಾರಿ ೨೦

ಎಂದಡಚ್ಯುತ ವಾಕ್ಸುಧಾ ನಿ
ಷ್ಯಂದವನು ಬಾಯ್ದೆಱೆದು ಪುತ್ಥಳಿ
ಯಂದದಲಿ ಸೇವಿಸುತ ಕರ್ಣಪುಟಂಗಳಲಿ ನಲಿದು
ಎಂದ ನುಡಿಗಳಿಗರ್ಥವೇನಿದ
ಕೆಂದು ಮನದಲಿ ಲೋಕಸಂಗ್ರಹ
ವೆಂದು ಕಂಡರು ನುಡಿದುದಾ ಮುನಿಕರ ಕೈ ಮುಗಿದು ೨೧

ಜಯ ನಮೋ ಜಗದಾದ್ಯ ಜಗದಾ
ಶ್ರಯ ಜಗದ್ವ್ಯಾಪಕ ಜಗನ್ಮಯ
ಜಯ ಜಗತ್ಕಾರಣ ಜಗತ್ಪಾಲಕ ಜಗದ್ರೂಪ
ಜಯ ಜಗನ್ಮಂಗಳಚರಿತ್ರನೆ
ಜಯ ಜಗತ್ಪಾವನಚರಿತ್ರನೆ
ಜಯ ಯೆನುತ ಸಂಸ್ತುತಿಗಳನು ಮಾಡಿದುದು ಮುನಿನಿಕರ ೨೨

ಎಂತಱಿವೆವೆಲೆ ದೇವ ನಿನ್ನಯ
ಚಿಂತ್ಯಮಾಯಾಶಕ್ತಿಯನು ವೇ
ದಾಂತ ವಿಜ್ಞಾನಾರ್ಥರಾವೆಮ್ಮನು ಮೋಹಿಸುವ
ಎಂತು ನೀನೆಲೆಯೊಡೆಯ ಸೇವಕ
ರಂತೆ ನುಡಿವೆ ನಿಜಾಂಘ್ರಿ ಸೇವಾ
ಕ್ರಾಂತ ಜೀವಿಗಳೊಡನೆ ಹರಹರ ಚಿತ್ರವಾಯ್ತೆವಗೆ ೨೩

ಅಱಿವು ಹೊಗದಱಿವಾಗಿ ಮಱವೆಗೆ
ತೆಱಹುಗೊಟ್ಟು ಜಗತ್ಪ್ರಪಂಚವ
ಮೆಱೆದು ರಕ್ಷಿಸಿ ವಿವಿಧ ಲೀಲಾವಿಗ್ರಹಂಗಳಲಿ
ಮಱೆದು ಮೊಟ್ಟೆಯ ಕಟ್ಟಿ ಮಾಯೆಗೆ
ಹೊಱಿಸುವೀ ನಿನ್ನೀ ವಿನೋದವ
ನಱಿವರಾರೆಲೆ ಕೃಷ್ಣಯೆಂದರು ನಗುತ ಮುನಿವರರು ೨೪

ನಿನ್ನ ಹೃದಯವೆ ವೇದ ವೇದಕೆ
ವರ್ಣ ಮೂಱಱ ಕುಱುಹು ಮಗುಳಾ
ವರ್ಣ ಮೂಱಱೊಳಧಿಕತರವೀ ವಿಪ್ರಕುಲವೆನಲು
ಮನ್ನಿಸುವೆ ವಿದ್ಯಾತಪಸ್ಸಂ
ಪನ್ನರಾದುದರಿಂದ ನೀ ದಿಟ
ಮನ್ನಿಸುವಡಾರಱಿವರೆಂದರು ಮುನಿಕುಲೋತ್ತಮರು ೨೫

ಆದುದಿಂದಿನಲೆಮಗೆ ಜನ್ಮಫ
ಲೋದಯದ ಸಾಮಗ್ರಿ ಸಲೆ ಸಂ
ಪಾದಿಸಿತು ವಿದ್ಯಾತಪಸ್ಸಾಮರ್ಥ್ಯ ಫಲಸಿದ್ಧಿ
ತೀದುದೀ ಕಂಗಳಿಗೆ ರೂಪ ವಿ
ಭೇದದರುಶನದಿಚ್ಛೆ ನಿನ್ನೀ
ಪಾದಕಮಲ ವಿಳಾಸದರುಶನ ಸಾರಸೌಖ್ಯದಲಿ ೨೬

ನೆನೆನೆನೆದು ನಿಶ್ಚೈಸಲಱಿಯದ
ಮನಕೆ ನಿಶ್ಚಯವಾಯ್ತು ನಿನ್ನೀ
ಮನುಮಥನನೇಡಿಸುವ ಮಂಗಳಮೂರ್ತಿಯನು ಕಂಡು
ತನುವಿದೇತಕ್ಕೆಂಬ ವಿರತಿಗೆ
ತನಗೆ ಬಂದುದು ವಿರತಿ ನಿಜಪದ
ವನಜಸಂಗಸುಖೈಕಲಾಭ ಮಹಾನುಭಾವದಲಿ ೨೭

ಅಱಿಯರೀ ನೃಪವರರದಾರೆಂ
ದಱಿಯರಱಿತಾರಾಮರಹ ಯದು
ವರರು ನಿಮ್ಮನು ಮರ್ತ್ಯ ವೇಷಚ್ಛನ್ನ ಮಹಿಮರನು
ಅಱಿಯಲರಿದೇ ಮಾಣದೀವುದು
ಪರಮಪದವನು ಕೇಳ್ದರಿಗೆ ನೆನೆ
ವರಿಗೆ ನಿಜಪದಸಂಗ ದುರ್ಲಭವೇನು ಕಂಡರಿಗೆ ೨೮

ಅಱಸಿ ನಿಗಮಶತಂಗಳತ್ತಲು
ನಿಱುಗೆಯನು ನಿಟ್ಟಿಸದೆ ಮರಳಿದ
ವುಱುವ ಮುನಿಮನದೊಡನೆ ನಿಜಶರಣ್ಯೈಕಶರಣರಿಗೆ
ಮೆಱವೆ ಯೆತ್ತಲು ನೀನು ನಿನ್ನಯ
ನಿಱುಗೆಯನು ನಿಜಯೋಗ ಮಾಯೆಯ
ಮಱೆವಡಿದು ಕಾರುಣ್ಯನಿಧಿಯೆಂದರು ಮಹತ್ತಮರು ೨೯

ತವಗನುಗ್ರಹಿಸುವುದು ದೇವರು
ಭವ ಭವಾಂತರಗಳಲಿ ಮುನಿ ಹೃ
ದ್ಭವನಚಿಂತ್ಯವೆನಿಪ್ಪ ನಿನ್ನ ಪದಾಬ್ಜಯುಗಳದಲಿ
ಅವಿರಳಾಚಲ ಭಕುತಿಯನು ಬೇ
ಡುವೆವು ಪೊಡವಂಟೆನುತ ವರ ಮುನಿ
ನಿವಹ ಮೆಯ್ಯಿಕ್ಕಿದುದು ಮುರಹರನಂಘ್ರಿಕಮಲದಲಿ ೩೦

ಕಂದಣಿಯೆ ಕಮನೀಯಮೂರ್ತಿ ಮು
ಕುಂದನನು ನಡೆ ನೋಡಿ ಹೃದಯದ
ಮಂದಿರದಲೊಲಿದಪ್ಪಿ ತದ್ಗತಭಾವ ಭಕುತಿಯಲಿ
ಸಂದಣಿಪ ತನುಪುಳಕ ಪರಮಾ
ನಂದರಸದಲಿ ಮುಳುಗಿ ಮುನಿಕುಲ
ವೃಂದ ಕಳುಹಿಸಿ ಕೊಂಡುದಾಶ್ರಮಕಾಗಿ ನಲವಿನಲಿ ೩೧

ಕಂಡು ಮುನಿಕುಲ ಯಾತ್ರೆಯನು ಬೆಸ
ಗೊಂಡನಾ ವಸುದೇವನಾ ಮುನಿ
ಮಂಡಲದ ಮಧ್ಯದಲಿ ವಿನಯಾನ್ವಿತನು ಕೈಮುಗಿದು
ದಂಡದಂತಿರೆ ನಮಿಸಿ ಮುನಿ ಮಾ
ರ್ತಾಂಡರಿರ ಕರ್ಮಿಗಳು ಕರ್ಮವ
ಖಂಡಿಸುವ ಪರಿಯೆಂತು ಕರುಣಿಸಬೇಹುದೆನಗೆಂದ ೩೨

ಎಂದಡೆಂದನು ನಾರದನು ಮುನಿ
ವೃಂದ ಮಧ್ಯದಲಟ್ಟಹಾಸದ
ಲಿಂದಿದನು ಕೇಳಿದಿರೆ ವಸುದೇವನ ಮನೋಗತವ
ತಂದೆಗಳಿರೀ ಕೃಷ್ಣನನು ಮಗ
ನೆಂದು ಬಗೆದು ಕೃತಾಘಕರ್ಮದ
ದಂದುಗವ ಕಳೆವಂದವನು ಬೆಸಗೊಂಬ ಪರಿಯೆಂದ ೩೩

ಸುರನದೀ ತಟವಾಸಿಗಳು ನದಿ
ಹರಿವ ಹಳ್ಳವೆನುತ್ತ ತೀರ್ಥಾಂ
ತರಕೆ ಪಾಪಕ್ಷಯವನರ್ಥಿಸಿ ಪೋಪರೆಂತಂತೆ
ಪರಮ ಪಾವನಮೂರ್ತಿ ತ್ರಿಜಗ
ದ್ಗುರುವೆನಿಪ ಕೃಷ್ಣನನು ನರನೆಂ
ದೆರವುಗೊಂಬನು ನಂಬನೀ ವಸುದೇವನಿವನೆಂದ ೩೪

ಆವನನು ಭವವಖಿಳ ಜೀವ ಲ
ಯಾವನೋದ್ಭವಗಳಲಿ ಚರಿಸದ
ದಾವನಲಿ ಸಂಕ್ಲೇಶಕರ್ಮಗುಣ ಪ್ರಭಾವವಿದು
ಹಾವು ನೇಣಿನಲಾದವೋಲು ವೃ
ಥಾ ವಿಭಾಸಿತವಾಗಿರಲು ತದ್ಭಾ
ವವನು ದಿಟಕಜೀವನಾವವನೆಂದನಾ ಮುನಿಪ ೩೫

ಮುಗಿಲು ಮುಸುಕಿದುದೆಂದು ಸೂರ್ಯನ
ಬಗೆವವೊಲರ್ಭಕರು ನಿಜದಿಂದ
ಸುಗುಣವೆನಿಸುವವೆಂತು ಲೀಲಾಪಾತ್ರಗುಣಗಳಲಿ
ಜಗಕೆ ಮೈದೋಱದರೆ ಶಿವಶಿವ
ಸಗುಣ ಸೋಪಾಧಿಕವಿದೆಂದೇ
ಬಗೆವರೀ ಮೂಢಾತ್ಮರೆಂದನು ನಾರದನು ನಗುತ ೩೬

ಎಂದಡಾ ಮುನಿವರರು ಮತ್ತಿಂ
ತ್ತೆಂದರೆಲೆ ಪುಣ್ಯಾತ್ಮ ಕರ್ಮದ
ದಂದುಗವ ಕೆಡೆಯೊದೆವುಪಾಯುವನೆಂಬೆ ಯಾವುದದು
ಇಂದು ಕೇಳಿದರಖಿಳ ಭೂಪರ
ವೃಂದವಾ ಜನನಿವಹವಾ ಗೋ
ವಿಂದ ರಾಮರು ಕೇಳುತಿರೆ ವಸುದೇವನನು ನೋಡಿ ೩೭

ಇದೆಯಲಾ ಕರ್ಮವನು ಸುಡುವಡೆ
ವಿದಿತ ಸುಲಭೋಪಾಯ ಪೂಜಿಸು
ವುದು ಗೃಹಸ್ಥರು ಯಜ್ಞದಲಿ ಯಜ್ಞೇಶ್ವರನನೊಲಿದು
ಹೃದಯಸಿದ್ಧಿಯನೀವುದದಱಿಂ
ದುದಿಸುವುದು ತತ್ವಾವಬೋಧದ
ಸದಮಳಾತ್ಮಜ್ಞಾನವದಱಿಂದಹುದು ವರ ಮೋಕ್ಷ ೩೮

ಉತ್ತಮನೆ ನಿನಗಾರು ಸರಿ ಕೃತ
ಕೃತ್ಯರೀ ಭುವನದಲಿ ಧನ್ಯರು
ಮುಕ್ತಿನಾಥನೆನಿಪ್ಪ ಪರಮೇಶ್ವರನೆ ಮಗನಾಗಿ
ಮರ್ತ್ಯರೂಪದಲುದಯಿಸಿದನ
ವ್ಯಕ್ತರೂಪನು ನಿನ್ನ ನೆನೆದವ
ರುತ್ತಮರು ಕೃತಕೃತ್ಯರೆಂದುದು ಬುಧಜನಸ್ತೋಮ ೩೯

ಈತನೇ ಪರಮಾತ್ಮನೆಲ್ಲರಿ
ಗೀತನೇ ಪರದೈವವೀಶ್ವರ
ನೀತನೀತನನಱಿಸಿ ಕಾಣವು ಮುನಿಮನೋನಿಕರ
ಈತನಿಂದಲೆ ಸಕಲ ಭುವನ
ವ್ರಾತದುದುಭವ ನಾಶ ಸಂಸ್ಥಿತಿ
ಹೇತು ನೀನಿತ್ಯಾತ್ಮನೆಂದುದು ಸಕಲ ಮುನಿನಿವಕಹರ ೪೦

ಎಪ್ಪತ್ತೈದನೆಯ ಸಂಧಿ ಮುಗಿಯಿತು.

# ಎಪ್ಪತ್ತಾರನೆಯ ಸಂಧಿ

ಯಜ್ಞಮುಖದಲಿ ಸಕಲಭುವನ ಮ
ನೋಜ್ಞಮೂರುತಿ ದಣಿಸಿ ಜಗವನು
ಯಜ್ಞಮೂರುತಿ ಬಂದು ಹೊಕ್ಕನು ದ್ವಾರಕಾಪುರವ

ಅರಸ ಕೇಳಾ ಮುನಿವಚೋ ವಿ
ಸ್ತಾರವದ ಕೇಳುತ್ತ ಬುಧರನು
ವರಿಸಿದನು ಋತ್ವಿಜರನಾ ವಸುದೇವನಧ್ವರಕೆ
ತರಿಸಿದನು ಸಂಭಾರವನು ಸಂ
ವರಣೆ ಸವೆದುದು ಯಾಗಶಾಲೆಯ
ಲಿರದೆ ನೆರೆದುದು ವಿಪ್ರಕುಲ ರಾಜರ್ಷಿಕುಲಸಹಿತ ೧

ಮಕುಟ ಮಣಿಕುಂಡಲ ವಿಭೂಷಣ
ನಿಕರವೆಸೆಯಲು ಸಕಲ ರಾಜ
ಪ್ರಕರತತ್ಪತ್ನಿಯರು ದಿವ್ಯ ವರಾಂಬರಂಗಳಲಿ
ಸುಕವಿನುತನೆಡಬಲದಲೆಸೆದುದು
ಸಕಲ ಯಾದವವೀರರುರು ಮೌ
ಕ್ತಿಕ ಮಹಾಭೂಷಣ ವಸನ ವಿಭವದಲಿ ರಂಜಿಸಲು ೨

ಪರಿಮಳಿತ ಶೃಂಗಾರ ಲಕ್ಷ್ಮಿಗೆ
ಹುರುಡಿಸುವ ಯೌವನದ ಸೌಭಗ
ಸಿರಿಯ ಸರ್ವಾವಯವ ತೇಜೋರೂಪ ಲಕ್ಷ್ಮಿಗಳ
ನರರ ನಾರೀಜನದ ತಿಂಥಿಣಿ
ಹರಿಸಿದುದು ಕಣುಮನವನಧ್ವರ
ಪರಮಲಕ್ಷ್ಮಿಯ ನಾರದನು ವಿಸ್ತರಿಸಬಹುದೆಂದ ೩

ಮೊಳಗಿದವು ಪಟು ಪಟಹ ಶಂಖಾ
ವಳಿ ಮೃದಂಗ ಮಹಾನಕಂಗಳು
ತುಳುಕಿದುದು ವರ ಸೂತಮಾಗಧವಂದಿಸಂದೋಹ
ಲಲಿತತರ ಗಂಧರ್ವಕಿನ್ನರ
ಲಲನೆಯರ ಸಂಗೀತ ನೃತ್ಯದ
ಕಳಕಳದ ಘನವಿಭವವೆಸೆದುದು ಯಾಗಶಾಲೆಯಲಿ ೪

ಗೋಪಿಯರು ಗೋವಿಂದನುನ್ನತ
ರೂಪಗುಣ ವಿಕ್ರಮವ ಮಧುರಾ
ಳಾಪದಲಿ ಮನವೊಲಿದು ಪಾಡುತ್ತಿರಲದೊಂದೆಸೆಗೆ
ಆ ಪರಮ ಋತ್ವಿಜರ ವರ ಮಂ
ತ್ರೋಪಚಿತ ಪುಣ್ಯಾಹರವ ಮೇ
ಳಾಪವಡೆದಿರಲೆಸೆದುದಾ ಯಜ್ಞೋತ್ಸವಾರಂಭ ೫

ಕೈಗೊಳಿಸಿ ವಸುದೇವನನು ವರ
ಯಾಗದೀಕ್ಷೆಗೆ ಪರಮ ಮಂಗಳ
ವಾಗಲಭಿಷೇಕವನು ವಿರಚಿಸಿ ವೇದಸೂಕ್ತದಲಿ
ಸಾಗರಕೆ ಸಮವೆನಲು ಸ್ತುತಿ ಸಕ
ಲಾಗಮಜ್ಞರ ಸಭೆಯಲೆಸೆದರು
ಯೋಗಮೂರುತಿ ರಾಮಕೃಷ್ಣರು ಸಹಿತ ಋತ್ವಿಜರು ೬

ದೇವಕೀಪ್ರಮುಖೆಯರು ವರ ವಸು
ದೇವನರಸಿಯರೊಡನೆ ಸಾಕ್ಷಾತ್
ದೇವತೆಯರಂತೆಸೆಯಲಷ್ಟಾದಶ ಮಹಾತ್ಮೆಯರು
ಆವರಿಸಿದರು ಕೃಷ್ಣನರಸಿಯ
ರಾ ವಿಪುಳ ಮಖಶಾಲೆಯನು ರ
ತ್ನಾವಳಿಯ ಭೂಷಣ ವಸನ ಸೌಂದರ್ಯ ವಿಭವದಲಿ ೭

ಚರಣ ನೂಪುರರವದಲದ್ದವು
ಪರಮ ಮಂತ್ರೋಚ್ಚರಣೆಗಳು ತ
ದ್ಭರಿತ ತನುಗಂಧದಲಿ ವನಮಾಲೆಗಳ ಗಂಧದಲಿ
ವರ ಹವಿರ್ಗಂಧಂಗಳಡಗಿದ
ವರಳುಗಂಗಳ ಮೊಗದ ಕಾಂತಿಯ
ಹರಹಿನಲಿ ಹಳಹಳಿಕೆ ತಗ್ಗಿತು ಹವ್ಯವಾಹನನ ೮

ರಾಜಸೂಯಸಮಾನವಿಭವದ
ಲಾ ಜನಾರ್ದನ ರಾಮನಂಘ್ರಿಸ
ರೋಜಸಾನ್ನಿಧ್ಯದಲಿ ವಿವಿಧಾಧ್ವರ ವಿಧಾನದಲಿ
ಮೂಜಗಕ್ಕತ್ಯಧಿಕ ಕೌತುಕ
ದೋಜೆಯನು ವಿಸ್ತರಿಸಿದುದು ವಿ
ಭ್ರಾಜಮಾನ ಸದಸ್ಯ ಋತ್ವಿಕ್ಪರಿಜನಂಗಳಲಿ ೯

ಸುರರು ಸಹಭೋಜಿಗಳು ವಿಪ್ರೋ
ತ್ಕರರೊಡನೆ ನೆರೆದಖಿಳ ಪೃಥ್ವೀ
ಶ್ವರರು ಪರಿಚಾರಕರು ಬಹಳಾಧ್ವರನಿಯೋಗದಲಿ
ವರಸದಸ್ಯರು ನಾರದಾದ್ಯರು
ಸುರಸತಿಯರೇ ನರ್ತಕಿಯರ
ಪ್ಸರಿಯ ಗಾಯಕರಾದರಾ ಗಂಧರ್ವಕಿನ್ನರರು ೧೦

ಎಸಳುಗಂಗಳ ದಂತಪಂಕ್ತಿಯ
ನಸುನಗೆಯ ನೋಟವನು ಬಯಸುವ
ದೆಸೆದೆಸೆಯ ಪರಿಜನದ ಪುತ್ರಸಪೌತ್ರ ವಧುಗಳಲಿ
ಎಸೆವ ತನುಶೃಂಗಾರದಲಿ ಜನ
ವಿಸರದೊಳಗೊಪ್ಪಿರಲು ಹಲಧರ
ಕುಸುಮನಾಭರು ಸಾಷ್ಟವಿಧದೈಶ್ವರ್ಯವಿಭವದಲಿ ೧೧

ಬಳಿಕ ಋತ್ವಿಜರಿಂಗೆ ದಕ್ಷಿಣೆ
ಗಳನು ಗೋ ಭೂ ರತ್ನಭೂಷಣ
ಗಳನು ಕನ್ನಿಕೆಯರನು ಕಾಮಿತವೆನಿಪ ವಸ್ತುಗಳ
ನಲವು ಮಿಗಲೊಲಿದಿತ್ತು ವಿಪ್ರಾ
ವಳಿಗಳನು ಮನ್ನಿಸಿ ಸದಸ್ಯರ
ನಲಘುಮತಿ ಪೂಜಿಸಿದನುರುವಿಭವದಲಿ ವಸುದೇವ ೧೨

ಅರಸುಗಳಿಗುಡುಗೊರೆಯನಖಿಳಾ
ಭರಣ ವರ ಕಸ್ತೂರಿ ಕುಂಕುಮ
ಭರಿತ ವನಮಾಲಾದಿಕವನೊಲಿದಿತ್ತು ಸತುಕರಿಸಿ
ಅರಸಿಯರನಾಪ್ತರನು ಪರಿಜನ
ಪುರಜನವನುರು ರತ್ನಮಾಲ್ಯಾಂ
ಬರವಿಭೂಷಣ ವಸ್ತುವಾಹನಗಳಲಿ ಮನ್ನಿಸಿದ ೧೩

ಅವನಿಪಾಲಕದಂಬ ಪರಿಜನ
ನಿವಹಸಹಿತುಬ್ಬರದ ಪರಮೋ
ತ್ಸವದಲವಭೃಥ ಮಜ್ಜನವನಾಚರಿಸಿ ತೀರ್ಥದಲಿ
ವಿವಿಧ ವಸನ ವಿಚಿತ್ರ ಭೂಷಣ
ನಿವಹವನು ವಂದಿಗಳಿಗಿತ್ತರು
ಯುವತಿಯರು ಯದುವರರು ಸಕಲನೃಪಾಲಕರು ಸಹಿತ ೧೪

ದಣಿದುದಗಣಿತ ಸೂತ ಮಾಗಧ
ಗಣ ಮಹಾಜನ ವಿಪ್ರಜನ ಸಂ
ದಣಿಯು ಸಕಲನೃಪಾಲಕುಲ ತತ್ಸತಿಸುತಾದಿಗಳು
ದಣಿದುದಖಿಳಾಮರನಿಕರ ಚಾ
ರಣ ಸುಗಂಧರ್ವಾಪ್ಸರಸ್ತ್ರೀ
ಗಣಸಹಿತ ಘನವಸನ ಭೂಷಣ ದಾನಮಾನದಲಿ ೧೫

ಬಳಿಕ ಕಳುಹಿಸಿಕೊಂಡುದಾ ನೃಪ
ಕುಲ ವಿರಾಟ ದ್ರುಪದ ಕುರು ಕೋ
ಸಲ ವಿದರ್ಭಾವಂತಿ ಸೃಂಜಯ ಭೂಮಿಪಾಲಕರು
ನಳಿನನಾಭನ ರೂಪು ಗುಣ ಮಂ
ಗಳ ಚರಿತ್ರವನೊಲಿದು ಹೊಗಳುತ
ನಲವಿನಲಿ ತಂತಮ್ಮ ಪುರಗಳಿಗಖಿಳಜನಸಹಿತ ೧೬

ಯಮುಜ ಭೀಷ್ಮ ದ್ರೋಣ ವಿದುರರು
ಯಮಳ ಪಾರ್ಥ ವೃಕೋದರಾದ್ಯರು
ಮಮತೆ ಮಿಗೆ ಬಾಂಧವರನಾ ವಸುದೇವಮುಖ್ಯರನು
ಸುಮನದಲಿ ತೆಗೆದಪ್ಪಿ ಹರಿಪದ
ಕಮಲ ವಿರಹಾತುರರು ನಿಜ ಹೃ
ತ್ಕಮಲದಲಿ ನೆನೆವುತ್ತ ಬೀಳ್ಕೊಂಡರು ನಿಜಾಲಯಕೆ ೧೭

ನಂದಗೋಪನಶೇಷ ಗೋಪರ
ವೃಂದ ಸಹಿತ ಮಹಾರ್ಹಪೂಜೆಗ
ಳಿಂದ ಪೂಜಿತರಾಗಿ ಕೃಷ್ಣ ಪದಾಬ್ಜ ಸಂಗದಲಿ
ಒಂದಿದಂತಃಕರಣದಿಂ ಬೇ
ಱೊಂದನಱಿಯದೆ ಬಹಳ ಪರಮಾ
ನಂದದೊಳಗೋಲಾಡುತಿರ್ದರು ಮಱೆದು ಲೌಕಿಕವ ೧೮

ನಂದನನು ಕೈವಿಡಿದು ರಾಮ ಮು
ಕುಂದರರ್ಭಕತನದಲಾಡಿಸಿ
ದಂದವನು ನೆನೆವುತ್ತ ಕಂಬನಿದುಂಬಿ ವಸುದೇವ
ಒಂದು ಲೇಸಾಯ್ತಣ್ಣ ನಿಮ್ಮನು
ಕಂದಣಿಯೆ ನೆಱೆ ಕಾಣ ಪಡೆದೆವು
ಬಂದು ಕಾಬರೆ ತಮಗೆ ಸಂಗತವಾಯ್ತಲಾ ಯೆಂದ ೧೯

ಕಿಱಿದು ದಿನ ಖಳ ಕಂಸನೆಮ್ಮನು
ಸೆಱೆಯಲಿಟ್ಟನು ದೈವದಿಚ್ಛೆಯ
ನಱಿವರಾರೆಲೆ ತಂದೆ ಬಳಿಕಾ ಕಂಸನಸುಗಳಿಗೆ
ಹಱಿವ ಕಂಡನು ಕೃಷ್ಣನಾದುದು
ನೆಱೆ ವಿರೋಧ ನೃಪಾಲ ಮಾಗಧ
ನಱಗುಲಿಯ ಸಂಗ್ರಾಮ ಕಂಗೆಡಿಸಿತ್ತು ತಮಗೆಂದ ೨೦

ಬಳಿಕ ಮನೆ ಮಾಡಿದೆವು ಸಾಗರ
ದೊಳಗೆ ಸಕಲ ಧರಾಧಿಪತಿಗಳ
ಬಲು ಹಗೆಯನಿಕ್ಕಿದನು ಪೌಂಡ್ರಕ ಸಾಲ್ವ ಮಾಗಧರ
ಹಲಬರನು ಸಂಹರಿಸಿ ಕಳೆದನು
ನೆಲನ ಭಾರವನಿಂದು ಕೃಷ್ಣನ
ಬಲುಹಿನಲಿ ನೆಲೆಯಾಗಿ ನಿಂದೆವು ತಂದೆ ಕೇಳೆಂದ ೨೧

ಅಂಧರಾದೆವು ರಾಜ್ಯಸಿರಿಯೆಂ
ಬಂಧಕಾರವು ಹೊಕ್ಕು ಸಂಪ್ರತಿ
ಬಂಧುಗಳ ಸಂಭಾವಿಸುವಡಸಮರ್ಥರಾದೆವಲ
ಬಂಧಿಸಿಹವೀ ಪರಿಯ ಪೂರ್ವ ನಿ
ಬಂಧನಾರ್ಜಿತ ಕರ್ಮಗತಿಯ ನಿ
ಬಂಧನದಲೀ ಜೀವನಿಕರವನೆಂದು ಬಿಸುಸುಯ್ದ ೨೨

ಬೇಡ ತನಗೀ ರಾಜ್ಯಸಿರಿಯಿದು
ಬೇಡ ಗೃಹ ಬಲ ಕೋಶ ವೈಭವ
ಬೇಡ ಮದಹೇತುಗಳೆನಿಪ ಸಂಪದಗಳಿವು ದಿಟಕೆ
ಮಾಡಿದುಪಕಾರಕ್ಕೆ ಕಲ್ಪದ
ಕೇಡು ಪರಿಯಂತಿಲ್ಲ ಕಡೆ ಮಾ
ತಾಡೆವಾವೀ ನಿಮ್ಮನೈಶ್ವರ್ಯದಲಿ ಮದವೇಱಿ ೨೩

ಎನುತೆನುತ ವಸುದೇವನಾ ನಂ
ದನನ ತೆಗೆದಪ್ಪುತ್ತ ಕಂಠ
ಧ್ವನಿಯಲೊಱಲಿದನಶ್ರುಜಲಪರಿಲುಳಿತನೇತ್ರದಲಿ
ನೆನೆನೆನೆದು ಪುತ್ರೋಪಲಾಲಿತ
ವಿನುತ ಸೌಹಾರ್ದವನು ಬಾಂಧವ
ಜನಸಹಿತ ಸಂಪ್ರೀತಿಯಲಿ ಮನ್ನಿಸಿದನಡಿಗಡಿಗೆ ೨೪

ಇಂದು ನಾಳೆಯೆನುತ್ತ ದಿನವನು
ಹಿಂದುಗಳೆದರು ಕಳುಹಿಸದೆ ಗೋ
ವಿಂದ ರಾಮರು ಗಾಢತರ ಸಪ್ರೇಮಭಾವದಲಿ
ನಂದಗೋಪ ಯಶೋದೆಯರನಾ
ನಂದದಲಿ ಗೋಪಿಯರನಾ ಸಖಿ
ವೃಂದವನು ಸತ್ಕರಿಸಿ ಬಿಡಲಾಱದೆ ಸಮಾಶ್ರಿತರ ೨೫

ಮೂಱುಘಳಿಗೆಯವೋಲು ಕಳೆದವು
ಮೂಱುತಿಂಗಳು ಮುನಿ ನೃಪಾಲರ
ತಾಱುಥಟ್ಟನ ಜನನಿಕರದುತ್ಸವದ ಭಾರದಲಿ
ಆಱೆರಡು ಗುಣಗಳಲಿ ಮೆಱೆವಾ
ಶ್ರೀರಮಣ ರಾಮರನು ನೋಡುತ
ಸಾರತರ ಸತ್ಕೀರ್ತಿಗುಣಗಣಗಳನು ವರ್ಣಿಸುತ ೨೬

ಕಳುಹಲಾಱದೆ ರಾಮಕೃಷ್ಣರು
ಕಳವಳಿಸಿದರು ಬಂಧುಜನ ಸಹಿ
ತಲಘುವಿರಹ ವಿಷಾದಭಾರದ ತೀವ್ರತಾಪದಲಿ
ಕಳುಹಬೇಕೆಂದೆಂಬ ಮಾತ
ಕ್ಕುಳಿಸಿದುದು ನಂದಾದ್ಯರಿಗೆ ಮಂ
ಗಳಮಹಿಮನಂಘ್ರಿಯನು ಬಿಡಲಾಱದೆ ವಿಷಾದದಲಿ ೨೭

ಬಳಿಕ ಕೃಷ್ಣಾರ್ಜುನ ಯುಧಿಷ್ಠಿರ
ಹಲಧರಾದ್ಯರು ನಂದಮುಖ್ಯರು
ಪುಳಕಜಲದಲಿ ತಮ್ಮೊಳೋರೊಬ್ಬರನು ಬಿಗಿಯಪ್ಪಿ
ಅಲಘು ಮಣಿಮಯ ಭೂಷಣಾಂಬರ
ಗಳಲಿ ತುಂಬಿಸಿ ಭಂಡಿಗಳನಾ
ಕುಳಿತಹೃದಯರು ಕಳುಹಿದರು ಗೋಪರನು ಗೋಕುಲಕೆ ೨೮

ಕೊರಳೊಳಪ್ಪಿ ಮುಕುಂದನನು ತನು
ಜರಿದು ಜೋಲಿದು ಬಸವಳಿದು ಬಾ
ಯರಲಿದನು ಬೆಂಡೆದ್ದ ಕಂಗಳ ಬಿಗಿದ ಸೆರೆಗಳಲಿ
ಕರಗಿದನು ಕುಂದಿದನು ಕಂದಿದ
ನುರುತರದ ಕೃಷ್ಣಾಂಘ್ರಿ ವಿರಹಾ
ತುರನು ಬಿರಿ ಬಿರಿದಳುತ ಬಿದ್ದನು ಮೂರ್ಛೆಯಲಿ ನಂದ ೨೯

ಆರು ಗತಿ ತನಗಿನ್ನು ನಿನ್ನೀ
ಚಾರುಮೂರ್ತಿಯ ಕಾಣದೆನ್ನಸು
ಸೇರಲಱಿವುದೆ ಕೃಷ್ಣ ಕರುಣಾನಿಧಿಯೆ ತನಗೆನುತ
ಕಾರ ಮಳೆಗಱೆವಂತೆ ಕಂಬನಿ
ಧಾರೆ ಕಡಲಿಡಲಾ ಯಶೋಧರ
ಮಾರಮಣನಂಗದಲಿ ಕೆಡಹಿದಳಂಗವನು ತರಳೆ ೩೦

ಥಟ್ಟುಗೆಡೆದುದು ಗೋಪಿಯರು ಕ
ಣ್ಣಿಟ್ಟು ಕೃಷ್ಣನ ಮೇಲೆ ಮನದೊಳ
ಗಿಟ್ಟಳಿಸಿದುದು ತಾಪ ವಿರಹಕೃಶಾನುವನು ನೆನೆದು
ನಟ್ಟಡವಿಯೊಕ್ಕಂತೆ ಮಿಗೆ ಕಂ
ಗೆಟ್ಟು ಕಳವಳಿಸಿದರು ಹರಣವ
ಬಿಟ್ಟರದಱೊಳು ಕೆಲರು ಕೃಷ್ಣಪದಾಬ್ಜವನು ಬೆರಸಿ ೩೧

ಇರಲು ನೆಗಹಿದನನಿಬರನು ಕಡು
ಕರುಣಿ ತಕ್ಕೈಸುತ್ತ ನಂದಾ
ದ್ಯರನು ತಾಯನು ಸಕಲ ಗೋಪೀಜನವನೊಲವಿನಲಿ
ಪರಮತತ್ವ ವಿವೇಕಬುದ್ಧಿಯ
ಕರುಣಿಸಿದನೆಲ್ಲರಿಗೆ ವಿರಹಾ
ತುರರ ಮನದಲಿ ತೋಱಿ ನಿಜವನು ತಿಳುಹಿ ಬೀಳ್ಕೊಟ್ಟ ೩೨

ಬೀಳುಕೊಂಡರು ತನುಗಳಲಿ ಮನ
ಬೀಳುಕೊಳ್ಳದು ಕೃಷ್ಣಮೂರ್ತಿಯ
ನಾಲಿಗಳು ಮುಕ್ಕುಳಿಸಿ ಮುಳುಗಿದವಶ್ರುಜಲದೊಳಗೆ
ತೂಳಿದುದು ತನುವಿನಲಿ ಕಂಪ ಭ
ಡಾಳಿಸಿತು ವೈಕ್ಲಬ್ಯವಾ ಗೋ
ಪಾಲರಿಗೆ ಗೋವಿಂದನಂಘ್ರಿಯ ವಿರಹದುಃಖದಲಿ ೩೩

ಆರು ಬಿಡಬಹುದರಸ ಕೃಷ್ಣನ
ಚಾರು ಮೂರ್ತಿಯ ಕಂಡು ಮರ್ತ್ಯಶ
ರೀರಿಗಳು ಮುಕ್ತರಿಗೆ ಮುನಿಗಳಿಗರಿದು ಚಿಂತಿಸಲು
ಸೈರಿಸಿದುದೆಂತವರ ಮನ ದೈ
ತ್ಯಾರಿ ವಿರಹವನಕಟ ಧೈರ್ಯದ
ಸಾರವೆಂತುಟೊ ಗಮಿಸಿದರು ಗೋವಳರು ಗೋಕುಲಕೆ ೩೪

ಮನವ ಕೃಷ್ಣನಲಿರಿಸಿ ಹೋದರು
ಮನೆಗಳಿಗೆ ಡಿಂಬದಲಿ ನೇಹಾ
ಮನದೊಳಗೆ ತೋಱಿದನು ನಿಜಮೂರ್ತಿಯನು ಗೋಪರಿಗೆ
ಜನಪ ಕೇಳಲ್ಲದಡೆ ಜೀವಿಸು
ವನುವದೆಂತೋ ಶಿವಶಿವಾ ತ
ದ್ವನಿತೆಯರು ಗೋವಿಂದನಂಘ್ರಿ ಸರೋಜವಿರಹದಲಿ ೩೫

ಆಡಿಸಿದವೋಲಖಿಳ ಲೋಕವಿ
ದಾಡುವುದು ಸಚರಾಚರಂಗಳ
ನಾಡಿಸುವನೊಬ್ಬನು ಮುರಾಂತಕನಖಿಳಜೀವರನು
ಕೂಡಿಸುವನಗಲಿಸುವನಿಚ್ಛೆಯ
ಲಾಡುವಳು ಗಡ ಮಾಯೆ ಕೃಷ್ಣನ
ರೂಢಿಸಿದ ಲೀಲಾವಿನೋದವನಱಿವರಾರೆಂದ ೩೬

ಕಳುಹಿದನು ಪಾಂಡವರನಾ ಮುನಿ
ಕುಲವನಾ ಭೂಪಾಲ ವರ್ಗವ
ನೊಲಿದು ಬಾಂಧವವರ್ಗವನು ಯಾಚಕರ ವರ್ಗವನು
ಸಲಿಸಿ ಕಾಮಿತ ಸಿದ್ಧಿಗಳ ವರ
ಗಳನು ಸಲೆ ಪಂಗ್ವಂಧ ವಾಮನ
ಕುಲ ಬಧಿರ ಮೂಕಾಂತ್ಯಜರ ವರ್ಗವನು ಕರುಣದಲಿ ೩೭

ಪೊಡವಿಪತಿ ಕೇಳಂದಿನವರು
ಗ್ಗಡದ ಜನ್ಮಾಂತರದ ಸುಕೃತದ
ಕಡೆಯ ಕಂಡವರಾರು ಯಾತ್ರಾವ್ಯಾಜದಲಿ ನೆರೆದು
ಪಡೆದು ಕರ್ಮಕ್ಷಯವನಚ್ಯುತ
ನಡಿಗಳಿಗೆ ತಲೆವಾಗಿ ಸಲೆ ಬೀ
ಳ್ಕೊಡಲು ತೆರಳಿದುದಾಶ್ವ ಚಂಡಾಲಾದಿ ಜನಸಹಿತ ೩೮

ಬೀಳುಕೊಟ್ಟವರವರನಾ ಜನ
ಜಾಲವನು ಬಾಂಧವರು ತಮ ತ
ಮ್ಮಾಲಯಂಗಳಿಗೈದಲಸುರಾರಾತಿ ನಲವಿನಲಿ
ಲೀಲೆ ಮಿಗೆ ನಿಜ ಕಟಕದಲಿ ನಿ
ಸ್ಸಾಳವನು ಮೊಳಗಿಸಿದ ಯಾದವ
ಜಾಲದಲಿ ನಿಜಪುರಕೆ ಗಮನವೆನುತ್ತ ಡಂಗುರವ ೩೯

ಎತ್ತಿದುದು ಯಾದವರ ಬೀಡಿಕೆ
ಮೊತ್ತದಲಿ ಹೂಡಿದವು ದಂಡಿಗೆ
ಮತ್ತಗಜ ಹಯನಿಕರ ಹಲ್ಲಣಿಸಿದವು ರಥನಿಚಯ
ತೆತ್ತಿಸಿದ ತುರಗದಲಿ ಸುಳಿದವು
ಸುತ್ತುವಳಯದಲಂಘ್ರಿಚಾರಿಗ
ಳೊತ್ತರಿಸಿ ಬಹುವಿಧದಿ ಮೊಳಗುವ ವಾದ್ಯರಭಸದಲಿ ೪೦

ಭೇರಿಗಳ ಕಹಳೆಗಳ ಬಿರುದಿನು
ದಾರ ಪಾಠಕ ಸೂತ ಮಾಗಧ
ಚಾರಣರ ವಂದಿಗಳ ಕಳಕಳವೆಸೆಯೆ ದೆಸೆದೆಸೆಗೆ
ಸಾರ ಸುಮನೋವೃಷ್ಟಿ ನಭದಲಿ
ಭಾರವಿಸಲೈತಂದು ಹೊಕ್ಕನು
ದಾರಗುಣ ನಿತ್ಯಾತ್ಮ ಕೃಷ್ಣನು ನಲಿದು ನಿಜಪುರವ ೪೧

ಎಪ್ಪತ್ತಾರನೆಯ ಸಂಧಿ ಮುಗಿಯಿತು.

# ಎಪ್ಪತ್ತೇಳನೆಯ ಸಂಧಿ

ತ್ರಿಭುವನಾದ್ಭುತವೆನಿಪ ಕೃಷ್ಣನ
ವಿಭವವನು ನೆಱೆ ಕಂಡು ಮುನಿಕೌ
ಸ್ತುಭನು ನಾರದನೊಲಿದು ಕೈವಾರಿಸಿದನಚ್ಯುತನ

ಕರುಣಿಸೈ ಮುನಿನಾಥ ಕಲಿಮಲ
ಹರವೆನಿಪ ಕೃಷ್ಣನ ಸುಮಂಗಳ
ಚರಿತವನು ಷೋಡಶ ಸಹಸ್ರವಧೂಕದಂಬವನು
ನೆರೆದು ಪಟ್ಟದ ರಾಣಿಯರಿಗೆ
ಲ್ಲರಿಗೆ ತುಷ್ಟಿಯನೆಂತು ಹೇಳಾ
ಚರಿಸಿದನು ನರವೇಷದಿಂದೆನಲೆಂದನಾ ಮುನಿಪ ೧

ಕೇಳು ನೃಪ ಕಮಲಾಯತಾಕ್ಷನ
ಲೀಲೆಯನು ನರಲೋಕವಿಧದನು
ಕೂಲ ಚಾರಿತ್ರವನು ಬೆಸಗೊಳಲುಂಟೆಲೈ ನಿನಗೆ
ಶ್ರೀಲಲಾಮಪದಾಬ್ಜದಲಿ ನೃಪ
ಮೌಳಿರತ್ನವೆ ಕೇಳೆನುತ ಮುನಿ
ಮೌಳಿಮಂಡಿತಚರಣಗಭಿವರ್ಣಿಸಿದನರಸಂಗೆ ೨

ಒಂದು ದಿನ ನಾರದ ಮಹಾಮುನಿ
ಬಂದನಾ ದ್ವಾರಕಿಗೆ ಕೌತುಕ
ದಿಂದ ನೋಡಲು ಕೃಷ್ಣನುನ್ನತ ಮರ್ತ್ಯಲೀಲೆಗಳ
ಕೊಂದು ನರಕಾಸುರನನಲ್ಲಿಂ
ದಿಂದುಮುಖಿಯರನೆಲ್ಲರನು ಗೋ
ವಿಂದನೊಬ್ಬನೆ ಮದುವೆಯಾದಾ ವಾರ್ತೆಯನು ಕೇಳಿ ೩

ಹೂತ ವನದಲಿ ಮೊರೆವ ಭೃಂಗ
ವ್ರಾತದಲಿ ಶುಕಪಿಕನಿಕರ ಸಂ
ಗೀತದಲಿ ನೆಱೆ ಫಲಿತ ಕಲ್ಪದ್ರುಮಲತಾಳಿಯಲಿ
ಶೀತಳಾಮಳ ಸಲಿಲವಿಪುಳೋ
ದ್ಧೂತಕಮಲಾಕರಗಳಲಿ ಶೋ
ಭಾತಿಶಯದಲಿ ಮೆಱೆವ ಪುರವನು ಕಂಡನಾ ಮುನಿಪ ೪

ಉಲಿವ ಸಾರಸ ಹಂಸನಿಕರಂ
ಗಳಲಿ ರಜತಸ್ಫಟಿಕಹರ್ಮ್ಯಾ
ವಳಿಗಳಲಿ ಮರಕತ ಸುವರ್ಣ ಪರಿಚ್ಛದಂಗಳಲಿ
ಹೊಳೆವ ಗುಡಿ ತೋರಣ ಪತಾಕಾ
ವಳಿಗಳಲಿ ನಡುಹಗಲು ಬಿಸಿಲು
ಚ್ಚಳಿಸದತಿ ಶೀತಳವೆನಿಪ ಪುರಲಕುಮಿಯನು ಕಂಡ ೫

ಸಾಲರತುನದಲೆಸೆವ ಗಜ ಹಯ
ಶಾಲೆಗಳ ಸಭೆಗಳ ಮಹಾ ದೇ
ವಾಲಯದ ಸಂಕೀರ್ಣ ಮಾರ್ಗಾಂಗಣದ ವೀಥಿಗಳ
ಓಲಗಕೆ ಬಹ ರಾಯ ರಾಯರ
ಪೀಳಿಗೆಯ ಸಂದಣಿಯಲೆಸೆವಾ
ಶ್ರೀಲಲಾಮನ ಪುರವನೊಪ್ಪಿರೆ ಕಂಡನಾ ಮುನಿಪ ೬

ಸಾರಿದನು ಹದಿನಾಱುಸಾವಿರ
ಸಾರ ರತುನಾವಳಿಯ ಭವನದ
ಕೇರಿಗಳ ಮಧ್ಯದಲಿ ಮೆಱೆವ ಮುಕುಂದನಾಲಯವ
ಭೂರಿ ತನುಕಾಂತಿಯಲಿ ಕಂಗಳು
ಕೋರವಿಸಲೀಕ್ಷಿಸುವ ಪುರಜನ
ಪೌರಜನದವನತಿಗಳನು ಕೈಕೊಳುತ ಕರುಣದಲಿ ೭

ಹೊಳೆವ ಹವಳದ ಕಂಬವಥಿಕೋ
ಜ್ವಲವೆನಿಪ ವೈಡೂರ್ಯ ರತ್ನದ
ಹಲಿಗೆಗಳ ಹರಿನೀಲ ರತ್ನದಲೆಸೆವ ಗೋಡೆಗಳ
ತೊಳಪ ಹೊಂಜಗುಲಿಗಳ ಮುಕ್ತಾ
ವಳಿಯ ಮೇಲ್ಕಟ್ಟುಗಳ ರಚನೆಯ
ಲಲಘುವಿಭವದಲೆಸೆವ ಭವನವ ಕಂಡನಾ ಮುನಿಪ ೮

ಹೊನ್ನ ಕೊಡ ಕೊಪ್ಪರಿಗೆಗಳ ಸಂ
ಪನ್ನ ವಿಭವಂಗಳಲಿ ರತುನ ಸು
ವರ್ಣವೇಷ್ಟಿತ ದಂತಮಯ ಮಣಿಮಂಚನಿಕರದಲಿ
ಮನ್ನಣೆಯ ದಾಸೀಸಹಸ್ರದ
ಹೊನ್ನಕಡಗದ ಕಾಲನೂಪುರ
ದುನ್ನತಾರವಗಳಲಿ ಮೆಱೆವರಮನೆಗಳನುಕಂಡ ೯

ಸುಳಿವ ದಿವ್ಯಾಂಬರದ ಕಂಚುಕ
ಗಳಲಿ ವಿಮಳೋಷ್ಣೀಷ ಮಣಿಕುಂ
ಡಲ ವಿಭೂಷಿತ ಪುರುಷರಲಿ ಗೃಹಕರ್ಮನಿಕರದಲಿ
ಹೊಳೆಹೊಳೆವ ನವರತ್ನ ದೀಪಾ
ವಳಿಗಳಲಿ ಭವನಾಂತರದ ಕ
ತ್ತಲೆಯ ತಲೆಯೊತ್ತುಗಳಲೊಪ್ಪುವ ಭವನವನು ಕಂಡ ೧೦

ಮಘಮಘಿಪ ನವ ಧೂಪಧೂಮಾ
ಳಿಗಳನೀಕ್ಷಿಸುತಾ ಗವಾಕ್ಷದ
ಮುಗಿಲಿದೆಂದೋರಂತೆ ನೃತ್ಯವ ಮಾಳ್ಪ ನವಿಲುಗಳ
ಸೊಗಯಿಸುವ ಭವನದಲಿ ಕುಳ್ಳಿ
ರ್ದಗಧರನ ಸಿರಿಮಂಚದೊತ್ತಿನ
ಲಗಲದಬಲೆಯರೋಲಗಿಸುತಿರೆ ಕಂಡನಾ ಮುನಿಪ ೧೧

ಒಸೆದು ಕಡೆಗಂಗಳಲಿ ನೋಡುತ
ನಸುನಗುತ ಮನುಮಥನ ಶರದಲಿ
ಬಸವಳಿದು ಕೆಳದಿಯರ ಕೈಯಲಿ ಮೆಱೆವ ಚಾಮರವ
ಶಶಿವದನೆ ತಾ ಕೊಂಡು ರುಕ್ಮಿಣಿ
ರಸ ಮಿಗಿಲು ನಿಜನಾಥನನು ಸೇ
ವಿಸುತಿರಲು ಸಿರಿಮಂಚದಲಿ ಕಂಡನು ಮುರಾಂತಕನ ೧೨

ವಿಶ್ವಕರ್ಮನ ಶಿಲ್ಪವಿದ್ಯಾ
ವಿಶ್ವವಿಭವದ ಸಾರವೆನಿಸುವ
ವಿಶ್ವತೋಮುಖನರಮನೆಗೆ ನಡೆತರಲು ದೂರದಲಿ
ವಿಶ್ವವಂದ್ಯನ ಬರವ ಕಾಣುತ
ವಿಶ್ವಪತಿವಂದಿತನು ಮುದದಲಿ
ವಿಶ್ವಜನಸಹಿತಿದಿರುಗೊಂಡನು ನಾರದಪ್ರತಿಯ ೧೩

ಇಳಿದು ಸಿರಿಮಂಚವನು ಮುನಿಪದ
ಜಲರುಹಕೆ ತಲೆವಾಗಿ ಕೈಮುಗಿ
ದಲಘುಮತಿಯನು ಕುಳ್ಳಿರಿಸಿ ಪರ್ಯಂಕಮಧ್ಯದಲಿ
ತೊಳೆದು ಮುನಿಚರಣಂಗಳನು ತ
ಜ್ಜಲವನಾಂತನು ಮುಕುಟಮಧ್ಯದ
ಲೊಲವದೆಂತುಟೊ ಭಕುತರಲಿ ಭೂಪಾಲ ಕೇಳೆಂದ ೧೪

ಅತ್ತಲಾವನ ಚರಣಕಮಲವ
ಚಿತ್ತದಲಿ ಚಿಂತಿಸುವರನುದಿನ
ಕೃತ್ತಿವಾಸ ವಿರಿಂಚಿ ಮುಖ್ಯಾಮರರು ಮುನಿವರರು
ಇತ್ತಲಾ ಪರದೈವವೆಱಗಿದು
ದುತ್ತಮುನ ಪದಕಾವನಂಘ್ರಿಯ
ದಿತ್ತ ಜಲ ಜಾಹ್ನವಿಯಲಾ ಜನನಾಥ ಕೇಳೆಂದ ೧೫

ಎಂದನವನತನಾಗುತಂಘ್ರಿ
ದ್ವಂದ್ವದಲಿ ಪಾದ್ಯಾರ್ಘ್ಯಸೂನೃತ
ದಿಂದ ಮನ್ನಿಸಿ ಮುನಿಲಲಾಮನನಧಿಕ ಭಕುತಿಯಲಿ
ಇಂದು ಬಿಜಯಂಗೈದಿರಿತ್ತಲು
ವಂದ್ಯಚರಣರು ತನ್ನ ಭಾಗ್ಯದ
ಕಂದೆಱವೆ ಕೈಸಾಱಿತೆಂದನು ವಿನಯಪರನಾಗಿ ೧೬

ಎಂದಡೆಂದನು ಮುನಿಪನಚ್ಯುತ
ನಂದವನು ನಡೆ ನೋಡಿ ಪರಮಾ
ನಂದದಲಿ ಮನ ಮುಳುಗಿ ತನ್ಮಯನಾಗುತೊಲವಿನಲಿ
ತಂದೆ ಚಿತ್ರವೆ ನಿನ್ನಲೀ ಸ್ವ
ಚ್ಛಂದ ಭಕ್ತಪ್ರಣಯವೆಲೆ ಗೋ
ವಿಂದ ಭುವನಾಧಾರಮೂರ್ತಿಯಲಮಳ ಕೀರ್ತಿಯಲಿ ೧೭

ಕಂಡೆನಲ್ಲೈ ಕೃಷ್ಣ ನಿಜಪದ
ಪುಂಡರೀಕವನಿದನು ಮುನಿ ಹೃ
ತ್ಪುಂಡರೀಕಧ್ಯಾನಮಂಗಳವೆನಿಪ ಮೂರ್ತಿಯನು
ಕಂಡೆನೀ ಭವಕೂಪಪತಿತರ
ತಂಡವೀಡೇಱುವಡೆ ಮುಕುತಿಗ
ಖಂಡ ಸುದೃಢಕರಾವಲಂಬನವೆಂದನಾ ಮುನಿಪ ೧೮

ತನಗೆ ಕರುಣಿಸು ಕೃಷ್ಣ ನಿಜಪದ
ವನಜ ಭಕುತಿಯನೆನುತ ಕರುಣಾ
ವನಧಿಯನು ಬೀಳ್ಕೊಂಡು ಸುಮ್ಮನೆ ಬರುತ ಮತ್ತೊಂದು
ಮನೆಗೆ ಬಂದನು ಕಂಡನದಱೊಳು
ದನುಜಹರನನು ನೆತ್ತವನು ನಿಜ
ವನಿತೆಯೊಡನಾಡುತ್ತ ಕುಳ್ಳಿರಲುದ್ಧವನೆ ಮುಲಗಿ ೧೯

ಮಂದಿರಕೆ ಮುನಿನಾಥನೈತರ
ಲಂದು ವಿನಯದಲಿದಿರುಗೊಂಡಾ
ನಂದದಲಿ ತಲೆವಾಗಿ ಮುನ್ನಿನವೋಲು ಭಕುತಿಯಲಿ
ವಂದಿಸುತ ನಿಮ್ಮಡಿಗಳಿತ್ತಲು
ಬಂದಿರಾವಾಗಾಯ್ತು ತನ್ನಯ
ಮಂದಿರಕೆ ಪಾವನತೆಯೆನುತುಪಚರಿಸಿದನು ಮುನಿಯ ೨೦

ಎಂದಡುಸುರದೆ ಮುನಿ ತೆರಳಿ ಮ
ತ್ತೊಂದು ಗೃಹದಲಿ ಕಂಡನಾ ಗೋ
ವಿಂದನನು ಕುಳ್ಳಿರಲು ಕೊಂಡಾಡುತ್ತ ಶಿಶುಗಳನು
ಬಂದು ಗೃಹದಲಿ ಮಜ್ಜನಕೆ ಮನ
ಸಂದು ಬಿಜಯಂಗೈವುದನು ಮ
ತ್ತೊಂದು ಗೃಹದಲಿ ಹೋಮವನು ಮಾಡುತ್ತಿರಲು ಕಂಡ ೨೧

ಒಂದು ಗೃಹದಲಿ ಭೋಜನಕೆ ಮನ
ಸಂದು ಕುಳ್ಳಿರೆ ಕಂಡನಾ ಮ
ತ್ತೊಂದು ಗೃಹದಲಿ ವಿಪ್ರಕುಲತುಷ್ಟಿಯನು ಮಾಡುತಿರೆ
ಒಂದಱಲಿ ಕುಳ್ಳಿರಲು ಸಂಧ್ಯಾ
ವಂದನಕೆ ಮತ್ತೊಂದು ಗೃಹದಲಿ
ಸಂದ ಶಸ್ತ್ರಾಭ್ಯಾಸವನು ಮಾಡುತ್ತಿರಲು ಕಂಡ ೨೨

ಒಂದು ಭವನದಲಾನೆ ಕುದುರೆಗ
ಳಿಂದ ವೈಹಾಳಿಯನು ಮಾಳ್ಪುದ
ನೊಂದು ಭವನದಲಿರಲು ಸಿರಿಮಂಚದಲಿ ಸತಿಸಹಿತ
ವಂದಿಗಳ ಕೈವಾರವನು ಮ
ತ್ತೊಂದಱಲಿ ಚಿತ್ತವಿಸುತಿಹುದನು
ಮುಂದೆ ನೋಡುತ ನಗುತ ನಡೆತರುತಿರ್ದನಾ ಮುನಿಪ ೨೩

ಒಂದು ಗೃಹದಲಿ ಮಂತ್ರವನು ಗೋ
ವಿಂದನುದ್ಧವನೊಡನೆ ಮಾಳ್ಪುದ
ನೊಂದಱಲಿ ಜಲಕೇಳಿಯೊಳಗೆಸದಿರಲು ಸತಿಯರಲಿ
ಒಂದು ಗೃಹದಲಲಂಕರಿಸಿ ಗೋ
ವೃಂದವನು ವಿಪ್ರರಿಗೆ ಕೊಡುವುದ
ನೊಂದು ಗೃಹದಲಿ ಹಾಸ್ಯರಸದೊಳಗಿರಲು ಮುನಿ ಕಂಡ ೨೪

ಒಂದೆಡೆಯಲಿತಿಹಾಸ ಕಥೆಗಳ
ನಂದು ಕೇಳುತ ಪುಣ್ಯ ಚರಿತವ
ನೊಂದೆಡೆಯಲರ್ಥವನು ಕಾಮವನಮಳ ಧರ್ಮವನು
ಒಂದೆಡೆಯಲಾತ್ಮಾ ಶ್ರಿತರಿಗಾ
ನಂದವನು ಮಾಡುತ್ತಲಿರೆ ಮ
ತ್ತೊಂದೆಡೆಯಲಿರೆ ಕಂಡನಾತ್ಮಜ್ಞಾನರತನಾಗಿ ೨೫

ಒಂದೆಡೆಯಲಿರೆ ಕಂಡನಾ ನಿಜ
ನಂದನರ ಗುರುಸೇವೆಯಲಿ ಮ
ತ್ತೊಂದೆಡೆಯಲಿರೆ ಸಂಧಿಯಲಿ ವಿಗ್ರಹವನನ್ಯರಲಿ
ಒಂದೆಡೆಯಲುತ್ಸಾಹಿಸುತ ನಿಜ
ನಂದನರ ವೈವಾಹಿಕವ ಮ
ತ್ತೊಂದೆಡೆಯ ಕನ್ಯಾವಿವಾಹವ ಕಂಡನಾ ಮುನಿಪ ೨೬

ಒಂದೆಡೆಯೊಳೊಪ್ಪಿರಲು ಗಜರಥ
ದಿಂದ ವರವಧುಗಳನು ಪೂಜಿಸಿ
ಸಂದ ವಿಭವಂಗಳಲಿ ಚಮರಚ್ಛತ್ರ ನಿಕರದಲಿ
ದುಂದುಭಿಯ ಕಹಳೆಗಳ ಘನರವ
ದಿಂದ ಸಪ್ರೇಮದಲಿ ಕಳುಹುವ
ಸಂದಣಿಯ ಸಂಭ್ರಮದಲೆಸದಿರೆ ಕಂಡನಾ ಮುನಿಪ ೨೭

ಅಱಿಯದಂತೊಂದೆಡೆಯಲಂಗವ
ಮಱಿಸಿ ನಗರ ಪರೀಕ್ಷೆಯಲಿ ಸಂ
ಚರಿಸುತಿರಲೊಬ್ಬನ ಗೃಹಾಂತರಗಳಲಿ ಗುಪಿತದಲಿ
ಇರಲು ಕಂಡನಶೇಷ ಮಾಯೇ
ಶ್ವರನ ನಿರುಪಮ ಯೋಗಮಾಯಾ
ಪರಮ ವಿಭವಂಗಳನು ವಿಸ್ಮಿತನಾಗುತಿಂತೆಂದ ೨೮

ಮಱಸಲೇತಕೆ ನಿಜವನಿದನಾ
ರಱಿಯಲಱಿವರು ಕೃಷ್ಣ ನಿನ್ನಯ
ನಿಱುಗೆಯನು ನಿಗಮೌಘವೆತ್ತಲು ಯೋಗಿಮನದೊಡನೆ
ಅಱಿಸಿ ಕಾಣವು ಯೋಗಮಾಯೆಯ
ನಱಿಯಲೀ ಲೋಕಕ್ಕೆ ಹಿತವನು
ಮೆಱೆವ ನಿಜಲೀಲಾವಿಧಾನವನಱಿವರಾರೆಂದ ೨೯

ಕಂಡೆ ನಾನೆಲೆ ದೇವ ನಿನ್ನು
ದ್ದಂಡ ಮಾಯಾಶಕ್ತಿಯನು ನೆಱೆ
ಕಂಡೆನುರು ಲೀಲಾವಿಹಾರ ವಿಚಿತ್ರ ಚೇಷ್ಟಿತದ
ಕಂಡೆನೆನ್ನಯ ಜನ್ಮಫಲವನು
ಕಂಡೆನೆನ್ನಯ ಸ್ವಾಮಿ ಪದಯುಗ
ಪುಂಡರೀಕದ ಸಿರಿಯನೆನುತೆಱಗಿದನು ಹರಿಪದಕೆ ೩೦

ಎತ್ತಿದನು ನಸುನಗುತ ಮುನಿಪನ
ಮಸ್ತಕವನೇಳೆನುತ ತಕ್ಕೈ
ಸುತ್ತ ಭಕುತಿಯ ದೊರೆಯನಧಿಕ ಮನೋನುರಾಗದಲಿ
ಕರ್ತುವಾನೀ ಜಗಕೆ ಧರ್ಮದ
ಕರ್ತೃವಾನೆಲೆ ಮುನಿಪ ತತ್ವದ
ಭೋಕ್ತೃವಾನಿದಕೇಕೆ ವಿಸ್ಮಯವೆಂದನಸುರಾರಿ ೩೧

ಎಂದಡಚ್ಯುತನಂಘ್ರಿಕಮಲ
ದ್ವಂದ್ವದಲಿ ತಲೆವಾಗಿ ಪರಮಾ
ನಂದದದಲಿ ಮುಳುಗಿ ಕರುಣಿಸು ಕೃಷ್ಣ ನಿಜಪದದ
ಕುಂದದಚಲಿತ ಭಕ್ತಿಯನು ತನ
ಗಿಂದು ದೇವರ ಕೀರ್ತಿಯನು ಸುರ
ವೃಂದದಲಿ ವಿಸ್ತರಿಸುವೆನು ತಾನೆನುತ ಬೀಳ್ಕೊಂಡ ೩೨

ಹಾಯಿದನು ಗಗನಾಂಗಣಕೆ ನಾ
ರಾಯಣಾರವವೆಸೆಯೆ ವೈಷ್ಣವ
ರಾಯ ಚೂಡಾಮಣಿ ಭವಾಂಧತಮೋಹರದ್ಯುಮಣಿ
ಮಾಯೆಯರಸನ ಮಹಿಮೆಗೋರಂ
ತಾಯೆನುತ ತಲೆದೂಗುತಮರನಿ
ಕಾಯ ಕೈವಾರಿಸಲು ನಾರದಮುನಿ ನಿಜೇಚ್ಛೆಯಲಿ ೩೩

ಅರಸ ಕೇಳಿಂತಖಿಳಜಗಕ
ಚ್ಚರಿಯೆನಿಪ ನರಲೀಲೆಯನು ವಿ
ಸ್ತರಿಸುತವನಿಗೆ ಪರಮಪಾವನವೆನಿಸಿ ತನುವಿಡಿದು
ಪರಮ ಸುಖಮಯಮೂರ್ತಿ ಷೋಡಶ
ವರಸಹಸ್ರಸತೀನಿಕಾಯವ
ನೆರೆದು ದಿಟವೆಂಬಂತೆ ಮೆಱೆದನು ಲೋಕಸಂಗ್ರಹವ ೩೪

ನೋಡಿ ದಣಿಯರು ಕಂಗಳಲಿ ಮಿಗೆ
ಪಾಡಿ ದಣಿಯರು ನಾಲಗೆಗಳಲಿ
ಕೂಡಿ ದಣಿಯರು ತನುಗಳಲಿ ಮನಗಳಲಿ ಮಹಿಳೆಯರು
ಬಾಡಿ ಬಳುಕುತ ಮುನಿದು ಮಱುಕವ
ಮಾಡಿ ಮನವನು ಸಲಿಸಲಱಿಯರು
ರೂಢಿಸಿದ ಸವ್ರೀಳಹಾಸ್ಯ ನಿರೀಕ್ಷಣಂಗಳಲಿ ೩೫

ಕೂಗಿದಡೆ ಕೋಳಿಯನು ಬೈವರು
ಬೇಗ ಬೆಳಗಾಯ್ತು ಕಟೆನುತ್ತ ವಿ
ಯೋಗಚಿಂತಾತುರೆಯರಪ್ಪಿ ಮುರಾಂತಕನ ಕೊರಳ
ರಾಗ ಮಿಗೆ ಮಂದಾರಸುಮನೋ
ರಾಗಿಗಳು ತುಂಬಿಗಳು ಪಾಡಲು
ಬೇಗೆಯಲಿ ಬಿದ್ದಂತೆ ಬಸವಳಿವರು ಮೃಗಾಕ್ಷಿಯರು ೩೬

ಕೊರಳನಪ್ಪಿ ಮುಕುಂದ ಮುಖಪಂ
ಕರುಹವನು ಚುಂಬಿಸುತ ತನ್ಮುಖ
ಪರಿಮಳವನಾಘ್ರಾಣಿಸುತ ವಿದರ್ಭರಾಜಸುತೆ
ಎರಡು ಘಳಿಗೆ ವಿಯೋಗವನು ತರ
ಹರಿಸಲಱಿಯಳು ಪ್ರಿಯನ ಬಾಹ್ಯಾಂ
ತರವನುರದಲಿ ಬಿಗಿದು ಬಿಡಲಾರದೆ ಮನೋರಮನ ೩೭

ಕಾಲು ಮೊಗವನು ತೊಳೆದು ಲಕ್ಷ್ಮೀ
ಲೋಲನಾ ಸಿರಿಮಂಚದಲಿ ನಿಜ
ಬಾಲೆಯನು ನಸು ಮಲಗಿ ಕುಳ್ಳಿರ್ದಪರಯಾಮದಲಿ
ಆಲಿಸಿದನಾತ್ಮ ಸ್ವರೂಪವ
ನಾಲಿಗಳ ನಾಸಾಗ್ರದಲಿ ಸ
ಮ್ಮೇಳವಡೆಯಲು ಸಕಲಮಾಯಾಭ್ರಾಂತಿಯನು ಜಱಿದು ೩೮

ಜಲಧಿ ಫೇನ ತರಂಗ ಬುದ್ಬುದ
ಗಳಿಗೆ ನೆಲೆಯಾದಂತೆ ಭುವನಾ
ವಳಿಯ ತೋರ್ಕೆಗೆ ತಾನೆ ನೆಲೆಯೆಂದೆನಿಪ ನಿಜಪದವ
ಬಲಿದು ತನ್ನಲಿ ತಾನೆ ತಾನಾ
ಗಲಘುಸುಖ ಸಂವಿತ್ಸ್ವರೂಪದ
ಲಳಿದ ಮನದಲಿ ಮುಂಕೊಳಿಸುತಿರ್ದನು ಸಮಾಧಿಯಲಿ ೩೯

ಎರಡೊಡಲನೊಡೆಮೆಟ್ಟಿ ತೋರ್ಕೆಯ
ನೊರಸಿ ತದ್ವಾಸನೆಯ ತುರಿಯದ
ತರಹರದ ಸತ್ಯಾನುಭವದಲಿ ನಿಂದು ನಿಜದೊಳಗೆ
ಬೆರಸಿ ಬೇಱೆಂದೆನಿಸದಖಿಳೋ
ತ್ತರವೆನಿಪ್ಪಾನಂದರಸ ಸಾ
ಗರವೆ ತಾನೆಂದಱಿದು ಮಱೆದಿರ್ದನು ಸಮಾಧಿಯಲಿ ೪೦

ಅತುಮಾನಾತುಮ ಸಜಾತಿ ವಿ
ಜಾತಿ ವಿದಿತ ಸ್ವಪರಭೇದ
ಭ್ರಾಂತಿಯನು ಹೊದ್ದದ ಸದಾನಂದೈಕ ವಿಗ್ರಹದ
ಭೂತವಿಲಯ ಸ್ಥಾನಕರ್ತೃ
ತ್ವಾತಿಶಯ ಗುಣರಹಿತನಹ ನಿ
ತ್ಯಾತುಮನು ತಾನಾಗೆ ತಾನೇ ತನ್ನಲೆಸೆದಿರ್ದ ೪೧

ಎಪ್ಪತ್ತೇಳನೆಯ ಸಂಧಿ ಮುಗಿಯಿತು.

# ಎಪ್ಪತ್ತೆಂಟನೆಯ ಸಂಧಿ

ರಾಯ ಪಾಂಡವ ಪಕ್ಷಪಾತೋ
ಪಾಯ ನಾರಾಯಣನು ಯಾದವ
ರಾಯ ಬಿಜಯಂಗೈದನಿಂದ್ರಪ್ರಸ್ಥಪುರವರಕೆ

ಅರಸ ಕೇಳುದಯಾದ್ರಿ ಶಿರದಲಿ
ತರಣಿ ರಥವನು ನೂಕಲಂದಂ
ಬುರುಹನಾಭನು ಮಜ್ಜನವ ಮಾಡಿದನು ನಲವಿನಲಿ
ಪರಮ ಮಂಗಳಮೂರ್ತಿ ದಿವ್ಯಾಂ
ಬರವನುಟ್ಟನು ವಿಹಿತ ನಿಯಮೋ
ತ್ಕರಗಳನು ಮಾಡಿದನು ಸಂಧ್ಯಾವಂದನಾದಿಕವ ೧

ದೇವಋಷಿ ಪಿತೃತರ್ಪಣವನಾ
ದೇವದೇವನು ಮಾಡಿ ಧರಣೀ
ದೇವರನು ಸತ್ಕರಿಸಿ ತಿಲಭೂರತ್ನರುಕ್ಮದಲಿ
ಧಾವಣಿಯ ಸುರಭಿಗಳನಖಿಳ ಮ
ಹಾವಿಭವಸಹಿತೆಱೆದು ಧಾರೆಯ
ನಾ ವರಾಂಬುಧಿಯಿತ್ತನಧಿಕಮನೋನುರಾಗದಲಿ ೨

ನಮಿಸಿದನು ಬಲವಂದು ಗೋದ್ವಿಜ
ಸುಮನಸರನಾಚಾರ್ಯ ವೃದ್ಧ
ಕ್ಷಮರನಾ ಪಿತೃಮಾತೃ ಗುರುವರ್ಗವನು ಸತ್ಕರಿಸಿ
ವಿಮಳವಸ್ತು ಸ್ಪರ್ಶನವನಾ
ಕಮಲನಾಭನು ಮಾಡಿ ಬಳಿಕು
ತ್ತಮ ವಿಭೂಷಣ ದಿವ್ಯ ವಸ್ತ್ರಂಗಳಲಿ ರಂಜಿಸಿದ ೩

ಉಟ್ಟ ಪೀತಾಂಬರವನಳವಡೆ
ಕಟ್ಟಿ ಮಣಿಮೇಖಲೆಯದೊಪ್ಪಿರೆ
ತೊಟ್ಟ ಕುಂಡಲ ಹಾರ ಮಣಿಕೇಯೂರ ಕಂಕಣದ
ದೃಷ್ಟಿಗಳು ಕೋರವಿಸೆ ಮಕುಟನಿ
ವಿಷ್ಟಮಣಿಕಿರಣದಲಿ ದನುಜಘ
ರಟ್ಟನೆಸೆದನು ನಿಶಿತಮಣಿಭೂಷಣದ ಕಾಂತಿಯಲಿ ೪

ದಿವ್ಯಗಂಧ ವರಾನುಲೇಪನ
ದಿವ್ಯ ವನಮಾಲಾಂಬರಂಗಳು
ದಿವ್ಯರತ್ನಪ್ರಕರ ದಿವ್ಯಾಭರಣ ನಿಕರವನು
ದಿವ್ಯಮೂರುತಿ ಧರಿಸಿ ಮುನಿಜನ
ಸೇವ್ಯನೆಸೆಯಲು ನೋಡಿದನು ನಿಜ
ದಿವ್ಯಮುಖಕಮಲವನು ದರ್ಪಣದಲಿ ದಯಾವನಧಿ ೫

ಪೌರಜನ ರಾಷ್ಟ್ರಜನ ನಿಜಪರಿ
ವಾರಜನ ಯಾಚಕಜನಾಶ್ರಿತ
ವೀರ ದಾಸೀದಾಸ ಜನವೆಂಬವರನಾರೈದು
ಶ್ರೀರಮಣನವರವರಭೀಷ್ಟ ಮ
ನೋರಥಂಗಳನಿತ್ತು ಬಹಳೋ
ದಾರಮತಿ ಮನ್ನಿಸುತಲಿದ್ದನು ಸಕಲ ಬಾಂಧವರ ೬

ದಣಿಯಲಿತ್ತನು ವಿಪ್ರರಿಗೆ ಬಹು
ಗುಣವೆನಿಪ ದಿವ್ಯಾನ್ನ ಮಣಿಭೂ
ಷಣ ವಸನ ತಾಂಬೂಲ ವನಮಾಲ್ಯಾನುಲೇಪನವ .
ಗುಣವನಧಿ ನಿಜಭೃತ್ಯವನಿತಾ
ಗಣದ ಸಮನಂತರದಲಾರೋ
ಗಣೆಯ ಮಾಡಿದನೊಲಿದು ಪುತ್ರ ಸಪೌತ್ರಜನಸಹಿತ ೭

ಓಲಗಕೆ ಹೊಂದೇರನನ್ನೆಗ
ಮೇಳವಿಸಿ ಸುಗ್ರೀವಮುಖ್ಯ ಹ
ಯಾಳಿಯಲಿ ದಾರುಕನು ಕೈಮುಗಿದಿರಲು ಬಾಗಿಲಲಿ
ವೀಳೆಯವ ಚಿತ್ತೈಸಿ ಲಕ್ಷ್ಮೀ
ಲೋಲನಾತನ ಕೈವಿಡಿದು ಜನ
ಜಾಲದೊಳಗೇಱಿದನು ರಥವನು ವಿದಿತವಿಭವದಲಿ ೮

ಇಂದುನಿಕರದವೋಲು ಸತ್ತಿಗೆ
ಸಂದಣಿಸಿದವು ಮೇಲೆ ಚಾಮರ
ವೃಂದವಾಡಿದವಿದ್ದೆಸೆಗೆ ಹಂಸಾವಳಿಗಳಂತೆ
ವಂದಿಗಳ ಮಾಗಧರ ಸೂತರ
ಸಂದಣಿಯ ಕಳಕಳದಲಂದೈ
ತಂದನೋಲಗಶಾಲೆಗಸುರಾರಾತಿ ನಲವಿನಲಿ ೯

ಒಡಲಲಾದುದು ತಾಪ ವಿರಹವ
ತಡೆಯಲಾರದೆ ನಿಮಿಷಮಾತ್ರಕೆ
ಮಡದಿಯರು ಮುರಹರನಂಗಲಕುಮಿಯನು
ಬಿಡಲಱಿಯದಕ್ಷಿಗಳಲೆಂತುಟೊ
ಕಡುಚಲುವ ಮೂರುತಿಯ ಮೂರ್ಛೆಯ
ಕುಡಿದು ತೇಗಿದುದವರ ಮನ ಮನುಮಥನ ಶರಹತಿಗೆ ೧೦

ಬಂದನಸುರಾರಾತಿ ಪಾರ್ಶ್ವ
ದ್ವಂದ್ವದಲಿ ಬರಲುದ್ಧವಾದ್ಯರು
ಸಂದಣಿಸಿ ರಥದೊಳಗೆ ತೊಡೆಸೋಂಕಿನಲಿ ಕುಳ್ಳಿರ್ದು
ಇಂದುಮುಖಿಯರು ಚಮರ ಸೀಗುರಿ
ಯಿಂದ ಬರೆ ಬೆಂಭಾಗದಲಿ ಯದು
ವೃಂದಸೇವಿತ ವರ ಸುಧಾರ್ಮಿಕ ಸಭೆಗೆ ನಲವಿನಲಿ ೧೧

ಇಳಿದು ರಥವನು ರತ್ನಮಯ ಮಂ
ಗಳ ಮಹಾಸನಮಧ್ಯದಲಿ ಮುನಿ
ಕುಲಮನೋಂಬುಜಹಂಸ ಹರಿ ಕುಳ್ಳಿರ್ದನೊಲವಿನಲಿ
ಬಳಸಿ ಕುಳ್ಳಿರೆ ಯಾದವಾನ್ವಯ
ತಿಲಕರಾ ಸಭೆಯೊಳಗೆ ತಾರಾ
ವಳಿಪರೀತ ಮಹೇಂದುವಿನವೋಲೆಸೆದನಸುರಾರಿ ೧೨

ಹೊಳೆವ ವಿಮಲಚ್ಛತ್ರ ಚಮರಾ
ವಳಿಯಲಿರದೋಲಗಿಪ ಲಲನಾ
ವಳಿಯ ನಯನಾಪಾಂಗನೀರಾಜನದ ಬೆಳಗಿನಲಿ
ಇಳೆಯ ರಾಯರ ಮಕುಟಮಣಿಕುಂ
ಡಲ ಮಹಾಪ್ರಭೆಗಳಲಿ ಕರುಣಾ
ಜಲಧಿ ಮಿಗೆ ರಂಜಿಸಿದನಮರಾಧಿಪನನತಿಶಯಿಸಿ ೧೩

ಮುಂದೆ ಪೌರಾಣಿಕ ಕಥಾರಸ
ದಿಂದ ಕೆಲರಿತಿಹಾಸ ಸಂಗತಿ
ಯಿಂದ ಕೆಲರು ವಿಚಿತ್ರ ಹಾಸ್ಯವಚೋವಿಶೇಷದಲಿ
ಸಂದ ನಳ ನಹುಷಾದಿ ಚರಿತಗ
ಳಿಂದ ಕೆಲರವತಾರ ಸಂಗತಿ
ಯಿಂದ ಕೆಲರೋಲಗಿಸುತಿರ್ದರು ಕೃಷ್ಣನಂಘ್ರಿಗಳ ೧೪

ತಾಳಮದ್ದಲೆ ಶಂಖಪಟಹ ವಿ
ಶಾಲ ವೀಣಾವೇಣು ವಾದ್ಯಸ
ಮೇಳವೆಸೆಯಲು ನಾಟ್ಯವಿದ್ಯಾಚಾರ್ಯರೈತಂದು
ಓಲಗಿಸುತಿರ್ದುದು ನಟಾಂಗದ
ಲೀಲೆಯಲಿ ನರ್ತಕಿಯರುತ್ಸವ
ದೇಳಿಗೆಯು ಸಂಗೀತ ನೃತ್ಯಾಡಂಬರಂಗಳಲಿ ೧೫

ಇರಲು ಬಂದನು ದೂತನೊಬ್ಬನು
ವರಗಿರಿವ್ರಜದಿಂದ ಪಡಿಹಾ
ರರಿಗೆ ಬಿನ್ನಹಮಾಡಲವರೈತಂದರೋಲಗಕೆ
ಕರಪುಟವ ಮುಗಿದೆಱಗಿ ಚರಣಾಂ
ಬುರುಹದಲಿ ಬಿನ್ನವಿಸಲಾತನ
ಕರೆಸಿ ಕಾಣಿಸಿಕೊಂಡನಸುರಾರಾತಿ ಕರುಣದಲಿ ೧೬

ಬಂದನೋಲಗದೊಪ್ಪವನು ಸಾ
ನಂದದಲಿ ನೋಡುತ್ತ ಮಝು ಭಾ
ಪಿಂದುಧರ ಕಮಲಜ ಮಹೇಂದ್ರರಿಗುಂಟೆ ಈ ವಿಭವ
ಎಂದು ತಲೆದೂಗುತ್ತ ಚರಣ
ದ್ವಂದ್ವದಲಿ ಮೈಯಿಕ್ಕಿ ಕೆಲದಲಿ
ನಿಂದು ಹಾರುತ್ತಿರ್ದನೊಲವನು ದೂತನಚ್ಯುತನ ೧೭

ಆರು ನೀನೆಲ್ಲಿಂದ ಬಂದೆಯ
ದಾರು ಕಳುಹಿದರೇನು ಕಾರಿಯ
ವಾರ ದೂತನೆನುತ್ತ ಕರುಣಾವನಧಿ ಬೆಸಗೊಳಲು
ಚಾರು ಚರಣದ ಹೊರೆಯಲಟ್ಟಿದ
ಸಾರ ಲಿಖಿತವನಿರಿಸಿ ಚಿತ್ತವ
ಧಾರೆನುತ ಕೈಮುಗಿದು ಬಿನ್ನಹ ಮಾಡಿದನು ಹದನ ೧೮

ಬಂದೆ ನಾನು ಗಿರಿವ್ರಜಾಹ್ವಯ
ದಿಂದ ದೇವರ ಚರಣ ದರುಶನ
ಕಿಂದು ಕಳುಹಿದರಖಿಳ ಪೃಥ್ವೀಶ್ವರರು ವಿನಯದಲಿ
ಮುಂದೆ ಚಿತ್ತವಿಸುವುದು ದೇವರು
ಬಂದ ಹದನನೆನಲ್ಕೆ ಕೇಳಿದ
ನಂದು ಕರುಣಾವನಧಿ ಕಳುಹಿದ ಬಿನ್ನವತ್ತಳೆಯ ೧೯

ಎಕ್ಕತುಳದಲಿ ಕಾದಿ ಮಾಗಧ
ನಿಕ್ಕಿದನು ಸಂಕಲೆಯಲೆಮ್ಮನು
ಸಿಕ್ಕಿದೆವಲೈ ಕೃಷ್ಣ ಬಲವಂತನ ವಿರೋಧದಲಿ
ಲೆಕ್ಕವಿಲ್ಲದ ನೃಪರದಾರಿಗೆ
ಕಕ್ಕುಲಿತೆವಡಲೇನಹುದು ಮಱೆ
ವೊಕ್ಕೆವಾವೆನ್ನೊಡೆಯ ಭವದೀಯಾಂಘ್ರಿರೇಣುಗಳ ೨೦

ಹಾನಿಯೆಮಗಿಲ್ಲಿನ್ನು ನಿನ್ನಾ
ಧೀನವೆಮ್ಮೊಡಲುಗಳು ತವಗಿ
ನ್ನೇನು ತಾಯಿರೆ ಮಕ್ಕಳಿಗೆ ಮೈದೋಱು ಶುದ್ಧವಲ
ಜ್ಞಾನವಿಲ್ಲದೆ ಬಱಿದೆ ಮಾಯಾ
ಮಾನಿನಿಯ ಕಾಲ್ಗಳಿಗೆ ಕೆರಹನು
ದಾನವಾಂತಕ ಹಿಡಿದೆವಿನ್ನೆಗ ಭವಸಹಸ್ರದಲಿ ೨೧

ಅಂಜೆವೀ ಮಾಗಧನ ಮುನಿಸಿಂ
ಗಂಜೆವೀ ಸೆಱೆ ಸಂಕಲೆಯ ದೆಸೆ
ಗಂಜವಾವೆಲೆ ದೇವ ದಿಟಕೆಮ್ಮಸುವಿನಳಿವಿನಲಿ
ಅಂಜಿಸಿತಲೈ ಕಾಲಕರ್ಮದ
ಜಂಜಡದ ಬಲು ಭಾಧೆ ನತಪವಿ
ಪಂಜರನೆ ಪರಮೇಷ್ಠಿವಂದ್ಯನೆ ಭವಭವಂಗಳಲಿ ೨೨

ಆವನಂಘ್ರಿ ಸರೋಜಯುಗಳವ
ಭಾವಿಸುತ ಕಮಲಜ ಭವಾದ್ಯರು
ಜೀವಿಸುವರಾ ಸನಕ ನಾರದ ಮುಖ್ಯ ಮುನಿವರರು
ದೇವ ನೀನೀ ಧರೆಯಲಿರಲಾ
ವಾವ ಪಾಪವ ಮಾಡಿದೆವೊ ಚರ
ಣಾವಲೋಕನಭಾಗ್ಯವಿರಹಿತರಾದೆವಿಂದಿನಲಿ ೧೩

ಈವುದೆಮಗೆಲೆ ಕೃಷ್ಣ ನಿಜಚರ
ಣಾವಲೋಕನವೆಂಬ ಸುದೃಢ ಕ
ರಾವಲಂಬವನೊಲಿದು ಭವಭಯಕೂಪಪತಿತರಿಗೆ ||
ಕಾವುದೆಮ್ಮನು ಕರುಣದಲಿ ನಿಜ
ಸೇವಕರನೆನುತಿರಲು ನಭದಲಿ
ದೇವಋಷಿ ನಾರದನು ಪೈದೋಱಿದನು ಯದುಸಭೆಗೆ ೧೪

ಹೊಳ ಹೊಳೆವ ತನುಕಾಂತಿಯಲಿ ದಿಗು
ವಳಯವನು ಬೆಳಗುತ್ತ ವೈಷ್ಣವ
ಕುಲಶಿರೋಮಣಿ ಭವಭಯಾಂಧತಮೋಹರದ್ಯುಮಣಿ
ಇಳಿದನವನಿಗೆ ವಿಷ್ಣುಭಕುತಿಯೆ
ಸುಳಿವವೊಲು ತನುವಿಡಿದು ನಾಮಾ
ವಳಿಯ ಬೆಳೆಸಿರಿವಂತನಮರವ್ರಾತ ಕೈಮುಗಿಯೆ ೧೫

ಕೆಂಜೆಡೆಯ ನಾರದನ ಬರವನು
ಕಂಜನಾಭನು ಕಂಡು ನಿಜಕರ
ಕಂಜಮುಕುಳವ ಮಕುಟದಲಿ ಧರಿಸುತ್ತ ಜಯಯೆನುತ
ರಂಜಿಸುವ ಸಂದಣಿಯ ಸಭ್ಯರ
ಪುಂಜದಲಿ ನಡೆದಿದಿರುಗೊಂಡು ನಿ
ರಂಜನನು ಕುಳ್ಳಿರಿಸಿದನು ನಿಜಪೀಠದಲಿ ಮುನಿಯ ೧೬

ನೆರವಿಸಹಿತರ್ಚಿಸಿದ ಮುನಿಪದ
ಸರಸಿಜಕೆ ತಲೆವಾಗಿ ಮುಕುಳಿತ
ಕರಸರೋರುಹನಾಗಿ ಬಿನ್ನವಿಸಿದನು ಮುನಿಪತಿಗೆ
ಧರೆಯಲೇನಿತ್ತರು ಮಹಾತ್ಮರು
ದರುಶನಕೆ ಗೋಚರವೆ ನಿಮ್ಮಡಿ
ಚರಿಸುತಿಹುದು ಜಗದ್ಧಿತಾರ್ಥವಿದೆಂದನಸುರಾರಿ ೧೭

ಸುಳಿದು ಸುರ ನರ ನಾಗ ಲೋಕಂ
ಗಳನು ನೆಱೆ ಪಾವನವ ಮಾಡುವ
ಸುಲಭ ಸಜ್ಜನಮೌಳಿರತ್ನವದಾರು ನಿನ್ನಂತೆ
ನಳಿನಸಖನೀ ಬಾಹ್ಯದಲಿ ಕ
ತ್ತಲೆಯ ಕಳೆವನು ನೀನಲಾ ಹೊಱ
ಗೊಳಗೆ ಜೀವರ ತಮವ ಕೆಡಿಸುವ ಕಮಲಸಖನೆಂದ ೧೮

ಧಾರುಣಿಯಲೇನುಂಟು ಸಂಪ್ರತಿ
ಧಾರುಣೀಪತಿಗಳಲಿ ಪಾಂಡುಕು
ಮಾರರೆಂತಿಹರದನು ಕರುಣಿಸಬೇಹುದೆನಗೆನಲು
ನಾರದನು ನಸುನಗುತ ನುಡಿದನು
ದಾರಗುಣನಿಧಿ ಸಕಲ ಜೀವಾ
ಧಾರ ಚೇತನ ಸಾಕ್ಷಿ ನಿನಗಜ್ಞಾನವೇನೆಂದ ೧೯

ಯಜಿಸುವನು ಯಮುನಂದನನು ನಿಜ
ಭುಜಬಲಾಸಾದಿತ ಮಹೀಪತಿ
ವಿಜಯದಲಿ ವರ ರಾಜಸೂಯ ಮಹಾಧ್ವರಾಂಗದಲಿ
ಅಜಭವಾಮರವಂದ್ಯಚರಣಾಂ
ಬುಜನೆ ನಿನ್ನನು ಕರೆಯ ಬಂದೆನು
ಭಜಕರತ್ತಲೆ ದೇವ ಬಿಜಯಂಗೈಯಬೇಕೆಂದ ೨೦

ಕಂಡು ಸಂತಸವಡಲಿ ಪೃಥ್ವೀ
ಮಂಡಲದ ಜನವೈದೆ ನಿನ್ನಯ
ಖಂಡ ಚಿನುಮಯ ಚಾರುಮೂರ್ತಿಯ ಸೌಭಗವನಿದನು
ಖಂಡಿಸುವ ದುರ್ಧರ ಕೃತಾಂತನ
ಖಂಡೆಯದ ಗಾಯವನು ಗೆಲಲಾ
ಕಂಡುಪಾಯವಿದಖಿಳ ಲೋಕಕ್ಕೆಂದನಾ ಮುನಿಪ ೨೧

ಕೇಳಿದಡೆ ಮಱೆದೊಮ್ಮೆ ನಿನ್ನ ವಿ
ಶಾಲ ಗುಣಗಣಗಳನು ಮನದೊಳ
ಗಾಲಿಸಿದಡಿದನಾಶ್ವ ಚಂಡಾಲಾದಿ ಜೀವರಿಗೆ
ನಾಲಿಗೆಯಲುಚ್ಚರಿಸೆ ಕೆಡುವವು
ಕಾಲಕರ್ಮ ಭಯಂಗಳದನೇ
ವೇಳುವೆನು ಕಂಡವರ ಭಾಗ್ಯವನೆಂದನಾ ಮುನಿಪ ೨೨

ಕಾಣಬೇಹುದು ತನಗಖಿಳ ಗೀ
ರ್ವಾಣಮಣಿಮಕುಟಂಗಳೊಡನೀ
ಕ್ಷೋಣಿಪತಿಗಳ ಮಕುಟಮಣಿಗಳು ತಾರುಥಟ್ಟನಲಿ
ಕೇಣವಿಲ್ಲದೆ ಸುಜನ ಬಂಧು
ಶ್ರೇಣಿ ನಿನಗೆಱಗುವದನೆಲೆ ಗೀ
ರ್ವಾಣನಾಥನೆ ಕರುಣಿಸೆಂದಪ್ಪಿದನು ಮುನಿನಾಥ ೨೩

ಹರೆಯಬೇಹುದು ಕೀರ್ತಿ ಭುವನಾಂ
ತರಗಳಲಿ ದೆಸೆಗಳಲಿ ಧರೆಯಲಿ
ಪರಮ ಮಂಗಳವೆನಲಘಕ್ಷಯಕರವಿದೆಂದೆನಲು
ಚರಣರಜವನು ಸೋಂಕಿ ಜಗಕಘ
ಹರವ ಮಾಡಳೆ ಗಂಗೆ ನಿನ್ನಯ
ಪರಮ ಚರಿತವ ಕೇಳಿ ಸುಖಿಸುವೆನೆಂದನಾ ಮುನಿಪ ೨೪

ಆರಱಿವರೆಲೆ ಕೃಷ್ಣ ನಿನ್ನ ವಿ
ಹಾರ ಮಾಯಾತಂತ್ರವನು ಸಂ
ಸಾರಚಕ್ರವನಿದನು ಸೃಜಿಸುವ ಕಾವ ಖಂಡಿಸುವ
ಕಾರಣತ್ರಿತಯವನು ಹೊದ್ದದ
ಪಾರಮಹಿಮನೆ ನಿನ್ನ ಚರಣ ಸ
ರೋರುಹವೆ ಗತಿ ತನಗೆನುತ ತಲೆವಾಗಿದನು ಮುನಿಪ ೩೫

ಎನಲು ನಗುತುದ್ಧವನ ಮೊಗವನು
ದನುಜಹರನೀಕ್ಷಿಸಲು ನುಡಿದನು
ವಿನಯದಲಿ ತಲೆವಾಗಿ ಬಿನ್ನಹವೆನುತ ಕೈಮುಗಿದು
ಮುನಿಯ ವಚನವಭೀಷ್ಟವೀ ದೂ
ತನ ವಚನ ಕರ್ತವ್ಯವೆರಡಱೊ
ಳನುಪಮಾಮಳಕೀರ್ತಿ ವಿಶ್ರುತವಹುದು ನಮಗೆಂದ ೩೬

ಅವಧರಿಸು ಕರ್ತವ್ಯ ಮುಱಿಹೊ
ಕ್ಕವರ ಕಾವುದು ರಾಯರಿಗೆ ಪಾಂ
ಡವರು ಮಾಡುವ ಮುಖ ಮಹೋದಯಹೇತುವದು ನಮಗೆ
ಅವನಿಪತಿಗಳು ಸಹಿತ ದಿಕ್ಚ
ಕ್ರವನು ಜಯಿಸದೆ ರಾಜಸೂಯದ
ಸವನವದು ಸಂಪನ್ನವಾಗದು ಕೃಷ್ಣ ಕೇಳೆಂದ ೩೭

ಅದಱೊಳಗೆ ಮಾಗಧನ ಜೀವವ
ಸದೆದು ನೃಪರನು ಬಿಡಿಸಿ ಬಹುದಿಂ
ತಿದುವೆ ಮತವೆಮಗುಭಯತೋಭದ್ರಾವಹವು ನಮಗೆ
ವಿದಿತವದಱಿಂದಹುದು ಮುನಿಯ
ಭ್ಯುದಯವೆಮ್ಮಿಷ್ಟಾರ್ಥ ನಿನ್ನಯ
ಸದಮಳಾಮಳಕೀರ್ತಿ ಸಲೆ ಸಂಪೂರ್ಣವಹುದೆಂದ ೩೮

ದ್ರೋಹಿಯನು ಗೆಲಲರಿದು ಬಹಳ
ಕ್ಷೋಹಿಣಿಯ ಬಲಗಳಲಿ ಭೀಮನ
ಬಾಹುಬಲ ಸಮವಹುದು ನಾಗಾಯುತ ಬಲಾನ್ವಿತಗೆ
ರೂಹುಗರೆದಿಳೆಯಮರರಂದದ
ಲಾಹವವ ಬೇಡುವುದು ಕೊಲುವುದು
ಬೇಹ ಮುಖವನು ಬೆಳಸಬಹುದಲ್ಲಿಂದ ಮೇಲೆಂದ ೩೯

ಕರ್ತುವಾಗಲಿ ನೃಪನೆ ನೀನು ನಿ
ಮಿತ್ತವಹುದೆಲೆ ಕೃಷ್ಣ ತ್ರಿಜಗಕೆ
ಕರ್ತುವೆನಿಸುವೆ ಕಮಲಜಾದ್ಯರದಾರ ನೇಮದಲಿ
ವರ್ತಿಸುವರೀ ಲೋಕಪಾಲರು
ಮರ್ತ್ಯಪತಿಗಳು ಸಕಲಶಕ್ತಿ ನಿ
ಮಿತ್ತವಲ್ಲೈ ಕೃಷ್ಣ ನಿಮ್ಮಡಿ ಜೀವಚಯಕೆಂದ ೪೦

ಅರಸಿಯರು ನಿಜ ನಗರರಾಷ್ಟ್ರಾಂ
ತರಗಳಲಿ ದೇವಿಯರು ಭುವನಾಂ
ತರಗಳಲಿ ಪಾಡುತ್ತಲಿರಲೀ ಗೌರಿದೇವಿಯರು
ಧರಣಿಯಲಿ ಗಜಪತಿಯ ಮೋಕ್ಷವ
ನೊರೆವಮೋಲೀ ನೃಪರ ಮೋಕ್ಷವ
ನೊರೆಯಲೈ ಗೋಪಿಯರು ಮುನಿಗಳು ನಾವುಸಹಿತೆಂದ ೪೧

ಹಲವು ಮಾತೇಕಾ ಮಗಧ ನೃಪ.
ಕುಲಕುಠಾರನ ವಧೆ ಜಗನ್ಮಂ
ಗಳ ಮಹಾಕ್ರತುಹೇತುವಹ ಸತ್ಕರ್ಮವಿದು ಕಡೆಗೆ
ಬೆಳಸುವುದು ಕಾಲಾಂತರಕೆ ನಿ
ನ್ನೊಲವನದುವೇ ಭೂಮಿಭಾರವ
ಕಳೆಯಲಾದಿ ನಿಮಿತ್ತವಹುದೆಲೆ ತಂದೆ ಕೇಳೆಂದ ೪೨

ಎನಲು ಭಾಪೆನುತೊಪ್ಪಿದನು ಮುನಿ
ಜನವದೇ ಲೇಸೆಂದುದುದ್ಧವ
ನನುಪಮೋಕ್ತಿಗೆ ಮೆಚ್ಚಿದನು ಮುರವೈರಿ ಮನ್ನಿಸುತ
ಮುನಕೆ ಬಂದುದು ಸಕಲ ಯಾದವ
ಜನಪರಿಗೆ ಸನ್ನದ್ಧವಾಗಲಿ
ವಿನುತ ಯಾದವಸೈನ್ಯಸಾಗರವೆಂದನಸುರಾರಿ ೪೩

ಅಂಜದಿರಹೇಳೆಲ್ಲರಿಗೆ ರಿಪು
ಭಂಜನವ ಮಾಡುವೆನು ನೀನಿದ
ಕೆಂಜಲಿಸದಿರು ಮನದೊಳಗೆ ಸಂಶಯವನೆಂದೆನುತ
ಕಂಜನಾಭನು ನಗುತ ನಿಜಕರ
ಕಂಜವನು ನೆಗಹಿದನು ನತಪವಿ
ಪಂಜರನು ಕಳುಹಿದನು ನೃಪದೂತನನು ಪತಿಕರಿಸಿ ೪೪

ಹೂಡಿದವು ರಥನಿಚಯ ಗಜಘಟೆ
ಜೋಡಿಸಿತು ಹಯನಿಕರ ಹಲ್ಲಣ
ಜೋಡು ಹಕ್ಕರಿಕೆಗಳಲೆಸೆದವು ಪಾಯದಳಸಹಿತ
ಕೂಡೆ ಕಟ್ಟಿತು ಕೈದುವನು ತೂ
ಗಾಡಿದವು ಚವುರಿಗಳ ನಾಯಕ
ವಾಡಿಗಳು ಹೊಱವಂಟುದಸುರಾಂತಕನ ನೇಮದಲಿ ೪೫

ದನುಜಹರನೇಱಿದನು ರಥವನು
ಮುನಿಸಹಿತ ಹೊಱವಂಟನೊಪ್ಪಿರೆ
ವನಿತೆಯರ ದಂಡಿಗೆಗಳೊಡನೈತರಲು ಸಂದಣಿಸಿ
ಕನಕಮಯ ಶಿಬಿಕೆಗಳಲರ್ಭಕ
ರನುಸರಿಸೆ ಪ್ರದ್ಯುಮ್ನ ಸಾಂಬಾ
ದ್ಯನಘ ವೀರನಿಕಾಯ ಬರೆ ಕರಿತುರಗ ನಿಕರದಲಿ ೪೬

ಕಿತ್ತುಕೈದುಗಳಿಂದ ಸುಭಟರು
ಮುತ್ತಿ ಮುಸುಕಿತು ರಾಣಿವಾಸದ
ಮೊತ್ತದಂದಣಗಳನು ಕಂಚುಕಿನಿಕರ ಕೈನೆಗಹಿ
ಸುತ್ತಿ ಸುಳಿದುದು ಸೂತಮಾಗಧ
ರೊತ್ತರಿಸಿ ಕೈವಾರಿಸಲು ದಿಗು
ಭಿತ್ತಿಗಳನಾಕ್ರಮಿಸಿ ನಡೆದುದು ಕೂಡೆ ಯದುಸೇನೆ ೪೭

ಮೊಳಗಿದವು ನಿಸ್ಸಾಳಭೇರಿಗ
ಳಳತೆಯಿಲ್ಲದ ಶಂಖ ಕಹಳಾ
ವಳಿ ಮೃದಂಗ ಮಹಾನಕಂಗಳು ಕೂಡೆ ಧರೆ ಬಿರಿಯೆ
ಚಳಪತಾಕ ಚ್ಛತ್ರ ಚಮರಾ
ವಳಿಯಲಂಬರವಿಂಬುಗೆಡಲು
ಜ್ವಲ ಮಹಾವಿಭವದಲಿ ದನುಜಾರಾತಿ ಹೊಱವಂಟ ೪೮

ನೂಕಿದವು ಬಂಡಿಗಳು ಬಹಳಾ
ನೀಕಪಟ ಕುಟಿಕಂಬಳಂಗಳು
ಜೋಕೆ ಮಿಗೆ ದಿವ್ಯಾಂಬರಾಭರಣಂಗಳಲಿ ಜಡಿಯೆ
ಲೋಕಮೋಹನ ಮದನಮಂತ್ರಾ
ನೀಕ ದೇವತೆಯರ ಮೊಲಬಲಾ
ನೀಕವಿದ್ದುದು ಪೌರಪರಿಜನದೊಡನೆ ವಿಭವದಲಿ ೪೯

ಹೊಳೆವ ಹೊಸ ಹೊಂಬಿಸಿಲ ದೀಪ್ತಿಗೆ
ಥಳಥಳಿಪ ಕೈದುಗಳ ಹೊನ್ನಲಿ
ಬಳಿದ ಹರಿಗೆಗಳೊಡ್ಡುಗಳ ಮಣಿಮುಕುಟ ಕಾಂತಿಗಳ
ಕಳಕಳದ ಬಹು ಭದ್ರವಾದ್ಯದ
ಬಳಗದಲಿ ಕಲ್ಪಾಂತಕಾಲದ
ಜಲಧಿ ಮಸಗುವವೋಲು ಮೆಱೆದುದು ಬಹಳ ಯದುಸೇನೆ ೫೦

ಮೌಳಿಯನು ತೂಗುತ್ತ ಮುನಿ ಹೀ
ಹಾಳಿಸುತ ಹರಿಯಾಗಮನವನು
ಹೇಳುವೆನು ಪಾಂಡವರಿಗಿದ ನಾನೆನುತ ಹರುಷದಲಿ
ಬೀಳುಕೊಂಡನು ಕೃಷ್ಣನಂಘ್ರಿಯ
ನಾಲಿಸುತ ಹೃದಯದಲಿ ನಿರ್ಜರ
ಜಾಲ ಕೈವಾರಿಸಲು ಗಗನೇಚರರ ಮಾರ್ಗದಲಿ ೫೧

ಇತ್ತಲಸುರಾರಾತಿ ಕಳೆದಾ
ನರ್ತಸೌರಾನೂರು ದೇಶವ
ನುತ್ತರಿಸಿ ವಿಷಸನವನುನ್ನತಗಿರಿನದೀವನವ
ಮತ್ತೆ ವರ ಪಾಂಚಾಲ ಮಾತ್ಸ್ಯವ
ನತ್ತಲೇ ಹಿಂದಿರಿಸಿ ಬಂದನು
ತತ್ವನಿಧಿ ನಿತ್ಯಾತ್ಮನಿಂದ್ರಪ್ರಸ್ಥಪುರವರಕೆ ೫೨

ಎಪ್ಪತ್ತೆಂಟನೆಯ ಸಂಧಿ ಮುಗಿಯಿತು.

## ಎಪ್ಪತ್ತೊಂಭತ್ತನೆಯ ಸಂಧಿ

ರಾಜಸೂಯಮುಖಾಗ್ರಪೂಜಾ
ರಾಜಿತಾಂಘ್ರಿಸರೋಜನೆಸೆದನು
ರಾಜರಾಜಾಧಿಕ ಮಹಾವಿಭವದಲಿ ಮುರವೈರಿ

ತಂದೆ ಕೇಳೆಲೆ ಭೂಪ ನಿಮ್ಮವ
ರೊಂದು ಭಾಗ್ಯದ ಬೆಳಸಿರಿಯನೇ
ನೆಂದು ಬಣ್ಣಿಸಬಹುದು ಬಹಳ ಮನೋನುರಾಗದಲಿ
ಬಂದನಸುರಾರಾತಿ ದೂತರ
ವೃಂದ ಸುಳಿದುದು ಮುಂದೆ ಕುಂತೀ
ನಂದನರ ನಗರಿಯನು ಕೃಷ್ಣಾಗಮನವಾರ್ತೆಯಲಿ ೧

ಕೇಳಿದರು ಪಾಂಡವರು ಲಕ್ಷ್ಮೀ
ಲೋಲನಾಗಮನವನು ಮುಳುಗಿದ
ವಾಲಿಗಳು ತದ್ದರುಶನೋತ್ಸವದಧಿಕ ಹರುಷದಲಿ
ಓಲಗದ ಜನವೈದೆ ದೂತರ
ಮೇಲೆ ಬಿಸುಟರು ವಸನ ಭೂಷಣ
ಜಾಲವನು ನೃಪವಿಹಿತ ಸತ್ಕೃತಿ ಹೇಳಲರಿದಾಯ್ತು ೨

ಅಱಿಸಿ ಕಾಣರು ಮುನಿಗಳಾವನ
ಚರಣನಖವನು ನಿರ್ಮಳಾಂತಃ
ಕರಣದಲಿ ನಿಯಮೋತ್ಕರಾನ್ವಿತ ವರಸಮಾಧಿಯಲಿ
ಅಱಿಸಿ ಬಂದನೆ ತಮ್ಮನಕಟಾ
ಕರುಣೆಗಳ ದಾತಾರನೆನುತಾ
ಧರಣಿಪತಿ ಪರಿಜನಸಹಿತ ಹೊಱರವಂಟನರಮನೆಯ ೩

ಮೊಳಗಿದವು ಭೇರಿಗಳು ಕನ್ನಡಿ
ಕಳಶ ರತುನದ ಸೊಡರ ತಳಿಗೆಯ
ಲಲನೆಯರ ಕರಿತುರಗ ರಥಪತ್ತಿಗಳ ಸಂಕುಲದ
ಉಲಿವ ಮಾಗಧಸೂತ ವಂದಿಗ
ಕೊಳುನುಡಿಯ ಗಾಯಕರ ಪಾಠಕ
ರೊಳಗೆ ವೈಯಿಕ್ಕುತ್ತ ಯಮನಂದನನು ನಡೆತಂದ ೪

ದೂರದಿಂದಸುರಾಂತಕನ ಹೊಂ
ದೇರನೀಕ್ಷಿಸುತಶ್ರುಜಲದಲಿ
ನೇರೆದಪ್ಪಿದವಕ್ಷಿಗಳು ತನು ಪುಳಕಭಾರದಲಿ
ಭಾರಿಸಿತು ಮುಕುಳಿತ ಕರಾಂಜಳಿ
ಸೇರಿದುವು ಮಸ್ತಕಕೆ ಪಾಂಡವ
ಧಾರುಣೀಪತಿ ಬಂದು ಕಂಡನು ಕೃಷ್ಣನಂಘ್ರಿಗಳ ೫

ಇಕ್ಕಿದರು ಕಾಣಿಕೆಗಳನು ವೈ
ಯಿಕ್ಕಿದರು ಪಾಂಡವರು ಭೂಪರು
ಮಿಕ್ಕ ಮತ್ಸ್ಯ ದ್ರುಪದ ಕೇಕಯ ಸೃಂಜಯಾದಿಗಳು
ಪೊಕ್ಕರೊಡಲನು ಸಾಕಿದೇತಕೆ
ಮಕ್ಕಳಾಟಕೆಯೆನುತ ಮುರರಿಪು
ತೆಕ್ಕೆಗಳು ತನುಜಡಿಯೆ ತೆಗೆದಪ್ಪಿದನು ಪಾಂಡವರ ೬

ಉರದಲಪ್ಪಿ ಮುಕುಂದನಂಗದ
ಪರಿಮಳವನಾಘ್ರಾಣಿಸುತ ವೈ
ಮಱೆದರಾ ಪಾಂಡವರು ಹರಮಾಹ್ಲಾದದಲಿ ಮುಳುಗಿ
ಸಿರಿಮೊಗವ ನೋಡುತ್ತ ಕಂಗಳು
ಕರಗಿದವು ಬೇಱೊಂದು ವಿಷಯಾಂ
ತರವನಱಿಯದ ಚಿತ್ತವೃತ್ತಿ ಮಹಾ ಮಹೇಶ್ವರರ ೭

ನೋಡಿ ನೋಡಿ ಮುಕುಂದನನು ಮಿಗೆ
ಬಾಡಿದರು ವನಿತೆಯರು ಕಾಮನ
ಮೂಡಿಗೆಯ ಮಸೆದಲಗಿನಂತಸ್ತಾಪವಹ್ನಿಯಲಿ
ಬೇಡಿಕೊಂಡವತಾರವನು ನೆಱೆ
ಮಾಡಿಸಿದ ಕಮಲಜನ ಸುಕೃತವ
ನಾಡಲೇಕದನೆನುತಲಿರ್ದುದು ಕೂಡೆ ತಳತಂತ್ರ ೮

ಬೆರಸಿದರು ಯಾದವರು ಪಾಂಡವ
ರುರುಬಲಾಂಬುಧಿ ಮೊಳಗಿದವು ದು
ರ್ಧರ ಮಹಾನಕ ಶಂಖಭೇರಿ ಮೃದಂಗ ಕಹಳೆಗಳು
ಸುರರು ಸುರಿದರು ಮೇಲೆ ಪುಷ್ಪದ
ಸರಿವಳೆಯನೋರಂತೆ ಮಾಗಧ
ರುರವಣಿಸಿ ಪಾಡಿದರು ಪಾವನಚರಿತ್ರೆಗಳನೊಲಿದು ೯

ಕುಣಿವ ಹೊಗಳುವ ಹಾಡುವರ ತಿಂ
ಥಿಣಿ ನಮೋ ಜಯಯೆಂಬವರ ತಿಂ
ಥಿಣಿ ಮಹಾಸ್ತುತಿಪಾಠಕರ ತಿಂಥಿಣಿ ಜನಾಬ್ಧಿಯಲಿ
ಎಣಿಸಲರಿದಾಯ್ತಂಘ್ರಿಯುಗದಲಿ
ಮಣಿದು ವೈಯಿಕ್ಕುವ ಜನದ ತಿಂ
ಥಿಣಿ ಮಹಾದ್ಭುತವಾಯ್ತು ನೋಡುವರಂದು ಮೂಜಗಕೆ ೧೦

ಒಂದು ರಥದಲಿ ಬಳಿಕ ಕುಂತೀ
ನಂದನರ ಸಮ್ಮೇಳನದಲಿ ನಡೆ
ತಂದನಸುರಾರಾತಿಯುದ್ಧವ ಸಾತ್ಯಕಿಯು ಸಹಿತ
ವಂದಿಗಳ ಮಾಗಧರ ಸೂತರ
ವೃಂದದೊತ್ತೊತ್ತುಗಳ ಮಂದಿಯ
ಸಂದಣಿಯ ಸಂಭ್ರಮದಲಿಂದ್ರಪ್ರಸ್ಥಪುರವರಕೆ ೧೧

ಹೊಳೆವ ಗುಡಿ ತೋರಣದ ಕನ್ನಡಿ
ಕಳಶ ದೀಪಾಂಕುರ ಫಲಾಕ್ಷತೆ
ಗಳ ಫಲಾನ್ವಿತ ಪೂಗ ಕದಳೀ ಪಲ್ಲವೇಕ್ಷುಗಳ
ಚಳಪತಾಕಾಚಿತ್ರರಚನಾ
ವಳಿಯ ನಡೆನುಡಿ ರಂಗವಲಿಗಳ
ಹಲವು ರಚನೆಯನೀಕ್ಷಿಸುತ ನಡೆತಂದನಸುರಾರಿ ೧೨

ಸಂದಣಿಸಿದುದು ಮುಂದೆ ಹೊಸ ಹೊ
ನ್ನಂದಣಂಗಳಲಖಿಳ ಯಾದವ
ವೃಂದ ವನಿತಾನಿವಹದಲಿ ಗೋವಿಂದನರಸಿಯರ
ಗೊಂದಣದ ದಂಡಿಗೆಗಳೈದಲು
ಮುಂದೆ ಪುರಜನವಿದಿರುಗೊಳಲಾ
ನಂದದಲಿ ದನುಜಾರಿ ಹೊಕ್ಕನು ಪಾಂಡವರ ಪುರವ ೧೩

ಬೀದಿಯಲಿ ತೆಱಹಿಲ್ಲ ಜಱಿದವು
ವೇದಿಗಳು ಮನೆಗಳಲಿ ಸಂದಣಿ
ಯಾದುದದಲ್ಲಿಯದಲ್ಲಿ ಮುಕುಳಿತ ಕರಸರೋಜದಲಿ
ಆಧರಿಸುತಿರ್ದುದು ದುರಂತನು
ಹೋದದಧಿಯ ದರುಶನದ ಪರಮಾ
ಹ್ಲಾದದಲಿ ಮುಳುಗಾಡುತಿರ್ದುದು ಸಕಲ ಜನನಿವಹ ೧೪

ಮುಡದಿಯರು ತವಕದಲಿ ಮನೆಗಳ
ನಡರಿದರು ಮಣಿಮಾಡವದಿರಲು
ಗಡಣದಲಿ ಥರವಿಡಿದು ನಿಂದು ಗವಾಕ್ಷನಿಕರದಲಿ
ಕುಡಿಕುಡಿದು ಕಂಗಳಲಿ ಕೃಷ್ಣನ
ಕಡುಚಲುವ ಕಮನೀಯ ಮೂರ್ತಿಯ
ನೊಡಲ ಮಱೆದರು ಬಹಳ ಹರುಷೋತ್ಸವದ ಭಾರದಲಿ ೧೫

ಆ ಮಹಾವಿಭವವನು ವನಿತಾ
ಸ್ತೋಮವನು ಗೋವಿಂದನೆಸೆವ ಮ
ಹಾ ಮಹತ್ವವನಖಿಳಲೋಕವಿಮೋಹನಾಕೃತಿಯ
ಭಾಮೆಯರು ನೋಡುತ್ತ ವರ ಸುಮ
ನೋಮಹಾವೃಷ್ಟಿಗಳ ಕಱೆವುತ್ತ
ಕಾಮಪರವಶತೆಯಲಿ ಮಱೆದರು ಲೋಕವಿಭ್ರಮವ ೧೬

ಮುತ್ತು ಮಾಣಿಕಗಳನು ಕಾಣಿಕೆ
ಯಿತ್ತು ಮಿಗೆ ಕಾಲ್ಗೆಱಗಿ ಜೀಯೆನು
ತೊತ್ತರಿಸಿ ಕೆಲಸರಿವ ಪಟ್ಟಣಗಾಱರೋಲಗಕೆ
ಮೊತ್ತದಾ ಪುರಜನದ ದರುಶನ
ದತ್ಯಧಿಕ ಪೂಜೆಯನು ಕೈಕೊಳು
ತುತ್ತಮೋತ್ತಮಕೀರ್ತಿ ಬಿಜಯಂಗೈದನರಮನೆಗೆ ೧೭

ಪುರಜನವ ಪರಿಜನವನಾ ಕಡು
ಗರುಣಿ ಕಾಣಿಸಿಕೊಳುತ ಸತಿಯರ
ನೆರವಿಯನು ನೋಡುತ್ತ ಸುಸ್ಮಿತ ಮೃದುಕಟಾಕ್ಷದಲಿ
ಹರಿಸುತವರ ಮನಂಗಳನು ಮಂ
ದಿರದಲಿಳಿದನು ರಥವನರಸಿಯ
ರುರು ನಿವಾಳಿಯ ಕೈಕೊಳುತ ಹೊಕ್ಕನು ನೃಪಾಲಯವ ೧೮

ನಿಲಿಸಿ ನಿಜಪರಿವಾರವನು ನೃಪ
ಕುಲವನಾ ಪರಿಜನವನೊಪ್ಪುವ
ನಿಳಯದಲಿ ಬೀಡಾರವನು ಸಂವರಣೆಯನು ಕೊಡಿಸಿ
ಬಳಿಕ ಮುರರಿಪು ರಾಣಿವಾಸದ
ಲಲನೆಯರ ಸಹಿತಾ ಯುಧಿಷ್ಠಿರ
ನಲಘುಮಣಿಮಯ ಮಂದಿರಂಗಳ ಹೊಕ್ಕನಸುರಾರಿ ೧೯

ಹೊಳೆವ ರತ್ನಸ್ತಂಭ ಮುಕ್ತಾ
ವಳಿಯ ಮೇಲ್ಕಟ್ಟುಗಳ ಹರಿತೋ
ಪಲದ ನೆಲಗಟ್ಟುಗಳ ಗೋಮೇಧಿಕದ ಗೋಡೆಗಳ
ತೊಳಪ ವಜ್ರಕವಾಟ ಶೃಂಖಲೆ
ಗಳ ಮಹಾದ್ಯುತಿ ರತ್ನದೀಪಾ
ವಳಿಯ ಕಾಂತಿಯಲೆಸೆವ ಭವನವ ಹೊಕ್ಕನಸುರಾರಿ ೨೦

ಮನೆಗೆ ಬಿಜಯಂಗೈಸಿ ತಂದಾ
ದನುಜಹರನನು ನೃಪತಿ ಪೂಜಿಸು
ವನುವ ಮಱೆದನು ಬಹಳ ನಿಜಕೃತಕೃತ್ಯಭಾವದಲಿ
ನೆನೆವ ಸನಕ ಸನಂದನಾದ್ಯರ
ಮನಕೆ ಮೈಗೊಡದಾ ಮಹಾಮಹಿ
ಮನನದಾವಂಗದಲಿ ಪೂಜಿಪೆನೆನುತ ಸಂಭ್ರಮಿಸಿ ೨೧

ಬಂದು ಕುಂತೀದೇವಿ ಪರಮಾ
ನಂದದಲಿ ತೆಗೆದಪ್ಪಿದಳು ಗೋ
ವಿಂದನನು ಕಾಲ್ಗೆಱಗಲಧಿಕ ಮನೋನುರಾಗದಲಿ
ಇಂದುಮುಖಿ ದ್ರೌಪದಿ ಸುಭದ್ರೆಯ
ರಂದು ತಲೆವಾಗಿರಲು ಕೃಷ್ಣನ
ವಂದ್ಯಚರಣಂಗಳಿಗೆ ಸಂಭಾವಿಸಿದನರಸಿಯರ ೨೨

ಏನನೆಂಬೆನು ಪಾಂಡವರ ಸು
ಮ್ಮಾನವನು ತದ್ವನಿತೆಯರ ಹರು
ಷಾನುರಂಜಿತಮನದ ಬಹಳೋತ್ಸವದ ಸಂಭ್ರಮದ
ದಾನವಾಂತಕನನಿಬರನು ಸ
ನ್ಮಾನಿಸುತ ಕರೆಕರೆದು ದಿವ್ಯ ವ
ರಾನುಲೇಪನ ವಸನ ಭೂಷಣಗಳಲಿ ಮನ್ನಿಸಿದ ೨೩

ನೋಡಿ ದಣಿಯರು ಕೃಷ್ಣನನು ನೆಱೆ
ಮಾಡಿ ದಣಿಯರು ಸೇವೆಯನು ಮಾ
ತಾಡಿ ದಣಿಯರು ನೃಪತಿ ಮಧುರ ಪ್ರೇಮಸೂಕ್ತಿಯಲಿ
ಪಾಡಿ ದಣಿಯರು ತನುಮನಂಗಳ
ಜೋಡಿಗಳ ಝೊಮ್ಮಿನಲಿ ಮಿಗೆ ತೂ
ಗಾಡಿ ದಣಿಯರು ಮೌಳಿಮಣಿಯನು ನಿಜಕೃತಾರ್ಥತೆಗೆ ೨೪

ಸೊಸೆಯರೊಡನಾ ಕುಂತಿ ಕೃಷ್ಣನ
ಶಶಿಮುಖೀನಿವಹವನು ಸಂಭಾ
ವಿಸಲು ದಿವ್ಯಾಂಬರವಿಭೂಷಣ ಗಂಧಮಾಲ್ಯದಲಿ
ಬೆಸಸಿದಳು ಪರಿಜನವನೆಲ್ಲರ
ನೊಸೆದು ಸರ್ವಾಂಗದಲಿ ಪಾಂಡವ
ವಸುಮತೀಪತಿ ಮನ್ನಿಸುತ್ತಿದ್ದನು ಸರಾಗದಲಿ ೨೫

ದಿನದಿನಕೆ ಹೊಸಪರಿಗಳಲಿ ಭೋ
ಜನ ವಸನ ಮಣಿಭೂಷಣಂಗಳ
ಲನುಪಮನ ಸತ್ಕರಿಸಿ ದಣಿಯನು ಯಾದವೋತ್ತಮರ
ದನುಜಹರನಿಂತಾ ಯುಧಿಷ್ಠಿರ
ಜನಪನನುರಾಗೋಪಲಾಲಿತ
ಘನತರ ಪ್ರೀತಿಯನು ಸಲಿಸುತ್ತಿರ್ದನೊಲವಿನಲಿ ೨೬

ಸಂದವೀಹರಿ ಕೆಲವು ದಿನ ಸಾ
ನಂದದಲಿ ಮೈಮಱೆದವೊಲು ಮು
ಕುಂದನೊಡನೆಯೆ ಖೇಳಮೇಳದಲಾ ನೃಪಾಲರಿಗೆ
ಒಂದು ದಿನ ನೆರೆದಖಿಳರಾಯರ
ವೃಂದದೊಡ್ಡೋಲಗದಲೇನೈ
ತಂದೆ ಕರೆಸಿದೆ ನನ್ನನೆಂದನು ನಗುತ ಮುರವೈರಿ ೨೭

ಕೇಳುತಿದ್ದನು ನೃಪತಿ ಮಕುಟದ
ಮೇಲೆ ಕರಪುಟವೆಸೆಯೆ ಲಕ್ಷ್ಮೀ
ಲೋಲನಂಘ್ರಿಗೆ ನಮಿಸಿ ವಿನಯದಲಂದು ಕೈಮುಗಿದು
ಹೇಳಲಮ್ಮೆನು ಕೃಷ್ಣ ಪೂರ್ವ ನೃ
ಪಾಲರಿಂಗಿಲ್ಲದ ಮನೋರಥ
ವಾಳಿಗೊಂಡುದಲೈ ನಿಜಾಂತರ್ಮನವನಿದನೆಂದ ೧೮

ಕರೆಸಿದೆನು ಬಪ್ಪಂಗೆ ಸೇರದು
ಸುರಪನೋಲಗದಿರವು ಗಡ ಮುನಿ
ವರನ ನುಡಿ ದಿಟ ರಾಜಸೂಯಾಧ್ವರವ ಮಾಡಿದರೆ
ದೊರಕುವುದು ಗಡ ಮನದಲಂಗೀ
ಕರಿಸಿದೆನು ಸಂಕಲ್ಪ ನಿಮ್ಮಡಿ
ಕರುಣಿಸಿದಡಹುದೆನುತ ತಲೆವಾಗಿದನು ಹರಿಪದಕೆ ೧೯

ಆವುದರಿದಲೆ ಕೃಷ್ಣ ನಿಜಪದ
ಸೇವಕರಿಗಿದು ಘನವೆ ನೋಡಲಿ
ದೇವ ದಾನವ ಮಾನವರು ನಿನ್ನವನ ಸಾಹಸವ
ದೇವ ಕರುಣಿಸಬೇಹುದೆನುತಾ
ಭೂವರನು ತಲೆವಾಗುತಿರೆ ರಾ
ಜೀವನಾಭನು ನಗುತ ನೆಗಹಿದನವನಿಪನ ಶಿರವ ೨೦

ತಂದೆ ಕೇಳನ್ನಸುವೆ ಏಳೇ
ಳೆಂದು ನುಡಿದು ವೃಥಾ ಪೃಥಜ್ಮ್ರತಿ
ಯಿಂದಿದೇನುಪಚಾರವೇ ಸಾಕೆನುತ ತೆಗೆದಪ್ಪಿ
ಸಂದುದೀ ಸಂಕಲ್ಪವೆನ್ನಾ
ನಂದನಿಧಿಗಾನಿಹೆನು ಸಾಧಕ
ನೆಂದು ಬೋಳೈಸಿದನು ಭೂಪನನೊಲಿದು ಮೈದಡವಿ ೨೧

ಎನ್ನ ಭಕ್ತರನಭಿಭವಿಸುವಧಿ
ಕೋನ್ನತಿ ಯದಾರಿಂಗೆ ಬಹಳ ಗು
ಣಾರ್ಣವನೆ ತೇಜೋವಿಶೇಷ ಯಶೋವಿಭೂತಿಯಲಿ
ನಿನ್ನ ವಶವರ್ತಿಗಳ ಮಾಳ್ಪೆನು
ಪನ್ನಗಾಭರಣಾದಿ ದಿವಿಜರ
ನಿನ್ನುಳಿದ ಪಾರ್ಥಿವರ ಮಾತೇಕೆಂದನಸುರಾರಿ ೨೨

ಏನರಿದು ನಿನಗರಸ ನಿನ್ನಾ
ಧೀನದಲಿ ತಾನಿರಲು ಕಳುಹು ನಿ
ನಿಜಾನುಜರನೆಲ್ಲರನು ದಿಗ್ವಿಜಯಕ್ಕೆ ಬೇಗದಲಿ
ಆನಲಿಱುವುದು ನಯಗುಣದ ಸಂ
ಧಾನವುಳ್ಳಡೆ ಧನವನವರ
ಸ್ಥಾನ ಮಾನ್ಯವನುಳುಹಿ ಕೊಂಬುದು ನೀತಿ ನಮಗೆಂದ ೨೩

ಎನೆ ಹಸಾದವೆನುತ್ತ ಕರೆಸಿದ
ನನುಜರನು ಸಹದೇವ ಸೃಂಜಯ
ರನು ಸರಾಗದಲಟ್ಟಿದನು ದಕ್ಷಿಣದಿಶಾವರಕೆ
ವಿನುತ ನಕುಲನ ಪಡುವ ದೆಸೆಗ
ರ್ಜುನನನುತ್ತರದೆಸೆಗೆ ಭೀಮನ
ನನಿಮಿಷೇಂದ್ರನ ದೆಸೆಗೆ ಕೇಕಯ ಮಾದ್ರೆಯರು ಸಹಿತ ೨೪

ಗೆಲಿದು ದಿಕ್ಚಕ್ರವನು ತೋಱಿದ
ರಲಘು ಧನವನು ನೃಪತಿಗೊಂದಾ
ಯ್ತಲಘು ಮಗಧ ನೃಪಾಲನನು ಗೆಲಲಱಿಯದವನಿಪಗೆ
ಬಳಿಕ ಕೃಷ್ಣಾರ್ಜುನ ವೃಕೋದರ
ರೊಳಗು ಮಾಡಿ ಧರಾಮರಾಂಗದ
ಬಳಕೆಯಲಿ ಬೇಡಿದರು ರಣವನು ಕಾದಿದನು ಭೀಮ ೨೫

ಕೊಂದನವನನು ಭೀಮನಾ ಗೋ
ವಿಂದನಂಘ್ರಿಯ ಸನ್ನಿಧಿಯ ಬಲ
ದಿಂದ ತೋಱಿದ ಸಂಜ್ಞೆಯಲಿ ಸಹದೇವನನು ನೃಪನ
ನಂದನನನಲ್ಲಿರಿಸಿ ಭೂಪರ
ವೃಂದದಾಯಾಸವನು ನೋಡಲು
ಮಂದಿರವನಸುರಾರಿ ಹೊಕ್ಕನು ಮಗಧಭೂಮಿಪನ ೨೬

ಮಲಿನದೇಹದ ಮಾಸಿ ಕೆದಱಿದ
ತಲೆಯ ಜೀರ್ಣಾಂಬರದ ಬಾಗಿದ
ಗಳದ ಕೃಶತರಗಾತ್ರರಡಸಿದ ಹಸಿವು ತೃಷೆಗಳಲಿ
ಜ್ವಲಿಸುವೊಡಲಿನ ಜೋಲ್ದ ಮೈಗಳ
ಸುಲಿವಡೆದ ಕಾಂತಿಗಳ ಮುಸುಡಿನ
ಲಿಳಿವ ನಯನಾಂಬುಗಳ ನೃಪರನಸುರಾರಿ ೨೭

ನೋಡಿ ತಲೆದೂಗಿದನಿದೆತ್ತಣ
ಕೇಡು ನೃಪರಿಂಗಾಯ್ತು ಹರಹರ
ರೂಢಿಗಚ್ಚರಿಯೆನುತ ಮಿಗೆ ಕಾರುಣ್ಯದೃಷ್ಟಿಯಲಿ
ಮಾಡಿದನನುಗ್ರಹವನರ್ಥಿಸಿ
ಬೇಡಿ ಮುನಿಗಳು ಕಾಣಲಱಿಯದ
ಗೂಢನಿರ್ಜರ ಮೂರ್ತಿಯನು ತೋಱಿದ ನೃಪಾಲರಿಗೆ ೨೮

ಲಲಿತ ಮುಕ್ತಾಹಾರ ಮಣಿಕುಂ
ಡಲಕಿರೀಟಮಣಿಪ್ರಭಾಮಂ
ಡಲಮನೋಜ್ಞಾಂಗದಲಿ ರಾಜಿತ ವರಚತುರ್ಭುಜದ
ಹೊಳೆವ ನಯನಾಪಾಂಗ ಭೃಂಗೋ
ಜ್ವಲಕಟಾಕ್ಷದ ಸುಸ್ಮಿತಾಮೃತ
ಕಲಿತವದನದ ಕಮಲನಯನನ ಕಂಡರವನಿಪರು ೨೯

ಥಟ್ಟುಗೆಡೆದರು ನೃಪವರರು ಸಾ
ಲಿಟ್ಟು ಸಾಷ್ಟಾಂಗದಲಿ ಹರಿಪದ
ವಿಷ್ಟರಕೆ ಜಯ ಜಯನವೋ ಜಯಕೃಷ್ಣಯೆನುತ
ದೃಷ್ಟಿಗಳು ನೆಱೆ ಹಣಿಯೆ ನೋಡಿದ
ರಷ್ಟಭೂತಿಗಳೊಡೆಯನನುಪಮರ
ವಟ್ಟರೋರಂತಾಲಿಸುತ ತನ್ಮೂರ್ತಿಗುಣಗಣವ ೪೦

ಬಾಡಿದುತ್ಪಲವನದೆಡೆಗೆ ಶಶಿ
ಮೂಡಿ ಬಂದಂತಾಯ್ತು ಸೆಱೆವನೆ
ಕೂಡೆ ಮಂಗಳವಾಯ್ತು ನಿರ್ಬಂಧನದ ಸಂಕ್ಲೇಶ
ಓಡಿದುದು ನೃಪರಿಂಗೆ ತನುಬಲ
ಮೂಡಿದುದು ಬಡನದಿಗಳಿಂಗಾ
ಷಾಢಕಾಲದ ವೃಷ್ಟಿ ಪುಷ್ಟಿಯನೀವ ತೆಱನಾಯ್ತು ೪೧

ಧನ್ಯರಾದೆವು ಕೃಷ್ಣ ಬಹಳ ಕೃ
ಪಾರ್ಣವನೆ ನಿನ್ನೀ ಸುರಾವಳಿ
ದುರ್ನಿರೀಕ್ಷ್ಯವೆನಿಪ್ಪ ಚರಣಾಂಭೋಜವನು ಕಂಡು
ಮಾನ್ಯನೆಮಗೀ ಮಗಧನೃಪತಿ ದು
ರನ್ವಯವೆನಿಪ್ಪೀ ಭವತ್ಪದ
ಸನ್ನಿಧಿಯ ತೋಱಿಸಿದನೆಂದರು ನೃಪರು ಕೈಮುಗಿದು ೪೨

ಅಲ್ಲದಿರೆ ರಾಜ್ಯಾಂಧರೆತ್ತಲು
ವಲ್ಲಭನೆ ನಿನ್ನಮಳಪದಯುಗ
ಪಲ್ಲವದದರುಶನವಿದೆತ್ತಲು ಮೂಢಮತಿಗಳಿಗೆ
ಒಲ್ಲೆವಿನ್ನೀ ರಾಜ್ಯಪದವಿಯ
ನೊಲ್ಲೆವಮರಾಧೀಶಪದವಿಯ
ನೊಲ್ಲೆವೇನುವನೀವುದೀ ನಿಜದಾಸ್ಯವನು ತಮಗೆ ೪೩

ಎಂದು ನಿಜಚರಣಾರವಿಂದ
ದ್ವಂದ್ವದಲಿ ವೈಯಿಕ್ಕಿ ಭೂಪರ
ವೃಂದ ಹೊಗಳುತ್ತಿರಲು ಜಯರವಸಂಸ್ತವಂಗಳಲಿ
ಮಂದಹಾಸದಲನಿಬರನು ಗೋ
ವಿಂದನಾ ಮಾಗಧ ನೃಪಾಲ
ನಂದನಗೆ ನೇಮಿಸಿದನುಪಚರಿಸೆಂದು ಭೂಮಿಪರ ೪೪

ಎನೆ ಹಸಾದವೆನುತ್ತೆ ವರ ಮ
ಜ್ಜನವಿಭೂಷಣ ವಿಲಸದನುಲೇ
ಪನ ವರಾಂಬರ ದಿವ್ಯರತ್ನಾವಳಿಯನೊಲಿದಿತ್ತು
ಜನಪರನು ಸತ್ಕರಿಸಿದನು ಸದು
ವಿನಯದಲಿ ಸಹದೇವನೊಪ್ಪಿರೆ
ದನುಜಹರನಾಜ್ಞೆಯಲಿ ರಾಜೋಚಿತ ವಿಧಾನದಳಿ ೪೫

ಬಳಿಕ ಮಣಿಮಯರಥಗಳನು ನೃಪ
ಕುಲವನೇಱಿಸಿ ಸತುಕರಿಸಿ ಮುನಿ
ಕುಲಮನೋಂಬುಜಹಂಸನಲ್ಲಿ ಮನೋನುರಾಗದಲಿ
ವಿಳಸದಮಳಚ್ಛತ್ರಚಮರಾ
ವಳಿಸಹಿತ ವಿಭವದಲಿ ಕರುಣಾ
ಜಲಧಿ ತಾ ಮುಂದಿಟ್ಟು ಕಳುಹಿದನಾ ಮಹೀಶ್ವರರ ೪೬

ಅಂಜದಿರಿ ತಾನಿರಿಸಿದಂತಿಹು
ದೆಂಜಲಿಸಬೇಡಕಟ ಭಯವನು
ಮಂಜಿನುರವಣೆಯೆಂದು ಮನದೊಳಗಱಿತಿಹುದು ಸಿರಿಯ
ರಂಜಿಸುವ ರಾಜೋಪಭೋಗಕೆ
ಮುಂಜೆಱಗ ಹಾಸದಿರಿ ನತಪವಿ
ಪಂಜರನು ನಾನೆನ್ನ ಭಕ್ತರಿಗಿಲ್ಲ ಭಯವೆಂದ ೪೭

ಒಡಲು ತಾನೆಲ್ಲಿದ್ದಡೇನಿದು
ಜಡವಲಾ ಮನದೊಳಗೆ ತನ್ನನು
ಬಿಡದೆ ಭಾವಿಸುತಿಹುದು ಕೀರ್ತಿಸುತೆನ್ನ ಗುಣಗಣವ
ಒಡನಿಹೆನು ತಾನವರಿಗೆನುತು
ಗ್ಗಡದ ಕಾರುಣ್ಯದಲಿ ತಾ ಕಿಱು
ದೆಡೆಯ ಕಳುಹಿ ಕೃಪಾಜಲಧಿ ಮರಳಿದನು ನೃಪಕುಲವ ೪೮

ಅತ್ತಲಾ ನೃಪಕಟಕ ಧರೆ ಕಿ
ತ್ತಿತ್ತಿ ನಡೆದಂದದಲಿ ನಡೆದುದು
ಮತ್ತಗಜರಥತುರಗ ನಿಕರಂಗಳಲಿ ಮನದೊಳಗೆ
ಉತ್ತಮಶ್ಲೋಕನನು ಬಿಡದಿ
ಪ್ಪತ್ತು ಸಾವಿರದೆಂಟು ನೂರ್ವರು
ಕೀರ್ತಿಸುತ ತಂತಮ್ಮ ರಾಜ್ಯಂಗಳಿಗೆ ನಲವಿನಲಿ ೪೯

ಬಳಿಕ ಮಾಗಧರಾಜ್ಯವನು ಕೈ
ಗೊಳಿಸಿ ಸಹದೇವಂಗೆ ಪಟ್ಟವ
ನೊಲಿದು ಫಲುಗುಣ ಸಹಿತ ಶಕ್ರಪ್ರಸ್ಥಪುರವರಕೆ
ನಳಿನನಾಭನು ಬರುತ ಶಂಖವ
ಮೊಳಗಿಸಿದನಾ ಧರ್ಮನಂದನ
ನಳಲನಾಱಿಸುವಂತೆ ಭುವನಾವಳಿಗಳಳ್ಳಿಱಿಯೆ ೫೦

ಕೇಳಿ ಶಂಖಧ್ವನಿಯನವನೀ
ಪಾಲಮುಖ್ಯರು ಮಗಧ ಪೃಥ್ವೀ
ಪಾಲನವಸಾನವನು ನಿಶ್ಚಯಿಸಿದನು ಮನದೊಳಗೆ
ತೂಳಿದುದು ತನುಪುಳಕ ಸನ್ಮತ
ದೇಳಿಗೆಯಲೈತಂದು ತನ್ನಯ
ಕಾಲಿಗೆಱಗಿದಡಪ್ಪಿದನು ಕೃಷ್ಣಾರ್ಜುನಾನುಜರ ೫೧

ಅವನಿಪತಿಗಱುಹಿದರು ಬಹುಳಾ
ಹವದ ಹದನನು ಕೇಳುತದ್ದನು
ನವರಸಾಮೃತಪುಳಕಪೂರದಲರಸನಡಿಗಡಿಗೆ
ವಿವರಿಸುವಡರಿದಾಯ್ತು ನೃಪನು
ತ್ಸವದ ಭಾರಣೆ ನುಡಿಗಳಡಗಿದ
ವವಿರಳಾಶ್ರುನಿರುದ್ಧ ಕಂಠದಲರಸ ಕೇಳೆಂದ ೫೨

ನೆರಹಿದರು ಧನವನು ಧರಾಧೀ
ಶ್ವರರು ತಲೆ ಹೊಱೆ ಯೆತ್ತು ಭಂಡಿಗ
ಳುರವಣಿಸಿ ನೂಕಿದವು ಪುರದಲಿ ಪಾಂಡುನಂದನರ
ನೆರೆದುದಗಣಿತ ಭೂಪರಗಣಿತ
ಧರಣಿಯಮರರು ವೈಶ್ಯಶೂದ್ರೋ
ತ್ಕರದ ಜನಸಂದೋಹವಿಂದ್ರಪ್ರಸ್ಥಪುರದೊಳಗೆ ೫೩

ಋತ್ವಿಜರು ಯಜ್ಞಾಂಗ ಭೂಮಿಯ
ನುತ್ತರೆಸೆವ ಸುವರ್ಣ ಹಲದಲಿ
ವಿಸ್ತರಿಸಿ ವೈದಿಕ ವಿಧಾನದಲಗ್ನಿಹೋತ್ರವನು
ಉತ್ತಮಾಧ್ವರ ದೀಕ್ಷೆಯನು
ವರ್ತಿಸಿದರವನಿಪಗೆ ಸುರರಿಗೆ
ತುತ್ತ ನೀಡಿದರನಲಮುಖದಲಿ ಮಂತ್ರಕೋವಿದರು ೫೪

ಬಂದರಜಭವ ಸುರಮುನೀಂದ್ರ ಪು
ರಂದರಾದ್ಯರು ಸನಕ ಭೃಗು
ನಂದನಾದಿ ಸಮಸ್ತಕಲ್ಪನಿವಾಸಿಗಳು ಸಹಿತ
ಸಂದ ವಿದ್ಯಾಧರ ಮಹೋರಗ
ವೃಂದ ವರಗಂಧರ್ವ ಕಿನ್ನರ
ವೃಂದ ವೂರ್ವಶಿ ರಂಭೆ ಮೊದಲಾದಪ್ಸರೋನಿಕರ ೫೫

ಕೌರವರು ಸೃಂಜಯರು ಕೇಕಯ
ವೀರ ಮಾತ್ಸ್ಯ ದ್ರುಪದ ಮಾದ್ರ ಮ
ಹೀರಮಣ ಕೌಸಲ ವಿದರ್ಭಾವಂತಿ ಚೇದಿಪರು
ಧಾರಿಣೀಪತಿಗಳು ತದೀಯ ಕು
ಮಾರ ರಾಣೀವಾಸದಂದಣ
ವೋರಣಿಸಿದವು ಯಜ್ಞಶಾಲೆಯಲಾ ಮಹೀಶ್ವರನ ೫೬

ಚ್ಯವನ ಗಾರ್ಗ್ಯ ವಸಿಷ್ಠ ಕುಂಭೋ
ದ್ಭವ ಪರಾಶರ ಗಾಧಿತನುಸಂ
ಭವ ಪುಲಸ್ತ್ಯ ಕ್ರತು ಶತಾನಂದಾಸಿತವ್ರತರು
ಕವಿಶ ಮುದ್ಗಲ ಕಣ್ವ ಭೃಗು ಗಾ
ಲವ ಸುಮಂತ ಸುಹೋತ್ರ ಶೈಲ
ಪ್ರವರ ಮುನಿಕುಲವು ಸಂದಣಿಸಿದುದು ಯಜ್ಞಶಾಲೆಯಲಿ ೫೭

ರಾಯ ಭಾರ್ಗವ ರಾಮ ಮಾರ್ಕಂ
ಡೇಯ ನಾರದರೇತಕದ್ವೈ
ಪಾಯನಾಸಿತಮುನಿ ಭರದ್ವಾಜಾಂಗಿರಾದಿಗಳು
ಆ ಯಶೋನಿಧಿ ಧೌಮ್ಯ ವೈಶಂ
ಪಾಯನಾತ್ರಿಯು ಕಾಶ್ಯಪಾದ್ಯರು
ರಾಯರಧ್ವರದೊಳಗೆ ರಂಜಿಸಿದರು ಮಹೋತ್ತಮರು ೫೮

ಆ ಮಹಾಸಭೆಯೊಳಗೆ ಪಾಂಡವ
ಭೂಮಿಪತಿ ಕೊಡಲಗ್ರಪೂಜೆಯ
ನಾ ಮಹಾ ವರಮುನಿ ನೃಪಾಲರೊಳಾರು ಯೋಗ್ಯರೆನೆ
ಶ್ರೀಮನೋರಮ ಕೃಷ್ಣನಮರ
ಸ್ತೋಮವಂದಿತನಿರಲು ಭುವನ
ಸ್ತೋಮದಲಿ ಬೇಱಾರೆನುತ ಸಾಱಿದನು ಸಹದೇವ ೫೯

ಆಹುದಲೈ ಸಹದೇವ ಯೆನುತಾ
ಬಹಳ ಸುರವರನೃಪನಿವಹ ಸ
ನ್ನಿಹಿತ ಬಹಳಾಸ್ಥಾನ ಜನ ಕೊಂಡಾಡಿದರು ಬಿಡದೆ
ವಿಹಿತ ಸತ್ಕಾರದಲಿ ಕೃಷ್ಣನ
ಮಹಿತಚರಣವ ತೊಳೆದು ಪಾಂಡವ
ಮಹಿಪನಿತ್ತನು ಪೂಜೆಯನು ನಿತ್ಯಾತ್ಮನಂಘ್ರಿಯಲಿ ೬೦

ಎಪ್ಪತ್ತೊಂಭತ್ತನೆಯ ಸಂಧಿ ಮುಗಿಯಿತು.

# ಎಂಭತ್ತನೆಯ ಸಂಧಿ

ಶರಣಸಂಸಾರಿಕನು ತಾನೆಂ
ಬುರುತರಾಶ್ಚರ್ಯವನು ಗುಣವಿ
ಸ್ತರವ ಮೆಱೆದನು ಪಾಂಡುಸುತರಲಿ ದಾನವಧ್ವಂಸಿ

ಅರಸ ಕೇಳಾ ರಾಜಸೂಯಾ
ಧ್ವರದ ವಿನಿಯೋಗವನು ಪಾಂಡವ
ಧರಣಿಪಾಲರು ಮಾಳ್ಪ ಪರಿಪರಿಯಾ ವಿಧಾನವನು
ವರವಿಭೂಷಣ ಗಂಧ ದಿವ್ಯಾಂ
ಬರವನೀವಧಿಕಾರ ದ್ರುಪದನ
ದುರುಮಹಾಸನದೊಡೆತನವದಾ ಭೀಮಸೇನನದು ೧

ಕನಕಗೃಹದಧ್ಯಕ್ಷ ದುರ್ಯೋ
ಧನಗೆ ಸಭ್ಯರ ಪೂಜೆ ಸಹದೇ
ವನದು ಬಹಳ ದ್ರವ್ಯಸಾಧನ ಕರ್ಮ ನಕುಲನದು
ಮುನಿವರರ ಶುಶ್ರೂಷೆಯಿರವ
ರ್ಜುನಗೆ ವಿಪ್ರವರಾಂಘ್ರಿಯವಸೇ
ಚನದ ಕೆಲಸಕೆ ಕೃಷ್ಣನಾದನು ಭೂಪ ಕೇಳೆಂದ ೨

ಮನ್ನಿಸುತ ದಾನವನು ಮಾಳ್ಪುದು
ಕರ್ಣನದು ದುಶ್ಶಾಸನಾದಿ ವಿ
ಕರ್ಣಮುಖ್ಯರು ವಿದುರ ಕೃತವರ್ಮಾದಿಯಾದವರು
ಮುನ್ನವೇ ತಮತಮಗೆ ನೃಪವರ
ರುನ್ನತಾಧ್ವರ ಕೃತ್ಯದಲಿ ಸಂ
ಪನ್ನ ಸೌಹಾರ್ದದಲಿ ವರ್ತಿಸುತಿರ್ದುದಖಿಳಜನ ೩

ಆ ವಿಭು ವರಮುನಿವರಸದಸ್ಯ ಜ
ನಾವಳಿಯನುಚಿತೋಕ್ತಿಯಲಿ ಸಂ
ಭಾವಿಸಿದನುರು ಕನಕವಸನಾಭರಣ ನಿಕರದಲಿ
ಭೂವರನ ಬಹಳಾಧ್ವರಾಂಗಕೆ
ಜೀವಭೂತನು ಕೃಷ್ಣನೆನಲಿ
ನ್ನಾವುದರಿದೆನುತಿರ್ದುದಖಿಳಾಮರ ಮುನಿಸ್ತೋಮ ೪

ಭದ್ರಮುಖವಿಭವದಲಿ ಭುವನ ಚ
ತುರ್ದಶದ ಜನ ದಣಿದುದೊಲಿದು ಜ
ನಾರ್ದನಗೆ ಕೊಡಲಗ್ರಪೂಜೆಯನು ಕಾಣುತ್ತ
ಎದ್ದನಾ ಶಿಶುಪಾಲನೇಱಿದ
ಗದ್ದುಗೆಯನೊಡೆಹೊಯ್ದು ಮಿಸೆಯ
ತಿದ್ದಿ ನಿಂದನು ನುಡಿದನಾ ಸಭೆಯೊಳಗೆ ಕೈನೆಗಹಿ ೫

ಕೇಳಿದಿರೆ ನೆರೆದಖಿಳ ಪೃಥ್ವೀ
ಪಾಲರೀ ಸಹದೇವನಾಡಿದ
ಬಾಲಭಾಷಿತವನು ಯುಧಿಷ್ಠಿರ ನೃಪನ ದುಷ್ಕೃತವ
ಆಲಿಸಿದಿರೈ ವರಮುಖಕೆ ಗೋ
ಪಾಲನಾದನು ಪೂಜ್ಯನಿದಕನು
ಕೂಲರಾದಿರಿ ನೀವೆನುತ ನಿಂದಿಸಿದನಾ ಚೈದ್ಯ ೬

ತರಳನೀ ಸಹದೇವನೊಲಿದಾ
ದರಿಸಿದರೆ ಗೋಪನನು ಹರಹರ
ಹಿರಿಯರಿಗೆ ಮತಿಗೇಕೆ ಪಲ್ಲಟವಾಯ್ತು ಕೃಷ್ಣನಲಿ
ಹರಹಿಕೊಳುತಿದೆ ಜನನಿಕರ ಕಾ
ಹುರದ ನೆರವಿಯದಂತಿರಲಿ ಮುನಿ
ವರರು ಮುಗ್ಧರೆ ನೀವಿದಕೆ ಸಮ್ಮತಿಸಲೇಕೆಂದ ೭

ಈ ಋಷಿಗಳೀ ವಿಪ್ರವರರೀ
ಭೂರಮಣರೀ ಸಕಲವಿದ್ಯಾ
ಪಾರದರುಶಿಗಳೀ ಸಮಾಗತ ಲೋಕಪಾಲಕರು
ಸಾರತರ ಸಂಯಮ ತಪೋವ್ರತ
ಧಾರಿಗಳು ನೆರೆದಿರಲು ಗೋಪೀ
ಜಾರನಲಿ ವಂದ್ಯಾಭಿಮಾನವೆ ಶಿವಶಿವಾ ಯೆಂದ ೮

ಧರೆಯ ಪುಣ್ಯ ಸ್ಥಳಗಳನು ಪರಿ
ಹರಿಸಿ ಪುಣ್ಯಕ್ಷೇತ್ರವನು ಸಾ
ಗರದೊಳಗೆ ಮನೆಮಾಡಿ ಕೊಲುವನು ದಸ್ಯುಧರ್ಮದಲಿ
ಧರಣಿಪರನಭಿಭವಿಸಿ ಪಾಪಾ
ಚರಿತದಲಿ ನಡೆದವನು ರಾಜಾ
ಧ್ವರಕೆ ಪೂಜ್ಯನೆ ಹರಹರಾದ್ಭುತವಾಯ್ತು ತನಗೆಂದ ೯

ಹೀನಕುಲ ಸಂಜಾತನಾಶ್ರಮ
ಹೀನನಮಳ ಕ್ಷತ್ರಧರ್ಮ ವಿ
ಹೀನನಿಹ ಪರಲೋಕ ಗತಿಮತಿಹೀನ ಗುಣಹೀನ
ಹೀನನಾಚಾರದಲಿ ಸುಕೃತ ವಿ
ಹೀನನುರುತರ ಬಾಹುಸತ್ವ ವಿ
ಹೀನಗೇನೆಂದಿತ್ತಿರಗ್ರಾರ್ಪಣವನಕಟೆಂದ ೧೦

ಎನುತಿರಲು ಶಿವಶಿವ ಯೆನುತ ಚೈ
ದ್ಯನನು ಬೈವುತ ನೆರೆದ ಸುರ ಮುನಿ
ಜನವಿರಲು ಮೋದದಲಿ ಕಿವಿಗಳ ಮುಚ್ಚಿ ಕೈಗಳಲಿ
ತನತನಗೆ ಗುಜಗುಜಿಸಿ ಸಭೆಯಲಿ
ಕನಲಿದಾ ಸಹದೇವನೆದ್ದನು
ದನುಜವರನಾಕ್ಷೇಪವನು ಕೇಳುತ್ತ ಕಡು ಮುಳಿದು ೧೧

ಏನೆಲವೊ ದುಷ್ಟನೆ ಗರ್ವಿತ
ಶ್ವಾನ ಬಗುಳುವೆ ಕೃಷ್ಣನತುಳ ಮ
ಹಾನುಭಾವನನಱಿವಡಾರೊಳಗಾರು ನೀನಿದಕೆ
ಜ್ಞಾನಸಂಯಮು ವರತಪೋನು
ಷ್ಠಾನವಂತರಿಗರಿದು ಮಾಯಾ
ಮಾನಿನಿಯ ಮೈಬಳಿಯ ಮರಿಗದು ಗನ್ಯವೆಂತೆಂದ ೧೨

ಆರ ದೆಸೆಯಿಂದಾಯ್ತು ಋಷಿಗಳಿ
ಗೀ ಋಷಿತ್ವದ ಹೆಮ್ಮೆಯಿದು ಮೇ
ಣಾರು ಕೊಡಲಾಯ್ತೀ ವಿಭವವೀ ಲೋಕಪಾಲರಿಗೆ
ಆರ ಬೆಸದಲಿ ಜಗವ ಮಾಳ್ಪನು
ವಾರಿಜಾಸನ ಚಂದ್ರ ಸೂರ್ಯರ
ದಾರ ತೇಜದಲಖಿಳಜಗವನು ಬೆಳಗುತಿಹರೆಂದ ೧೩

ತೊಳಲುತಿದೆ ಜಗವಾವನಂಘ್ರಿಯ
ನೊಲಿಸಲಱಿಯದೆ ಹಲವು ಮಂತ್ರಂ
ಗಳಲಿ ವೈದಿಕ ಕರ್ಮನಿಕರಂಗಳ ವಿಧಾನದಲಿ
ಜಲ ಹುತಾಶನ ಸೂರ್ಯ ಮೊದಲಾ
ದಲಘು ದೈವಂಗಳಿಗೆ ದಾಸ್ಯವ
ನಲಸದೊಡರಿಸಿ ಪಡೆಯರಾವನ ದರುಶನವನೆಂದ ೧೪

ಒಲಿದು ನೋಡಿದಬುಜಜಾಂಡಾ
ವಳಿಗಳುದಿಸುವವಾವನಲಿ ಮುಗು
ಳಲಸಿದರೆ ಸಂಹಾರವಾವನ ಹುಬ್ಬಿನಾಟದಲಿ
ಸಲೆ ಜಗವ ಶಾಸಿಸುವ ನಿಗಮಾ
ವಳಿಗಳಾರ ಶ್ವಾಸದಿಂದು
ಜ್ವಲಿಸಿದುವು ನೀನಾರು ಕೃಷ್ಣನನಱಿವಡಕಟೆಂದ ೧೫

ಹುರುಡಿಸುವಡೆಲೆ ಹೂಹೆ ನಿನ್ನು
ತ್ತರವನಱಿಯೆ ವೃಥಾಭಿಯೋಗ
ಜ್ವರಗೃಹೀತನಲಾ ವಿವೇಕದ ಮಾತು ನಿನಗೇಕೆ
ಬೆರಸಿ ಜಗವನು ಕೊಲುವ ಕಾವನ
ಚರಣರಜದಲಿ ನಿರ್ಮಿಸುವ ಮುರ
ಹರನನಾರೆಂದೆಲವೊ ಬಗುಳುವೆ ಪಾಪಿ ನೀನೆಂದ ೧೬

ಅಱಿವರೇ ಮುನಿವರರು ಸುರವರ
ರಱಿಯರೀ ಕಮಲಜ ಭವಾದಿಗ
ಳಱಿಯರೀ ರಾಜರ್ಷಿ ದೇವ ಋಷಿ ಪ್ರವರರಿವರು
ಅಱಿತೆ ನೀನೀ ಕೃಷ್ಣನಲಿ ಜಗ
ದುಱುವ ದೈವದಲಕಟ ಭಾರಿಯ
ಕೊಱತೆಯನು ಶಿಶುಪಾಲ ನೀ ಸರ್ವಜ್ಞನಹೆಯೆಂದ ೧೭

ಏಕೆ ನಿನಗೀ ಕೃಷ್ಣ ನಾನಿಹೆ
ನಾಕುಳಿಸದಿರು ಧುರಕೆ ನಾನೇ
ಸಾಕು ಸೈರಿಸು ಬಗುಳದಿರು ಬಾಯುಂಟು ನಿನಗೆಂದು
ಓಕರಿಸುತಿವೆ ಕಿವಿಗಳೀ ಜಗ
ದೇಕದೈವದ ನಿಂದೆಯನು ಕಡಿ
ದೋಕುಳಿಯನಾಡಿಸುವಡಿದು ಹೊತ್ತಲ್ಲ ತನಗೆಂದ ೧೮

ಪೊಱಮಡುವಡಿಲ್ಲಿಂದ ಪಾಪಿಯ
ಸಿಱಿವುದಾಪಡೆ ಮೇಣು ಜೀವನ
ತೊಱೆವುದಕಟಕಟಾಯ್ತು ಪುಣ್ಯಶ್ರವಣವಿದು ನವಗೆ
ಉಱುವ ದೈವದ ನಿಂದೆ ನರಕಕೆ
ನೆಱೆಯಲಾಪೆವೆ ನಾವೆನುತ ಮುಂ
ಜೆಱಗ ಸಂವರಿಸುತ್ತ ನಿಂದನು ವೀರ ಸಹದೇವ ೧೯

ಲೇಸೆನುತ ನೆರೆದಖಿಳಜನವಾ
ರಾಸಿ ಕೊಂಡಾಡಿದುದು ಸುರರಾ
ಕಾಶದಲಿ ಮಸಗಿದುದು ಜಯ ಜಯ ಜಯ ಜಯಧ್ವಾನ
ಸೂಸಿದವು ಧರೆಗರಳ ಮಳೆಗಳು
ನೇಸಱಿಳಿವಂದದಲಿ ವಿದುರ ನ
ದೀಸುತ ದ್ರೋಣಾದ್ಯರಿದ್ದರು ಸಾಧು ವಾದದಲಿ ೨೦

ಕೇಳುತೆದ್ದುದು ಸಕಲ ಯಾದವ
ಜಾಲವಾ ಪಾಂಡವರು ವರ ಭೂ
ಪಾಲತತಿ ಹಲ್ಲಣಿಸಿದವು ಹಯರಥಗಜವ್ರಾತ
ಶೀಳು ಶಿಶುಪಾಲಕನ ಬಗುಳುವ
ನಾಲಗೆಯನಕಟಕಟ ನಿಂದೆಯ
ಕೇಳುವರೆ ಹರಹರ ಮಹಾ ಪಾತಕವನಿದನೆಂದು ೨೧

ಬಗುಳುವುದು ಮತ್ಸರದ ನಾಯದು
ಬಗುಳುವುದೆ ಕಲಿಸಿಂಗ ಕರುಣಾ
ಳುಗಳ ದೇವನು ಕೇಳುತಿದ್ದನು ಖಳದುರುಕ್ತಿಗಳ
ಬಗೆವನೇ ಸರ್ವಾತ್ಮಕನು ಮೈ
ದೆಗೆಯದಾತ್ಮಾರಾಮ ವರಯೋ
ಗಿಗಳ ಕುಲದಧಿದೈವವಿದ್ದನು ಬಿಗಿದ ಮೋನದಲಿ ೨೨

ಕೆರಳಿದರು ಪಾಂಡವರು ಸೃಂಜಯ
ರುರವಣಿಸಿದರು ಯಾದವರ ಬಲ
ವಿರದೆ ಮೋಹರಿಸಿದುದು ಕೇಕಯ ಭೂಮಿಪಾಲಕರು
ಬರಸೆಳೆದರಾಯುಧವ ಘನ ಸಾ
ಗರದವೊಲು ಗರ್ಜಿಸುವ ಸುಭಟರ
ಕರಿತುರಗ ನಿಕರದಲಿ ಸಂಕುಳವಾಯ್ತು ನಿಮಿಷದಲಿ ೨೩

ಇರಲು ಕಾಣುತ ಪರಬಲದ ಮೋ
ಹರದ ಸನ್ನಾಹವನು ತಾ ಸಂ
ಗರಕೆ ಕೊಂಡನು ಹರಿಗೆ ಕಡಿತಲೆಗಳನು ಶಿಶುಪಾಲ
ಉರುಳೆಗಡಿದನು ವೈನತೇಯನ
ಧುರಕೆ ಕದ್ರುಕುಮಾರಕರು ಮೋ
ಹರಿಸಿತೇ ತಪ್ಪೇನೆನುತ ಕೆಲಬಲವನೀಕ್ಷಿಸುತ ೨೪

ಏಳಲೆದ್ದುದು ಚೈದ್ಯನೊಡನೆ ನೃ
ಪಾಲಕರು ಕೆಲರೊಂದೆಸೆಗೆ ಭೂ
ಪಾಲಕರು ಕೆಲರಿದ್ದರು ಭಯ ವಿರೋಧ ಭೀತಿಯಲಿ
ಕಾಳಗದ ಕಲಿ ಮನದ ಸುಭಟರ
ಜಾಲವನು ನಿಲಿಸುತ್ತ ಲಕ್ಷ್ಮೀ
ಲೋಲನೆದ್ದನು ತುಡುಕಿ ತೀವ್ರ ಮಹಾಸುದರ್ಶನವ ೨೫

ಸಿಡಿಲವೋಲುರವಣಿಪ ಖಳನನು
ಕೆಡೆಯೆನುತ ಮುರವೈರಿ ಚಕ್ರದ
ಲಿಡಲು ಬಿದ್ದುದು ತಲೆ ಧರಿತ್ರಿಗೆ ಸುರರುಘೇಯೆನಲು
ಎಡಬಲದ ಧರಣೀಶ್ವರರು ಒ·
ಗ್ಗೊಡೆಯೆ ಜೀವವಿನಾಶ ಭಯದಲಿ
ಯೊಡನೆ ಬೆರಸಿದುದಾತನಾತ್ಮಜ್ಯೋತಿ ಕೃಷ್ಣನಲಿ ೨೬

ಬೆಳಬೆಳಗುತಭ್ರದಲಿ ಭುವನಾ
ವಳಿಗಳೀಕ್ಷಿಸಲಾ ಮುರಾಂತಕ
ನೊಳಗೆ ಬೆರಸಿ ವಿಶಾಪವಾದುದು ಮೂಱು ಜನ್ಮದಲಿ
ಸಲೆ ತದಂಘ್ರಿಧ್ಯಾನಜಲದಲಿ
ಮುಳುಗಿ ಮೇಣೊಲಿದಚ್ಯುತಾಂಘ್ರಿಗೆ
ನಿಲಿಸ ಬಲ್ಲಡೆ ಭಾವವೇ ಭವಮೋಕ್ಷಕರವೆಂದ ೨೭

ಅಂಜದಿರಿ ನೃಪರೆನುತಭಯಕರ
ಕಂಜವನು ನೆಗಹಿದನು ನತಪವಿ
ಪಂಜರನು ಮುರವೈರಿ ಸಂತವಿಸಿದನು ಪರಿಜನವ
ರಂಜಿಸಿದುದಾಸ್ಥಾನ ಭೀತಿಯ
ಮಂಜು ಹರೆದುದು ಮತ್ತೆ ಭೂಪರ
ಪುಂಜವೆಸೆದುದು ವಿಪ್ರ ಋಷಿ ದೇವರ್ಷಿ ಜನಸಹಿತ ೨೮

ಸಭೆಯ ಪೂಜಿಸಿದನು ಮಹೀಪತಿ
ವಿಭವದಲಿ ಸಂತುಷ್ಟಿನಡೆದುದು
ತ್ರಿಭುವನದ ಜನವವನಿಪನ ಸನ್ಮಾನದಾನದಲಿ
ಪ್ರಭುತನವನೇನೆಂಬೆನಾ ಕೌ
ಸ್ತುಭಧರನ ದಾಸರಿಗೆ ಸಲೆ ದು
ರ್ಲಭವದಾವುದು ಚಿತ್ರವಾಯ್ತಧ್ವರ ಮಹಾವಿಭವ ೨೯

ಮುನ್ನ ನಳ ನಹುಷಾದಿ ಧರಣಿಪ
ರುನ್ನತಿಕೆ ಹೋಲುವುದೆ ಧರ್ಮಜ
ರುನ್ನತೈಶ್ವರ್ಯವನು ಮಾಡಿದರುಂಟೆ ವರಮುಖವ
ಧನ್ಯರಾರೋ ಪಾಂಡುಸುತರಿಂ
ದನ್ಯರೀ ತ್ರಿಜಗದಲೆನುತ್ತ ಮ
ಹಾರ್ಣವದ ಘೋಷದಲಿ ಹೊಗಳುತ್ತಿರ್ದುದಖಿಳಜನ ೩೦

ಬಳಿಕ ಮಾಡಿದನವಭೃತದ ಮಂ
ಗಳ ಮಹಾಮಜ್ಜನವನಾ ಮುನಿ
ಕುಲ ನೃಪಾಲಕದಂಬ ಬಾಂಧವ ಭೃತ್ಯಜನಸಹಿತ
ಉಲಿವ ದುಂದುಭಿ ಶಂಖ ಕಹಳಾ
ವಳಿ ಮೃದಂಗೋತ್ಕರ ಮಹಾರವ
ದೊಳಗೆ ಸುರನದಿಯಮಳ ಪುಣ್ಯಪವಿತ್ರ ಜಲದೊಳಗೆ ೩೧

ಸಂದಣಿಸಿದುದು ಕೂಡೆ ಭೂಪರ
ವೃಂದವಾ ಭೂಪಾಲರರಸಿಯ
ರಂದಣಂಗಳು ಕೂಡೆ ಸುಭಟವ್ರಾತವುರವಣಿಸಿ
ಸಂದ ಗಜರಥ ತುರಗ ಪತ್ತಿಗ
ಳಿಂದ ನೆಲನಿಟ್ಟಡೆಯೆನಲು ಜನ
ವೃಂದ ಕವಿದುದು ವಸ್ತ್ರಭೂಷಣನಿಕರ ರಂಜಿಸಲು ೩೨

ಕುಣಿವ ಹಾಡುವ ಹೊಗಳುವರ ಸಂ
ದಣಿ ಸುಗಾಯಕ ಪಾಠಕರ ಸಂ
ದಣಿಗಳೆತ್ತಿದ ಕೈಗುಡಿಯ ನಡೆ ತೋರಣಾವಳಿಯ
ಅಣೆವ ನಡೆಚಪ್ಪರದ ಗಗನಾಂ
ಗಣಕೆ ನೆಗಹಿದ ಸತ್ತಿಗೆಯ ಸಂ
ದಣಿ ಮಹಾದ್ಭುತವೆನಲು ಮೆಱೆದುದು ಯಾತ್ರೆ ನೃಪವರನ ೩೩

ಮತ್ತೆ ಕವಿದುದು ಮೇಲೆ ಸುಭಟರ
ಮುತ್ತಿಗೆಯ ಮೂಡಿಗೆಯಲಾ ಪುರು
ಷೋತ್ತಮನ ರಾಣಿಯರ ದಂಡಿಗೆಗಳು ಸಗಾಢದಲಿ
ಕಿತ್ತು ಧರೆ ನಡೆವಂತೆ ದಶದಿಗು
ಭಿತ್ತಿಗಳನಾಕ್ರಮಿಸಿ ಹಯರಥ
ಮತ್ತಗಜಘಟೆಗಳಲಿ ವಾರಾಂಗನೆಯರುರವಣಿಸಿ ೩೪

ನೂಕಿದವು ದುಂಡಿಗೆಗಳಾ ಕುಂ
ತೀಕುಮಾರರ ಮತ್ಸ್ಯ ಮಾಳವ
ಕೇಕಯ ದ್ರುಪದಾದಿ ಪೃಥ್ವೀಶ್ವರರ ರಾಣಿಯರ
ಲೋಕ ಹದಿನಾಲ್ಕರ ಜನವನವ
ದೇಕದೇಶದಲಾಯ್ತು ಲಕ್ಷಿಸ
ಲೋಕುಳಿಯನಾಡಲಿಕೆ ನೆರೆದುದು ನೃಪವಧೂನಿವಹ ೩೫

ಬಾಲೆಯರು ತವ್ಮೊಳಗೆ ಗೋರಸ
ತೈಲ ಕುಂಕುಮ ಗಂಧಜಲದಲಿ
ಮೇಲೆ ಹೊಯ್ದಾಡಿದರು ಸಾಂದ್ರ ಹರಿದ್ರದಲಿ ನರರ
ಲೀಲೆ ಮಿಗೆ ಮೈದುನರ ಸಖಿಯರ
ಮೇಲೆ ಸಲೆ ಸಂಬಂಧಿ ಪೃಥ್ವೀ
ಪಾಲರರಸಿಯರೊಡನೆ ಯದುಪಾಂಡವರ ನಿವಹ ೩೬

ವಲಯ ನೂಪುರ ಹಾರ ಮಣಿ ಕುಂ
ಡಲ ವರಾಂಬರಕಲಿತ ಮಣಿ ಮೇ
ಖಲೆಗಳಲಿ ದಿವ್ಯಾನುಲೇಪನ ವಿದಿತವಿಭವದಲಿ
ಚಲದಳಕನಿಕರದಲಿ ಘನಕುಚ
ಕಳಶಭಾರಂಗಳಲಿ ಬಡನಡು
ಬಳುಕುಲಾಡಿದರೋಕುಳಿಯನೊಪ್ಪಿರೆ ವಧೂನಿವಹ ೩೭

ಒಡನೆ ಹೊಯ್ದಾಡಿದನು ನಗುತಾ
ಮಡದಿಯರು ಹದಿನಾಱು ಸಾವಿರ
ದೊಡಲು ನನೆಯಲು ಸಾಂದ್ರಕುಂಕುಮಗಂಧತೈಲದಲಿ
ಬಿಡದೆ ಸುರರಭ್ರದಲಿ ಹೊಗಳಲು
ಪೊಡವಿಪತಿಗಳ ಮೇಲೆ ಮೂಜಗ
ದೊಡೆಯನಾ ಮುರವೈರಿ ಪಾಂಡುಕುಮಾರಕರು ಸಹಿತ ೩೮

ಭಾಪೆನುತ ಸುರಸತಿಯರೀಕ್ಷಿಸು
ತಾ ಪರಮಪೂರುಷನ ವರ ಗುಣ
ರೂಪಲೀಲಾ ವಿಭವವನು ಮನುಮಥನ ಶರಹತಿಗೆ
ಧೂಪಿಸುತ ಮೈಮಱೆದರೆನಲೆಲೆ
ಭೂಪ ಮಿಕ್ಕ ಮನುಷ್ಯ ಸತಿಯರ
ತಾಪವನು ತಾನೇನ ಬಣ್ಣಿಸಬಹುದು ಕೇಳೆಂದ ೩೯

ನನದ ಸೀರೆಗಳೊಡಲಹತ್ತಿದ
ವನುಪಮಾಂಗನೆಯರಿಗೆ ಮೆಱೆದವು
ಘನಕುಚೋರು ನಿತಂಬ ಬಿಂಬಂಗಳು ವಿವಸ್ತ್ರದಲಿ
ವನಿತೆಯರು ನೋಡುವ ಪುರಾತ್ಮರ
ಮನಕೆ ಸಂಕ್ಷೋಭವನು ಮಾಡುತ
ಜನಿತ ಪರಮೋತ್ಸವದಲಾಡಿದರೆಸೆಯಲೋಕುಳಿಯ ೪೦

ಜನನಿವಹ ಸಹಿತಮರನದಿಯಲಿ
ಜನಪನಾಚರಿಸಿದನು ವರ ಮ
ಜ್ಜನವನಾ ಯಾದವ ನೃಪಾಲ ಕದಂಬದುಬ್ಬರದ
ಜನಸಹಿತ ಮೂಕಾಂಧಜಡ ವಾ
ಮನ ಮಹಾಪಾತಕಿಗಳತಿ ಪಾ
ವನತೆಯಲಿ ಸಂಪನ್ನ ಸುಕೃತಿಗಳಾದರಾ ಕ್ಷಣಕೆ ೪೧

ಮಿಂದು ದಿವ್ಯಾಂಬರ ವಿಭೂಷಣ
ವೃಂದವನು ನೆಱೆ ಧರಿಸಿ ಮಾಗಧ
ವಂದಿಗಳಿಗೊಲಿದಿತ್ತರರ್ಥಾಂಬರ ವಿಭೂಷಣವ
ಇಂದುಮುಖಿಯರು ಸಕಲ ಭೂಪರ
ವೃಂದವೇನೆಂಬೆನು ಮಹಾದ್ಭುತ
ದಂದವನು ಸಂಪನ್ನವಾದುದು ಸಕಲ ಜನನಿವಹ ೪೨

ಬಂದರರಮನೆಗಿರದೆ ವೊಳಗುವ
ದುಂದುಭಿಯ ಕಹಳೆಗಳ ಸೂತರ
ವಂದಿಗಳ ಮಾಗಧರ ವೀಣಾ ವೇಣುರವದೊಳಗೆ
ಸಂದ ಸುರ ಗಂಧರ್ವ ಕಿನ್ನರ
ವೃಂದ ಕೈವಾರಿಸಲು ಕುಂತೀ
ನಂದನರು ನಿಜವಿಭವದಲಿ ಭೂಪಾಲ ಜನಸಹಿತ ೪೩

ಬಳಿಕ ಕಳುಹಿಸಿಕೊಂಡುದಾ ಸಂ
ಕುಳದ ಜನ ಸನ್ಮಾನ ದಾನಂ
ಗಳಲಿ ಪೂಜಿತರಾಗಿ ಕೃಷ್ಣಪದಾಬ್ಜಯುಗಳವನು
ಒಲಿದು ಮನದಲಿ ಭಾವಿಸುತ ಮಂ
ಗಳ ಮನೋಹರಮೂರ್ತಿಯಲಿ ಮನ
ನಿಲಲು ಸುರಮುನಿಪಿತೃನಿಕರಗಂಧರ್ವ ಜನಸಹಿತ ೪೪

ಹೊಗಳುತೈದಿದರಾಯಲಕೆ ಮೂ
ಜಗದ ಜನ ತವತವಗೆ ಹರಿಪದ
ಯುಗಳದಾಸರೆನಿಪ್ಪ ಪಾಂಡುಕುಮಾರಕರ ಸಿರಿಯ
ಮಿಗೆ ಚತುರ್ದಶ ಭುವನದಲಿ ಕೀ
ರ್ತಿಗೆ ನಿವಾಸಕವಾಯ್ತು ಹರಹರ
ಬಗೆವಡಾವುದು ಚಿತ್ರವಾ ಗೋವಿಂದನೊಲಿದರಿಗೆ ೪೫

ಬಳಿಕ ಧರ್ಮಜನಖಿಳ ಬಾಂಧವ
ಬಲ ನೃಪಾಲರ ಮೊತ್ತವನು ನೆಱೆ
ಕಳುಹದಾ ಕೌರವರನಾ ಪಾಂಚಾಲ ಸೃಂಜಯರ
ಬಳಗವನು ಕೃಷ್ಣಾಂಘ್ರಿವಿರಹಾ
ಕುಳಿತಹೃದಯನು ದಿನಹಲವನತಿ
ಗಳೆವುತಿರ್ದನು ಬಿಡಲಱಿಯದಧಿಕಾನುರಾಗದಲಿ ೪೬

ಒಂದು ದಿನ ಕೌರವನು ಕುಂತೀ
ನಂದನನ ನವರತ್ನ ನಿರ್ಮಿತ
ಮಂದಿರದಲಸುರಾರಿಯಿರೆ ಹದಿನಾಖು ಸಾವಿರದ
ಇಂದುಮುಖಿಯರ ಮೇಳದಲಿ ಯಮ
ನಂದನನನುಜ ಸತಿಸಹಿತ ಸಾ
ನಂದದಲಿ ಕುಳ್ಳಿರಲು ಕಂಡನು ಬಹಳ ವಿಭವದಲಿ ೪೭

ಕ್ಷಿತಿಪವಂದಿತಚರಣನಿರಲ
ಚ್ಯುತನ ಬಲವಂಕದಲಿ ವಾಮದ
ಲತುಳಬಲ ಭೀಮಾರ್ಜುನಾಮಳಯಮಳರಿರಲೊಲಿದು
ಸತಿಶಿರೋಮಣಿ ದ್ರುಪದಸುತೆ ಭೂ
ಪತಿಯ ವಾಮಾಂಕದಲಿ ಕರತಳ
ಗತ ಸಿತವ್ಯಜನದಲಿ ಭಜಿಸುತ್ತಿರಲು ನೆಜೆ ಕಂಡ ೪೮

ಮುಂದೆ ದ್ರುಪದ ವಿರಾಟ ಸೃಂಜಯ
ವೃಂದವಾ ಕೈಕಯ ವಿದರ್ಭ ನೃ
ಪೇಂದ್ರರಿರಲೋಲಗದಾಪ್ತ ಪಸಾಯ್ತ ಮಂತ್ರಿಗಳ
ಸಂದಣಿಯಲೋಲಗಿಸಿಕೊಳುತ ಮು
ಕುಂದದಾಸ ನಶೇಷ ಬಾಂಧವ
ವೃಂದದಲಿ ರಂಜಿಸಿದನಮರಾಧಿಪನನತಿಶಯಿಸಿ ೪೯

ಸುಳಿಗುರುಳ ಸೊಬಗಿಯರು ನಿಡುಗಂ
ಗಳ ನಿತಂಬಿನಿಯರು ಕುಚದ್ವಯ
ಕಲಶಭಾರದ ಕಾಂತೆಯರು ಸುಸ್ಮಿತಮುಖಾಬ್ಜೆಯರು
ಸೆಳೆನಡುವಿನಬಲೆಯರು ನೂಪುರ
ವಳಯ ಹಾರಾವಳಿಯ ರಚನೆಯ
ಲಲನೆಯರು ರಂಜಿಸಿದರವನೀಶ್ವರನ ಬಳಸಿನಲಿ ೫೦

ಎತ್ತಿದಭ್ರಾಂಗಣದ ಮುತ್ತಿನ
ಸತ್ತಿಗೆಯ ಸಂದಣಿಯ ಚಾಮರ
ದೊತ್ತುಗಳ ಮಣಿಕನಕದಂಡದ ಜಡಿವ ಝಲ್ಲರಿಯ
ಮುತ್ತಿಗೆಯ ಮೂಡಿಗೆಯಲೆಸೆವ ವಿ
ಯತ್ತಳದ ರವಿಕಿರಣ ಕಾಂತಿಯ
ನೆತ್ತಿ ಬಿಸುಡುವನೂನಕಾಂತಿಯಲೆಸದಿರಲು ಕಂಡ ೫೧

ಸಾರಸಂಗ್ರಹವೋ ಚತುರ್ದಶ
ಭೂರಿ ಭುವನಾವಳಿಯ ಲಕ್ಷ್ಮಿಯೊ
ವಾರಿಧಿಯೊ ವಿಶ್ವಾಮರಾಧೀಶ್ವರರ ವೈಭವದ
ಪಾರಮೇಷ್ಠ್ಯದ ಪರಮ ತೇಜದ
ಮೇರೆಯೋ ಮಝು ಯೆನುತ ಬಂದನು
ದೂರದಿಂದೀಕ್ಷಿಸುತ ಮಯನಿರ್ಮಿತ ಮಹಾಸಭೆಯ ೫೨

ಸಕಲ ಪೃಥ್ವೀಶ್ವರರ ಮಣಿಮಯ
ಮಕುಟ ಕಾಂತಿಗಳೆಸೆಯಲಬುಜಾಂ
ಬಕನ ದಕ್ಷಿಣವಾಮ ಭಾಗಂಗಳಲಿ ಸಂದಣಿಸಿ
ಪ್ರಕಟಕೀರ್ತಿಗಳಿರಲು ಧರ್ಮಾ
ತ್ಮಕರವರ ವನಿತಾಪ್ತನಾಯಕ
ನಿಕರವಿರಲೀಕ್ಷಿಸುತ ಕೌರವನು ಸಭೆಗೆ ೫೩

ಪಾಡುವರ ಪೊಗಳುವರ ನೃತ್ಯವ
ಮಾಡುವಪ್ಸರಸೆಯರ ಮಾಗಧ
ಬೀಡುಗಳ ಬಹುದೇಶ ಭಾಷಾನ್ವಿತ ಜನಾವಳಿಯ
ರೂಢಿಸಿದ ಸುರಪತಿಯ ವಿಭವವ
ನೇಡಿಸುವ ಸಂಪನ್ನ ವಿಭವವ
ನೋಡುತನುಜರು ಸಹಿತ ವಿಸ್ಮಿತನಾಗುತೈತಂದ ೫೪

ರಾಜಸೂಯಕ್ರತುವರವನಾ
ರಾಜಮಾನೈಶ್ವರ್ಯವನು ಸುರ
ರಾಜತೇಜದ ಘನತೆಯನು ರಾಜಾಧಿರಾಜನಲಿ
ಆ ಜನಾರ್ದನನೊಲವನೀಕ್ಷಿಸು
ತೋಜೆಗೆಟ್ಟು ಮನೋವಿಷಾದಕೆ
ಭಾಜನನು ತಾನಾಗುತೈತಂದನು ಸುಯೋಧನನು ೫೫

ಆವುದರಿಂದೆಲೆ ಭೂಪ ಹರಿಪದ
ಸೇವಕರಿಗಿದು ಘನವೆ ತುಷವ
ಲಾ ವಿರಿಂಚಿ ಮಹೇಂದ್ರಮುಖ್ಯಾಮರರ ಪದವಿಗಳು
ಜೀವಭೂತರು ಪಾಂಡವರು ರಾ
ಜೀವಲೋಚನನಗೆನಲು ಬಣ್ಣಿಪ
ನಾವನಾ ನಿತ್ಯಾತ್ಮ ಕೃಷ್ಣನುದಾರ ಲೀಲೆಗಳ ೫೬

ಎಂಭತ್ತನೆಯ ಸಂಧಿ ಮುಗಿಯಿತು.

# ಎಂಭತ್ತೊಂದನೆಯ ಸಂಧಿ

ರಾಜಸೂಯಾಧ್ವರವಿಭವವಿ
ಭ್ರಾಜಮಾನೈಶ್ವರ್ಯದಲಿ ನತ
ರಾಜಮೌಳಿ ಯುಧಿಷ್ಠಿರನು ರಂಜಿಸಿದನವನಿಯಲಿ

ಜನಪ ಕೇಳಿಂತೆಸೆವ ಯಮನಂ
ದನನ ಸಭೆಯೊಪ್ಪವನು ನೋಡು
ತ್ತನುಜ ಶತಪರಿವಾರದಲಿ ಸಂಪನ್ನವಿಭವದಲಿ
ಮನದಳಲು ಮಿಗಲಂದು ದುರ್ಯೋ
ಧನನು ನಡೆತರುತಾ ಸಭಾಗತ
ಜನದ ನಗೆಗೆಡೆಯಾದ ಹದನನು ಮತ್ತೆ ಕೇಳೆಂದ ೧

ಇಂದ್ರನೀಲದಲೆಸೆವ ನೆಲಗ
ಟ್ಟೊಂದೆಡೆಯಲಿರೆ ಸಹಜ ಸಲಲಿವ
ದೆಂದು ಸಂವರಿಸಿದನು ಸೆಱಗನು ನಕ್ಕುದಖಿಳಜನ
ಮುಂದೆ ಪುಷ್ಕರಿಣಿಯನು ನೆಲಗ
ಟ್ಟೆಂದು ಬಿದ್ದನು ತೋದ ವಸನದ
ಲಂದು ನಗೆಗೆಡೆಯಾದನಾ ನೋಡುವ ಸಭಾಸದರ ೨

ಜಱಿದು ನಗುವರನಾ ಯುಧಿಷ್ಠಿರ
ಧರಣಿಪತಿ ದಿವ್ಯಾಂಬರಂಗಳ
ತರಿಸಿ ಕೊಡಿಸಿದನಮಳರತ್ನವಿಭೂಷಣಾದಿಕವ
ಕುರುಪತಿಗೆ ಸಾಮದಲಿ ಬಳಿಕಾ
ದುರುಳ ದುರ್ಯೋಧನನು ಮನದಲಿ
ಪರಿಭವದ ಭವಣಿಗೆಯ ಭಾವವಿಭೇದವನು ತಳೆದ ೩

ಬಿದ್ದು ನೋಯನು ನೃಪತಿ ನೀರೊಳು
ಬಿದ್ದು ನೊಂದನು ಧರ್ಮನಂದನ
ನಿದ್ದೆಸೆಯ ವನಿತೆಯರ ಹಾಸ್ಯಮಹಾರವಂಗಳಿಗೆ
ಉದ್ದಿದನು ಮನದುತ್ಸವದ ಸೌ
ಹಾರ್ದವನು ಬಾಂಧವರ ಹೊರೆಯನು
ಹೊದ್ದದತ್ತಲೆ ಮರಳಿ ಕೌರವನೃಪತಿ ಹೊಱವಂಟ ೪

ಅಕ್ಕಟಕ್ಕಟ ನೃಪಶಿರೋಮಣಿ
ಮಕ್ಕಳಾಟಿಕೆ ನಿನ್ನ ಘನತೆಗೆ
ತಕ್ಕುದಲ್ಲವೆನುತ್ತ ಭೂಪನ ಮುಂಜೆಱಗ ಹಿಡಿದು
ನಕ್ಕವನು ತಾನೇತಕೀ ಹೆ
ಮ್ಮಕ್ಕಳಲಿ ಗುಣದೋಷ ಸಂಗ್ರಹ
ಸಿಕ್ಕದಿರು ನೀನೆನುತ ಧರ್ಮಜ ಕಳಿದನವನಿಪನ ೫

ಧರಣಿಪನ ನುಡಿಗೇಳದತಿ ದು
ರ್ಮರುಷದಲಿ ನೃಪನಿರಲು ಮುರರಿಪು
ಕರೆಸಿದನು ಕೃತವರ್ಮ ಸಾತ್ಯಕಿಮುಖ್ಯರನು ಕಳುಹಿ
ಉರಿವುತತಿರೋಷದಲಿ ಕೌರವ
ಧರಣಿಪತಿ ಕೈಕೊಳ್ಳದನಿಬರ
ನುರವಣಿಸಿ ಹೊಱವಂಟನೋಲಗದಿಂದ ನಿಜಗೃಹಕೆ ೬

ಅಕಟಕಟ ವಿಪರೀತವೆನುತಾ
ಸಕಲ ಜನ ಮಱುಗಿದುದು ನೃಪಕುಲ
ನಿಕೃತಿಗಿದು ಮೊದಲಾಯ್ತಲಾ ಹಾಯೆನುತ ತವತವಗೆ
ವಿಕರಿಸುವ ಮನದೊಳಗೆ ದುಗುಡವ
ಮಕರಿಸಿದುದ ಕಾಣುತಬುಜಾಂ
ಬಕನು ನಸುನಗುತುಸುರದಿರ್ದನು ಗೂಢಭಾವದಲಿ ೭

ಅರಸ ಕೇಳಾಕ್ಷಣದಲಿಳಿದುದು
ಪರಮತೇಜದ ಪುಂಜವಾ ಭೂ
ವರನ ಸಭೆಯಗ್ರದಲಿ ನಾರಾಯಣ ಮಹಾಧ್ವಾನ
ನಿರುತ ಕೇಳಲು ಬಂದುದೆದ್ದುದು
ನೆರವಿ ನಾರದಮುನಿಪನೆಂದಱ
ದಿರದೆ ಸಿಂಹಾಸನವನಿಳಿದುದು ಸಕಲ ನೃಪನಿಕರ ೮

ಇದಿರುಗೊಂಡನು ಪಾಂಡುಪುತ್ರರ
ವಿದಿತ ಸಮ್ಮೇಳನದಲಿ ಮುರರಿಪು
ಮುದದಲಾ ಮುನಿಕುಲ ಮಹೋತ್ತಮನು ಮಿಹಿರಸನ್ನಿಭನ
ಪದದಲೆಱಗಿ ಪರಾರ್ಘ್ಯಮಣಿ ಪೀ
ಠದಲಿ ಪಾವನಕೀರ್ತಿ ಕುಳ್ಳಿರಿ
ಸಿದನು ಭಕ್ತಸ್ನೇಹ ಸಂಸಾರಿಕನು ನಲವಿನಲಿ ೯

ಹರ ವಿರಿಂಚಿ ಮುನೀಂದ್ರ ಚಿಂತಿತ
ಚರಣನಾ ಮುನಿವರನ ಚರಣಾಂ
ಬುರುಹದಲಿ ಮೈಯಿಕ್ಕಿ ಪುನರಪಿ ಪಾಂಡವರು ಸಹಿತ
ಪರಮ ಸಂತೋಷದಲಿ ಪೂಜಿಸಿ
ಪರಮ ಭಾಗವತೋತ್ತಮನನಾ
ನೆರೆದ ಸಭ್ಯರುಸಹಿತ ಸತ್ಕರಿಸಿದನು ಮುರವೈರಿ ೧೦

ಬಳಿಕ ಧರ್ಮಜನಾ ಮುನೀಂದ್ರನ
ಲಲಿತಪಾವನ ಚರಣಯುಗದಲಿ
ಕಳೆವರವನೀಡಾಡಿ ಸ್ವಾರ್ಘ್ಯ ಸ್ವಾಗತೋಕ್ತಿಯಲಿ
ಒಲಿದು ಪೂಜಿಸಿ ಪುಳಕಜಲದಲಿ
ಮುಳುಗಿ ಭಾಗವತಾಂಗ ಸಂಗದ
ಸುಲಭ ಸುಖಸಾಮ್ರಾಜ್ಯ ಸಂವೃತನಾಗುತಿಂತೆಂದ ೧೧

ಧನ್ಯರಾರೆನ್ನಂತೆ ಜಗದಲಿ
ಮಾನ್ಯರಾರೆಲೆ ಮುನಿಪ ಬಹಳ ಕೃ
ಪಾರ್ಣವನೆ ಸುರವರ ಸಮಾರಾಧಿತಪದಾಬ್ಜವಿದು
ತನ್ನ ಮಾಂಸಾಕ್ಷಿಗಳಿಗತಿ ಸಂ
ಪನ್ನವಾದುದು ದರುಶನಕೆ ವೈ
ದುರ್ನಿರೀಕ್ಷ್ಯವಿದೀ ಮನುಷ್ಯರಿಗೆಂದನವನೀಶ ೧೨

ಮುನಿಪ ನಿಮ್ಮಡಿಯಾಜ್ಞೆಯಲಿ ಸಂ
ಜನಿತವಾದುದು ರಾಜಸೂಯದ
ಘನತರಾಧ್ವರ ವಿಭವವಲ್ಲದದಾರು ತಾನಿದಕೆ
ಘನಕೃಪಾನಿಧಿ ನೀನಲಾ ಯೆನು
ತನುಪಮಾಮರಮುನಿಯ ಪದಯುಗ
ವನಜವನು ಮಕುಟದಲಿ ಧರಿಸಿದನಧಿಕವಿನಯದಲಿ ೧೩

ಆರು ಮತ್ತೀ ವರ್ತಮಾನ ಮ
ಹೀರಮರಣರೊಳಗಗ್ಗಳೆಯರತಿ
ವೀರರೆಂದೆನಿಸಿದ ಮಹೀಪತಿಗಳು ಧರಿತ್ರಿಯಲಿ
ಭೂರಿಕೀರ್ತಿ ಭುಜಬಲಾನ್ವಿತ
ರಾರು ಕರುಣಿಸು ಮುನಿಪ ಸಲೆ ಸಂ
ಚಾರಿಗಳಲಾ ನೀವು ಭುವನಚತುರ್ದಶದಲೆಂದ ೧೪

ಎಂದಡುರುಗುಣಕುಮುದಕುಲ ಪೂ
ರ್ಣೇಂದುವಿನ ವರ ವಾಕ್ಸುಧಾನಿ
ಷ್ಯಂದವನು ಸವಿಸವಿದು ಕರ್ಣಪುಟಂಗಳಲಿ ನಲಿನಲಿದು
ಕಂದೆಱೆದು ಮುನಿನಾಥನೊಯ್ಯನೆ
ಮಂದಹಾಸದಲಚ್ಯುತಾಂಘ್ರಿ
ದ್ವಂದ್ವಗತಚಿತ್ತದಲಿ ಮಾತಾಡಿದನು ನೃಪನೊಡನೆ ೧೫

ಕೇಳು ಧರ್ಮಜ ಕೌರವಾನ್ವಯ
ಮೌಳಿರತ್ನವೆ ಪೂರ್ವ ಪೃಥ್ವೀ
ಪಾಲರಲಿ ನಿನ್ನಂತೆ ಧನ್ಯರದಾರು ಸುರವರರ
ಓಲಗಕೆ ವೈಗೊಡದ ಲಕ್ಷ್ಮೀ
ಲೋಲನೇ ನಿನ್ನಂಘ್ರಿಯುಗಳವ
ನೋಲಗಿಸುವನಲಾ ನಿರಂತರವೆಂದನಾ ಮುನಿಪ ೧೬

ಧಾರುಣೀಪತಿಗಳಲಿ ಶೌರ್ಯೋ
ದಾರರಾರೆಲೆ ತಂದೆ ಸಂಗರ
ವೀರಧೀರರು ಕೃಷ್ಣ ವಿಕ್ರಮದಾವದಗ್ಧರಲ್ಲೈ
ಭೂರಿ ಭೂಭಾರಾಘಕುಲಸಂ
ಹಾರವಲ್ಲವೆ ಕೃಷ್ಣಪದಯುಗ
ಚಾರು ಲೀಲಾಚರಿತವೆಂದನು ಮುನಿ ಮಹೀಪತಿಗೆ ೧೭

ಓರ್ವನೇ ಭೂಪರೊಳು ವಿಕ್ರಮ
ಗರ್ವಿತನು ಸಾಲ್ವಾವನೀಪತಿ
ದುರ್ವಿನೀತರ ದೇವನೀ ಭೂತಳದ ರಾಯರಿಗೆ
ಸರ್ವರಿಗೆ ಬಲುಗೈ ಸಮೃದ್ಧ ಚ
ತುರ್ವಲಾನ್ವಿತನುರು ಕೃಪಾನಿಧಿ
ಶರ್ವನನು ಭಜಿಸಿದನು ಕಾಮಿಸಿ ಯಾದವರ ಜಯವ ೧೮

ಬ್ರಹ್ಮದತ್ತತನೂಜನತಿದು
ಷ್ಕರ್ಮರತನಾ ಹಂಸಡಿಬಿಕರ
ತಮ್ಮನಾತ್ಮ ಭ್ರಾತೃಪಿತೃ ಮರಣದಲಿ ಕಳವಳಿಸಿ
ಬ್ರಹ್ಮಮೂರುತಿ ಕೃಷ್ಣನಲ್ಲಿ ವಿ
ಕರ್ಮವನು ನಿಶ್ಚಯಿಸಿ ಮಾರಣ
ಕರ್ಮವನು ತೊಡಗಿದನು ನಿರ್ಯಾದವವೆನಿಸಲೀ ಜಗವ ೧೯

ಮಾಸ ಹನ್ನೆರಡಾಯ್ತು ವಾಯು
ಗ್ರಾಸದಲಿ ದುರ್ಮತಿಗೊಲಿದು ಕೈ
ಲಾಸವಾಸಿ ಮಹೇಶನಿತ್ತನು ವರವನವನಿಪಗೆ
ಭಾಸುರವೆನಿಪ್ಪೊಂದು ಸೌಭ ಮ
ಹಾಸನವನೀ ಯಾದವಾನ್ವಯ
ಭೀಷಣವೆನಿಪ್ಪುದನು ಕಾಮುಗವೆನಿಪ ಪುಷ್ಕರವ ೨೦

ತಕ್ಕ ವರವನು ನೆಱೆ ಪಡೆದು ಹುಡಿ
ಮುಕ್ಕನೆದ್ದನು ಹರನಡಿಗೆ ವೈ
ಯಿಕ್ಕಿ ಮಿಱುವ ಶೌರ್ಯ ಸಾಹಸದುಬ್ಬಿನಲಿ ನಲಿದು
ಸೊಕ್ಕಿ ಯಾದವರೊಡನೆ ಸಂಗ್ರಾ
ಮಕ್ಕೆ ಜೋಡಿಸಿ ಬಲವನವನೀ
ಚಕ್ರದಲಿ ಸನ್ನದ್ಧನಾಗಿಹನೆಂದನಾ ಮುನಿಪ ೨೧

ಎಂದಡಾ ಯಮಸೂನು ಮನದಲಿ
ನೊಂದು ಶಂಕಿಸಿ ನೋಡಿದನು ಗೋ
ವಿಂದನಾನನಕಮಲವನು ಕಡೆಗಣ್ಣಲದನಱಿದು
ಮಂದಹಾಸದಲಸುರರಿಪು ಯಮ
ನಂದನನ ಮೊಗ ನೋಡಿ ತಪ್ಪೇ
ನೆಂದು ಬಗೆಯದೆ ಸುಮ್ಮನಿದ್ದನು ಲೆಕ್ಕಿಸದೆ ಖಳನ ೨೨

ಈತೆಱದಲಿರುವ ಮಹಾತ್ಮರು
ನೀತಿಯಿಂದ ವಿಪತ್ತಿನಲಿ ನಿ
ರ್ಭೀತರಾಗಿಹುದಧಿಕತರ ದುಃಖದಲಿ ಲೆಕ್ಕಿಸದೆ
ಪ್ರೀತಿಯನು ಮಾಡದೆ ಮಹಾ ವಿ
ಖ್ಯಾತ ವಿಷಯ ಸುಖೋಪಭೋಗದ
ರೀತಿ ಸಂಪತ್ತಿನಲಿ ಸಮಮತಿಯಹುದು ಕೇಳೆಂದ ೧೩

ಇಂತು ಭಕ್ತಪ್ರೇಮ ಕರುಣಾ
ಕ್ರಾಂತಮತಿ ಸುರಮುನಿನಿಕರ ಸಂ
ಚಿಂತಿತಾಂಘ್ರಿಸರೋಜನಿರೆ ಕುಂತೀಕುಮಾರಕರ
ಅಂತಿಕದಲಾ ಸಾಲ್ವನತ್ತಲು
ಚಿಂತಿಸಿದನಾ ಚೈದ್ಯ ಮಾಗಧ
ರಂತ್ಯವನು ವರ ರಾಜಸೂಯದ ಸಂಪದವ ಕೇಳಿ ೧೪

ಯಾದವರು ಪಾಂಡವರ ವಿಭವ
ಕ್ಕಾದಿಭೂತರು ರಾಜಸೂಯ ಮ
ಹೋದಯಕೆ ಮೇಣಾರು ಪಾಂಡುಕುಮಾರರಾನಿರಲು
ತೀದುದಿನ್ನೇನವರ ಸಿರಿ ಮು
ನ್ನಾದುದಾಗಲಿ ಕೃಷ್ಣನಸುವನು
ಸೇದಿದಡೆ ಬಳಿಕೆನುತ ನಿಶ್ಚಯಿಸಿದನು ಮನದೊಳಗೆ ೧೫

ಕೇಳಿ ಖಳನಾ ಕೃಷ್ಣನಿಲ್ಲದ
ವೇಳೆಯಲಿ ಗೆಲಬಹುದೆನುತ್ತವೆ
ಧಾಳಿಯಿಟ್ಟನು ಸಾಲ್ವನೃಪನಾ ದ್ವಾರಕಾಪುರಕೆ
ಸಾಲ ತೋರಣನಿಕರವನು ವನ
ಜಾಲವನು ಮುಱಿ ಮುಱಿದು ಪುರವನು
ಧೂಳಿಪಟವನು ಮಾಡಿದನು ನಿಮಿಷಾರ್ಧಮಾತ್ರದಲಿ ೧೬

ಕಂಡು ಸಾಲ್ವ ನೃಪಾಲ ಸೇನಾ
ಮಂಡಲವನವಸಾನದಂದಿನ
ಖಂಡಸಾಗರದಂತೆ ಮೊಳಗುವ ಸುಭಟನಿಕರದಲಿ
ಗಂಡುಗೆಡುವ ಭಟಾಳಿಯನು ಗೋ
ಳುಂಡೆಗೊಂಡಭಿಜನಕಭಯಕರ
ಪುಂಡರೀಕವ ತೋಱಿ ಶಂಬರವೈರಿ ಮಾರಾಂತ ೧೭

ಬಾರಿಸಿದುದೆಡಬಲಕೆ ಸಾಂಬಾ
ಕ್ರೂರ ಸಾತ್ಯಕಿ ಭಾನುವಿಂದ ಸು
ವೀರ ಗದ ಕೃತವರ್ಮ ಪೃಥು ವಿಪೃಥು ಪ್ರವೀರಕರು
ಚಾರುಧೇಷ್ಣ ಸುಧಾಮ ವರ ಶುಕ
ಸಾರಣಾದ್ಯರು ವೀರರೆಸೆದಿರೆ
ಮೇರೆಯನು ವಿಶಾಱಿದರು ಗಜರಥ ತುರಗ ನಿಕರದಲಿ ೧೮

ಕವಿಸಿದನು ಖಳನಭ್ರದಲಿ ನಿಂ
ದಿವರ ಮೇಲೆ ಮಹಾಸ್ತ್ರಶಸ್ತ್ರದ
ನಿವಹ ಧಾರಾವೃಷ್ಟಿಯನು ತರುಗಿರಿ ಶಿಲಾದಿಕವ
ಪವನವೇಗೋದ್ಧೂತ ಧೂಳೀ
ನಿವಹ ವೇಷ್ಟಿತವಾಯ್ತು ದಶದಿಗು
ವಿವರವೆಱಗಿದವಡಿಗಡಿಗೆ ಸಿಡಿಲುಗಳು ಧರೆಗಿಳೆಯೆ ೧೯

ಕಡುಗಿ ಕಾಡುವ ಖಳನ ಮಾಯೆಯ
ಕಡು ನಿರೋಧದಲಖಿಳ ಜನಕಂ
ಗೆಡಲು ಕಾಣುತ್ತೆಲ್ಲರಿಗೆ ಪ್ರದ್ಯುಮ್ನನಭಯವನು
ಕೊಡುತ ರಥದಲಿ ನಿಂದು ಚಾಪವ
ತುಡುಕಿ ಸಾಲ್ವನ ಮೇಲೆ ಬಾಣದ
ಕಡಲ ಕವಿಸಿದನರಿಭಟನ ಶಸ್ತ್ರೌಘವನು ಕಡಿದು ೨೦

ತೀದುದಾತನ ಮಾಯೆಯುಬ್ಬಟೆ
ಯಾದವೋತ್ತಮ ಸಾಲ್ವಭಟರಿಗೆ
ಬೀದಿಗಾಳಗವಾಯ್ತು ಹೊಯ್ದಾಡಿದರು ತಮ್ಮೊಳಗೆ
ಆದಿಯಲಿ ದೇವಾಸುರರು ಸಂ
ಪಾದಿಸಿದ ರಣದಂತೆ ಭೀಕರ
ವಾದುದುಭಯಭಟಾವಳಿಯ ಸಂಗ್ರಾಮ ಮೂಜಗಕೆ ೨೧

ಶಂಬರಾರಿಯನಾ ದ್ಯುಮಾನೆಂ
ದೆಂಬ ಸಾಲ್ವಾಮಾತ್ಯನರಿಭಟ
ನಂಬಿನಲಿ ಕಡು ನೊಂದು ಬೊಬ್ಬಿಱಿದಾರ್ದು ಯದುವರನ
ಬೆಂಬಿಡದೆ ಗದೆಯಿಂದ ವಕ್ಷದ
ತುಂಬನೆಱಗಲು ಮಱೆದನಿತ್ತಣ
ಹಂಬಲನು ಪ್ರದ್ಯುಮ್ನನುರುತರ ಗದೆಯ ಘಾಯದಲಿ ೨೨

ಕಾಣುತೊಡೆಯನ ಮೂರ್ಛೆಯನು ತ
ತ್ರಾಣರಕ್ಷೆಗೆ ದಾರುಕಾತ್ಮಜ
ನೂಣೆಯುವನೀಕ್ಷಿಸದೆ ರಥವನು ಹಿಂದು ಮುಂದಾಗಿ
ಜಾಣತನದಲಿ ತೆಗೆವುತಿರೆ ಸ
ತ್ರಾಣನಾದನು ವೀರ ಸಮರ
ಕ್ಷೋಣಿಯಿಂದಪಗಮಿಸುವನನಿಂತಂದನುಱೆ ಮುಳಿದು ೨೩

ಆರು ಕಲಿಸಿದರೆಲವೊ ಸಂಗರ
ಭೀರುತನವನು ನಿನಗೆ ಯಾದವ
ವೀರರಲಿ ಮುನ್ನಿಲ್ಲದಪದೆಸೆಯಾಯ್ತು ತನಗಿಂದು
ಸೇರಲಾಗದೆ ಮರಣ ತನ್ನ ಶ
ರೀರವಿದು ಶಾಶ್ವತವೆ ಮಾಡಿದ
ಘೋರ ದುಷ್ಕೃತಕೇನನೆಂಬೆನೆನುತ್ತ ಬಿಸುಸುಯ್ದು ೨೪

ಪಾತಕಿಯೆ ನಾನೇನನೆಂಬೆನು
ತಾತನೊಡನಾಹವದಲಹಿತ
ವ್ರಾತವನು ನೆಱೆ ಗೆಲಿದೆನೆಂಬೆನೊ ಶತ್ರುಶರಹತಿಗೆ
ಸೋತೆನೆಂಬೆನೊ ವೀರವರ ಸಂ
ಜಾತರೊಳು ತನ್ನಂತೆ ದುರ್ಮತಿ
ಸೂತಕೃತ ಕಲುಷಾತ್ಮರಾರೆಂದಳಲಿದನು ವೀರ ೩೫

ಇಲ್ಲ ತನ್ನಲಿ ಕೊಱತೆ ಧರ್ಮವ
ಬಲ್ಲೆನಾಹವದೊಳಗೆ ವೀರರ
ಬಲ್ಲಹನೆ ಬಸವಳಿದರಧಿಕರು ರಕ್ಷಣೀಯರಲ
ಬಲ್ಲ ಸಾರಥಿಗಳಿಗೆ ಕಲಿತನ
ವುಳ್ಳಡಿದು ನೋಡೆನುತ ರಿಪುಭಟ
ನಲ್ಲಿಗಭಿಮುಖವಾಗಿ ಬಿಟ್ಟನು ಸೂತನಾ ರಥವ ೩೬

ಬರವ ಕಾಣುತ್ತಾದ್ಯುಮಾನ
ಬ್ಬರಿಸಿ ಮೂಱಂಬಿನಲಿ ಮನುಮಥ
ನುರವನೆಚ್ಚನು ಮೆಚ್ಚಿದನು ಯದುವೀರನರಿಭಟನ
ಭರವಸಕೆ ಬಳಿಕವನ ರಥವನು
ತುರಗ ಕೇತು ಶರಾಸನಂಗಳ
ನುರುಳೆಗಡಿದನು ಕಡಿದನಾತನ ತಲೆಯನಂಬಿನಲಿ ೩೭

ಮೊಳಗಿದನು ಶಂಖವನು ಪರಬಲ
ಜಲಧಿಯನು ಬಾಣೌಘ ವಡಬಾ
ನಲನವದನಕೆ ತುತ್ತು ಮಾಡಿದನಂದು ನಿಮಿಷದಲಿ
ಬಳಿಕ ಸಾತ್ಯಕಿ ಸಾಂಬ ಮೊದಲಾ
ದಲಘು ಭುಜಬಲಸ್ತ್ರ ಶಸ್ತ್ರಾ
ವಳಿಯ ಬಿಱುಘಾಳಿಯಲಿ ತೂಱಿದರರಿಭಟಾವಳಿಯ ೩೮

ಥಟ್ಟುಗೆಡೆದವು ಕಳನೊಳಗೆ ಖಳ
ರಟ್ಟಿಗಳು ಕಡಿವಡೆದು ಕಾಲನ
ಪಟ್ಟಣವ ತೂಱಿದರು ತುಡುಕಿದರಮರನಾರಿಯರ
ಮುಟ್ಟಿ ಮುಂದಲೆಗಳನು ಮಿಗೆ ಕಂ
ಗೆಟ್ಟು ಸಾಲ್ವಬಲೌಘ ಭಯದಲಿ
ಬಿಟ್ಟುಕೊಂಡುದು ದೆಸೆದೆಸೆಗೆ ಜೀವಾಭಿಲಾಷೆಯಲಿ ೩೯

ತೆಗೆದು ನಿಂದನು ಸಾಲ್ವನವನೊಗು
ಮಿಗೆಯ ಘನವಿಕ್ರಮದ ಶೌರ್ಯದ
ಸೆಗಳಿಕೆಗೆ ಸೆಡೆದೋಡಿದುದು ಪರಿವಾರವೆಣ್ದೆಸೆಗೆ
ಜಗುಳಿದರು ಪಟುಭಟರು ಖಳರನು
ತಗುಳಿ ಮಿಗೆ ಬೆಂಬತ್ತಿ ಕಾಲನ
ನಗರಿಯನು ಹೊಗಿಸಿದರು ಕಾಮಾದಿಗಳು ಪರಬಲವ ೪೦

ಮತ್ತೆ ಸಾಂಬನು ಸದೆದು ಸಾಲ್ವಾ
ಮಾತ್ಯನನು ಕಾಲಂಗೆ ಸಲೆ ಕೈ
ವರ್ತಿಸಿದನೆಡೆವಟ್ಟೆಯಲಿ ತತ್‌ಕ್ಷೇಮ ಮೂರ್ತಿಯನು
ಕುತ್ತಿ ಕೆಡಹಿದನಾ ವಿವಿಂದ್ಯನ
ನತ್ತಲಾ ಪ್ರದ್ಯುಮ್ನನೊಂದೆಸೆ
ಗತ್ಯಧಿಕ ರೋಷದಲಿ ಬಹು ಯೋಜನವ ಬೆಂಬತ್ತಿ ೪೧

ತೆರಳಿದುದು ಸಾಲ್ವಾವನೀಶನ
ಭರವಸಿಕೆ ಬಯಲಾಯ್ತು ಸುಭಟೋ
ತ್ತರದ ಶೌರ್ಯಾರಣ್ಯ ಯದುವರವಿಕ್ರಮಾಗ್ನಿಯಲಿ
ಮರಳಿದರು ಯದುವೀರರಾ ನಿಜ
ಪುರಕೆ ನಿತ್ಯಾತುಮನ ವರ್ಗವ
ಪರಿಭವಿಸಲವರಳವೆ ಭೂಪೋತ್ತಮನೆ ಕೇಳೆಂದ ೪೨

ಎಂಭತ್ತೊಂದನೆಯ ಸಂಧಿ ಮುಗಿಯಿತು.

## ಎಂಭತ್ತೆರಡನೆಯ ಸಂಧಿ

ವೀರ ದೈತ್ಯಾಭ್ಯುದಯ ಘನ ಕಾಂ
ತಾರಕಾಲಾನಲನು ಕೊಂದನು
ದಾರ ಭುಜಬಲ ಸಾಲ್ವನನು ಸಂಗ್ರಾಮದಲಿ ಶೌರಿ

ಅರಸ ಕೇಳಾ ಪಾಂಡುನಂದನ
ರುರುತರ ಸ್ನೇಹಾನುಗುಣಿತೋ
ತ್ಕರುಷ ಭಕ್ತಿಪ್ರಣಯ ಪಾಶಪರೀತನೆಂದೆನಿಸಿ
ಇರಲು ಶಕ್ರಪ್ರಸ್ಥದಲಿ ಮುರ
ಹರನನಗಲಿಸುವಂತೆ ಮಿಗೆ ಮೋ
ಹರಿಸಿತಪಶಕುನಂಗಳವನಿಯಲಭ್ರಮಾರ್ಗದಲಿ ೧

ಬಳಿಕ ಕಳುಹಿಸಿಕೊಂಡು ಕರುಣಾ
ಜಲಧಿ ಬಂದನು ಪರಮ ವಿರಹಾ
ಕುಳರನಪ್ಪಿ ಸುದೂರದಲಿ ಬೀಳ್ಕೊಂಡು ಬಾಂಧವರ
ಮೊಳಗುವುದು ನಿಸ್ಸಾಳಭೇರಿಯು
ಕಳಕಳದ ವಂದಿಗಳ ಚಾತು
ರ್ಬಲದ ಬಹಳತೆಯೆಸೆಯಲಂದಾ ದ್ವಾರಕಾಪುರಕೆ ೨

ಮುಱಿದ ಬಹಳಾಟ್ಟಾಳ ಪುರ ಗೋ
ಪುರದ ಜೈತ್ರದ್ರುಮನಿಕಾಯದ
ವರ ಮಹೋದ್ಯಾನದ ಪತಾಕಾತೋರಣಾವಳಿಯ
ಜಱಿದ ಮಣಿಮಯಭಿತ್ತಿಗಳ ಸಾ
ಗರದ ಪೂರಿತ ದೀರ್ಘಿಕಾ ಪ್ರ
ಸ್ತರದ ನಿಜಪುರವಿಭವವನು ನೋಡುತ್ತ ನಡೆತಂದ ೩

ಕರೆದು ಕೃತವರ್ಮನನಿದೇನೆನ
ಲೊರೆದನವನಚ್ಯುತನ ಚರಣಾಂ
ಬುರುಹದಲಿ ತಲೆವಾಗಿ ಸಾಲ್ವನ ದುಶ್ಚರಿತ್ರವನು
ದುರುಳನನು ಕೊಂದಲ್ಲದಿನ್ನೀ
ಪುರವ ಹೊಗೆನೆಂದಸುರರಿಪು ಸಂ
ಗರಕೆ ಸಾಲ್ವನೃಪಾಲನನು ಬೆಂಬತ್ತಿದನು ಬಿಡದೆ ೪

ಕಡಲಮಧ್ಯದಲಭ್ರ ಮಾರ್ಗವ
ನಡರಿ ಸೌಭದಲಖಿಳ ಭಟರ
ಗಡಣದಲಿ ಖಳನಿರಲು ಹೊಗಳುವ ಸೂತಮಾಗಧರ
ಗಡಬಡೆಯ ಘನರವದಲಾ ಜಗ
ದೊಡೆಯನೀಕ್ಷಿಸುತೆಲವೆಲವೊ ಕುಲ
ಗೆಡುಕ ನಿಲು ನಿಲ್ಲೆನುತ ಹಳಚಿದನಸ್ತ್ರವರುಷದಲಿ ೫

ಕಂಡನಾ ಖಳನಸುರಹರನು
ದ್ದಂಡ ತೀವ್ರಾಗಮನವನು ಖತಿ
ಗೊಂಡನೆಲ್ಲಿಗೆ ಗಮನ ದುರ್ಭರಕಾರ್ಯವೇನೆನುತ
ಕೊಂಡುಬಹನೀ ಸೂತನಿವನು
ದಿಂಡುದಱಿದಡೆ ಸರಿಯೆನುತ ದೋ
ರ್ದಂಡದಲಿ ಸೆಳೆದಿಟ್ಟನುರು ಶಕ್ತಿಯಲಿ ದಾರುಕನ ೬

ಭುಗಿ ಭುಗಿಲು ಭುಗಿಲೆಂದು ಕಿಡಿಗಳ
ನುಗುಳುತಧಿಕಜ್ವಾಲೆಗಳಲಿಳೆ
ಹೊಗೆಯೆ ದಶದಿಕ್ಕುಗಳನಾವರಿಸುತ್ತವರ ಶಕ್ತಿ
ಗಗನದಲಿ ಬರುತಿರಲು ಮುರರಿಪು
ನಗುತ ಬಾಣಂಗಳಲಿ ಹಿಂದಕೆ
ತೆಗೆಸಿದನು ಶತಖಂಡವೆನಲದುಭುತ ಮಹಾಯುಧವ ೭

ಮೀಱುವರಿಭಟನನು ಮಗುಳೆ ಹದಿ
ನಾಱಿರಲಿ ಸೌಭವನು ಹರಿಯೆಡೆ
ಯಾಱಲೆಚ್ಚನು ಕೊಚ್ಚಿದನು ಖಳನೆಡಬಲದ ಭಟರ
ಓಱುಗುಡಿಸಿತು ಸಮರಸಂಭ್ರಮ
ಸೂಱೆಯೋದುದು ಶೌರ್ಯರಸ ಕಾ
ಹೇಱಿದುದು ಕೃಷ್ಣಾಸ್ತ್ರವವನಿಯಲಾ ದುರಾತ್ಮಕನ ೮

ಅಕ್ಷಿಗಳು ಕಿಡಿಗೆದಱೆ ಜಗವನು
ಭಕ್ಷಿಸುವವೋಲ್ಕನಲಿ ಖಳ ಶರ
ಲಕ್ಷದಲಿ ಶಾಶ್ವತನ ಹಯರಥಸೂತಸಂತತಿಯ
ಪಕ್ಷಿರಾಜಧ್ವಜನನಾ ಕಮ
ಲಾಕ್ಷನನು ಮುಸುಕಿದನು ನಿಮಿಷಕೆ
ನಿಕ್ಷಿಪಿತವಾಯ್ತಸ್ತ್ರ ಜಲಧಿಯಲಖಿಳ ಯದುಸೇನೆ ೯

ಬಿಡದೆ ಖಳನಬ್ಬಱಿಸೆ ಮುರಹರ
ನೆಡದ ಕೈಯಲಿ ಮೆಱೆವ ಶಾರ್ಙ್ಗವ
ಕೆಡೆಯಲೆಚ್ಚನು ತೀವ್ರಶರನಿಕರದಲಿ ಕಡು ಮುಳಿದು
ಪೊಡವಿಪತಿ ಕೇಳಾವುದೋ ಜಗ
ದೊಡೆಯನಂತರ್ಭಾವವವನಿಗೆ
ಕೆಡೆದುದುನ್ನತ ಶಾರ್ಙ್ಗಧನು ಬೆಱಗಾಯ್ತು ಸುರನಿಕರ ೧೦

ಶ್ರೀಯರಸನಂಗೈಯ ಶಾರ್ಙ್ಗ ಮ
ಹಾಯುಧದ ಪತನದಲಿ ಬಿಟ್ಟುದು
ಬಾಯನಮರಕದಂಬ ಕಳವಳಿಸಿದರು ದಿಗಧಿಪರು
ಹಾಯೆನುತ ಹಮ್ಮೈಸಿದುದು ಯದು
ರಾಯಬಲ ಭೀತಿಯಲಿ ವೈರಿ ನಿ
ಕಾಯದಲಿ ಸುಮ್ಮಾನ ತಳೆತುದು ನಿಮಿಷಮಾತ್ರದಲಿ ೧೧

ಅಟ್ಟಹಾಸವ ಮಾಡಿ ನುಡಿದನು
ದುಷ್ಟ ನೀ ಮಡಿಹಿದೆಯಲೆನ್ನೊಡ
ಹುಟ್ಟಿದರ ನಾ ಹಂಸಡಿಬಿಕರನೆನ್ನ ತಂದೆಯನು
ಮುಟ್ಟದಿಹುದೇ ಪರರ ವಧೆ ಕೈ
ಯಟ್ಟುತಿದೆಲಾ ಚೈದ್ಯನನು ಬಲಿ
ಗೊಟ್ಟೆ ತನ್ನಯ ಸಖನನೆಂದಬ್ಬಱಿಸಿದನು ಸಾಲ್ವ ೧೨

ಮಾಗಧನು ಸಖ ತನಗೆ ಭಿಕ್ಷುಕ
ನಾಗಿ ಕೊಲಿಸಿದೆ ಪಾಪಿ ಮಱವೆಯ
ಲಾಗಲದಕೇನಾಯ್ತು ಸಾಯರೆ ವೀರರಾದವರು
ಹೋಗಲೀವೆನೆ ಕೃಷ್ಣ ತೆಗೆವೆನು
ಮೂಗಿನಲಿ ತನ್ನವರ ಹರಿಬವ
ಬೇಗ ಮಾಡದಿರೆಂದೆನುತ ಮೂದಲಿಸಿದನು ಸಾಲ್ವ ೧೩

ಹಂದೆ ನೀನಿದಿರಾಗಿ ಧುರದಲಿ
ನಿಂದೆಯಾದರೆ ಬಳಿಕ ಕಾಲನ
ಮಂದಿರವನೀ ಕ್ಷಣವೆ ತೋಱುವೆನಂಜದೆನ್ನೊಡನೆ
ಮಂದಮತಿ ನಿಲು ನಿಲ್ಲೆನುತ ಪಿಡಿ
ಲಂದದಲಿ ಗರ್ಜಿಸಲು ನಗುತ ಮು
ಕುಂದನಾ ಶಾರ್ಙ್ಗವನು ಕೊಂಡಿಂತೆಂದನವನೊಡನೆ ೧೪

ತೋಱಿಸಾದರೆ ನಿನ್ನ ಸತ್ವದ
ಸಾರವನು ತನ್ನಿದಿರಲೆಲವೋ
ವೀರರಿಗೆ ಬಱಬಾಯಗಾಳಗವಿದುವೆ ಭಂಢತನ
ಆರುಭಟೆಯಿಂತಿರಲೆನುತ ದೈ
ತ್ಯಾರಿ ಜಱೆದರಿಭಟನ ಕೊರಳಿಗೆ
ಕೂರಲಗ ತೊಟ್ಟುಗಿದನಾ ಕರ್ಣಾಂತವೆನೆ ಸೆಳೆದು ೧೫

ಏನನೆಂಬೆನು ತೀವ್ರ ಶರಸಂ
ಧಾನದಿಂದವೆ ಮುನ್ನವಂತ
ರ್ಧಾನಗತಿಯಲಿ ನಿಂದನಾಖಳನಂದು ಪುರಸಹಿತ
ಏನಿದೇನಾಯ್ತೆನುತ ನಿಜ ಕ
ರ್ಮಾನುಗತ ಬಾಣದಲಿ ಕಂಡನು
ದಾನವರನಾಜೆಯಲಿ ಬೆಂಭಾಗದಲಿ ಗಿರಿನಿಭರ ೧೬

ತಿರುಗಿ ಕಂಡನು ತೀವ್ರಬಾಣೋ
ತ್ಕರಗಳನು ದಾನವರ ಕೊಬ್ಬಿದ
ಕೊರಳಕದಳೀವನಕೆ ಜಗದಾಧಾರನುಱೆ ಮುನಿದು
ಉರುಳಿದವು ಶರಹತಿಗಳಲಿ ಸಾ
ಗರದೊಳಗೆ ದಾನವರ ಶಿರಗಳು
ಹೊರಳಿದವು ಘನತರ ಕಬಂಧಾನೀಕ ಕಡಿವಡೆದು ೧೭

ಕೆರಳಿ ನಿಜಬಲಭಂಗವನು ಕಂ
ಡುರುತರ ಕ್ರೋಧದಲಿ ಖಳನ
ಬ್ಬರಿಸಿ ಬೆನ್ನಲಿ ಮತ್ತೆ ಸುರಿದನು ಸರಳ ಬಲು ಮಳೆಯ
ಉರು ಪರಶ್ವಥ ಶೂಲ ಪಟ್ಟಸ
ಪರಿಘ ಮುಸಲ ಮುಸುಂಡಿಗಳು ಮೋ
ಹರಿಸಿದವು ಯಾದವ ಮಹಾಭಟ ನಿಕರದೊಡ್ಡಿನಲಿ ೧೮

ಆರು ಬಣ್ಣಿಸಬಹುದು ಸಾಲ್ವನ
ಘೋರಸಂಗ್ರಾಮವನು ನೊಂದನು
ದಾರಕನು ಮುಸೆವಡೆದವಶ್ವಂಗಳು ರಥಾಗ್ರದಲಿ
ಕಾರ ಮಳೆಗಱೆವಂತೆ ಬಾಣಾ
ಸಾರಧಾರಾವೃಷ್ಟಿಯಲಿ ಯದು
ವೀರಬಲ ಕಂಗೆಟ್ಟುದೇನೆಂಬೆನು ಮಹಾದ್ಭುತವ ೧೯

ತಿರುಗಿ ನಿಂದನು ಮತ್ತೆ ಮುರರಿಪು
ಪರಬಲಾರ್ಜಿತ ನಿಜಬಲಾಭ್ಧಿಯ
ಪರಿಭವವನೀಕ್ಷಿಸುತ ಕೋಪಾಟೋಪದಲಿ ಜಱಿದು
ತಿರುವನೊದಱಿಸಿ ತೀವ್ರ ಶಸ್ತ್ರೋ
ತ್ಕರದ ಬಿಱುಘಾಳಿಯನು ಬೀಸಿದ
ನರಿಭಟನ ಬಾಣೌಘ ಮೇಘವ್ರಾತದಲಿ ಬಿಡದೆ ೨೦

ಒಂದುನೂಱೈನೂಱು ಸಾವಿರ
ಮುಂದೆ ನಡೆಯಲು ಲಕ್ಷ ಕೋಟಿಗ
ಳಂದವಡೆದಭ್ರವನು ಹೂಳಿದವಂಬುಗಳು ಕವಿದು
ಸಂದಣಿಸಿದವು ಸಾಲ್ವನೊಡಲಲಿ
ಸಂದ ಹಯ ರಥ ಸೂತ ಸೇನಾ
ವೃಂದದಲಿ ದೆಸೆಗಳಲಿ ಬಾಣವ್ರಾತಮಯವಾಗೆ ೨೧

ಬೆಳೆದ ಹೆಬ್ಬುಳುವಕ್ಕೆ ಕಾಲಾ
ನಳನು ಕವಿದಂದದಲಿ ಮುರಹರ
ನಲಘುಬಾಣವ್ರಾತ ಕವಿದುದು ಸಾಲ್ವನೆಡಬಲದ
ಖಳನಿಕರ ಬಾಯ್ದೆಱೆದು ಬೀಳುವ
ತಲೆಗಳಲಿ ದೆಸೆದೆಸಗೆ ಭೀತಿಯ
ಬಲುಹು ಮೆಱೆದುದು ನೋಳ್ಪ ಸುರಖೇಚರರ ಕಂಗಳಿಗೆ ೨೨

ಕುಲಗಿರಿಯ ಮೋಹರಕೆ ಕವಿದುದೊ
ಕುಲಿಶಚಯವೆಂಬಂತೆ ಸಾಲ್ವನ
ಬಲವ ಕವಿಕವಿದಟ್ಟಿ ಕಡಿದಟ್ಟದವು ಕಳನೊಳಗೆ
ನಳಿನನಾಭನ ತೀವ್ರ ಬಾಣಾ
ವಳಿಗಳಹಮುಹಮಿಕೆಯಲರಿಭಟ
ರೊಳಗೆ ಸುಳಿದಾಡಿದವು ತೋಡಿದವಹಿತಬಲದಸುವ ೨೩

ತೆಬ್ಬನೊದಱಿಸುತಡಿಗಡಿಗೆ ಹರಿ
ಯಬ್ಬರಿಸುತುರು ಸಿಂಹರವದಲಿ
ಸರ್ಬ ಸುರರಿಗೆ ಪರಮ ಸಂತೋಷವನು ಮಾಡುತ್ತ
ಪರ್ಬಶಶಿಯಂತೆಸೆವ ಶಂಖವ
ತುಬ್ಬಿಸುತ ಪರಬಲಕೆ ಭೀತಿಯ
ಹಬ್ಬುಗೆಯ ಮಾಡಿದನು ಮೆಱೆದನು ಭೂರಿ ಭುಜಬಲವ ೨೪

ಹರಿಯ ಹರಿರವ ಶಾರ್ಙ್ಗರವ ದು
ರ್ಧರ ಮಹಾಶಂಖೌಘರವದಲಿ
ಬಿರಿದುದಾ ಖಳನೆದೆ ಕಠೋರಶ್ರವಣವೇದನೆಗೆ
ಮುರಳಿ ನಿಂದನು ಯೋಜನಾರ್ಧಾಂ
ತರದಲಧಿಕ ಕ್ರೋಧದಲಿ ಸಂ
ಗರಕೆ ರವಿಯಂತೆಸೆವ ಗಗನದ ಸೌಭ ಮಧ್ಯದಲಿ ೨೫

ಕವಿಸಿದನು ಮಾಯೆಯನು ಮೋಹಿಸ
ಲವಿರಳಾತ್ಮಜ್ಞಾನನಿಧಿಯನು
ತವಕದಲಿ ನಿಜಯೋಗಮಾಯಾಧೀಶ್ವರನ ಮೇಲೆ
ಜವವಳಿವುತಕ್ರೂರನುಗ್ರಾ
ಹವಕೆ ಬಂದನು ಬೇಡ ಬೇಡಾ
ಹವವಿದಾರಿಗೆ ಹಿತವೆನುತ ಬಿನ್ನವಿಸಿದನು ಹದನ ೨೬

ಅಹುಕನನಿಕ್ಕಿದನು ಹಿಡಿದರು
ಬೇಹ ವಸುದೇವನನು ಬಹುವಿಧ
ವಾಹನಂಗಳು ಸಿಕ್ಕಿದವು ಗಜ ವಾಜಿ ರಥನಿಕರ
ಆಹವದಲಿನ್ನೇನು ಫಲ ನಿ
ರ್ವಾಹಿಸಿತು ಪುರಲಕ್ಷ್ಮಿ ಪರರಿಗೆ
ಮೋಹವುಳ್ಳರೆ ಮರಳಿ ಮಾತಿಂಗಿಲ್ಲ ತೆಱಹೆಂದ ೨೭

ಎಂದೆನುತ್ತಿರಲಸುರವೈರಿಯ
ಮುಂದೆ ಬಿದ್ದನು ಬಿಗಿದ ಹೆಡೆಗುಡಿ
ಯಿಂದ ಬಳಲುತ ಬಿಟ್ಟ ಮಂಡೆಯಲಂದು ವಸುದೇವ
ನಿಂತು ಸೈವೆಱಗಾಗಿ ದೇವ ಮು
ಕುಂದನೀಕ್ಷಿಸುತಿರಲು ದಾನವ
ವೃಂದ ಕವಿದುದು ಶೂಲದಿಂದಿಱುವುತ್ತ ಯದುವರನ ೨೮

ಆಲಿಸುತ ಮುರವೈರಿ ಮಾನುಷ
ಲೀಲೆಯಲಿ ಮನವಿಳುಹಿ ಕರಣ
ವ್ಯಾಳವಿಷ ಮೂರ್ಛೆಯಲಿ ವಿಹ್ವಲನಾಗುತಡಿಗಡಿಗೆ
ಹೇಳಿದೇನೈತಂದೆ ಮಡಿದರೆ
ಕಾಳಗದಲಾತ್ಮಜ ಹಲಾಯುಧ
ಲೋಲ ಸಾತ್ಯಕಿ ಸಾಂಬ ಕೃತವರ್ಮಾದಿ ಭಟರೆಂದ ೨೯

ಎನುತ ಕೆಲದಲಿ ನೋಡುತಕ್ರೂ
ರನನು ಕಾಣದಿದೇನೆನುತ್ತಿರೆ
ದನುಜಬಲದಲಿ ಸಾಲ್ವ ಮೈದೋಱಿದನು ಮುಂದೆಸೆಗೆ
ಕನಲಿಸುತ ಖಳನೆಂದನೇಕಿ
ನ್ನನುವರದ ಭರ ನಿನಗೆ ನಿಮ್ಮ
ಯ್ಯನನು ನೋಡಾ ತಂದೆಯೀವಿಧಿಗೆಂದು ಗರ್ಜಿಸಿದ ೩೦

ಸೂಱೆಯೋದುದು ನಗರಿ ಪಟ್ಟಣ
ಗಾಱರಳಿದರು ಕಾದಿ ಹಲಧರ
ನೋಱುಗುಡಿಸಿದನಿಳೆಗೆ ಮಡಿದರು ವರಕುಮಾರಕರು
ವೀರ ಸಾತ್ಯಕಿಮುಖ್ಯ ಸುಭಟರು
ಜಾಱಿದರು ಜವಪುರಕೆ ಮತ್ತಿದೆ
ತೋಱುವೆನು ನಿಮ್ಮಯ್ಯನವಸಾನವನು ತಾನೆಂದ ೩೧

ಎಂದಡಸುರಾರಾತಿ ಮನದಲಿ
ನೊಂದು ಖಳನ ಕಠೋರ ವಕ್ಷದ
ಸಂದನೆಱಗಿದನುರು ಗದಾದಂಡದಲಿ ಕಡುಮುಳಿದು
ನೊಂದು ದುರ್ಮತಿ ಮೂಗು ಬಾಯಿಗ
ಳಿಂದ ನೊಱೆ ನೆತ್ತರನು ಕಾಱುತ
ಸಂದನಂತರ್ಧಾನದೆಡೆಗೆ ದುರಾತ್ಮನಳವಳಿದು ೩೨

ಕೈದುಗೊಳ್ಳೆನ್ನಾಪಡೆನುತಡ
ಹಾಯ್ದು ಖಳನಬ್ಬರಿಸಿ ಭಟರನು
ಬೈದು ಮುಂದಡಗೆಡಹಿದಾನಕದುಂದುಭಿಯ ತಲೆಯ
ಕಾಯ್ದುಕೊಂಡಂಬರದ ಸೌಭವ
ನೆಯ್ದಿದನು ಝಳಪಿಸುವ ಖಡುಗದ
ಕಯ್ದುಕಾಱನು ತೋಱಿದನು ಸಾಱಿದನು ಪೌರುಷವ ೩೩

ಎರಡು ಘಳಿಗೆ ಮನುಷ್ಯ ಲೀಲಾ
ಚರಣೆಗಳನನುಕರಿಸಿ ವಿಹ್ವಲ
ಕರಣನಾದನು ನಿತ್ಯಸಂವಿನ್ಮಯ ಸುಖಾತ್ಮಕನು
ತಿರುಗಿ ನೋಡಲು ತೋಱೆ ದೈತ್ಯರ
ನೆರವಿ ತನ್ನಿಜ ಪಿತೃಕಳೇಬರ
ಹರೆದುದಱೆತನು ಮಯನ ಮಾಯೆಯದೆಂದು ಮುರವೈರಿ ೩೪

ಬಳಿಕ ನಿಮಿಷಾಂತರಕೆ ಬಲುರವ
ತಳಿತುದೆಣ್ದೆಸೆಗಳಲಿ ನಭದಲಿ
ಜಲದ ಪಟಲ ಮುಹೂರ್ತವೆನಲೇನೆಂಬೆನದ್ಭುತವ
ಇಳಿದುದಪರಾಂಬುಧಿಗೆ ರವಿ ಮಂ
ಡಲಮಹಾಂಧ ತಮಿಸ್ರದಲಿ ಧರೆ
ಮುಳುಗಿದುದು ಬೀಸಿದುದು ಹೆಮ್ಮರನುಡಿಯೆ ಬಿಱುಗಾಳಿ ೩೫

ಶಿಲೆಯ ಮಳೆಗಳು ಕಱೆದವಾ ರಥ
ಚಲಿಸದಂತಿರೆ ಭೇಕ ಮೀನಾ
ವಳಿಯ ಬಹು ಮಾಂಸ ಶೋಣಿತ ವಾರಿಧಾರೆಗಳು
ಇಳಿದವವನಿಗೆ ಕೀವು ಕಿಸುಕುಳ
ಹೊಲಸು ಮಸಗಲು ಸಕಲ ದಿಗುಮಂ
ಡಲವನಂಡಲೆದೌಕಿದುವು ವಿಣ್ಮೂತ್ರ ವಾರಿಗಳು ೩೬

ಕಡಲು ನೂಕಿದವೌಕಿದವು ಬಱ
ಸಿಡಿಲು ಮಿಂಚುಗಳೆಂಟು ದೆಸೆಯಲಿ
ಖಡುಗ ಶೂಲವ್ರಾತವನು ಬೀಱುತ್ತ ಗಿರಿನಿವಹ
ಹೊಡಕರಿಸಿದವು ಮೇಲೆ ಸಾಲ್ವನ
ತೊಡಕಿನಲಿ ಯಾದವರ ಪಡೆ ಕಂ
ಗೆಡಲು ಕಾಣುತ ಕೃಷ್ಣನುಱೆ ಚಿಂತಿಸಿದನಡಿಗಡಿಗೆ ೩೭

ಮಾಯೆಯಿದು ಸಾಲ್ವನದೆನುತ ಸಾ
ರಾಯಣನು ಮನದೊಳಗೆ ವಿಜ್ಞಾ
ನಾಯತಾಸ್ತ್ರವ ನೆನೆದು ತೊಟ್ಟನು ಶಾರ್ಙ್ಗದಲಿ ತೆಗೆದು
ರಾಯ ಕೇಳರೆನಿಮಿಷ ಮಾತ್ರಕೆ
ಮಾಯವಾದುದು ಸಾಲ್ವ ನಿರ್ಮಿತ
ಮಾಯೆಯದು ಚಿತ್ರವೆ ವಶೀಕೃತ ಯೋಗಮಾಯನಲಿ ೩೮

ಮನದಲಾವನ ಚರಣಕಮಲವ
ನೆನೆದಡೀ ಜೀವರಿಗೆ ಭವ ಬಂ
ಧನದ ದೃಢತರ ಯೋಗಮಾಯಾಭ್ರಾಂತಿ ಕೆಡುವುದೆನೆ
ಜನಪ ಚಿತ್ರವೆ ಕೆಡುವುದೀ ಹುಲು
ದನುಜಗಿನುಜರ ಕಪಟ ಕೃತಿಗಳು
ಚಿನುಮಯಾತ್ಮ ಜ್ಞಾನನಿಧಿ ಸಾಕ್ಷಾತು ಕೃಷ್ಣನಲಿ ೩೯

ಮತ್ತೆ ಹಲ ಹಲಹಲ ಹಲಾರವ
ಹತ್ತು ದೆಸೆಯಲಿ ಮೊಳಗಿದವು ಬಲು
ದೈತ್ಯನೋಹರದೊಳಗದೃಶ್ಯಾಕಾರದಲಿ ನಭವ
ಎತ್ತಲೆತ್ತಲು ಹಲ ಹಲಾರವ
ವತ್ತಲತ್ತಲು ಶಬ್ದವೇಧಿ ಮ
ಹಾಸ್ತ್ರವನು ತೆಗೆದೆಸುತಲಿರ್ದನು ದಾನವಧ್ವಂಸಿ ೪೦

ಮೇಲುಜಗದಡಕಿಲಿಗೆ ಕವಿವ ಕ
ರಾಳಮುಖ ಕಲ್ಪಾಂತ ವಹ್ನಿ
ಜ್ವಾಲೆಯೋ ಗಗನಸ್ಥದೈತ್ಯರ ಪಡೆಗೆ ಹರಿಶರದ
ಧಾಳಿಯೋ ಯೆನಲರಿದ ತಲೆಗಳ
ತೋಳುಗಳ ಪಟುಭಟರು ಕಡಲನು
ಹೂಳಿದರು ಹೇರಾಳದಗಿವಟ್ಟಿಗಳ ಭಾರದಲಿ ೪೧

ಅಡವಿಯನು ಕಡಿವಂತೆ ಖಳರನು
ಕಡಿದು ಬಿಸುಟಿವು ಕೃಷ್ಣಶರಹತಿ
ಕಡಲ ಬಸುಬ್ಬರಿಸಿ ನಾಲಕುದೆಸೆಯನಕ್ಕಾಡೆ
ಕೆಡೆದುದಗಣಿತದೈತ್ಯಬಲ ನಭ
ದೆಡೆಯಲಮರರು ಭಾಪು ಜೀಯೆನು
ತಡಿಗಡಿಗೆ ಸುರಿವುತ್ತಲಿರ್ದರು ಪುಷ್ಪ ವೃಷ್ಟಿಗಳ ೪೨

ಕೂಡೆ ವರಮುನಿನಿವಹ ಸಂಸ್ತುತಿ
ಮಾಡಿದುದು ನಭದೊಳಗೆ ನಾರದ
ನಾಡಿದನು ಕೈವಾರಿಸುತ ಕೃಷ್ಣನ ಪರಾಕ್ರಮವ
ಕಾಡುವಂತಿರೆ ಸಾಲ್ವನನು ಕೊಂ
ಡಾಡಲೇತಕೆ ದೇವ ಕೊಲ್ಲೀ
ಕೇಡುಗನನಾಹವದಲಿದಿರೇ ಹೂಹೆ ನಿನಗೆನುತ ೪೩

ಇರಲು ಸವನೆಂಬೊಬ್ಬ ದೈತ್ಯೇ
ಶ್ವರನು ಜಗದೀಶ್ವರನ ಮೇಲ
ಬ್ಬರಿಸಿ ಕಿತ್ತು ಮಹಾದ್ರಿಗಳನೆತ್ತಿಕ್ಕಲುಜಿ಼ ಮುನಿದು
ಹರಿಯನಾ ಹರಿರಥವನಾ ರಥ
ತುರಗ ನಿಕರವನಖಿಳ ಸೇನೆಯ
ನರೆವವೋಲಡೆಗೆಡೆದವದ್ರಿನಿಕಾಯವೀ ಧರೆಗೆ ೪೪

ಎಚ್ಚು ವಜ್ರಾಸ್ತ್ರದಲಿ ನಿಮಿಷಕೆ
ಕೊಚ್ಚಿದನು ಗಿರಿಗಳನು ಕೋಪದ
ಕಿಚ್ಚಿನಲಿ ಕಾಹೇಱದಕ್ಷಿಗಳಲಿ ಮುರಧ್ವಂಸಿ
ಎಚ್ಚನಾತನ ತಲೆಯು ಗಗನಕೆ
ಕಚ್ಚಿಹಾಯ್ದುದು ಬಾಣ ಖೇಚರ
ರಚ್ಚರಿಯನೀಕ್ಷಿಸುತಲಿದ್ದರು ಸಮರಸಂಭ್ರಮವ ೪೫

ತುಡುಕಿದನು ಚಕ್ರವನು ಮುರರಿಪು
ಕಡೆಗಣಿಸಿ ಸೌಭವನು ಸಮರಕೆ
ಕಡೆಯೆನುತ ಕಲ್ಪಾಂತ ಸೂರ್ಯನಲಾ ಶತದ್ಯುತಿಯ
ತಡೆಯದಾಗ್ನೇಯದಲಿ ಮಂತ್ರಿಸಿ
ಬಿಡಲು ಭುವನ ಚತುರ್ದಶವನವ
ಗಡಿಸಿ ನಡೆದುದು ಚಕ್ರ ಸೌಭಪುರಾಭಿಮುಖವಾಗಿ ೪೬

ಎಂಬೆನೇನನು ಬಹಳ ತೇಜದ
ತುಂಬನುರ್ಚಿದವೋಲು ಧರಣಿಯ
ನಂಬರವನಾಕ್ರಮಿಸಿ ಕವಿದುದು ಹತ್ತು ದೆಸೆಗಳಿಗೆ
ಇಂಬುಗೆಟ್ಟುದು ಮೇಲೆ ಭುವನ ಕ
ದಂಬ ಪಾತಾಳಾವಳಿಗಳೇ
ಳಂಬುಧಿಯ ತಳಮಳಲು ಕಾದುದು ಚಕ್ರದೂಷ್ಮೆಯಲಿ ೪೭

ಕಾದುದತ್ತಲು ಕಮಠನೆದೆ ಬಿಸಿ
ಯಾದುದಾ ವರುಣೋದಕದ ಜಲ
ಜಾದು ತೊಡೆದಂತಾಯ್ತು ಕಮಲಭವಾಂಡವಾ ಕ್ಷಣಕೆ
ಊದಿ ಜಗಗಳನುರುಹುವಾ ಕಾ
ಕೋದರೇಂದ್ರನ ಖತಿಗೆ ನೂರ್ಮಡಿ
ಯಾದುದೆನಲು ಸುದರ್ಶನಾಸ್ತ್ರಜ್ವಾಲೆ ಝೋಂಪಿಸಿತು ೪೮

ಉರಿದುದೋ ಜಗವೆನುತ ಸುರರಂ
ಬರವನುಳಿದರು ಮೇಲೆ ಪುಷ್ಪದ
ಸರಿಮಳೆಯ ಸೂಸಿದರು ಜಯ ಜಯತು ಜಯ ಜಯಯೆನುತ
ಹರವಿರಿಂಚಿ ಸುರೇಂದ್ರ ಮುಖ್ಯರು
ಕರಪುಟದ ಭಾಳದಲಿ ನಮಿಸು
ತ್ತಿರಲು ನಡೆದುದು ಚಕ್ರವಾ ಸೌಭಾಭಿಮುಖವಾಗಿ ೪೯

ಚೂಣಿಯಲಿ ಕಡಿವಡೆದು ಬಿದ್ದುದು
ಬಾಣನಿಕರಾಭೇದ್ಯ ದೃಢ ನಿ
ರ್ಮಾಣವೆನಿಸುವ ಸೌಭವದು ಸಾಗರದ ಮಧ್ಯದಲಿ
ಕೇಣಿ ತನಗಿದೆನುತ್ತ ವಿಬುಧ
ಶ್ರೇಣಿ ಹೊಗಳಲು ಚಕ್ರಪಾಣಿಯು
ಪಾಣಿಯತ್ತಲು ಮರಳಿದುದು ಮೊಳಗುವ ಮಹಾಚಕ್ರ ೫೦

ಹೋಗಲದಱಿಂದಾಯ್ತು ಘಡ ರಥ
ದಾಗು ಹೋಗಿನ ದೊರೆಯೆ ನಿಲ್ಲನು
ವಾಗೆನುತ ಬೊಬ್ಬಿಱಿದು ಘನತರ ಸಿಂಹನಾದದಲಿ
ಬಾಗಿ ಕೊಂಡನು ಗದೆಯನಭಿಮುಖ
ನಾಗಿ ಹರಿತರಲವನ ಕಡುಹನು
ಮೂಗಿನಲಿ ಬೆರಳಿಟ್ಟು ನೋಡುತ್ತಿರ್ದನಸುರಾರಿ ೫೧

ಅಹುದಲೈ ಸಾವನ್ನವಿಱಿವುದೆ
ಸಹಜಗುಣ ವೀರರಿಗೆನುತ ಘನ
ಮಹಿಮನಧಟನ ತಲೆಗೆ ಕೊಟ್ಟನು ವರ ಸುದರ್ಶನವ
ಗಹಗಹಿಪ ಘನತೇಜದಲಿ ಶತ
ಮಿಹಿರರಡಗಲು ಕಮಲಜಾಂಡದ
ಕುಹರವನು ವೆಂತಣಿಸಿ ನಡೆದುದು ಭಟನ ಸಮ್ಮುಖಕೆ ೫೨

ಕಳಚಿದುದು ತಲೆ ಮಕುಟಮಣಿ ಕುಂ
ಡಲಗಳೆಸೆಯಲು ಧರೆಗೆ ಸಾಲ್ವನ
ಬಲದಲಾದುದು ಬಹಳ ಹಾಹಾರವದ ನಿರ್ಘೋಷ
ಮೊಳಗಿದವು ಭೇರಿಗಳು ಹೂವಿನ
ಮಳೆಗಳಿಳಿದವು ಧರೆಗೆ ವರಮಂ
ಗಳದ ಗೀತವ ಪಾಡಿ ನಲಿದಾಡಿದರು ದೇವಿಯರು ೫೩

ಮರಳಿದನು ಮುರವೈರಿ ರಿಪುಭಟ
ರಿಱಿತದಲಿ ನುಗ್ಗಾದ ತನ್ನಯ
ಪರಮ ಯಾದವಬಲವ ನೆಱೆ ಕಾರುಣ್ಯದಲಿ ನೋಡಿ
ಕರುಣಿಸುತ ಸಂಜೀವನವನೆ
ಲ್ಲರಿಗೆ ಪರಿತೋಷದಲಿ ವಂದಿಗ
ಳುರವಣೆಯ ಕೈವಾರರವದಲಿ ಮೆಱೆವ ನಿಜಪುರಕೆ ೫೪

ನೋಡಲಾದುದು ಮುನ್ನಿನಂತಿರೆ
ಕೂಡೆ ಪುರರಚನೆಗಳು ವಿಶ್ವವ
ಮಾಡುವಾತಂಗರಿದೆ ಮಾಯಾಧೀಶ್ವರೇಶ್ವರಗೆ
ಗೂಢ ನಿಜ ಚಿದ್ರೂಪನೀಪರಿ
ಷೋಡಶ ಸ್ತ್ರೀವರಸಹಸ್ರದ
ಲಾಡುತಿರ್ದನು ಲೀಲೆಯಲಿ ನಿತ್ಯಾತ್ಮನವನಿಯಲಿ ೫೫

ಎಂಭತ್ತೆರಡನೆಯ ಸಂಧಿ ಮುಗಿಯಿತು.

# ಎಂಭತ್ತಮೂರನೆಯ ಸಂಧಿ

ನೀತಿ ವಿರಹಿತ ಕೌರವೇಂದ್ರ
ದ್ಯೂತ ನಿರ್ಜಿತ ಪಾಂಡುತನುಸಂ
ಜಾತರನು ಕಂಡಸುರರಿಪು ಮರಳಿದನು ನಿಜಪುರಕೆ

ಒಂದು ದಿನ ವಿಭವದಲಿ ಯಾದವ
ವೃಂದ ಸಹಿತ ಸುಧರ್ಮೆಯಲಿ ಗೋ
ವಿಂದನಿರಲೋಲಗಿಪ ಪೃಥ್ವೀಶ್ವರರ ಮಧ್ಯದಲಿ
ಬಂದನೊಬ್ಬನು ವಿಪ್ರನಿದಿರಲಿ
ನಿಂದು ಸಮಯವ ಬೆಸಗೊಳಲು ನಡೆ
ತಂದನಾ ದೌವಾರಿಕನು ದೇವೋತ್ತಮನ ಹೊರೆಗೆ ೧

ಸಮಯವುಂಟೇ ಜೀಯ ವಿಪ್ರೋ
ತ್ತಮನು ಬಾಗಿಲಲೈದನೆಸಲ
ಕ್ರಮವ ಮಾಡಿದೆ ಹೊಗಿಸು ತಡೆಯದೆನುತ್ತ ಹರಿ ಬೆಸಸೆ
ಕ್ಷಮಿಸುವುದು ತನಗೆನುತ ಕೈಮುಗಿ
ದಮಳಮತಿ ತಲೆವಾಗುತಿರಲಾ
ಕಮಲದೃಶನೋಲಗಕೆ ಬಂದನು ವಿಪ್ರನೊಲವಿನಲಿ ೨

ಮುರಮಥನನುಪಚರಿಸಿ ಮಣಿವಿ
ಷ್ಟರವನಿತ್ತಾಗಮನಕಾರ್ಯವ
ನೊರೆವುದಾವುದು ಕೃತ್ಯವೆನಗೆನಲೆಱಗಿ ಚರಣದಲಿ
ಧರಣಿಯಮರನು ನುಡಿದನೊಸರುವ
ಪರಮ ಕರುಣಾರಸದ ಕಂಗಳ
ಉರುದಯಾಸಾಗರನೆ ಚಿತ್ತೈಸೆನುತ ಕೈಮುಗಿದು ೩

ಧೂರ್ತವಿದ್ಯೆಯ ಮಾಡಿ ಗೆಲಿದರು
ಧಾರ್ತರಾಷ್ಟ್ರರು ಪರಮ ಪಾವನ
ಕೀರ್ತಿಗಳನಾ ಪಾಂಡುಪುತ್ರರನಕಟ ಜೂಜಿನಲಿ
ವಾರ್ತೆಯನು ನಿಮ್ಮಡಿಗೆ ನಿರ್ಮಳ
ಮೂರ್ತಿ ತಂದೆನು ದೇವ ವಿರಹವಿ
ಷಾರ್ತರನು ಸಂತವಿಸೆ ಬಿಜಯಂಗೆಯ್ಯಬೇಕೆಂದ ೪

ಕೇಳುತವೆ ಕಾಹೇಱಿದವು ಕ
ಣ್ಣಾಲಿಗಳು ರೋಷಾಗ್ನಿವಿಕಟ
ಜ್ವಾಲೆಯಲಿ ನೋಡಿದನು ದನುಜಾರಾತಿ ಕೆಲಬಲನ
ಖೂಳ ದುರ್ಯೋಧನನ ಮೂಲೋ
ನ್ಮೂಲನಕೆ ಮೊದಲಾಯ್ತು ನಡೆ ಭೂ
ಪಾಲರನು ಸಂಭಾವಿಸುವವೇಳೆನುತ ನಿಂದಿರ್ದ ೫

ದಾರುಕನ ಕೈವಿಡಿದು ರಥವನು
ದಾರ ಕರುಣೆಗಳರಸನೇಱಿದ
ನೋರಣಿಸಿದವು ದಂಡಿಗೆಗಳರಸಿಯರ ಪರಿಜನದ
ಶೌರಿ ದೇವಕಿ ಮುಖ್ಯ ಯಾದವ
ವೀರ ವನಿತಾನಿವಹ ಪಾಂಡವ
ಧಾರುಣೀಪತಿದರುಶನಕೆ ಹೊಱವಂಟನಾ ಕ್ಷಣಕೆ ೬

ಹಲವು ಪಯಣದ ಮೇಲೆ ಪಯಣದ
ಲಲಘುಮಹಿಮನು ಪಾಂಡುಪುತ್ರರ
ಹಳುವವದು ಕಾವ್ಯಕವೆನಿಪ್ಪ ಮಹಾ ವನಾಂತರವ
ಅಳಲಿಗರನಱಸುತ್ತ ಹೊಕ್ಕನು
ನಳಿನನಾಭನು ನೆನೆವ ಮುನಿಮನ
ಗಳಿಗೆ ಲಕ್ಷಿಸಲರಿದದೆಂತುಟೊ ಪುಣ್ಯ ಪಾಂಡವರ ೭

ಕೇಳಿದರು ಪಾಂಡವರು ಪರಮ ಕೃ
ಪಾಳುವಿನ ಪಯಣವನು ಪರಿಭವ
ದೇಳಿಗೆಯ ಶೋಕವನು ಮಱೆದರು ವಿಪಿನ ವಿಭ್ರಮದಿ
ತೂಳಿದುದು ತನುಪುಳಕ ಬಹಳ ವಿ
ಶಾಲ ಮನದುತ್ಸವದ ರಸದಲಿ
ಹೂಳಿದವು ಕಂಗಳು ಕೃತಾರ್ಥತೆವೆತ್ತುದಖಿಳ ಜನ ೮

ಧರೆಗೆ ವೈಯಿಕ್ಕುತ್ತ ಪಾಂಡವ
ಧರಣಿಪತಿ ನಡೆತಂದನಾ ಮುರ
ಹರನ ಪದದರುಶನಕೆ ಪರಮೋತ್ಸವದ ಭಾರದಲಿ
ನರ ವೃಕೋದರ ಯಮಳರೊಡಲನು
ಹರಹಿದರು ಮೇದಿನಿಗೆ ದ್ರೌಪದಿ
ವರಸುಭದ್ರೆಯರಖಿಳ ವಿಪ್ರಸಮಾಜ ಜನಸಹಿತ ೯

ತನುವ ಮಱೆದರು ಕೃಷ್ಣಪದಯುಗ
ವನಜವನು ದೂರದಲಿ ಕಾಣು
ತ್ತನಿಮಿಷಾಕ್ಷಿಗಳಾದರಾಸ್ವಾದಿಸುತ ತನ್ಮುಖವ
ಜನಪರಡೆಗೆಡೆದಶ್ರುಜಲದಲಿ
ನೆನಸಿದರು ತತ್ಪದವನವನತ
ಜನಪರಾಯಣನನಿಬರನು ತಕ್ಕೈಸಿದನು ತೆಗೆದು ೧೦

ಏನನೆಂಬನು ಕೃಷ್ಣ ಭಕ್ತಾ
ಧೀನತೆಯ ಲೀಲೆಯನು ಯೋಗಿ
ಧ್ಯಾನನಿಷ್ಠೆಗೆ ಸಿಲುಕವಾವನ ಪಾದರೇಣುಗಳು
ಆನತಪ್ರಿಯನೆಂಬ ಬಿರುದನು
ತಾನೆ ಪಾಲಿಸಿ ಪಾಂಡುಪುತ್ರರ
ಕಾನನಕೆ ವೈದೋಱಿ ಮಱುಗಿದನವರ ಪರಿಭವಕೆ ೧೧

ಉಚಿತ ಸತ್ಕಾರದಲಿ ಸಂಪ್ರಿಯ
ವಚನದಲಿ ಮನ್ನಿಸುತ ಪೂರ್ವೋ
ಪಚಿತ ಕಥನಂಗಳಲಿ ಬಂದ ವಿಪತ್ಪರಂಪರೆಯ
ಪ್ರಚುರಗುಣನಿಧಿ ಕೇಳಿ ಕರುಣಾ
ನಿಚಯ ನಯನಾಮೃತದಲನಿಬರಿ
ಗಚಲಸುಖವನು ಮಾಡುತಿರ್ದನು ಕೃಷ್ಣನೊಲವಿನಲಿ ೧೨

ಬಂದು ಕೃಷ್ಣನ ಚರಣಕಮಲ
ದ್ವಂದ್ವದಲಿ ವೈಯಿಕ್ಕಿ ಧರೆ ಬಿರಿ
ವಂದದಲಿ ಬಾಯ್ವಿಡುತ ಮುಳುಗಿದಳಂಘ್ರಿರಜದೊಳಗೆ
ಇಂದಿರಾಸನೆ ದ್ರುಪದಸುತೆ ಗೋ
ವಿಂದನಂಘ್ರಿಯನಶ್ರುಜಲನಿ
ಷ್ಯಂದದಲಿ ನಾದಿದಳು ನುಡಿದಳು ನಿಜಮನೋವ್ಯಥೆಯ ೧೩

ನಿನ್ನಸುಗಳೇ ಪಾಂಡವರು ಗಡ
ಬನ್ನ ಬಡುವರೆ ಕೃಷ್ಣ ಬಹಳ ಕೃ
ಪಾರ್ಣವನೆ ಕೈಗಾದೆಲಾ ಖಳನಿಕರ ಬಾಧೆಯಲಿ
ತನ್ನ ಮಾನಸ್ಥಿತಿಯನದನಭಿ
ವರ್ಣಿಸಲದೇಕನುಪಮಿತ ಚೈ
ತನ್ಯರೂಪಂಗೆಂದು ಕಂಬನಿದುಂಬಿದಳು ತರಳೆ ೧೪

ತುಡುಕಿದವಲಾ ಸರ್ಪರಾಜನ
ಹೆಡೆಯಮಣಿಗಳನಿಲಿಗಳೊರಲಿ
ಸಡರಿದವು ಕೆಂಡವನು ನರಿಗಳು ಸಿಂಹಪೋತಕವ
ಕೆಡಹಿದವಲಾ ಕೃಷ್ಣ ನೀನೆಮ
ಗೊಡೆಯನಾಗಿರಲಕಟ ಭಂಗವ
ಪಡಿಸಿದರು ಕೌರವರೆನುತ ಹಲುಬಿದಳು ಪರಿಭವನ ೧೫

ತಂಗಿ ಸೈರಿಸು ಸಾಕು ಬಳಲಿದೆ
ಭಂಗವಿದು ತನ್ನದು ದುರಾತ್ಮರ
ಸಂಗರದಲಾವಿದ್ದೆವತ್ತಲು ಸಾಲ್ವನೆಂಬವನ
ಹಿಂಗದಿಪ್ಪತ್ತೇಳು ದಿನ ಯದು
ಪುಂಗವರು ಕಾದಿದವರು ಮುಱಿದುದು
ಮುಂಗುಡಿಯಲದು ಕಾದಿ ಕೊಂದೆನು ಬಳಿಕ ವಾನವನ ೧೬

ಎಂದು ನಿಜ ವೃತ್ತಾಂತವನು ಗೋ
ವಿಂದನಭಿವರ್ಣಿಸುತ ಕುಂತೀ
ನಂದನರನಾ ದ್ರುಪದರಾಜನ ತನುಜೆಯನು ತಿಳುಹಿ
ಸಂದ ದಿವ್ಯಾಂಬರ ವಿಭೂಷಣ
ವೃಂದದಲಿ ಮನ್ನಿಸಿ ಸುಭದ್ರಾ
ನಂದನಾನುಜೆಯರ ಸಹಿತ ಯಾತ್ರಾಭಿಮುಖನಾದ ೧೭

ಭಜಿಸುತೈತರಲಖಿಳ ವಿಪ್ರ
ವ್ರಜಸಹಿತ ನಿಜಚರಣವನು ಧ
ರ್ಮಜ ವೃಕೋದರ ಪಾರ್ಥ ಯಮಳರನಪ್ಪಿ ಸಂತೈಸಿ
ತ್ರಿಜಗದಧಿಪತಿ ಬೀಳುಕೊಟ್ಟಂ
ಬುಜಮುಖಿಯನುಚಿತದಲಿ ಕಳುಹಿಸಿ
ಸುಜನಸಂಸಾರಿಕನು ಬಂದನು ಮರಳಿ ನಿಜಪುರಕೆ ೧೮

ಅತ್ತಲಬುಜಭವಾಂಡಶತವು
ತೃಪ್ತಿತಾನೊಂದೀ ಕ್ಷಣದಲವ
ವೃತ್ತಿಯಲಿ ಮುಗುಳಾಗಳೇ ಲಯವಹದುಪೇಕ್ಷೆಯಲಿ
ಇತ್ತಲೀ ಪಾಂಡವರ ಸಿರಿಯೇ
ಮತ್ತೆ ತನ್ನಯ ಸಿರಿ ವಿಪತ್ತೇ ತನ್ನ ವಿ
ಪತ್ತೆನುತ ಮಱುಗುತ್ತಲಿರ್ದನು ಮನದಲಸುರಾರಿ ೧೯

ದ್ವಾರಕಿಯಲಿಹುದವರ ಮನ ಕಾಂ
ತಾರದೊಳಗಿಹುದಿವರ ಮನೆಯೆಡೆ
ಯಾಱದಿತ್ತಂಡದಲಿ ಮನ ನೆಱೆ ಹಾಸುಹೊಕ್ಕಾಗಿ
ಆರಱಿವರೆಲೆ ಭೂಪ ಕೃಷ್ಣನು
ದಾರಭಕ್ತಾಧೀನತೆಯ ಸಂ
ಸಾರವನು ನೆನೆವುತ್ತಲಿರ್ದನು ಪಾಂಡುನಂದನರ ೨೦

ಒಂದು ದಿನ ಯಾದವ ಕುಮಾರರ
ವೃಂದವಾ ಪ್ರದ್ಯುಮ್ನಮುಖ್ಯರು
ಸಂದರೊಂದುಪವನಕೆ ನಿಜಲೀಲಾ ವಿಹಾರದಲಿ
ಮುಂದುವರಿದು ಪಿಪಾಸೆಯಲಿ ನಡೆ
ತಂದರೊಂದು ಸರೋವರಕೆ ಸಾ
ನಂದದಿಂದಿಳಿದರು ಜಲಾರ್ಥಿಗಳಾಗಿ ಕೂಪದಲಿ ೨೧

ಇಳಿದು ಕಂಡರು ಕೂಪದೊಳಗೊಂ
ದಲಘು ಸತ್ವವನಾ ಕುಮಾರರು
ಕುಲಗಿರಿಯ ಕೆಡಹಿದವೊಲಿರೆ ಕೃಕಲಾಸರೂಪವನು
ಜಲವಿಹೀನದಲಕಟ ಬಿದ್ದುದು
ಹೊಲಬುದಪ್ಪಿ ಪ್ರಾಣಿ ಬೀದಿಗೆ
ಕಳದು ಬಿಸುಡುವೆವೆನುತ ನೆಗಹಲು ಮಾಡಿದರು ಮನವ ೨೨

ಅಗಣಿತಾರ್ಭಕರಿಳಿದು ತೆಗೆದರು
ತೊಗಲ ಪಾಶಂಗಳಲಿ ಸತ್ವವ
ಬಿಗಿದು ಬೊಬ್ಬಿಱಿದಾರ್ದು ಬಳ್ಳಿಗಳಿಂದ ತವತವಗೆ
ಮಗುಚಲಾಱದು ಮಗ್ಗುಲನು ಸೋ
ಜಿಗವಿದೇನೆಂದೆನುತ ಹರಿದಾ
ಜಗದುದರ ಕೃಷ್ಣಂಗೆ ಬಿನ್ನಹ ಮಾಡಿದರು ನಡುಗಿ ೨೩

ನುಡಿಯ ಕೇಳುತ ಕೇಳುತದಱಿ
ದ್ದೆಡೆಯ ತೋಱಿಸೆನುತ್ತ ತಾನೇ
ನಡೆದನಲ್ಲಿಗೆ ಕರುಣಿಗಳ ದಾತಾರ ಮನವೊಲಿದು
ಮಡುವಿನಲಿ ತಾನಿಳಿದು ಕಂಡನು
ಕೆಡೆದ ಕೃಕಲಾಸವನು ನಸುನಗು
ತೆಡದ ಕೈಯ್ಯಲಿ ತೆಗೆದು ಬಿಸುಟನು ಲೀಲೆಯಲಿ ತಡಿಗೆ ೨೪

ಆ ಮುಕುಂದನ ವಿಮಳ ಕರತಳ
ತಾಮರಸ ನಸು ಸೋಂಕಲಾಕ್ಷಣ
ಕಾ ಮಹಾಸತ್ವಾಕೃತಿಯು ಕುಶರೀರವನು ಬಿಸುಟು
ಸೋಮ ಸೂರ್ಯಾನಲ ಸಮಾನ ಮ
ಹಾಮನೋಹರ ರೂಪದಲಿ ಬಳಿ
ಕಾ ಮಹಾತ್ಮನು ಬಂದು ಬಿದ್ದನು ಕೃಷ್ಣನಂಘ್ರಿಯಲಿ ೨೫

ದಣಿಯೆ ನಾಲಗೆ ಹೊಗಳಿದನು ವೈ
ದಣಿಯೆ ಹೊರಳಿದನಂಘ್ರಿಯುಗದಲಿ
ಕುಣಿದನಡಿಗಡಿಗೊಲಿದು ತನುವನು ತನ್ನ ಧನ್ಯತೆಗೆ
ಪ್ರಣವನಿಷ್ಠರು ನಿಗಮ ಪಾರಾ
ಯಣರು ಕಾಣರು ತನಗೆ ನಾರಾ
ಯಣನ ದರುಶನವೀ ಕರಸ್ಪರುಶನವಿದೆಂತೆಂದ ೨೬

ಶಿರವ ಹಿಡಿದೆತ್ತಿದನು ಚರಣದ
ಲೆಱಗಿದಮರೋತ್ತಮನ ನಸುನಗು
ತಱಿಯದವನಂದದಲಿ ಕೇಳಿದನವನ ಸಂಗತಿಯ
ದೊರಕಿದುದು ನಿನಗೆಂತು ಹೇಳೀ
ಸುರವರಾರ್ಚಿತರೂಪು ಮುನ್ನಿನ
ನರಕಿ ದೇಹವಿದೇತಱಿಂದಾಯ್ತೆಂದನಸುರಾರಿ ೨೭

ಹೇಳಬಹುದಿನ್ನೆನಗೆ ನಿನ್ನಯ
ಮೂಲವೃತ್ತಾಂತವನೆನುತ ಸಿರಿ
ಲೋಲನರ್ಥಿಸಲೆಂದನಾತನು ಕೈಗಳನು ಮುಗಿದು
ಹೇಳಲಱೆವೆನೆ ಸಲೆ ಚರಾಚರ
ಜಾಲ ಚೇತನ ಸಾಕ್ಷಿಯಾಜ್ಞೆಯ
ಮೇಲೆ ಬಿನ್ನವಿಸುವೆನು ತನ್ನಯ ದುಷ್ಕೃತವನೆಂದ ೧೮

ಜ್ಞಾನಮೂರುತಿ ಚಿತ್ತವಿಸು ನೃಗ
ನಾನು ಹೆಸರಿಕ್ಷ್ವಾಕು ಭೂಪನ
ಸೂನು ಮುನ್ನಿನ ಜನ್ಮದಲಿ ವಿಖ್ಯಾತನವನಿಯಲಿ
ಮಾನವೇಂದ್ರರ ಮಧ್ಯದಲಿ ಗೋ
ದಾನ ಕನ್ಯಾದಾನ ವರ ಭೂ
ದಾನವೆಂಬಿನಱೊಳಗೆ ವಿಶ್ರುತನಾದೆ ನಾನೆಂದ ೧೯

ಹೆಸರುಗೊಂಬರೆ ದಾನಿಗಳನೀ
ವಸುಧೆಯಲಿ ತಾ ಮೊದಲು ನಿಮ್ಮಡಿ
ಯೆಸೆವ ಕರ್ಣಪಥಕ್ಕೆ ಬಾರದೆ ತನ್ನ ನಾಮವದು
ವಸುಮತೀರಜವೆನಿತು ತಾರಾ
ವಿಸರವೆನಿತೆನಿತಭ್ರಧಾರಾ
ವಿಸರವೆನಿತಾಕಳನು ಕೊಟ್ಟೆನು ವಿಪ್ರರಿಂಗೆಂದ ೨೦

ಹೊನ್ನ ಕೋಡಿನ ಕೊಳಗಗಳ ವರ
ವರ್ಣ ರೌಪ್ಯದ ವಸ್ತ್ರ ಮಣಿ ಸೌ
ವರ್ಣಭೂಷಣವೆಸೆಯೆ ಶೀಲಗುಣಾನ್ವಿತಂಗಳನು
ಮನ್ನಿಸುತ ವಿದ್ಯಾತಪಸ್ಸಂ
ಪನ್ನರಿಗೆ ಬಡವರಿಗೆ ವಸ್ತ್ರ ಸು
ವರ್ಣಭೂಷಣ ಸಹಿತ ಕೊಟ್ಟೆನು ಕಪಿಲೆಗಳನೆಂದ ೨೧

ಧನವನಿತ್ತೆನಸಂಖ್ಯವೆನೆ ಗೋ
ಧನವನಿತ್ತೆನು ಕನ್ನಿಕೆಯರನು
ಮನೆಯನಿತ್ತೆನು ಮನೆಯ ಮನೆಮುಟ್ಟುಗಳ ಪರಿಕರವ
ಘನಕುಟುಂಬ ದರಿದ್ರ ವಿದ್ವ
ಜ್ಜನರಿಗುರುಗುಣವಂತರಿಗೆ ಸಂ
ಜನಿತ ಸುಶ್ರದ್ಧೆಯಲಿ ಸದನುಗ್ರಹನೆ ಕೇಳೆಂದ ೨೨

ಇರಲಿರಲು ತಾನಿತ್ತ ಭೂಸುರ
ವರನ ಪಶುವೊಂದೆನ್ನ ನಿಜ ಮಂ
ದಿರಕೆ ಬಂದುದು ಬೆರಸಿ ಹೊಕ್ಕುದು ತನ್ನ ಗೋಕುಲವ
ಅಱೆಯದಾನದನಿತ್ತೆನಾ ಪಶು
ವೆರಸಿ ಮತ್ತೊಬ್ಬಮಳ ಧರಣೀ
ಸುರಗೆ ಬಂದುದು ಕೇಡು ತನಗದಱೆಂದ ಕೇಳೆಂದ ೨೩

ಕಂಡನಾ ಗೋಸ್ವಾಮಿ ಪಶುವನು
ಕೊಂಡು ಹೋಗುತ್ತಿರಲು ತನ್ನದು
ಭಂಡ ಹೋಗದಿರೆಲವೊ ಕಳ್ಳ ದುರಾತ್ಮ ನಿಲ್ಲೆನಲು
ಮಂಡಲಾಧೀಶ್ವರನು ನೃಗನು
ದ್ದಂಡನೆನಗಿಂತಿತ್ತನಾಗಿದ
ಕೊಂಡುಬಂದೆನು ಬಣಗೆ ನೀನಾರೆಂದನಾ ವಿಪ್ರ ೨೪

ಎನ್ನದಿದನೆನಗಿತ್ತನವನಿಪ
ತನ್ನದಿದು ತನಗಿತ್ತನೆನ್ನದು
ತನ್ನದಿದ ನಾ ಬಿಡೆನು ತಾ ಬಿಡೆನೆನುತ ತಮ್ಮೊಳಗೆ
ನಿರ್ಣಯಿಸಲಱೆಯದೆ ಸುಧರ್ಮವ
ನೆನ್ನ ಸಾರಿಗೆ ಬಂದರವರೀ
ಬನ್ನಬಡಿಸಿದ ಹದನನಿದನವಧರಿಸಿ ಕೇಳೆಂದ ೨೫

ಕೋಪದಲಿ ತನಗೆಂದನೊಬ್ಬನು
ಭೂಪ ಮುನ್ನೆನಗಿತ್ತುದನು ದ
ತ್ತಾಪಹಾರವ ಮಾಡಿಕೊಂಡೆಯಲ್ಲೆ ಪ್ರಲೋಭದಲಿ
ಪಾಪ ನಿನ್ನದೆನಲ್ಕೆ ಕೇಳ್ದಾ
ಳಾಪವನು ತನ್ನೊಡಲು ಮಹದನು
ತಾಪವಹ್ನಿಯಲದ್ದುದೇನೆಂಬೆನು ಮಹಾವ್ಯಥೆಯ ೨೬

ಭೂಸುರನ ಕಾಲ್ವಿಡಿದು ಕೊಡುವೆನು
ಗೋಸಹಸ್ರವನಕಟ ಬಿಡುವುದು
ರೋಷವನು ನೀನೆಂದು ಮುನ್ನಿನ ವಿಪ್ರನನು ನುಡಿಸೆ
ಸೂಸಿದನು ಸಾರೆನುತ ಕಣ್ಣಲಿ
ಕೇಸುರಿಯನಿರದಾ ದ್ವಿಜನು ಹೋಱ
ಬೀಸಿದನು ಕಾಲ್ವಿಡಿದು ಕೊಟ್ಟೆನು ಲಕ್ಷಗೋಧನವ ೨೭

ಕೆಟ್ಟೆನೇವೆನೆನುತ್ತ ಪದದಲಿ
ತಟ್ಟುಗೆಡೆದೆನು ನೋಡಿ ಕರುಣಾ
ದೃಷ್ಟಿಯಲಿ ಪಾಲಿಸವುದೆನ್ನನು ನರಕಕೂಪದಲಿ
ಮೆಟ್ಟಿ ಹೋಗದಿರಱೆಯದಿತ್ತ ನಿ
ಕೃಷ್ಟಮತಿಯನೆನುತ್ತ ತಾ ಬಾ
ಯ್ಬಿಟ್ಟು ಹೊರಳಿದೆನಾಗದವರಿಗೆ ಕರುಣಲವಲೇಶ ೨೮

ಆರು ಮಾಡುವುದೇನನಿಚ್ಛಾ
ಪ್ರಾರಬುಧ ಫಲವೈಸಲೇ ದ್ವಿಜ
ವೀರರೆನ್ನಲಿ ಬಿಸುಟುಹೋದರು ಗೋಪ್ರದಾನವನು
ತೀರಿತೆನಗಾಯುಷ್ಯವಂತಕ
ನೂರವರು ಕೊಂಡೊಯ್ದುದೆಂದನು
ಸೂರಿಯನ ಸುತನೆನ್ನೊಡನೆ ನಿಜಕರ್ಮಗತಿಗಳಿಗೆ ೨೯

ಆವುದನು ಮುನ್ನುಂಬೆ ಸುಕೃತ ಫ
ಲಾವಳಿಯನೋ ದುಷ್ಕೃತವನೋ
ಭೂವರನೆ ಹೇಳೆನಲು ಮುನ್ನವೆ ದುಷ್ಕೃತದ ಫಲವ
ಸೇವಿಸುವೆನೆನಲೆಂದನೆನ್ನನು
ಭೂವಿವರದಲಿ ಬೀಳೆನುತ ಸುರ
ಸೇವಿತಾಂಘ್ರಿಯೆ ಬಿದ್ದೆನೀ ಕೂಪದಲಿ ತಾನೆಂದ ೪೦

ಕಂಡೆನಾಗಳೆ ಕೂಪದಲಿ ಮೈ
ಗೊಂಡು ಕೃಕಲಾಸಾಕೃತಿಯನಾ
ಖಂಡಲಾರ್ಚಿತ ಚರಣಕಮಲನೆ ನಿಜಪದಾಂಬುಜವ
ಕಂಡೆನಹಹ ಸುಹೃಷ್ಟಮುನಿ ಹೃ
ತ್ಪುಂಡರೀಕ ಧ್ಯೇಯವನು ನೆಲೆ
ಕಂಡೆನೆನ್ನಯ ಪುಣ್ಯಫಲದ ಸಮಗ್ರತೆಯನೆಂದ ೪೧

ದೇವ ಭವದೀಯಾಂಘ್ರಿ ಕಮಲದ
ಸೇವಕರ ಸೇವಾನುಭಾವದ
ಲೀ ವಿವೇಕವಿದೆನಗೆ ಕೆಡದಿದು ಭವಭವಾಂತರದ
ದೇವದೇವಾರಾಧ್ಯಚರಣಯು
ಗಾವಲೋಕನವಾಯ್ತು ಧನ್ಯರ
ದೇವರಾರೆನ್ನಂತೆ ಮಾನ್ಯರು ಭುವನದೊಳಗೆಂದ ೪೨

ಜಯ ನಮೋ ಗೋವಿಂದ ಗೋಪೀ
ಪ್ರಿಯಪರಾಯಣ ಪರಮ ಕರುಣಾ
ಶ್ರಯ ನಮೋ ಗೋವರ್ಧನಾದ್ರಿಧರಾಖಿಳಾರಾಧ್ಯ
ಜಯ ನಮೋ ಜಯಯೆನುತ ಮಣಿ
ಮಯ ಮಹಾಮುಕುಟದಲಿ ಲಕ್ಷ್ಮೀ
ನಯನಕುಮುದಶಶಾಂಕನಂಘ್ರಿಗೆ ನಮಿಸಿ ಬೀಳ್ಕೊಂಡ ೪೩

ಎಱಗಿ ಬಲವಂದೇಱದನು ಬರೆ
ಮಿಱುಪ ದಿವ್ಯ ವಿಮಾನವನು ಸುರ
ವರರು ನೋಡುತ್ತಿರಲು ವಿಸ್ಮಿತರಾಗಿ ಬಳಿಕಿತ್ತ
ಮುರಹರನು ನೆರೆದಖಿಳ ಪೃಥ್ವೀ
ಶ್ವರರಿಗಾ ಪರಿಜನಕೆ ಯಾದವ
ವರಕುಮಾರರಿಗೆಂದನನುಪಮ ಧರ್ಮಸಂಗತಿಯ ೪೪

ವಿಷವಲಾ ಬ್ರಹ್ಮಸ್ವವೆಂಬುದು
ವಸುಮತೀಶರಿಗಗ್ನಿಗಿದು ಜೀ
ರ್ಣಿಸದು ವಿಷದಿಂದಧಿಕವಪ್ರತಿಕಾರವಿದು ದಿಟಕೆ
ನೊಸಲಕಣ್ಣ ಮಹೇಶ್ವರಗೆ ಸೈ
ರಿಸದು ಮಿಕ್ಕ ಮನುಷ್ಯರಿಗೆ ಜೀ
ರ್ಣಿಸುವುದೇ ಕೇಳಿರೆ ನೃಗಕ್ಷಿತಿಪಾಲಕನ ವಿಧಿಯ ೪೫

ಕೊಲುವುದಾ ವಿಷವುಂಡವರನೇ
ಕೊಲುವುದಿದು ನಿರನುಜ್ಞೆಯಲಿ ಮೇ
ಣ್ಣಲುಗೆಯಲಿ ಕೊಳಲಾತನನು ತಂದೆಯನು ಪುತ್ರರನು
ಬಲುಹು ಬಲ್ಲಾಳಿಕೆಯಲುಂಡಡೆ
ಕೊಲುವುದಿಪ್ಪತ್ತೊಂದು ಕುಲವನು
ಸಲೆ ಸಮಸ್ತಪುರಾಣ ಸಮ್ಮತವೆಂದನಸುರಾರಿ ೪೬

ಎನಿತು ಹುಡಿಯನು ಹೃತಧನರ ಕಂ
ಬನಿಗಳುಂಬವು ಮೇದಿನಿಯ ಮೇ
ಲನಿತು ವರ್ಷಸಹಸ್ರ ನರಕಮಹಾರ್ಣವಂಗಳಲಿ
ಜನಪರಾಗಲಿ ವಿಪ್ರರಾಗಲಿ
ಧನ ಪರಾಯಣ ವೈಶ್ಯರಾಗಲಿ
ಮನದ ಸಂಶಯಬೇಡ ಯಾತನೆಬಡುವರವರೆಂದ ೪೭

ದತ್ತವಾಗಲಿ ಮೇಣು ತನ್ನಿಂ
ದತ್ತವಾಗಲಿ ಮೇಣು ಪರರಿಂ
ದುತ್ತಮದ್ವಿಜವೃತ್ತಿಯನು ಸಾಹಸದಲಪಹರಿಸಿ
ಮತ್ತೆ ವಿಷ್ಟೆಯ ಹುಳುಗಳಾಗಱು
ವತ್ತುಸಾವಿರ ವರುಷ ಹುಟ್ಟುವ
ರುತ್ತರಿಸಲರಿದಾ ಮಹಾಪಾತಕವನದನೆಂದ ೪೮

ಬೇಡ ತನಗಾ ವಿಪ್ರಧನವದು
ಕೇಡು ನೃಪರಾಯುಷವ ಕೊಂಡಡೆ
ಮಾಡುವುದು ರಾಜ್ಯಚ್ಯುತಿಯನತಿಶಯ ಪರಾಭವನವ
ಮಾಡದಿರಿ ವಿಪ್ರಾಪರಾಧವ
ಮಾಡಲವರು ಶತಾಪರಾಧವ
ನಾಡದಿರಿ ತನ್ನೊಡನೆ ತನ್ನವರೆಂದನಸುರಾರಿ ೪೯

ವಂದಿಸುವುದೆನ್ನಂತೆ ವಿಪ್ರರ
ವೃಂದವನು ಸಹಿತಾಘರಾಗಲಿ
ನಿಂದಿಸಿದಡಪರಾಧಿಗಳು ನೆಱೆದಂಡ್ಯರಹರೆನಗೆ
ಎಂದು ಕರುಣಿಸಿ ಧರ್ಮವನು ಸಾ
ನಂದದಲಿ ನಿತ್ಯಾತ್ಮದೇವ ಮು
ಕುಂದ ಬಿಜಯಂಗೈದು ಹೊಕ್ಕನು ರಾಜಮಂದಿರವ ೫೦

ಎಂಭತ್ತ ಮೂರನೆಯ ಸಂಧಿ ಮುಗಿಯಿತು.

# ಎಂಭತ್ತನಾಲ್ಕನೆಯ ಸಂಧಿ

ಬಂದನಾ ಬಲಭದ್ರನಧಿಕಾ
ನಂದದಲಿ ಗೋವಿಂದನಟ್ಟಲು
ನಂದಗೋಕುಲಕಾತ್ಮಬಂಧು ಜನಾನುರಾಗದಲಿ

ಅರಸಕೇಳೊಂದು ದಿನ ಮುರರಿಪು
ಪರಿಮಿತದಲಾಳೋಚಿಸುತ ನಿಜ
ಶರಣಜನದಭ್ಯುದಯವನು ಗೋವಿಪ್ರಸುರಕುಲದ
ಪರಮಸುಖಸಾಗರವನಾವಿ
ಷ್ಕರಿಸುವಂದವನದಱೊಳಗೆ ಕಡು
ಕರುಣಿಗಳ ದಾತಾರ ನೆನೆದನು ನಂದಗೋಕುಲವ ೧

ಬೆಂದರೆನ್ನಯ ವಿರಹ ಶಿಖಿಯಲಿ
ನಂದಗೋಪ ಯಶೋದೆಯರು ನೆಱೆ
ಹೊಂದದಿರರಾ ಗೋಪಿಯರು ತಮಗೋತು ಬಾಂಧವರ
ವೃಂದವನು ನೆಱೆ ತೋಱಿದು ತನ್ನೊಳ
ಗೊಂದಿದವರನು ತೋಱಿದೆನೆನ್ನವ
ರಂದವನು ನೆಱೆ ತಿಳಿದು ಬಾ ಹೋಗೆಂದನಗ್ರಜಗೆ ೨

ಹಿಂಗಲಱಿವೆನೆ ತನ್ನ ನೆನೆವವ
ರಂಗರಕ್ಷೆಯ ಮಾಡಲೋಸುಗ
ವಂಗವಿಡಿದಿಹೆನೈಸಲೇ ತತ್ಪ್ರಿಯ ಹಿತಾರ್ಥದಲಿ
ಸಂಗಿಯಾಗಿಹುದೆನ್ನ ಮನ ನಿ
ಸ್ಸಂಗವಾಗಿತರದಲಿ ಭಕುತಿಯ
ಹಂಗು ಹಿರಿದೆನ್ನೊಲವನಱುಹಿಸು ಹೋಗು ನೀನೆಂದ ೩

ಎನೆಲಹುದು ಮತ್ತೇನು ದೇವರು
ತನುವಿಡಿದು ವರ್ತಿಸುವುದಾಶ್ರಿತ
ಜನಹಿತಾರ್ಥವೆನುತ್ತ ಮನದನುರಾಗಭಾರದಲಿ
ಕನಕಮಯ ರಥದಿಂದ ಬಾಂಧವ
ಜನವನೀಕ್ಷಿಸುವರ್ಥಿಯಲಿ ಬಂ
ದನು ಹಲಾಯುಧನೊಲವು ಮಿಗಲಾ ನಂದಗೋಕುಲಕೆ ೪

ಅಸಮಗೋಧೂಳಿಯಲಿ ರಥ ಹಯ
ವಿಸರವಡಗಿದವಾ ರಥಾಶ್ವದ
ಎಸಕವಪಗತವಾಯ್ತು ತುಱುಗಳ ಬಹಳ ರಭಸದಲಿ
ಮುಸುಕಿ ಮೋಱೆಯ ನೆತ್ತಿನೋಡುವ
ಪಶುಗಳನು ನೋಡುತ್ತ ಮುದದಲಿ
ನಸುನಗುತ ಗೋಕುಲವ ಹೊಕ್ಕನು ವೀರ ಬಲಭದ್ರ ೫

ಕೃಷ್ಣ ಚರಿತವನೊಲಿದು ಪಾಡುತ
ಕೃಷ್ಣ ಮಹಿಮೆಯನೊಲಿದು ಹೊಗಳುತ
ಕೃಷ್ಣ ನಾಮಾವಳಿಗಳನು ಮನವೊಲಿದು ಕೀರ್ತಿಸುತ
ಕೃಷ್ಣ ವಾರ್ತೆಯ ಕೇಳಿ ಕರಗುತ
ಕೃಷ್ಣನನು ನೆನೆದಳುವ ಗೋಪರ
ಕೃಷ್ಣ ವಲ್ಲಭೆಯರ ರವವನಾಲಿಸುತ ನಡೆತಂದ ೬

ಆರ ರಥವೈತಹ ಮಹಾತ್ಮರ
ದಾರೆನುತ ಹೊಂದೇರನೀಕ್ಷಿಸಿ
ವೀರತಾಳಧ್ವಜದಲಱಿತರು ರಾಮನೆಂಬುದನು
ಜಾಱಿದಸುವನು ಕಂಡ ಕರಣ
ಸ್ಫಾರವೃತ್ತಿಗಳಂತೆ ಗೋಕುಲ
ನಾರಿಯರು ನರರೈದೆ ನೆರೆದೈತಂದರಿದಿರಾಗಿ ೭

ಬಂದು ತಲೆವಾಗಿದರು ಚರಣ
ದ್ವಂದ್ವದಲ್ಲಿ ಕೆಲರಪ್ಪಿದರು ಸಾ
ನಂದದಲಿ ಸುಪ್ರೇಮ ಕುಶಲಕ್ಷೇಮವಾರ್ತೆಯಲಿ
ಬಂದು ಕಾಣಿಸಿಕೊಳುತ ಗೋಪರ
ವೃಂದವನು ರಥದಿಂದಿಳಿದು ನಡೆ
ತಂದದೊಪ್ಪುವ ನಂದಗೋಪಯಶೋದೆಯರ ಗೃಹಕೆ ೮

ಬಂದು ಮಾತಾಪಿತೃಗಳಂಘ್ರಿ
ದ್ವಂದ್ವದಲಿ ತಲೆವಾಗಿರಲು ಸಾ
ನಂದದಲಿ ಹರಸುತ್ತ ತೆಗೆದಪ್ಪಿದರು ಹಲಧರನ
ತಂದೆ ಬಾ ತನ್ನೈಯ್ಯ ಬಾ ಗೋ
ವಿಂದನಣ್ಣನೆ ಬಾ ಯೆನುತ್ತಾ
ನಂದಗೋಪಯಶೋದೆಯರು ಮೈದಡವಿದರು ಬಿಡದೆ ೯

ಎಱಗಿದನು ವಿಪ್ರರಿಗೆ ಕುಲವೃ
ದ್ಧರಿಗೆ ಸತ್ಕೃತನಾಗಿ ಕುಳ್ಳಿ
ರ್ದುರುತರಪ್ರೇಮದಲಿ ಕುಶಲಕ್ಷೇಮವಾರ್ತೆಯಲಿ
ಪರಿಹೃತಶ್ರಮನಾಗಿ ಕೃಷ್ಣನ
ಚರಿತ ಗುಣಪೀಯೂಷವನು ವಿ
ಸ್ತರಿಸಿ ವಿರಹಾರ್ತಿಯನು ಕೆಡೆನೂಕಿದನು ಬಾಂಧವರ ೧೦

ಕೇಳುತವೆ ತವತವಗೆ ಗೋಕುಲ
ಬಾಲೆಯರು ಗೋವಿಂದಪದಯುಗ
ಲೋಲೆಯರು ಹರಿತಂದರಾ ಹರಿಯಣ್ಣನಂತಿಕಕೆ
ಕೇಳಿದರು ಕುಶಲವನು ಹರುಷವಿ
ಶಾಲ ಮಂದಸ್ಮಿತಮುಖಾಬ್ಜೆಯ
ರಾಲಿಸುತ ಮನದೊಳಗೆ ಕೃಷ್ಣನುದಾರ ಲೀಲೆಗಳ ೧೧

ವಲ್ಲಭನೆ ಹೇಳೆವಗೆ ಲಕ್ಷ್ಮೀ
ವಲ್ಲಭನು ತತ್ಪುರ ವಧೂಜನ
ವಲ್ಲಭನು ಸುಖದಿಂದಲಿರ್ದನೆ ಕೃಷ್ಣನೀ ಧರೆಯ
ಬಲ್ಲಹರೆನಿಪ್ಪಖಿಳ ಪೃಥ್ವೀ
ವಲ್ಲಭರನಭಿಭವಿಸಿ ಸಾಧಿತ
ಸಲ್ಲಲಿತಸತ್ಕೀರ್ತಿ ಪಾವನಕೀರ್ತಿಯೆಂದೆನಿಸಿ ೧೨

ನೆನೆವನೈ ಪಿತೃಮಾತೃಬಾಂಧವ
ಜನವನೀ ಗೋಕುಲವನೀ ಗೋ
ಧನವನೀ ವೃಂದಾವನವ ಗೋವರ್ಧನಾಚಲವ
ನೆನೆವನೈ ಮಱೆದಾಗಿ ನಿಜಪದ
ವನಜ ಸಂಶ್ರಿತೆಯರನನಾಥೆಯ
ರನು ಮುರಾಂತಕನೆಮ್ಮನೆಂದರು ಕಾಂತೆಯರು ಮಱುಗಿ ೧೩

ತೊಱೆದು ಪತಿಪಿತೃಮಾತೃಬಾಂಧವ
ವರ ಸುಹೃತ್ಸಂಬಂಧಿಸುತರಂ
ಬುರುತರದ ಸಂಸಾರಸುಖಸಾಧನದ ಸಂಪದವ
ತೊಱೆದೆವಿಹಪರಲೋಕವೆರಡನು
ಕರುಣವುಳ್ಳವನೆಂದು ಕೃಷ್ಣನ
ಚರಣಕಮಲದ ಸಂಗಸುಖಲಾಭೈಕ ಲೋಭದಲಿ ೧೪

ಬಿಟ್ಟು ಹೋದನು ನಮ್ಮ ಮನದೊಳ
ಗಿಟ್ಟು ವಿರಹಕೃಶಾನು ತಾಪವ
ನಟ್ಟಿಯನು ಬೀಸಾಡಿ ತಲೆಹೋಹಂತೆ ಮಧುಪುರಿಗೆ
ಕೆಟ್ಟೆವಲ್ಲೈ ಕೃಷ್ಣನಲಿ ಹುಸಿ
ಹುಟ್ಟದೆಂದೇ ನಂಬಿ ಜೀವವ
ನಿಟ್ಟು ಜೀವಾಧಾರಮೂರ್ತಿಯಲೆಂದು ಹಲುಬಿದರು ೧೫

ಮಱೆದನೆಮ್ಮನು ಕೃಷ್ಣನೆಮಗಾ
ಮಱವೆಯನು ಕರುಣಿಸನು ತನ್ನಲಿ
ಮಱುಗಿ ಮಾಡುವುದೇನು ಬಲ್ಲವರಾರು ಮನದಳಲ
ಮರುಳಲಾ ಯೆಲೆ ತಾಯೆ ಮಾಡುವೆ
ಹರಿದ ನೀರಿಗೆ ಸೇತುವನು ನ
ಮ್ಮಱಕೆಯಲಿ ಫಲವೇನೆನುತ ಹಲುಬಿದರು ತಮ್ಮೊಳಗೆ ೧೬

ಬೇಡ ಕೃಷ್ಣನ ಮಾತನೇ ಮಱೆ
ತೋಡುವೆವು ಕಡೆಯಿಲ್ಲ ತಾಪವ
ಮಾಡುತಿದೆಲಾ ನಮ್ಮುದರಕುಹರದಲಿ ಮಱುಕೊಳಿಸಿ
ಮಾಡುವುದು ತಾನೇನು ಚಿಂತಿಸಿ
ಕೂಡಲಱಿವುದೆ ಮನದೊಲವು ಮಾ
ತಾಡಿ ಮತ್ತಿನ್ನೊಂದು ವಿಷಯದಲೆಂದರಬಲೆಯರು ೧೭

ಎನುತೆನುತ ಕೃಷ್ಣನ ಜಗನ್ಮೋ
ಹನವೆನಿಪ ಮೂರ್ತಿಯನು ಸುಸ್ಮಿತ
ಜನಿತ ಮಧುರಾಲಾಪ ವೀಕ್ಷಣ ವಿಭ್ರಮಂಗಳನು
ವನಿತೆಯರು ನೆನೆವುತ್ತ ನೆನೆವುತ
ಮುನಿಗಳಂದದಲಿರದೆ ಮಱೆದರು
ತನುವನತ್ತರು ಕೃಷ್ಣ ಹಾ ಹಾ ರಮಣ ಹಾ ಯೆನುತ ೧೮

ಅಳುವ ಸತಿಯರ ಮನದ ತಾಪವ
ಹಲಧರನು ಕಾಣುತ್ತ ವಿರಹಾ
ಕುಳಿಯರನು ಕೃಷ್ಣಪ್ರಹಿತ ಸಂದೇಶಸೂಕ್ತಿಗಳ
ತಿಳುಹಿ ತತ್ವವಿವೇಕ ಬುದ್ಧಿಯ
ಬಲುಮೆಯಲಿ ಸಂತವಿಸಬಂದೆನು
ಲಲನೆಯರಿರಾನೇ ತದರ್ಥದಲೆಂದು ಬೋಧಿಸಿದ ೧೯

ಹಲವು ಪರಿಗಳಲಾ ಸ್ಯಮಂತಕ
ದೊಳಗೆ ಕರುಣಿಸಿದರ್ಥವನು ಮನ
ದೊಳಗೆ ಭಾವಿಸುತಿಹುದು ಮಱೆಯದೆ ಮಾಂಸದೃಷ್ಟಿಗಳ
ಬಳಿಕೆ ಸುಸ್ಥಿರವಲ್ಲ ಮಾಯೆಯ
ಬಲೆಗೆ ಮೃಗವಾಗದಿರಿ ತಾ ನಿ
ಮ್ಮೊಳಗಿಹನು ಸರ್ವಾತ್ಮಕನು ಚೈತನ್ಯ ತಾನೆಂದ ೨೦

ಗೋಪಿಯರಿರಾ ನಿಮ್ಮವೋಲೆನ
ಗೋಪರಿಲ್ಲವನಿಯಲಿ ತನ್ನನು
ತಾಪವಿದು ತಡವಿಲ್ಲದೀವುದು ತನ್ನ ನಿಜಪದವ
ಓಪರಿಲ್ಲೆನ್ನಂತೆ ನಿವಗನು
ರೂಪವಿದು ಮಾಡದಿರಿ ತನ್ನಲಿ
ಕೋಪವನು ಕಾಂತೆಯರಿರೆಂದಾನೆಂದೆನೆಂದೆಂದ ೨೧

ಎಂದು ಸತಿಯರ ವಿರಹಶಿಖಿಯನು
ನಂದಿಸುತ ಸಂದೇಶ ಸೂಕ್ತಿಗ
ಳಿಂದ ಸಂತವಿಸುತ್ತ ಕೃಷ್ಣಕಥಾಕಥನದಿಂದ
ನಂದಗೋಕುಲದವರಿಗಾ ಗೋ
ವಿಂದನಿದ್ದಂದದಲಿ ಪರಮಾ
ನಂದವನು ಮಾಡುತ್ತಲಿರ್ದನು ವೀರ ಬಲಭದ್ರ ೨೨

ಎರಡು ತಿಂಗಳನದಱೊಳಗೆ ಸಂ
ಚರಿಸುತಿರ್ದನು ವರವಸಂತದ
ಸಿರಿಯ ಸಂಭಾವಿಸುತ ವೃಂದಾವನವನಾಂತದಲಿ
ಹರುಷದಲಿ ರಮಿಸುತ್ತ ಸತಿಯರು
ನೆರಸಿ ವಿವಿಧ ವಿಹಾರ ಲೀಲಾ
ಚರಣೆಗಳಲೊಪ್ಪಿದನು ಸತ್ಕೃತನಾಗಿ ವಿಭವದಲಿ ೧೩

ಎಸೆವ ಬೆಳದಿಂಗಳಲಿ ಗೋಕುಲ
ಶಶಿಮುಖೀಜನದೊಡನೆ ಬಹುವಿಧ
ಕುಸುಮಕುಟ್ಮಲಸುರಭಿ ಶೀತಳ ಮಂದ ಮಾರುತನ
ಬಸವಳಿವ ತುಂಬಿಗಳ ಚೂತ
ಪ್ರಸವ ಚುಂಬಕ ಚತುರ ಕೋಕಿಲ
ವಿಸರದಲಿ ವೃಂದಾವನಾಂತದಲಾಡಿದರು ನಲಿದು ೧೪

ವರುಣನಾಜ್ಞೆಯಲಾರತಿಶ್ರಮ
ಹರವ ಮಾಡಲು ಬಂದಳಾ ಸಂ
ಕರುಷಣನ ಸನ್ನಿಧಿಗೆ ಕಳುಹಲು ವಾರುಣೀದೇವಿ
ಸರಸದಲಿ ತದ್ವನದ ತರು ಕೋ
ಟರದಲಾವಿರ್ಭವಿಸಿ ವನವನು
ಪರಿಮಳದಲದ್ದಿದಳು ಹೊದ್ದಿದಳಂದು ಹಲಧರನ ೧೫

ವಾರುಣೀಪರಿಮಳದ ಪವನನ
ಗೋರಿಗೊಳಗಾಯ್ತವರ ಮನ ಯದು
ವೀರನೆಯ್ದಿದನಾ ಮಹಾಮಧುಧಾರೆಯಿದ್ದೆಡೆಗೆ
ನಾರಿಯರು ಸಹಿತಾ ರತಿಶ್ರಮ
ವಾಱಲಂಜಲಿ ದಣಿಯೆ ಕುಡಿದನು
ದಾರನುತಿ ಕೈಯೊಡ್ಡಿ ಬಹಳ ಮನೋನುರಾಗದಲಿ ೧೬

ಹಾಡಿದನು ಮದವೇಱಿ ವಧುಗಳು
ಗೂಡಿ ವನವನಗಳಲಿ ವಿವಿಧ
ಕ್ರೀಡೆಗಳಲೋರಂತೆ ರಾಸೋತ್ಸವ ವಿಹಾರದಲಿ
ಆಡಿದನು ಕರಿಣಿಗಳ ಮಧ್ಯದ
ಲಾಡುವೈರಾವತದವೋಲು ಸ
ಗಾಢ ವಿಕ್ರಮನೀಕ್ಷಿಸುತ ವೈಮಾಸಿಕರು ಹೊಗಳೆ ೧೭

ಮೊಳಗಿದವು ದುಂದುಭಿಗಳಭ್ರದ
ಲಲಘು ಜಯರವಪುಷ್ಪವೃಷ್ಟಿಗ
ಳೊಳಗೆ ಹೊಗಳುತ್ತಿರ್ದರಾ ಗಂಧರ್ವಕಿನ್ನರರು
ಲಲಿತ ಗುಣವಿಕ್ರಮವ ಬಿರುದಾ
ವಳಿಗಳನು ಸುರಸತಿಯರೊಡನೊಡ
ನೊಲಿದು ಪಾಡುತ ಭಜಿಸುತ್ತೈತರಲಾಡಿದರು ನಲಿದು ೧೮

ಪರಿಪರಿಯ ಕೇಳಿಗಳಲಿಂತಾ
ವರವಧೂಜನಸಹಿತ ವಿಹರಿಸ
ಲುರುತರಶ್ರಮದಿಂದ ಜಲಕೇಳೀವಿನೋದವನು
ಸುರವಿನುತಚಾರಿತ್ರನರ್ಥಿಸಿ
ಕರೆದನಾ ಯಮುನೆಯನು ಬಾರದ
ಡರಿಮಥನನಾ ನದಿಯಲಧಿಕಾಮರುಷವನು ತಳೆದ ೧೯

ಅಕ್ಕಟೇನದಿ ಮಾಱಿದಳು ಮನ
ಸೊಕ್ಕಿ ಕರೆದಪೆನೆಂದು ಮಾತನು
ಲೆಕ್ಕಿಸದೆ ತನ್ನಾಜ್ಞೆಯನು ಹರಹರ ಮಹಾದೇವ
ಕಕ್ಕುಲಿತೆಯಿನ್ನೇಕೆ ಜೀವವ
ಜಕ್ಕುಲಿಸುವೆನೆನುತ್ತ ನೇಗಿಲ
ನಿಕ್ಕಿದನು ನದಿಗಖಿಳ ಕೋಪಾಟೋಪದಲಿ ಜಡಿದು ೨೦

ಹೋಹೆ ನೀನೆಲ್ಲಿಗೆ ದುರಾತ್ಮಮ
ಹಾಹಿತಲ್ಪಾಗ್ರಜನನಱಿಯಾ
ಬಾಹುಬಲವನು ಬಱಿದೆ ಮೆಚ್ಚಿಸಲೇತಕವಸಿಯಲಿ
ಆಹ ಗರ್ವವಿದೆನ್ನೊಡನೆ ನಿ
ರ್ವಾಹಿಸಿತೆ ಫಡಫಡಯೆನುತ ಕಡು
ಗಾಹ ತಳೆದವು ಕಂಗಳತಿಶಯ ರೌದ್ರಮುಖನಾದ ೨೧

ಫಡ ಬಣಗೆ ಬಾರದಡೆ ದಿಗುಬಲಿ
ಗೊಡುವೆನಿದೆ ನೋಡೆನುತ ಘುಡುಘುಡು
ಘುಡಿಸಿ ಕೋಪಾಟೋಪದಲಿ ಜಲಸೆಳೆಯೆ ನೇಗಿಲನು
ಕಡಲು ಮೇಲ್ಮೊಗವಾಯ್ತು ಹೆಮ್ಮರ
ನುಡಿಯೆ ಘುಳುಘುಳುಘುಳು ನಿನಾದದ
ಉಡವಿ ಜಲಮಯವಾದುದೇನೆಂಬೆನು ಮಹಾದ್ಭುತವ ೨೨

ಕೊಲ್ಲದಿರು ಕೊಲ್ಲದಿರು ಹೋಹೋ
ಚೆಲ್ಲದಿರು ವನದಲಿ ವಿವೇಕವಿ
ದೆಲ್ಲಿಯದು ಹೆಂಗಸಿಗೆ ಮುನಿವರೆ ಮಾನ್ಯರಾದವರು
ಬಲ್ಲೆನೈ ನಿನ್ನೊಂದು ಶಿರದಲಿ
ಮೊಲ್ಲೆಯರಳೀ ಭುವನಶತ ಕೈ
ವಲ್ಯನಾಥನೆ ಕರುಣಿಸೆಂದಳು ಯಮುನೆ ಮೈದೋಱಿ ೨೩

ಬಿಡು ಬಿಡೆನ್ನನು ದೇವೆನುತ ನಡ
ನಡನೆ ನಡುಗುತ ಭೀತಿಯಲಿ ತ
ನ್ನಡಿಗಳಲಿ ತಲೆವಾಗಿ ಬಿದ್ದಿರಲಧಿಕ ಕರುಣದಲಿ
ತಡೆಯದಭಯವನಿತ್ತು ಬಿಟ್ಟನು
ನಡೆಯೆನುತ ನದಿಯನು ವನಕೆ ಕಿಱಿ
ದೆಡೆಯನೆಳೆದು ಹಲಾಯುಧನು ತೆಗೆದನು ನಿಜಾಯುಧವ ೨೪

ಅಲ್ಲಿಯೇ ಜಲಕೇಳಿಯನು ರಿಪು
ಮಲ್ಲಗಜಪಂಚಾಸ್ಯನಾ ವ್ರಜ
ವಲ್ಲಭೆಯರೊಡನಾಡಿದನು ನಾನಾ ವಿಧಾನದಲಿ
ಬಲ್ಲಿದರ ದೇವಂಗೆ ಕೊಟ್ಟಳು
ಸಲ್ಲಲಿತ ಭೂಷಣವರಾಂಬರ
ಫುಲ್ಲವನಮಾಲಾನುಲೇಪನನಿಕರವನು ಯಮುನೆ ೩೫

ಅರಸಕೇಳದ್ಯಾಪಿ ನೀಲಾಂ
ಬರನ ಬಹಳ ಪರಾಕ್ರಮುವನೀ
ಧರೆಗೆ ಸೂಡಿಸುವಂತೆಯ ಮುನಿವನಪ್ರದೇಶದಲಿ
ಹರಿವುತಿಹಳನುಪಮಹಲಾಗ್ರಾ
ಕರುಷಣದ ಮಾರ್ಗದಲಿ ಚಿತ್ರವೆ
ಸರುಹಪದದವೊಲಬುಜಜಾಂಡವನಾಂತದಂತದಲಿ ೩೬

ದಿನ ಹಲವ ಬೀಳ್ಕೊಂಡವೊಂದೇ
ದಿನದವೋಲಾ ಸಕಲಗೋಪೀ
ಜನಕೆ ಗೋಪರಿಗುತ್ಸವೋತ್ಸವವೆನಲು ಹಲಧರನ
ಜನಿತ ವಿವಿಧವಿಹಾರದಲಿ ಮೋ
ಹನವೆನಿಪ ಲೀಲೆಯಲಿ ಸಾಕ್ಷಾ
ದ್ದನುಜಹರ ಗೋವಿಂದನಿದ್ದಂದದಲಿ ಗೋಕುಲಕೆ ೩೭

ಬಳಿಕ ಕಳುಹಿಸಿಕೊಂಡು ವಿರಹಾ
ಕುಳರನಪ್ಪಿ ವಿವೇಕಬುದ್ಧಿಯ
ತಿಳುಹಿ ಕೃಷ್ಣನನಖಿಳಚೈತನ್ಯಾತ್ಮನೆಂಬುದನು
ಅಳಲನಾಱಿಸಿ ಸಂತವಿಸಿ ಗೋ
ಕುಲವ ಹೊಱವಂಟೇಱಿ ರಥವನು
ಹಲಧರನು ನಡೆತಂದನಂದಾ ದ್ವಾರಕಾಪುರಕೆ ೩೮

ರಾಮನಭಿವರ್ಣಿಸಿದನಾ ಸು
ಕ್ಷೇಮವನು ಗೋಕುಲದ ವಿರಹ
ಕ್ಷಾಮವನು ಗೋಪಿಯರ ಬಹಳ ಮನೋನುರಾಗವನು
ಸೌಮನಸ್ಯದಲವರು ಕಳುಹಿದ
ಕಾಮಧೇನು ಸುವರ್ಣರತ್ನ
ಸ್ತೋಮವನು ತೋಱಿಸಿದನಾ ನಿತ್ಯಾತ್ಮ ಕೃಷ್ಣಂಗೆ ೩೯

ಎಂಭತ್ತನಾಲ್ಕನೆಯ ಸಂಧಿ ಮುಗಿಯಿತು.

# ಎಂಭತ್ತೈದನೆಯ ಸಂಧಿ

ಚಂಡರಿಪುಭಟ ಶರಭಕುಲ ಭೇ
ರುಂಡನಾನತಜನಕಮಲ ಮಾ
ರ್ತಾಂಡನಾ ಬಲಭದ್ರ ಮುಱಿದನು ವಿವಿದನಾನರನ

ಕರುಣಿಸೈ ಮುನಿನಾಥ ಪುನರಪಿ
ಪರಮಪುರುಷಾಗ್ರಜನ ಲೀಲಾ
ಚರಿತವನು ಸಂಪನ್ನಭುಜಬಲಬಹಳವಿಕ್ರಮದ
ಸಿರಿಯನೆನಗೆನಲಧಿಕ ಹರುಷದ
ಲರಸನನು ಮನ್ನಿಸುತ ಮುನಿಕುಲ
ಸರಸಿಜಾಮುಳಭಾನು ನಗುತಿಂತೆಂದನೊಲವಿನಲಿ ೧

ಅರಸ ಕೇಳೊಂದುದಿನ ನರಕಾ
ಸುರನ ಸಖಿ ವಿವಿದಾಖ್ಯವರ ವಾ
ನರನು ಮೈಂದನ ತಮ್ಮನಾ ಸಖಿ ಮಡಿದಳಲು ಮಿಗಲು
ಮುರಹರದ್ವೇಷದಲಿ ಬಂದನು
ಪುರನದೀಗ್ರಾಮಾಂತರಂಗಳ
ನೊರಸುತಾನರ್ತಂಗಳಿಗೆ ದುಷ್ಟಾತ್ಮನುರವಣಿಸಿ ೨

ಹೊಕ್ಕ ಘನಸಾಗರದ ಸಲಿಲವ
ನುಕ್ಕಿಸುವನಿತ್ತಡಿಗೆ ತೋಳ್ಗಳ
ನಿಕ್ಕಿ ನಗರಗ್ರಾಮುಗಳು ಮುಳುಗಾಡಲಡಿಗಡಿಗೆ
ತೆಕ್ಕೆಯಲಿ ಗಿರಿನಿಕರವನು ಕಿ
ತ್ತಿಕ್ಕುವನು ನೆಱೆದುರ್ಗಳೊಳಗಾ
ಮರ್ಕಟನ ಮನಮುನಿಸು ಮೋಱೆಯಿಡಿಸಿತ್ತು ಮೂಜಗವ ೩

ಎಲ್ಲಿ ವರಋಷಿಜನಗಳಾಶ್ರಮ
ವೆಲ್ಲಿ ವಿಪ್ರಕುಲಾಗ್ನಿಹೋತ್ರವ
ದೆಲ್ಲಿ ಧರ್ಮಪರಾಯಣರು ವೇದಾಂತ ವಿತ್ತಮರು
ಅಲ್ಲಿಗಲ್ಲಿಗೆ ಹರಿಹರಿದು ಕಪಿ
ಮಲ್ಲನೊರಸಿದನವರ ಹೆಂಡಿರ
ನೆಲ್ಲರನು ಗೋಳಿಡಿಸಿದನು ಹಿಡಿ ಹಿಡಿದು ಝೋಂಪಿಸುತ ೪

ಕೆಡಿಸಿದನು ಖಳನಗ್ನಿಹೋತ್ರವ
ನೊಡನೊಡನೆ ವಿಣ್ಮೂತ್ರದಲಿ ಮೆದೆ
ಗೆಡಹಿದನು ಮಱುವಾತನಾಡಿದಡವರನುರೆಯೊದೆದು
ತುಡುಕಿ ಹವಿಯನು ಮೆದ್ದು ಮಡಕೆಯ
ನೊಡೆದು ಬಿಸುಟನು ಯಾಜ್ಞಿಕರ ದಿ
ಕ್ಕೆಡಿಸಿದನು ಕಪಿ ಕಾಲನಾಕೃತಿಯಂದವನು ತಳೆದು ೫

ಒಂದು ದಿನ ಬಲಭದ್ರನೊಪ್ಪಿರ
ಲಿಂದುಮುಖಿಯರ ಮೇಳದಲಿ ಸಾ
ನಂದದಿಂದಾಡುತ್ತಲಿರಲಾ ರೈವತಕಗಿರಿಯ
ಕಂದರದ ಕಾನನದಲಲ್ಲಿಗೆ
ಬಂದನಾ ಕಪಿ ಮರನ ತುದಿಯಲಿ
ನಿಂದು ಕಂಡನು ಸತಿಯರೊಡನಾಡುವ ಯದೂತ್ತಮನ ೬

ಮತ್ತಗಜದಂದದಲಿ ಸತಿಯರ
ನೊತ್ತಿದೊಡನಾ ಗಿರಿವನದಲಾ
ಡುತ್ತ ಮುದದಲಿ ವಾರುಣೀಮಧುವಿವೃತನೇತ್ರದಲಿ
ನೃತ್ಯಗೀತ ವಿಹಾರವತಿ ಸಂ
ಪತ್ತಿಯಲಿ ರಂಜಿಸಲು ಕಂಡನು
ಮೃತ್ಯುವನು ಕಾಂಬಂತೆ ಕಪಿವರನಾ ಹಲಾಯುಧನ ೭

ಕಂಡು ಕಿಲಕಿಲ ಶಬ್ದವನು ರಣ
ಪಂಡಿತನು ಮಾಡುತ್ತ ಶಾಖಾ
ಮಂಡಲವ ತೂಗುತ್ತ ತೆಱೆದು ಗುದಪ್ರದೇಶವನು
ಭಂಡನಾ ಸತಿಯರಿಗೆ ತೋಱುತ
ಕಂಡವರನೇಳಿಸುವ ಕಪಿಯಿರೆ
ಕಂಡು ಸತಿಯರು ನಗುತ ತೋಱಿಸಿದರು ಹಲಾಯುಧಗೆ ೮

ಪರ್ಬತನೊ ನೋಡಿತ್ತ ನೋಡು ವಿ
ಗರ್ಭಣೆಯ ಕಪಿ ಮಾಡುತೈದನೆ
ಸರ್ಬಲೋಕೇಶ್ವರನೆ ನೋಡೆನುತಬಲೆಯರು ತೋಱೆ
ಹುಬ್ಬನೆತ್ತುತ ಹಲುಗಿರಿದು ಮಿಗೆ
ಕಿಬ್ಬಱಿಯ ತುರಿಸುತ್ತ ಕಪಿ ಮದ
ದುಬ್ಬಿನಲಿ ತೋಱಿದನು ಶೇಫವನವರ ಸಮ್ಮುಖಕೆ ೯

ಕಂಡು ಕಪಿಯ ವಿಕಾರವನು ಹರಿ
ಗುಂಡಿನಲಿ ತಿರುಹಿಡಲು ತಪ್ಪಿಸಿ
ಕೊಂಡು ಕೋಪಾಟೋಪದಲಿ ಹಾಯ್ದೆಳೆದು ವನಿತೆಯರ
ಮಂಡಲದ ಮುಂದಿರ್ದ ಮದಿರಾ
ಭಾಂಡವನು ವಹಿಲದಲಿ ವಂಚಿಸಿ
ಕೊಂಡು ಹಾಯ್ದುದು ಕನಲಿ ವಿಪಿನಾಂತರಕೆ ವಹಿಲದಲಿ ೧೦

ಚೆಲ್ಲಿದನು ತಾನುಂಬವೊಲು ಕೈ
ಕೊಳ್ಳದಾ ರಾಮನನು ವನದೊಳ
ಗೆಲ್ಲ ತೊಳಲಿದು ತೊಱೆ ವಂಚಿಸಿ ಮದ್ಯಭಾಂಡವನು
ಕಲ್ಲಮೇಲೊಡೆಯಿಱಿದು ಬಲನನು
ತಲ್ಲಣಿಸಲಪ್ಪಳಿಸಿ ಕಲಶವ
ಕೊಳ್ಳೆನುತ ಕಪಿ ಕಾಡಿ ಖತಿಗೊಳಿಸಿದನು ಹಲಧರನ ೧೧

ಕೋಡಗಕ್ಕೆನಿತುಂಟೆ ಸಾಹಸ
ಕೇಡಲಾ ಧರೆಗೆನುತ ಕೋಪದ
ಗಾಢಿಕೆಯ ಗಜಱಿನಲಿ ಕೊಂಡನು ಮುಸಲದಂಡವನು
ಈಡಿಱಿವ ನೇಗಿಲನು ಸತಿಯರು
ನೋಡಲಾ ಬಲ ಕಪಿಯ ಜೀವದ
ಕೇಡನೇ ನಿಶ್ಚೈಸಿ ಘನತರಸಿಂಹನಾದದಲಿ ೧೨

ಕಂಡು ಕಪಿ ಬಲಭದ್ರನನು ದೋ
ರ್ದಂಡಧೃತಮುಸಲವನು ಹಲನನು
ಕೆಂಡದಂತಿರೆ ಕಿಡಿಯನುಗುಳತ್ತೆರಡು ಕಂಗಳಲಿ
ಕೊಂಡನಳಲಿದು ತಾಳಮರನನು
ಚಂಡವಿಕ್ರಮನನು ಕೊಲಲು ಬ್ರ
ಹ್ಮಾಂಡಪರಿಯಂತಗಿದು ನೆಲಕಪ್ಪಳಿಸಿದನು ಬಲನ ೧೩

ಮೇಲೆ ಬೀಳುವ ಕಪಿಯ ಕರದ ಕ
ರಾಳ ಕುಜವನು ಮುಸಲಹತಿಯಲಿ
ಹೋಳುಗಳೆದನು ಹೊಯ್ದನಾ ಕಪಿವರನ ಮಸ್ತಕವ
ಹೇಳಲೇನಾಕ್ಷಣಕೆ ಜಾಜಿನ
ಶೈಲಮಸ್ತಕವೊಡೆದು ನಿರ್ಝರ
ಜಾಲವಿಳಿವಂತಿಳಿದುದಾ ಕಪಿವರನ ತಲೆಯೊಡೆದು ೧೪

ಲೆಕ್ಕಿಸದೆ ಘಾಯವನು ಕಪಿ ಕೈ
ಯಿಕ್ಕಿದನು ಮತ್ತೊಂದು ಮರದಲಿ
ಮಿಕ್ಕಡಿದೆ ಕೊಳ್ಳೆನುತ ತಾಗಿದನೆಲೆಗಳನು ಸವಱೆ
ಕಕ್ಕುಲಿತೆ ಬೇಡೆನುತದನು ನೆಲ
ಕಿಕ್ಕಿದನು ಮುಸಲದಲಿ ಕಪಿ ಮೇ
ಲಿಕ್ಕಿದನು ಮತ್ತೊಂದನದನಡಗೆಡಹಿದನು ರಾಮ ೧೫

ಅಡವಿ ಬಯಲಾಯ್ತೇನನೆಂಬೆನು
ಕಡುಗಲಿಯ ಕೋಪದಲಿ ಹೆಮ್ಮರ
ನುಡಿದುಡಿದು ಸವೆದವು ಶಿಲಾನಿಕರಂಗಳನು ವೊಗೆದು
ಇಡುಕಿದನು ಬಲಭದ್ರನತ್ತಲು
ತುಡುಕಿದನು ಗಿರಿಶೃಂಗ ನಿಕರವ
ನೊಡನೊಡನೆ ಸವಱಿದನು ಸೀರಾಯುಧನು ಬೇಸಱದೆ ೧೬

ಪ್ರಳಯಭೈರವನಂತೆ ಕೋಪವ
ತಳೆದನಾ ಕಪಿ ಕಪಿಯು ನೂರ್ಮಡಿ
ಹಲಧರನು ಕನಲಿದನು ಕೊಂಡನು ಮತ್ತೆ ಮುಸಲವನು
ಬಳಲದಿರು ಬಾಯೆನುತ ತಿವಿದನು
ತಲೆಯನಾ ಕಪಿ ತಿರುಗಿ ಬಿದ್ದುದು
ನೆಲನದಿರೆ ನೀಗಿದುದು ವಾನರನೊಡಲು ಜೀವನವ ೧೭

ಬಿದ್ದನಾ ಕಪಿ ಕಡಲನಾವೆಯೊ
ಳದ್ರಿ ಕಡುಗಿತು ರುಧಿರವಾರಿಯೊ
ಳದ್ದುದಿಳೆ ಜಯಜಯು ನವೋ ಎನುತಿರ್ದುದಮರಗಣ
ಇದ್ದೆಸೆಯ ಮುನಿವರರು ಲೇಸೆನು
ತಿರ್ದರಾ ಜಿತವೈರಿಭಟ ಬಲ
ಭದ್ರನೆಸೆದನು ಹೊಗಳುತಿರ್ದುದು ವರವಧೂನಿಕರ ೧೮

ಮರಳಿದನು ನಿಜಪುರಕೆ ಹೊಗಳುವ
ಸುರವರರ ಜಯರವದ ಪುಷ್ಪೋ
ತ್ಕರದ ಮಳೆಗಳ ದುಂದುಭಿಯ ಕಹಳೆಗಳ ರಭಸದಲಿ
ಅರಸ ಕೇಳಿಂತಖಿಳಜಗಕ
ಚ್ಚರಿಯೆನಿಪ ನಿಜಲೀಲೆಗಳಲೀ
ಧರೆಯಲಾ ನಿತ್ಯಾತ್ಮರಾಮರು ಸಲಿಸಿದರು ಸುಖವ ೧೯

ಎಂಭತ್ತೈದನೆಯ ಸಂಧಿ ಮುಗಿಯಿತು.

# ಎಂಭತ್ತಾರನೆಯ ಸಂಧಿ

ಭದ್ರ ಭುಜಬಲವಡಬವೈರಿಸ
ಮುದ್ರಶೋಷಣದಕ್ಷನಾ ಬಲ
ಭದ್ರನೇಕಾಂಗದಲಿ ಗೆಲಿದನು ಕೌರವೇಶ್ವರನ

ಜನಪ ಕೇಳೊಂದು ದಿನ ದುರ್ಯೋ
ಧನನ ಸುತೆ ಲಕ್ಷಣೆಯೆನಿಪ್ಪಳ
ನನಿಮಿಷರು ಭಾಪೆನಲು ಕೃಷ್ಣಕುಮಾರನಾ ಸಾಂಬ
ಜನಪರನು ಪರಿಭವಿಸಿ ತಂದನು
ಕನಕರಥದಲಿ ವೀರನೊಬ್ಬನೆ
ಘನಪರಾಕ್ರಮನಾ ಸ್ವಯಂವರಮುಖದಲುರವಣಿಸಿ ೧

ಕನಲಿದರು ಕೌರವರು ಘಡ ಘಡ
ದನವ ಕಾವನ ಮಗನು ಕನ್ಯಾ
ಧನವನೊಯ್ದನಲಾ ದುರಾತ್ಮಕನಧಿಕಗರ್ವದಲಿ
ತನಗೆ ಸದರವೆ ನಾವು ಲೆಕ್ಕಿಸ
ದಿನಿಬರನು ತೃಣವೆಂದು ಹಿಡಿ ಕ
ಟ್ಟೆನಗೆ ತನಗಾ ಮುನ್ನ ತಾ ಮುನ್ನೆನುತ ಗರ್ಜಿಸಿತು ೨

ಮುನಿದು ಮಾಡುವುದೇನು ಯಾದವ
ಬಿನುಗುಗಳು ನೆಱೆ ರಾಜಚಿಹ್ನವ
ನನುಭವಿಸುವರು ನಾವುಕೊಡಲಸ್ಮತ್ಪ್ರಸಾದದಲಿ
ಜನಿತಗರ್ವದಲಿಂದು ನಮ್ಮೊಡ
ನಿನಿತು ಸಾಹಸವಾಯ್ತೆ ತಪ್ಪೇ
ನೆನುತ ಕರ್ಣ ಸುಯೋಧನಾದ್ಯರು ತಮ್ಮೊಳೊಂದಾಯ್ತು ೩

ಕರ್ಣ ದುಶ್ಶಾಸನ ಸುಯೋಧನ
ದುರ್ನಿರೀಕ್ಷಣ ಶಕುನಿಮುಖ್ಯರು
ದೀರ್ಣದುರ್ಮಂತ್ರಿಗಳು ಹೊಜವಂಟರು ತತುಕ್ಷಣಕೆ
ಮನ್ನಿಸದೆ ಗುರು ವಿದುರ ಭೀಷ್ಮರ
ಸನ್ನುತೋಕ್ತಿಗಳನು ಮಹಾಹವ
ಮಾನ್ಯರುರವಣಿಸಿದರು ಕಟ್ಟಲು ಸಾಂಬನನು ಭಟರು ೪

ನಿಲ್ಲು ನಿಲ್ಲೆಲೆ ಹೂಹೆ ಹೋಹೆಯ
ದೆಲ್ಲಿಗುದ್ದಂಡಿಸಿ ದುರಾತ್ಮರ
ಬಲ್ಲಹನೆ ಬಿಡು ಬಿಡು ಕುಮಾರಿಯನಲ್ಲದಡೆ ಧುರಕೆ
ಬಿಲ್ಲ ಹಿಡಿ ಹಿಡಿಯೆನುತ ಕೌರವ
ರೆಲ್ಲ ಕವಿತರೆ ಕಾಣುತಪ್ರತಿ
ಮಲ್ಲನವರಭಿಮುಖಕೆ ಬಿಟ್ಟನು ನಿಜ ಮಹಾರಥವ ೫

ಎಚ್ಚರತಿರಥರೊಬ್ಬನನು ಥ
ಟ್ಟುಚ್ಚಿದವು ತೀವ್ರಾಸ್ತ್ರಸಂತತಿ
ಮೆಚ್ಚಿಸಿದವಥಟನನು ಕೊಂಡನು ಬಳಿಕ ಶರಧನುವ
ಅಚ್ಯುತನ ಮಗನನಿಬರಸ್ತ್ರವ
ಕೊಚ್ಚಿ ಕೌರವವೀರರನು ಕಡೆ
ಯೆಚ್ಚನಚ್ಚರಿವಡುತಲಿರ್ದುದು ಮೇಲೆ ಸುರನಿಕರ ೬

ಎಚ್ಚನನಿಬರ ತುರಗನಿಕರವ
ನೆಚ್ಚನಾ ರಥಸೂತರನು ಕೆಡೆ
ಯೆಚ್ಚನಮಳಚ್ಛತ್ರಚಮರ ಧ್ವಜನಿಕಾಯವನು
ಎಚ್ಚನಾ ಕರ್ಣಾದಿ ಸುಭಟರ
ಕೊಚ್ಚಿ ಶೌರ್ಯದ ಕಣಿಗಳನು ಮುಱಿ
ದೆಚ್ಚನಾ ಮೋಹರವನೊಬ್ಬನೆ ವೀರನುರವಣಿಸಿ ೭

ಮುಱಿದುದನಿಬರ ಬಿಂಕ ಪಟುಭಟ
ರೊಱಲಿದರು ಚತುರಂಗ ಬಲದೊಡ
ಲೊಱತೆ ಮುಸಗಿದುದಾ ಕುಮಾರ ಶರಾಭಿವರ್ಷದಲಿ
ಜುರುಜುರಿಪ ಕರುಳುಗಳ ಖಂಡದ
ಹಱಿದೊಗಲ ತೊಡೆ ತೋಳ್ಗಳ ಹೆ
ದ್ದೊಱೆಗಳಾದವು ಹೇಡಿಗಳು ಹಾಯೆನುತ ಹೊಱಸೂಸೆ ೮

ದನವ ಕಾವನ ಮಗನಲಾ ತಾ
ನನುವರಕೆ ನಿಮಗಿದಿರೆ ಬಾಣದ
ಮೊನೆಗಳಿವು ದನಗಾದವಲ್ಲ ವಿಚಾರಿಸುವಡೆನುತ
ಅನುಪಮನು ಘನಸಿಂಹನಾದದ
ಲನಿಬರನು ಮೂದಲಿಸಲಂಬಿನ
ವನಧಿಗಳನೀಸಾಡುತುರವಣಿಸಿತ್ತು ಭಟನಿವಹ ೯

ಮತ್ತೆ ಮುಸುಕಿತು ಮೇಲೆ ಸುಭಟರ
ಮೊತ್ತ ಮುರಹರನಾತ್ಮಸಂಭವ
ನತ್ತಲೊಂದೇ ಬಾರಿ ನಾಲುಕು ದೆಸೆಯಲಾವರಿಸಿ
ಕೆತ್ತರಂಬರವನು ಶರೌಘದ
ಮುತ್ತಿಗೆಯನೊಡೆದಳಿದು ದುರ್ದಿನ
ವೆತ್ತುದಾದಿನವೀಕ್ಷಿಸುವ ಜನನಿಕರ ಬೆಱಗಾಗೆ ೧೦

ಚಲ್ಲಲೆಚ್ಚನು ಚತುರ ಭಟರನು
ಬಲ್ಲಿದನ ಮಗನನಿತು ಬಾಣವ
ನೆಲ್ಲವನು ತಱಿದೊಟ್ಟಿ ಮೊಳಗಲು ಸಿಂಹನಾದದಲಿ
ನಿಲ್ಲದೀತನ ಬಲುಹೆನುತ ಬಲು
ಬಿಲ್ಲ ಕಡಿದನು ಕರ್ಣನೊಂದೆಸೆ
ಗಲ್ಲಗಳೆಯದೆ ಕೀಲಿಸಿದನಾ ರಥಸಾರಥಿಯ ಶಕುನಿ ೧೧

ಉದುರಿಸಿದನಂಬಿನಲಿ ತೇರಿನ
ಕುದುರೆಗಳನಬ್ಬರಿಸಿ ರಣದಲಿ
ಮದಮುಖನು ದುಶ್ಯಾಸನನು ಭೂರಿಶ್ರವನು ಬಳಿಕ
ಸದೆದು ಕೆಡಹಿದರಾ ಧ್ವಜವನು
ಬ್ಬಿದರು ರಿಪುಭಟರುಱುಬೆಯಲಿ ಪಿಲು
ಕಿದನು ಕಲಿಗಳ ದೇವನಾ ಕೌರವನ ಕೌಳಿಕಕೆ ೧೨

ಕಟ್ಟಿ ಕೊಂಡೊಯ್ದರು ಕುಮಾರನ
ನಿಟ್ಟಣಿಸಿ ಹಲಬರು ಕುಮಂತ್ರದ
ಸೃಷ್ಟಿಯಲಿ ಕೌರವರು ಬಂದರು ಬಳಿಕ ನಿಜಪುರಕೆ
ಕಟ್ಟಿದುದನಾ ನಾರದಾಂಕನು
ನೆಟ್ಟನಭಿವರ್ಣಿಸಿದನಸುರಘ
ರಟ್ಟನೋಲಗದೊಳಗೆ ಕೇಳಿದನುಗ್ರಸೇನನೃಪ ೧೩

ನೆರಹಿದನು ನಿಜಬಲವನುನ್ನತ
ಕರಿತುರಗ ರಥ ಪತ್ತಿಗಳು ಮೋ
ಹರಿಸಿದವು ಕೃತವರ್ಮ ಸಾತ್ಯಕಿಮುಖ್ಯಯದುವರರು
ಉರವಣಿಸಿ ಹೊಱವಡಲು ಕೌರವ
ಧರಣಿಪಾಲರ ಮೇಲದನು ಸಂ
ಕರುಷಣನು ಕಾಣುತ್ತ ನುಡಿದನು ಕಲಹಶಂಕೆಯಲಿ ೧೪

ಏಕೆ ಸಂಭ್ರಮಿಸುವಿರಿ ಕೌರವ
ರೇಕೆ ನಾವೇಕೇ ವಿಕಾರವಿ
ದೇಕೆ ಭೇದಗ್ರಹವೆ ನಮ್ಮವರೊಳಗೆ ನಾವೆನುತ
ಆಕುಳರನನುಸರಿಸಿ ಸುಭಟಾ
ನೀಕವನು ಸಂತವಿಸಿ ರಥದಲಿ
ಲೋಕಪಾವನಕೀರ್ತಿ ನಿಜಪುರದಿಂದ ಹೊಱವಂಟ ೧೫

ಉದ್ಧವಾದಿ ಯದೂತ್ತಮರು ಕುಲ
ವೃದ್ಧ ವಿಪ್ರೋತ್ತಮರು ಸಹಿತ ಸ
ಮೃದ್ಧರಣ ರಥದಿಂದ ಬಂದನು ಹಸ್ತಿನಾಪುರಕೆ
ಬುದ್ಧಿವಂತರ ದೇವನುಪವನ
ವರ್ಧಮಾನಶ್ರೀಯನೀಕ್ಷಿಸು
ತುದ್ಧವನ ಕಳುಹಿದನು ಕೌರವರಾಯನಿದ್ದೆಡೆಗೆ ೧೬

ಬಂದು ಧೃತರಾಷ್ಟ್ರಂಗೆ ಗಂಗಾ
ನಂದನ ದ್ರೋಣಾದ್ಯರಿಗೆ ಯದು
ನಂದನಾಗಮನ ಪ್ರಸಂಗವನಱುಹಲೋಲಗದ
ಸಂದ ಪರಿಜನಸಹಿತವರು ಸಾ
ನಂದದಲಿ ಸಂಭಾವಿಸಲು ನಡೆ
ತಂದರಾ ಬಲಭದ್ರನಲ್ಲಿಗೆ ಭೂರಿವಿಭವದಲಿ ೧೭

ವಂದನಾಶೀರ್ವಾದ ಸತ್ಕೃತಿ
ಯಿಂದ ತಮ್ಮೊಳಗೊಬ್ಬರೊಬ್ಬರು
ನಿಂದು ಕುಶಲಕ್ಷೇಮವಾರ್ತೆಗಳೆಸೆಯೆ ಸತ್ಕರಿಸಿ
ಅಂದದಲಿ ಕುಳ್ಳಿರಲು ಕೌರವ
ವೃಂದದಲಿ ಕೈನೆಗಹಿ ಯದುನೃಪ
ನೆಂದಮಾತನು ಯಾದವೋತ್ತಮನೆಂದನವರೊಡನೆ ೧೮

ಉಗ್ರಸೇನ ಮಹಾನೃಪಾಲೋ
ದಗ್ರ ಚೂಡಾಮಣಿ ನಿಮಗೆ ಸಾ
ನುಗ್ರಹದಲಾಜ್ಞಾಪಿಸಿದ ಕಾರ್ಯ ಪ್ರಯೋಜನವ
ವ್ಯಗ್ರವಿಲ್ಲದೆ ಕೇಳಿ ಮಾಳ್ಪುದು
ದಗ್ರವಿಕ್ರಮನಾಜ್ಞೆಯನು ಸಾ
ರಗ್ರಹರು ನೀವೆನುತ ನೋಡಿ ನೃಪಾಲರನು ನುಡಿದ ೧೯

ಕಟ್ಟಿದಿರಿ ಗಡ ಹಲಬರೊಂದಾ
ಗಿಟ್ಟಳಿಸಿ ನೀವೊಬ್ಬನನು ಮತಿ
ಗೆಟ್ಟು ಧರ್ಮವನೀಕ್ಷಿಸದೆ ಧರ್ಮೈಕನಿಷ್ಠನನು
ಬಿಟ್ಟೆವಾ ವೈರವನು ನೀವೆವ
ಗಿಷ್ಟ ಬಾಂಧವರೆಂದು ಕಲಹದ
ಕಷ್ಟ ಕೃತಿ ಲೇಸಲ್ಲೆನುತ ಸೈರಿಸಿದೆ ನಾನೆಂದ ೨೦

ಎನಲು ನಕ್ಕರು ಕರ್ಣ ದುಶ್ಶಾ
ಸನ ಸುಯೋಧನ ಮುಖ್ಯರಾ ಯದು
ಜನಪನಾಜ್ಞಾಪಿಸಿದ ನುಡಿಯನು ಕೇಳಿ ತವತವಗೆ
ಜನಿತಬಹಳಕ್ರೋಧಶಿಖಿಲೋ
ಚನರು ಸುಡುವಂದದಲಿ ಬಲಭ
ದ್ರನನು ನೋಡುತ ಗಹಗಹಿಸಿ ಕೈಹೊಯ್ದು ತಮ್ಮೊಳಗೆ ೨೧

ಕೇಳಿದಿರೆ ಕರ್ಣಾದಿ ಸುಭಟರು
ಹೇಳಿಕೆಯನತಿ ಚಿತ್ರವಲ್ಲಾ
ಕಾಲಗತಿಯೇನೇನ ಕೇಳಲುಬಹುದೊ ಚಿತ್ರವನು
ಕಾಲಕೆರಹುಗಳೇಱಿದವಲಾ
ಮೌಳಿಗಳನುತ್ತಮ ಕಿರೀಟ ವಿ
ಶಾಲಿತಾಂಗವನೆನುತ ಗರ್ಜಿಸಿದುದು ಕುರುವ್ರಾತ ೨೨

ಯಾನ ಸಂಬಂಧದ ಸುಖಾಸನ
ಪಾನ ಭೋಜನಗಳಲಿ ನಮಗೆ ಸ
ಮಾನರಾದರು ನಾವು ಪಾಲಿಸಲಾಗಿ ಮಾನ್ಯವನು
ಹೀನರೀ ಯಾದವರು ಸಲ್ಲರು
ಮಾನವೇಂದ್ರಾಸನಕೆ ಮಕುಟ ವಿ
ಧಾನಧವಳಚ್ಛತ್ರ ಚಾಮರವೆಂಬ ವೈಭವಕೆ ೨೩

ಭೋಗಿಸಿದರಿನ್ನೆವರ ನೃಪರಾ
ಭೋಗ ಚಿಹ್ನಂಗಳನು ಬಂಧುಗ
ಳಾಗು ನಮ್ಮದೆನುತ್ತೆ ನಾವದನಿತ್ತು ಪಾಲಿಸಲು
ಲೋಗರೇ ವಶವರ್ತಿಗಳು ತಾ
ವಾಗಿ ನಮ್ಮಂಘ್ರಿಗಳ ಸೇವಕ
ರಾಗಿ ಮತ್ತಂದೀ ವಿಕಾರದ ಮಾತು ತಮಗೆಂದ ೨೪

ಸಾಕು ಯಾದವರಿಂಗೆ ರಾಜಾ
ನೀಕಲಾಂಛನವಿನ್ನು ಕುಜನರಿ
ಗೇಕೆ ಹಾಲನು ಕೃಷ್ಣಸರ್ಪಂಗೆಱೆದ ತೆಱನಾಯ್ತು
ಓಕರಿಸುತಿದೆ ವಿಷವನೆಮ್ಮಲಿ
ಸಾಕಿದವರಲಿ ಹರಹರವುರಾ
ನೀಕವಿದಿರೇ ನಮ್ಮ ಬಾಹುಬಲೋರುವಿಕ್ರಮಕೆ ೨೫

ಪಾಪವಲ್ಲಾ ಯದುನೃಪತಿಯಾ
ಜ್ಞಾಪಿಸುವ ಗಡ ನವಗೆ ಕೇಳುವ
ದೀಪರಿಯ ವಿಪರೀತ ಹೇಳುವುದಕಟಕಟ ನಿನಗೆ
ಲೋಪವಾದುದೆ ಲಜ್ಜೆ ಹರಹರ
ಭೂಪರಿಗೆ ನೀವಿದನು ಹೇಳಲು
ಕಾಪುರುಷನೇ ರಾಮನೆಂದರು ಕರ್ಣ ಶಕುನಿಗಳು ೨೬

ಹರ ವಿರಂಚಿ ಮಹೇಂದು ಮುಖ್ಯರಿ
ಗರಿದು ಭೀಷ್ಮ ದ್ರೋಣ ಪಾರ್ಥರ
ಧುರಕೆ ಬಣಗುಗಳಿದಿರೆ ಯಾದವರಕಟ ನಮಗೆನುತ
ಪುರಕೆ ನಡೆದರು ಕೌರವರು ಯದು
ವರನನಡವಿಯಲಿರಿಸಿ ಬಹುವಿಧ
ಭರಿತಮದಮಾನಾವಿಲೇಕ್ಷಣ ಮೂಢಬುದ್ಧಿಗಳು ೨೭

ಹೋದರೇ ಕೌರವರು ಬಾಹಿರ
ರಾದರೇ ತಪ್ಪೇನು ನಿರ್ಮಳ
ರಾದೆವಾವಿನ್ನೇನು ಹರಹರ ದುರ್ವಿನೀತರನು
ಆದರಿಸಿ ನಮ್ಮವರೆನುತ ಬಹು
ಯಾದವಾನ್ವಯ ಕುಪಿತಸೈನ್ಯ ಮ
ಹೋದಧಿಯ ನಾ ನಿಲಿಸಿ ಬಂದುದಕಾಯ್ತು ಫಲವೆಂದ ೨೮

ತಾವು ಕರುಣಿಸಲಾಯ್ತು ಗಡ ನರ
ದೇವ ಚಿಹ್ನವಿದೆವಗೆ ಹರಹರ
ಜೀವಿಸಿದ್ದವರೇನ ಕಾಣರು ಕೇಳರದುಭುತವ
ಸೇವಕರು ಸುರಲೋಕಪಾಲಕ
ರಾವನಂಘ್ರಿಗೆ ಉಗ್ರಸೇನಂ
ಗೀವಿಭವವೆಂತಕಟ ಸಂಭವಿಸಿದುದು ಹೇಳೆಂದ ೨೯

ತ್ರಿಭುವನೈಶ್ವರ್ಯಕ್ಕೆ ಮೂಲ
ಪ್ರಭವವೆನಿಸುವ ವರ ಸುಧರ್ಮಾ
ಸಭೆಯನಾಕ್ರಮಿಸುವ ಸಮರ್ಥರದಾರು ನರರಾಗಿ
ಪ್ರಭುತನಕೆ ಮೇಣಲ್ಲ ರಾಜ್ಯದ
ವಿಭವಸಿದ್ಧಿಗೆ ಯೋಗ್ಯರಿಗೆ ಸ
ನ್ನಿಭರು ಯಾದವರಲ್ಲ ನಿಶ್ಚಯವೆಂದನಾ ರಾಮ ೩೦

ಹರ ವಿರಿಂಚಿ ಸುರೇಂದ್ರರಾವನ
ಚರಣಕಮಲ ಪರಾಗಸೇವಾ
ಪರಿಚಿತೈಶ್ವರ್ಯದಲಿ ವಂದ್ಯರು ಮಾನ್ಯರೀ ಜಗಕೆ
ವರದವರ್ಯರೆಸಿಪ್ಪರಾ ಮುರಹ
ಹರಗೆ ಮಾನವರಾಜಚಿಹ್ನವ
ಧರಿಸುವರೆ ದಾಯಕರು ಕೌರವನೃಪರಲಾ ಯೆಂದ ೩೧

ಸೃಜಿಸುವನು ತಾನಾವನಾಜ್ಞೆಯ
ಲಜನಶೇಷ ಜನಂಗಳನು ನೆಱೆ
ತ್ರಿಜಗವನು ಪಾಲಿಸುವಡಷ್ಟದಿಶಾಧಿನಾಯಕರು
ಭಜಿಸಿ ದಣಿಯಳು ಲಕ್ಷ್ಮಿ ಚರಣಾಂ
ಬುಜವನಖಿಳೈಶ್ವರ್ಯವಾ ಸುರ
ಸುಜನಸೇವ್ಯಂಗೀ ನೃಪಾಸನವುಚಿತವಲ್ಲೆಂದ ೩೨

ಆವನಾಜ್ಞೆಯಲಭವನೀ ಭುವ
ನಾವಳಿಯನಂತ್ಯದಲಿ ನಯನದ
ಪಾವಕನಲದ್ದುವನು ಧರಿಸುವನಾವನಂಶದಲಿ
ಭಾವಿತಾತ್ಮಕನಾಗಿ ಧರೆಯನು
ಜೀವಚಯ ಸಹಿತಾವಿಕುಂಠ ಮ
ಹಾವಿಭುವನೀ ಕೃಷ್ಣನನು ಖಳರಱಿವರೆಂತೆಂದ ೩೩

ಹೋಗಲಿನ್ನೇನಿಳೆಯಕೌರವ
ವಾಗಲಿದು ಸುಗ್ರಾಸವಾಗಲಿ
ನೇಗಿಲಿಗೆ ಪರಿಣಾಮವಾಗಲಿ ಯಾದವಾನ್ವಯಕೆ
ಲೋಗರಲ್ಲಿವರೆಂದು ಬಂದರೆ
ಬೀಗಿದರು ಬಣಗುಗಳು ದಯೆಯನು
ನೀಗಿದೆನು ನೀಗಿದೆನೆನುತ ಬಲರಾಮ ನಿಂದಿರ್ದ ೩೪

ಆರು ಸೈರಿಸಬಹುದು ಖಳರ ವಿ
ಕಾರವನು ರೋಷಾಗ್ನಿಯಲಿ ಕಾ
ಹೇಱಿದವು ಕಂಗಳು ಕಠೋರ ಭೃಕುಟಬಂಧದಲಿ
ಭೂರಿ ಹೂಂಕಾರದಲಿ ಮಿಸೆಯು
ನೇರತಿರುಹಿ ಮಹೋಗ್ರ ವಿಕ್ರಮ
ನಾರುಭಟೆಯಲಿ ಮೊಳಗುತೆದ್ದನು ನೋಡಿ ಕೆಲಬಲನ ೩೫

ತಾನು ಬೇಱೊಬ್ಬೊಬ್ಬರನು ಕೊಲ
ಲೇನು ಫಲವೊಮ್ಮೆಯೆ ಕೃತಾಂತ
ಸ್ಥಾನಗತವಾಗಲಿ ಕುಠಾರರ ಕುಲವಿದೆಂದೆನುತ
ಏನನೆಂಬೆನು ಪುರಕೆ ನೇಗಿಲ
ನಾನಿಸಿದನಿರ್ದೆಡೆಯಲಿರ್ದು ಮ
ಹಾನುಭಾವರ ದೇವನಾ ಬಲದೇವನುರೆ ಮುನಿದು ೩೬

ಕೆಡಹುವೆನು ಪುರಸಹಿತ ಗಂಗೆಯ
ನಡುಗಡಲಲೀಕ್ಷಣವೆ ಖಳರನು
ಹುಡುಕುನೀರದ್ದುವೆನು ಕೌರವಕುನ್ನಿಗಳನೆನುತ
ತುಡುಕಿ ನೇಗಿಲ ಕೊನೆಯಲೆಳೆದನು
ಕಡುಗಿ ಕೋಪಾಟೋಪದಲಿ ಧರೆ
ನಡುಗಲೆಱಗಿದುದಮರನದಿಗಾ ಹಸ್ತಿನಾನಗರ ೩೭

ಎಱಗಿದುದು ಪುರ ಕಡಲ ನಾವೆಯ
ತೆಱದಲಾ ಸುರನದಿಯ ಕಡಲೊಳ
ಗೊಱಲಿದುದು ಜನನಿಕರ ಕೂಳಿಯ ಮಿಾನ್ಗಳಂದದಲಿ
ಹರಿಸಿದರು ರಾಮನನು ಗಂಗಾ
ವರತನಯ ವಿದುರಾದ್ಯರುನ್ನತ
ಹರುಷರಸದಲಿ ಮೂಡಿ ಮುಳುಗಾಡುತ್ತ ತವತವಗೆ ೩೮

ರಾಮ ರಕ್ಷಿಸು ರಕ್ಷಿಸಾಹವ
ಭೀಮ ರಕ್ಷಿಸು ರಕ್ಷಿಸಖಿಳ
ಕ್ಷೇಮಕಾರಣಮೂರ್ತಿ ರಕ್ಷಿಸು ರಕ್ಷಿಸೆಂದೆನುತ
ಭಾಮಿನಿಯರಾ ಬಾಲವೃದ್ಧ
ಸ್ತೋಮವಾ ಕೌರವನೃಪಾಲರು
ಭೂಮಿಯಲಿ ವೈಯಿಕ್ಕುತಲೆ ಹೊಱವಂಟುದಖಿಳಜನ ೩೯

ಅಱಿಯಲಱಿವರದೆಂತು ನಿನ್ನಯ
ನಿಱುಗೆಯನು ಮಾಯಾವಿಮೋಹದ
ಕಱಿಮನದ ಕಲುಷಾತ್ಮರಮರಜ್ಞಾನರೂಪನನು
ಅಱಿಯದವರಲಿ ಗುಣವ ದೋಷವ
ನಱಸುವರೆ ಕೈಗಾವುದಖಿಳೇ
ಶ್ವರನೆ ಕೃಪಣರನೆನುತ ಮೊಱೆಯಿಟ್ಟುದು ಜನಸ್ತೋಮ ೪೦

ಹೋಹೊ ಅಂಜದಿರಂಜದಿರಿ ನಿ
ರ್ವಾಹವಾಯ್ತೆ ವಿವೇಕ ಬುದ್ಧಿಗೆ
ಹೊಹೆಗಳಿರಿಲ್ಲಿಲ್ಲ ಬಿಟ್ಟೆನು ಬಿಟ್ಟೆನೆಂದೆನುತ
ಕಾಹಿಳಿದ ಕಂಗಳಲಿ ಕರುಣಾ
ದೇಹಿಕನು ತೋಱಿಸಿದನುನ್ನತ
ಬಾಹುದಂಡವನಾ ಕುರುಪ್ರವರರಿಗೆ ಪರಿಜನಕೆ ೪೧

ಬಿಟ್ಟು ಮದವನು ವಿನಯ ವೇಷವ
ತೊಟ್ಟು ದಂಪತಿಗಳನು ಮಿಗೆ ಮುಂ
ದಿಟ್ಟುಕೊಂಡು ಸಮಸ್ತ ಪರಿಜನ ಭೃತ್ಯಜನಸಹಿತ
ಥಟ್ಟುಗೆಡೆದರು ರಾಮ ಪದಯುಗ
ವಿಷ್ಟರದಲಾ ಕೌರವರು ಧೃತ
ರಾಷ್ಟ್ರ ವಿದುರ ದ್ರೋಣ ಭೀಷ್ಮ ಸುಯೋಧನಾದಿಗಳು ೪೨

ಇತ್ತನನಿಬರಿಗಭಯುವನು ಬಲ
ನಿತ್ತನಾ ದುರ್ಯೋಧನನು ನಿಜ
ಪುತ್ರಿಗನುಪಮ ಕೋಶ ವಾಹನ ಗೃಹ ಪರಿಚ್ಛದವ
ತೊತ್ತಿರನು ಸಾವಿರವನುನ್ನತ
ಮತ್ತಗಜವಿನ್ನೂಱುಮಿಗಲೆನ
ಲಿತ್ತನಯುತತುರಂಗಮವನನುರಾಗಭಾರದಲಿ ೪೩

ತೋಱಿದನು ತಾನೇ ನಡೆದು ರವಿ
ಮೂಱುಹೋಗಲು ರತ್ನದೀಪ್ತಿಯ
ಲಾಱು ಸಾವಿರ ರಥವನುನ್ನತ ರಥಪರಿಚ್ಛದವ
ಏಱಿಸಿದನಳಿಯನನು ಮಗಳನು
ಮಿಾಱುವನುರಾಗದಲಿ ಮಿಗೆ ಹೊಂ
ದೇರನೇಱಿಸಿ ಕಳುಹಿದನು ಮನ್ನಿಸಿ ಹಲಾಯುಧನ ೪೪

ವಾರಿಬರುಹಂಗಳನು ಕೊಂಡು ಕು
ಬೇರಸನ್ನಿಭವಿಭವದಲಿ ಹರಿ
ಕೌರವರು ಬೀಳ್ಕೊಡಲು ಬಹಳಮನೋನುರಾಗದಲಿ
ಸೀರಧರನೈತಂದು ಹೊಕ್ಕನು
ದ್ವಾರವತಿಯನು ಸಕಲಯಾದವ
ವೀರಪರಿಜನಪೌರಜನವಿದಿರಾಗಿ ನಡೆತರಲು ೪೫

ಬಳಿಕ ನಿಜವೃತ್ತಾಂತವನು ಯದು
ಕುಲಜರಿಗೆ ಸಭೆಯೊಳಗೆ ನಗೆಯನು
ಬೆಳಸಲಭಿವರ್ಣಿಸಿದನಾ ಮುರವೈರಿ ಮುಖ್ಯರಿಗೆ
ಹಲಧರನ ಸಾಮರ್ಥ್ಯಸಿದ್ಧಿಯ
ನಿಳೆಗೆ ಸೂಚಿಸುವಂತೆ ನೃಪಕುಲ
ತಿಳಕ ಕೇಳೆಱಗಿದುದು ಗಂಗೆಗೆ ಹಸ್ತಿನಾನಗರ ೪೬

ಇದು ಸಕಲ ಲೋಕಕ್ಕೆ ವಿಜಯ
ಪ್ರದ ಸುಖಪ್ರದ ಸಕಲಪುಷ್ಟಿ
ಪ್ರದ:ಸದಾಯುಷ್ಕೀರ್ತಿ ಸಂಪತ್ಪ್ರದವಿದೀ ಧರೆಗೆ
ವಿದಿತವಹ ಬಲಭದ್ರನುನ್ನತ
ಸದಮಳಾಮಳಚರಿತವೀವುದು
ಪದುಮದೃಶ ನಿತ್ಯಾತ್ಮ ಕೃಷ್ಣಪದಾಬ್ಜದಲಿ ಮತಿಯ ೪೭

ಎಂಭತ್ತಾರನೆಯ ಸಂಧಿ ಮುಗಿಯಿತು.

## ಎಂಭತ್ತೇಳನೆಯ ಸಂಧಿ

ಪ್ರೇಮಕಲಹೋತ್ಕಲಿತ ಸಹಜ
ಪ್ರೇಮನಿಧಿ ವೈದರ್ಭಿಯನು ಸು
ಪ್ರೇಮದಲಿ ಸಂತವಿಸಿದನು ಸಾಮದಲಿ ಮುರವೈರಿ

ಮುನಿಪ ಕರುಣಿಸು ಕೃಷ್ಣಪದಯುಗ
ವನಜಸೇವಾನಿರತ ಕಾಂತಾ
ಜನದಲಾರತ್ಯಧಿಕೆಯರು ತತ್ಪಾದಸೇವೆಯಲಿ
ಇನಿಯರಾರದಱೊಳಗದಾರಲಿ
ಮನದೊಲವು ಕೃಷ್ಣಂಗೆ ಸಮವೋ
ಜನಿತ ವಿಷಮವೊಎನಲು ಕರುಣಿಸಿದನು ನೃಪಾಲಂಗೆ ೧

ಅಮಳಮತಿ ಚಿತ್ತವಿಸು ಭುವನ
ಕ್ರಮದ ಜೀವರೊಳೆಲ್ಲರಲಿ ಸರಿ
ಮಮತೆ ಸರ್ವಾತ್ಮಕಗೆ ಸರ್ವಾಧಾರಮೂರುತಿಗೆ
ಮಮತೆ ಭಕ್ತರೊಳಧಿಕವಾಶ್ರಿತ
ಕಮಲಮುಖಿಯರೊಳರಸಪಟ್ಟದ
ರಮಣಿಯಲಿ ಕೃಪೆ ಮಿಗಿಲು ಸಂಶಯವಿಲ್ಲ ಕೇಳೆಂದ ೨

ಒಂದು ದಿನ ಕೇಳರಸು ಭೀಷ್ಮಕ
ನಂದನೆಯ ಮೇಳದಲಿ ದೇವ ಮು
ಕುಂದನೆಂದ ಪ್ರಣಯಕಲಹ ವಿನೋದ ಸೂಕ್ತಿಗಳ
ಅಂದವನು ವಿಸ್ತರಿಸುವೆನು ಸಾ
ನಂದದಲಿ ಚಿತ್ತವಿಸೆನುತ ಮುನಿ
ವಂದ್ಯಚರಣಸರೋಜನಭಿವರ್ಣಿಸಿದನೊಲವಿನಲಿ ೩

ಎಸೆದನಸುರಾರಾತಿ ರುಕ್ಮಿಣಿ
ಯಸಮ ಮಣಿಭವನದಲಿ ರತ್ನ
ಪ್ರಸರ ನಿರ್ಮಿತದಂತೆ ನಿರ್ಮಳ ಚಾರು ಮಂಚದಲಿ
ಎಸೆವ ಮೆಲುವಾಸಿನಲಿ ನವವಿಧ
ಕುಸುಮಸೌರಭ ಗಂಧ ಕುಂಕುಮ
ರಸದ ಲೇಪದ ಭದ್ರಭವಸಿಕೆಗಳ ವಿಧಾನದಲಿ ೪

ಪಾರಿಜಾತ ಪ್ರಸವ ಸುಮನ
ಸ್ಫಾರ ಪರಿಮಳಪೂರ್ಣ ಪವನ ವಿ
ಹಾರದಲಿ ಮಘಮಘಿಪ ಕಾಳಾಗರುಸುಧೂಪದಲಿ
ಚಾರು ಚಂದ್ರಮರೀಚಿ ಧವಳಿತ
ಭೂರಿ ರತ್ನಗವಾಕ್ಷದಲಿ ದೈ
ತ್ಯಾರಿ ಮಿಗೆ ರಂಜಿಸಿದನೊಪ್ಪುವ ರಾಜಭವನದಲಿ ೫

ರತ್ನದೀಪ ಪ್ರಭೆಗಳಲಿ ನವ
ರತ್ನನಿರ್ಮಿತ ಭವನದಲಿ ವರ
ರತ್ನಭೂಷಿತಗಾತ್ರನೆಸದಿರಲಾ ವಿದರ್ಭಸುತೆ
ರತ್ನಭೂತೆ ಲತಾಂಗಿ ಸೃಷ್ಟಿಗೆ
ರತ್ನದಂಡವ್ಯಜನದಲಿ ಪತಿ
ರತ್ನವನು ಭಜಿಸುತ್ತಲಿರ್ದಳು ಭಾವಭಕ್ತಿಯಲಿ ೬

ಲಲಿತ ಮಣಿನೂಪುರದ ರತ್ನಾ
ವಳಿಯ ವಲಯದ ದಿವ್ಯವಸ್ತ್ರಾಂ
ಚಲ ನಿಗೂಢಕುಚದ್ವಯದ ವಿಮಳಾನುಲೇಪನದ
ಚಲದಳಕದೀಪ್ತಿಗಳ ನಿಡುಗಂ
ಗಳ ಸುಮಂಗಳಹಾಸ ದಂತಾ
ವಳಿಯ ಕಾಂತಿಗಳೆಸೆಯಲೋಲಗಿಸಿಹಳು ನಿಜಪತಿಯ ೭

ಕೊರಳ ಹಾರದ ತೊಳಪ ರತ್ನಾ
ಭರಣನಿಚಯದ ಚಾರುಬಿಂಬಾ
ಧರದ ದೀಪ್ತಿ ಕಪೋಲಕುಂಡಲ ಮಂಡಿತಾನನದ
ವರ ಮಹಾಸತಿ ಲಕ್ಷ್ಮಿರೂಪಾಂ
ತರದಲಂಗೀಕರಿಸಿ ನಿಜಪತಿ
ಚರಣವನು ಭಜಿಸುತ್ತಲಿರ್ದಳು ಭಾವಭಕುತಿಯಲಿ ೮

ತನ್ನ ಚರಣವನಿಂತು ಭಜಿಸುವ
ನನ್ಯಗತಿಕೆಯನೀಕ್ಷಿಸುತ ಸಂ
ಪನ್ನ ಮಧುರಸ್ಮಿತ ಮನೋಜ್ಞ ಕಟಾಕ್ಷವೀಕ್ಷೆಯಲಿ
ಉನ್ನತೋರುಪ್ರಣಯಕೋಪವಿ
ಪನ್ನ ಮುಖಸಂದರುಶನಾರ್ಥಿಯ
ಲನ್ಯರಂತಿದನೆಂದನಸುರಾರಾತಿ ನಸುನಗುತ ೯

ರಾಜಪುತ್ರವಿಶಿಷ್ಟಗಣವಾ
ರಾಜಮಂಡಲವರ್ಥಿಸಲು ಸುರ
ರಾಜಸನ್ನಿಭನೃಪರನೊಲ್ಲದೆ ಚೈದ್ಯಮುಖ್ಯರನು
ವ್ಯಾಜಧರ್ಮಿಗಳೆನಿಪ ನಮ್ಮನು
ರಾಜಕುಲಭೀತರನು ಭಜಿಸಿದೆ
ಭಾಜನನು ತಾನೆಂದು ಸಕಲೈಶ್ವರ್ಯಗುಣಗಳಿಗೆ ೧೦

ರೂಪ ಗುಣ ಯೌವನ ಪರಾಕ್ರಮ
ದೋಪರನು ತೇಜೋಬಲಾನ್ವಿತ
ಭೂಪರನು ನೀನೊಲ್ಲದಖಿಳ ಮಹಾಮಹೀಶ್ವರರ
ರೂಪುಗುಣ ವಿಕ್ರಮವಿವರ್ಜಿತ
ಗೋಪರನು ಭಯದಲಿ ಸಮುದ್ರ
ದ್ವೀಪಶರಣರನೇಕೆ ಬಯಸಿದೆ ಕಾಂತೆ ನೀನೆಂದ ೧೧

ಲೋಕ ವೇದಪಥಾಪಗತರನ
ದೇಕೆ ಬಯಸಿದೆ ಬಱಿದೆ ತತ್ವವಿ
ವೇಕವಿಲ್ಲದೆ ಕ್ಷೇತ್ರವಿಷಯ ವಿದೂರವರ್ತಿಗಳ
ಲೋಕವನು ಬಾಧಿಸುತ ಸಾಗರ
ದೇಕದೇಶಸ್ಥಿತರನೆಮ್ಮನು
ಸೋಕಿ ನಿರ್ವಿಷಯರನು ನಿನಗಿನ್ನಾವ ಸುಖವೆಂದ ೧೨

ಬಿಟ್ಟು ಭೋಗವಿಶೇಷಧರ್ಮವಿ
ಶಿಷ್ಟರನು ನೃಪವರರನುಭಯ
ಭ್ರಷ್ಟರಿಗೆ ಮನವೊಲಿದೆ ಮಾನಿನಿ ಮಾನ್ಯರಾವೆಂದು
ಸೃಷ್ಟಿಯೊಳಗಿಲ್ಲೆಮ್ಮ ಹೋಲುವ
ಕಷ್ಟಕರ್ಮಿಗಳಱಿಯದಕಟಾ
ಕೆಟ್ಟೆ ಕುಲಗುಣರೂಪಯೌವನ ವಿಫಲವಾಯ್ತೆಂದ ೧೩

ಬಱದೆ ಮನೆ ಮನೆವಾರ್ತೆಯಿಲ್ಲದ
ತಿರುಕ ಭಿಕ್ಷುಕರೆನ್ನನಂಗೀ
ಕರಿಸುವರು ಬೇಱೊಂದ ಕಾಣದೆ ಮುಂದುಗೆಟ್ಟವರು
ಕರಗುವರು ತಾವೆಂದಡೇತಕೆ
ಮರುಳುಗೊಂಡರ್ಥಿಸಿದೆ ತನ್ನನು
ಧರಣಿಪಾಲಕುಮಾರಿ ಕಾಣದೆ ನಿಜವನಕಟೆಂದ ೧೪

ಅಱಿಯನೇ ನಿನ್ನಣ್ಣನಾತನ
ಮಱುಗಿಸಿದೆ ಮಾನಿನಿ ಮಹತ್ತರ
ದಱಿತವುಳ್ಳವಳಾದೆ ನೆಲೆಯಲ್ಲದನನಾಶ್ರಯಿಸಿ
ಕೊಱತೆಯೇಕಿದಕಾರುವನು ಬೇ
ಸಱಿಸುವವರಾವಲ್ಲ ನೃಪರನು
ಜಱಿದು ತಂದೆನು ವಾಸಿಗೋಸುಗ ನಿನ್ನ ನಾನೆಂದ ೧೫

ತಂದಡದಕೇನಾಯ್ತು ತಪ್ಪೇ
ನಿಂದುಮುಖಿ ನಿರ್ಬಂಧವೆನಗಿ
ಲ್ಲೊಂದಱಲಿ ವರಿಸುವುದು ನೀನಿನ್ನಾದಡೊಲುವವರ
ಎಂದು ವಿಗತಪ್ರಣಯದಲಿ ಗೋ
ವಿಂದನಿರಲುಸುರದೆ ವಿವರ್ಜಿಸು
ವಂದದಲಿ ವೈದರ್ಭಿ ಕಳವಳಿಸಿದಳು ಭೀತಿಯಲಿ ೧೬

ಎಲ್ಲರಿಗೆ ತಾನಧಿಕ ಸತಿಯರಿ
ಗೆಲ್ಲರಿಗೆ ತಾ ಮೊದಲು ಪಟ್ಟದ
ವಲ್ಲಭೆಯಲಾ ತನಗೆ ಸರಿಯಾರೆಂಬ ಗರ್ವವನು
ಘಲ್ಲಿಸಲು ಮಾತಾಡಿ ನುಡಿಯದೆ
ಸೊಲ್ಲನುಪಶಮಿಸಿರಲು ಕೇಳುತ
ಭಲ್ಲೆ ಹದಲಿಱಿದಂತೆ ನೊಂದಳು ಪೂರ್ವಸೂಕ್ತಿಯಲಿ ೧೭

ಕೇಳುತಿದ್ದಳು ಬರೆವುತವೆ ತುದಿ
ಗಾಲಲಿಳೆಯನು ಕಡಲಿಡುವ ಕ
ಣ್ಣಾಲಿಗಳ ಕಾಡಿಗೆಯ ಕಂಬನಿಗಳು ಕುಚದ್ವಯದ
ಮೇಲೆ ಬೀಳಲು ಕುಚದ ಕುಂಕುಮ
ಜಾಲ ಕದಡಲು ಕಂಪಿಸಲು ತೊಡೆ
ತೋಳುಗಳು ತನ್ವಂಗಿ ತಳೆದಳು ತೀವ್ರ ವೇದನೆಯ ೧೮

ನಡುಗುವೆಳಲತೆಯಂಕುರವ ಬಱಿ
ಸಿಡಿಲು ಹೊಡೆದುದೊ ಹಂದೆಯನು ಹಾ
ವಡರಿದುದೊ ನಡು ನೀರೊಳದ್ದುದೊದನಾವೆ ನೆಱೆತುಂಬಿ
ಬಿಡುವೆ ನಾನೊಲಿದಂತೆ ನೃಪರನು
ಹಿಡಿದು ಬದುಕೆಂಬಾ ಮುಕುಂದನ
ನುಡಿಯ ಕೇಳ್ದ ಮಹಾಸತಿಗೆ ಘನವಾಯ್ತು ಭಯಶೋಕ ೧೯

ಬಿದ್ದುದೆತ್ತಿದ ಕೈಯ ಚಾಮರ
ವಿದ್ದಿರಿಕೆಯಲಿ ಧರೆಗೆ ಮೇಲುದು
ವದ್ದುದಶ್ರುಜಲಂಗಳಲಿ ಜಾಱಿದುದು ತನು ಸಡಿಲಿ
ಭದ್ರಭೂಷಣನಿಕರ ಹರಹರ
ಹೆದ್ದೊಱೆಯ ಮದ್ದಾದಳಂಗನೆ
ಯದ್ದ ಹರುಷದ ಹರಹು ಹರಿಹುಗಿಲಾಯ್ತು ಭಯರಸಕೆ ೨೦

ಹಾಯೆನುತ ಹಮ್ಮೈಸಿ ಬಿದ್ದಳು
ಬಾಯಿ ಬಿಡುತ ಲತಾಂಗಿ ನಡುಗುವ
ಕಾಯದಲಿ ಮುಡಿದರಳು ಸೂಸಲು ಬಟ್ಟಮಂಡೆಯಲಿ
ಹಾ ಇದೇನಾಯ್ತು ಬಲೆ ಹಾಸ್ಯರ
ಸಾಯತಿಕೆ ತಪ್ಪಾಯ್ತೆನುತ ನಾ
ರಾಯಣನು ನೆಗಹಿದನು ನಾಲಕು ತೋಳ್ಗಳಲಿ ಸತಿಯ ೨೧

ಇಳಿದು ಸಿರಿಮಂಚವನು ಕರುಣಾ
ಜಲಧಿ ತಕ್ಕವಿಸುತ್ತ ಕಂಬನಿ
ಗಳನು ತೊಡೆದನು ನಿಜಕರಾಬ್ಜದ ಮೆಲುದಳಂಗಳಲಿ
ಅಳಕನಿಚಯವ ನೇವರಿಸಿ ಹುಡಿ
ಗಳನು ತೊಡೆತೊಡೆದಪ್ಪಿ ಕುಳ್ಳಿ
ರ್ದೊಲವು ಮಿಗಲೆಡವೊಡೆಗೆ ಮಲಗಿಸಿಕೊಂಡು ಹರಿ ನುಡಿದ ೨೨

ಮಾಣು ಮಾಣು ವಿದರ್ಭಸುತೆ ನಿ
ನ್ನಾಣೆ ಬಿಡೆನಂಜದಿರು ಮನುಮಥ
ನಾಣೆ ಮನದೊಲವುಂಟು ಬಲ್ಲೆನು ಬಲ್ಲೆ ನಿನ್ನನು ತಾ
ಕಾಣಲೋಸುಗ ಕಾಂತೆ ಸರಸದ
ವಾಣಿಯನು ವಿರಚಿಸಲು ನೇಹ
ಕ್ಷೂಣೆಯವೆ ವಸುದೇವನಾಣೆ ವಿಸಂಚವಿಲ್ಲೆಂದ ೨೩

ಎಂದಡೇನೆಂದೆಂಬೆಯಾ ನುಡಿ
ಯಂದವನು ಕೋಪಸ್ಫುರಿತ ಮುಖ
ದಂದವನು ಬದ್ಧ ಭ್ರುಕುಟಿಗಳ ದಾರುಣೇಕ್ಷಣದ
ಅಂದವನು ಕಾಂಬರ್ಥಿಯಲಿ ತಾ
ನೆಂದೆನನುರಾಗದಲಸೂಯೆಯ
ನಿಂದುಮುಖಿ ಮಾಡದಿರು ಮಱುಗದಿರೆಂದನಸುರಾರಿ ೨೪

ಸರಸಿಜಾನನೆ ಕೇಳು ನೋಳ್ಪರೆ
ಪರಮ ಲಾಭವಿದೊಂದೆ ಸುಸ್ತ್ರೀ
ಕರಿಗೆ ಸಾಧು ಗೃಹಸ್ಥರಿಗೆ ಸಂಪನ್ನ ಗೃಹಗಳಲಿ
ಸರಸ ಸೂಕ್ತಿಗಳಿಂದ ಯಾಮುವ
ನುರುಳೆನೂಕುವುದೀ ಪರಿಯಲಂ
ಬರುಹವದನೆಯರೊಡನೆ ಮೇಳದಲೆಂದನಸುರಾರಿ ೨೫

ಎಂದು ತನ್ನರ್ಧಾಂಗಿಯನು ಹಲ
ವಂದದಲಿ ವಿಶ್ವಾಸಿಸುನವೋ
ಲೆಂದಡಾ ವೈದರ್ಭಿ ಸಂತವಿಸುತ್ತ ನಿಜಮನವ
ಎಂದಳನುರಾಗಾಶ್ರುನಯನ
ದ್ವಂದ್ವದಲಿ ನಡೆ ನೋಡಿ ಪರಮಾ
ನಂದ ವಿಗ್ರಹನೊಡನೆ ಗದ್ಗದವಚನದಲಿ ತರಳೆ ೨೬

ವಿದಿತವಿದು ಧರೆಗೈದೆ ದೇವರು
ಸದೃಶವಲ್ಲೀ ಭೂಪರೆಂಬಪ
ಶದ ದುರಾಕೃತಿಗಳಿಗೆ ದುಷ್ಟವಿನಷ್ಟಮತ್ತರಿಗೆ
ಸದಮಳಾನಂದಾಮೃತೈಕಾಂ
ಗದ ಸುನಿರ್ಮಳ ನಿತ್ಯನಿರುಪಮ
ಪದಕೆ ಪಡಿಯೆನಿಸುವರದಾರೆಂದಳು ಸರೋಜಮುಖಿ ೨೭

ಅವನಿಪರ ಪಾಡೇನು ಸರಸಿಜ
ಭವ ಭವಾದ್ಯರು ಸುರಮುನಿಂದ್ರ
ಪ್ರವರರೋಲಗಿಸುವರು ತನ್ನನು ವರಕೃಪೇಕ್ಷಣದ
ಲವವನರ್ಥಿಸಿ ತಾನದಾವನ
ಭವನದಾಸಿಯೆನಿಪ್ಪಡೀ ವಿಧಿ
ಸವನಿಸಿದುದಿನ್ನಾರು ಸರಿ ತನಗೆಂದಳಬುಜಾಕ್ಷಿ ೨೮

ನಿತ್ಯ ಶುದ್ಧ ವಿಬುದ್ಧ ಸಂವಿ
ತ್ತತ್ವರೂಪನೆ ನಿನ್ನ ಮಹಿಮೆಯು
ದೆತ್ತಲೆತ್ತಲು ತನ್ನ ಗುಣಕರ್ಮಸ್ವಭಾವವಿದು
ಎತ್ತಲಾತ್ಮಸುಖೈಕಲಾಭ ನಿ
ವೃತ್ತಿವಿಷಯನೆನಿಪ್ಪ ನೀ ನಾ
ನೆತ್ತಲಳಿಸುಖದಾಶೆಯವಳೆಂದಳು ಸರೋಜಮುಖಿ ೨೯

ನಿನ್ನ ಚರಣವನಾಶ್ರಯಿಸಿ ಮಿಗೆ
ಮಾನ್ಯೆಯಾದೆನು ಸರ್ವಗುಣ ಸಂ
ಪನ್ನೆಯಾದೆನು ವರದೆಯಾದೆನಶೇಷಸಿದ್ಧಿಗಳ
ಉನ್ನತಿಕೆಗಾಧಾರವಾದೆನು
ಹೊನ್ನನಾಶ್ರಯಿಸಿದ್ದವರು ಮಿಗೆ
ಮಾನ್ಯರಾದಂದದಲಿ ಚಿತ್ರವಿಸೆಂದಳಬುಜಾಕ್ಷಿ ೩೦

ಜಾತಿ ಕುಲ ಗುಣ ಧರ್ಮ ಕರ್ಮ
ವ್ರಾತವಿವು ನಿನಗಿಲ್ಲ ಮಾಯಾ
ತೀತನಾಗಿ ನಿರಂಜನಾದ್ವಯವಸ್ತು ನೀನಾಗಿ
ಜ್ಞಾತನಲ್ಲುಳಿದರಿಗೆ ವಿಷಯಾ
ತೀತನಾಗಿ ನಿಜಾತ್ಮಯೋಗಿ
ವ್ರಾತವಂಗೀಕರಿಸಿಹುದು ದಿಟವೆಂದಳಬುಜಾಕ್ಷಿ ೩೧

ಅಂಜಿ ಮೃತ್ಯುಭಯಕ್ಕೆ ಭವಭಯ
ಭಂಜನನೆ ನಿನ್ನಂಘ್ರಿಕಮಲದ
ಪಂಜರವನಾಶ್ರಯಿಸುವರು ಮನದಲಿ ಮಹೋತ್ತಮರು
ಅಂಜಿ ನೃಪಕೀಟಂಗಳಿಂಗೆ ನಿ
ರಂಜನನೆ ನೀಸೀ ಸಮುದ್ರಸ
ಮಂಜಸ ಸ್ಥಾನವನು ಮಾಡಿದೆಯೆಂದಳಬುಜಾಕ್ಷಿ ೩೨

ಆವನಱವನು ನಿನ್ನ ಯೋಗಿಮ
ನೋವಿದೂರನೆನಿಪ್ಪ ನಿಜವನು
ಭಾವದಿಂಗಿತವನು ಕೃತಾಂತನ ಸೃಷ್ಟಿ ಹುಬ್ಬಿನಲಿ
ಭಾವಿತವಲಾ ನಿನಗೆ ಭವವೆಂ
ಬೀ ವಿಡಂಬನವಜ್ಞಲೋಕ ಮ
ನೋವಿಮೋಹನವೆಂದಳಸಿತಾಪಾಂಗಿ ನಸುನಗುತ ೩೩

ಪರಮಗತಿ ನೀನೆಂದು ವಿಬುಧೇ
ಶ್ವರರನೊಲ್ಲದೆ ಸಾರಿದೆನು ಪದ
ಸರಸಿಜವನಿದನುಳಿದ ಮನುಜೇಶ್ವರರ ಮಾತೇಕೆ
ಇರದೆ ನಿನ್ನೊಂದೆಸೆವ ಹುಬ್ಬಿನ
ಪರಿಗತಿಯ ಕಾಲಾತ್ಮಕನ ಬಲು
ಗರಗಸದ ಕಡಿತದಲಿ ಕೆಡೆ ಬೀಳುವ ದುರಾತ್ಮಕರ ೩೪

ತೊಱೆದು ನಶ್ವರವೆಂದು ರಾಜ್ಯದ
ಸಿರಿಯನುನ್ನತ ಕೋಶವಾಹನ
ಪರಮವಿಭವಂಗಳನು ಸತಿಸುತರನು ಭವತ್ಪದದ
ಹೊರೆಯಲಿಹುದನು ಬಯಸಿ ತಪವನು
ಚರಿಸರೇ ನೃಪರಡವಿಯೊಳ್ಕಾ
ರಱಯರೆಲೆಯನು (?) ತೋಱಬೇಡೆನಗೆಂದಳಬುಜಾಕ್ಷಿ ೩೫

ತಾಗವಾವಳ ಕರ್ಣಪಥವನು
ಯೋಗಿವಂದ್ಯನೆ ನಿನ್ನ ಗುಣಗಣ
ಸಾಗರದ ಪೀಯೂಷಬಿಂದುಗಳೊಮ್ಮೆ ಮಱಿದಾಗಿ
ಆಗಳಾ ದುರ್ಭಗೆಗೆ ನೃಪಕುಲ
ಭೋಗವದು ದುರ್ಮತಿಗೆ ನರಕ ಮ
ಹಾಗಮದ ಫಲವುಳ್ಳುದೆಂದಳು ವರವಿದರ್ಭಸುತೆ ೩೬

ನರಕ ಬೇಱನ್ನೇಕೆ ತನುವೇ
ನರಕವಿದೆಲ್ಲಾ ಎಲುವು ತೊಗಲಿನ
ನರಕೆ ಕ್ರಿಮಿಕುಳ ಮಾಂಸವಿಷ್ಟಾಮೂತ್ರಮಯ ಭವದ
ಪರಮ ಜನ್ಮಸ್ಥಾನ ಪಾಪೋ
ತ್ಕರದ ಪುಣ್ಯಾಲಯವೆನಿಪಿದ
ಕ್ಕುರುಳುವುದು ಜಗವಾನಿದೆನ್ನದೆನುತ್ತ ದುರ್ಗತಿಗೆ ೩೭

ಇತರ ತನುಸಂಗಮದ ಮತ್ತಾ
ರತಿಗದೆಂತುಟೊ ನಿನ್ನ ಮಾಯಾ
ಕೃತಕ ಮೋಹನಶಕ್ತಿ ಮೋಹಿಸಧಾರನಕಟಕಟ
ಸತತಶೋಕಾತುರರು ತಾಪ
ತ್ರಿತಯತಪ್ತರು ಮರ್ತ್ಯರೈದುವ
ಗತಿಯದಾವುದೊ ಸುಖವದೆಂತುಟೊ ಎಂದಳಬುಜಾಕ್ಷಿ ೩೮

ಅಱಯಲರಿದೀ ನಿನ್ನ ಪದ ಪಂ
ಕರುಹಮಕರಂದೈಕಸೇವಾ
ನಿರತ ಮುನಿಮಾರ್ಗವನು ನರಪಶುಗಳಿಗೆ ಭಾವಿಸಲು
ಕರಣಚೇಷ್ಟಾಸಾಕ್ಷಿ ಸಕಲೋ
ತ್ಕರವೆನಿಪ ನಿನ್ನೀ ಸ್ವರೂಪವ
ನಱವರಾರೆಲೆ ದೇವ ಎಂದಳು ಕಮಲದಳನಯನೆ ೩೯

ಕರುಣಿಸುವುದೆನಗೊಲಿದು ಜನ್ಮಾಂ
ತರಸಹಸ್ರಂಗಳಲಿ ನಿಜಪದ
ಸರಸಿಜಸ್ಮರಣೆಯನು ಮನದಲಿ ಮಱೆಯದಂದದಲಿ
ಪರಮಪುರುಷೋತ್ತಮನೆ ನಿನ್ನನು
ಶರಣು ಹೊಕ್ಕೆನು ಬಿಡದಿರೆನ್ನನು
ಶರಣಜನವತ್ಸಲನೆ ಎಂದಳು ಕರಯುಗವ ಮುಗಿದು ೪೦

ಕೇಳಿದಡೆ ತಾಪತ್ರಯವನು
ನ್ಮೂಲಿಸುವ ನಿನ್ನತುಳಲೀಲಾ
ಲೋಲವಾರುಧಿಚರಿತವನು ಕೇಳ್ದವರುಬಿಡರೆನಲು
ಬಾಲೆ ಬಿಡುವೆನದೆಂತು ಪರಮ ಕೃ
ಪಾಳು ಬೆಸಸಿದೆ ತನಗದೆಂತು ಕ
ರಾಳವಚನವನೆಂದು ಕಂಬನಿದುಂಬಿದಳು ತರಳೆ ೪೧

ಕಂಡು ಬಿಡುವಳದಾರು ಮುನಿಹೃ
ತ್ಪುಂಡರೀಕಧ್ಯೇಯಪದಯುಗ
ಪುಂಡರೀಕವನಿದನು ಮಾನುಷದೃಷ್ಟಿಗೋಚರಕೆ
ಕಂಡೆನೂರ್ಜಿತ ಪೂರ್ವಜನ್ಮೋ
ದ್ದಂಡ ಸುಕೃತಫಲಂಗಳಲಿ ತನು
ಗೊಂಡ ಚಿನುಮಯಪೂರ್ಣವಸ್ತುವನೆಂದಳಬುಜಾಕ್ಷಿ ೪೨

ಒಲಿದು ನಿಜಗೃಹದಾಸಿ ತಾನೆಂ
ಬೊಲವಿನೆಸೆವ ಕಟಾಕ್ಷದಲಿ ಕಾ
ದಲನೆ ಕಾರುಣ್ಯದಲಿ ನೋಡಿದಡದುವೆ ತನಗಾದ
ಸುಲಭಸುಖಸಂಪದವೆನುತ ಪದ
ನಳಿನದಲಿ ತಲೆವಾಗಿ ಮುನಿ ಹೃ
ನ್ನಳಿನವಿಷ್ಟರವಾಸಿಯನು ಬೇಡಿದಳು ಲಲಿತಾಂಗಿ ೪೩

ನಗುತ ಕರುಣಾಸಿಂಧು ಕೇಳುತ
ರುಗುಮಿಣೀದೇವಿಯರ ನುಡಿಯನು
ತೆಗದು ತಕ್ಕವಿಸಿದನು ಸಿರಿಮಂಚದಲಿ ಕುಳ್ಳಿರಿಸಿ
ಬಗೆಯ ಬಯಕೆಯನಿತ್ತೆನೇತಕೆ
ದುಗುಡವೆನ್ನರ್ಧಾಂಗಿಗೆಂದೆನು
ತೊಗುಮಿಗೆಯ ಕಾರುಣ್ಯರಸದೊಳಗದ್ದಿದನು ಸತಿಯ ೪೪

ಇಂತಿದನು ನಾ ಕೇಳಲೋಸುಗ
ಕಾಂತೆ ಸರಸೋಕ್ತಿಯಲಿ ದಿಟ ಮುನಿ
ದಂತೆ ಮಾತಾಡಿದೆನು ಮಾಡದಿರಿನ್ನು ಸಂಶಯವ
ಸಂತವಿರು ಸತಿಯರ ಶಿರೋಮಣಿ
ಚಿಂತಿತಾರ್ಥವನಿತ್ತೆ ನಿನ್ನೇ
ಕಾಂತಭಕ್ತಿಗೆ ದುರ್ಲಭವದೇನುಂಟು ಹೇಳೆಂದ ೪೫

ವಿಷಯಸುಖಕೆಂದೆನ್ನ ನೆಱೆ ಪೂ
ಜಿಸುವ ನರರಜ್ಞಾನಿಗಳು ನಿ
ರ್ವಿಷಯ ನಿತ್ಯಸುಖಾತ್ಮಕನ ಕೈವಲ್ಯದಾಯಕನ
ಕುಸುಮಕೋಸುಗ ಪಾರಿಜಾತವ
ನೊಡೆದು ಭಜಿಸುವನಂತೆ ವಿಷಯಾ
ಮಿಷದ ಸುಖವದು ನರಕದೊಳಗುಂಟೆಂದನಸುರಾರಿ ೪೬

ಎನ್ನ ಮಾಯೆಯಲಕಟ ಸಿಲುಕಿ ವಿ
ಪನ್ನವಾಯ್ತೀ ಲೋಕ ಸಂಸಾ
ರಾರ್ಣವದಲಾಳುತ್ತ ಕಾಣದೆ ತನ್ನನಿಜಪದವ
ನಿನ್ನ ಮತಿ ಲೇಸಾಯ್ತು ಸಲೆ ಸಂ
ಪನ್ನವಾಯ್ತೆನ್ನಲ್ಲಿ ದುರ್ಲಭ
ವನ್ಯರಿಂಗೀ ಬುದ್ಧಿಗುಣ ವಿಷಯಾತ್ಮರಿಂಗೆಂದ ೪೭

ಇಲ್ಲ ನಿನ್ನಂದದಲಿ ಸತಿಯರು
ವಲ್ಲಭೆಯರತಿಹಿತವೆಯರು ತಾ
ಬಲ್ಲೆನಂಗನೆ ನಿಜವಿವಾಹದಲಂದು ಭೂಮಿಪರ
ಒಲ್ಲದಟ್ಟಿದೆ ವಿಪ್ರನನು ತ
ನ್ನಲ್ಲಿಗಾನಾರೆಂದು ಕಾಣದೆ
ಯೆಲ್ಲರಿಚ್ಛೆಯ ಮೀಱಿ ಮೆಚ್ಚಿದೆನದಕೆ ತಾನೆಂದ ೪೮

ಅದಱ ಮೇಲಾಹವದಲೊಡಹು
ಟ್ಟಿದನ ವೈರೂಪ್ಯವನು ಬಂಧನ
ವಿದಿತಭಂಗವ ಸೈರಿಸಿದೆ ಮತ್ತೆಂದು ಕೆಡೆನುಡಿಯೆ
ಹೃದಯಪಲ್ಲಟವಾಗದಂಬುಜ
ವದನೆ ಕಂಡೆನು ಮನದ ಧೈರ್ಯದ
ಹದನನದಱಿಂದಾವು ವಶವರ್ತಿಗಳು ನಿನಗೆಂದ ೪೯

ಎಂದು ಸತ್ಪ್ರೇಮದಲಿ ಸಹಜಾ
ನಂದನಿಧಿ ಸರಸೋಕ್ತಿಲೀಲೆಗ
ಳಿಂದ ಲಾಲಿಸಿ ರತಿಯನುತ್ಪಾದಿಸುತ ಮನವೊಲಿದು
ಇಂದುಮುಖಿಯರ ಮೆಱೆವ ಬಹುವಿಧ
ಮಂದಿರಂಗಳಲಿಂತು ದೇವ ಮು
ಕುಂದನೆಸೆದನು ಜಗವನಾತ್ಮಾರಾಮನನುಕರಿಸಿ ೫೦

ಜನಪ ಕೇಳೈ ಮುನ್ನ ಮುರಹರ
ನನುಪಮಾಂಶವೆನಿಪ್ಪ ಮನ್ಮಥ
ಜನಿಸಿದನು ರುಕ್ಮಿಣಿಗೆ ರುದ್ರಾಮರ್ಷವಹ್ನಿಯಲಿ
ತನುವನುಳಿದುದಯಿಸಲು ಪುನರಪಿ
ದನುಜಹರನಲಿ ಕೃಷ್ಣವನಿತಾ
ಜನದ ಸಂತಾನವನು ಸಂಕ್ಷೇಪದಲಿ ಕೇಳೆಂದ ೫೧

ಚಾರುದೇಷ್ಣ ಸುಚಾರು ಚಾರು ಕು
ಮಾರರಾ ಪ್ರದ್ಯುಮ್ನಮುಖ್ಯರು
ದಾರವಿಕ್ರಮರಾ ವಿದರ್ಭಸುತಾತ್ಮಸಂಭವರು
ಚಾರುಚಂದ್ರನು ಚಾರುದೇಹನು
ಚಾರುಗುಪ್ತನು ಚಾರುಮಾನತಿ
ಚಾರು ನಿರುಪಮ ಭದ್ರಚಾರುಗಳೆಸೆದರೀ ಧರೆಗೆ ೫೨

ಭಾನುರವಿ ಭಾನು ಸ್ವಭಾನು ಸು
ಭಾನು ಸುಬೃಹದ್ಭಾನು ಸುಪ್ರತಿ
ಭಾನು ಸುಸ್ವರ್ಭಾನು ನಿರುಪಮಚಂದ್ರಭಾನುಗಳು
ಭಾನು ಮಾನಪ್ರಭಾನುಗಳು ನಿಜ
ಸೂನುಗಳು ವರಸತ್ಯಭಾಮಾ
ಮಾನಿನಿಗೆ ಜನಿಸಿದರು ಪಿತೃಸನ್ನಿಭಪರಾಕ್ರಮರು ೫೩

ಸಾಂಬ ವಿಜಯ ಸುಮಿತ್ರಮುಖ್ಯರು
ಜಾಂಬವತಿಯಾತ್ಮಜರು ಶ್ರೀಮಾ
ನೆಂಬವನು ವರಭಾನುಚಂದ್ರಾದಿಗಳು ಲೀಲೆಯಲಿ
ಅಂಬುಜಾಕ್ಷಂಗುದಿಸಿದರು ಕೃತ
ನೆಂಬುವನು ಕಲಿ ವೃಕ ಸುಬಾಹುಗ
ಳೆಂಬವರು ಕಾಳಿಂದಿಗುದುಭವಿಸಿದರು ನಿಜಸುತರು ೫೪

ಆ ವೃಕನು ಗೋಕಾನಲಾದಿ ಸು
ತಾವಳಿಗಳಾ ಮಿತ್ರವಿಂದೆಗೆ
ಭಾವಿಸಲು ಸುತ್ರಾಮಜಿತು ಪ್ರಭೃತಿಗಳು ಭದ್ರೆಯಲಿ
ದೇವದೇವಂಗುದಿಸಿದರು ನರ
ದೇವ ಕೇಳೆಂದಷ್ಟಮಹಿಷೀ
ಭಾವಿತಾತ್ಮಜವಿಭವವನು ವಿಸ್ತರಿಸಿದನು ಮುನಿಪ ೫೫

ಲೋಕವಂದ್ಯರು ಜನಿಸಿದರು ಪ್ರ
ತ್ಯೇಕ ದಶದಶ ಸಂಖ್ಯೆಯಲಿ ಸುಮು
ಹಾಕುಮಾರರು ಷೋಡಶಸ್ತ್ರೀವರ ಸಹಸ್ರದಲಿ
ಆಕೃತಿ ಸ್ವರ ವರ್ಣ ಗುಣದಲಿ
ಲೋಕನಾಥನ ಹೋಲುವವರು ಪಿ
ನಾಕಿಸನ್ನಿಭ ವಿಕ್ರಮರು ಭೂಪಾಲ ಕೇಳೆಂದ ೫೬

ರುಕ್ಮಿಣೀತನಯಂಗೆ ಬಳಿಕಾ
ರುಕ್ಮಿಸುತೆಯ ವಿವಾಹವಾಯ್ತಾ
ರುಕ್ಮವತಿಯಲಿ ಜನಿಸಿದನು ವರತನಯನನಿರುದ್ಧ
ರುಕ್ಮಭೂಷಿತಗಾತ್ರನಾಶ್ರಿತ
ರುಕ್ಮದಾನವಿನೋದಿಯಿಂತಾ
ರುಕ್ಮವರ್ಣಾಂಬರನ ವಂಶವದಾಯ್ತು ವಿಖ್ಯಾತ ೫೭

ಎಸೆದನಿಂತು ಮನುಷ್ಯಲೀಲೆಯ
ಲಸುರಹರನನುಕರಿಸಿ ಪುತ್ರ
ಪ್ರಸರ ಪೌತ್ರಕನಿಚಯ ಬಾಂಧವ ವೃಂದಮಧ್ಯದಲಿ
ವಸುಧೆಯಲಿ ಧರ್ಮವನು ಪರಿಪಾ
ಲಿಸುತ ನಿಜಪದ ಶರಣರನು ಲಾ
ಲಿಸುತ ಸಂಗಿಯ ಸಂಗಿಯೊಲು ಸಂಸಾರಿಯೆಂದೆನಿಸಿ ೫೮

ಸಂಗಿ ಗುಣಸಂಸಾರಿಯೆಂದು ನಿ
ರಂಗನನು ನಿರ್ಮಾಯನನು ಹಲ
ವಂಗದಲಿ ಭಾವಿಸುವುದೀ ಜಗವಾತ್ಮಸಾಮ್ಯದಲಿ
ಅಂಗನೆಯರನವರತ ನಿಜಭವ
ನಂಗಳಲಿ ಭಜಿಸುತ್ತ ದಣಿಯರ
ನಂಗಪರವಶತೆಯಲಿ ಪರಮಾತ್ಮನನು ಭಕುತಿಯಲಿ ೫೯

ನೋಡಿ ದಣಿಯರು ಮೂರ್ತಿಯನು ಮಿಗೆ
ಪಾಡಿ ದಣಿಯರು ಕೀರ್ತಿಯನು ಮಾ
ತಾಡಿ ದಣಿಯರು ಸರಸಸೂಕ್ತಿಸುಧಾರಸಂಗಳಲಿ
ಆಡಿ ದಣಿಯರು ಮೆಱೆವ ವಿವಿಧ
ಕ್ರೀಡೆಗಳಲೋರಂತೆ ಸತಿಯರು
ಮಾಡಿದಗ್ಗದ ಸುಕೃತವಾವುದೊ ಭೂಪ ಕೇಳೆಂದ ೬೦

ಬಗೆಯ ಬಯಕೆಯ ತೋಱುಸುವ ನಸು
ನಗೆಯ ಬೇಟದ ಮೆಱೆವ ಹುಬ್ಬಿನ
ಹೊಗರ ಭಂಗಿಯ ಭಾವದಲಿ ರತಿಕೌಶಲವ ಮೆಱೆವ
ಮುಗುದೆಯರು ಮುರಹರನ ಮನವನು
ತೆಗೆಯಲಱಿಯರು ಲೋಕಮೋಹನ
ದೊಗುಮಿಗೆಯ ವಿಭ್ರಮವಿಳಾಸಂಗಳಲಿ ಕೇಳೆಂದ ೬೧

ಆಗಳಾಗಳೆ ಹೊಸತು ಸತಿಯರಿ
ಗಂಗುಣಾಬ್ಧಿಯ ಸಂಗ ಲಜ್ಜಿಸಿ
ಬಾಗಿ ಕಂಗಳ ಮಱೆಯಲೀಕ್ಷಿಸುವರು ಕಟಾಕ್ಷದಲಿ
ಏಂ ಗಹನವೋ ಭೂಪ ಕೃಷ್ಣನ
ಯೋಗಮಾಯೆಯ ಮಹಿಮೆ ಮನದನು
ರಾಗದಲಿ ತುಳುಕಾಡುತಿರ್ದುದು ವರವಧೂನಿವಹ ೬೨

ಅಱಿಯದಂತಿರೆ ಮುಚ್ಚಿ ಕಣ್ಣನು
ಹೊಱಗೆ ನಿಂದಿರೆ ಸತಿಯರಾತ್ಮೇ
ಶ್ವರನ ಲೀಲೆಯದೆಂದಱಿದು ಮತ್ತಱಿಯದಂದದಲಿ
ಸ್ಪರುಶಸುಖಲಾಭದಲಿ ಗೋತ್ರಾಂ
ತರವನೊರೆವುತ ಹೊತ್ತುಗಳೆವರು
ಹರಹರೆಂತುಟೊ ಕೃಷ್ಣಪದಸಂಗಾನುಭವ ಸೌಖ್ಯ ೬೩

ಏತರದುಭುತವರಸ ತಂತ
ನ್ಮಾತುಮುನ ನೈಗೊಂಡು ನಯನ
ಪ್ರೀತಿವಿಷಯದಲಿರಲು ಮರುಳಹುದಖಿಳಲೋಕವಿದು
ಕಾತರಿಸುವರು ಕಂಗಳೆವೆಗಳ
ಧಾತುಸೃಷ್ಟಿಯ ಹೀನತೆಗೆ ನಿ
ತ್ಯಾತುಮನ ನಿಜಮೂರುತಿಯನೀಕ್ಷಿಸುತ ತಮತಮಗೆ ೬೪

ಎಂಭತ್ತೇಳನೆಯ ಸಂಧಿ ಮುಗಿಯಿತು

# ಎಂಭತ್ತೆಂಟನೆಯ ಸಂಧಿ

ಚಿತ್ರಲೇಖೆ ಮಹಾವನಿತೆ ಬಲಿ
ಪುತ್ರನಂದನೆಯೆಡೆಗೆ ಕಾಮನ
ಪುತ್ರನನು ಕೊಂಡೊಯ್ದಳಾ ಶೋಣಿತಪುರಾಂತರಕೆ

ಮುನಿಪ ಕರುಣಿಸು ರುಕ್ಮಿಸುತೆಯನು
ಮನುಮಥಂಗೆಂತೀವ ಹದನನು
ಅನುಪಮನೆ ಹೇಳಾವ ಸಂಧಾನವನು ರುಕ್ಮಿಯಲಿ
ದನುಜಹರನೆಸಗಿದನು ಬಿಟ್ಟನು
ಮನಕತವನವನೆಂತು ನೃಪನೆನೆ
ಮುನಿಶಿರೋಮಣಿ ಶುಕಮಹಾಯೋಗೀಂದ್ರನಿಂತೆಂದ ೧

ಕೇಳು ನೃಪ ಮುರವೈರಿ ಮುಂಡಿತ
ಮೌಳಿ ಪುರವನು ಹೊಗದೆ ನೃಪ ಶಶಿ
ಮೌಳಿಯನು ಮನವೊಲಿಸಿ ರುಕ್ಮಿ ವರಂಬಡೆಯಲೆಂದು
ಓಲಗಿಸಿ ತಪದಿಂದಲಾ ಶ್ರೀ
ಶೈಲವಾಸಿ ಮಹೇಶನಂಘ್ರಿಯ
ಮೇಲಿರಿಸಿ ಚಿತ್ತವನು ನಿಂದನು ವರಸಮಾಧಿಯಲಿ ೨

ಮೂಱನೆಯ ವರುಷದಲಿ ಹರ ವೈ
ದೋಱ ಮೆಚ್ಚಿದೆನೆಲವೊ ಬೇಡು ಮ
ನೋರಥವನೆನಲೆಱಗಿ ಪದದಲಿ ರಣಪರಾಜಯಕೆ
ಮಾಱುವೋದೆನು ಸಮರಮುಖದೊಳ
ಗೋಱುಗುಡಿಸದ ಬಿಲ್ಲನೆನಗೆ ಕೃ
ಪಾರಸಾಬ್ಧಿಯೆ ಕರುಣಿಸೆನಲಿಂತೆಂದನಖಿಳೇಶ ೩

ಇತ್ತೆನಾದರೆ ಮಗನೆ ಧನುವನು
ಮತ್ತೆ ಕೇಳೆನ್ನೊಂದು ಮಾತನು
ಚಿತ್ತದವಧಾನದಲಿ ಸಾಕ್ಷಾದ್ವಿಷ್ಣುವೆಂದೆನಿಪ
ಉತ್ತಮೋತ್ತಮ ಕೃಷ್ಣನಲಿ ನಿ
ರ್ವರ್ತಿಸಿದಡಾಹವವನೆನ್ನಯ
ಹತ್ತಿರಕ ಬಹುದೆಂದು ಕೊಟ್ಟಂತರ್ಧಾನದಲಿ ನಿಂದ ೪

ಬಳಿಕ ತನಗಿನ್ನಾರು ಭುವನಾ
ವಳಿಗಳಲಿ ಸರಿಯೆನುತ ಕೊಬ್ಬುವ
ಪುಳಕದಲಿ ಪುರವರಕೆ ಬಂದನು ಸರ್ವಭೂಭುಜರ
ಗೆಲಿದನೊಂದೇ ಬಿಲ್ಲಿನಲಿ ಯದು
ಕುಲದ ವೈರವ ನೆನೆನು ಪರಿಯಾ
ಕುಳಿತನಾಗುತ್ತಿರ್ದನಡಿಗಡಿಗಾ ವಿದರ್ಭನೃಪ ೫

ಕಂದುವುದು ಮನ ಕೋಪಶಿಖಿಯಲಿ
ನಂದುವುದು ಮತ್ತಂತೆ ನೆನೆನೆನೆ
ದಿಂದುಮೌಳಿಯ ಮಾತನಾ ನಿಜಚಾಪವಿಚ್ಯುತಿಯ
ಕೊಂದನೋ ಕಾಳಾಯ್ತು ತಾ ನೆನೆ
ದಂದವೆಲ್ಲವೆನುತ್ತ ಬಡಮುನಿ
ಯಂದದಲಿ ಬಿಸುಸುಯ್ಯುತಿರ್ದನು ಚಪಲಚಿತ್ತದಲಿ ೬

ಇತ್ತನಾ ವೈರಾನುಬಂಧವ
ನೆತ್ತಿ ಬಿಸುಡುವೆನೆನುತ ತನ್ನಯ
ಪುತ್ರಿಯನು ತಂಗಿಯ ಮಗಂಗೆ ಮನೋನುರಾಗದಲಿ
ವಿಸ್ತರಿಸಿದುದು ಮೈತ್ರಿ ಬಳಿಕ ಮ
ಹತ್ತಮಾಗ್ರಣಿ ಮನುಮಥನ ಸತಿ
ಹೆತ್ತಳನಿರುದ್ಧನನು ಸುಮರಮುಖಾನಿರುದ್ಧನನು ೭

ಸೇರಿದಳು ಕೃತವರ್ಮತನಯಗೆ
ಚಾರುಮತಿ ರುಕ್ಮಿಣಿಯ ಸುತೆ ಸುರ
ವೈರಿಬಾಣನ ಪುತ್ರಿ ಬಳಿಕನಿರುದ್ಧನಂಘ್ರಿಗಳ
ಸಾರಿದಳು ವೈವಾಹಿಕದಲೆಲೆ
ಭೂರಮಣ ಭುವನೈಕನಾಥನು
ದಾರವಂಶೋನ್ನತಿಯನಭಿವರ್ಣಿಸುವರಾರೆಂದ ೮

ಆಲಸಲಾಗದು ಮುನಿಪ ನಿಮ್ಮಡಿ
ಬಳಲಿಸಲು ತಾನಾದೆನಮೃತವ
ತಳಿತಳಿದು ತನ್ನಾತ್ಮನಂತರ್ಗತ ಮನೋವ್ಯಥೆಯ
ಕಳೆದೆ ಕರುಣಾನಿಧಿಯೆ ಜನ್ಮದ
ಫಲವ ಪಡೆದನು ಅಂತಕನ ನೆಱೆ
ಗೆಲಿದೆ ನಾನಿನ್ನಂಜೆನೆಂದನು ನೃಪತಿ ಕೈಮುಗಿದು ೯

ಚಿತ್ತವಿಸು ಮುನಿನಾಥ ಯಾದವ
ರೆತ್ತಲಾ ಬಾಣಾಖ್ಯ ದೈತ್ಯನ
ದೆತ್ತಲಾದುದು ತಮ್ಮೊಳಗೆ ವೈವಾಹಸಂಬಂಧ
ವಿಸ್ತರಿಸಬೇಕೆನಗಿದನು ಪುರು
ಷೋತ್ತಮಾತ್ಮಜನಾತ್ಮಜನ ಸ
ದ್ವೃತ್ತವನು ಸರ್ವಜ್ಞನೆನಲಿಂತೆಂದನಾ ಮುನಿಪ ೧೦

ಅರಸ ಕೇಳೈ ಬಲಿಸುತರು ನೂ
ರ್ವರಿಗೆ ಹಿರಿಯನು ಬಾಣನತಿದು
ರ್ಧರಪರಾಕ್ರಮನೊಂದು ದಿನ ಕೈಲಾಸವಾಸಿಯನು
ಪರಮತಾಂಡವದಿಂದ ಮೆಚ್ಚಿಸ
ಲುರುದಯಾನಿಧಿ ಭಕ್ತವತ್ಸಲ
ಪರಮಶಿವನಿತ್ತನು ಮನೋರಥಸಿದ್ಧಿಗಳನೊಲಿದು ೧೧

ದಕ್ಷಮುಖನಾಶನದೊಳಪ್ರತಿ
ಪಕ್ಷತೆಯನೀರೇಳು ಜಗದಲಿ
ರಕ್ಷೆಯನು ನಿಜಪುರದ ಸಕಲ ಕುಟುಂಬ ಪರಿಜನದ
ಪಕ್ಷಪಾತಿತ್ವವನು ಸಂಗರ
ದಕ್ಷನರ್ಥಿಸಲೆಲ್ಲವನು ಭಾ
ಳಾಕ್ಷನಿತ್ತನು ಬಲಿಸುತಗೆ ಸಾಹಸ್ರಭುಜಬಲಗೆ ೧೨

ಒಂದು ದಿನ ಕಾಳಗವನರ್ಥಿಸಿ
ಚಂದ್ರಮೌಳಿಯ ಬೇಡಲೆಲವೋ
ಮಂದಮತಿ ನಿನ್ನೀ ರಥಧ್ವಜದಂಡ ಮುಱಿದಿಳೆಗೆ
ಸಂದಡಹುದಾಹವವೆನಲು ಸಾ
ನಂದದಲಿ ನಿಜಭುಜಸಹಸ್ರದ
ದಂದುಗದ ಜಾಡ್ಯವನು ನೀಗಿದೆನೆನುತ ಕೈಮುಗಿದ ೧೩

ವಸುಮತೀಪತಿ ಕೇಳು ಜನಿಸಿದ
ಳುಷೆಯೆನಿಪ ವರತನುಜೆ ಬಾಣನ
ಬಸುರಲಂಬುದಗರ್ಭದಿಂದೆಳೆಮಿಂಚಿನಂದದಲಿ
ವಿಷಗಳನು ಜಲಕೇಳಿಯಲಿ ವಿಹ
ರಿಸುತಿರಲು ಸತಿಸಹಿತ ಕಂಡಳು
ಕುಸುಮಶರಶರತಪ್ತೆಯಾದಳು ಬಳಿಕುಷಾದೇವಿ ೧೪

ಅಱಿತಳಂಬಿಕೆ ಬಳಿಕುಷೆಯ ಮನ
ದಿರವನಳಲದಿರಬಲೆ ತಾನೀ
ಹರನೊಡನೆ ನಲಿದಾಡುವಂದದಲಾಡಲರ್ಥಿಸಿದೆ
ವರನೊಡನೆ ತಳುವಿಲ್ಲದೊಬ್ಬನ
ನರಸುಮಗನನು ಕಾಂಬೆ ಕನಸಿನ
ಲಿರದೆ ಪತಿಯಹನಾತನೆಂದಳು ಕರುಣದಲಿ ಗಿರಿಜೆ ೧೫

ಸಂದವಾಪರಿ ದಿವಸ ಕೆಲವುಷೆ
ಯೊಂದು ದಿನ ರಾತ್ರೆಯಲಿ ಕಾಮನ
ಕಂದನನು ಕನಸಿನಲಿ ಕಂಡಳು ರತಿವಿನೋದದಲಿ
ಕುಂದದಧರಾಸ್ವಾದನದ ಸಾ
ನಂದದಿಂದಿರುತಿರಲು ತಕ್ಷಣ
ಕಂದೆಱೆದು ಕಳವಳಿಸಿ ಕಾಣದೆ ಹಲುಬಿದಳು ವರನ ೧೬

ಎದ್ದಳಂಗನೆ ಕಾಂತ ಹಾ ಹಾ
ಹೊದ್ದಿದಬಲೆಯ ಸುಖವೆ ಹಾಯೆನು
ತಿದ್ದೆಸೆಯು ಕೆಳದಿಯರ ಮಧ್ಯದಲಂದು ಬಾಯ್ಬಿಡುತ
ಸಿದ್ಧೆಯನು ಪರಿಹರಿಸಿ ನೀನೆ
ಲ್ಲಿದ್ದೆ ಹೇಳೆನ್ನೊಡೆಯ ಹೇಳೇ
ಕದ್ದಿ ಹೋದೆ ದುರಂತಶೋಕಾಂಬುಧಿಯಲಕಟೆನುತ ೧೭

ಮತ್ತಕಾಶಿನಿಯಳುವುದನು ಕೇ
ಳುತ್ತ ಕುಂಭಾಂಡಕನ ಸುತೆ ಸತಿ
ಚಿತ್ರಲೇಖೆ ಯಿದೇನೆನುತ್ತೊಡನೆದ್ದು ಸಂಭ್ರಮಿಸಿ
ಚಿತ್ರವಲ್ಲಭನಾರು ಶೋಕವಿ
ದೆತ್ತಲಾರನು ಕಂಡೆ ಹೇಳೆನು
ತುತ್ತಮಾಂಗನೆ ಮಾತನಾಡಿಸಿದಳು ಮಹಾಸತಿಯ ೧೮

ಕಂಡೆನಲ್ಲಾ ಕೆಳದಿ ಚಲುವರ
ಗಂಡನನು ಹದಿನಾಱು ವರುಷದ
ಗಂಡನನು ಆಜಾನುಲಂಬಿತಬಾಹುದಂಡನನು
ಕಂಡರಿಸಿದೆಳನೀಲರತ್ನವ
ದಿಂಡುದಿರುಹುವ ಕಾಯಕಾಂತಿಯ
ಪುಂಡರೀಕದಳಾಯತಾಕ್ಷನನೆಂದಳಬುಜಾಕ್ಷಿ ೧೯

ಕೇಳೆನಾ ಮುನ್ನಾತನನು ಕ
ಣ್ಣಾಲಿಗಳು ಕಂಡಱಿಯವಚ್ಚ ವಿ
ಶಾಲವಕ್ಷೋನೇತ್ರನನು ಸುಕುಮಾರಗಾತ್ರನನು
ಸಾಲದೆನಲಧರಾಮೃತವನಿ
ತ್ತಾಳಿಗೊಂಡನು ತನ್ನನಾರಿಗೆ
ಹೇಳುವೆನು ಹಾ ವಿಧಿಯೆ ಹಾಯೆಂದಳಲಿದಳು ತರಳೆ ೨೦

ವ್ಯಸನಸಾಗರದೊಳಗೆ ತನ್ನನು
ಬಿಸುಟು ಹೋದನು ಜೀವವನು ಕೊಂ
ಡಸುಗಳುಳಿವವೆ ತಾಯೆ ನಿಮಿಷಾರ್ಧದಲಿ ಕಾಣದಿರೆ
ಪಸರಿಸುತ್ತಿದೆ ನಾಸಿಕಕೆ ಹೊಸ
ಕುಸುಮಶರನಂಗಾರ್ಥ ಪರಿಮಳ
ದೆಸೆಗೆ ನೀನೆಂತಿರ್ದೆ ಸೈರಿಸಿಯೆಂದಳಬುಜಾಕ್ಷಿ ೨೧

ಹೋಹೊ ಅಂಜದಿರಳಲದಿರು ನೀ
ನೂಹಿಸಿದ ನಲ್ಲನನು ಭುವನ
ವ್ಯೂಹದೊಳಗಿದ್ದರೆ ತಹೆನು ತಹೆನೇಕೆ ದಂಡಿಸುವೆ
ದೇಹವನು ಸಂತವಿಸು ನಿಸ್ಸಂ
ದೇಹವಿದೆ ತೋಱುವೆನು ನೋಡಾ
ಸಾಹಸವನೆಂದೆನುತ ಸಾರಿರ್ದಳು ಮಹಾವನಿತೆ ೨೨

ತರಿಸಿದಳು ಪಟಭಾರವನು ಪಂ
ಕರುಹಮುಖಿ ಸುರವರರನಂಬರ
ಚರರನವನೀಚರರನಾ ಪಾತಾಳವಾಸಿಗಳ
ಬರೆದು ತೋಱಿದಡಲ್ಲೆನುತ ಮೊಗ
ದಿರುಹಿದಳು ಬಳಿಕಿಳೆಯ ಪೃಥ್ವೀ
ಶ್ವರರನಂಗನೆ ಬರೆದು ತೋಱಿದಳಾ ಮಹಾಸತಿಗೆ ೨೩

ಶೂರಸೇನನನೊರೆದಳಂಗನೆ
ಮೋರೆಯನು ಮುರುಹಿದಳು ಗೋಪರ
ನೋರೆಗಣ್ಣಲಿ ನೋಡಿ ಬಿಸುಟಳು ಸಾಲ್ವ ಭೂಭುಜರ
ಕೇರಳರನಲ್ಲೆಂದಳಾ ಗಾಂ
ಧಾರರನು ನೂಕಿದಳು ಜಱೆದಳು
ಕೌರವನನಾ ಮಾದ್ರ ಮಾಳವಮತ್ಸ್ಯ ಭೂಭುಜರ ೨೪

ಸೂಸಿದಳು ಕಡೆಗಣ್ಣಲಾ ಕಾ
ಶೀಶ್ವರನ ಪಾಂಚಾಲರನು ಹೊಱೆ
ಬೀಸಿದಳು ಹೈಹಯರಹೂಹೂಯೆಂದಳಂಗವರ
ಬೇಸಱಿಸಬೇಡೆಂದಳಾ ವಂ
ಗೇಶ್ವರನ ಭಂಗಿಸಿದಳಂಗನೆ
ಕೌಸಲರನಿವರೇತಕೆಂದಳು ಲಿಖಿತ ಸಂಸ್ಥಿತರ ೨೫

ಕೈಕಯರನೇಕೆಂದು ನುಡಿದಳು
ನೂಕಿದಳು ಮಾಗಧ ಕಳಿಂಗರ
ನೋಕರಿಸಿದಳು ಚೋಳ ಪಾಂಡ್ಯ ತುರುಷ್ಕ ಗುಜ್ಜರರ
ಸಾಕು ತೆಗೆ ಕಾಂಭೋಜರೇ ತಾ
ನೇಕೆ ಸೇರದು ತನ್ನ ಮನ ಕುಂ
ತೀಕುಮಾರರಲೆನುತ ಮೊಗದಿರುಹಿದಳು ಲಲಿತಾಂಗಿ ೨೬

ಬಳಿಕ ಯಾದವ ಧರಣಿಪಾಲರ
ನಲಘುಮತಿ ತೋಱಿದಳು ಚಿತ್ರಾ
ವಳಿಯ ರಚನೆಯ ಚಮತುಕಾರದ ಚಾರುಮೂರ್ತಿಗಳ
ನಳಿನಮುಖಿ ನೋಡೆನುತ ಶೂರನ
ನೊಲಿದು ವಸುದೇವನನು ಹರಿಯನು
ಹಲಧರನನಾ ಕ್ರಮದಲಾ ಕಾಮಾನಿರುದ್ಧರನು ೨೭

ಲೆಕ್ಕಿಸುತ ನಡೆತಂದಳಂಗನೆ
ಮಿಕ್ಕ ಯಾದವಭೂಪರನು ಕಂ
ಡೊಕ್ಕಳೊಡಲನು ರಾಮಕೃಷ್ಣಾನಂಗರಂಘ್ರಿಯಲಿ
ನಕ್ಕಳನಿರುದ್ಧನನು ಕಾಣುತ
ಸಿಕ್ಕಿದನಲಾ ಕಳ್ಳನೀತನೆ
ಅಕ್ಕ ನೋಡಿದ್ದಾನೆಯೆನುತವೆ ನಾಚಿದಳು ತರಳೆ ೨೮

ನಟ್ಟ ಕಂಗಳ ನಡುಗುವವಯವ
ದಿಟ್ಟಿಡೆಯ ತನುಪುಳಕದಲಿ ಮಱೆ
ವಟ್ಟಳಂಗನೆ ಲಜ್ಜೆಯಲಿ ತಲೆವಾಗಿ ಚಿತ್ರವನು
ಮುಟ್ಟಿ ಚುಂಬಿಸುವಂತಿರಲು ಜಗ
ಜಟ್ಟಿ ಮಾಯಾವತಿ ಮುಹೂರ್ತಕೆ
ದಿಟ್ಟಿಯಾಗಿರು ತಹೆನೆನುತ ಹಾಯ್ದಳು ಕುಶಸ್ಥಲಿಗೆ ೨೯

ಬಂದಳಾ ಯೋಗಿನಿ ನಭೋಗತಿ
ಯಿಂದ ವಿಮಳ ದ್ವಾರಕಾಪುರ
ಕಂಡು ಬಹುವಿಧ ತೋರಣಾಲಂಕೃತಮಹಾಪಥದ
ಅಂದವನು ನೋಡುತ್ತ ಪುರಜನ
ವೃಂದ ಕಾಣದವೋಲು ಮನುಮಥ
ನಂದನನ ಮಂದಿರಕೆ ಬಂದಳು ರಾತ್ರಿಯಲಿ ತರಳೆ ೩೦

ಗಗನಗಾಮಿನಿ ಬಂದು ಕಂಡಳು
ಜಗದುದರನಾಲಯದ ಕೆಲದಲಿ
ಸೊಗಯಿಸುವ ಭವನದಲಿ ಮಣಿಮಂಚದಲಿ ಪವಡಿಸಿದ
ಮುಗಿದ ಕಂಗಳ ಕಾಮದೇವನ
ಮಗನ ವೈಸಿರಿಯನು ಮುಖಾಬ್ಜದ
ಹೊಗರ ತೇಜವನೀಕ್ಷಿಸುತ ಬೆಱಗಾದಳಡಿಗಡಿಗೆ ೩೧

ಎತ್ತಿಕೊಂಡಳು ಮಂಚಸಹಿತ ಮ
ಹತ್ತುಮನ ಮೊಮ್ಮಗನ ಕಾಮಿನಿ
ಚಿತ್ತದನುರಾಗದಲಿ ಹಾಯ್ದಳು ಗಗನಮಂಡಲಕೆ
ಕೆತ್ತಕದ ತೆಱೆಯದು ಮಹಾಜನ
ವೆತ್ತಲೇನೆಂದಱಿಯದಬಲೆಯ
ಸತ್ವವೆಂತುಟೊ ಯೋಗಸಾಮರ್ಥ್ಯದ ಸಘಾನತೆಯ ೩೨

ಬಂದಳಾ ಸತಿ ಬಾಣಪುತ್ರಿಯ
ಮಂದಿರಕೆ ನಿಮಿಷಾರ್ಧದಲಿ ಕೊ
ಳ್ಳಿಂದುಮುಖಿ ಕದ್ದವನನೀ ನಿನ್ನಂತರಾತ್ಮನನು
ಎಂದು ತೋಱಿದಳನುಪಮಾಚ್ಯುತ
ನಂದನನ ನಂದನನನಧಿಕಾ
ನಂದದಲಿ ಸಂಭಾವಿಸಿದಳಾ ಸತಿ ಮನೋರಮನ ೩೩

ಉಪಚರಿಸಿದಳು ಕಾಂತೆ ವರನನು
ವಿಪುಳ ಭೋಜನ ಪಾನಭಕ್ಷ್ಯಾ
ದ್ಯುಪಚಿತಾಲಂಕಾರ ಗಂಧ ಸುಪುಷ್ಪನಿಕರದಲಿ
ತೃಪುತಿವಡಿಸಿದಳುತ್ತಮಾಂಬರ
ಗುಪುತ ರತಿಗೋಷ್ಠಿಯಲಿ ರತಿಲೋ
ಲುಪೆ ಲತಾಂಗಿ ಮನೋಭಿರಾಮನನಧಿಕ ಹರುಷದಲಿ ೩೪

ಸಂದವೀಪರಿ ಕೆಲವು ದಿನ ಸಾ
ನಂದದಲಿ ಸಸ್ನೇಹ ಲೀಲಾ
ಮಂದಪರಿರಂಭ ಪ್ರಹರ್ಷೋತ್ಪುಳಕ ಭಾವದಲಿ
ಮಂದಹಾಸೇಕ್ಷಣೆ ಸುಧಾನಿ
ಷ್ಯಂದ ವರ ಸೂಕ್ತಿಗಳ ಲೀಲೆಗ
ಳಿಂದ ನಿಮಿಷಾರ್ಧದವೊಲಾ ಕನ್ಯಾನಿರುದ್ಧರಿಗೆ ೩೫

ಕಾಲಗತಿಯಲಿ ಕಂಡಱಿತರಾ
ಬಾಲೆಯಂಗೋಪಾಂಗನಖ ರೇ
ಖಾಳಿಲಕ್ಷಿತ ಭೋಗಚಿಹ್ನಂಗಳನು ತದ್ಭಟರು
ಆಲಯವ ಹೊಗಲಂಜಿ ಕೆಟ್ಟೆವು
ಕಾಳುಮಾಡಿದರಕಟೆನುತ ಹರಿ
ದೋಲಗದ ದೈತ್ಯಾಧಿಪತಿಗಱುಹಿಸಿದರಾ ಹದನ ೩೬

ಗಂಡು ನೊಣ ಹೊಗದಂತೆ ಕಾಯಿದು
ಕೊಂಡಿಹೆವು ಭವನವನು ಹೊಕ್ಕಿಹ
ಗಂಡನಾವನೊ ಜೀಯ ಕನ್ಯಾರತ್ನವನು ಕೆಡಿಸಿ
ಭಂಡತನವನು ಹೇಳಲಮ್ಮೆವು
ದಿಂಡುದಱಿವೆವು ನೇಮವನು ಕೊಡು
ದಂಡಧರನೇಯಾಗಲವನೆಂದರು ಮಹಾಭಟರು ೩೭

ಕೇಳುತಿದ್ದನು ಗದ್ದುಗೆಯನೊದೆ
ದಾಲಿಗಳು ಕಿಡಿಗೆದಱೆ ಸಾವಿರ
ತೋಳುಗಳ ಗಜಬಜದ ಗಾಢಾಮರುಷದುಬ್ಬಿನಲಿ
ಜ್ವಾಲೆಯಲಿ ನಿಂದಂತೆ ಭ್ರುಕುಟಿ ಕ
ರಾಳಮುಖನಂಬರವ ಬಿಸುಟನು
ರಾಳಿ ತೆಗೆಯಲು ವೀರ ಹೊಱವಂಟನು ನಿಜಾಲಯವ ೩೮

ಬಂದು ಕನ್ಯಾನಿಳಯದಿದಿರಲಿ
ನಿಂದು ಗದೆಯನು ತಿರುಹುತಂತಕ
ನಂದದಲಿ ಕಳುಹಿದನು ಭಟರನು ವೀರನುಱೆ ಜಱೆದು
ಕೊಂದು ಕಳೆ ಬಿಡುಕಿದರೆ ಕಳ್ಳನ
ನೆಂದು ಕೈವೀಸಲು ಮಹಾರ್ಣವ
ದಂದದಲಿ ಸಂದಣಿಸಿ ಹೊಕ್ಕುದು ಕನ್ಯಕಾಗೃಹವ ೩೯

ಕಂಡನಾ ಪಟುಭಟರ ಬರವನು
ಗಂಡುಗಲಿ ಸಮ್ಮುಖಕೆ ಗದೆಯನು
ಕೊಂಡು ನಿಂದನು ಬಾಗಿಲಲಿ ಕಲ್ಪಾಂತದಲಿ ಕುಣಿವ
ಖಂಡಪರಶುವಿನಂತೆ ಸಂಯುಗ
ಪಂಡಿತನು ಬಡಿಬಡಿದು ಕುಱಿಗಳ
ಹಿಂಡನೊದೆವ ಮೃಗೇಂದ್ರನಂತಿರೆ ಮಡುಹಿದನು ಭಟರ ೪೦

ತಲೆಯೊಡೆದು ಕೊರಳುಡಿದು ತೊಡೆಯು
ಕ್ಕಳಿಸಿ ತೋಳ್ಗಳು ಜಱಿದು ಬೆನ್ನೆಲು
ಕಳಚಿ ಕೆನ್ನೆತ್ತರು ಸುರಿದು ಕರುಳುಗಳು ಕುಪ್ಪಳಿಸಿ
ತುಳಿದು ಹೆಣನನು ದೈತ್ಯಬಲ.ಬಾ
ಗಿಲಲಿ ಹೊಱವಂಟೆಂಟು ದೆಸೆಗ
ನ್ವಳಿಸುತಿರ್ದುದು ಪರಿಘಹತಿಯಲಿ ಯಾದವೋತ್ತಮನ ೪೧

ಗಂಡುಗಲಿ ನಿಜಬಲವಿನಾಶವ
ಕಂಡು ಬಲಿನಂದನನು ಮೊಳಗಿಸಿ
ದಂಡೆಯನು ಸುರನಿಕರ ಬೆದಱಲು ಭಟನ ಭರವಸಕೆ
ಮಂಡೆಯನು ತೂಗುತ್ತ ಚಿತ್ರವ
ಕಂಡೆನಜಭವ ಶಕ್ರಮುಖ್ಯರು
ಕಂಡು ಬದುಕುವರೆನ್ನನೀ ನರನಿದಿರೆ ತನಗೆಂದ ೪೨

ಎಂದು ಗದೆಯನು ತುಡುಕಿ ಕನ್ಯಾ
ಮಂದಿರವನಬ್ಬರಿಸಿ ಹೊಕ್ಕನು
ಮಂದವಿಕ್ರಮನಸುರಪತಿ ಹಿಡಿ ಕಟ್ಟು ಕೊಲ್ಲೆನುತ
ಮುಂದುವರಿದೈತರಲು ಯಾದವ
ನಂದನನು ನಿತ್ಯಾತ್ಮನಂಘ್ರಿ
ದ್ವಂದ್ವವನು ನೆನೆವುತ್ತ ಬಿದ್ದನು ಭಟನ ಸಮ್ಮುಖಕೆ ೪೩

ಎಂಭತ್ತೆಂಟನೆಯ ಸಂಧಿ ಮುಗಿಯಿತು.

# ಎಂಭತ್ತೊಂಭತ್ತನೆಯ ಸಂಧಿ

ಬಾಣಬಾಹುಸಹಸ್ರಶಾಖಾ
ಶ್ರೇಣಿಯನು ತಡೆಗಡಿದು ಸಮರ
ಕ್ಷೋಣಿಯಲಿ ದನುಜಾರಿ ಮೆಱೆದನು ಬಾಹುವಿಕ್ರಮವ

ಅರಸ ಕೇಳನಿರುದ್ಧನಾಹವ
ದುರವಣೆಗೆ ಸೆಡೆದೋಡಿ ದೈತ್ಯೇ
ಶ್ವರನ ಪಡೆ ದೆಸೆದೆಸೆಗೆ ಚೆಲ್ಲಿದುದೊಡಲ ಮೋಹದಲಿ
ಪರಿಭವವನೀಕ್ಷಿಸುತ ಶಸ್ತ್ರೋ
ತ್ಕರದ ಮಳೆಯಲಿ ಮುಸುಕಿದನು ಯದು
ವರನನಮರಾರಾತಿ ತಾನೇ ನಡೆದು ಸಮ್ಮುಖಕೆ ೧

ಸೂಸಿ ಕವಿವ ಶರೌಘವನು ಹೊಱ
ಬೀಸಿದನು ಪರಿಘದಲಿ ಮೈ ನಸು
ಮಿಸಲಳಿಯದು ಮೆಚ್ಚಿದೆನು ನಿನಗೆನುತ ರಿಪುಭಟನ
ಈಸಱಲಿ ಗೆಲಲರಿದೆನುತ್ತಾತಿ
ರೋಷರೌದ್ರಾನನನುರಗಮುಖ
ಪಾಶದಲಿ ಬಂಧಿಸಿದನನಿರುದ್ಧನ ಭುಜದ್ವಯವ ೨

ನಾಗಪಾಶಪರೀತನಾದನು
ಭೋಗಿಭೂಷಣನಂತೆ ಯದುಕುಲ
ಯೋಗನಿಧಿ ಝೊಮ್ಮಿನಲಿ ಜೋಲಿದನಿಳೆಗೆ ವಿಕ್ರಮದ
ಸಾಗರಕೆ ಸೇತುವನು ಕಟ್ಟಿದ
ಲಾಗಿನಲಿ ಕಟ್ಟಿದನು ಸೆಱೆಮನೆ
ಗಾಗಿ ನೂಕಿಸಿ ನಾಕರಿಪು ಮರಳಿದನು ನಿಜಗೃಹಕೆ ೩

ಅತ್ತಲುಷೆ ಸಂತಾಪಶಿಖಿಯಲಿ
ಹೊತ್ತಿದಳು ಹೊರಳಿದಳು ವೀರನ
ಹೊತ್ತಭಂಗದ ಭಾರಣೆಯ ಬಂಧನದ ದುಸ್ಥಿತಿಗೆ
ಎತ್ತಲಾನಕಟಕಟ ಚಲುವಿನ
ಪುತ್ಥಳಿಯೆನೆಸೆವೀ ಕುಮಾರಕ
ನೆತ್ತಲೆತ್ತಣ ಭಂಗವೇಗುವೆನೆನುತ ಬಸವಳಿದು ೪

ಭೂವರನೆ ಕೇಳತ್ತಲಾ ದ್ವಾ
ರಾವತೀಪುರದೊಳಗೆ ವೀರರ
ದೇವನನು ನೆಱೆ ಕಾಣದನಿರುದ್ಧನನು ತವತವಗೆ
ಓವೊ ಕೆಟ್ಟೆವು ಕೆಟ್ಟೆವೆಂತೋ
ಜೀವಿಸುವೆವಿನ್ನಕಟ ತನು ಸಹಿ
ತಾವ ದೇಶದಲಳಿವರೀಪರಿಯೆನುತ ಜನನಿವಹ ೫

ಸತ್ತಡೊಡಲಿಹುದೀಕ್ಷಿಸುವಡತಿ
ಚಿತ್ರವಾಯ್ತೇನಾದನೋ ಸ್ಮರ
ಪುತ್ರ ಚೂಡಾರತ್ನವೆಂದಾ ನಾಲ್ಕು ತಿಂಗಳನು
ಸುತ್ತಿ ಸುಳಿದಱಸುತ್ತ ವಿಹ್ವಲ
ಚಿತ್ತರಾಗುತ್ತಿರಲು ಕಾರಣ
ಮೂರ್ತಿ ಬಿಜಯಂಗೈದನಾ ನಾರದನು ಯದುಪುರಿಗೆ ೬

ಹೇಳಿದನು ಮುನಿನಾಥನಾ ನೆರೆ
ದೋಲಗದ ಮಧ್ಯದಲಿ ಬಾಣನ
ಬಾಲಕಿಯ ಮೇಳವನು ಚಿತ್ರವತೀಪ್ರಭಾವವನು
ಮೇಲುಗಾಳಗವನು ಪರಾಭವ
ದೇಳಿಗೆಯ ಬಂಧನವನಾ ಜನ
ಜಾಲ ಹರುಷಾಮರುಷದೊಳಗೋಲಾಡುತಿಹ ಹದನ ೭

ಜೀವಿಸಿದ್ದುದ ಕೇಳಿ ಹರುಷದ
ಲೋವೊ ತುಳುಕಾಡಿದುದು ಪುರಜನ
ದೇವರಿಪು ಕಟ್ಟಿದನು ಕಾಮಾತ್ಮಜನನೆಂಬೊಂದು
ನೋವಿನಂಕೆಯ ನುಡಿಯ ಕೇಳು
ತ್ತಾ ವಿಗಡ ಯಾದವ ಮಹಾಸುಭ
ಟಾವಳಿಗಳುಲಿದೆದ್ದುದೊಂದೇ ನಿಮಿಷಮಾತ್ರದಲಿ ೮

ನೂಕಿದುದು ಚತುರಂಗ ಬಲ ಬಂ
ದಾಕೆವಾಳರ ಸನ್ನೆಯಲಿ ಜಗ
ದೇಕವೀರರು ಕಾಮ ಸಾತ್ಯಕಿ ಸಾಂಬ ಸಾರಣರು
ಜೋಕೆ ಮಿಗೆ ಕೃತವರ್ಮಮುಖ್ಯಾ
ನೀಕ ಭಟರುರವಣಿಸಿ ಸಂಗ್ರಾ
ಮೈಕಸಾಹಸರೆದ್ದುದಗಣಿತಗಜರಥಂಗಳಲಿ ೯

ಪುರವ ಹೊಱವಂಟಾ ಭಟರು ಹ
ನ್ನೆರಡು ಬಹಳಕ್ಷೋಹಿಣೀಬಲ
ವೆರಸಿ ಸಪ್ತಸಮುದ್ರ ತಮ್ಮೊಳಗೊಂದು ಮುಖವಾಗಿ
ಹರಿದವೊಲು ಕಕ್ಕಡೆಯ ಸಬಳದ
ಪರಿಪರಿಯ ಕೈದುಗಳ ಹೊಗರಂ
ಬರವ ಘಲ್ಲಿಸೆ ಬಹಳ ದುಂದುಭಿ ಶಂಖರವವೆಸೆಯೆ ೧೦

ಗಹಗಹಿಸೆ ನಿಸ್ಸಾಳ ಬಿರುದಿನ
ಕಹಳೆಗಳ ಕಳಕಳದ ಸುಭಟರ
ಬಹಳತರ ಘನಸಿಂಹನಾದದ ಸೂತಮಾಗಧರ
ಬಹುವಿಧಸ್ತುತಿಪಾಠ ಜಯರವ
ರಹಿ ದೆಸೆದೆಸೆಗಳಿಗೆ ಮಂಗಳ
ಮಹಿಮನಸುರಾರಾತಿ ನಡೆದೇಱದನು ನಿಜರಥವ ೧೧

ಎಡಬಲದಲೈತರಲು ಕಲ್ಪದ
ಕಡೆಯ ಕಡಲಂದದಲಿ ಪೊಡವಿಯ
ನಡುಗಿಸುವ ಗಜರಥತುರಗಪದಾತಿ ಸಂಕುಲದ
ಪಡೆ ಸುರಾರಿಯ ಪುರದ ವಳೆಯವ
ನಡಸಿ ಮುತ್ತಿದುದೆಂಟುದಿಕ್ಕಿನ
ಲೊಡನೆ ನೊಳಗಿಸಿದನು ಮಹಾಶಂಖವನು ಮುರವೈರಿ ೧೨

ಮುಱದು ಹೊಕ್ಕುದು ಕೋಟೆಯನು ಬಲ
ವುರವಣಿಸಿ ತೋರಣ ಪತಾಕೋ
ತ್ಕರದ ಪುರವಿಭವವನು ಬಹಳೋದ್ಯಾನಪಂಕ್ತಿಗಳ
ಒರಸಿ ಬಾಣಾಸುರನ ಭಟರನು
ಜಱದು ಮೂಗಿನ ಮೇಲೆ ಸುಣ್ಣವ
ಬಱದು ಬಿಟ್ಟರು ದೂಱ ನಿಮ್ಮೊಡೆಯಂಗೆ ನೀವೆನುತ ೧೩

ಆಳು ಹರಿದುದು ದಾನವೇಶ್ವರ
ನೋಲಗಕೆ ಕೈಮುಗಿದು ಯಾದವ
ಜಾಲವೈತಂದುದನು ಭಂಗವನಾ ಮಹಾಪುರದ
ಹೇಳಿದರು ಸಂಗ್ರಾಮಜಯವಿದು
ಶೂಲಪಾಣಿಗಸಾಧ್ಯವೆನುತಿರೆ
ತೋಳುಗಳ ತನಿ ಜಡಿಯಲೆದ್ದನು ಗದ್ದುಗೆಯನೊದೆದು ೧೪

ಕೇಳಿದೆವೆ ಹರಿಹರ ಮಹಾಹವ
ದೂಳಿಗದ ಮಾತುಗಳನಿದೆಲಾ
ಶೂಲಪಾಣಿಯ ಪರಮಕೃಪೆ ತಪ್ಪುವುದೆ ತನಗಿಂದು
ಬಾಳಿಕೆಗೆ ಫಲವಾಯ್ತು ಲಾ ಹಲ
ಕಾಲದೆನ್ನ ಮನೋರಥದ ಕೈ
ಮೇಳವಣೆ ಲೇಸೆನುತ ಹರುಷವ ತಳೆದನಮರಾರಿ ೧೫

ಮುರಿದು ಹೊಗುವರಿಭಟರ ಕಾಣುತ
ತಱುಬಿ ನಿಂದನು ದೈತ್ಯಬಲ ಹ
ನ್ನೆರಡೆನಿಸಲಕ್ಷೋಹಿಣೀ ಸಂಖ್ಯೆಯಲಿ ಬಲಿಸುತನ
ವರರಥಾಗ್ರದಲೆಸೆಯಲಾಹವ
ಧರಣಿ ಕುಸಿಯಲು ಭೂತಕೋಟಿಗ
ಳುರವಣಿಸಲೈತಂದನಾಹವಕಭವನನುಸರಿಸಿ ೧೬

ಹಲ್ಲಣಿಸಿದನು ನಂದಿಯನು ಹರ
ನಲ್ಲಿಗಲ್ಲಿಗೆ ಪ್ರಮಥಗಣ ಮನ
ಭುಲ್ಲವಿಸದೇಱದರು ವಾಹನಗಳನು ತವತವಗೆ
ತಲ್ಲಣಿಸಲೆಡಬಲದಲಪ್ರತಿ
ಮಲ್ಲ ಗುಹಗಣಪತಿಗಳೇಱದ
ರುಲ್ಲಸಿತ ಮೂಷಕ ಮಯೂರಂಗಳನು ಸಂಗರಕೆ ೧೭

ಹಳಚಿದುದು ತಮ್ಮೊಳಗೆ ಬಲವೆರ
ಡಳವಿಯಲಿ ಬಹಳಾಸ್ತ್ರಶಸ್ತ್ರದ
ಮಳೆಗಱೆದುದಿತ್ತಂಡದಲಿ ಕರಿತುರಗರಥನರರ
ಕಲಿತನವನದನೇನನೆಂಬೆನು
ಬಲು ಸರಳಸಾರದಲಿ ವೈಯ್ಯ
ಕ್ಕುಳಿಸಿತುಕ್ಕಿದುದರುಣಜಲ ಧಾರೆಯಲಿ ನೆಲ ನೆನೆಯೆ ೧೮

ಹಿಡಿದನಸ್ತ್ರವನಾ ಮುರಾಂತಕ
ನೊಡನೆ ಹರನಾ ರುಕ್ಮಿಣೀಸುತ
ನೊಡನೆ ಗುಹನಾ ಬಾಣಮಂತ್ರಿಗಳೊಡನೆ ಬಲರಾಮ
ತುಡುಕಿದನು ಬಾಣನ ಕುಮಾರಕ
ನೊಡನೆ ಸಾಂಬನು ಬಳಿಕ ಸಾತ್ಯಕಿ
ಜಡಿದು ಹಳಚಿದನಾರ್ದು ಬಾಣಾಸುರನೊಡನೆ ಮುಳಿದು ೧೯

ಆ ಸಮಯದೊಳು ಸುರವಿಮಾನದ
ಬೀಸಿಗೆಯ ಮಯವಾಯ್ತು ಗಗನ ಮ
ಹಾಸುರದ ಸಂಗ್ರಾಮವನು ನೋಳ್ಪರ್ಥಿಯಲಿ ನೆರೆದು
ಆ ಸಕಲ ಮುನಿವರರು ಸಹಿತಬು
ಜಾಸನನು ನೋಡುತ್ತ ನಭದಲಿ
ಲೇಸೆನುತ ಹೊಗಳುತ್ತಲಿರ್ದನು ಸಮರಸಂಭ್ರಮವ ೨೦

ಸಿದ್ಧ ಚಾರಣ ಕಿಂಪುರುಷ ವಿ
ದ್ಯಾಧರ ಗಂಧರ್ವಾಪ್ಸರೋಗಣ
ವುದ್ದ ದಿಂದೀಕ್ಷಿಸುತ ಜಯಜಯತು ಜಯಯೆನುತ
ಶ್ರದ್ಧೆಯಲಿ ಹರಿಹರರ ಲೀಲಾ
ಯುದ್ಧವನು ನೋಡುತ್ತ ವಿಸ್ಮಯ
ಬುದ್ಧಿಯಲಿ ಹೊಗಳುತ್ತಲಿರ್ದುದು ಭಾಪೆನುತ ನೆರೆದು ೨೧

ನೂಕಿದವು ಭೇತಾಳ ಭೂತಾ
ನೀಕ ಮಾತೃ ಪಿಶಾಚ ಶಾಕಿನಿ
ಡಾಕಿನಿಯರಾ ಬ್ರಹ್ಮರಾಕ್ಷಸರಾ ಪ್ರಮಥನಿಕರ
ಏಕಮುಖ ಬಹುಮುಖ ವಿಚಿತ್ರಗು
ಣಾಕೃತಿಯಪಸ್ಮಾರನಿಕರವ
ನೇಕಮುಖದಲಿ ಮೋಹರಿಸಿ ಮುರಹರನ ಸಮ್ಮುಖಕೆ ೨೨

ಹೊಲ್ಲೆಹೇನೆನುತನಿತು ಪಡೆಯನು
ಚಲ್ಲಲೆಚ್ಚ ವಿಜೃಂಭಣಾಸ್ತ್ರದಿ
ಬಿಲ್ಲ ಬೀಸಾಡಿಸಿದನಸುರಾರಾತಿ ಪಟುಭಟರ
ಎಲ್ಲಿಯದು ನಮಗೀ ನಿರೋಧವ
ನೊಲ್ಲೆವೆನುತೋಡಿದರು ಪ್ರಮಥರು
ತಲ್ಲಣಿಸಿ ದೆಸೆದೆಸೆಗೆ ಹಾಯ್ದುದು ಸಕಲ ಭೂತಗಣ ೧೩

ಆಯಿತಾಯಿತು ಕೃಷ್ಣ ಭೂತಪ
ಲಾಯನದ ವಿದ್ಯವಿದು ಸಂಗರ
ದಾಯತಿಕೆಯೇ ಸಮರಸಾಹಸವುಳ್ಳಡೆನ್ನೊಡನೆ
ಸಾಯಕವ ಹಿಡಿ ನಿಲ್ಲೆನುತ ಪೂ
ರಾಯಕೋಪದಲಭವನಾಕ
ರ್ಣಾಯತಾಸ್ತ್ರದಲಳವಿಗೊಟ್ಟನು ಮುಂದೆ ಮುರಹರನ ೧೪

ಎಚ್ಚನುರು ಮಂತ್ರಾಸ್ತ್ರನಿಕರದ
ಲಚ್ಯುತನನಹಿಭೂಷಣನು ಹರಿ
ಮೆಚ್ಚಿಸಿದನಾತನನು ಪ್ರತ್ಯಸ್ತ್ರದಲಿ ಪರಿಹರಿಸಿ
ಹೆಚ್ಚಿದುದು ಹರನೊಡಲ ನುರುಪದ
ಕಿಚ್ಚು ಫಡಫಡಫಡಯೆನುತ ತೆಗೆ
ದೆಚ್ಚನಾ ನಿಜವೆನಿಪ ಪಾಶುಪತಾಸ್ತ್ರದಲಿ ಹರಿಯ ೧೫

ಉರಿದುದೋ ಜಗವೆನುತ ಸುರರಂ
ಬರವ ಬಿಸುಟೋಡಿದರು ಹರಹರ
ಹರಶರಾನಲ ತೀವ್ರಧೂಮಜ್ವಾಲೆಗಳ ಝಳದ
ಹೊರಳಿಯಲಿ ಹೊಡಕರಿಸಿ ಹಾಯೆಂ
ದೊಱಲಿದುದು ಬಲವೆರಡು ಭಟರ
ಬ್ಬರಿಸಿದುದು ಕಳವಳಿಸುತಿರ್ದುದು ಕೂಡೆ ತಳತಂತ್ರ ೧೬

ಹಾಯೆನುತ ಬಲ ಬೆದಱೆ ಬಹ ಹರ
ಸಾಯಕವ ಮುರವೈರಿ ನಿಜ ನಾ
ರಾಯಣಾಸ್ತ್ರವ ನೆನೆಸು ಮನದಲಿ ಮನ್ನಿಸುತ್ತೆಸಲು
ಬೀಯವಾದುದು ಪಾಶುಪತಶರ
ದಾಯತಿಕೆಯೈಸಱಲಿ ಯಾದವ
ರಾಯನೆಚ್ಚನು ಮೋಹಿಸಲು ಸಮ್ಮೋಹನಾಸ್ತ್ರವನು ೧೭

ನಿದ್ರೆಗೈದನು ಸಮರಮುಖದಲಿ
ರುದ್ರನತ್ತಲು ಬಾಣಸೈನ್ಯಸ
ಮುದ್ರವನು ಮುರವೈರಿ ಶರಮುಖವಾಡಬಾಗ್ನಿಯಲಿ
ಮುದ್ರಿಸಿದನಾ ರಥತುರಂಗಮ
ಭದ್ರಗಜಘಟೆನಿಕರವನು ಮುಹಿ
ತಾದ್ರಿಧರನೊಂದೇ ಮುಹೂರ್ತದಲರಸ ಕೇಳೆಂದ ೧೮

ಕೆರಳಿದನು ಶಂಕಗವಿರೋಧಿಯ
ಶರಹತಿಗೆ ಗುಹನಂಗದಲಿ ನೆ
ತ್ತರನು ಕಾಱುತ ಕಾಳಗದಲೊಂದೆಸೆಗೆ ಹಲಧರನ
ಪರನು ಮುಸಲ ಮಹಾಪ್ರಹಾರದ
ಲುರುಳಿದರು ಮೇದಿನಿಗೆ ಜೀವವ
ಪರಿಹರಿಸಿ ಕುಂಭಾಂಡ ನಿರುಪಮಕೂಪಕರ್ಣಕರು ೧೯

ಕಟ್ಟಿಯೊಡೆದಂತಾಯ್ತು ಬಲಿ ಜಗ
ಜಟ್ಟಿ ಮಂತ್ರಿಗಳಳಿವಿನಲಿ ಕಂ
ಗೆಟ್ಟು ದೆಸೆದೆಸೆಗೋಡಿದುದು ಕರಿತುರಗಪತ್ತಿಗಳು
ಥಟ್ಟುಗೆಡೆದವು ಧರೆಗೆ ಕಾಲನ
ನಟ್ಟಿ ನೀಗಿತು ಬಳಿಕ ಬಾಣನ
ಮುಟ್ಟಿಬಂದುದು ಸಮರ ಸನ್ನಾಹವನು ಮಾಡಿಸಿದ ೨೦

ಕೊಂಡನವನೈನೂಱು ನಿಜ ದೋ
ರ್ದಂಡವಲಿ ಕೋದಂಡವನು ಕೈ
ಕೊಂಡನೈನೂಱಱಲಿ ದಿವ್ಯಾಸ್ತ್ರಸಂತತಿಯ
ದಂಡಧರನಂತುರವಣಿಸಿ ಕಿಡಿ
ಗೆಂಡವನು ಕಂಗಳಲಿ ಕೆದಱುತ
ಗಂಡುಗಲಿಗಳ ದೇವನಿದಿರಾದನು ಮಹಾಹವಕೆ ೨೧

ನಿಲ್ಲು ನಿಲ್ಲೆಲೆ ಕೃಷ್ಣ ಗೋಪರ
ಬಲ್ಲಹನೆ ಸಮರಾಂಗವಿದ್ಯೆಯ
ಬಲ್ಲಡೆನಗಿದಿರಾಗು ಕಲಿತನವುಳ್ಳಡೆನ್ನೊಡನೆ
ಬಿಲ್ಲ ಹಿಡಿ ಹಿಡಿ ಮಾತಿಗವಸರ
ವಿಲ್ಲೆನುತ ಕಱೆದನು ಶರೌಘವ
ನೆಲ್ಲಿ ನಭ ಧರೆಯೆಲ್ಲಿ ದೆಸೆಗಳೆನಲ್ಕೆ ಕಡುಮುಳಿದು ೨೨

ಆರು ನಿಲಬಹುದರಸ ಬಾಣನ
ಬಾರಿಯಲಿ ಬಾಣಾವಳಿಯ ಮುಂ
ಗಾರ ಮಳೆಗಱೆಯಿತ್ತು ಕೃಷ್ಣಾಚಲದ ಸಮ್ಮುಖಕೆ
ಭೂರಿಭುಜಮಂಡಲ ಸಮೀರ
ಪ್ರೇರಿತಾಖಿಳ ಚಾಪಮೇಘ ಕ
ಠೋರರವನಿರ್ಘಾತ ನಿಷ್ಠುರನಿನದ ರಂಜಿಸಲು ೨೩

ಬಾಣಬಾಣಾವಳಿಯನನಿತುವ
ಬಾಣದಿಂದವೆ ತಱೆದನಾ ಗೀ
ರ್ವಾಣಮೂರುತಿ ಕಡಿ ಕಡಿದು ಬಳಲಿದನು ಬೇಸಱದೆ
ಕ್ಷೋಣಿ ಶರಖಂಡಮಯ ಗೀ
ರ್ವಾಣ ಜಯರವ ಪಿಂಡಮಯವೆನೆ
ಲಾಣೆಯಿಟ್ಟಂತಿರ್ದುದುಳಿದ ಭಟಾವಳಿಗೆ ಸಮರ ೨೪

ಮುಱಿಯಲೆಚ್ಚನು ಖಳನ ರಥವನು
ತುರಗನಿಕರಂಗಳನು ಕಾಲನ
ಪುರಕೆ ಕಳುಹಿದನಿಕ್ಕಿದನು ಸಾರಥಿಯನಂಬಿನಲಿ
ಸುರವಿರೋಧಿಯ ಕರದ ಚಾಪೋ
ತ್ಕರವನೆಡಬಲವಂಕದವರನು
ಹೊರಳೆಗಡಿದಸುರಾರಿ ಶಂಖೋತ್ತಮವ ಮೊಳಗಿಸಿದ ೩೫

ಪರಿಭವವನೀಕ್ಷಿಸುತ ಘನಸಂ
ಗರಕೆ ಬಂದುದು ಬಳಿಕ ಮಾಹೇ
ಶ್ವರ ಮಹಾಜ್ವರ ಬೆದಱಿಸುತ ಯಾದವ ಮಹಾಬಲವ
ಉರಿವ ಕಂಗಳಮೂಱು ಮೊಗೆದುದು
ಗರಿಪ ಧೂಮಜ್ವಾಲೆಗಳ ಭೀ
ಕರತ್ರಯದೆಸೆವ ಪಾದತ್ರಯದ ಭರ ಮಿಗಿಲು ೩೬

ಕುಧರ ಬಿರಿಯಲು ಜಱೆದು ಭಸ್ಮಾ
ಯುಧನು ತಾಗಿದನಾರ್ದು ಮುಸಲಾ
ಯುಧನನಿದಿರಲಿ ಕವಿವ ಮೋಹರದೊಳಗೆ ಭಸ್ಮವನು
ವಿಧೃತವನು ಮಾಡಿದನು ಸಮರಕೆ
ಕದವ ತೆಱೆದಂತಾಯ್ತು ತಳದವ
ನಧಿಕ ತಾಪವನೈದೆ ಮೂರ್ಛಿತವಾಯ್ತು ಯದುಸೇನೆ ೩೭

ತುಡುಕಿ ಮುಸಲವನಾ ಹಲಾಯುಧ
ಹೊಡೆಯಲದ ಸೈರಿಸುತ ಘಾಯದ
ಲೊಡಲು ಕಂಪಿಸಿ ತರಹರಿಸಿ ಮಾಹೇಶ್ವರನು ತಿರುಗಿ
ಎಡದ ಕೈಯಲಿ ಭಸ್ಮವನು ತೆಗೆ
ದಿಡಲು ಪರವಶವಾಯ್ತು ಹಲಧರ
ನೊಡಲು ಕರೆವನು ಕೃಷ್ಣನನು ಕಳವಳಿಸಿ ಮೂರ್ಛೆಯಲಿ ೩೮

ಏನಿದೇನಾಯ್ತೆನುತ ಹಲಧರ
ನಾನನವನೀಕ್ಷಿಸುತ ಶಿರವನು
ದಾನವಾಂತಕನಪ್ಪಿದನು ತೆಗೆದುದು ಮಹಾ ಜ್ವರದ
ಗ್ಲಾನಿಯದು ಬಳಿಕಿಬ್ಬರಿದಿರಲಿ
ತಾನೆ ನಿಂದನು ಮಧ್ಯದಲಿ ಕರು
ಣಾನಿಧಾನನು ಜಱೆದು ಮಾಹೇಶ್ವರ ಮಹಾಜ್ವರವ ೩೯

ಇರಲೆರಡು ಮುಷ್ಟಿಗಳಲಾ ಮುರ
ಹರನ ಪೀನಾಂಸವನು ಮತ್ತೊಂ
ದಱಲಿ ವಕ್ಷಸ್ಥಲವನೆಱಗಿದನಳುಕೆನೆಂದೆನುತ
ಮುಱಿದು ತಿಂಬೆನು ತಾನೆನುತ ಬಾ
ಯ್ದೆಱೆದು ಕಚ್ಚಿದನಸುರವೈರಿಯ
ಮಿಱುಪ ಭುಜವನು ಕಾಡುತಿರ್ದನು ಕಮಲಲೋಚನನ ೪೦

ಕೆರಳಿ ಖಳನಬ್ಬರಿಸಿ ಕೊಲುವೆನು
ಕರುಳ ಮೆಲುವೆನೆನುತ್ತ ಮುಷ್ಟಿಗ
ಳೆರಡಱಲಿ ಭಸ್ಮವನು ಮೊಗೆದಿಟ್ಟನು ಮುರಾಂತಕನ
ಉರವನುದ್ವರ್ತಿಸುತ ಬಿದ್ದುದು
ಸುರಗಿರಿಯ ಶೃಂಗಾಗ್ರದಲಿ ಮುಱಿ
ದುರುಳಿದುದು ತದ್ಭಸ್ಮಶೇಷವಶೇಷ ಜನ ಬೆದಱೆ ೪೧

ಎತ್ತಿದುದು ಘನತಾಪವಡಿಗಡಿ
ಗುತ್ತಮೋತ್ತಮನೊಡಲೊಳಗೆ ದೃಢ
ಚಿತ್ತದಲಿ ಮುರವೈರಿ ನೋಡಿದನಱಿತನಾ ಹದನ
ತತ್ವನಿಧಿ ಪರಿಹರಿಸಿದನು ತಲೆ
ಯೊತ್ತಿದನು ಬಳಿಕಾ ದುರಾತ್ಮನ
ನತ್ಯಧಿಕಭಂಗದಲಿ ತಾನೇ ಹೊಕ್ಕನೊಡಲೊಳಗೆ ೪೨

ಎರಡು ಘಳಿಗೆ ಮುಕುಂದನಿರ್ದನು
ಶಿರದ ವೇದನೆಗಳಲಿ ಮುಗುಳದ
ನಱಿದು ನಿಜವಿಜ್ಞಾನನಿಧಿ ಜಱೆದನು ಮಹಾಜ್ವರದ
ಉರವಣೆಯ ನಿಲಿಸುವೆನೆನುತ ಹರಿ
ಕೆರಳಿ ಸಮರಾಂಗದಲಿ ಮಾಹೇ
ಶ್ವರಕೆ ವೈಷ್ಣವವೆನಿಪ ತೀವ್ರಜ್ವರವ ನಿರ್ಮಿಸಿದ ೪೩

ಅಟ್ಟಿ ಹಿಡಿದುದು ವೈಷ್ಣವಜ್ವರ
ಮುಟ್ಟಿ ಮಾಹೇಶ್ವರವನವನಿಗೆ
ಮೆಟ್ಟಿ ಕೆಡಹಿ ಚತುಷ್ಪದಾನನ ಬಾಹುಗಳಲಡಸಿ
ಘಟ್ಟಿಸುತ ಘನತಾಪ ಶಿಖಿಯಲಿ
ಸುಟ್ಟಡಿರಲಾಱದೆ ರಣದಲಿ ದಿ
ಮ್ಮಿಟ್ಟೊಲಚ್ಯುತನಂಘ್ರಿಕಮಲದ ಮೇಲೆ ಸೈಗೆಡೆದು ೪೪

ದೇವ ರಕ್ಷಿಸು ರಕ್ಷಿಸವನತ
ದೇವ ಚೂಡಾಮಣಿಯೆ ರಕ್ಷಿಸು
ದೇವ ದೇವಾರಾಧ್ಯ ದೇವಪ್ರಿಯ ಮಹಾದೇವ
ದೇವ ನಿನ್ನಯ ಮಹಿಮೆಯನು ತಾ
ನಾವನಱಿವಡೆ ದಿವ್ಯ ಚೇತೋ
ಭಾವದೂರನೆ ವರವಿಹಾರನೆ ಭಕ್ತಭಯಹರನೆ ೪೫

ಎಂದು ನಿಜಚರಣಾರವಿಂದ
ದ್ವಂದ್ವದಲಿ ವೈಯಿಕ್ಕಿ ಬಹುವಿಧ
ದಿಂದ ಸಂಸ್ತುತಿಮಾಡಲಸುರಾರಾತಿ ತಲೆದಡವಿ
ಮಂದಹಾಸದಲೆಲವೊ ನಮ್ಮಾ
ದ್ವಂದ್ವಯುದ್ಧವನೀ ಸ್ತುತಿಯನೊಲ
ವಿಂದ ಕೀರ್ತಿಸುವವರನೀಕ್ಷಿಸದಿಹುದು ನೀನೆಂದ ೪೬

ಅಭಯವನು ಕರುಣಿಸಿದನಾ ಕೌ
ಸ್ತುಭಧರನು ಬೀಳ್ಕೊಡಲು ಹಾಯ್ದು
ದಭವನಂಘ್ರಿಯ ಸನ್ನಿಧಿಗೆ ಶೈವಜ್ವರಾಖ್ಯವದು
ಕ್ಷುಭಿತನಾದನು ಬಾಣ ನಳಿನ
ಪ್ರಭುವಿನೊಡನಾಹವಕೆ ಸುರದುಂ
ದುಭಿಜಯಧ್ವನಿ ಪುಷ್ಪವೃಷ್ಟಿಗಳಚ್ಯುತನ ಮೇಲೆ ೪೭

ಚಂಡವಿಕ್ರಮನಾರ್ದು ನಿಜದೋ
ರ್ದಂಡನಿಕರವನೊದಱಿಸುತ ಕೈ
ಕೊಂಡು ಸುರಿದನು ಸರಳನವನಿಯನಂಬರವ ಮುಸುಕಿ
ಪುಂಡರೀಕಾಕ್ಷನನು ತೋಳನ
ಹಿಂಡಿನಂತಿರಲನಿತುವನು ಕಡಿ
ಖಂಡವಾಗಲು ಕಡಿದು ಬಿಸುಟನು ಕೃಷ್ಣನಭ್ರದಲಿ ೪೮

ಮಾಣದೆಸುತಿರಲಮುಮ ಬಾಣನ
ಬಾಣಸಾಗರವನು ವಿಭಾಡಿಸಿ
ಕಾಣನವಸಾನವನು ಕಂಗನೆ ಕನಲಿ ಚಕ್ರವನು
ಕ್ಷೋಣಿತಳ ತಲ್ಲಣಿಸಲಮರ
ಶ್ರೇಣಿ ಬೆದಱಲು ತುಡುಕಿ ಬಾಹು
ಶ್ರೇಣಿಯನು ತಡೆಗಡಿವುದೆನುತಸುರಾರಿ ನೇಮಿಸಿದ ೪೯

ಮುರಮಥನನಾಜ್ಞಾಪಿಸಲು ಹುಲು
ಮೊರಡಿಗುರಿ ಕವಿವಂತೆ ಬಾಣಾ
ಸುರನೊಡಲನಮುರಿದುದು ಬಾಹುಸಹಸ್ರಸಂಕುಲವ
ಸುರರು ನಭದಲಿ ಜಯತು ಜಯಜಯ
ಪರಮಪುರುಷ ಎನುತ್ತ ಹೂಮಳೆ
ಗಱೆದು ಕೈವಾರಿಸಲು ಕೈಕೊಂಡುದು ಮಹಾಚಕ್ರ ೫೦

ಅಡವಿಯಲಿ ಮಿಗೆ ಬೆಳೆದ ಹೆಮ್ಮರ
ನಿಡಿದ ಹೆಗ್ಗೊಂಬುಗಳನಲಸದೆ
ಕಡಿವವೊಲು ಕಡಿದೊಟ್ಟದುದು ಕೊಬ್ಬಿದ ಮಹಾಸುರನ
ಜಡಿವ ಸಾವಿರ ತೋಳ್ಗಳನು ಧರೆ
ವಿಡಿದು ಜೀರ್ಕೊಳವಿಗಳ ಯಂತ್ರವ
ಬಿಡದೆ ಬೀಸಿದವೋಲು ನೆತ್ತರು ಸೂಸೆ ದೆಸೆದೆಸೆಗೆ ೫೧

ಕಂಡನದನಾ ತ್ರಿಪುರಹರನು
ದ್ದಂಡಚಕ್ರದ ಕೋಪವನು ಕೈ
ಕೊಂಡು ಕಾರುಣ್ಯವನು ನಿಜಪದಭಕ್ತಸಂಗದಲಿ
ಅಂಡಲೆದನಚ್ಯುತನನಾ ದು
ರ್ದಂಡದಪರಾಧಕ್ಕೆ ಕೇಳೆಲೆ
ಪುಂಡರೀಕದಳಾಕ್ಷ ತನ್ನಯ ಬಿನ್ನಪವನೆಂದ ೫೨

ಲೋಕವಿದು ನಿನ್ನೊಡಲು ನೀನೇ
ಲೋಕಚೇತನಸಾಕ್ಷಿ ಚೈತ
ನ್ಯೈಕವಿಗ್ರಹನಪ್ರತರ್ಕ್ಯನಗಮ್ಯನಿಂದ್ರಿಯಕೆ
ಲೋಕಧರ್ಮ ನಿರೀಕ್ಷೆಯಲಿ ವಿಹಿ
ತಾಕೃತಿಯ ವಿಶ್ವೇಶ ವಿಶ್ವಜ
ನೈಕವಂದ್ಯನೆ ವಿಶ್ವಮೂರ್ತಿಯೆ ಕರುಣಿಸುವುದೆಂದ ೫೩

ಅಱಿವು ಹೊಗದಱಿವಾಗಿ ಮಱವೆಗೆ
ತೆಱಹುಗೊಡದಾನೆಂಬ ಹಮ್ಮಿನ
ಹೊಱಗೆಯಲಿ ಕಱಹಾಗಿ ಕರುಣಾತೀತನೆಂದೆನಿಸಿ
ಮೆಱೆವ ಸಚ್ಚಿತ್ಸುಖಮಯಾತ್ಮನ
ನಱಿವರಾರೆಲೆ ಕೃಷ್ಣ ನಿನ್ನಯ
ನಿಱುಗೆಯನು ನೀನೊಲಿದಡೀವುದು ಲೋಕವಿದನೆಂದ ೫೪

ಗುಣವಿಹಿತವಿಗ್ರಹನೆ ಗುಣಕಾ
ರಣವಿಹಾರನೆ ಗುಣವಿಹೀನನೆ
ಗುಣಮಯ ಪ್ರಾಪಂಚಿಕ ಪ್ರತಿಭಾಸಿತಾತ್ಮಕನೆ
ಗುಣನಿಧಿಯೆ ಮಾಯಾಗುಣಾಕೃತಿ
ಗುಣವಿಹಿತ ಮೂರ್ತಿತ್ರಯನೆ ತ
ದ್ಗುಣನಿಕರಸಾಕ್ಷಿಯೆ ಗುಣಾಧಾರಕನೆ ನಮೋ ಎಂದ ೫೫

ಭಕ್ತಜನವತ್ಸಲನೆ ತನ್ನಯ
ಭಕ್ತನೀತನು ಗುಣವಿಭೇದವೆ
ಭಕ್ತಕರುಣಾನಿಧಿಯೆ ಸಲಹೈ ನಿನ್ನ ನಿಜಪದದ
ಭಕ್ತ ನಾನದಱಿಂದ ತನ್ನೀ
ಭಕ್ತನನು ಕೈಗಾವುದಾಶ್ರಿತ
ಭಕ್ತಭಕ್ತನನೆಂದು ಭಕ್ತಾಧೀನನರ್ಥಿಸಿದ ೫೬

ಎನ್ನ ಭಕ್ತರೆನುತ್ತ ನಿನ್ನನು
ಮನ್ನಿಸದೆ ಮೌಢ್ಯದಲಿ ಮರ್ತ್ಯರು
ಭಿನ್ನಭಾವವ ಮಾಡಿ ವಿಫಲೋದ್ಯೋಗರತರೆನಿಸಿ
ಸನ್ನುತಾಂಘ್ರಿಯೆ ಕೆಡೆವರಾ ನರ
ಕಾರ್ಣವದಲಕಟಕಟ ನಮ್ಮೊಂ
ದುನ್ನತಾಭಿಪ್ರಾಯದಂಕೆಯನಱಿವರಾರೆಂದ ೫೭

ನೀನೆ ಕೃಪೆಯನು ಮಾಳ್ಪುದಾ ಅ
ಜ್ಞಾನ ಮೂಢಾತ್ಮರಲಿ ಬುದ್ಧಿವಿ
ಹೀನರಲಿ ದೀನರಲಿ ವಿಷಯಾಧೀನವೃತ್ತರಲಿ
ಜ್ಞಾನಮಯವಿಗ್ರಹನೆ ಬೇಡುವೆ
ನಾನಿದನು ಬಲಿಸುತನ ಜೀವಕೆ
ಹಾನಿಯನು ತರಲಾಗದೆಂದನು ಬಾಲಶಶಿಮೌಳಿ ೫೮

ಇತ್ತೆ ನಾನಭಯವನು ತನ್ನಯ
ಭಕ್ತನೆಂದೀತಂಗೆ ನೀನಾ
ದೈತ್ಯರಾಜಂಗಿತ್ತವೊಲು ಪ್ರಹ್ಲಾದದೇವಂಗೆ
ಇತ್ತು ಕರುಣಿಸಬೇಹುದಭಯವ
ನುತ್ತಮನೆ ಬಾಣಂಗೆನಲು ಕೈ
ಯೆತ್ತಿ ಕರುಣಾವನಧಿ ಕೊಟ್ಟನು ಚಿಂತೆ ಬೇಡೆಂದ ೫೯

ದ್ವಿಭುಜನಾಗಲಿ ಬಾಣನೆಂದಾ
ಪ್ರಭುವಿನಲಿ ಪಡೆದಭವನಾತಂ
ಗಭಯವನು ಕೈಕೊಂಡನಂತರ್ಧಾನವನು ಬಳಿಕ
ತ್ರಿಭುವನೇಶ್ವರನಂಘ್ರಿಯನು ವರ
ವಿಭವದಲಿ ಪೂಜಸಿ ಬಲೀಂದ್ರ
ಪ್ರಭವನಿತ್ತನು ಪಾರಿಬರುಹವನಾತ್ಮಸಂಭವಗೆ ೬೦

ಕೊಟ್ಟನಗಣಿತಗಜಸಹಸ್ರವ
ನಿಷ್ಟ ಮಣಿರಥತುರಗವನು ಮನೆ
ಮುಟ್ಟುಗಳ ನವರತ್ನನಿಕರ ಮಹಾರಥಾಗ್ರದಲಿ
ತುಷ್ಟಿವಡಿಸಿದನಿಬ್ಬರನು ಮುಂ
ದಿಟ್ಟುಕೊಂಡಾ ದನುಜವಂಶಘ
ರಟ್ಟನನು ಕಾಣಿಸಿದನಾ ದೈತ್ಯೇಂದ್ರನೊಲವಿನಲಿ ೬೧

ಅಸಮಕಾರುಣ್ಯದಲಿ ಬಾಣನ
ನಸುರರಿಪು ಬೀಳ್ಕೊಟ್ಟು ಮೊಮ್ಮನ
ನುಷೆಸಹಿತ ಸಂತೋಷದಿಂದೊಡಗೊಂಡು ರಥದೊಳಗೆ
ವಿಷಗಳನನಹುನಿದೆಸೆ ಸೇನಾ
ವಿಸರ ಸಹಿತೈತಂದು ಹೊಕ್ಕನು
ದೆಸೆಗೆಸೆವ ಬಹುವಾದ್ಯರವದಲಿ ದ್ವಾರಕಾಪುರವ ೬೨

ಹೊಳೆವ ನವತೋರಣ ಪತಾಕಾ
ವಳಿಯ ಗುಡಿಗಳ ಕಳಸ ಕನ್ನಡಿ
ಗಳ ಮಹಾರ್ಹಮಣಿ ಪ್ರದೀಪಾವಳಿಯ ತಳಿಗೆಗಳ
ಲಲನೆಯರ ವರ ಸೂತಮಾಗಧ
ಕುಲದ ಕಳಕಳವೆಸೆಯೆ ಕರುಣಾ
ಜಲಧಿ ಸುಮುಹೂರ್ತದಲಿ ಹೊಕ್ಕನು ರಾಜಮಂದಿರವ ೬೩

ಅರಸ ಕೇಳಿದನಾವನುದಯದ
ಲುರುತರ ಶ್ರದ್ಧೆಯಲಿ ಹರಿ ಶಂ
ಕರರ ಲೀಲಾಯುದ್ಧವನು ಮುರವೈರಿ ವಿಜಯವನು
ಬರೆವನಾತಂಗಹುದು ಸಮರ
ಸ್ಥಿರ ವಿಜಯವಾರೋಗ್ಯಸೌಖ್ಯೋ
ತ್ಕರದ ಸಿದ್ಧಿಯನೀವನಾ ನಿತ್ಯಾತ್ಮನೊಲವಿನಲಿ ೬೪

ಎಂಭತ್ತೊಂಭತ್ತನೆಯ ಸಂಧಿ ಮುಗಿಯಿತು.

# ತೊಂಭತ್ತನೆಯ ಸಂಧಿ

ಸೇವಕಪ್ರಿಯನೆಂಬ ಬಿರುದನು
ದೇವದೇವನು ಮೆಱೆಯಲಾ ಶ್ರುತ
ದೇವ ಮೈಥಿಲರೆಡೆಗೆ ಬಿಜಯಂಗೈದನೊಲವಿನಲಿ

ಅರಸ ಕೇಳ್ಳೈ ಮಿಥಿಲಪುರದಲಿ
ಮುರಹರಪ್ರಿಯ ಭಕ್ತನೊಬ್ಬನು
ಧರಣಿಯಮರೋತ್ತಮನು ಧಾರ್ಮಿಕನಾತ್ಮರತನೆನಿಸಿ
ವಿರತನಿಹಪರಲೋಕವಿಷಯದ
ಲುರು ಗುಣಾನ್ವಿತನವನಿಪಾವನ
ಚರಿತನಾ ಶ್ರುತದೇವನೆನಲಿಂತೆಸೆದನವನಿಯಲಿ ೧

ಎಸೆದನದಱೊಳು ಭೂಪನೊಬ್ಬನು
ವಸುಧೆಯಮರನವೋಲು ಹರಿಪದ
ವಿಸರುಹೈಕಪರಾಯಣನು ಸುಬಲಾಶ್ವನೆಂಬುವನು
ಹೆಸರಿಸಿದ ಮೈಥಿಲ ನೃಪಾಲರ
ನೊಸಲತಿಲಕದವೋಲು ಮಿಗೆ ರಂ
ಜಿಸುತ ಸುತಗೃಹದಾರನಿಸ್ಪೃಹನಾಗಿ ಕೇಳೆಂದ ೨

ಒಂದು ದಿನ ನಿಜರಥವನೇಱಿ ಮು
ಕುಂದನಾ ನಿಜಚರಣಕಮಲ
ದ್ವಂದ್ವದಾಸರ ದರುಶನಕೆ ಮನವೊಲಿದು ಕರುಣದಲಿ
ಕಂದಿ ಕಱುವನು ನೆನೆದು ಹರಿವೆಳ
ಗಂದಿ ಹಸುವಿನವೋಲು ವರಮುನಿ
ವೃಂದಸಹಿತ ಸರಾಗದಲಿ ನಿಜಪುರವ ಹೊಱವಂಟ ೩

ಅತ್ರಿ ನಾರದ ವಾಮದೇವ ಭೃ
ಗೋತ್ತಮಾಸಿತ ಕೃಷ್ಣ ಗೌತಮ
ಮಿತ್ರೆಯಾತ್ಮಜ ವರಭರದ್ವಾಜ ಕ್ರತುವ್ರತರು
ಅತ್ರಿತನಯ ವಶಿಷ್ಠ ವಿಶ್ವಾ
ಮಿತ್ರ ಕಾಶ್ಯಪ ಕಣ್ವಸೂನು ಪು
ಲಸ್ತ್ಯ ಪುಲಹಾರುಣಿ ಬೃಹಸ್ಪತಿ ವರಪರಾಶರರು ೪

ಬರಲು ವಿಪ್ರೋತ್ತಮರು ತಾಪಸ
ವರರು ಭಜಿಸುತ ದಿವ್ಯ ಚರಣಾಂ
ಬುರುಹವನು ಬಹುದೇಶ ದೇಶಾಗತ ಮುನಿಸ್ತೋಮ
ಪರಮ ಮಂಗಳಮೂರ್ತಿ ಭವಭಯ
ಹರಣ ಪಾವನಕೀರ್ತಿ ನಡೆದನು
ಕರುಣಿಗಳ ದಾತಾರನಾ ಮಿಥಿಲಾಪುರಾಂತಿಕಕೆ ೫

ನೆರೆ ನೆರೆದು ಮುಮ್ಮಾರ್ಗ ಮಾರ್ಗಾಂ
ತರಗಳೊಳಗಾನರ್ತ ಸೈಂಧವ
ಕುರು ಸಮಾಹ್ವಯ ಮತ್ಸ್ಯ ಪಾಂಚಾಲಾದಿ ಭೂಮಿಪರು
ನೆರೆದು ಕೈಕಯ ಕುಂತಿ ಮಧುಭೋ
ಜರು ಸಕೌಸಲನೃಪರು ದಾಶಾ
ರ್ಣರು ಸಭಾಜಿಸುತಿರ್ದರಾ ಗೋವಿಂದನಂಘ್ರಿಗಳ ೬

ಅಲ್ಲಿಗಲ್ಲಿಗೆ ಪೌರಪರಿಜನ
ರೆಲ್ಲರಂಘ್ರಿ ಸಪರ್ಯೆಯಲಿ ಸಿರಿ
ವಲ್ಲಭನ ಪದಕಮಲವನು ಪೂಜಿಸುತ ಭಕುತಿಯಲಿ
ಪಲ್ಲವಾಂಕುರ ದಧಿ ಘೃತಾಂಬು
ತ್ಫುಲ್ಲ ವನಮಾಲಾದಿಕಂಗಳ
ನೆಲ್ಲವನು ತಂದಿತ್ತು ಕಾಣುತ್ತಿರ್ದುದಖಿಳಜನ ೭

ಬಂದು ಕಂಡ ಮಹಾಜನದ ದೃಗು
ವೃಂದ ಸಾಫಲ್ಯವನು ತಾನೇ
ನೆಂದು ಬಣ್ಣಿಪೆನರಸ ಸೊಬಗಿನ ಸಾರಸಂಗ್ರಹವ
ಮಂದಹಾಸಾಮೃತ ಕಟಾಕ್ಷಾ
ನಂದರಸ ವೀಕ್ಷಣದ ಚಲುವಿನ
ಬಂದಿಯಲಿ ಬಸವಳಿವುತಿರ್ದುದು ನೋಡಿ ಮುರಹರನ ೮

ಮೇರೆದಪ್ಪಿದುದಕ್ಷಿ ಹರುಷ ಮ
ಹಾರಸಾಂಬುಧಿಯಲಿ ಸದಾ ವ್ಯಭಿ
ಚಾರಿಯಾದುದು ಚಿತ್ತವೃತ್ತಿ ತದೇಕನಿಷ್ಠೆಯಲಿ
ನಾರಿಯರು ನಯನಾಭಿರಾಮನ
ಚಾರುಮೂರ್ತಿಯ ನೋಡಿ ನೋಡಿ ಮ
ನೋರಥಾಂತವನೈದಲಱಿಯರು ಪಾರವಶ್ಯದಲಿ ೯

ಅವರವರ ಮನದಿಷ್ಟಸಿದ್ಧಿಯ
ನಿವಹವನು ಸಲಿಸುತ್ತ ಕರುಣಾ
ರ್ಣವನು ಕಂಡವರಘವನುರು ತಾಪತ್ರಯಂಗಳನು
ಭವಭಯವನೊಲವಿನ ಕಟಾಕ್ಷದ
ಲವದಲಪಹರಿಸುತ್ತ ಪುಣ್ಯ
ಶ್ರವಣಕೀರ್ತನನೊಲಿದು ಮಿಥಿಲಾಪುರಕೆ ನಡೆತಂದ ೧೦

ಕೇಳುತಲ್ಲಲ್ಲಿಗೆ ದಿಗಂತ ವಿ
ಶಾಲಧವಳ ಮನೋಜ್ಞಕೀರ್ತಿಯ
ನಾಲಿಸುತ ಖೇಚರವಧೂ ಗಂಧರ್ವ ಕಿನ್ನರರ
ಮೇಲೆ ಜಯರವ ಗೀತನೃತ್ಯಾ
ಲೋಲ ಸುಮನೋವೃಷ್ಟಿಯನು ಕರು
ಣಾಳು ಮುನಿಕುಲಸಹಿತ ಮೂಱಡೆಗೈದು ನಡೆತಂದ ೧೧

ಬರವ ಕೇಳುತ ಕೇಳುತವೆ ಹರ
ಹರ ಮಹಾದೇವೆನುತ ಮೈಥಿಲ
ಧರಣಿಪತಿ ಮೈಯಿಕ್ಕಿದನು ಸಿಂಹಾಸನವನಿಳಿದು
ನೆರೆದ ಪುರಜನದೇಶಜನಸಹಿ
ತಿರದೆ ಕನ್ನಡಿ ಕಳಶ ಮಂಗಳ
ವರ ಮಹಾರವವೆಸೆಯಲಂದಿದಿರಾಗಿ ನಡೆತಂದ ೧೨

ದೇವದೇವನ ಬರವನಾಶ್ರುತ
ದೇವನಾಲಿಸುತಾಲಿಸುತ ತನು
ಭಾವವನು ನೆಱೆ ಮಱೆದು ಮೈಯಿಕ್ಕುತ್ತ ಮೇದಿನಿಗೆ
ಭಾವ ಭಕ್ತಿಯ ಬಹಳತೆಯನದ
ನಾವ ಬಣ್ಣಿಪನರಸ ಬಂದನು
ಜೀವಚೇತನಮೂರ್ತಿ ಮುರಹರನಂಘ್ರಿಗಿದಿರಾಗಿ ೧೩

ಇದಿರುಗೊಂಡರು ಪೌರ ಪರಿಜನ
ವಿದಿತ ಮಂಗಳವಾದ್ಯಘೋಷದ
ಲುದಯದಲಿ ಸೂರ್ಯನನು ಭಜಿಸುವ ವಿಪ್ರಜನದಂತೆ
ಮುದದಲೆತ್ತಿದ ಕರಪುಟದ ಬಂ
ಧದಲಿ ಜಯಜಯ ಜಯಯೆನುತ ಹರಿ
ಪದವ ಕಾಣುತ ಧರೆಗೆ ಮೈಯಿಕ್ಕಿದುದು ಜನನಿವಹ ೧೪

ಬಂದು ಮೈಥಿಲನೃಪತಿ ಪರಮಾ
ನಂದದಲಿ ಶ್ರುತದೇವರಿಬ್ಬರು
ವಂದಣಿಸಿ ಮೈಯಿಕ್ಕಿದರು ಮುರಹರನ ಚರಣದಲಿ
ನಿಂದು ಕುಣಿದಾಡಿದರು ಮುನಿಜನ
ವೃಂದವನು ಸತ್ಕಾರ ಪೂಜೆಗ
ಳಿಂದ ಸನ್ಮಾನಿಸುತ ಬಿನ್ನವಿಸಿದರು ಕೈಮುಗಿದು ೧೫

ದೇವ ದೇವೋತ್ತಮನೆ ಬಿಜಯಂ
ಗೈವುದೆನ್ನಯ ಗೃಹಕೆನುತ ನರ
ದೇವಭೂದೇವೋತ್ತಮರು ವೈಯಿಕ್ಕಿ ಚರಣದಲಿ
ಶ್ರೀವರನೆ ಕರುಣಿಸುವುದತುಳ ಕೃ
ಪಾವಲೋಕನದಿಂದೆನುತ ರಾ
ಜೀವನಾಭನನರ್ಥಿಸಿದರಂದಾ ಮಹೋತ್ತಮರು ೧೬

ಕಾಲುವಿಡಿದಿರಲಿಬ್ಬರನು ಕರು
ಣಾಳು ತಕ್ಕವಿಸುತ್ತ ಸನ್ನುತ
ಮೌಳಿಗಳನೆತ್ತಿದನು ಬಹೆನೇ ಹೇಳು ನಡೆಯೆನುತ
ವೀಳೆಯವನಿಬ್ಬರಿಗೆ ಕೊಟ್ಟನು
ಲೀಲೆಯೆಂತುಟೊ ಭಕ್ತರಿಚ್ಛೆಯ
ಪಾಲಿಸುವ ಪರದೈವವಲ್ಲಾ ಜನಪ ಕೇಳೆಂದ ೧೭

ಮುಂದೆ ನಡೆ ನೀನೆನುತ ಭೂಪನ
ಮಂದಿರಕೆ ಭೂಸುರವರನವರ
ಮಂದಿರಕೆ ಮುರವೈರಿ ನಡೆದನು ರೂಪಭೇದದಲಿ
ಸಂದು ಮುನಿಕುಲ ಸಹಿತ ಸುರನರ
ವಂದ್ಯಪಾವನಚರಣನತಿಕೃಪೆ
ಯಿಂದ ನೋಡುವ ಸುರನಿಕರ ಭಾಪೆನಲು ಗಗನದಲಿ ೧೮

ಅವರು ಕಾಣದವೋಲೆರಡು ರೂ
ಪವನು ತಳೆದನು ಸಕಲಸುರಮುನಿ
ನಿವಹ ಸಹಿತಿತ್ತಂಡವಾಗಿ ನೃಪೋತ್ತಮದ್ವಿಜರ
ಭವನವನು ನಡೆತಂದು ಕರುಣಾ
ರ್ಣವನು ಹೊಕ್ಕನು ಸೂತ ಮಾಗಧ
ದಿವಿಜಗಣ ಕೈವಾರಿಸಲು ಭೂತಳದಲಭ್ರದಲಿ ೧೯

ಮನಕೆ ಗೋಚರವಲ್ಲದಾ ಮುನಿ
ಜನವಿನುತ ಗೋವಿಂದನಂಘ್ರಿಯು
ಮನೆಗೆ ಬಿಜಯಂಗೈಸಿ ತಂದನು ಮನೋನುರಾಗದಲಿ
ಜನಪನೊಲಿದನು ತನುವನುಬ್ಬುವ
ತನುಪುಳಕ ಹರುಷಾಶ್ರುಜಲದಲಿ
ನನೆದನಾಸನ ಸೂನೃತಾರ್ಘ್ಯಾದಿಗಳನೊಲಿದಿತ್ತು ೨೦

ಮೆಲುದಳದಲೊಯ್ಯನೆ ಮುಕುಂದನ
ಚಲುವ ಚರಣಸರೋಜಯುಗಳವ
ತೊಳೆದು ಮುನಿವರರಂಘ್ರಿತೀರ್ಥವನೇಕ ಭಕುತಿಯಲಿ
ತಳಿದುಕೊಂಡು ಕುಟುಂಬಜನ ಸಹಿ
ತಲಘುಭೂಷಣ ಗಂಧಮಾಲ್ಯಂ
ಗಳಲಿ ಭೋಜನಸುವಸನಾದಿಗಳಿಂದ ಪೂಜಿಸಿದ ೨೧

ಕುಳ್ಳಿರಿಸಿ ಮಣಿಮಂಚದಲಿ ಪದ
ಪಲ್ಲವವನೊತ್ತುತ್ತ ತನ್ನೆದೆ
ಯಲ್ಲಿ ತಕ್ಕವಿಸುತ್ತ ವಾಸನಿಸುತ್ತ ಚುಂಬಿಸುತ
ಫುಲ್ಲಮುಖಸರಸೀರುಹನಪ್ರತಿ
ಮ ಭಕುತರದೇವನಾಶ್ರಿತ
ವಲ್ಲಭನ ಮೊಗ ನೋಡಿ ನಗುತಿಂತೆಂದನವನೀಶ ೨೨

ನೀನಲ್ಲೆ ಗೋವಿಂದ ಗುಪ್ತ
ಜ್ಞಾನಮಯವಿಗ್ರಹ ಸದಾನಂ
ದಾನುಭವ ಸತ್ಯಸ್ವರೂಪನು ನಿತ್ಯಪರಿಪೂರ್ಣ
ಆನೆನಿಪಹಂಕೃತಿಯ ಮೂಲ
ಸ್ಥಾನಚೇತನ ಸಾಕ್ಷಿನಿರ್ಮಿತ
ಭಾನುಶತಕೋಟಿಪ್ರಭೈಕಾಂಶದ ಮಹಾವಿಷ್ಣು ೨೩

ಸ್ಮರಿಸುವೆವು ನಾವೀ ಭವತ್ಪದ
ಸರಸಿಜವನನವರತ ಹೃದಯಾಂ
ಬುರುಹದಲಿ ನೆಱೆ ಕೇಳಿ ಕೇಳಿ ಭವದ್ಗುಣಾವಳಿಯ
ನಿರುತವೆಂತೈ ಮಾಂಸದೃಶಗೋ
ಚರಕೆಬಂದದು ಕೃಷ್ಣ ಕರುಣಾ
ಕರನೆ ಯೋಗಿಧ್ಯೇಯಪದಯುಗವೆಂದನಾ ಭೂಪ ೨೪

ತೆಱುವೆನೆನ್ನನು ನೆನೆವ ನಿಜಪದ
ಶರಣಭಕ್ತರಿಗೆಂಬ ಬಿರುದನು
ಮೆಱೆಯಲೋಸುಗ ಕೃಷ್ಣ ವೈದೋಱಿದೆಯಲಾ ತನಗೆ
ಅಱಿಸಿ ಕಱುವನು ತಾಯಿ ಬಹವೋ
ಲಱಸುತೆಮ್ಮನು ಬಂದೆ ಮುನಿಮನ
ವಱಿಸಿ ಕಾಣವು ದೇವ ನಿನ್ನಂಘ್ರಿಗಳನಿದನೆಂದ ೨೫

ಆತ್ಮವಿದರಿಗೆ ಶಾಂತರಿಗೆ ನೀ
ನಾತ್ಮನಲ್ಲಾ ಕೃಷ್ಣ ಕಾರು
ಣ್ಯಾತ್ಮಕನೆ ನೀನಿರಲು ಬೇಱಿನ್ನೊಂದು ದೈವವನು
ಆತ್ಮರೂಪನನುಳಿದು ಭಜಿಸುವ
ನಾತ್ಮಸುಖವೇದಿಗಳ ನೆಲೆ ಸ
ರ್ವಾತ್ಮಕನೆ ತಾನೇನ ಹೊಗಳುವೆನೆಂದನಾ ಭೂಪ ೨೬

ತ್ರಿದಶ ಭೂದ್ವಿಜ ಧರ್ಮರಕ್ಷಾ
ರ್ಥದಲಿ ಸಾಕ್ಷಾನ್ನಿತ್ಯನಿರ್ಗುಣ
ಪದವೆನಿಪ ಪರಮಾತ್ಮನೇ ನೀನಿಂದು ತನುವಿಡಿದು
ಯದುಕುಲದಲೀ ಜೀವಮೋಕ್ಷ
ಪ್ರದವೆನಿಪ ಪಾವನ ಚರಿತ್ರವ
ನುದಯಿಸಿದೆ ವಿಸ್ತರಿಸಲೋಸುಗವೆಂದನವನೀಶ ೨೭

ದೇವ ನಿನ್ನಯ ಘನತೆ ಯೆತ್ತಲು
ಭಾವಿಸಲು ತಾನೆತ್ತ ಹವಣಿಸ
ಲಾವನನು ನೆಱೆಯವು ನಿರಂತರ ನಿಗಮ ಕೋಟಿಗಳು
ಕೋವಿದರ ಮನ ಮುಟ್ಟವಾವನ
ಪಾವನಾಂಘ್ರಿಯನರರೆ ತಾನಿ
ನ್ನಾವ ಧನ್ಯನೊ ಕಂಡೆನೀ ನಿನ್ನಂಘ್ರಿಗಳನೆಂದ ೧೮

ಇವೆಯಲಾ ಸಂಸಾರ ದುಃಖಾ
ರ್ಣವವಿಶೋಷಣ ವಾಡಬಾನಲ
ವಿವೆಯಲಾ ಭವರೋಗಭೈಷಜ ಮೂಲವಿದ್ಯೆಗಳು
ಅವಿರಳಾತ್ಮಜ್ಞಾನದೇಶಿಕ
ನಿವಹ ನಿತ್ಯನಿಷೇವಿತಂಗಳ
ನಿವನು ಕಂಡೆನು ಕಂಡೆನೀ ನಿನ್ನಂಘ್ರಿಗಳನೆಂದ ೧೯

ನಿತ್ಯರೂಪನೆ ನಿತ್ಯತುಷ್ಟನೆ
ನಿತ್ಯಸುಖವಿಗ್ರಹನೆ ಮಾಡುವ
ಕೃತ್ಯವಾವುದು ತನಗೆ ಭವದೀಯಾಂಘ್ರಿಪೂಜೆಯಲಿ
ಕೃತ್ಯವನು ತಾ ಬಲ್ಲೆನೀ ಕೈ
ಯೆತ್ತಿ ಡಂಡಪ್ರಣತಿಮಾತ್ರದ
ಕೃತ್ಯವೆನ್ನದೆನುತ್ತ ಮೈಯಿಕ್ಕಿದನು ಹರಿಪದಕೆ ೨೦

ಎಂದು ನವಮಣಿಕನಕಭೂಷಣ
ವೃಂದ ವಸನ ವರಾನುಲೇಪನ
ದಿಂದ ದಿವ್ಯಾನ್ನಾಮೃತಾಹಾರದಲಿ ಸತ್ಕರಿಸಿ
ವಂದಿಸುತ ತತ್ಪಾದಕಮಲ
ದ್ವಂದ್ವವನು ಪಾವನಮುನೀಂದ್ರರ
ವೃಂದವನು ವರಭಕುತಿಯಲಿ ಪೂಜಿಸಿದನಾ ಜನಪ ೨೧

ಭೂವರನೆ ಕೇಳತ್ತಲಾ ಶ್ರುತ
ದೇವನಾ ನಿಜ ಮಂದಿರಕೆ ರಾ
ಜೀವನಾಭನಶೇಷ ಮುನಿಕುಲಸಹಿತ ನಡೆತರಲು
ಆವುದೋ ಕರ್ತವ್ಯವೆನಗಿ
ನ್ನಾವ ಧನ್ಯನೊ ತನ್ನ ಹೋಲುವ
ನಾವನೆನುತಿದಿರೆದ್ದು ಕುಣಿದಾಡಿದನು ಗುಡಿಗಟ್ಟಿ ೨೨

ಕುಳ್ಳಿರಿಸಿ ತೃಣಪೀಠನಿಕರದ
ಲೆಲ್ಲರನು ಸಾಕ್ಷಾತ್ ಲಕ್ಷ್ಮೀ
ವಲ್ಲಭನ ನಾನಾವ ಪರಿಯಲಿ ಪೂಜಿಸುವೆನೆನುತ
ನಿಲ್ಲದಾ ಗೃಹದೊಳಗೆ ಹೊಱಗ
ಲ್ಲಲ್ಲಿಗೆಡೆಯಾಡಿದನು ಹರುಷದ
ಭುಲ್ಲವಣೆ ಉತ್ಸಾಹವೇಗದ ಪಾರವಶ್ಯದಲಿ ೨೩

ಮಡದಿ ಮಕ್ಕಳುಸಹಿತ ಮುರಹರ
ನಡಿಗಳಿಗೆ ಮೈಯಿಕ್ಕಿ ಕಣ್ಣಲಿ
ಕುಡಿ ಕುಡಿದು ಕಮನೀಯಮೂರ್ತಿಸುಧಾರಸಾರ್ಣವದ
ಮಡುವಿನಲಿ ಮೈಮನವುಕ್ಕಿ ಪುಳಕದ
ಗುಡಿಯ ಪರಮೋತ್ಸವದ ಹರುಷದ
ಕಡಲ ತೋಹಿನಲಾಳುತೇಳುತ್ತಿರ್ದನಾ ವಿಪ್ರ ೨೪

ತೊಳೆದು ಮುನಿ ಚರಣಂಗಳನು ತ
ಜ್ಜಲದಲಾ ಗೋವಿಂದ ಪದಯುಗ
ನಳಿನತೀರ್ಥೋದಕದ ಸಂಗಮವಾರಿಯಲಿ ಮುಳುಗಿ
ತಲೆ ನನೆಯಲೋಲಾಡಿದನು ನಿಜ
ಲಲನೆ ಗೃಹ ಪಶು ಭೃತ್ಯಜನ ಸಹಿ
ತೊಲವು ಮಿಗಲರ್ಚಿಸಿದನಚ್ಯುತನಂಘ್ರಿಪಂಕಜವ ೨೫

ಎಳೆದೊಳಸಿ ದೂರ್ವಾಂಕುರಾಕ್ಷತೆ
ಗಳಲಿ ಬಹುವಿಧ ಪುಷ್ಪ ಫಲ ಪರಿ
ಮಳಿತ ಧೂಪಾರತಿ ಸುಗಂಧದ ಶೀತವಾರಿಯಲಿ
ಅಲಘು ಮುನಿನಿವಹವನು ಕರುಣಾ
ಜಲಧಿಯನು ಪೂಜಿಸುತ ಬಾಷ್ಪಾ
ಕುಳಿತಲೋಚನನಂಘ್ರಿಕಮಲವನೊತ್ತುತಿಂತೆಂದ ೨೬

ಭಲರೆ ಭಾಪುರೆ ತನ್ನ ಭಾಗ್ಯದ
ನೆಲೆಯ ಕಂಡವರಾರು ಕಾಣರು
ಹಲವು ಜನ್ಮದ ಯೋಗಸಿದ್ಧರು ದೇವ ನಿಮ್ಮಡಿಯ
ಲಲಿತ ಪದಕಮಲವನು ಕಂಡೆನು
ಸುಲಭದೈವವು ನೀನಲಾ ಪದ
ನಳಿನಸಂಶ್ರಿತಸಾಧುಭಕ್ತರಿಗೆಂದನಾ ವಿಪ್ರ ೨೭

ನಿನ್ನ ಮಾಯಾಶಕ್ತಿಯಿಂದು
ತ್ಪನ್ನವಾಯ್ತೀ ಲೋಕ ರಕ್ಷಾ
ಸನ್ನಿರೋಧ ವ್ಯವಹೃತಿಗಳಾ ಶಕ್ತಿಭೇದದಲಿ
ನಿನ್ನೊಳುಮೆಯಿಂದಾಗಿ ಕೆಡುವುವು
ನಿನ್ನುಪೇಕ್ಷೆಯ ಕಾಲವಶದಲಿ
ಹೊನ್ನೊಳಗೆ ಕಟಕಾದಿ ಭಾವವಿಭೇದವಳಿವಂತೆ ೨೮

ಕನಸಿನಲಿ ನಾನಾತ್ವ ತನ್ನಯ
ಮನದೊಳಗೆ ನೆಱೆ ತೋಱ ಮತ್ತಾ
ಕನಸಿನೊಳಗಳಿವಂತೆ ತೋಱುವುದಳಿವುದೀ ತೋರ್ಕೆ
ಚಿನುಮಯನೆ ನಿನ್ನಳುಮೆ ಮಾಯಾ
ಜನನಹೇತುವೆನಿಪ್ಪುದೊಂದೇ
ಬಿನುಗು ಸಂಕಲ್ಪದಲಿ ತಲ್ಲಯದೊಡನೆ ಲಯವೆಂದ ೨೯

ಆರಱಿವರೆಲೆ ಕೃಷ್ಣ ನಿನ್ನ ವಿ
ಹಾರ ಮಾಯಾತಂತ್ರವನು ಸಂ
ಸಾರಚಕ್ರಭ್ರಮಣದಲಿ ಜೀವರನು ತಿರುಗಿಸುವ
ಸಾರತತ್ವಜ್ಞಾನದೀಪವ
ತೋಱಿ ನಿನ್ನನು ನೆನೆವ ಭಕ್ತರ
ಭೂರಿ ಭವತಿಮಿರಾಪಹರಣವ ಮಾಳ್ಪ ಲೀಲೆಗಳ ೪೦

ಬುದ್ಧಿಸಾಕ್ಷಿಯೆನಿಪ್ಪ ನಿನ್ನನು
ಬುದ್ಧಿಹೀನರು ವಿಷಯ ಭೋಗನಿ
ಬದ್ಧಹೃದಯರು ಕಾಣಲಱಿಯರು ಕರಣವೃತ್ತಿಗಳ
ಸಿದ್ಧಿಗಾಶ್ರಯವಾದ ಕಾರಣ
ಸಿದ್ಧವಲ್ಲಾ ನಿನ್ನ ನಿಜ ನಿಗ
ಮಾಧ್ವಧೀರರು ಲಕ್ಷಿಸುವರುರು ಲಕ್ಷಣಂಗಳಲಿ ೪೧

ತನುವಿನಳತೆಗೆ ಬಾರದಿಂದ್ರಿಯ
ಜನಿತವೃತ್ತಿಗಳೈದದಱಿಸುವ
ಮನದ ಮೊನೆ ಮುಸುಕವುಕದಾನೆಂದೆಂಬಹಂಕೃತಿಯ
ಹೊನಲು ಹೊಗದಖಿಳದಲಿ ಪರಿಪೂ
ರ್ಣನನು ಕಂಡೆನು ಭಾವು ಪರಮಾ
ತ್ಮನನು ಲೋಚನಗೋಚರದಲೇ ಧನ್ಯ ನಾನೆಂದ ೪೨

ನೆನೆದಡಖಿಳ ಜನಾಘಹರವೆಂ
ದೆನಿಸುವೀ ಮುನಿವರರ ಪದ ದರು
ಶನ ಭವತ್ಪದಯುಗಳ ಕಮಲಪರಾಗ ಸೇವೆಯಿದು
ಜನಿಸಿದುದು ತನಗೆಂತು ಭವಭಯ
ವನಧಿಯನು ದಾಂಟಿದೆನು ದಾಂಟಿದೆ
ನೆನುತ ವೈಯಿಕ್ಕಿದನು ಮುನಿವಂದಿತನ ಚರಣದಲಿ ೪೩

ಕೃತ್ಯವಾವುದು ಬೆಸಸಬೇಹುದು
ಭಕ್ತವತ್ಸಲನಹಡೆ ತಾ ಕೃತ
ಕೃತ್ಯನೆನಿಸುವದೆನುತ ವೈಯಿಕ್ಕಿರಲು ಚರಣದಲಿ
ಮಸ್ತಕವ ಹಿಡಿದೆತ್ತಿ ತಕ್ಕೈ
ಸುತ್ತ ನುಡಿದನು ನಸುನಗೆಯ ಮೃದು
ಸೂಕ್ತಿಯಲಿ ನಿಜದೇವನಾ ಶ್ರುತದೇವನನು ನೋಡಿ ೪೪

ಬಂದೆ ನಾನೆಲೆ ವಿಪ್ರವರ ನಿ
ನ್ನೊಂದು ದುರುಶನದರ್ಥಿಯಲಿ ಬೇ
ಱೊಂದು ಕೃತ್ಯವನಱಿಯೆನೇತಕೆ ಮುಚ್ಚುಮಱಿ ತನಗೆ
ತಂದೆ ಕೇಳೈ ಮುನಿವರರು ಸುರ
ವಂದ್ಯಚರಣರು ನಿನಗೆ ಕರುಣಿಸ
ಬಂದರಧಿಕಾನುಗ್ರಹಾರ್ಥದಲೆಂದನಸುರಾರಿ ೪೫

ಕ್ಷೇತ್ರದೇವತೆ ತೀರ್ಥವೆಂಬುವು
ಧಾತ್ರಿಯುಲಿ ಹಲಕಾಲದಿಂದ ಪ
ವಿತ್ರವನು ಮಾಡುವವು ನಿಜಸೇವಾನುಸಾರದಲಿ
ಪಾತ್ರಭೂತರೆನಿಪ್ಪ ಮುನಿಗಳು
ನೇತ್ರಪಥದಲಿ ಸುಳಿದಡೆಯ್ದೆ ಪ
ವಿತ್ರವನು ಮಾಡುವರು ತಕ್ಷಣದಲಿ ಚರಾಚರವ ೪೬

ಮಿಗಿಲು ವಿಪ್ರರು ಜೀವಚಯದಲಿ
ಮಿಗಿಲಲಾ ವಿದ್ಯಾತಪೋಯುತ
ರೊಗುಮಿಗೆಯ ವಿಪ್ರರಲಿ ವರವಿದ್ಯಾತಪೋಯುತರು
ಬಗೆಗೆ ನಿಜಲಾಭೈಕತುಷ್ಟರೆ
ಮಿಗಿಲು ಮತ್ತದಱೊಳಗೆ ಕೇಳೆಲೆ
ಮಗನೆ ಮತ್ಕಥೆಗಳನು ಹೇಳುವ ಕೇಳುವವರೆಂದ ೪೭

ಎನ್ನ ನಾಮಾವಳಿಯ ಕೀರ್ತಿಸು
ತೆನ್ನ ಗುಣಗಣಗಳನು ಹೊಗಳು
ತ್ತೆನ್ನ ಚರಿತಾಮೃತವನಾಸ್ವಾದಿಸುತ ಕಿವಿಗಳಲಿ
ಎನ್ನನಾರಾಧಿಸುವ ಭಕುತರಿ
ಗನ್ಯರನು ತಾ ಕಾಣೆನಧಿಕರ
ನೆನ್ನ ನಾಲುಕುಭುಜದ ಮೂರ್ತಿಸಮಾನವಲ್ಲೆಂದ ೪೮

ಅಱಿಯದದನಜ್ಞಾನಿಗಳು ಮ
ತ್ಸರಿಸುವರು ಮದ್ರೂಪನೆನಿಸುವ
ಧರಣಿಯಮರೋತ್ತಮರೊಡನೆ ಸಂಭಿನ್ನದೃಷ್ಟಿಯಲಿ
ಪರಿಕಿಸಲು ಸಚರಾಚರಕೆ ಸತು
ಪುರುಷರೂಪದಲಾನನುಗ್ರಹ
ಕರನೆನಿಸಿ ಸಂಚರಿಸುತಿಹೆನೆಲೆ ವಿಪ್ರ ಕೇಳೆಂದ ೪೯

ಅರ್ಚಿಸುವುದದಱಿಂದ ತನ್ನುವ
ನರ್ಚಿಸುವಡೀ ವಿಪ್ರವರ್ಯರ
ನರ್ಚಿತನು ತಾನಹೆನು ಪೂಜಿಸಲೆನ್ನನಱಿದವರ
ಅರ್ಚನೆಗೆ ಸರಿಯಿಲ್ಲ ಜಡವೆನಿ
ಪರ್ಚೆಯಲಿ ವಿಧ್ಯುಕ್ತವೆಂದೆನಿ
ಪರ್ಚನೆಗಳೀ ಬ್ರಹ್ಮವಿದರಲಿ ಪೂರ್ಣವಹವೆಂದ ೫೦

ಎಂದನುಗ್ರಹಿಸುತ್ತ ಮುನಿವರ
ವೃಂದ ಸಹಿತಾರಾಧಿತಾಂಘ್ರಿ
ದ್ವಂದ್ವನಿರ್ದನು ಕೆಲವು ದಿನ ತತ್ಪಾರವಶ್ಯದಲಿ
ಸಂದರವರಚ್ಯುತನ ವರ್ಗಕೆ
ವಂದ್ಯ ಭೂಸುರ ನೃಪರು ಮರಳಿದು
ಬಂದನಾ ನಿತ್ಯಾತ್ಮ ನಾರಾಯಣನು ನಿಜಪುರಿಗೆ ೫೧

ತೊಂಭತ್ತನೆಯ ಸಂಧಿ ಮುಗಿಯಿತು.

## ತೊಂಭತ್ತೊಂದನೆಯ ಸಂಧಿ

ಅಸುರದಲವಗಡಿಸಿ ಬರಲು ವೃ
ಕಾಸುರನ ಭೀತಿಯಲಿ ಬಳಿಕಾ
ವಾಸುದೇವನುಪಾಯದಲಿ ಕಾಯ್ದನು ಮಹೇಶ್ವರನ

ಯತಿಪ ಕರುಣಿಸಬೇಹುದಾ ಶ್ರೀ
ಪತಿಯ ಪದವನು ಭಜಿಸಿದರೆ ಧನ
ಪತಿಗಳಾಗರು ಧನವಿಹೀನ ಮಹೇಶ್ವರನ ಪದವ
ಮತಿಯಲಾಶ್ರೈಸಿದರೆ ಗಡ ಧನ
ಪತಿಗಳಹರಿಬ್ಬರ ವಿರುದ್ಧ
ಸ್ಥಿತಿವಿಭೇದವನೆನಲು ನಗುತಿಂತೆಂದನಾ ಮುನಿಪ ೧

ಶಕ್ತಿಯುತನೀಶ್ವರನು ತತ್ಪದ
ಭಕ್ತರಿಗೆ ಧನವಹುದು ಚಿತ್ರವೆ
ಶಕ್ತಿಗುಣವಿರಹಿತ ನಿರಂಜನನಾದ ಮುರಹರನ
ಭಕ್ತರಿಗೆ ಧನವೆಂತು ಸಂಭವ
ಯುಕುತಿಸಮುವಲ್ಲರಸ ನಿರುಪಮ
ಮುಕ್ತಿಪದ ಸಾಮ್ರಾಜ್ಯವೇ ಸಂಪನ್ನವಹುದೆಂದ ೨

ಆದಡವಧರಿಸರಸ ಪಾಂಡವ
ಮೇದಿನೀಪತಿ ಕೇಳಿದನು ಕಮ
ಲೋದರನನಮುಳಾಶ್ವಮೇಧಾನಂತರದಲಿದನು
ಆದಿ ಧರ್ಮ ಶ್ರವಣ ಕಥೆಗಳ
ನಾದರಿಸಿ ಕೇಳುತ್ತ ಬೆಸಗೊಳ
ಲಾ ದಯಾನಿಧಿ ಕೃಷ್ಣನಿಂತೆಂದನು ಮಹೀಪತಿಗೆ ೩

ಬಹಳ ಧನವಂತರಲಿ ಮದ ಸ
ನ್ನಿಹಿತವಾಗಿಹುದರಸ ಮದನು
ಗ್ರಹಕೆ ಸೇರುವುದೆಂತು ಬಳಿಕಾ ಮದಸಮನ್ವಿತರು
ವಿಹಿತ ತದ್ಧನಮದವಿನಾಶನ
ವಹಡೆ ತದ್ಧನನಾಶದಲಿ ನಿ
ರ್ವಹಿಸುವುದು ವೈರಾಗ್ಯ ತಚ್ಚಂತೆಯಲಿ ಕೇಳೆಂದ ೪

ಭೋಗವರ್ಜಿತರಾದ ವಿಫಲೋ
ದ್ಯೋಗಿಗಳಿಗಹುದಿಹಪರಾರ್ಥವಿ
ರಾಗವದಱಿಂದಹುದು ಜನ್ಮಾಂತರದ ಸುಕೃತದಲಿ
ಭಾಗವತಜನ ಮೈತ್ರಿ ಬಳಿಕಾ
ಭಾಗವತಜನ ಮೈತ್ರಿಯುಳ್ಳ ಮ
ಹಾಗಮಜ್ಞರಿಗೆನ್ನನುಗ್ರಹವಹುದು ಕೇಳೆಂದ ೫

ಮುಟ್ಟವೆನ್ನನು ವಾಙ್ಮನಂಗಳು
ಮುಟ್ಟವಿಂದ್ರಿಯ ವೃತ್ತಿಗಳು ನಿ
ರ್ದುಷ್ಟ ರೂಪನನದ್ವಯನನಕ್ರಿಯನನವ್ಯಯನ
ಬಿಟ್ಟು ಭಜಿಸುವರೆನ್ನನಿತರ ನಿ
ಕೃಷ್ಟ ದೈವಂಗಳನು ವಿಷಯವ
ನಿಟ್ಟಸುವ ಮನದಿಂದ ಮಾಯಾಗುಣವಿಮೋಹಿತರು ೬

ಬೇಡಿ ವಿಷಯಂಗಳನು ಭಕುತಿಯ
ಮಾಡುವರು ಡಾಂಭಿಕರು ಲಭಿಸಿದ
ಡೀಡಿಱಿವ ಧನ ಮದ ಮಹಾಂಧತಮಿಸ್ರದಲಿ ಮುಳುಗಿ
ಮಾಡುವರವಜ್ಞೆಯನು ದೈವದ
ಕೂಡೆ ಕುಮತಿಗಳವರು ಭಕುತಿಯ
ಮಾಡರೆನ್ನಲಿ ಮಾಡೆ ನಾನವರಲಿ ಕೃಪೇಕ್ಷಣವ ೭

ಇಲ್ಲ ತನಗೇಕಾಂತ ಭಕ್ತರೊ
ಳಲ್ಲದಧಿಕಪ್ರೀತಿ ಪರರಲಿ
ಬಲ್ಲರದನಾ ಭಕ್ತರೇ ತನ್ನೊಂದು ಮನದೊಲವ
ಬಲ್ಲೆ ನಾನವರಿಷ್ಟವನು ತಾ
ನಲ್ಲದನ್ಯರನಱಿಯರಿಚ್ಛೆಗೆ
ಸಲ್ಲದಿತರ ಭ್ರಾಂತಿ ಮೃಗತೃಷ್ಣಾವಗಾಹನಕೆ ೮

ಇತ್ತು ಮನದಿಷ್ಟಾರ್ಥವನು ಹೋ
ದತ್ತ ಹೋಗಲಿ ಭಕ್ತರೆಂಬಾ
ಚಿತ್ತವೆನ್ನೊಳಗಿಲ್ಲ ನೆಱೆ ನಂಬಿದ ಮಹಾತ್ಮರಲಿ
ತೆತ್ತಿಸುವೆನೆನ್ನಸುವನಱಿಯಾ
ಮತ್ತೆ ಬಹುಮಾತೇಕೆ ಮುಟ್ಟದು
ಮೃತ್ಯುಭಯ ಬಲ್ಲಿದರು ತನ್ನವರೆಂದನಸುರಾರಿ ೯

ಎಂದು ಜಗದಾಧಾರನಾ ಸ್ವ
ಚ್ಛಂದಭಕ್ತಪ್ರಣಯವನು ಸಾ
ನಂದದಲಿ ಕರುಣಿಸಿದನಾ ಯುಷ್ಮತ್ಪಿತಾಮಹಗೆ
ಎಂದಡವಧರಿಸರಸ ದೇವನು
ಕುಂದನಲ್ಲದೆ ಬೇಱೆ ಪರಮಾ
ನಂದದಾಯಕ ದೈವವಾವುದು ಮಗನೆ ಹೇಳೆಂದ ೧೦

ಶಾಪವರಗಳಿಗಿಬ್ಬರಲ್ಲದೆ
ಭೂಪ ಕೇಳು ಸಮರ್ಥರಿಲ್ಲ
ಕೃಪಾಪರನು ಕ್ಷಿಪ್ರದಲಿ ನಿಜಭಕ್ತಭಕ್ತರಲಿ
ಕೋಪಪರನೆಂದೆನಿಪನೀಶ್ವರ
ನಾ ಪರಿಯಲೇ ನಿಮಿಷದಲಿ ವಿಹಿ
ತಾಪರಾಧದಲರಸ ಕೇಳಿತಿಹಾಸವುಂಟೆಂದ ೧೧

ಮುನ್ನ ವೃಕನೆಂದೊಬ್ಬ ದಾನವ
ಕುನ್ನಿ ತಪದಲಿ ಮೆಚ್ಚಿಸಿದನಾ
ಪನ್ನಗೇಂದ್ರ ವಿಭೂಷಣನನಾಶ್ರಿತಸಪೂಷಣನ
ತನ್ನ ಮಾಂಸವ ಕಡಿದು ಕೇತಾ
ರೋನ್ನತ ಕ್ಷೇತ್ರದಲಿ ಹೋಮಿಸಿ
ಬನ್ನಬಡಿಸಿದನಾತ್ಮನನು ಬಹುವಿಧ ನಿರೋಧದಲಿ ೧೨

ತಡೆದನೀಶ್ವರನುದಿಸದೀ ತಪ
ವ್ರುಡನ ಮನಕೆಂದೆನುತ ಕೊಂಡನು
ಖಡುಗವನು ತಲೆಗೇಳನೆಯ ದಿವಸದಲಿ ಕಡುಮುಳಿದು
ಕಡುಗರುಣಿ ಮೈದೋಱಿ ಸಾಕೇ
ಳೊಡಲ ದಂಡಿಸಬೇಡ ವರವನು
ಕೊಡುವೆನುಸುರುಸುರಿಷ್ಟವೇನೆಲೆ ಮಗನೆ ನಿನಗೆಂದ ೧೩

ಕೃತ್ತಿವಾಸನು ಕರಸರೋಜವ
ಮಸ್ತಕದಲಿಡಲಾಯ್ತು ಮಂಗಳ
ಮೂರ್ತಿ ಮುನ್ನಿನವೋಲು ದೈತ್ಯೇಂದ್ರಂಗೆ ಬಳಿಕವನು
ಸತ್ಯಸಂಧನೆ ದೇವದೇವೇ
ಶೋತ್ತಮನೆ ಕರುಣಿಸುವುದೆನುತಖಿ
ಳೋತ್ತಮನು ಬೇಡಿದನು ವರವನು ಜನಭಯಂಕರವ ೧೪

ಇರಿಸುವೆನು ತಾನಾರ ಶಿರದಲಿ
ಕರವ ನವರಾ ಕ್ಷಣಕೆ ಬೀಳಲಿ
ಧರೆಗೆ ಭಸ್ಮೀಭೂತರಾಗಿ ಇದೊಂದನೆನಗೊಲಿದು
ಕರುಣಿಸುವುದೆನೆ ಕೇಳಿ ಮೂಗಿನ
ಬೆರಳಲೊಲೆದನು ಶಿರವನಿತ್ತೆನು
ಮರುಳು ಮಗನೆ ಮಹಾಭಯಂಕರ ವರವನಿದನೆಂದ ೧೫

ಇತ್ತ ವರವದು ದಿಟವೊ ಹುಸಿಯೋ
ಸತ್ಯವನು ನೋಡುವರೆ ಕಾಣದೆ
ಮತ್ತೆ ಬೇಱೊಬ್ಬರನು ಮನದಲಿ ಮಾಡಿ ಸಂಶಯವ
ಪ್ರತ್ಯಯಕೆ ಪರಮೇಷ್ಠಿವಂದ್ಯನ
ಮಸ್ತಕದಲಿಂಸಲು ಕರಾಗ್ರವ
ನೆತ್ತಿದನು ದನುಜೇಂದ್ರನುಱಿ ಬೆಱಗಾದನಾ ರುದ್ರ ೧೬

ಕೆಟ್ಟನೇಗುವೆನಿವಗೆ ನಾಸಿದ
ನಿಟ್ಟಗಿಚ್ಚಿದು ಭಾಪು ತನ್ನನು
ಸುಟ್ಟುರುಹಲೈತಂದುದೇ ತಪ್ಪಾಯ್ತಲಾ ಯೆನುತ
ಮುಟ್ಟದಿರು ಹೋಱಸಾರು ಸಾರೆಲೆ
ದುಷ್ಟ ಪಾತಕಿ ಯೆನುತ ಕಾಣುತ
ಬಿಟ್ಟುಕೊಂಡನು ರುದ್ರನಸುರೋಪದ್ರವಕೆ ನಡುಗಿ ೧೭

ಮೇಲೆ ನಭವನು ದೆಸೆಗಳನು ಪಾ
ತಾಳಲೋಕಂಗಳನು ಹೊಕ್ಕನು
ಕಾಳರಕ್ಕಸನೊಡನೆ ಕೈನೆಗಹಿ ಬೆಂಬತ್ತಿ
ಭಾಳನೇತ್ರನ ಬೆನ್ನಿನಲಿ ಜಟ·
ಜಾಲ ಜರಿಯಲು ಹರಿದುಪಾಯವಿ
ಲೋಲನಾದನು ಪರಿಹರಿಸಲಱಿಯದೆ ಪರಾಭವವ ೧೮

ತುಟ್ಟಸಿದುದಭವನ ಮನೋಗತಿ
ಮುಟ್ಟಲಱಿಯದ ಮೂರ್ತಿ ತಾನವ
ನಟ್ಟುಳಿಗೆ ಧಗೆ ಮಿಗಿಲು ಲೋಕಾಂತರಂಗಳಲಿ ತೊಳಲಿ
ಬಟ್ಟೆದೆಗೆದನು ಬಳಿಕ ದನುಜಘೆ
ರಟ್ಟನೂರಿಗೆ ಮಿಡಿದ ಬೆಱಗಿನ
ಘಟ್ಟಯೆನಿಸುವ ನಿರುಪಮಿತ ವೈಕುಂಠಪುರವರಕೆ ೧೯

ಅಱಿದನಸುರಾರಾತಿ ಬಹ ಶಂ
ಕರನ ಸಂಕಟದಿರವನೆದ್ದನು
ಸಿರಿಯ ಕರಕಮಲದಲಿ ಮೆಱೆವ ನಿಜಾಂಘ್ರಿಪಂಕಜವ
ಧರೆಗೆ ಸಲಿಸುತ ವಿಪ್ರವೇಷವ
ಧರಿಸಿ ದಂಡ ಕಮಂಡಲಂಗಳ
ಭರ ಮಿಗಿಲು ಬಹ ದಾನವಂಗಿದಿರಾಗಿ ನಡೆತಂದ ೨೦

ವಂದಿಸಿದನಸುರಂಗೆ ಸುರಮುನಿ
ವಂದಿತಾಂಘ್ರಿಸರೋಜನೇನೈ
ಬಂದೆ ಬಳಲುತ ಬಹಳ ಮಾರ್ಗಶ್ರಮದ ಭಾರದಲಿ
ತಂದೆ ತನುದಂಡಣೆ ಯಿದೇತಕೆ
ನಿಂದಿರೆಲೆ ಪುಣ್ಯಾತ್ಮ ಹರಿತರ
ಲಿಂದು ಕಾರ್ಯವದೇನು ಮಾತಾಡೆಂದನವನೊಡನೆ ೨೧

ಬೇಡ ಬಳಲಿಕೆ ಬಱದೆ ವಿಫಲವ
ಮಾಡದಿರು ಕಾರ್ಯವನು ಕೊಡುವುದು
ಬೇಡಿದರ್ಥವನಕಟ ಕೊಡುವರೆ ಕಾಮಧೇನುವಲ
ಬಾಡಿ ಝಳದಲಿ ಬಳುಕುತಿಹೆ ನೀ
ನೋಡೆ ನಿನ್ನಾಯಸವಿದೇಕೆನು
ತೂಡಿದನು ಕಿವಿಗಳಿಗೆ ಕರುಣಾಮೃತದ ತನಿರಸವ ೨೨

ಎನಲಹುದು ಮತ್ತೇನು ಹಿತವನು
ತನಗೆ ಹೇಳುವರಿಲ್ಲ ವಟುವಿನ
ಮನದೊಲವು ಲೇಸೆನುತ ನಿಂದನು ನುಡಿಯನಾಲಿಸುತ
ಜನಪ ಚಿತ್ರವೆ ಸಲೆ ಜಗನ್ಮೋ
ಹನದ ಮಾಯಾಶಕ್ತಿಯಾವನ
ಮನೆಗೆ ನಡೆವಳು ತೊತ್ತುಗೆಲಸದಲಾವುದರಿದೆಂದ ೧೩

ಬಂದೆನಿತ್ತಲು ಬಱದೆ ಮಸಣದ
ಮಂದಿರದ ಮುಕ್ಕಣ್ಣನನು ಬಳಿ
ಸಂದು ಬಳಲುತ ವರ ಪರೀಕ್ಷೆಗೆ ಬೀದಿಗರುವಾಗಿ
ತಂದೆ ಕೇಳಾನಾರ ಶಿರದೊಳ
ಗೊಂದಿಸುವೆನೀ ಕರವನವದಿರು
ಬೆಂದುಹೋಗುವರೆಂಬ ವರವನು ಪಡದೆ ನಾನೆಂದ ೧೪

ಲೇಸನಾಡಿದೆ ತಂದೆ ವಿಫಲಾ
ಯಾಸನಾದೆಯಲಾ ಕರಾಗ್ರ
ನ್ಯಾಸದಲಿ ಸತ್ತವರದಾರುಂಟಕಟ ಲೋಕದಲಿ
ಈಸನಱಿಯಾ ದಕ್ಷಶಾಪದ
ಲೀಶನೆಂಬವನಂದೆ ಮಿಥ್ಯಾ
ಭ್ಯಾಸಿತನು ತಾನಾಗಿ ಮರುಳಾಗಿಹನು ಕೇಳೆಂದ ೧೫

ದಾರಿಯಲಿ ತಾ ಬರುತ ಕಂಡೆನು
ನಾರದನನರ್ಚಿಸುವಡೀಶ್ವರ
ನಾರು ಮೂವರೊಳೀವ ಕಾವ ಸಮರ್ಥರೀ ಧರೆಗೆ
ಆರು ಕರುಣಿಗಳಾ ಸುಪೋಷಕ
ರಾರು ಹೇಳೆನಲೆಂದ ನನಗೀ
ಭೀರುವನು ತೋಱದನು ಭಜನೆಗೆ ವಿಪ್ರ ಕೇಳೆಂದ ೧೬

ಮುನ್ನ ಬಾಣನು ಗಾನ ನಾಟ್ಯದಿ
ನುನ್ನತಿಯನಿವಗಿತ್ತ ಗಡ ಮುನಿ
ವರ್ಣಿಸಿದನೀತನನು ಪರಮೇಶ್ವರನು ಮೂಜಗಕೆ
ಮಾನ್ಯನೀ ಶಿವನೆಂದು ಮರುಳೆಂ
ದೆನ್ನ ಲೇತಕೆ ಹುಸಿದನೇ ಮುನಿ
ತನ್ನೊಡನೆ ಸಾಕಿನ್ನು ಹಿರಿಯರ ನಂಬಬೇಡೆಂದ ೧೭

ಶಿರಿವ ಗೊರವನ ಮಾತನೇತಕೆ
ಸೊರಹಿದಡೆ ದಿಟವೆಂಬೆ ಮರುಳನು
ಮರುಳು ಮುನಿ ಕೊಂಡಾಡಿದಡೆ ನೀನೇಕೆ ಮರುಳಾದೆ
ಸರಕು ಮಾಡೆವು ನಾವು ವಿಷವನು
ಧರಿಸಿ ಮರುಳಾದವನ ಮಾತನು
ನಿರುತ ನಂಬುವರಱಿಯಬಹುದಿನ್ನೊಂದ ಕೇಳೆಂದ ೧೮

ಪರಿಕಿಸುವಡೇನರಿದು ಕರವಿದೆ
ಶಿರವು ಇದೆ ನಿನ್ನಲ್ಲಿ ಹಸ್ತವ
ನಿರಿಸಿ ನೋಡುವುದೆನುತ ಮಸ್ತಕದಲಿ ಮಹಾದೇವ
ವರವನಿತ್ತೋಡಿದನ ಮಾತನು
ನಿರುತವೀಕ್ಷಿಸಬಹುದು ಪರಮೇ
ಶ್ವರನು ಗಡ ತನಗೋಡುಗುಳಿತನದಂಗವೇಕೆಂದ ೧೯

ಮಾಡುವರೆ ವಿಶ್ವಾಸವನು ನೀ
ಮಾಡು ನಿರ್ಮ್ಮಾಶ್ವರನಲೆವಗಿದ
ನಾಡುವರೆ ಮರುಳಾಗೆ ನಾವೆಂದವರ ಮಾತಿನಲಿ
ಓಡಿ ಬಹನೇ ವರವನೀವ ಸ
ಗಾಢ ಶಕ್ತಿಯದುಳ್ಳಡೆನಗದ
ನಾಡಲಾಗದು ಪರರ ನಿಂದೆಯನೆಂದನಸುರಾರಿ ೨೦

ಎನಲು ತಪ್ಪದೆನುತ್ತ ಜನಮೋ
ಹನ ಮುಕುಂದೋಕ್ತಿಯನು ಕೇಳುತ
ದನುಜಪತಿ ಮತಿಗೆಟ್ಟು ಮಸ್ತಕದಲಿ ಕರಾಂಜಲಿಯ
ಜನಪ ಕೇಳಿರಿಸಿದನು ಭದ್ರಾಂ
ಜನಗಿರಿಯ ಶಿರ ವಜ್ರಹತಿಯಲಿ
ತೊನೆದು ಬೀಳುವವೋಲು ಬಿದ್ದನು ಭೋಂಕನವನಿಯಲಿ ೨೧

ಮೊಳಗಿದವು ದುಂದುಭಿ ವಿಮಾನಾ
ವಳಿಗಳಲಿ ಲೇಸೆನುತ ಹೂವಿನ
ಮಳೆ ಸುರಿದುದೋರಂತೆ ಸಾಱುವ ಸಾಧುವಾದದಲಿ
ಹೊಳಕಿದರು ದೇವಿಯರು ತಾಂಡವ
ದೊಳುನುಡಿಯ ಸಂಗೀತರವದಲಿ
ತಳಿತುದಿರದೆಣ್ದೆಸೆಗೆ ಜಯಜಯಜಯ ಮಹಾರಭಸ ೨೨

ಸಂಕಟವ ಪರಿಹರಿಸಿ ಬಳಿಕಾ
ಶಂಕರನನಪ್ಪಿದನು ಮನದಲಿ
ಕೊಂಕದಿರು ಕುಹಕಿಗಳು ಕೆಡುವರು ತಾವೆ ತಮ್ಮಿಂದ
ಶಂಕೆ ಬೇಡಖಿಳೇಶ್ವರಂಗಾ
ತಂಕವನು ನೆಱೆ ಮಾಡಿ ಬದುಕುವ
ಕಿಂಕರರದಾರೆನುತ ಸಂಭಾವಿಸಿದನಸುರಾರಿ ೨೩

ನಿಂದನಂತರ್ಧಾನದಲಿ ಗೋ
ವಿಂದನಾ ಗೋಪತಿ ಸಿತಾದ್ರಿಯ
ಮಂದಿರಕೆ ಪಯಣವನು ಮಾಡಿದನಧಿಕ ಹರುಷದಲಿ
ತಂದೆ ಕೇಳೀಪರಿ ಮಹೇಶ ಮು
ಕುಂದನೊಲವಿನ ಭಕ್ತವಶ್ಯತೆ
ಯಂದದಾಚರಿತಂಗಳೆಂದನು ಮುನಿ ಮಹೀಪತಿಗೆ ೨೪

ಅರಸ ಕೇಳೀಶೀರ್ಷವೋಕ್ಷದ
ಪರಮ ಪುರುಷೋತ್ತಮನ ಪಾವನ
ಚರಿತವನು ಕೃಷ್ಣಾಂಘ್ರಿಗುಣಪೀಯೂಷಭರಿತವನು
ನಿರುತ ಕೇಳುವನಾವಸಿದನಾ
ದರದಲೋದುವನಾವನವರನು
ಕರುಣದಲಿ ರಕ್ಷಿಸುವನಾ ನಿತ್ಯಾತ್ಮ ಮುರವೈರಿ ೩೫

ತೊಂಭತ್ತೊಂದನೆಯ ಸಂಧಿ ಮುಗಿಯಿತು.

## ತೊಂಭತ್ತೆರಡನೆಯ ಸಂಧಿ

ವಕ್ಷವನು ಭೃಗುವೊದೆಯೆ ಸತ್ವ ಪ
ರೀಕ್ಷೆಯಲಿ ಧರಿಸಿದನು ತೊಡವೆನೆ
ಲಕ್ಷ್ಮಿಯನು ತತ್ಪಾದಲಾಂಛನವನು ನಿಜಾಂಗದಲಿ

ಅರಸ ಕೇಳೊಂದಾಗಿ ಸತ್ರದ
ಲುರುತಪೋಧನವೃಂದವಗಣಿತ
ಪರಮ ಋಷಿಗಳ ನಿವಹ ತಡಿಯಲಿ ವರ ಸರಸ್ವತಿಯ
ನೆರೆದು ತಮ್ಮೊಳಗಾರು ಮೂದೇ
ವರೊಳು ಮುಖ್ಯರೆನುತ್ತ ಸಂಶಯ
ಕೆರವನಿತ್ತರು ಮನವನಂಗೀಕರಿಸಿ ಬಹುಮತವ ೧

ಮಿಗಿಲು ಹರಿ ಸತ್ವಾತಿಶಯದಲಿ
ಮಿಗಿಲು ಹರನಲ್ಲಲ್ಲ ಕಮಲಜ
ಮಿಗಿಲು ಶಾಂತತ್ವದಲಿ ಸರ್ವ ವರಪ್ರದಾನದಲಿ
ಮಿಗಿಲೆನುತ ಮುನಿನಿವಹ ತಲೆಯೊ
ತ್ತುಗಳಲೆಸೆದರು ತತ್ಪರೀಕ್ಷೆಗೆ
ಭೃಗುವನಟ್ಟಿದರಾತನಜಲೋಕಕ್ಕೆ ನಡೆತಂದ ೨

ಬಂದು ಸಭೆಯಲಿ ಸುರಮಹೋರಗ
ವೃಂದದೊಡ್ಡೋಲಗದ ವೈಭವ
ದಂದವನು ವರ ಪಾರಮೇಷ್ಠ್ಯದ ಸಿರಿಯನೀಕ್ಷಿಸುತ
ಎಂದಿನೋಪಾದಿಯಲಿ ಸಂಸ್ತುತಿ
ವಂದನೆಗಳನು ಮಾಡದಿರಲರ
ವಿಂದಭವನದ ಕಂಡು ಬಹಳ ಕ್ರೋಧಮುಖನಾದ ೩

ಧಗಧಗಿಸಿ ಕ್ರೋಧಾಗ್ನಿಯಲಿ ಮೈ
ದೆಗೆದು ಪುತ್ರಸ್ನೇಹ ನಿಮಿಷಕೆ
ಹೊಗೆ ಮುಸುಡಗೊಂಡೇಳುತಾತ್ಮಜ್ಞಾನ ನಿಷ್ಠೆಯಲಿ
ಬಗೆದು ತನ್ನಲಿ ತಾನೆ ತಿಳಿದನು
ಮಗನಲಾ ತಾ ಕೊಂದಡೆನ್ನನು
ನಗುವುದೀ ಜಗವೆನುತ ಸೈರಣೆಗೊಂಡನಬುಜಭವ ೪

ಬದುಕಿದೆನು ತಾನೆನುತ ಮರಳಿದು
ಪದುಮಜನ ಸಭೆಯಿಂದ ಘನ ಮಾ
ರ್ಗದಲಿ ಬಂದನು ಭೃಗು ಭವಾದ್ರಿಗೆ ಭಾವವನು ತಿಳಿದು
ವಿದಿತ ಮನದರ್ಥಿಯಲಿ ಬರಲಂ
ಕದ ಭವಾನಿಯನಿಳುಹಿ ಭವನೆ
ದ್ದಿದಿರುಗೊಂಡೊಡಹುಟ್ಟಿದನ ತಕ್ಕೈಸಲನುವಾದ ೫

ಮುಟ್ಟದಿರು ನೃಕಪಾಲ ಮಾಲೆಯು
ತೊಟ್ಟು ತದ್ಭಸ್ಮಾಂಗರಾಗವ
ನಿಟ್ಟು ಭೂತಪ್ರೇತಗಣ ಪರಿವಾರನೆಂದೆನಿಸಿ
ಬಿಟ್ಟು ಶೌಚಾಚಮನ ಪಥವನು
ಕಷ್ಟಕೃತಿಯಲಿ ನಡೆವ ನೀನೀ
ದೃಷ್ಟಿಗೋಚರವಾದುದೇ ಸಾಕೆಂದನಾ ಮುನಿಪ ೬

ಕೇಳುತುರಿಗೆದಱದವು ಮುಕ್ಕ
ಣ್ಣಾಲಿಗಳು ರೋಷಾಗ್ನಿವಿಕಟ
ಜ್ವಾಲೆಯಲಿ ಜಡೆ ಜಡಿಯೆ ಹೂಂಕರಿಸುತ್ತ ಕೈನೆಗಹಿ
ಮೇಳವೇ ತನ್ನೊಡನೆ ಫಡ ಫಡ
ಸೀಳಿ ಬಿಸುಡುವೆನೆನುತ ಕೊಂಡನು
ಶೂಲವನು ಶಶಿಮೌಳಿ ಭೂತ ಪ್ರಮಥಗಣ ಬೆದಱೆ ೭

ದೇವ ಸೈರಿಸು ಸೈರಿಸವನೀ
ದೇವನಲಿ ಕೋಪವನು ಮಾಳ್ಪುದಿ
ದಾವ ಲೆಕ್ಕ ಮಹೇಶ್ವರತ್ವದ ಗುಣದ ಗರ್ವಿಕೆಗೆ
ನಾವು ಸೋಲುವೆವಿವರಿಗಿಂದಿನ
ಭಾವಗತಿ ಬೇಱೆನುತ ಗೌರೀ
ದೇವಿಯರು ಕಾಲ್ವಿಡಿದರೀಶನನಿಱಿಯ ಬೇಡೆನುತ ೮

ವಚನದೋಷವ ನೋಡಲಾಗದು
ಸುಚರಿತರೊಳೆಂದೆನುತ ಕೈಮುಗಿ
ದಚಲಸುತೆ ಬೇಡಿದಡೆ ಬಿಟ್ಟನು ಬಹಳ ಕೋಪವನು
ಖಚರರುಘೇಯೆನಲಾತ್ಮ ತತ್ವ
ಪ್ರಚುರನಲ್ಲಿಂದಾಗಳಂತಿರೆ
ರುಚಿರ ಮಾಯಾಧೀಶ ವಿಷ್ಣುವಿನಲ್ಲಿಗೈತಂದ ೯

ತಮದ ಕೋಟಿಗೆ ಮೈಗೊಡದ ನಿ
ರ್ಗಮಿತ ರಾಜಸಗುಣದ ಸತ್ವೋ
ದ್ಗಮಿತ ಸಾಂದ್ರದ್ಯುತಿಯ ದೂರೀಕೃತ ಮನೋಗತಿಯ
ಕಮಲಸಖ ಶಶಿಪಾವಕ ಪ್ರಭೆ
ಗಮಿಸಲಱಿಯದವಿಗತಕಾಲ
ಕ್ರಮದ ವಿಷ್ಣುಪುರಕ್ಕೆ ವಿಗಡ ಮುನೀಂದ್ರನೈತಂದ ೧೦

ಹೊಕ್ಕನಪುನರ್ಭವನ ಭವನವ
ನೆಕ್ಕತುಳದಲಿ ಯೋಗಿವರನೌ
ತ್ಸುಕ್ಯದಲಿ ನೋಡುತ್ತ ನಯನಾನಂದ ಮೂರ್ತಿಗಳ
ಇಕ್ಕೆಲದ ವೈಷ್ಣವಸಭಾ ಸಂ
ಪರ್ಕಸಾಂದ್ರಸುಖಾನುಭವದಲಿ
ಕಕ್ಕುಲಿತೆ ಕೈಮಿಗಲು ಕಂಡನು ಕಮಲಲೋಚನನ ೧೧

ಅರೆದೆಱೆದ ಲೋಚನದ ಸುಸ್ಮಿತ
ಭರಿತವದನದ ಸುಪ್ರಸನ್ನಾಂ
ಬುರುಹಲಕ್ಷ್ಮಿಯ ಸಮವಿರಾಜಿತ ಮಕರಕುಂಡಲದ
ಕೊರಳ ಕೌಸ್ತುಭಹಾರಮಣಿ ಭಾ
ಸುರವರೋರುಸ್ಥಳದ ದೀಪ್ತಾ
ಧರಸರೋಜದ ಸರಸಿಜಾಕ್ಷನ ಕಂಡನಾ ಮುನಿಪ ೧೨

ಎಡದ ಮಗ್ಗುಲಲಹಿಪತಿಯ ಮೆ
ಯ್ಯೊಡಲ ಸಿರಿಮಂಚದಲಿ ನಡುವಣ
ಹೆಡೆಯ ತಲೆಗಿಂಬಿನಲಿ ಪವಡಿಸಿ ಯೋಗನಿದ್ರೆಯಲಿ
ಮಡದಿ ಲಕ್ಷ್ಮಿಯ ಮೇಲೆಸೆವ ಮೆ
ಲ್ಲಡಿಗಳಲಿ ಪರಮೇಷ್ಠಿರುದ್ರರ
ಗಡಣದೋಲಗದೊಳಗೆ ಮೆಱೆವ ಮುಕುಂದನನು ಕಂಡ ೧೩

ಅಗಣಿತಸ್ತುತಿಪಾಠ ಜಯರವ
ವಗಣಿತೋಪನಿಷದ್ವಧೂಜನ
ದಗಣಿತಾಷ್ಟವಿಭೂತಿಗಳ ಸೇವಾಮಹೋತ್ಸವದ
ಅಗಣಿತೈಶ್ವರ್ಯದಲಿ ಮೆಱೆವಾ
ಜಗದುದರನೋಲಗದ ರಹಿಯನು
ಬಗೆದು ನೋಡುತ ಬಂದನೊಯ್ಯನೆ ಮುಂದೆ ಮುನಿನಾಥ ೧೪

ಇದಿರನಱಿಯದನಂತೆ ಸಿರಿಮಂ
ಚದಲಿ ಪವಡಿಸಿ ಯೋಗನಿದ್ರಾ
ಸ್ಪದನೆನಿಪ ಪರಮಾತ್ಮನನು ಕಾಣುತ್ತ ವೇರುರವ
ಒದೆದನೆಂತುಟೊ ಮಝು ಮಹಾತ್ಮನ
ಹೃದಯ ಶುದ್ಧಿಯದೇನೆನುತ ಗದ
ಗದಿಸಲೋಲಗವೆದ್ದನಾಕ್ಷಣದಲಿ ಮುರಧ್ವಂಸಿ ೧೫

ಅಹಹ ತಪ್ಪಾಯ್ತುಕಟ ತನ್ನಲಿ
ಮಹದತಿಕ್ರಮದೋಷ ನೀವೈ
ತಹುದನಱಿಯದೆ ಪವಡಿಸಿದ್ದೆವು ಪಾರವಶ್ಯದಲಿ
ವಿಹಿತವಭ್ಯುತ್ಥಾನ ಸತ್ಕೃತಿ
ಗೃಹಕೆ ಬರೆ ಹಿರಿಯರಿಗೆ ಸದನು
ಗ್ರಹವಲಾ ಸಕಲದಲಿ ನಿಮ್ಮಡಿಯೆಂದನಸುರಾರಿ ೧೬

ಎನುತೆನುತ ಸಿರಿಸಹಿತ ಕರುಣಾ
ವನಧಿ ಮಂಚವನಿಳಿದು ಹಿಡಿದನು
ಮುನಿಯ ಪದವನು ಕುಳ್ಳಿರಿಸಿ ಶೇಷಾಸನಾಗ್ರದಲಿ
ವಿನಯದಲಿ ಮೈಯಿಕ್ಕಿದನು ಮುನಿ
ಮನಕೆ ಮೈಗೊಡದಧಿಕ ಗುರುವೆಂ
ದೆನಿಪ ಪರಮೇಶ್ವರನು ಬಿನ್ನಹಮಾಡಿದನು ಮುನಿಗೆ ೧೭

ಕ್ಷಮಿಸಬೇಹುದು ಮುನಿಪ ತನ್ನ
ಕ್ರಮವನಾಸನದಲ್ಲಿ ಕುಳ್ಳಿರು
ನಿಮಿಷಮಾತ್ರ ಮಹಾತ್ಮ ನಿನ್ನಂಘ್ರಿಗಳ ತೀರ್ಥದಲಿ
ಗಮಿತಕಿಲ್ಬಿಷನಾದೆನಿನ್ನಪ
ಗಮಿಸುವಳೆ ಮಹಲಕ್ಷ್ಮಿಯುರದಿಂ
ದಮಿತ ಗುಣಗಣಪಾತ್ರನಾದುದು ತನ್ನ ತನುವೆಂದ ೧೮

ಧರೆಯ ತೀರ್ಥಂಗಳನು ತೀರ್ಥೀ
ಕರಿಸುವೀ ನಿನ್ನಂಘ್ರಿರಜವನು
ಕರುಣಿಸಿದೆ ಪಾವನವ ಮಾಡಿದೆ ಜಠರಭುವನವನು
ಸ್ಥಿರ ಚರ ಪ್ರಾಣಿಗಳನಖಿಳಾ
ಮರರು ಸಹಿತ ಕೃತಾರ್ಥನಾದೆನು
ಪರಮ ಯೋಗಾರೂಢ ಪದ ಸಂಗದಲಿ ತಾನೆಂದ ೧೯

ಸದಮಳನೆ ಪಾವನವೆನಿಪ್ಪೀ
ಪದಪಯೋಜದ ಲಾಂಛನವಿದೆ
ನ್ನೆದೆಯಲೊಪ್ಪಿರಬೇಹುದಿದನೇ ಬೇಡಿಕೊಂಡೆನಲ
ವಿದಿತವೆನೆ ಸಿರಿವತ್ಸವೆಂಬ
ಭ್ಯುದಯವೆಸರಲೆನುತ್ತ ಕರುಣಾ
ಸ್ಪದನು ಮೆಱೆದನು ಭಕ್ತ ಭಕ್ತನೆನಿಪ್ಪ ನಿಜಗುಣವ ೨೦

ಕೇಳುತಿದ್ದನು ಮುನಿಪನಾ ಶ್ರೀ
ಲೋಲನಮಳೋಕ್ತಿಯನು ಬಾಷ್ಪವಿ
ಲೋಲ ಲೋಚನನಾಗಿ ಪುಳಕೋದ್ಭಿನ್ನಗಾತ್ರದಲಿ
ತೂಳುವಂತರ್ಮನದ ಸಮ್ಮತ
ದೇಳಿಗೆಯ ತಾದಾತ್ಮ್ಯಸುಖ ಸ
ಮ್ಮೀಲಿತಾವಿದ್ಯಾಪ್ರಪಂಚಜ್ಞಾನದೃಷ್ಟಿಯಲಿ ೨೧

ಉಸುರಲಱಿಯದೆ ಮುನಿಪ ತತ್ಪರ
ವಶತೆಯಲಿ ತಲೆವಾಗಿ ಹರಿಪದ
ವಿಸರುಹಕೆ ವೈಕುಂಠ ಪುರವರದಿಂದ ಹೊಱವಂಟು
ಅಸಮಸಂತೋಷದಲಿ ಬಂದನು
ಬಿಸಜನಾಭನ ಭಕ್ತನಾ ಮುನಿ
ವಿಸರದಲಿ ಹೇಳಿದನು ನಿಜವೃತ್ತಾಂತಸಂಗತಿಯ ೨೨

ಆಸಕಲಋಷಿನಿಕರ ಭೃಗುಮುನಿ
ಭಾಷಿತವನಾಲಿಸುತ ಪುಳಕಾ
ವೇಶದಲಿ ತನು ಮುಳುಗಿ ವಿಸ್ಮಿತರಾದರಡಿಗಡಿಗೆ
ಆ ಸರೋರುಹಭವನ ಗಿರಿಶನ
ರೋಷವನು ಮತ್ತಾ ಮನೋಹರ
ವಾಸುದೇವನ ಪರಮಕಾರುಣ್ಯವನು ನೆನೆನೆನೆದು ೨೩

ಮೂಱು ಗುಣಭೇದದಲಿ ತೋರ್ಪವು
ಮೂಱು ತನುಗಳು ರಾಜಸಾಸುರ
ವೀರಸುರರೆಂದಿಂತು ಮಾಯಾಧೀಶ್ವರೇಶ್ವರಗೆ
ಸಾರವದಱೊಳು ಸತ್ವ ಗುಣವಾ
ಧಾರಭೂತವು ಜಗಕೆ ತತ್ವವಿ
ಚಾರ ಸಾಧನವಾಯ್ತು ಸಕಲ ಮುಮುಕ್ಷುಸಂತತಿಗೆ ೨೪

ಅದುವೆ ತತ್ವಜ್ಞಾನ ವೈರಾ
ಗ್ಯದ ತವರ್ಮನೆ ಸಿರಿಯ ಸೌಭಾ
ಗ್ಯದ ನಿವಾಸಸ್ಥಾನವಷ್ಟೈಶ್ವರ್ಯಸಿದ್ಧಿಗಳ
ಉದುಭವಾವನಿ ಭೂರಿ ಕೀರ್ತಿಯ
ಸದನ ಸಕಲಾಘೌಘನಾಶನ
ವದುವೆ ಸಾಕ್ಷಾದ್ವಿಷ್ಣುಪದವೆಂದರು ಮಹೋತ್ತಮರು ೨೫

ವಾದುಗುಟ್ಟಲದೇಕೆ ನಿಶ್ಚಯ
ವಾದುದಿದೆಲಾ ಜಗದಧೀಶ್ವರ
ರಾದ ಮೂದೇವರೊಳು ವಿಷ್ಣುವೆ ಮುಖ್ಯತಮನೆಂದ
ಭೇದವಿಲ್ಲದೆ ಕಾಂಬುದುತ್ತಮ
ರಾದವರು ಸರ್ವಾತ್ಮಕನು ಗುಣ
ಭೇದ ಭಿನ್ನಾಕಾರವಾಗಿಹನೆಂದು ನೆರೆ ತಿಳಿದು ೨೬

ಒದೆಸಿಕೊಂಡುರದಲಿ ನಿಜಾಶ್ರಿತ
ಪದವ ಧರಿಸುವ ದೈವವನು ಭುವ
ನದೊಳು ಕಂಡವರುಂಟೆ ಹರಹರ ಮಹಾದೇವ
ವಿದಿತವಾಯ್ತಿನ್ನೇನು ಕರುಣಾ
ಸ್ಪದನು ಮುರಹರನೆಂದು ತದ್ಭಾ
ವದಲಿ ನಿಂದುದು ಸಕಲಮುನಿಜನವಂದು ಮೊದಲಾಗಿ ೨೭

ಹೋಗಿ ವರ ಶುಕಮುಖ ಸರೋರುಹ
ಸಾಗರೋದ್ಗತ ಪರಮಪಾವನ
ಭೋಗಿಶಯನ ಚರಿತ್ರಸುಧೆಯಿದನಾವನಡಿಗಡಿಗೆ
ರಾಗಮಿಗೆ ಸೇವಿಸುವನಾತಂ
ಗಾಗುತಿಹುದಚ್ಯುತನೊಲವು ಭವ
ರೋಗಹರವೆಂದೆನಿಪುದಿದು ನಿತ್ಯಾತ್ಮನೊಲವಿನಲಿ . ೨೮

ತೊಂಭತ್ತೆರಡನೆಯ ಸಂಧಿ ಮುಗಿಯಿತು.

# ತೊಂಭತ್ತ ಮೂರನೆಯ ಸಂಧಿ

ಮತಿಗಗೋಚರವೆನಿಪ ವಿಮಳಾ
ಚ್ಯುತನ ಪದವನು ಬೋಧಿಸುವವೊಲು
ಶ್ರುತಿಗಳಾರೋಪಿಸಿದವೀಶ ಪ್ರಕೃತಿಯಲಿ ಗುಣವ

ಅರಸನಾ ಮುನಿಪತಿಯನೆಂತೈ
ಪರಕೆ ಪರವೆಂದೆನಿಪ ಮತಿ ಗೋ
ಚರಿಸದಮಳ ಬ್ರಹ್ಮದಲಿ ಗುಣಕಾರ್ಯವೃತ್ತಿಗಳು
ಚರಿಸುವುದು ಶ್ರುತಿನಿಕರವೆನಗಿದ
ನಱಿಯಬಾರದೆನುತ್ತ ಬೆಸಗೊಳ
ಲುರು ದಯಾನಿಧಿ ಕರುಣಿಸಿದನವನೀಶಗುತ್ತರವ ೧

ಅರಸ ಕೇಳಾದಿಯಲಿ ತತ್ತ್ವೇ
ಶ್ವರವನಾಗಮಸಹಿತ ಪರಮೇ
ಶ್ವರನು ಸೃಜಿಸಿದನಾತ್ಮತತ್ವವ್ಯಾಪ್ತಿಯನು ಬಯಸಿ
ಹರಹಿನಲಿ ಸುಳಿದಾಡಲಂಗೀ
ಕರಿಸಿ ಗುಣವನು ಮಾಯೆಯನು ಸಂ
ಚರಿಸಲಾದುದು ಶ್ರುತಿಗಳಿಂಗವಸರ ಚಿದಾತ್ಮನಲಿ ೨

ಇದಱಲೊಂದಿತಿಹಾಸ ಕಥೆ ಪೂ
ರ್ವದಲಿ ನಾರಾಯಣನ ಮುನಿ ನಾ
ರದನ ಸಂಭಾಷಣೆಯ ರೂಪವಲೆಸೆವುದಂತದನು
ವಿದಿತವೆನಲಭಿವರ್ಣಿಸುವೆನೊಂ
ದು ದಿನ ವೈಷ್ಣವ ಮೌಳಿಮಣಿ ಕೇ
ಳಿದನು ನಾರಾಯಣನನೀಯರ್ಥವನು ವಿನಯದಲಿ ೩

ಆ ಮಹಾಮುನಿಜನಕಳಾಪ
ಗ್ರಾಮಜನದೋಲಗದಲಖಿಳ
ಕ್ಷೇಮಕಾರಣ ಮೂರ್ತಿ ನಾರಾಯಣನು ಮನವೊಲಿದು
ಪ್ರೇಮದಲಿ ನಸುನಗುತ ಭಕ್ತನು
ಹಾಮಹೋದಧಿಗೆಂದನಾತ್ಮಾ
ರಾಮ ಯೋಗಿಪ್ರಣತಪದಸರಸಿರುಹನುತ್ತರವ ೪

ಪದುಮಭವಸಂಭವನೆ ಕೇಳೊಂ
ದು ದಿನ ಸನಕಾದಿಗಳು ಜನ ಲೋ
ಕದಲಿ ವಿಮಳ ಬ್ರಹ್ಮಸತ್ರ ಸಮಾಜವಾಗಿರಲು
ವಿದಿತ ತತ್ವಜ್ಞಾನಶಾಸ್ತ್ರದ
ಹೃದಯವಱವಾಲೋಚನೆಯಲಾ
ದುದು ಮಹಾತ್ಮರ ನೆರವಿಯಲಿ ತಮ್ಮೊಳಗೆ ಸಲ್ಲಾಪ ೫

ಇಲ್ಲ ನೀನದಱೊಳಗೆ ಲಕ್ಷ್ಮೀ
ವಲ್ಲಭನ ದುಗ್ಧಾಬ್ಧಿಮಂದಿರ
ದಲ್ಲಿಗೈದಿದ ಹೊತ್ತು ತಮ್ಮೊಳಗಾಯ್ತು ಸಂವಾದ
ಬಲ್ಲವರು ತಾವಾಗಿ ಮುನಿವರ
ರೆಲ್ಲ ಸಂಕಲ್ಪಿಸಿದರಪ್ರತಿ
ಮಲ್ಲನನು ವಕ್ತೃತ್ವಪದವಿಯಲಾ ಸನಂದನನ ೬

ಹೇಳಿದನು ಮುನಿನಾಥನಾ ಮುನಿ
ಜಾಲವನು ನೆಱೆ ನೋಡಿ ತತ್ವದ
ಕೀಲಣಗೆಯೆಂದೆನಿಪ ವೇದಾಂತೋದಿತಾರ್ಥವನು
ಕೇಳಿರೈ ಶ್ರುತಿನಿಕರ ವರಭೂ
ಪಾಲನನು ವಂದಿಗಳು ಬೆಳಗಹ
ಕಾಲದಲಿ ಕೇಳಿಸುವ ಪರಿ ಪರಮಾತ್ಮನೊಳಗೆಂದ ೭

ಲೋಕಸೃಷ್ಟಿ ಸ್ಥಿತಿ ಲಯಾಖ್ಯಾ
ನೇಕ ಶಕ್ತಿಪ್ರಕರವನು ಜಠ
ರೀಕರಿಸಿ ಜಗದೇಕನಾಥನನಂತಶಯನದಲಿ
ಏಕನದ್ವಯನಾತ್ಮ ತತ್ವವಿ
ವೇಕ ನಿದ್ರಾಮುದ್ರನಾಗಿರ
ಲಾ ಕೃತಿಯನಭಿವರ್ಣಿಸಿದವೀ ಶ್ರುತಿಗಳಚ್ಯುತನ ೮

ಜಯ ಜಯಾರ್ಜಿತ ದೇವಶಕ್ತಿ
ತ್ರಯವಿಹಾರವರೇಣ್ಯ ಮಾಯಾ
ಶ್ರಯ ನಿಜಾತ್ಮಾವಾಪ್ತ ಸಕಲೈಶ್ವರ್ಯ ಸಂಪದನೆ
ಜಯಜಯಾ ರಕ್ಷೈಕಲೋಕ
ಕ್ಷಯನಿಮಿತ್ತಗುಣಾನ್ವಿತನೆ ನಿ
ದ್ರೆಯನು ನೂಕುವುದೀಕ್ಷಿಸುವುದೆಮ್ಮುವನು ಕರುಣದಲಿ ೯

ಅನುಸರಿಸುವುದು ನಿಗಮ ಮಾಯಾ
ತನುವಿಡಿದು ನೀನಿರಲು ತೋರ್ಪುದು
ಚಿನುಮಯ ಬ್ರಹ್ಮಾತ್ಮಕವು ಬೇಱಿಲ್ಲ ಮೂಜಗದ
ಜನನ ರಕ್ಷಾ ನಾಶ ಹೇತುವೆ
ನಿನಗದಿಲ್ಲ ಘಟಾದಿ ವಿಕೃತಿಯು
ಜನನಹೇತುವೆನಿಪ್ಪ ವೃತ್ತಿಕೆಗಿಲ್ಲವೆಂತಂತೆ ೧೦

ಇಲ್ಲ ನಿನ್ನಿಂದನ್ಯವದಱಿಂ
ದೆಲ್ಲ ನೀನೆಂದಱಿದು ದಿಟ ನಿ
ನ್ನಲ್ಲಿ ಋಷಿಗಳು ತನುಮನೋವಚನ ಪ್ರವೃತ್ತಿಗಳ
ಎಲ್ಲವನು ನೆಲೆಗೊಳಿಸಿದರು ನಿ
ನ್ನಲ್ಲಿ ಗತಿ ನೀನೆಂದು ಧರಣಿಯ
ಲಲ್ಲದೀ ನರರಂಘ್ರಿಗಳು ಸಂಚರಿಸಲೆಡೆಯುಂಟೆ ೧೧

ಅದು ನಿಮಿತ್ತವಘೌಘ ಮಂಗಳ
ದುದಯವೈ ಭಗವತ್ಕಥಾಮೃತ
ನದಿಯಲೋಲಾಡುತ್ತ ಕಳೆವರು ಸೂರಿಗಳು ಭವವ
ಹೃದಯ ಕಾಲಗುಣಂಗಳನು ಕೆಡೆ
ಯೊದೆದು ತತ್ತ್ವೋಪಾಸಕರು ನಿಜ
ಪದವನೈದುವರೆಂಬುದೇನಚ್ಚರಿಯೆ ಸುಖಮಯವ ೧೨

ತ್ರಿದಶನುತ ನಿನ್ನವರಿ ನೆಱೆ ಬದು
ಕಿದವರಲ್ಲದೆ ಮರ್ತ್ಯರುಸುರಿ
ಕ್ಕಿದರೆ ಸಿದ್ಧಿಯದೇನು ತಿದಿಯಂದದಲಿ ಬಾಹಿರರು
ವಿದಿತವುಂಟೇ, ಬೇಱೆ ಗತಿ ಸೃಜಿ
ಸಿದವು ಮಹದಾದಿಗಳದಾವನ
ಸದಮಳಾನುಗ್ರಹದಲೀ ಬ್ರಹ್ಮಾಂಡ ಮಂಡಲವ ೧೩

ಅನ್ನಮಯ ಮೊದಲಾದ ಕೋಶವಿ
ಭಿನ್ನ ಪಂಚಕದೊಳಗೆ ಪುರುಷವಿ
ದನ್ವಯದಲವರಾಂಶವೆನಿಪಾನಂದಮಯ ನೀನು
ಅನ್ನಮಯ ಪಂಚಕವ ಹೊದ್ದದ
ನನ್ನಿ ನೀನೈದಱೊಳು ಬೆರಸದ
ನನ್ಯ ಚೈತನ್ಯಾತ್ಮಕನು ಸರ್ವಾವಶೇಷಿತನು ೧೪

ಕೆಲರು ಕರ್ಮಪ್ರೌಢರುದರಾ
ನಳಸುಷುಮ್ನಾ ಹೃದಯದಹರಂ
ಗಳನು ಭಜಿಸುವರರುಣ ಮುಖ್ಯಾಮರರ ಸೇವಕರು
ತೊಳಲುವರು ಭವದೊಳಗೆ, ನಿನ್ನಯ
ನೆಲೆಯೆನಿಪ ತುರಿಯನನುಗಮಿಸಿದ
ಡಿಳಿಯಲಱವರೆ ಬಳಿಕ ಘೋರಕ್ರಾಂತವದನದಲಿ ೧೫

ಸಲೆ ಸೃಜಿಸಿ ನೀನೇ ಉಪಾಧಿ
ಸ್ಥಳಗಳನು ಹೊಕ್ಕಂತೆ ಹಮ್ಮಿನ
ಬಳಕೆಯಲಿ ಸಂಭಿನ್ನವೆನಿಸುವೆ ತಾರತಮ್ಯದಲಿ
ಹೊಳೆದು ಕಾಷ್ಠಾನಲನವೋಲಳಿ
ವಳಿವಿನಲಿ ಕೆಡದೇಕರಸವಹ
ಸುಲಭ ನಿನ್ನೀ ನಿಜವನಱವರು ತತ್ವಕೋವಿದರು ೧೬

ಪುರುಷನೆನಿಸುವೆ, ನೀನು ಸೃಜಿಸಿದ
ಪುರವಿಭೇದದಲಿದ್ದ ಕಾರಣ
ಕರಣಸಾಕ್ಷಿಕನಾಗಿ ಹೊಱಗೊಳಗಿಲ್ಲವಾವರಣ
ಪುರವನದನೊಡೆಮೆಟ್ಟಿ ನಿನ್ನನು
ಬೆರಸುವರು ಬಲ್ಲವರು ನಿಗಮೋ
ತ್ಕರ ನಿರಂತರ ಗೀತ ಭವದೀಯಾಂಘ್ರಿಸೇವಕರು ೧೭

ದುರವಬೋಧ ನಿಜಾತ್ಮ ತತ್ವವ
ನಱಪಲೆಂದೊಡಲಿಟ್ಟು ಸಲೆ ಸಂ
ಚರಿಸುತಿರೆ ನಿನ್ನಮಳ ಚರಿತಕಥಾಮೃತಾಬ್ಧಿಯಲಿ
ನಿರುತ ರಮಿಸಲು ಬಲ್ಲ ನಿಜಪದ
ಶರಣಸಂಗದಲಿತರ ಸುಖವನು
ಮಱೆದವರು ಬಯಸುವರೆ ಮೋಕ್ಷಪವರ್ಗಸಂಪದವ ೧೮

ತ್ವದನುಪಥವೆಂದೆನಿಸುವೀ ದೇ
ಹದಲಿ ಸಹಿತ ಸುಹೃತ್ಪ್ರಿಯ ಪ್ರೇ
ಮದಲಿ ನುಡಿವರು ಭಕುತಿಸುಖ ತನುವುಳ್ಳಡುಂಟೆಂದು
ವಿದಿತ ನಿನ್ನಲದೆಂತುಟೊ ಪ್ರೇ
ಮದ ಸಗಾಢಿಕೆ ರಮಿಸದಿದು ದು
ರ್ಹೃದಯರಕಟ ನರಕಗಾಮಿಗಳಾತ್ಮಘಾತಕರು ೧೯

ಸೇರುವರು ಮುನಿವರರು ನಿಯಮಿತ
ಮಾರುತಾತ್ಮೇಂದ್ರಿಯದಲೀ ನಿಜ
ಚಾರುಚರಣಾಂಬುಜವನಂತರ್ಭಾವದಲಿ ನೆನೆದು
ವೈರದಲಿ ವೈರಿಗಳು ಕಾಮು ವಿ
ಕಾರದಲಿ ನಾರಿಯರು ನಯದಲಿ
ನಾರದಾದ್ಯರು ಪಡೆವೆವಾವಭಿವರ್ಣಿಸುತ ನಿಜನ ೨೦

ಉದಿಸಿದನು ಕಮಲಾಸನನು ನಿ
ನ್ನುದರದಲಿ ಮತ್ತಾತನಂಗದ
ಲುದಿಸಿದರಲಾ ಜಾನಕರ್ಮಾಮರರು (?) ಸಕಲವಿದು
ಉದಿಸಿದಲ್ಲಿಂದತ್ತಲಿಹ ನಿಜ
ಪದವನಱವವರಾರು ಲೋಕವ
ನುದರದಲಿ ಬೈಚಿಟ್ಟು ಪವಡಿಸಿ ದೇವ ನೀನಿರಲು ೨೧

ಇಲ್ಲದುದಕುತ್ಪತ್ತಿವುಳ್ಳದ
ಕಿಲ್ಲದೇನುಳ್ಳಾತ್ಮನಲಿ ತೆಱ
ಹಿಲ್ಲದವನಲಿ ತೆಱಹನೀ ವ್ಯವಹಾರ ದಿಟವೆಂದು
ಸೊಲ್ಲನುಪದೇಶಿಸುವರಜ್ಞರು
ಬಲ್ಲೆವಾವೆಂದೊಬ್ಬರೊಬ್ಬರಿ
ಗೆಲ್ಲ ಹುಸಿ ಪರಮಾತ್ಮ ನಿನ್ನಲಿ ಬೋಧರೂಪಿನಲಿ ೨೨

ಮೂಱುಗುಣದಲಿ ನಡೆವ ಮನವವಿ
ಕಾರಿಯಹ ನಿನ್ನಲ್ಲಿ ದಿಟವೆನೆ
ತೋಱುವದು ವಿಶ್ವಾಕೃತಿಯ ನಾಟಕವನನುಕರಿಸಿ
ತೋಱಿದರೆ ಬೇಱಿಲ್ಲ ಕನಕವಿ
ಕಾರ ಕನಕವೆಯಹವೊಲಾತ್ಮ ವಿ
ಚಾರನಿಪ್ಪರು ಕಾಬರೆಲ್ಲವನಾತ್ಮಮಯವೆಂದು ೧೩

ಸಲೆ ಸಮಸ್ತಾತ್ಮಕನು ನೀನೆಂ
ದೊಲಿದು ಭಜಿಸುವ ನರರು ಕಾಲನ
ತಲೆಯನೊದೆವರು ನಿರ್ಭಯರು ತಾವಾಗಿ ಮಿಕ್ಕವರು
ಹೊಲಬುಗೆಡುವರು ನಿನ್ನ ಮಾಯೆಯ
ಬಲೆಯಲಿ ನಿಜಗುಣಪರಾಙ್ಮುಖ
ರಿಳೆಗೆ ಪಾವನಭೂತರೀ ನಿನ್ನಂಘ್ರಿಸೇವಕರು ೧೪

ಪರಮಪುರುಷನು ಸಕಲ ಜಗದೀ
ಶ್ವರನು ನೀನುಳಿದಖಿಳ ವಿಬುಧೇ
ಶ್ವರರು ಸರಸಿಜಭವಭವಾದ್ಯರು ದೇವ ನಿಮ್ಮಡಿಯ
ಚರಣಸೇವಕರಾಗಿ ವಹಿಸುವ
ರಿರದೆ ಬಲಿಯನು ಸಕಲ ಪೃಥ್ವೀ
ಶ್ವರನ ಪದವನು ಭಜಿಸಿ ಬದುಕುವ ಮಂಡಳಿಕರಂತೆ ೧೫

ಹೂಡುವಳು ಸಚರಾಚರದ ಜಗ
ವಾಡುವವೊಲೀ ಜೀವನಿಕರವ
ಕೂಡುವಳು ಕುಱುಹಿಟ್ಟು ತತ್ತದುಪಾಧಿಭೇದದಲಿ
ಝೂಡಿಸುವಳಲಸಿದಡೆ ಮಾಯಾ
ಜೋಡೆ ನಿನ್ನಾಜ್ಞೆಯಲಿ ನೀನಿದ
ನೋಡಿ ನೋಡದ ಕೂಡಿ ಕೂಡದೆ ಮೆಱೆವ ನಭದಂತೆ ೧೬

ಅಪರಿಮಿತರೀ ಜೀವರಾಗಿ
ದ್ದುಪಚಯಾದಿ ವಿಹೀನರಾದರೆ
ಸುಪರಿಭಾಷ್ಯರದಾರಧೀಶ್ವರತಾಪ್ರಸಂಗದಲಿ
ಲುಪುತವಾಗದೆ ಶಾಸ್ತ್ರ ಲೋಕವಿ
ದಪಿಚ ಮುಖ್ಯ ನಿಯಂತ್ರಕಲ್ಲದೆ
ವಿಪುಳವಹುದೆಂತೀ ವಿಧಿಪ್ರತಿಷೇಧ ರಚನೆಗಳು ೧೭

ಉದಿಸುವುದು ಜೀವೌಘ ಜಲಬು
ದ್ಬುದದವೋಲೀ ಪ್ರಕೃತಿಪುರುಷರ
ಹುದುವೆಳಸಿನುತ್ಸಾಹದಲಿ ಸಂಭಿನ್ನಭಾವದಲಿ
ವಿದಿತವೆನೆ ನಿನ್ನಂಘ್ರಿಕಮಲಾ
ಸ್ಪದದಲಳಿವವು ಜಲಧಿಗೈದಿದ
ನದಿಗಳಂತೆ ರಸಾವಳಿಗಳಳಿವಂತೆ ಮಧುವಿನಲಿ ೧೮

ಮರ್ತ್ಯರಲಿ ನಿನ್ನೊಂದು ಮಾಯಾ
ಚಿತ್ತವಿಭ್ರಮವೆಂಬುದನು ಬ
ಲ್ಲುತ್ತಮರು ಭಜಿಸುವರು ನಿನ್ನನು ಭವಭವಂಗಳಲಿ
ಭಕ್ತರಾದವರಿಂಗೆ ಬಳಿಕೀ
ಮೃತ್ಯುಭಯವೆಲ್ಲಿಯದು ಮಱೆದರೆ
ತುತ್ತುಗೊಂಬನು ಕಾಲನಂಜುವನೀ ಭವತ್ಪದಕೆ ೧೯

ಕೆಲರು ವಿಜಿತಪ್ರಾಣ ಕರಣಂ
ಗಳಲಿ ಮನವನು ತಮ್ಮ ವಶದಲಿ
ನಿಲಿಸಲೆಂದುದ್ಯೋಗಿಸುವರನುಪಾಯಕೋವಿದರು
ಮುಳುಗುವರು ದುಸ್ತರಭವಾರ್ಣವ
ದೊಳಗೆ ತಾರಕವೆನಿಪ ಗುರುಪದ
ಜಲರುಹದ ನಾವೆಯನು ನೆಱೆ ನಂಬದ ದುರಾತ್ಮಕರು ೨೦

ನೀನಿರಲು ಗುರುದೇವತಾತ್ಮ
ಜ್ಞಾನಸುಖಮಯನೆನಿಸಿ ಮಿಕ್ಕ ಜ
ನಾನುರಾಗದಲೇನು ಫಲವೀ ಪುತ್ರಬಾಂಧವರ
ಮಾನವರು ಬಹುದುಃಖಮೂಲ
ಸ್ಥಾನವಧ್ರುವವೆನಿಪ ಗೃಹದಭಿ
ಮಾನದಲಿ ಕುದಿಕುದಿದು ಕೆಡುವರು ಬಱಿದೆ ಸುಖವೆಂದು ೨೧

ಧರೆಗೆ ಪಾವನವಮಳ ತೀರ್ಥೋ
ತ್ಕರಗಳಾ ತೀರ್ಥಕ್ಕೆ ತೀರ್ಥೀ
ಕರಣಭೂತರು ಪರಮಋಷಿಗಳು ಪರಮಋಷಿಗಳಿಗೆ
ಪರಮಪಾವನಹೇತು ದೇವರ
ಚರಣಕಮಲಸ್ಮರಣೆಯಿದರಂ
ತರವನಱಿಯದು ಮೂಢಜನವಕಟಕಟ ಮತಿ ಮಱೆದು ೨೨

ಅಱಿದು ಮಱಿದೇ ಮೇಣದಾವನ
ಚರಣಕಮಲಸ್ಮರಣೆ ನರರಿಗೆ
ದೊರೆಕಿದಡೆ ಮೇಣೊಮ್ಮೆ ಬೇಯವೆ ದುರಿತಕೋಟಿಗಳು
ಸಿರಿಗೆ ನೆಲೆವನೆ ಯೆನಿಸುವಾ ನೀ
ನಿರಲು ನಿನ್ನವರಕಟ ಹುಗುವರೆ
ಪುರುಷರಾಯುಸ್ಸತ್ವಬಲಹರವೆಂದೆನಿಪ ಗೃಹವ ೨೩

ಸತ್ತಿನಲಿ ತೋರ್ಪಖಿಳ ಜಗವಿದು
ಸತ್ತಹಡೆ ಕೇಡೆಂತು ತೋರ್ಪುದ
ಸತ್ತೆನಲು ತಾ ತೋರ್ಪುದೇನದು ಕುಸುಮರಸದಂತೆ
ಸತ್ತು ಮೇಣಿದಸತ್ತು ಸಲೆ ಸದ
ಸತ್ತು ತಾನೀ ಜಗವಿದೆಂಬಡೆ
ಯುಕ್ತಿ ಸಹವಲ್ಲರಸತರ್ಕ್ಯಭ್ರಾಂತಿತೋರ್ಕೆಯಿದು ೨೪

ಇಲ್ಲ ಜಗವಿದು ಪೂರ್ವದಲಿ ಬಳಿ
ಕಿಲ್ಲ ಲಯದಿಂ ಮೇಲೆ ಮಧ್ಯದ
ಲುಳ್ಳವೋಲ್ತೋಱಿತ್ತು ನಿನ್ನಲಿ ಪೂರ್ಣರೂಪನಲಿ
ಇಲ್ಲ ಕಾರಣ ಪರಕೆ ಗುರುಕೃಪೆ
ಯುಳ್ಳವರು ಹುಸಿಯೆಂದು ತತ್ವವ
ಬಲ್ಲವರು ಬೆದಕುವರೆ ಮನದ ವಿಳಾಸವೆಂದಱಿತು ೩೫

ಕಾರಣೋಪಾಧಿಯಲಹಂಕೃತಿ
ಸೇರಲೀಶ್ವರನೆನಿಸಿ ಸಲಹುವೆ
ಭೂರಿ ಜಗವನು ಸನ್ನುತಾಷ್ಟೈಶ್ವರ್ಯವಿಭವದಲಿ
ಕಾರಿಯದಲಾನೆಂದು ನೆಱೆ ಸಂ
ಸಾರ ಜೀವನೆನಿಪ್ಪೆ ಯೆರಡು ಶ
ರೀರ ಹುಸಿಯೆಂದಱಿದು ನಿಜ ಪರಮಾತ್ಮನೆನಿಸಿಪ್ಪೆ ೩೬

ಅಱಿಯದಿದನಜ್ಞಾನಮೋಹಾ
ತುರರು ಸುಖದಾಶೆಯಲಿ ಭವಸಾ
ಗರದಲಾಳುತ್ತೇಳುತಿಹರೋರಂತೆ ದುಃಖದಲಿ
ಕೊರಳಲಿರ್ದ ಮಹಾರ್ಘ್ಯರತ್ನವ
ಮಱೆದು ತೊಳಲುವನಂತೆ ನಿಜವನು
ಕರಣಸಾಕ್ಷಿ ಪರಾಮೃತಾನಂದಾತ್ಮನನು ಮಱೆದು ೩೭

ಯೋಗಿಗಳು ತಾವೆಂದು ಮನದಲಿ
ರಾಗವಿಲ್ಲದೆ ವಿಷಯವಿಹ್ವಲ
ರಾಗಿ ನಗಿಸುವರಿಳೆಯನುಭಯಭ್ರಷ್ಟರೆಂದೆನಿಸಿ
ಹೋಗಿ ದೇಶಂಗಳಲಿ ತಿರಿದುದ
ಬಾಗಿಲಲಿ ಬೀಳಿಕ್ಕುವಂತಿರೆ
ಯೋಧಗತಿಗೀಡೇಱದಿಳಿವರು ಮೃತ್ಯುವಿನ ಮುಖಕೆ ೩೮

ಬೀಳರಂತಕನುರಿವ ವದನ
ಜ್ವಾಲೆಯಲಿ ಭವದುಃಖಜಲಧಿಯ
ಲಾಳರಜರುದ್ರಾಮರೇಂದ್ರಾದಿಗಳ ಪದವಿಗಳ
ಕಾಲಹುಡಿಯೆನೆ ಬಿರಿದು ಬಿಸುಟು ವಿ
ಶಾಲನೆನಿಸುವ ನಿನ್ನ ಪದದಲಿ
ಕಾಲಿಡುವ ಕೃತಪುಣ್ಯರೇ ಪಾವನರು ಮೂಜಗಕ್ಕೆ ೩೯

ಅವರೆ ಪುಣ್ಯಾತ್ಮಕರು ಪಾವನ
ರವರೆ ಭುಕ್ತಿವಿಮುಕ್ತಿ ಸುಖಗಳಿ
ಗವರೆ ಪಾತ್ರೀಭೂತರವರೇ ದಾಯಕರು ಧರೆಗೆ
ಅವರನುಸ್ಮೃತಿಯಿಂದ ಕೆಡುವುದು
ಭವಿಗಳಿಗೆ ಭವತಾಪವೆಲೆ ಮಾ
ಧವ ಭವತ್ಪದಕಮಲದೊಲವಹುದವರನುಜ್ಞೆಯಲಿ ೪೦

ಆರಱಿವರೀ ನಿನ್ನ ಮಹಿಮೆಯ
ನಾರಱಿವರೀ ನಿನ್ನ ಭಕ್ತರ
ಭೂರಿ ಭಾಗ್ಯೋದಧಿಯ ನೆಲೆಯನಜಾಂಡಕೋಟಿಗಳು
ಆರಲಾಡುವವಣುವಿನಂತವಿ
ಕಾರಿ ನಿತ್ಯಸುಖಾತ್ಮನಲಿ ಮ
ತ್ತಾರಱಿವರೆಲೆ ದೇವ ನಿನ್ನವರಲ್ಲದೀ ನಿಜವ ೪೧

ಮತಿಗಗೋಚರವಾಗಿ ನೆಱೆಯವು
ಶ್ರುತಿಗಳಾವಿಷ್ಕರಿಸುವೀ ನಿ
ನ್ನತುಳ ಮಹಿಮೆಯನಾತ್ಮತತ್ವೈಕಾಂತಸಂಸ್ಥಿತಿಯ
ಅತುಳಪಾವನವೃತ್ತಿ ನಿಜಸಂ
ಸ್ಥಿತಿಯನೊರೆದೀ ಜೀವಜಗಕ
ಚ್ಯುತ ಭವತ್ಪದಲೀನವೆನಿಸುವ ವಿಶ್ರುತಿವ್ರಾತ ೪೨

ಇಂತು ಋಷಿಗಳು ತಮ್ಮೊಳಗೆ ವೇ
ದಾಂತ ತತ್ವಸುನಿಶ್ಚಿತಾರ್ಥಾ
ನಂತಪದವನು ಕೇಳಿ ತಿಳಿದು ಸನಂದನೋಕ್ತಿಯಲಿ
ದಾಂತಸಂಶಯರಾಗಿ ನಿಂದರು
ಸಂತಸುಖದಲಿ ಕೇಳೆನುತ್ತೇ
ಕಾಂತಭಕ್ತಂಗೊರೆದನಾ ನಾರಾಯಣನು ಮುನಿಗೆ ೪೩

ರಾಯ ವೈಷ್ಣವಮೌಳಿಮಣಿ ನಾ
ರಾಯಣನ ದಿವ್ಯೋಕ್ತಿಯಲಿ ಸಾಂ
ಶಾಯಿಕಾಸ್ಥಾನವನು ಕಳಿದು ಕೃತಾರ್ಥನೆಂದೆನಿಸಿ
ಬಾಯಿ ದಣಿಯಲು ಹೊಗಳಿ ಬೀಳ್ಕೊಂ
ಡಾಯುವಂತನು ಬಂದನಾ ದ್ವೈ
ಪಾಯನಾಶ್ರಮಕೞುಹಿದನು ಬಳಿಕಾ ಯಥಾಶ್ರುತವ ೪೪

ವರ್ಣಿಸಿದೆ ನಾನಿದನು ನಿಗಮಮ
ಹಾರ್ಣವದ ಸಾರವನು ಮನವಿದು
ದುರ್ನಿರೂಪಿತತತ್ವದಲಿ ಸಂಚರಿಸುವಂದವನು
ವರ್ಣಿಸುವನಿದನಾವನೊಲಿದಾ
ಕರ್ಣನವ ಮಾಡುವನವರ್ಗಳ
ಬೆನ್ನಲಾ ನಿತ್ಯಾತ್ಮ ಕೃಷ್ಣನು ಕಾವನನುಸರಿಸಿ ೪೫

ತೊಂಭತ್ತ ಮೂರನೆಯ ಸಂಧಿ ಮುಗಿಯಿತು.

# ತೊಂಭತ್ತನಾಲ್ಕನೆಯ ಸಂಧಿ

ಭಕ್ತಕರುಣಾಸಿಂಧು ಭಕ್ತರ
ಭಕ್ತನೆಂಬೀ ಕೀರ್ತಿಗುಣ ಸು
ವ್ಯಕ್ತವಾಗಲು ಶೌರಿ ಸಾರಥಿಯಾದನರ್ಜುನಗೆ

ಅರಸ ಕೇಳುತ್ತರಿಸಿ ಪಾಂಡವ
ಧರಣಿಪರು ವನವಾಸವನು ನೆರೆ
ದಿರಲುಪಪ್ಲಾವ್ಯದಲಿ ತದ್ವಾರ್ತಾಮಹೋತ್ಸವವ
ಧುರದಲಾ ಕೌರವನ ಸೇನೆಯ
ನೊರಸಿ ಗೋಗ್ರಹಣದಲಿ ಶೌರ್ಯವ
ಮೆಱೆದ ಸಾಹಸಶಕ್ತಿಯನು ಕೇಳಿದನು ಮುರವೈರಿ ೧

ಏನನೆಂಬೆನು ಕೇಳುತವೆ ಸು
ವ್ಯಾನ ತಳಿತುದು ಸಕಲಯಾದವ
ಸೇನೆಯಲಿ ಕೃತವರ್ಮ ಸಾತ್ಯಕ್ಯುದ್ಧವಾದಿಗಳು
ಆನುಕೂಲ್ಯದಲಾ ಸುಭದ್ರಾ
ಸೂನು ಗದಸಾರಣರು ಸಹಿತಾ
ದಾನವಾಂತಕನೊಸಗೆ ಮಿಗೆ ನಿಜಪುರವ ಹೊಱವಂಟ ೨

ಗಹಗಹಿಪ ಭೇರಿಗಳ ಬಿರುದಿನ
ಕಹಳೆಗಳ ಕಳಕಳದ ವಾದ್ಯದ
ಬಹುಳತೆಯ ಗಜವಾಜಿರಥನಿಸ್ವನದ ನಿಷ್ಠುರದ
ರಹಿ ಮಿಗಲು ರಾಜೀವನಾಭನು
ಬಹಳ ಸಂತೋಸದಲಿ ಪಾಂಡವ
ಮಹಿಪನನು ಕಂಡುಚಿತದಲಿ ಸಂಭಾವಿಸಿದನೊಲಿದು ೩

ಅವನಿಪತಿ ಕೇಳಸುರರಿಪು ಪಾಂ
ಡವರು ಕೌರವರೊಳಗೆ ಸಂಧಾ
ನವನು ಮಾಡಲು ಬಳಿಕಬಿಜಯಂಗೈಯಲಾ ಖಳರು
ಹವಣನಱಿಯದೆ ಕೃಷ್ಣನನು ಕಾ
ರವರು ಕಟ್ಟಲು ಬಗೆದರಂತಕಭ
ವನವನು ಹೊಗುವರ್ಥಿಯಲಿ ದುರಿಯೋಧನಾದಿಗಳು ೪

ಕಟ್ಟಬಂದವರಿಂಗೆ ದನುಜಘ
ರಟ್ಟನಗಣಿತ ರೂಪವನು ತ
ದ್ದೃಷ್ಟಿಗೋಚರವೆನಲು ತೋಱಿಸಿ ಭೀತಿಯನು ಬಿಡಿಸಿ
ಕೆಟ್ಟರಕಟಕಟೆನುತ ಪಾಂಡವ
ಸೃಷ್ಟಿಪಾಲರ ಹೊರೆಗೆ ಬಳಿಕಾ
ದುಷ್ಟರೆಂದುದನೆಂದನಸುರಾರಾತಿ ನಡೆತಂದು ೫

ನೆರೆದುದಗಣಿತ ರಾಯಬಲವಿ
ಬ್ಬರಿಗೆ ಏಳಕ್ಷೋಹಿಣೀಬಲ
ವೆರಸಿ ದ್ರುಪದವಿರಾಟ ಮುಖ್ಯಸಹಾಯಭೂಪರಲಿ
ಧರಣಿಪತಿ ಧರ್ಮಜನು ತಮ್ಮಂ
ದಿರುಸಹಿತ ಮುಂದಿಟ್ಟುಕೊಂಡಂ
ಬುರುಹನಾಭನನಾಹವಕೆ ವಿಸಸನಕೆ ನಡೆತಂದ ೬

ಕಾಳೆಗವನೇ ಬಯಸಿ ಬಳಿಕಾ
ಖೂಳ ದುರಿಯೋಧನನಖಿಳ ಭೂ
ಪಾಳಸಹಿತಕ್ಷೋಹಿಣಿಯ ಬಲಸಹಿತ ಹನ್ನೊಂದು
ಆಳುಕುದುರೆಯ ತೇರುಗಳ ಶುಂ
ಡಾಲಘಟೆಗಳ ಖುರಪುಟದ ಕೆಂ
ದೂಳಿಯಲಿ ದೆಸೆ ಧಾತುಗೆಡಲುಬ್ಬರದಲೈತಂದ ೭

ಒಂದು ಮತ್ಸ್ಯನೃಪಾಲನದು ಮ
ತ್ತೊಂದು ಸೇನೆಯ ನಡುವೆ ಕೇಕಯ
ನಂದನರ ಪಾಂಚಾಲಕರದಾ ದ್ರುಪದನದು ಮೂಱು
ಒಂದು ಸೈನ್ಯವು ಧೃಷ್ಟಕೇತುವಿ
ನಂದವಡೆದಕ್ಷೋಣಿ ಕುಂತೀ
ನಂದನಗೆ ನೆರವಾಯ್ತು ದ್ರುಪದಕುಮಾರಕರು ಸಹಿತ ೮

ಭ್ರಾತೃಶತ ಗುಣ ಕರ್ಣಕೃಪ ಗಂ
ಗಾತನುಜಬಾಹ್ಲಿಕರು ಸೌಬಲ
ಭೂತಳಾಧಿಪ ಮಾದ್ರಜಯದ್ರಥಾದಿಗಳು
ಖ್ಯಾತಬಲ ಕೃತವರ್ಮ ಭಗದ
ತ್ತಾತಿಬಲರಿವರಾದಿಯಾದ ಮ
ಹೀತಳಾಧೀಶ್ವರರು ಬಂದರು ಕೌರವೇಶ್ವರಗೆ ೯

ಆ ಕುರುಕ್ಷೇತ್ರದಲಿ ನೆರೆದುದ
ನೇಕ ದೇಶಾಧೀಶ್ವರರು ಕುಂ
ತೀಕುಮಾರರ ಕೌರವರ ಸಂಗರಕೆ ನೆರವಾಗಿ
ತೇಕಿದವು ದಿಗಿಭಂಗಳವನಿಗೆ
ನೂಕಿದವು ಕಡಲೇಳು ದೆಸೆಗಳ
ನೌಕಿದವು ಕೆಂದೂಳಿ ಚಾತುರ್ಬಲದ ಪದಹತಿಗೆ ೧೦

ಕ್ಷಿತಿಪ ಕೇಳುಭಯದಲಿ ಸೇನಾ
ಪತಿ ಸದೃಷ್ಟದ್ಯುಮ್ನ ಗಂಗಾ
ಸುತರೆನಲು ಸನ್ನದ್ಧವಾಯ್ತಾ ವ್ಯೂಹವೆರಡಱಲಿ
ಧೃತಕವಚಕಾರ್ಮುಕ ಶರೌಘೋ
ದ್ಧತನೆನಿಸಿ ಕಲಿಪಾರ್ಥನಮಳಾ
ಚ್ಯುತನ ಪದದಲಿ ನಮಿಸಿ ನಿಂದನು ವರರಥಾಗ್ರದಲಿ ೧೧

ಪಿತೃಸುತಪ್ರಿಯಬಂಧು ಗುರುಸಂ
ತತಿಸಹೋದರವರ್ಗವನು ಕಾ
ಣುತ ಕರಾಗ್ರದ ಧನುವನೊಯ್ಯನೆ ನಿಲಿಸಿ ರಥದೊಳಗೆ
ಮತಿ ಮುರಿದು ಕಲಿ ಪಾರ್ಥ ನರಕ
ಸ್ಥಿತಿಯಹುದು ತನಗೆನುತ ಶೋಕಾ
ನ್ವಿತನೆನಿಸಲಾತನನು ಮುರಹರನೊಲಿದು ಬೋಧಿಸಿದ ೧೨

ತಿಳಿಯದಿರಲಾತ್ಮಸ್ವರೂಪವ
ನೊಲಿದು ತೋಱಿಸಿ ಶೋಕ ಮೋಹವ
ಕಳೆದು ಕಾರುಣ್ಯದಲಿ ತತ್ವಪಥೋಪದೇಶವನು
ತಿಳುಹಿದನು ಬಳಿಕೆಂದ್ರನಂದನ
ನಲಘುಸಮರೋದ್ಯೋಗಮುಖದಲಿ
ಮೊಳಗಿಸುತ ಗಾಂಡಿವವ ಕೊಂಡನು ಸೆಳೆದು ಮಾರ್ಗಣವ ೧೩

ಎರಡು ಬಲ ಹಳಚುವುದನಾ ಹಲ
ಧರನು ಕಾಣುತ ತೀರ್ಥಯಾತ್ರೆಗೆ
ತೆರಳಿದನು ನೆಱೆ ನೋಡಲಾರದೆ ಬಾಂಧವರ ವಧೆಯ
ಧುರಕೆ ನಿಂದನು ಭೀಷ್ಮನವನಿಯ
ಕೊರಳ ಭಾರವನಿಳುಹಿ ದಿನಹ
ತ್ತಱಲಿ ಹಾಸಿನಮೇಲೆ ಪವಡಿಸಿದನು ಶರಾವಳಿಯ ೧೪

ದಳಪತಿಯ ಮಾಡಿದನು ಕುರುಪತಿ
ಬಳಿಕ ಭಾರದ್ವಾಜನನು ಕೊಳು
ಗುಳದ ಕೋಳಾಹಳವನದನೇನೆಂಬೆನದ್ಭುತವ
ಅಳಿದನದಱೊಳು ನಿನ್ನ ಪಿತನತಿ
ಬಲನೆನಿಸುವಭಿಮನ್ಯು ಫಲುಗುಣ
ನಳಲು ಮಿಗಲಧಿಕ ಪ್ರತಿಜ್ಞೆಯ ಮಾಡಿದನು ಮುನಿದು ೧೫

ನಾಳೆ ಕೊಲುವೆನು ಸಾವೆನಲ್ಲದ
ಡೇಳಿದಿಟವೇ ತನ್ನ ಬಸುಱಲಿ
ಬಾಳನುಡಿದ ಜಯದ್ರಥನನೆಂಬೊಂದು ಭಾಷೆಯನು
ಕೇಳುತಸುರಾರಾತಿ ನುಡಿಯನು
ಪಾಲಿಸಲು ಕಾಣಿಸಿದನಿರುಳಾ
ಶೂಲಪಾಣಿಯನಱುಹಿಸಿದನಸ್ತ್ರದಸಕೀಲಕವ ೧೬

ಬಳಿಕ ಮಱುದಿನ ಸಕಲಸುಭಟ
ಪ್ರಳಯವಾದುದು ಸಮರ ಕುರುಬಲ
ವಳಿದುದದರಱೊಳಗೇನನೆಂಬೆನು ಪಾರ್ಥನುರವಣೆಯ
ಬಲುಭುಜರು ಮುಗ್ಗಿದರು ಪಾರ್ಥಾ
ನಳನಬಾಣಜ್ವಾಲೆಯಲಿ ನೃಪ
ಕುಲಕುಮಾರರು ಸೂಱೆಗೊಂಡರು ಸುರವಧೂಜನವ ೧೭

ಬಾಣಧಾರೆಯಲಱಿದನಹಿತ
ಕ್ಷೋಣಿಪಾಲನ ಶಿರವನಮರ
ಶ್ರೇಣಿಯುಘೆಯೆನಲಸ್ತ್ರಮಯ ಸಮಯದಲಿ ಭಾಸ್ಕರನ
ದ್ರೋಣನೈದು ದಿನಕ್ಕೆ ವಿಗತ
ಪ್ರಾಣನಾದನು ಬಳಿಕ ಸಮರ
ಕ್ಷೋಣಿಗಧಿಪತಿಯಾಗಿ ನಿಂದನು ಕರ್ಣನುರವಣಿಸಿ ೧೮

ಎರಡನೆಯ ದಿವಸವಲಿ ಕರ್ಣನ
ಹಱಿವಕಂಡನು ಪಾರ್ಥ ಶಲ್ಯನ
ಶಿರಕೆ ತೊಟ್ಟನು ಧರ್ಮನಂದನರ್ಧದಿವಸದಲಿ
ಕುರುನೃಪಾಲ ವೃಕೋದರರರದು
ರ್ಧರ ಗಜಾಘಾತದಲಿ ಹಿಂಗಿದು
ದರೆದಿವಸವವಗಡಿಸಿ ಬಿದ್ದನು ಕೌರವನು ಧರೆಗೆ ೧೯

ಮುನಿಪ ಕರುಣಿಸು ರಾಮತೀರ್ಥಾ
ಟನಪವಿತ್ರಚರಿತ್ರವನು ತನ
ಗೆನಲು ಮುನಿಪತಿ ನಗುತ ನುಡಿದನು ಭೂಮಿಪಾಲಂಗೆ
ಜನಪ ಕೇಳಿತ್ತಂಡದಲಿ ಮನ
ಮುನಿಸು ಬಲಿದುದ ಕಂಡು ಸಂಧಿಸು
ವನುವನಱಿಯದೆ ರಾಮ ತೀರ್ಥಾಟನಕೆ ಹೊಱವಂಟ ೨೦

ಗಮಿಸಿದನು ಬಳಿಕಾ ಪ್ರಭಾಸ
ಕ್ಕಮಿತವಿಪ್ರರು ಸಹಿತ ತೀರ್ಥಾ
ಶ್ರಮ ನಿಷೇವಿತನಾಗಿ ಪಿತೃದೇವರ್ಷಿತರ್ಪಣವ
ಕ್ರಮದಲಾಚರಿಸುತ ಸರಸ್ವತಿ
ಯಮುನೆ ಗಂಗೆಯೆನಿಪ್ಪ ಪಾವನ
ವಿಮಳಪುಣ್ಯನದೀ ಸರೋವರಗಳನು ಸೇವಿಸುತ ೨೧

ನೈಮಿಷಕೆ ನಡೆತಂದನಮರ
ಸ್ತೋಮ ಹೊಗಳಲು ಶೌನಕಾದಿ ಮ
ಹಾಮುನಿಗಳಿದಿರ್ಗೊಂಡು ಸಾರ್ಘ್ಯಸ್ವಾಗತೋಕ್ತಿಯಲಿ
ಕ್ಷೇಮವನು ಬೆಸಗೊಳಲು ಕಂಡನು
ರೋಮಹರ್ಷಣನಿರವನದನಾ
ರಾಮನಾ ಮುನಿನಿಕರಮಧ್ಯದಲೆಂದನುಱೆ ಮುನಿದು ೨೨

ಈತನಾರಿವನಾರು ಗರ್ವಬ
ಲಾತಿಶಯದಲಿ ಮಾಡನುಚಿತವ
ನೇತಕಾನ್ವೆತರಲು ಕುಳ್ಳಿರ್ದಾಸನವನಿಳಿದು
ಮಾತನಾಡಿಸನೆಜಿಗನಕಟಾ
ಸೂತನಲ್ಲಾ ಸಕಲವಿಪ್ರ
ವ್ರಾತಮಧ್ಯದಲೀ ವಿಡಂಬನದಿರವಿದೇಕೆಂದ ೧೩

ಆರು ತಾನೆಂದಱಿಯನಕಟ ವಿ
ಕಾರವೇಕಿದು ದುರ್ವಿನೀತಂ
ಗಾರು ಕಲಿಸಿದರಿದನು ವೇದವ್ಯಾಸ ಮುನಿಯಲ್ಲ
ಸಾರ ಪೌರಾಣಿಕರಹಸ್ಯವ
ನಾರಿದಕೆ ತಾನಿದನು ಕಲಿವಡೆ
ಭೂರಿ ಪಾಮರನೇಕೆ ಕೊಂಡಾಡುವಿರಿ ನೀವೆಂದ ೧೪

ವಿದ್ಯವುಳ್ಳರದೇನು ಹಿರಿಯರ
ಹೊದ್ದಿದರೆ ಫಲವೇನು ತನ್ನಲಿ
ತದ್ವಿಹಿತ ವಿನಯಾದಿ ಗುಣಸಂಪತ್ತಿಯಿಲ್ಲದಡೆ
ಹೊದ್ದಿ ಸಿರಿಖಂಡವನು ಲಶುನದ
ಲಿದ್ದ ಗುಣ ತೆರಳುವುದೇ ಫಡಫಡ
ಗದ್ದುಗೆಯನಿಳಿಯಿಳಿ ದುರಾತ್ಮಯೆನುತ್ತ ಗರ್ಜಿಸಿದ ೧೫

ಕೆಡೆಯೆನುತ ಕನಲಿ ಕುಶಾಗ್ರದ
ಲಿಡಲು ಬಿದ್ದನು ಸೂತನವನಿಗೆ
ಹೊಡಕರಿಸಿ ಹಾಯೆನುತ ವಿಪ್ರಸ್ತೋಮ ಗಜಬಜಿಸೆ
ನಡುಗಿದರು ಮುನಿವರರು ಕೇಳುವೆ
ಯೆಡೆವಱಿದುದಕಟಕಟ ಭಂಗಂ
ಬಡೆದುದೀ ವ್ರತವೆನುತ ನುಡಿದರು ನೋಡಿ ಹಲಧರನ ೧೬

ಇತ್ತೆವೀ ಬ್ರಹ್ಮಾಸನದ ಸಂ
ಪತ್ತಿಯನು ಸತ್ರಾಂತಪರಿಯಂ
ತಿತ್ತೆವಾಯುಷ್ಯವನು ಸಮಯವ ಮಾಡಿ ಮೃತ್ಯುವಿಗೆ
ವೃತ್ತವಂತನೆ ಮಾಣ್ಬುದೀ ದ್ವಿಜ
ಹತ್ಯೆಗೆಣೆಯೇ ದೋಷವಿದನೀ
ನುತ್ತರಿಸುವಂದವನು ನೋಡುವುದೆಂದರಾ ದ್ವಿಜರು ೧೭

ಅಲ್ಲ ವಿನಿಯಾಮಕರು ನೀನೇ
ಬಲ್ಲೆ ಜನಸಂಗ್ರಹವೆನಲು
ತ್ಫುಲ್ಲಲೋಚನನೆಂದನಾವುದು ಕೃತ್ಯವೆನಗದನು
ಬಲ್ಲವರು ಬೆಸಸುವುದು ಭರ ನಿಮ
ಗುಳ್ಳಡೆತ್ತುವೆನೀತನನು ಘನ
ವಲ್ಲ ತನ್ನಯ ಯೋಗಮಾಯಾಗುಣ ಸಮರ್ಥತೆಗೆ ೧೮

ಆಗದಂತಸ್ಥಕ್ಕೆ ವಿಫಲತೆ
ಯಾಗದಂತಿರಲೆಮ್ಮ ನುಡಿಗಳಿ
ವಾಗದಂತೀ ಮೃತ್ಯುವಿನ ವಚನಕ್ಕೆ ವೈಕಲ್ಯ
ಯೋಗಮಾಯಾಧಿಪನೆ ಕರುಣಾ
ಸಾಗರನೆ ಮಾಡೆನಲು ಮನದನು
ರಾಗದಲಿ ತತ್ಪುತ್ರನನು ಸಂಧಿಸಿದನಾ ಸ್ಥಿತಿಗೆ ೧೯

ರಾಮ ಪಲ್ವಲನೆಂಬ ಖಳ ನಿ
ರ್ನಾಮವಾಗದಡಾಗದೆವಿಮ್ಮಾ
ಹೋಮನೇಮಂಗಳಿಗೆ ಜಪತಪನಿತ್ಯವಿಧಿಗಳಿಗೆ
ಕ್ಷೇಮವೆನಲಾಗಲಿ ಯೆನುತ್ತು
ದ್ದಾಮನಿರಲಾ ಪರ್ವದಲಿ ಸು
ತ್ರಾಮರಿಪು ಸೂಸಿದನು ಸತ್ರವಿನಾಶನಾಕೃತಿಯ ೨೦

ಬೀಸಿದುದು ಬಿಱುಗಾಳಿ ದೆಸೆದು
ರ್ವಾಸನೆಯನೋಕರಿಸೆ ವಿಣ್ಮೂ
ತ್ರಾಸುರದ ಕೆಸುಗುಳದ ಮಳೆಗಱೆಯಿತ್ತು ಸತ್ರದಲಿ
ಭೀಷಣಾಕೃತಿಯಾಗಿ ಖಳನಾ
ಕಾಶದಲಿ ಗಿರಿಯಂತೆ ನಿಂದಿರೆ
ವಾಸುದೇವಾಗ್ರಜನು ಕಂಡನು ನೆನೆದನಾಯುಧವ ೨೧

ಆ ಮಹಾ ದಿವ್ಯಾಯುಧದಲಾ
ವ್ಯೋಮಚಾರಿಯ ಕೊರಳನೆಳೆದು
ದ್ದಾಮವಿಕ್ರಮನಿಕ್ಕಿದನು ಮುಸಲದಲಿ ಮುಂದಲೆಯ
ಭೂಮಿ ಕಂಪಿಸಲಡಗೆಡೆದನಾ
ಭೀಮವಿಕ್ರಮನತ್ತಲಮರ
ಸ್ತೋಮ ಕೈವಾರಿಸುತ ಕಱೆದರು ಪುಷ್ಪವೃಷ್ಟಿಗಳ ೨೨

ವಿಧಿಸಿದರು ಬಳಿಕವರು ಸೂತನ
ವಧೆಗೆ ತೀರ್ಥಾಟನವ ಮುಸಲಾ
ಯುಧನು ಮರಳಿದು ಬೀಳುಕೊಂಡನು ಸಕಲಮುನಿಕುಲವ
ಬುಧನಿಕರಸಹಿತವನಿಯಲಿ ಬಹು
ವಿಧ ಸುತೀರ್ಥಕ್ಷೇತ್ರನಿಕರವ
ನಧಿಕವಿಕ್ರಮನೀಕ್ಷಿಸುತ ಹೊಱವಂಟನುಚಿತದಲಿ ೨೩

ಸ್ನಾತನಾದನು ಕೌಶಿಕೀ ವಿ
ಖ್ಯಾತ ಸರಯೂನದಿಗಳಲಿ ಸು
ಪ್ರೀತರನು ಮಾಡಿದನು ಪಿತೃಗಳನಾ ಪ್ರಯಾಗದಲಿ
ಗೌತಮೀ ಗಂಡಕಿ ಶತದ್ರೂ
ಖ್ಯಾತಶೋಣಗಯಾದಿಕವನು
ದ್ಭೂತಗಂಗೆಯಸಾಗರದ ಸಂಗಮವನೀಕ್ಷಿಸಿದ ೨೪

ವರ ಮಹೇಂದ್ರಾದ್ರಿಯಲಿ ಕಂಡನು
ಪರಶುರಾಮನನುಚಿತದಲಿ ಸತು
ಕರಿಸಿ ಮಿಂದನು ಸಪ್ತಗೋದಾವರಿಯ ಸಲಿಲದಲಿ
ಇರದೆ ವೇಣಿಗೆ ಹಂಪೆಗಾ ಭೀ
ಮರಥಿಗೈದಿದನಾ ಹರಾತ್ಮಜ
ನಿರವನೀಕ್ಷಿಸಿ ಬಂದನಾ ಶ್ರೀಪರ್ವತದ ಹೊರಗೆ ೩೫

ದರುಶನವ ಮಾಡಿದನು ಕಾಂಚೀ
ಪುರವನಾ ಕಾವೇರಿಯನು ಸ
ಚ್ಚರಿತನಾ ಶ್ರೀರಂಗ ದಕ್ಷಿಣಮಧುರೆಯೆಂಬವನು
ಪರಮಪಾವನ ಸೇತುವನು ಕಂ
ಡಿರದೆ ಶತಸಾಹಸ್ರಧೇನುವ
ನುರು ಗುಣಾನ್ವಿತನಿತ್ತನದಱಲಿ ವಿಪ್ರಮುಖ್ಯರಿಗೆ ೩೬

ಕಳೆದು ಘೃತಮಾಲೆಯನು ಕಂಡನು
ನಲವು ಮಿಗಲಾ ತಾಮ್ರಪರ್ಣಿಯ
ಮಲಯಗಿರಿಯನಗಸ್ತ್ಯನನು ಸತ್ಕರಿಸಿ ದಕ್ಷಿಣದ
ಲಲಿತಕನ್ಯಾದುರ್ಗಿಯನು ಮ
ತ್ತೊಲಿದು ಪಂಚಾಪ್ಸರದಲಿತ್ತನು
ಹಲಧರನು ಧೇನುಗಳನಯುತವ ಧರಣಿಯಮರರಿಗೆ ೩೭

ಕೇರಳವನೀಕ್ಷಿಸಿ ತ್ರಿಗರ್ತೋ
ದಾರ ಗೋಕರ್ಣವನು ನೋಡಿದ
ನಾರಿಯಾದ್ವೀಪವನು ಶೂರ್ಪಾಕಾರವನು ಕಳಿದು
ಚಾರುತಾಪಿಪಯೋಕ್ಷ್ಣಿ ನಿರ್ವಿ
ದ್ಯೋರುದಂಡು ಕರೇಣುವನವನು
ವೀರನೀಕ್ಷಿಸುತಾ ಪ್ರಭಾಸಕ್ಕಾಗಿ ನಡೆತಂದ ೩೮

ಅಲ್ಲಿ ಕೇಳಿದನಖಿಳ ವೃಷ್ಣೀ
ವಲ್ಲಭರ ಸಂಕ್ಷಯವನಪ್ರತಿ
ಮಲ್ಲನೈತಂದನು ಸುಯೋಧನ ಭೀಮರಿದ್ದೆಡೆಗೆ
ನಿಲ್ಲಿ ಸೈಸಿರಿ ನೀವು ಸಮರಕೆ
ಬಲ್ಲಿದನು ಭುಜಬಲದಲಾಹವ
ಮಲ್ಲನಹುದೈ ಸಮರಸಾಹಸಿ ಭೀಮ ನೀನೆಂದ ೩೯

ಬದ್ಧವೈರಾವೇಶರಿಗೆ ತ
ದ್ವೃದ್ಧಿ ಸೇಱಿದಡಾಯ್ತು ಸಮರದ
ಶ್ರದ್ಧೆ ಬಿದ್ದನು ಕೌರವನು ರಣದಲಿ ವೃಕೋದರನ
ಯುದ್ಧ ನಿಂದುದು ಬಳಿಕ ಮುರರಿಪು
ಬುದ್ಧಿಗಲಿಸಿದನವರ ಹೆತ್ತರಿ
ಗುದ್ಧರಿಸಿದನು ರಾಜ್ಯಸುಖದಲಿ ಪಾಂಡುನಂದನರ ೪೦

ಉಳಿದರದಱಲಿ ಮೂವರೇ ಗುರು
ಕುಲಜ ಕೃಪ ಕೃತವರ್ಮರೆಂಬವ
ರುಳಿದರಿದಱೊಳು ಪಾಂಡವರು ಸಾತ್ಯಕಿ ಯುಯುತ್ಸುಗಳು
ನಿಲಿಸಿ ಧರ್ಮಜನನು ಮಹಾನೃಪ
ಕುಲದ ಪೀಳಿಗೆಯಾಸನದೆ ಕೈ
ಗೊಳಿಸಿದನು ರಾಜ್ಯವನು ಸಂತೈಸಿದನು ಬಾಂಧವರ ೪೧

ಬಳಿಕ ಕಳುಹಿಸಿಕೊಂಡು ಕರುಣಾ
ಜಲಧಿ ಪಾಂಡುಕುಮಾರರನು ಮೆಲು
ದಳದಲಪ್ಪಿದನೊಗುವ ನಯನ ಜಲಂಗಳನು ತೊಡೆದು
ನಿಲಿಸಿ ನಿಗಮ ಸಹಸ್ರಗೀತಾ
ಮಳಚರಿತ್ರನು ಬಂದನುತ್ಸವ
ದೊಳಗೆ ಮೊಳಗುವ ವಾದ್ಯರವದಲಿ ದ್ವಾರಕಾಪುರಕೆ ೪೨

ಭೂತಳಾಧಿಪ ಕೇಳು ಭುವನ
ವ್ರಾತದಘಹರವೆನಲು ಹೊಗಳುವ
ಸೂತಮಾಗಧ ವಂದಿಗಳ ಕಳಕಳದ ನಿಸ್ಸನದ
ಧೂತವಾಲವ್ಯಜನನಿಕರ ಸಿ
ತಾತಪತ್ರ ಪ್ರಕರದಲಿ ವಿ
ಖ್ಯಾತಮಂಗಳವಾದ್ಯರವ ರಂಜಿಸಲು ನಡೆತಂದ ೪೩

ಓರಣದ ಹೊಂದಳಿಗೆಗಳ ಮಣಿ
ತೋರಣದ ಗುಡಿಗಳ ಪತಾಕಾ
ವಾರಿತಾತಪದೆಸವ ಪೌರ ಪ್ರಕೃತಿಪರಿಜನದ
ನಾರಿಯರ ಕರಕಲಿತಮಣಿಮಯ
ದಾರತಿಯ ಕನ್ನಡಿಯ ಕಳಸದ
ಭೂರಿವಿಭವದಲಸುರರಿಪು ಹೊಕ್ಕನು ಮಹಾಪುರವ ೪೪

ಇಳಿದು ರಥವನು ಕನಕಮಯದಂ
ದಳದಲಸುರಾರಾತಿ ಹೊಕ್ಕನು
ನಿಳಯವನು ಸುಮುಹೂರ್ತದಲಿ ಬೀಳ್ಕೊಳಿಸಿ ಪರಿಜನವ
ಸಲೆ ಸಮಸ್ತಜನಂಗಳಿಗೆ ಮಂ
ಗಳವೆನಿಪ ನಿತ್ಯಾತ್ಮ ಕೃಷ್ಣನು
ಸಲಿಸುತಿರ್ದನು ಸನ್ನತರಿಗಿಷ್ಟಾರ್ಥಸಂಪದವ ೪೫

ತೊಂಭತ್ತನಾಲ್ಕನೆಯ ಸಂಧಿ ಮುಗಿಯಿತು

# ತೊಂಭತ್ತೈದನೆಯ ಸಂಧಿ

ಭಾಗವತಗುಣಗಣ ಮಹಾಮೃತ
ಸಾಗರನು ಬಂದನು ಜನಾರ್ದನ
ನಾಗಮಾರಾಧಿತನ ವಿಮಳ ದ್ವಾರಕಾಪುರಕೆ

ಕೇಳು ಶೌನಕ ನೃಪಶಿರೋಮಣಿ
ಮೌಳಿಸನ್ನುತಚರಣನಾ ಶ್ರೀ
ಲೋಲನಮಳಚರಿತ್ರವನು ಮುನಿಪತಿಯ ಮುಖದಿಂದ
ಕೇಳುತವೆ ಹಿಗ್ಗಿದನು ಹೃದಯವ
ಹೂಳಿ ಹೆಚ್ಚಿದ ಹರುಷರಸ ಜಂ
ಘಾಳ ಚೇತೋವೃತ್ತಿಯಲಿ ಕೈಮುಗಿವುತಿಂತೆಂದ ೧

ಚಿತ್ತವಿಸು ಮುನಿನಾಥ ಹೃದಯದ
ಕತ್ತಲೆಗೆ ಕಡೆಯಾಯ್ತು ನಿರ್ಮಳ
ಚಿತ್ತನಾದೆನು ಧನ್ಯನಾದೆನು ನಿಮ್ಮ ಕರುಣದಲಿ
ಮೃತ್ಯುಭಯ ಹಿಂಗಿದುದು ಹಮ್ಮಿನ
ಕುತ್ತು ಮುಱಿದುದು ನಿಮ್ಮಡಿಯ ದಿ
ವ್ಯೋಕ್ತಿಸುಧೆಯಲಿ ಪೂರ್ಣಸುಖ ತಾನಾದೆನಿಂದೆಂದ ೨

ಕೇಳಿ ದಣಿಯದು ತನ್ನ ಮನ ಸಿರಿ
ಲೋಲನಮಳಚರಿತ್ರವನು ಕರು
ಣಾಳು ನಿಮ್ಮಡಿ ಶಿಷ್ಯ ನಾನು ಭವತ್ಪದಾಂಬುಜಕೆ
ಹೇಳಲಮ್ಮೆನು ಮುನಿವರನೆ ನಿ
ನ್ನೋಲಗವೆ ಸಾಕೆನಗೆ ಮುಕುತಿ
ಶ್ರೀಲತಾಂಗಿಯ ಕೃಪೆಗೆ ಬಳಲಿಸಲೇಕೆ ತಾನೆಂದ ೩

ಬೇವೊಡಲ ಕಱು ತಾಯ ಕೆಚ್ಚಲ
ನೋವ ಬಲ್ಲುದೆ ಬಳಲಿಸಿದೆನಾ
ನಾವ ಪರಿಯಲಿ ಬಗೆಯ ಬಳಕೆಯ ಮಱೆದು ಮುನಿವರನ
ಪಾವನಾಂಘ್ರಿಯನಿದನು ಕೃಷ್ಣ ಕ
ಥಾವಿಮೋಹನ ಸುಧೆಯನಿನ್ನೂ
ಸೇವಿಸುವ ಮನ ಹಿಂಗದಕಟಕಟೇವೆ ನಾನೆಂದ ೪

ಕರಣಲಯಪರಿಯಂತ ಕೃಷ್ಣನ
ಚರಿತವನು ಕೇಳುತ್ತ ಕಾಲವ
ನುರುಳೆ ನೂಕಲು ಬೇಹುದೆಂಬೊಂದರ್ಥಿ ಮನದೊಳಗೆ
ಉರವಣಿಸುತಿದೆ ದೀನತನದಲಿ
ಗುರುವರನೆ ಗುಣನಿಧಿಯೆ ಕರುಣಾ
ಕರನೆ ಕೃಪೆಮಾಡುವುದು ತನಗೆಂದನು ಮಹೀಪಾಲ ೫

ಕೇಳಿ ಸಾಕೆಂಬವರದಾರಾ
ಶ್ರೀಲಲಾಮಪದಾಬ್ಜದುನ್ನತ
ಲೀಲೆಯನು ಲೋಕೋತ್ತರದ ಸಂಪನ್ನಗುಣಗಣವ
ನಾಲಗೆಗೆ ಫಲವೇನು ಲಕ್ಷ್ಮೀ
ಲೋಲನನು ಕೀರ್ತಿಸದೆ ನಮಿಸದೆ
ಸೂಳು ಲಿಂಗಂಗಳಿಗೆ ಶಿರವಿದ್ದೇನು ಫಲವೆಂದ ೬

ಜನಿಸಿದಡೆ ಫಲವೇನು ಮಾನುಷ
ಜನುಮದಲಿ ಜಗದೇಕನಾಥನ
ನೆನೆಯಲೊಲ್ಲದ ಪಾಪಿಜೀವರಿಗಾ ಜಗನ್ಮಯನ
ನೆನೆವ ಭಾಗವತೋತ್ತಮರ ಪಾ
ವನ ಪದಾಂಬುಜತೀರ್ಥಸೇವೆಗೆ
ತನುವನೀಯದ ವಿಮುಖಜೀವರಿಗೆಂದನಾ ಭೂಪ ೭

ಆಸಱಡಗಿದುದಂತರಂಗದ
ಬೇಸಱಪಗತವಾಯ್ತು ಕೃಷ್ಣಕ
ಥಾ ಸುಧಾಸಾಗರ ಸಮಗ್ರಜಲಾವಗಾಹದಲಿ
ದಾಸ ನಾನೆಲೆ ಮುನಿಪ ನಿಮ್ಮಡಿ
ವಾಸುದೇವನ ಪರಮಗುಣಪೀ
ಯೂಷಪಾನಾಂತರದ ಲೋಭಿಗೆ ಕರುಣಿಸುವುದೆಂದ ೮

ಲೇಸನಾಡಿದೆ ಭೂಪ ಪಾಂಡುಮ
ಹೀಶಕುಲಪಾಲಕನೆ ಪಾರ್ಥಿವ
ರೇಸು ಜನಿಸಿದರೇನು ಧರೆಯಲಿ ನಿನ್ನ ಹೋಲುವರೆ
ಈಸು ಗುಣದಲಿ ಕೀರ್ತಿಯಲಿ ಲ
ಕ್ಷ್ಮೀಶಪದಭಕ್ತಿಯಲಿ ಹರಹರ
ಹಾಸುಹೊಕ್ಕಾದವರದಾರವಧರಿಸಿ ಕೇಳೆಂದ ೯

ಆದಡವಧರಿಸರಸ ಪಾವನ
ವಾದ ಕಥೆಯನು ಧರೆಯಲಚ್ಯುತ
ಪಾದಕಮಲ ಪರಾಗಭಕ್ತನು ಪರಮಸಖಿಯೆನಿಸಿ
ಮೇದಿನೀಸುರನೊಬ್ಬನೆಸೆದನು
ವೇದವಿತ್ತಮನಾತ್ಮವಿದ್ಯಾ
ಸಾಧಿತೇಂದ್ರಿಯವೃತ್ತಿವಿಭ್ರಮನಖಿಳಗುಣನಿಳಯ ೧೦

ಜಱಿದು ದೇಹಪ್ರಾಣಕರಣೋ
ತ್ಕರದ ಧರ್ಮವನಾತ್ಮವಿದ್ಯಾ
ಪರಿಣತಿಯಲಭಿಭವಿಸಿದನು ತೃಷ್ಣಾಮನೋವ್ಯಥೆಯ
ದೊರಕಿದುದನೇ ಕೊಂಡು ಪರಮೇ
ಶ್ವರನ ಮೇಲೆ ಸಮಸ್ತಭಾರವ
ನಿರಿಸಿ ರಂಜಿಸುತಿರ್ದನೆಸೆವ ಗೃಹಸ್ಥಧರ್ಮದಲಿ ೧೧

ವನಿತೆಯೊಬ್ಬಳವಂಗೆ ನಿಷ್ಕಿಂ
ಚನಗೆ ಪಾತಿವ್ರತ್ಯ ವರಗುಣ
ವನಧಿ ಜೀರ್ಣಾಂಬರೆ ಕೃಶಾಂಗಿ ಸುಶೀಲೆ ಶುಭಚರಿತೆ
ಘನತರ ಕ್ಷುತ್ಕ್ಷಾಮೆ ತೃಷ್ಣಾ
ಜನಿತವೇಪಥುಗಾತ್ರೆಯೆಂದಳು
ಮನದ ಸಂಕಲ್ಪದಲಿ ಮಾನಿನಿ ತನ್ನ ಪತಿಯೊಡನೆ ೧೨

ಏತಕಿದು ನಮಗೀ ದರಿದ್ರತೆ
ಭೂತಳದಲಖಿಲಾತ್ಮಕನು ಸಾ
ಕ್ಷಾತ ಲಕ್ಷ್ಮಿಕಾಂತನೇ ಕೃಷ್ಣಾಭಿಧಾನದಲಿ
ಜಾತನಾಗಿರಲಖಿಳಭುವನ
ಖ್ಯಾತಕೀರಿತಿ ತನಗೆ ಸಖಿ ಗಂ
ಡಾತನನು ಬೇಡುವುದು ಹೋಗೆಂದಳು ಸರೋಜಮುಖಿ ೧೩

ಮಱೆದಿದು ಮೇಣಱಿದೊಮ್ಮೆ ನೆನೆದಡೆ
ನರರಿಗೀವನು ತನ್ನನಕಟಾ
ಕರುಣಿಸನೆ ನಮಗಿಂದು ಧನವನು ಧನವಿಹೀನರಿಗೆ
ದುರಿತಭಯಭಗ್ನರಿಗೆ ದುಃಖಾ
ತುರರಿಗಬಲರಿಗಶರಣರಿಗಾ
ರ್ತರಿಗೆ ಪರಮಸ್ವಾಮಿಯಲ್ಲಾ ಯೆಂದಳಬುಜಾಕ್ಷಿ ೧೪

ಎಂದು ಪತಿಯನು ದಿನದಿನದಲಾ
ಯಿಂದುಮುಖಿ ಕಡು ಹಸಿವು ತೃಷೆಯಲಿ
ಬೆಂದು ಮಾಣದೆ ಕಾಡಿಯಂಡಲೆವುತ್ತಲಿರಲದನು
ಮಂದಹಾಸದಲಾ ದ್ವಿಜೋತ್ತಮ
ನೆಂದು ತನ್ನಯ ಮನದೊಳಗೆ ಸಾ
ನಂದದಲಿ ಕೇಳುತ್ತ ನಿಶ್ಚಯಿಸಿದನು ಗಮನವನು ೧೫

ಕಾಣಲಱಿಯರು ಚರಣಕಮಲದ
ರೇಣುವನು ಸುರವರ ಮುನೀಂದ್ರರು
ಕಾಣಲಾನೆನಿತರವನಾ ಜಗದೇಕವಲ್ಲಭನ
ಪ್ರಾಣಸಾಕ್ಷಿಯನಕ್ಷಿಗಳು ದಿಟ
ಕಾಣಲಱಿಯವು ಪೂರ್ವಜನ್ಮ
ಶ್ರೇಣಿಯಲಿ ಸಂಚಿತ ತಪಃಫಲವೆಂದನಾ ವಿಪ್ರ ೧೬

ಪರಮಪುರುಷನ ಚರಣಕಮಲದ
ದರುಶನವೆ ದೊರೆಕೊಂಡಡೆನಗದು
ಪರಮಲಾಭವಲಾ ಧನಾಗಮವಾಗಲದು ಮೇಣು
ನಿರುತವಾಗದೆ ಮಾಣಲೆನುತಾ
ಪರಮ ಭಾಗವತೋತ್ತಮನು ಪಂ
ಕರುಹಮುಖಿ ಯೇನುಂಟು ಬಾಯಿನವೆಂದು ಬೆಸಗೊಂಡ ೧೭

ಎನಲು ಕಾಣದೆ ಬಾಯಿನವನಾ
ವನಿತೆ ತಿರಿದಳು ಧಾನ್ಯವನು ನೆರೆ
ಮನೆಗಳಲಿ ನಾಲುಕು ಮುಷ್ಟಿಯನು ಪೃಥುಕತಂಡುಲವ
ವನಜಮುಖಿ ಬಳಿಕುರು ಮಲೀಮಸ
ವೆನಿಸುವಾ ವಸ್ತ್ರದಲಿ ಕಟ್ಟಿದ
ಳನುಪಮಂಗಿತ್ತಳು ಮುಕುಂದನ ಚರಣದರುಶನಕೆ ೧೮

ಬಳಿಕ ಕಾಣಿಕೆಗೊಂಡು ತನ್ನಯ
ನಿಳಯವನು ಹೊಱವಂಟು ತನುರಸ
ಪುಳಕದಲಿ ತೊನೆವುತ್ತ ಕೃಷ್ಣಪದಾಬ್ಜದರುಶನದ
ಸುಲಭಸುಖ ತನಗೆಂತು ಕಂಗಳಿ
ಗಳವಡುವುದಧಮಂಗೆ ದೊರಕಿದ
ಡಿಳೆಯೊಳಾರೆನ್ನಂತೆ ಧನ್ಯರೆನುತ್ತ ನಡೆತಂದ ೧೯

ಬಂದನಾ ದ್ವಾರಾವತಿಗೆ ಗೋ
ವಿಂದನಂಘ್ರಿಸರೋಜಯುಗ ಮಕ
ರಂದಮಗ್ನ ಮನೋವಿಳಾಸ ವಿಚಿತ್ರಗತಿಗಳಲಿ
ಸಂದ ಮಾರ್ಗವನಾ ಪರಿಶ್ರಮ
ದಂದವನು ನೆಱೆ ಮಱೆದಿದು ಪರಮಾ
ನಂದರಸಪುಳಕದಲಿ ಪರವಶನಾಗುತಡಿಗಡಿಗೆ ೨೦

ಕಂಡನಾ ಸಾಗರದ ಸಲಿಲೋ
ದ್ದಂಡ ವೀಚೀಭುಜಲತಾ ಪರಿ
ಮಂಡಲಪ್ರಾಕಾರಮೂಲಸ್ಫಟಿಕಕುಟ್ಟಿಮದ
ಗಂಡುರತುನದ ಗಜಗಲಿಪ ರವಿ
ಮಂಡಲವ ಮಸುಳಿಸುವ ಭುವನೋ
ದ್ದಂಡದೈವದ ಪುರವಿಭವವನು ದೂರದಲಿ ಬರುತ ೨೧

ಹೊಳೆಹೊಳೆವ ಹೊಂಗಳಸ ನಿಕರದ
ನಿಳಯ ನಿಳಯಂಗಳನು ಕಾಣುತ
ಮುಳುಗಿದುವು ಸಂತೋಷಜಲದಲಿ ಕಂಗಳಡಿಗಡಿಗೆ
ಇಳೆಗೆ ಮೈಯಿಕ್ಕುತ್ತ ಭಾಳೋ
ಜ್ವಳಕರಾಂಜಲಿಯಿಂದ ಸೇತುವ
ಕಳೆದು ಸುರಪೂಜಿತನ ಪುರವರಕಾಗಿ ನಡೆತಂದ ೨೨

ಉಲಿವ ಶುಕ ಪಿಕ ಹಂಸ ಭೃಂಗಾ
ವಳಿಯ ಫಲಭರದಾಮ್ರ ಶಾಖಾ
ವಳಿಯ ಬಹಳೋದ್ಯಾನ ಕಲ್ಪದ್ರುಮ ಲತಾವಳಿಯ
ಬಲಿದ ನೆಳಲಿನ ನಡುಹಗಲ ಶೀ
ತಳವೆನಿಪ ಚೈತ್ರದ್ರುಮದ ಪರಿ
ಉಳಿತ ಪುಣ್ಯ ಮಹಾಪಥದಲೈತಂದನಾ ವಿಪ್ರ ೨೩

ನೃತ್ಯಗೀತ ವಿನೋದ ಶುಭ ಚಾ
ರಿತ್ರರನು ಹರಿಗುಣಗಣ ಕಥಾ ಸಂ
ಕೀರ್ತನ ಶ್ರವಣೈಕತತ್ಪರ ಪುಣ್ಯಪುರುಷರನು
ಭೃತ್ಯಭಾವದಲೋಲಗಿಸುವ
ತ್ಯುತ್ತಮಾಮರಮುಖ್ಯರನು ನೋ
ಡುತ್ತ ಕೌತುಕಬುದ್ಧಿಯಲಿ ನಡೆತಂದನಾ ವಿಪ್ರ ೨೪

ಮೂಱುಹೊತ್ತೋಲಗದ ಸಮಯವ
ಹಾರುವ ಕ್ಷಿತಿಪಾಲನಿಕರ ಕು
ಮಾರವರ್ಗದ ಸಕಲಸುರನರ ಮಂಡಲೇಶ್ವರರ
ಚಾರಣರ ವಂದಿಗಳ ಗಂಧ
ರ್ವೋರಗರ ಕಿನ್ನರರ ನಿಕರದ
ಭೂರಿಸಂದಣಿಗಳನು ನೆಱೆನೋಡುತ್ತ ನಡೆತಂದ ೨೫

ಧರೆಯ ಪುಣ್ಯಾರಣ್ಯ ಗಿರಿ ಮಂ
ದಿರದ ತಾಪಸವರರು ಯಾಜ್ಞಿಕ
ವರರು ಯೋಗಪರಾಯಣರು ನಾನಾವ್ರತಾನ್ವಿತರು
ಪರಮ ಭಾಗವತೋತ್ತಮರು ಮುನಿ
ವರರು ನಾನಾ ದೇಶ ದೇಶಾಂ
ತರದ ಜನವೊತ್ತೊತ್ತಿಗಳಲೊಪ್ಪಿರಲು ನೆರೆ ಕಂಡ ೨೬

ತೇರುಗಳ ಗಜಘಟೆಯ ತುರಗದ
ಚಾರಣರ ಪುರಜನದ ನೆರವಿಯ
ತಾರುಥಟ್ಟಿನ ಗೋಪುರದ್ವಾರ ಪ್ರಣಾಳಿಗಳ
ಭೂರಿಭೂಷಣ ಗಂಧಮಾಲ್ಯೋ
ದಾರವಸನದಲೆಸೆವ ಪುರುಷರ
ನಾರಿಯರ ನಿಜಲೀಲೆಗಳ ನೋಡುತ್ತ ನಡೆತಂದ ೨೭

ಆ ಮಹಾಪುರಲಕ್ಷ್ಮಿತ್ರಿಭುವನ
ಸ್ತೋಮಲಕ್ಷ್ಮಿಗೆ ಸತತ ಸಂಭವ
ಭೂಮಿಯಂತಿರಲೆಸೆವ ಗುಡಿತೋರಣದ ವಿಭವದಲಿ
ಸೋಮ ಸೂರಿಯ ವೀಧಿಗಳ ಮಣಿ
ಹೇಮನಿರ್ಮಿತ ಭವನನಿಕರವ
ನಾ ಮಹಾಮತಿ ನೋಡಿ ತಲೆದೂಗುತ್ತ ನಡೆತಂದ ೨೮

ಹೊಕ್ಕನನಿತಱೊಳೊಂದು ಗೃಹವನು
ಮಿಕ್ಕು ಮೀಱುವ ಹರುಷರಸದೌ
ತ್ಸುಕ್ಯಭರದಲಿ ಬಹಳ ಭಯರಸಭರಿತ ಭಾವದಲಿ
ಜಕ್ಕುಲಿಪ ಮೃದುಗತಿಯ ಕಿಱುಬೆಮ
ರಿಕ್ಕುವೊಡಲಿನ ಚಕಿತನಯನದ
ಲಿಕ್ಕೆಲದ ದೌವಾರಿಕರನೀಕ್ಷಿಸುತ ವಿನಯದಲಿ ೨೯

ಇಲ್ಲ ವಿಪ್ರಾಗಮ್ಯವಾ ಸಿರಿ
ವಲ್ಲಭನ ಮಂದಿರದಲದಱೊಳ
ಗಿಲ್ಲ ರಾಣೀವಾಸವಿತರಾವಾಸವೆಂಬೊಂದು
ಸಲ್ಲದೀ ಮತಿಭೇದ ವರ ಕೈ
ವಲ್ಯನಾಥನ ಪುರದ ಸೀಮೆಯ
ಲೆಲ್ಲ ಪರಮಾನಂದಮಯರಾಗಿಹುದು ಜನವೆಂದ ೩೦

ಎಸೆವ ರತ್ನಸ್ತಂಭನಿಕರದ
ಮಸುಳಿಸುವ ಭಿತ್ತಿಗಳ ಹೇಮ
ಪ್ರಸರದಲಿ ಬಿಂಬಿಸುವ ಬಿಂಬಾಧರಿಯರೊಡಲುಗಳ
ಅಸಮಕಾಂತಿಯ ಭವನಸಿರಿಯನು
ವಸುಧೆಯಮರನು ಪರಮಸುಖಪರ
ವಶತೆಯಲಿ ನೋಡುತ್ತ ರಾಜಾಲಯಕೆ ನಡೆತಂದ ೩೧

ಸೆಜ್ಜೆಯರಮನೆಯೊಳಗೆ ಧರಣೀ
ನಿರ್ಜರನು ನಡೆತರಲು ಕಾಣುತ
ಸಜ್ಜನಪ್ರಿಯಬಾಂಧವನು ಸಿರಿಮಂಚದಿಂದಿಳಿದು
ಅಬ್ಜವದನೆಯು ಕರತಳದ ಚರ
ಣಾಬ್ಜವನು ತೆಗೆದವನಿತಳದಲಿ
ಹೆಜ್ಜೆಯಿಡುತತಿದೂರದಿಂದೈತಂದನಿದಿರಾಗಿ ೩೨

ಹಿಂಗದಾತ್ಮಪ್ರಿಯಸಖನನಾ
ಲಿಂಗಿಸಿದನಾ ದ್ವಿಜನನೆರಡು ಭು
ಜಂಗಳಲಿ ಪರಮಾತ್ಮನಧಿಕ ಪ್ರೇಮಭಾರದಲಿ
ಹೊಂಗಿದನು ಹರಹರ ಮಹಾತ್ಮನ
ಸಂಗಸುಖದಲಿ ತೀವಿದವು ನಿಡು
ಗಂಗಳಲಿ ಹರುಷಾಶ್ರುಬಿಂದುಗಳೋರಣದಲಿಳಿಯೆ ೩೩

ಕುಳ್ಳಿರಿಸಿ ಮಂಚದಲಿ ನಿಜಕರ
ಪಲ್ಲವದಲಾ ದ್ವಿಜವರನ ಪದ
ಪಲ್ಲವವನೊಪ್ಪಿರಲು ತೊಳೆದು ತದಂಘ್ರಿತೀರ್ಥದಲಿ
ನಿಲ್ಲದೋಲಾಡಿದನು ಲಕ್ಷ್ಮೀ
ವಲ್ಲಭನು ಮಱೆಯೇಕೆ ನಿಜವನು
ಬಲ್ಲವರು ಬೆಱಗಾಗಲರ್ಚಿಸಿದನು ತದಂಘ್ರಿಗಳ ೩೪

ಇತ್ತನಾತಿಥ್ಯಕ್ರಿಯೆಗೆ ಸುಚ
ರಿತ್ರನೊಂದಾಕಳನು ಮಜ್ಜನ
ಕೃತ್ಯವನು ಮಾಡಿಸಿ ಮಲೀಮಸ ವಸ್ತ್ರವನು ಕಳೆದು
ಉತ್ತಮವನುಡಿಸಿದನು ತೊಡಿಸಿದ
ನತ್ಯಧಿಕ ಸಂಪ್ರೀತಿಯಲಿ ಪುರು
ಷೋತ್ತಮನು ಪರಿಪರಿಯ ತೊಡಿಗೆಗಳನು ತದಂಗದಲಿ ೩೫

ದಿವ್ಯಗಂಧ ವರಾನುಲೇಪನ
ದಿವ್ಯವನಮಾಲಾದಿ ವೇಷ್ಟನ
ದಿವ್ಯಧೂಪಾಮೋದ ಸಾಂದ್ರ ಮಣಿ ಪ್ರದೀಪವನು
ದಿವ್ಯಚಿತ್ತದಲೊಲಿದು ತಾನೇ
ದಿವ್ಯ ವೈಷ್ಣವವಿಪ್ರವರನನು
ದಿವ್ಯ ಮಂಗಳಮೂರ್ತಿ ಪೂಜಿಸುತಿರ್ದನೊಲವಿನಲಿ ೩೬

ಕ್ಷಾಮಕಾಯನನಧಿಕ ಧರ್ಮ
ಸ್ತೋಮಸಂವೃತಗಾತ್ರನನು ಸು
ಕ್ಷೇಮವಾರ್ತೆಗಳಿಂದ ಮನ್ನಿಸುತಿರಲು ದೇವಿಯರು
ಚಾಮರವ್ಯಜನಂಗಳಿಂದಾ
ಭೂಮಿಸುರನನು ಭಜಿಸಿದರು ನಿ
ಸ್ಸೀಮಗುಣನಿಧಿಯೊಲವದೆಂತುಟೊ ಭೃತ್ಯವರ್ಗದಲಿ ೩೭

ನೆರೆದು ನೋಡುತ ಕೃಷ್ಣಲೀಲಾ
ಚರಿತವನು ಬೆಱಗಾದುದಂತಃ
ಪುರದ ಜನ ತಮ್ಮೊಳಗೆ ನುಡಿದುದು ತಲೆಗಳನು ತೂಗಿ
ತಿರಿವ ಹಾರುವನೇಕೆ ಜಗದೀ
ಶ್ವರರಧೀಶ್ವರನೇಕೆ ನೀಲಾಂ
ಬರನನಪ್ಪುವವೋಲು ತೆಗೆದಪ್ಪಿದನು ಹರುಷದಲಿ ೩೮

ಅಱಿಸಿ ಸಮಯವ ಪಡೆಯರಾವನ
ಚರಣಕಮಲ ಪರಾಗದರುಶನ
ದುರುತರದ ಪುಣ್ಯೋದಯಕೆ ಪರಮೇಷ್ಠಿ ಮೊದಲಾದ
ಸುರರು ಸೇವೆಯ ಮಾಡಿ ದಣಿಯರು
ಸಿರಿ ಮಹಾವರಲಕುಮಿ ತನಗಾ
ದರದ ವಿನಯದ ಭಕುತಿ ದೀನದರಿದ್ರ ವಿಪ್ರನಲಿ ೩೯

ಆವ ಸುಕೃತವ ಮಾಡಿದನೊ ಮೇ
ಣಾವ ತಪವನು ಚರಿಸಿದನೋ ವಿ
ಪ್ರಾವಧೂತನು ಭಿಕ್ಷುಕನು ಬಡವನು ನಿಗರ್ವಿತನು
ಶ್ರೀವಧೂವಕ್ಷಸ್ಥಳನು ತಾ
ನಾವನನು ತೆಗೆದಪ್ಪಿ ಸಲೆ ಸಂ
ಭಾವಿಸಿದನೆನೆ ಧನ್ಯನೀ ದ್ವಿಜನೆಂದುದಖಿಳಜನ ೪೦

ಆವನೆಡಗಾಲುಗುರ ನೀರತಿ
ಪಾವನಕೆ ಪಾವನವೆನಿಪ್ಪುದು
ಭಾವಿಸಲು ಭವನುತ್ತಮಾಂಗವನೇಱಿದಳು ಗಂಗೆ
ಆವ ಕರುಣಾನಿಧಿಯೊ ತಾನಿ
ನ್ನಾವ ಭಕ್ತಪ್ರಿಯನೊ ಯೆನುತಾ
ದೇವ ನಿತ್ಯಾತುಮನನಭಿವರ್ಣಿಸಿದುದಖಿಳ ಜನ ೪೧

ತೊಂಭತ್ತೈದನೆಯ ಸಂಧಿ ಮುಗಿಯಿತು.

# ತೊಂಭತ್ತಾರನೆಯ ಸಂಧಿ

ಉಪಚರಿಸಿ ನಿಜಯೋಗ ವಿದ್ಯಾ
ನಿಪುಣನನು ಭಾಗವತಜನಲೋ
ಲುಪನು ಕಳುಹಿದನಧಿಕ ಕಾರುಣ್ಯದಲಿ ಭೂಸುರನ

ಅರಸ ಕೇಳಸುರಾರಿ ಮಿಗೆ ಸತು
ಕರಿಸಿ ಸಹಜಪ್ರೇಮದಲಿ ಭೂ
ಸುರವರನ ಕೈಪಿಡಿದು ಸಿರಿಮಂಚದಲಿ ಕುಳ್ಳಿರ್ದು
ಪರಮ ಕುಶಲ ಕ್ಷೇಮವಾರ್ತೆಯ
ನಿರದೆ ಬೆಸಗೊಳುತಧಿಕ ಹರುಷೋ
ತ್ಕರುಷದಲಿ ಕಾರುಣ್ಯನಿಧಿ ನಗುತೆಂದನವನೊಡನೆ ೧

ಎಲೆ ಸಖಿಯೆ ಯೆಲೆ ಬಾಂಧವನೆ ಗುರು
ಕುಲಗೃಹದಲೊಂದಾಗಿ ಶಿಕ್ಷಿಸಿ
ದಲಘು ವಿದ್ಯಾಭ್ಯಾಸದಲಿ ನಮ್ಮಿಷ್ಟ ಸೌಹೃದವ
ಹೊಲಬನಱಿವೈ ತಂದೆ ದಕ್ಷಿಣೆ
ಗಳನು ಗುರುವಿಂಗಿತ್ತು ಮರಳಿದ
ಬಳಿಕ ನಿನಗಾವಾಶ್ರಮದ ಸಂಬಂಧವಾಯ್ತೆಂದ ೨

ಮದುವೆಯಾದ್ದೈ ತಂದೆ ಗಾರ್ಹ
ಸ್ಥ್ಯದಲಿ ನಿಂದ್ದೈ ಭಾರ್ಯೆಯನುಕೂ
ಲದಲಿ ನಡೆವಳೆ ಮಕ್ಕಳಾದವೆ ಸುಖವೆ ನಿನಗೈದೆ
ಹದನ ಹೇಳಲ್ಲದಡೆ ವೈರಾ
ಗ್ಯದಲಿ ಮನವಕ್ಕುಳಿಸಿ ನಿಃಸ್ಪೃಹ
ಪದಕೆ ಪರಿಣತನಾಗಿ ನಿಂದೆಯೊ ವಿಪ್ರ ಹೇಳೆಂದ ೩

ಹಿರಿದು ಯಿಾ ಗಾರ್ಹಸ್ತ್ಯದಲಿ ಮನ
ಬೆರಸದಂತಿರೆ ವಿಷವಿಷಯದಲಿ
ವಿರತನಾದಂತಿರೆಯಲಾ ನಿನ್ನಿರವು ನೋಡುವರೆ
ಧರೆಯೊಳೆರಡೇ ಮಾರ್ಗವಾತ್ಮನ
ನಱಿದು ಸುಖಿಯಹುದಿತರ ಕರ್ಮಾಂ
ತರನಿವೃತ್ತಿಯದೊಂದು ಕರ್ಮಾತ್ಮಕವಿದೊಂದೆಂದ ೪

ಕೆಲರು ಕೇಳೆನ್ನಂತೆ ಲೋಕದ
ಬಳಕೆಯನು ಸಂಗ್ರಹಿಸಿ ಮಾಳ್ಪರು
ಫಲವನುಳಿದು ಯಥೋಕ್ತ ಕರ್ಮಂಗಳನು ತನುವಿನಲಿ
ಕಳಿವರೀ ಮಾಯಾವಿಮೋಹದ
ಜಲಧಿಯನು ಸತ್ಕರ್ಮಯೋಗದ
ಬಲುಹೆನಿಪ ನಾವೆಯಲಿ ಕೇಳು ನಿರಾಯಸದಲೆಂದ ೫

ಕೆಲರು ತೊಱೆದು ಸಮಸ್ತ ಕರ್ಮಂ
ಗಳನು ತನು ಕರಣೇಂದ್ರಿಯಂಗಳ
ನೊಳಗೆ ನಿಲಿಸಿಟ್ಟಂತರಾತ್ಮಧ್ಯಾನಪರರಾಗಿ
ಕಳಿವರಧಿಕ ಕ್ಲೇಶವಹ ಭವ
ಜಲಧಿಯನು ನಿನಗಾವುದೆರಡಱಿ
ಬಳಕೆಯಲಿ ವಿಪ್ರೋತ್ತಮನೆ ಹೇಳೆಂದನಸುರಾರಿ ೬

ಆಹ ಮಱೆದ್ದೈ ಮುನ್ನ ಗುರುಕುಲ
ಗೇಹದಲಿ ನಾವಿದ್ದು ವಿದ್ಯಾ
ವ್ಯೂಹವನು ಕಲಿತುದನು ಗುರುಶಿಶ್ರೂಷಣಾದಿಕವ
ಐಹಿಕಾಮುಷ್ಮಿಕಗಳಿಗೆ ನಿ
ರ್ವಾಹಕವಲಾ ಗುರುಪದಾಬ್ಜ ಸ
ಮಾಹಿತಾಮಳ ಭಕ್ತಿ ಕೃತವಿತ್ತಮನೆ ಕೇಳೆಂದ ೭

ಮೊದಲ ಗುರು ವರ್ಣಗಳಿಗವನೀ
ತ್ರಿದಶರದಱೊಳಗಾತ್ಮವಿದ್ಯಾ
ಪ್ರದವೆನಿಪ್ಪನೆ ಪರಮಗುರುವೆನ್ನಂತೆ ಮೂಜಗಕೆ
ವಿದಿತವಾತನ ಸೇವೆ ತನ್ನಯ
ಪದಮಳಾಮಳ ಸೇವೆ ತದ್ರೂ
ಪದಲಿ ಸಕಲ ಜಗದ್ಧಿತಾರ್ಥವ ಮಾಳ್ಪೆ ನಾನೆಂದ ೮

ಆತನೇ ಸರ್ವಾರ್ಥಕೋವಿದ
ನಾತನೇ ಸ್ವಾರ್ಥೈಕತತ್ಪರ
ನಾತನೇ ಕೃತಕೃತ್ಯನೀ ಸಚರಾಚರಂಗಳಲಿ
ಖ್ಯಾತವಹ ಮದ್ರೂಪ ಗುರುಪದ
ಪೋತದಲಿ ಸಂಸಾರ ಸಾಗರ
ದಾ ತಡಿಗೆ ದಾಂಟಿದ ಮಹಾತ್ಮನೆ ಧನ್ಯತಮನೆಂದ ೯

ಯಾಗ ಪೂರ್ತವ್ರತ ತಪೋನಿಜ
ಯೋಗ ಸಿದ್ಧಿಗಳಿಂದ ತುಷ್ಟಿಗ
ಳಾಗದೆನಗೆಲೆ ವಿಪ್ರವರ ಜೀವರನು ಭವವೆಂಬ
ಸಾಗರವ ದಾಂಟಿಸಲು ಬಲ್ಲ ಮ
ಹಾಗಮಜ್ಞ ಗುರೂತ್ತಮಾಂಘ್ರಿ ಪ
ರಾಗಸೇವೆಯೊಳಹವೊಲಾಗದು ಮಿಕ್ಕವರಲೆಂದ ೧೦

ತಂದೆ ಮಱೆದ್ದೈ ವಿಪ್ರವರ ಗುರು
ಮಂದಿರದ ವಾಸದಲಿ ನಾವಿರ
ಲೊಂದು ದಿನ ಗುರುಭಾರ್ಯೆಯಾಜ್ಞೆಯಲಿಂಧನವ ತರಲು
ಸಂದೆವಡವಿಗೆ ಗುರುಪದಾಬ್ಜ
ದ್ವಂದ್ವಶುಶ್ರೂಷಕರು ಗುರುಸಮ
ವೆಂದು ತತ್ಪತ್ನಿಯನು ಮನ್ನಿಸುತಧಿಕ ಭಕ್ತಿಯಲಿ ೧೧

ಅಡವಿಯಲಿ ನಾವಿರಲು ಬಂದುದು
ಸಿಡಿಲು ಮಳೆ ಮಿಂಚುಗಳು ಧರೆಯನು
ನಡುಗಿಸುವವೋಲಂಬರವನಾವರಿಸಿ ದೆಸೆ ದೆಸೆಗೆ
ಇಡಿದ ಮೇಘ ತಮಿಸ್ರದಲಿ ಕಂ
ಗೆಡಿಸಿ ಕಾನನದೊಳಗೆ ಹೆಮ್ಮರ
ನುಡಿದು ಬೀಸುವ ಗಾಳಿ ಮಳೆ ಘನತರದ ರಭಸದಲಿ ೧೨

ಅಸ್ತಮಿಸಿದನು ಸೂರ್ಯನನ್ನೆಗ
ನಿಸ್ತಮಿತವಹ ಮೇಘರವವಿ
ಧ್ವಸ್ತ ಧೈರ್ಯರು ಕಂಪಿತಾಂಗರು ವಾತವರುಷದಲಿ
ಹಸ್ತವನು ಹಿಡಿದೊಬ್ಬರೊಬ್ಬರು
ಪಾಸ್ತನಯನರು ತೊಳಲಿದೆವಲೈ
ವಸ್ತುಭೇದವನೀಕ್ಷಿಸಲು ನೆರೆಯದೆ ವನಾಂತದಲಿ ೧೩

ಅವಚಿದುದು ಕತ್ತಲೆ ದಿಗಂತದ
ವಿವರವನು ವರುಷಾಂಬುಧಾರಾ
ನಿವಹದಲಿ ನಿಮ್ನೋನ್ನತಂಗಳನಱಿವಡರಿದಾಯ್ತು
ಅವನಿಯಲಿ ನಾವ್ಯೆದೆ ಜಲ ಸಂ
ಪ್ಲವದಲಾಳುತ ಬೀಳುತಾರ
ಣ್ಯವನು ತೊಳಲಿದೆವಿರುಳು ಘನತರ ವರುಷವಾತದಲಿ ೧೪

ಬೆಳಗಹನ್ನೆಗ ಕತ್ತಲೆಯ ಮಳೆ
ಗಳ ಮಹಾವಾತಾಂಬುಪೂರದ
ಹಳುವದಲಿ ಹೊಲಬಳಿದು ಕೈವಿಡಿದೊಬ್ಬರೊಬ್ಬರನು
ತಿಳಿಯಬಾರದು ರೂಪು ಕಳೆವರ
ದಳತೆಯಲಿ ಮತಿ ನಿಂದುದಜ್ಞರ
ಬಳಕೆಯಂತಿರಲೇಕದೇಶ ನಿಜಾತ್ಮಭಾವದಲಿ ೧೫

ಇರಲಿರಲು ಬೆಳಗಾಯ್ತು ದುಃಖಾ
ತುರರಿಗಾ ಸಂಸಾರ ಭಯಸಾ
ಗರನಿಮಗ್ನರಿಗಾತ್ಮವಿದ್ಯಾಪ್ರೋತದಂದದಲಿ
ಇರುಳು ಮನದೊಳಗುಮ್ಮಳಿಸುತಾ
ಗುರುವರನು ನಿಜಭಾರ್ಯೆಯನು ಜಱಿ
ದರುಣನುದಯದಲಱಸುತಡವಿಗೆ ಬಂದನಾತ್ಮಜರ ೧೬

ಅಱಸುತಱಸುತ ಘೋರ ವಿಪಿನಾಂ
ತರದಲಾತನು ತೊಳಲಿ ನಿಜಶಿ
ಷ್ಯರನು ಕಾಣದೆ ಬಾಯ ಬಿಟ್ಟೊಱಲಿದನು ಬಸವಳಿದು
ತರುಣರಿರ ಮಕ್ಕಳಿರ ನಿಜಪದ
ಶರಣರಿರ ತನಗೋಸುಗಳಿದಿರೆ
ಕರಡಿ ಹುಲಿ ಹಂದಿಗಳ ಬಾಯಲಿ ಗಾಳಿ ಮಳೆಗಳಲಿ ೧೭

ಒಡಲಮೋಹವ ನೋಡದೆಮ್ಮಯ
ನುಡಿಯನೇ ಪಾಲಿಸುತ ಭರದಿಂ
ದಡವಿ ಪೊಕ್ಕಿರಿ ಸಿಕ್ಕಿದಿರಿ ಬಲು ಗಾಳಿಮಳೆಗಳಲಿ
ಕಡು ನಿರೋಧಂಬಟ್ಟು ಸಾಯದೆ
ಪೊಡವಿಯಲಿ ಬದುಕಿದ್ದಿರಾದಡೆ
ಮೃಡನೊಲವು ತನಗಧಿಕತರ ಕೃತಕೃತ್ಯ ತಾನೆಂದ ೧೮

ಜೀವದಾಸೆಯ ನೋಡದೆನ್ನಯ
ಸೇವೆಯನು ಮಾಡಿದಿರಿ ಮಾಡುವ
ಸೇವೆಯದಱಿಂದಧಿಕವಾವುದು ಸಾಧು ಶಿಷ್ಯರಿಗೆ
ಓವಿ ಗುರುವಚನವನು ನಿರ್ಮಳ
ಭಾವದಲಿ ನಡಸುವುದು ಸಕಲವ
ನೀವುದರ್ಪಿತಬುದ್ಧಿಯಲಿ ತನುಮನಧನಾದಿಕವ ೧೯

ಇಲ್ಲ ಶುಶ್ರೂಷೆಯಲಿ ಕೊಱತೆಗ
ಳಿಲ್ಲ ತನ್ನಲಿ ಕರುಣವದು ದಿಟ
ವುಳ್ಳಡಾಯುಷ್ಮಂತರಾಗಿ ಸಮಸ್ತವಿದ್ಯೆಗಳ
ಬಲ್ಲವರು ನೀವಾಗಿ ಲಕ್ಷ್ಮೀ
ವಲ್ಲಭನ ಕೃಪೆಯಾಗಲಿಹಪರ
ದಲ್ಲಿ ನೆಱೆ ಗತಿವಡೆವುದಾನು ಸದ್ಯೆವನಹಡೆಂದ ೨೦

ಎನುತೆನುತೆ ತೊಳಲಿದನು ಘನಕಾ
ನನದಲಱಸುತ ತಮ್ಮನಾ ಗುಣ
ವನಧಿ ಕಂಡನು ಬಳಿಕ ವಿಪಿನೋದ್ದೇಶದಲಿ ಬರುತ
ಮನದ ಸಂತೋಷದಲಿ ಸಾಂದೀಪ
ನು ನಿಜಾಶ್ರಮಕೈದಿ ಬಳಿಕಾ
ವನಿತೆ ಸಹಿತೋಲಾಡಿದನು ಕಾರುಣ್ಯಜಲಧಿಯಲಿ ೨೧

ಭೂಸುರೋತ್ತಮ ಕೇಳು ಗುರುಶು
ಶ್ರೂಷೆಯಿಂದಲ್ಲದೆ ವಿಮುಕ್ತಿಗೆ
ಲೇಸೆನಿಪ ಮಾರ್ಗವನು ಕಾಣೆನು ಮಿಕ್ಕುಪಾಯವನು
ನೇಸಱಿಂದಲ್ಲದೆ ತಮಿಸ್ರಕೆ
ನಾಶವಹುದೇ ತಂದೆ ತಾರಾ
ರಾಶಿಗಳ ತನಿವೆಳಗಿನಲಿ ಫಲವೇನು ಹೇಳೆಂದ ೨೨

ಎಂದಡಾ ದ್ವಿಜವರ್ಯನಧಿಕಾ
ನಂದದಲಿ ಕೇಳುತ್ತ ನುಡಿದನು
ಕಂದಣಿಯೆ ಕಮನೀಯ ಮೂರ್ತಿಯ ನೋಡಿ ಕೈಮುಗಿದು
ತಂದೆ ಕೇಳರಿದಾವುದೆನಗಾ
ನಂದನಿಧಿ ನಿನ್ನೊಡನೆ ಗುರುಕುಲ
ಮಂದಿರದ ಸಹವಾಸವಾಯ್ತೆನಗಿಹಪರಂಗಳಲಿ ೨೩

ಧರೆಗೆ ಬೇಱಿನ್ನಾರು ಪೂಜ್ಯರು
ಗುರುಹಿರಿಯರೆಂದೆನಿಸಿ ಸಚರಾ
ಚರದೊಳಗೆ ಪಿತೃಮಾತೃದೇವತೆಯೆಂಬ ನಾಮದಲಿ
ಪರಮ ಸಖಿಹಿತಬಂಧು ಸುಜನೋ
ತ್ತಮರನೆನಿಸಿ ನೆಱೆ ಭಜಿಸಿಕೊಂಬ
ಬ್ಬರದ ದೈವವು ದೇವ ನಿಮ್ಮಡಿಯಲ್ಲದಾರೆಂದ ೨೪

ನೀನೆ ದೈವದ ದೈವ ಗುರುವಿಗೆ
ನೀನೆ ಗುರು ಪೂಜ್ಯರಿಗೆ ಪೂಜ್ಯನು
ನೀನೆ ವಂದ್ಯರಿಗಧಿಕವಂದ್ಯನು ಮಾನ್ಯರಿಗೆ ಮಾನ್ಯ
ನೀನಲಾ ಪರಮಾತ್ಮನಾತ್ಮ
ಜ್ಞಾನವಂತರಿಗೆಲ್ಲರಿಗೆ ಮಾ
ಯಾನಿಮಿಾಲಿತ ತತ್ವ ದೃಷ್ಟಿಗಳಱಿಯಲರಿದೆಂದ ೨೫

ಅಱಿಯದಜ್ಞರಿಗಾತ್ಮತತ್ವವ
ನಱುಹಿಸಲು ನಾನಾ ಸ್ವರೂಪವ
ಧರಿಸಿ ನಿರ್ಮಳ ಸತ್ವಗುಣದಲಿ ಮೆಱೆವ ನಿಜಪದವ
ಪರಮಪಾವನ ಪುಣ್ಯಗುಣ ಸ
ಚ್ಚರಿತನಾಮನೆ ದೇವ ಕರುಣಾ
ಕರನೆ ಕೃತ ವಿತ್ತಮನೆ ಶರಣಾಗೆಂದನಾ ವಿಪ್ರ ೨೬

ಕಂಡೆನಲ್ಲೈ ಕೃಷ್ಣ ಮುನಿ ಹೃ
ತ್ಪುಂಡರೀಕನಿವಾಸಿಯನು ನೋಡಿತೆ
ಕಂಡೆನಖಿಳಾಮರರ ಭೂಗೃಹ ಗೂಢಚಿನ್ಮಯನ
ಕಂಡೆನೈ ಕರುಣಾನಿಧಿಯ ಪದ
ಪುಂಡರೀಕವನೆನ್ನವೋಲು
ದ್ದಂಡಧನ್ಯರದಾರೆನುತ ತಲೆವಾಗಿದನು ಪದಕೆ ೨೭

ಸಸಿನೆ ಕುಳ್ಳಿರು ಸಖಿಯೆ ತುಂಬಿತೆ
ಬಸಿಱು ನೀನೆಱಗಿದರೆ ಮಾತಿನ
ಹಸರ ಸಾಕೆನಗೇನನೈ ನೀ ತಂದೆ ಕಾಣಿಕೆಯ
ಉಸುರುಸುರು ನಾಚದಿರು ವೇಣದು
ತುಸವೆಯಾಗಲಿ ನೀನದನು ವಂ
ಚಿಸದೆ ಕೊಡು ಪರಿತುಷ್ಟ ನಾನಹೆನೆಂದನಸುರಾರಿ ೨೮

ರಿಕ್ತಹಸ್ತದಲೈತಹರೆ ನಿಜ
ಭಕ್ತರದು ಹುಸಿ ತುಚ್ಛವೆನ್ನೆನು
ಭಕ್ತಿಯಿಂದೊಲಿದಿತ್ತುದಣುವೇ ಮೇರುಸಮವೆನಗೆ
ಭಕ್ತಿಶೂನ್ಯರು ಘನತರದ ಧನ
ಶಕ್ತಿಯಲಿ ಬಹಳವನು ಕೊಟ್ಟರೆ
ಭೋಕ್ತೃವದಕಾನಲ್ಲ ತಾ ಪರಿತುಷ್ಟನಿಹೆನೆಂದ ೨೯

ಒಂದು ಫಲವೊಕ್ಕುಡಿತೆ ಜಲ ಮೇ
ಣೊಂದು ಹೂ ವೊಂದೆಲೆಗಳೆಂಬಿವ
ನೊಂದು ಮನದೊಳಗೆನ್ನನೇಭಾವಿಸುತ ಭಕುತಿಯಲಿ
ತಂದುಕೊಟ್ಟರೆ ಕೊಂಬೆನುಂಬೆನು
ತಂದೆ ಕೇಳೆನ್ನವರ ಪೂಜೆಯ
ಕುಂದು ಹೆಚ್ಚಿನ ದೈವವಾನಲ್ಲೆಂದನಸುರಾರಿ ೩೦

ಹಿರಿದು ಕಿಱಿದೆಂದೆನ್ನದಿರು ನಿಜಮನ
ವೆರಸಿಕೊಟ್ಟುದೆ ಮೇರುಸಮ್ಮಿತ
ದೊರಕಿದುದನೆನಗೀವುದದಿದೆಂದೆನ್ನದುಳ್ಳುದನು
ಹಿರಿದು ಹಾರುವನಲ್ಲ ಕೇಳೆಲೆ
ಪರಮ ಭಕುತನೆ ತಂದೆಯೇನನು
ದರುಶನಕೆ ಕಾಣಿಕೆಯನುಳಿಸದೆ ಹೇಳು ನೀನೆಂದ ೩೧

ಇತ್ತುದೇ ಸಾಕೆನಗೆ ನಾಚದಿ
ರುತ್ತಮನೆ ನೀನಱಿಯೆ ತನ್ನಯ
ಚಿತ್ತವನು ನಿಜಭಕ್ತಗೃಹದುಚ್ಚಿಷ್ಟವನು ತನಗೆ
ತುತ್ತುಗೊಂಬೊಂದರ್ಥ ಮನದಲಿ
ಭೃತ್ಯ ನಾನೆನ್ನವರಿಗೀವುದು
ಸತ್ಯಸಂಧನೆ ತಂದುದನು ನೀನಂಜಬೇಡೆಂದ ೩೨

ಇಂತೆನುತ್ತಿರಲಾ ದ್ವಿಜೋತ್ತಮ
ನೆಂತು ಕೊಡುವೆನು ಕುತ್ಸಿತವನ
ತ್ಯಂತ ತುಚ್ಛವನಱಿಯದೇತಕೆ ತಂದೆ ನಾನಿದನು
ಎಂತು ತಾನಿದನಱಿದನಕಟಕ
ಟಂತರಾತ್ಮಂಗರಿದೆ ಲಕ್ಷ್ಮೀ
ಕಾಂತನಂಘ್ರಿಗೆ ಕಾಣಿಕೆಯಿದಲ್ಲೆನುತ ಚಿಂತಿಸಿದ ೩೩

ಕೊಟ್ಟು ಕಡು ತುಚ್ಛವನು ನಗಿಸುವ
ಕಷ್ಟದಿಂದವೆ ಕುಡದೆ ಕಂಕುಳ
ಲಿಟ್ಟುಕೊಂಡೇ ಹೋಹೆನದುವೇ ಲೇಸು ತನಗೆನುತ
ದೃಷ್ಟಿಗೋಚರವಾಗದಂತೊಳ
ಗಿಟ್ಟು ಕಕ್ಷಾಂತರದಲಸುರಘ
ರಟ್ಟನಿದಿರಲಿ ನಾಚಿ ತೋಱಿಸದಿರ್ದನಾ ವಿಪ್ರ ೩೪

ಕೊಡುವೆನೆಂಬುದು ಹೋಗಿ ಮಾತನು
ನುಡಿಯದೇನೈ ತಂದೆ ನೀನೆ
ನ್ನೊಡನೆ ನಾಚಲದೇಕೆ ತಾರೆನು ಕಾಣಿಕೆಯನೆಂದು
ನುಡಿಯಲಾಗದೆ ಹಿಂದೆ ಕಂಕುಳ
ಲಡಸಿಕೊಂಡಿಹುದೇನು ತೋಱೆನು
ತೊಡನೆ ತಾ ಕೈಗೆತ್ತಿಕೊಂಡನು ಪೃಥುಕತಂಡುಲವ ೩೫

ಇನಿತಿರಲು ನಾಚುವರೆ ತನಗೀ
ಮನೆಗೆ ಮಕ್ಕಳಿಗುಂಟು ನೀನೆ
ನ್ನನುವನಱಿಯದೆ ಮನವನೇತಕೆ ಬಳಲಿಸಿದೆಯಕಟ
ಎನುತ ತೆಗೆದವಲಕ್ಕಿಯನು ಮುನಿ
ವಿನುತಮಹಿಮನು ಮುಷ್ಟಿಯಿಂದಾ
ನನಕೆ ಪೂಜೆಯ ಮಾಡಿಕೊಂಡನು ತಾನೆ ಮನವೊಲಿದು ೩೬

ಒಂದು ಮುಷ್ಟಿಯ ಮೆದ್ದು ಮತ್ತಿ
ನ್ನೊಂದು ಮುಷ್ಟಿಯ ಮೆಲುವೆನೆಂದಾ
ನಂದನಿಧಿ ಬಾಯ್ಗೆತ್ತಲೀಕ್ಷಿಸುತನೆ ಮಹಾಲಕುಮಿ
ಬಂದು ಹಿಡಿದಳು ಕೈಯನೇಕೀ
ಸೊಂದು ಚಾಪಲವಾತ್ಮತುಷ್ಟಂ
ಗೆಂದು ನುಡಿದಳು ನಡುಗಿ ಪರಮೇಶ್ವರನ ಕಾಲ್ಪಿಡಿದು ೩೭

ಲೋಕವೆರಡರ ಸುಖಕೆ ಬಹಳಾ
ನೇಕವಿಭವಂಗಳಿಗೆ ನಿಮ್ಮೊಂ
ದೇಕಮುಷ್ಟಿಗ್ರಾಸವೇ ಸಾಲದೆ ಮಹೀಸುರಗೆ
ಸಾಕು ಮಾಱದಿರೆನ್ನನತ್ತಲೆ
ನೂಕದಿರು ನಿಜಭಕ್ತರೆಂಬೊಂ
ದಾಕೃತಿಗೆ ಮರುಳಾಗಲೇಕೆನಲೆಂದನಂಗನೆಗೆ ೩೮

ಮರುಳು ಹೆಂಗಸೆ ಬಱಿದೆ ವಿಪ್ರನ
ನುರಿಯಿಸಿದೆ ದಾರಿದ್ರ್ಯ ದುಃಖದ
ಲೆರವಿಗನೆ ನಿನಗೀತನೆನ್ನಯ ಭಕುತನಕಟಕಟ
ಕರವ ಬಿಡು ಮಾಱಿದೆನು ಮಾಱಿದೆ
ನರಸಿಯಲ್ಲೆನಗೆನುತ ಬಹಳಾ
ಮರುಷದಲಿ ಜಱಿದಂತೆ ನುಡಿದನು ಜಗದಧೀಶ್ವರನು ೩೯

ಮುನ್ನ ಭಜಿಸುವುದಿಲ್ಲ ಭೂಸುರ
ತನ್ನನರ್ಚಿಸಿ ನಿಮ್ಮಡಿಯನಾ
ನಿನ್ನು ಮಾಡುವುದೇನು ದೇವರು ಬಲ್ಲರೇಕಿನಿತು
ತನ್ನೊಡನೆ ಮನಕತದ ಮಾತೆನೆ
ಪನ್ನಗೇಂದ್ರಮಹಾಸನನು ವರ
ವರ್ಣಿನಿಯನೀಕ್ಷಿಸುತ ನುಡಿದನು ನಿಜಮನೋಗತವ ೪೦

ನಿನ್ನನರ್ಚಿಸಿ ಭಜಿಸುವರೆ ತ
ನ್ನುನ್ನತಾಮಳ ಸಹಜಭಕುತರು
ಮನ್ನಿಸರು ತುಷವೆಂದು ನಿನ್ನೈಶ್ವರ್ಯಸಂಪದವ
ಹೊನ್ನು ಹೊಸ್ತಿಲಲಿರಲು ತಿರಿವರೆ
ಧಾನ್ಯವನು ಮತಿವಂತರಱಸು
ತ್ತನ್ಯದೈವಂಗಳನು ಭಕುತರು ಭಜಿಸುವರೆ ಯೆಂದ ೪೧

ಎನಿತನೆನ್ನಯ ಭಕತರಿಂಗೆಲೆ
ವನಿತೆ ಲೇಸನು ಮಾಳ್ಪೆಯನಿತುವ
ತನಗೆ ನೀ ಮಾಡಿದುದು ಬೇಱೆನಗಿಲ್ಲ ನೀ ಮಾಳ್ಪ
ಮನದೊಲವು ತನ್ನೊಲವ ಪಡೆವರೆ
ವನಜಮುಖಿ ತನಗೋತು ನಿಃಸ್ಪೃಹ
ರೆನಿಪ ತನ್ನೇಕಾಂತಭಕ್ತರ ಭಜಿಸು ಹೋಗೆಂದ ೪೨

ಎನಿತನೆನ್ನಯ ಭಕ್ತರೆನ್ನನು
ನೆನೆವರದಱಿಂದಧಿಕನವರನು
ನೆನೆವೆನಂಗನೆ ಬಿಡದೆ ಯೋಗಕ್ಷೇಮವನು ಧರಿಸಿ
ಜನನಿ ಶಿಶುವನು ನೆನೆವವೋಲಾ
ಜನನಿಯನು ಶಿಶು ನೆನೆಯಲಱಿವುದೆ
ವನಿತೆ ನೀನಿದನಱಿಯೆ ತನ್ನ ಮನೋಗತವನೆಂದ ೪೩

ಉಂಬ ಠಾವದು ತನಗೆ ಪೂಜೆಯ
ಕೊಂಬ ಠಾವದು ತನ್ನ ಮೂರ್ತಿಯ
ಡಿಂಬವದು ನಿಜಜೀವವವದಿರು ತತ್ಪ್ರಸಂಗದಲಿ
ಅಂಬುಜಾನನೆ ರಮಿಸುವುದು ಮನ
ವಿಂಬುಗೊಂಡದಱೊಳಗೆ ನೀನೇ
ನೆಂಬೆ ಹೇಳೆನಲೆಱಗಿ ತಪ್ಪಿದೆನೆಂದಳಬುಧಿಭವೆ ೪೪

ಹಲವು ಪರಿಯಲಿ ಬೇಡಿಕೊಳಲಾ
ಲಲನೆಯರ್ಥಿಯ ಸಲಿಸಲೋಸುಗ
ಮೆಲಲುದೆಗೆದವಲಕ್ಕಿಯನು ನಗುತಿರಿಸಿದನು ಕೆಲಕೆ
ಒಲಿದು ಭೋಜನ ಪಾನ ಶಯನಂ
ಗಳಲಿ ಮನ್ನಿಸಿದನು ಮಹೀಸುರ
ತಿಲಕನನು ತನಗುಳ್ಳ ಬಹಳೈಶ್ವರ್ಯಭೋಗದಲಿ ೪೫

ಬಂದಿರುಳನಸುರಾಂತಕನ ನಿಜ
ಮಂದಿರದಲೇ ನೂಕಿದನು ಮುದ
ದಿಂದ ಸಹಸಲ್ಲಾಪ ಭೋಜನ ವಿವಿಧಗೋಷ್ಠಿಯಲಿ
ಬಂದನುದಯಾಚಲಕೆ ರವಿಯೆನ
ಲಂದು ವಿಪ್ರೋತ್ತಮನು ತನ್ನಯ
ಮಂದಿರಕೆ ಬೀಳ್ಕೊಂಡನಚ್ಯುತನಂಘ್ರಿಯಲಿ ನಮಿಸಿ ೪೬

ಬಿಡಲಱಿಯದಚ್ಯುತನ ಪದವನು
ಪೊಡವಿಯಮರನು ಕಾತರಿಸಿ ಕಡ
ಲಿಡುವ ಕಂಗಳ ಜಲದಲೋಲಾಡುತ್ತ ಬೀಳ್ಕೊಂಡು
ನಡೆದನತ್ತಲು ವಿಪ್ರನನು ಕಿಱ
ದೆಡೆಗೆ ಕಳುಹಿ ಕೃಪಾಜಲಧಿ ಜಗ
ದೊಡೆಯ ನಿತ್ಯಾತುಮನು ಮರಳಿದನಾತ್ಮಮಂದಿರಕೆ ೪೭

ತೊಂಭತ್ತಾರನೆಯ ಸಂಧಿ ಮುಗಿಯಿತು.

# ತೊಂಭತ್ತೇಳನೆಯ ಸಂಧಿ

ಬೇಡಲೇತಕೆ ಭಕ್ತರೆನ್ನನು
ಮಾಡುವೆನು ತದ್ಧಿತವನೆಂಬುದ
ನಾಡಲಱಿಯನು ನಿಜಗುಣವ ಮೆಱೆದನು ದಾನವಧ್ವಂಸಿ

ಬೀಳುಕೊಂಡೆಲೆ ಭೂಪ ವಿಪ್ರರ
ಮೌಳಿಮಣಿ ಹೊಱವಂಟು ಮುರಹರ
ನಾಲಯವನೈತಂದನೊಬ್ಬನೆ ಬಂದ ಮಾರ್ಗದಲಿ
ಲೋಲಲೋಚನೆಯೆಂದುದನು ಸಿರಿ
ಲೋಲನಂಘ್ರಿಗೆ ಸೂಚಿಸದೆ ತ
ನ್ನಾಲಯಕೆ ಮನದೊಳಗೆ ನಾಚುತ ಧನವಿಹೀನತೆಗೆ ೧

ಏನನೆಂಬಳೊ ವನಿತೆ ಗೃಹಕೆ ವಿ
ಹೀನಧನ ತಾ ಹೋಗಲಕಟಾ
ದೀನತನದಲಿ ತನ್ನ ಬರವನು ಹಾರುತಿದ್ದವಳು
ಮಾನಿನಿಯ ಮನದಿರವನಕಟಾ
ಶ್ರೀನಿವಾಸನು ನೋಡ ನಾನಿದ
ಕೇನ ಮಾಡುವೆನೆನುತ ವಿಪ್ರೋತ್ತಮನು ನಡೆತಂದ ೨

ಏವುದೆನ್ನಯ ಚಿಂತೆಯಲಿ ಮಾ
ನಾವಮಾನವಿದ್ದೆಡೆ ತನ್ನದು
ಜೀವನವು ನೆಱೆ ಸಫಲವಾಯ್ತೆನಗಾ ಮುನಿಪ್ರಿಯನ
ಪಾವನಾಂಘ್ರಿಸರೋಜಯುಗಳವ
ನೀ ವಿಲೋಚನಗಳಲಿ ಕಂಡೆನ
ದಾವನೆನ್ನಂದದ ಸನಾಥನು ಧನ್ಯತಮನೆಂದ ೩

ಅರರೆ ಭಾಪುರೆ ಕಂಡೆನೆನ್ನಯ
ಪರಮಭಾಗ್ಯದ ಸೀಮೆಯನು ತಾ
ನಿರದೆ ಬಂದಪ್ಪಿದನು ತನ್ನನು ಮಂಚದಿಂದಿಳಿದು
ಸಿರಿ ಮಹಾಲಕುಮಿಯನು ಧರಿಸಿ
ದ್ದುರದಲಕಟಾನಾವ ಜನ್ಮಾಂ
ತರಸಹಸ್ರಾರ್ಜಿತ ತಪಃಫಲವಂತನೋ ಯೆಂದ ೪

ಆವನೊಬ್ಬನ ಚರಣಕಮಲನ
ಪಾವನೇಜದ ಪುಣ್ಯಜಲವನು
ದೇವದೇವನು ಧರಿಸಿದನು ಮೌಳಿಯಲಿ ಶಶಿಮೌಳಿ
ಆ ವಿಮಲ ಗುಣಗಣ ಮದೀಯ ನ
ಪಾವನೇಜದ ಜಲವನೇನೆಂ
ದೋವಿ ಧರಿಸಿದನಾತ್ಮಶಿರದಲಿ ಶಿವಶಿವಾಯೆಂದ ೫

ಅರ್ಚಿಸಲು ದೊರಕೊಳ್ಳವಾವನ
ಸಚ್ಚರಿತ ಪದಕಮಲವನುರವ
ರಾರ್ಚಿತಾಂಘ್ರಿಗಳಿಂಗೆ ಸರಸಿಜಭವ ಭವಾದ್ಯರಿಗೆ
ಅರ್ಚಿಸಿದನಾ ಶ್ರುತಿಶತಾನನ
ಚರ್ಚಿತಾಂಘ್ರಿಸರೋಜನೆನ್ನನು
ಮುಚ್ಚುಮುಱೆಯೇಕಾವ ಕರುಣಿಯೊ ಶಿವ ಶಿವಾಯೆಂದ ೬

ಅಜಭವಾದಿ ಸುರಾಸುರೇಂದ್ರ
ವ್ರಜದ ವಿಭವಂಗಳಿಗೆ ಸಂಗರ
ವಿಜಯ ಸಿದ್ಧಿಗೆ ಹೇತುವಾರ ಕಟಾಕ್ಷಲಕ್ಷ್ಮಿಯಲಿ
ವ್ಯಜನಹಸ್ತದಲೆನ್ನನಕಟಾ
ಭಜಿಸಿದಳು ತಾನಾವನಕಟಾ
ಸುಜನಸೇವ್ಯನ ಕರುಣದಳತೆಯನಱಿವರಾರೆಂದ ೭

ಮಾತನಾಡಿದನೆನ್ನೊಡನೆ ಪರ
ಮಾತುಮನು ನಿಗಮೌಘವಾವನ
ಮಾತು ಗಡ ಲಕ್ಷಿಸಲು ನೆರೆಯವು ಪಥವನಿದನೆಂದು
ಮಾತು ಹಲಬರಲೇನು ಭುವನ
ವ್ರಾತದಲಿ ತನ್ನಂತೆ ಪುಣ್ಯ ಗು
ಣಾತಿಶಯರಾರೆನುತ ತಲೆದೂಗುತ್ತ ನಡೆತಂದ ೮

ನಿತ್ಯತೃಪ್ತನು ಪೂರ್ಣಸುಖ ಸಂ
ಪತ್ಸ್ವರೂಪನು ಯಾಗಭಾಗನಿ
ವೃತ್ತ ತೃಷ್ಣನು ತನ್ನ ಕೈಯವಲಕ್ಕಿಯನು ತೆಗೆದು
ತುತ್ತುಗೊಂಡನು ಜಱಿದು ತನ್ನಯ
ಮತ್ತಕಾಶಿನಿ ಲಕ್ಷ್ಮಿಯನು ನಿಜ
ಭೃತ್ಯರುನ್ನತಿಕೆಯನು ಮೆಱೆದನು ಸಕಲಜನ ಹೊಗಳೆ ೯

ಧನವನಿತ್ತರೆ ಮಱೆವನೆನ್ನನು
ಧನಮದಾಂಧತೆಯಿಂದ ಲೆಕ್ಕಿಸ
ನೆನುತ ಕೊಡದೇ ಕಳುಹಿದನು ಕಾರುಣ್ಯಚಿತ್ತದಲಿ
ದನುಜಹರನಲ್ಲದಡೆ ಕೊಂಬನೆ
ಧನವನಕಟಾ ತನ್ನ ವನಿತೆಯ
ಮನವನಱಿಯನೆ ಸಕಲಚೈತನ್ಯಾತ್ಮಮಯನೆಂದ ೧೦

ಇಂತು ನೆನೆವುತ ನೆನೆವುತಾತ್ಮ ಗೃ
ಹಾಂತಿಕಕೆ ನಡೆತಂದನಾಲಿಸು
ತಂತರಂಗದಲಚ್ಯುತಾಂಘ್ರಿಸರೋಜಯುಗಳವನು
ಸಂತಸದಲಭಿವರ್ಣಿಸುತ ಮುನಿ
ಚಿಂತಿತಾಂಘ್ರಿಯ ಪರಮ ರೂಪೋ
ದಾಂತ ಗುಣಗಣಗಳನು ತದ್ಗತ ಭಾವಭಕ್ತಿಯಲಿ ೧೧

ಚಾರು ಹೇಮನಿಬದ್ಧ ರತ್ನ
ದ್ವಾರನಿಕರದ ಥರಥರದ ಗುಡಿ
ತೋರಣಂಗಳ ಕಳಶ ಕನ್ನಡಿಗಳ ಮಹೋತ್ಸವದ
ಭೂರಿ ಭೂಷಣ ವಸನದಲಿ
ನಾರಿಯರು ರಂಜಿಸಲು ಕಂಡನು
ದೂರದಿಂದೈತರುತ ವಿಪ್ರೋತ್ತಮನು ನಿಜಗೃಹವ ೧೨

ಉಲಿವ ಶುಕ ಪಿಕ ಹಂಸ ಭೃಂಗಾ
ವಳಿಯ ಫಲಭರದಾಮ್ರಶಾಖಾ
ವಳಿಯ ಕಲ್ಪದ್ರುಮಲತಾಸಂಕುಲ ವನಾವಳಿಯ
ವಿಳಸದಮಲಾಂಭೋಜಕುಮುದಾ
ವಳಿಯ ಪರಿಮಳಲೋಲ ಭೃಂಗಾ
ವಳಿಯ ನಿಜಗೃಹಲಕ್ಷ್ಮಿಯನು ನೋಡುತ್ತ ನಡೆತಂದ ೧೩

ಹೊಳೆವ ಹೊಸ ಹೊಂಗಳಸ ನಿಕರದ
ನಿಳಯರಶ್ಮಿಯ ಸುರವಿಮಾನಾ
ವಳಿಯ ವರಮಣಿಹೇಮರಚನಾ ರುಚಿರದೀಪ್ತಿಗಳ
ನಳಿನಭವ ಮಯ ವಿಶ್ವಕರ್ಮರ
ಲಲಿತ ಕೌಶಲ ಯಂತ್ರವಿದ್ಯೆಗೆ
ತಿಲಕದಂತಿರೆ ಯೆಸೆವ ಗೃಹವನು ಕಂಡನಾ ವಿಪ್ರ ೧೪

ಆರ ಪುರವಿದು ಬಂದೆನೆಲ್ಲಿಗೆ
ದಾರಿ ಮುನ್ನಿನದಹುದು ಹರಹರ
ಮೇರೆದಪ್ಪಿದೆನಿದೆಯಲಾ ಶೃಂಗಾರರಸ ಜಲಧಿ
ಪಾರಮೇಷ್ಠ್ಯದ ವೈಭವದ ಸಾ
ಕಾರವೋ ಭಾಪೆನುತ ಭಯದಲಿ
ದೂರದೀಂದೀಕ್ಷಿಸುತ ಗಮಿಸದೆ ನಿಂದನಾ ವಿಪ್ರ ೧೫

ನಿಂದು ಸೈವೆರಗಾಗಿ ತನ್ನಯ
ಮಂದಿರವ ಹೊಗಲಮ್ಮದತಿಭಯ
ದಿಂದ ನಡುಗುತ್ತಿರಲು ಕಂಡಳು ಭೂಸುರೋತ್ತಮನ
ಇಂದುಮುಖಿ ನಸುನಗುತ ವನಿತಾ
ವೃಂದಶತ ಪರಿವಾರದಲಿ ನಡೆ
ತಂದು ಕಂಡಪ್ಪಿದಳು ಕಾಲ್ಗಳಿಗೆರಗಿ ನಿಜಪತಿಯ ೧೬

ಬಾಲೆಯರು ಹೊಂಗಳಸ ಜಲದಲಿ
ಕಾಲುದೊಳೆದುತ್ತಮವೆನಿಪ್ಪ ದು
ಕೂಲವ ಹೊದಿಸಿದರು ಮಾರ್ಗಶ್ರಮವನಪಹರಿಸಿ
ಸಾಲ ಹೊಂದಳಿಗೆಗಳ ನವಮಣಿ
ಜಾಲ ನೀರಾಂಜನದ ಸಂಭ್ರಮ
ದೇಳಿಗೆಯಲಂದಿದಿರುಗೊಂಡುದು ಸಕಳ ಜನನಿವಹ ೧೭

ಕಳಸ ಕನ್ನಡಿ ವಾದ್ಯರವ ಮಂ
ಗಳದಲೆಸೆಯಲು ಸೂತ ಮಾಗಧ
ರೊಲಿದು ಹೊಗಳಲು ವಾಮ ದಕ್ಷಿಣ ಪಾರ್ಶ್ವದಲಿ ನೆರೆದು
ಹೊಳೆವ ಗುಡಿ ತೋರಣ ಪತಾಕಾ
ವಳಿಯ ಧವಳಚ್ಛತ್ರನಿಕರದ
ನೆಳಲೊಳಗೆ ನಡೆತಂದು ಹೊಕ್ಕನು ನಲಿದು ನಿಜಗೃಹವ ೧೮

ಇಕ್ಕೆಲದ ಮಣಿಸೊಡರುಗಳ ಮಾ
ಣಿಕ್ಯಮಯ ಭಿತ್ತಿಗಳ ನಯವಡೆ
ದೊಕ್ಕ ತುಪ್ಪವನುಡುಗುವೆಳ ನೀಲೋತ್ಪಲಸ್ಥಳದ
ಲೆಕ್ಕವಿಲ್ಲದ ಮಣಿ ಕನಕ ಪೀ
ಠೋತ್ಕರದ ವರ ಮಂಚನಿಕರದ
ತೆಕ್ಕೆಗಳ ತನಿವೆಳಗು ತೆಗೆದುದು ಜನದ ಕಣ್ಮನವ ೧೯

ಸಾಲ ರತುನ ಸ್ತಂಭನಿಕರದ
ಜಾಳಿಗೆಯ ಮುತ್ತುಗಳ ಭಿತ್ತಿಯ
ಮೇಲೆ ಮಾರ್ಮೊಳದೆಸೆವ ಕಾಂತಾಜನದ ವೈಸಿರಿಯ
ಹಾಲ ನೊರೆಯನು ಹಳಿವ ಹಾಸುಗ
ಳೋಳಿಗಳ ನಿಜಭವನ ಲಕ್ಷ್ಮಿಯ
ನಾಲಿಸುತ ಗುಣವನಧಿ ಮಿಗೆ ಬೆರಗಾದನಡಿಗಡಿಗೆ ೨೦

ಆ ಗರುವ ಸುರಪತಿಯ ಭವನಕೆ
ಭೋಗವತಿಯೈಶ್ವರ್ಯ ಸಿದ್ಧಿಗೆ
ತೂಗಿದರೆ ಶತಗುಣ ಸಮೃದ್ಧವೆನಿಪ್ಪ ನಿಜಗೃಹದ
ಭೋಗಸಾಧನ ಸಂಪದವನಾ
ಯೋಗನಿಧಿ ಕಾಣುತ್ತ ವಿಸ್ಮಿತ
ನಾಗಿ ತನ್ನೊಳಗೆಂದನತಿಶಯ ಭಕ್ತಿಭಾವದಲಿ ೨೧

ನಿರುತಮಿದು ಸಾಕ್ಷಾತ್ ವಿಶ್ವಂ
ಭರನ ಪಾವನ ದಿವ್ಯ ಪದಯುಗ
ಸರಸಿರುಹ ಸಂದರುಶನದ ಫಲವೀ ಮಹಾವಿಭವ
ನಿರುಪಮೈಶ್ವರ್ಯವಿದು ಹರಹರ
ಹರ ಮಹಾದೇವೆನಗೆ ಹೇಳದೆ
ಕರುಣಿಸಿದನಕಟೆನುತ ಹೊಂಪುಳಿಯೋದನಡಿಗಡಿಗೆ ೨೨

ಎತ್ತಲಾ ನಿಜಮಹಿಮೆ ಕಾಣಿಕೆ
ಯೆತ್ತಲಕಟವಲಕ್ಕಿತಾನದ
ತುತ್ತು ಗೊಂಡೊಲಿದೀವುದೆತ್ತಲು ಸಕಲಸಂಪದವ
ಇತ್ತಡತ್ಯಲ್ಪವನು ತನಗೆ ಮ
ಹೋತ್ತರವ ಮಾಡುವನು ತಾ ನಿಜ
ಭೃತ್ಯರಿಂಗೊಲಿದಿತ್ತುದತಿ ಕಿಱಿದೆಂಬನನವರತ ೨೩

ಇಂತು ಬಹಳ ಕೃಪಾನಿಧಿಯ ನಾ
ನೆಂತು ಮಱೆವೆನು ಭವಭವದಲೆ
ನ್ನಂತರಂಗನಿವಾಸಿಯನು ಜಗದೇಕದೈವವನು
ಅಂತರಾಯವನೇಕೆ ತನಗಿದ
ನಂತರಹಿತನು ಕರುಣಿಸಿದನೀ
ಕಾಂತೆಯಿಂದಿನಿತಾಯಿತಕಟೆಂದಳಲಿದನು ವಿಪ್ರ ೨೪

ಸಿರಿಯಲಾಪತ್ತಿನಲಿ ಜನ್ಮಾಂ
ತರಸಹಸ್ರದಲಾ ಮುಕುಂದನ
ಚರಣಕಮಲಪರಾಗ ಸೌಹೃದಸೌಖ್ಯ ವೈತ್ರಿಗಳು
ನಿರುತ ತತ್ಪುರುಷಪ್ರಸಂಗದ
ಪರಮಸುಖವೆನಗಿತರ ಸಂಗಾ
ತುರಗೆ ನೆಱೆ ದೊರಕುವುದೆ ಸುಕೃತ ಭವಂಗಳಿಂಗೆಂದ ೨೫

ಎನುತೆನುತ ತತ್ಕೀರ್ತಿಗುಣವನು
ನೆನೆದು ವಿಸ್ತರಿಸುತ್ತ ನಾಮವ
ನನವರತ ಕೀರ್ತಿಸುತ ಕೇಳುತ ತತ್ಕಥಾಮೃತವ
ವಿನುತ ವೈಷ್ಣವಸಂಗಸುಖದಲಿ
ದಿನವ ಕಳೆವುತ ಕೃಷ್ಣಪದಯುಗ
ವನಜವಿಶ್ರಾಂತಾತ್ಮನಿದ್ದನು ಬಹಳ ಭೋಗದಲಿ ೨೬

ಸಕಲವನು ತನ್ನೊಳಗೆ ತನ್ನನು
ಸಕಲದಲಿ ಭಾವಿಸುತ ಸರ್ವಾ
ತ್ಮಕನೆನಿಪ್ಪಚ್ಯುತನನುಭಯದಲೇಕರೂಪದಲಿ
ವಿಕಳವಿಲ್ಲದೆ ಪೂರ್ಣಸುಖಮಯ
ಭಕುತಿ ನಿರ್ಮಳ ಭಾವದಲಿ ನೈ
ಷ್ಠಿಕನೆನಿಸಿ ನಿತ್ಯಾತ್ಮಪದದಲಿ ನಿಂದನಾ ವಿಪ್ರ ೨೭

ತೊಂಭತ್ತೇಳನೆಯ ಸಂಧಿ ಮುಗಿಯಿತು.

## ತೊಂಭತ್ತೆಂಟನೆಯ ಸಂಧಿ

ಕೈತವದಲಭಿಭವಿಸಿದಡೆ ತ
ದ್ದ್ಯೂತಮುಖದಲಿ ರುಕ್ಮಿಯನು ರೋ
ಷಾತಿಶಯದಲಿ ಮುಡುಹಿದನು ಪರಿಘದಲಿ ಬಲಭದ್ರ

ಅರಸ ಕೇಳೊಂದುದಿನ ವಿಶ್ವಂ
ಭರನ ಹೊರೆಗೆಂದಾತ್ಮಪುತ್ರಿಯ
ವರವಿವಾಹವ ಮಾಳ್ಪ ಭರದಲಿ ರುಕ್ಮಿ ನಿಜಪುರಕೆ
ಕರೆಯಲಟ್ಟಿದಡಖಿಳಭುವನೇ
ಶ್ವರನು ಬಂದನು ಭೋಜಕಟಕದ
ಪುರಕೆ ಯಾದವ ಸೈನ್ಯಸಾಗರಸಹಿತ ವಿಭವದಲಿ ೧

ಕೋಪವಡಗದು ಪೂರ್ವವೈರದ
ತಾಪ ಹಿಂಗದು ತಂಗಿಯೊಲವನು
ರೂಪವಾಗಲೆಬೇಕೆನುತ ಮೇಗಱೆಯ ಮೋಹದಲಿ
ಕಾಪಟಗನಟ್ಟಿದರೆ ಘನ ಚಿ
ದ್ರೂಪನೈದಿದನಾತ್ಮಮಾಯಾ
ಗೋಪಿತಾತ್ಮಕನಾ ವಿದರ್ಭನೃಪಾಲಸುತೆ ಸಹಿತ ೨

ಆ ಮಹೋತ್ಸವದೊಳಗೆ ನೆರೆದಾ
ಭೂಮಿಪತಿಗಳು ಕೃಷ್ಣವೈರ
ಕ್ಷಾಮಮತಿಗಳು ದಂತವಕ್ರವಿಡೂರಥಾದಿಗಳು
ತಾಮಸರು ತಮ್ಮೊಳಗೆ ಘನಸಂ
ಗ್ರಾಮಜಯಗರ್ವಿತರನೀ ಬಲ
ರಾಮ ಮುಖ್ಯರನಭಿಭವಿಸಬೇಕೆಂದರಾಖಳರು ೩

ಕಾದಿದರೆ ಮನಮುನಿಸು ತಂಗಿಗೆ
ಭೇದಕಾರಣವಹುದು ರಣದಲಿ
ಹೋದ ಮೂಗಂಕುರಿಸಬೇಹುದೆನುತ್ತ ರುಕ್ಮಿಯನು
ಬೋಧಿಸಿದರಾ ಖಳರು ಗೆಲುವುದು
ಜೂಜಿನಲಿ ಬಲರಾಮನನು ಸಂ
ಭೇದವಾಗೆಚ್ಚಱಿಸಿದರು ವೈರವನು ದುರ್ಬಲರು ೪

ಎನಲು ತಪ್ಪದೆನುತ್ತ ಬಲರಾ
ಮನನು ಕರೆದನು ರುಕ್ಮಿ ಬಾರೈ
ಜನಪರಿಂಗುತ್ಸವದಲಾಡುವುದೊಲಿದು ಲೀಲೆಯಲಿ
ನಿನಗೆ ಮತವಹಡಾಡುವೆವು ಜೂ
ಜಿನಲಿ ಪರಿಚಯವುಳ್ಳಡೆನಲಾ
ದನುಜಹರನಗ್ರಜನದೇ ಲೇಸೆನುತ ನಡೆತಂದ ೫

ಆಡಿದರು ಬಳಿಕಬ್ಬರದನೇ
ನೋಡಿದರು ಭೂಮಿಪರು ವೈರದ
ಮೂಡಿಗೆಯ ಮಾತ್ಸರ್ಯದಲಿ ಕುಳ್ಳಿರ್ದು ಸಭೆಯೊಳಗೆ
ಓಡುಕುಳತನದೊಳಗೆ ವೈರವ
ಬೇಡಿಕೊಳುತಾ ರುಕ್ಮಿವಿಜಯವ
ಮಾಡಬೇಕೆಂದೆನುತ ಗೂಢ ಮನೋನುರಾಗದಲಿ ೬

ಸಾರಿಗಳನೊಡ್ಡಿಸಿದನೊಂದೇ
ಬಾರಿ ನೂಱೈನೂಱು ಸಾವಿರ
ಮೀಱಲಯುತವೆನುತ್ತ ರುಕ್ಮಿನೃಪಾಲನುಗ್ಘಡಿಸೆ
ಭೂರಿ ಪಣವನು ಗೆಲಿದನಾ ಯದು
ವೀರನನಿತುವನೇನನೆಂಬೆನು
ನೀರಲದ್ದಿದಲಾತಮುಖದಂತಾಯ್ತು ನೃಪವದನ ೭

ಗೆಲಿದನನಿತನು ರುಕ್ಮಿ ಹಾಸ್ಯದ
ಜಲಧಿಯಾಯ್ತಾಸ್ಥಾನ ದಂತಾ
ವಳಿಗಳನು ತೋಱುತ್ತ ನಕ್ಕನು ದಂತವಕ್ತ್ರನೃಪ
ಉಲಿದರೊಬ್ಬರನೊಬ್ಬರಂಗೈ
ತಳವ ಹೊಯ್ದಾಡಿದರು ರಾಮನ
ತಲೆಗೆ ವೇದನೆಯಾಯಿತುಬ್ಬರವಾಯ್ತು ಘನರೋಷ ೮

ಮತ್ತೆ ಲಕ್ಷವನೊಡ್ಡಿದನು ನೃಪ
ನತ್ಯಧಿಕ ಗರ್ವದಲಿ ಹಲಧರ
ನತ್ತಲಾದುದು ವಿಜಯಸಿರಿಯ ಕಟಾಕ್ಷ ವಿಕ್ಷೇಪ
ಎತ್ತಣದು ಹುಸಿ ತಾನೆ ಗೆಲಿದೆನೆ
ನುತ್ತ ಛಲದಲಿ ದುಷ್ಟಮತಿ ನುಡಿ
ವುತ್ತಿರಲು ಗಹಗಹಿಸುತಿರ್ದುದು ಕೂಡೆ ನೃಪಕಟಕ ೯

ಜಾಱಿದೈ ಕೈತವಕೆ ಮನವನು
ಮಾಱಿದಿರೆ ಮಧ್ಯಸ್ಥರೆನುತಿಳೆ
ಯೋರುಗುಡಿಸಲು ತನುವನೊಲೆದನು ಧರ್ಮಸಂಸ್ಥಿತಿಗೆ
ಮೀಱಿದಧಿಕ ಕ್ರೋಧದಲಿ ಕಾ
ಹೇಱಿದವು ಕಂಗಳು ಕಟಾಕ್ಷವ
ತೋಱಿದನು ಕೆಲಬಲದ ದುಷ್ಟನೃಪಾಲಕರ ಸಭೆಗೆ ೧೦

ಅರ್ಬುದಕೆ ಹಾಯೆನುತ ಹಲಧರ
ನಬ್ಬರಿಸಲಾ ಯೆನುತ ರುಕ್ಮಿಸ
ಗರ್ವದಲಿ ಹಾಯ್ಕಿದನು ಗೆಲಿದನು ಮತ್ತೆ ಬಲಭದ್ರ
ಸರ್ವಜನವೊಂದೆಸೆಗೆ ಹಲಧರ
ನೊಬ್ಬನೊಂದೆಸೆಗಿಲ್ಲ ಜಯವೆನು
ತುಬ್ಬರದ ಹಾಸ್ಯದಲಿ ಜಱೆದನು ರುಕ್ಮಿ ಯದುವರನ ೧೧

ಏಕೆ ನಿನಗೀ ವಿದ್ಯೆ ಗೋಪರಿ
ಗೇಕೆ ಗಿರಿವನವಾಸರತರಿಗೆ
ಲೋಕಬಾಹ್ಯಾಚಾರರಿಗೆ ದುರ್ಮಂತ್ರಶೀಲರಿಗೆ
ಸಾಕಿದವನನು ನಂದಗೋಪನ
ನೇಕೆ ಮಱೆದಿರಿ ಗೋಪವಧುಗಳು
ಸಾಕೆನಿಸಿದರೆ ಜಾರಕರ್ಮದಲೆಂದನಾ ರುಕ್ಮಿ ೧೨

ನೃಪರಿಗಲ್ಲದೆ ಜೂಜಿನಂಗವಿ
ದಪಸದರಿಗಳವಡುವದೆಂತೆಲೆ
ಕಪಟಗಳಿರನ್ಯಾಯವರ್ತಿಗಳಿರ ದುರಾತ್ಮಕರ
ಗುಪಿತ ಸಾಗರವಾಸದಲಿ ನಿ
ಷ್ಕೃಪರೆನಿಸಿ ನೆಲೆಗೊಂಡು ಬಾಧಿಸು
ತಪಚಿತಕ್ಷಿತಿಪಾಲ ವರ್ಗವನಿಹಿರಿ ನೀವೆಂದ ೧೩

ಎಂದು ಖಳನಾಕ್ಷೇಪಿಸಲು ನೃಪ
ವೃಂದವದು ಹಾಯೆನುತ ಹಾಸ್ಯಾ
ನಂದದಲಿ ಮುಳುಗಾಡಿ ಹೊರಳುತ್ತಿರಲು ಸಭೆಯೊಳಗೆ
ಅಂದದನು ನೆಱೆ ಕೇಳುತಂತಕ
ನಂದದಲಿ ಹೂಂಕರಿಸುತಡಿಗಡಿ
ಗೆಂದನಧಿಕ ಕ್ರೋಧನಮೂರ್ಛಿತನಾಗಿ ಬಲಭದ್ರ ೧೪

ಧರೆಯಿದೆಂತೋ ಧರಿಸಿಹುದು ದು
ಷ್ಟರನು ಹರಹರ ಬಱೆಯವೀ ಸಾ
ಗರಗಳೇತಕೆ ಬಂದುದಿದೆಲಾ ಕಲಿಯ ಕಾಲಾಟ
ದುರುಳರೀ ಕ್ಷತ್ರಿಯರು ಪಾಪಾ
ಚರಿತರನೃತೋಕ್ತಿಗಳು ನೋಡಿದರೆ
ಧರಣಿಯಮರೋತ್ತಮರು ನೀವಿದಕೆಂದನಾ ರಾಮ ೧೫

ಗೆಲಿದೆ ನಾನಿದನಱಿಯಿರೇ ಮುನಿ
ಕುಲಸಮುದ್ಭವರಿರ ಧರಾಮರ
ತಿಲಕರಿರ ದಿಗುಪಾಲಕರು ಧರೆ ವಹ್ನಿವಾಯುಗಳು
ಛಲದಲಿವರವರೆಂದಡಿದು ನಿ
ರ್ಮ್ಮಲವೆ ಹೇಳಿ ಯೆನಲ್ಕೆ ನಭದಲಿ
ಮೊಳಗುವಂತಶರೀರವಾಕ್ಯೊದಱಿದುದು ಜನ ಬೆದಱೆ ೧೬

ಗೆಲವು ಬಲಭದ್ರನದು ಬಱಿದೇ
ಗಳಹುವರು ಭೂಮಿಪರಸತ್ಯವ
ನಲಘು ಪಾಪಾತ್ಮಕರು ಸೋತನು ರುಕ್ಮಿಯೆಂದೆನುತ
ಉಲಿದು ನಿಂದುದು ಬಯಲನುಡಿ ಘುಳು
ಘುಳಿಸಿದನು ಬಲಭದ್ರನಧಿಕೋ
ಜ್ವಲ ಮಹಾಕ್ರೋಧದಲಿ ಕೊಂಡನು ದಂಡವನು ಜಡಿದು ೧೭

ಹೊಡೆದನಾ ರುಕ್ಮಿಯನು ನೀಗಿದು
ದೊಡಲು ಜೀವವನಾಗಳಂತಿರೆ
ಕೆಡಹಿದನು ದಂತಂಗಳನು ನಗುನೋಳ್ಪೆನೆಂದೆನುತ
ಪೊಡವಿ ನಡುಗಲು ದಂತವಕ್ತ್ರನ
ತೊಡೆಗಳನು ತೋಳ್ಗಳನು ಕಾಲ್ಗಳ
ನುಡಿಯಲಱೆಯಟ್ಟಿದನು ನೆರೆದಿರ್ದವನಿಪಾಲಕರ ೧೮

ಆಲಿಸಿದಿರೈ ನೃಪರು ಗೋವಳ
ಗೋಲನಿದನೆಲೆ ಪಶುಗಳು ನೀವು
ಪಾಲಕರು ನಾವದಕೆ ಸಂಶಯವಿಲ್ಲ ಕಂಡಿರೆಲ
ಪಾಲಿಸಿದೆನೆಲ್ಲರನೆನುತ್ತ ಕ
ರಾಳರೋಷಸ್ಫುರಿತನಯನ
ಜ್ವಾಲೆಯಲಿ ನಡೆತಂದನಸುರಾಂತಕನ ಸನ್ನಿಧಿಗೆ ೧೯

ಉಸುರದಿರ್ದನು ಕೃಷ್ಣನದನಾ
ಲಿಸುತ ರುಕ್ಮಿಣಿ ಹಲಧರನ
ಮತಿ ವಿಷಮುವಹುದೆಂದುಭಯ ಸೌಹೃದಭಂಗಭೀತಿಯಲಿ
ಅಸಮವಿಕ್ರಮನಖಿಳಬಾಂಧವ
ವಿಸರಸಹಿತ ವಿವಾಹ ಕರ್ಮವ
ನೆಸಗಿ ಸಂತಸದಿಂದ ನಿಜಪುರವರಕೆ ನಡೆತಂದ ೨೦

ಇಂತು ನರಲೀಲೆಯಲಿ ಲಕ್ಷ್ಮೀ
ಕಾಂತನಾಡುತ ಸಕಲ ಸಜ್ಜನ
ಸಂತತಿಗೆ ಸುಯಿಧಾನವನು ಮಾಡುತ್ತ ದಿಟದಂತೆ
ಕಾಂತೆಯರ ಭವನದಲಿ ನೋಳ್ಪರಿ
ಗುಂತೆ ವಿಷಯಿಯವೋಲು ಮಾಯಾ
ಭ್ರಾಂತರಿಗೆ ನಿತ್ಯಾತ್ಮಕೃಷ್ಣನು ನಿಜವನಱುಹಿಸಿದ ೨೧

ತೊಂಭತ್ತೆಂಟನೆಯ ಸಂಧಿ ಮುಗಿಯಿತು.

# ತೊಂಭತ್ತೊಂಭತ್ತನೆಯ ಸಂಧಿ

ಅಶ್ವಮೇಧ ಮಹಾಕ್ರತುವನಖಿ
ಳೇಶ್ವರನು ಮಾಡಿದನು ವಿಹಿತ ಪಿ
ತಾಶ್ವನನು ಕಾಣಿಸಿದನಾ ನಿಜಲೋಕ ಸಂಸ್ಥಿತಿಯ

ಅರಸ ಕೇಳೊಂದುದಿನ ಯಜ್ಞೇ
ಶ್ವರನು ಮನವೂಲಿದಶ್ವಮೇಧಾ
ಧ್ವರಕೆ ಮಂತ್ರಿಸಿದಶ್ವವನು ವರಭೂಪ್ರದಕ್ಷಿಣವ
ಬರಿಸಲಟ್ಟಿದರದಱ ಬಳಿಯಲಿ
ವರಕುಮಾರಕ ಸಾಂಬ ಸಾತ್ಯಕಿ
ಧುರದ ಕಲಿಗಳೆನಿಪ್ಪ ಕೃತವರ್ಮಾದಿ ಯಾದವರು ೧

ಸಂಗಡಿಸಿದರು ಯಜ್ಞಸಂಭಾ
ರಂಗಳನು ಧರೆಯುಗಲದಲಿ ಯದು
ಪುಂಗವನು ಪೂರಾಯವೆನಲೋರಂತೆ ತಮತಮಗೆ
ತುಂಗೆ ರಸಧಾನ್ಯಾಧಿಗಳು ಗಗ
ನಾಂಗಣವನಡಱುದುವು ದಧ್ಯಾ
ಜ್ಯಂಗಳುದ್ಯುಕ್ತವ ವಿಭಾಡಿಸಿತಾ ಮಹಾರ್ಣವವು ೨

ತಂದರಾ ತುರಗವನು ಯಾದವ
ವೃಂದದಧಿನಾಯಕರು ತಡೆಯದೆ
ಬಂದರಖಿಳಾವನಿಯ ರಾಯರು ಕೇಳಿದಾ ಕ್ಷಣಕೆ
ಅಂದಣದ ವಾಜಿಗಳ ಗಜರಥ
ವೃಂದದೊತ್ತೊತ್ತುಗಳ ವೀರರ
ಸಂದಣಿಯ ಸಂಭ್ರಮವನಭಿವರ್ಣಿಸುವಡರಿದೆಂದ ೩

ಬಂದರಾ ದ್ವಾರಕಿಗೆ ಕುಂತೀ
ನಂದನರು ನಾನಾ ದಿಗಂತದ
ಸಂದ ಪೃಥ್ವೀಶ್ವರರು ನಾನಾಶ್ರಮದ ಋಷಿವರರು
ಬಂದರಗಣಿತ ವಿಪ್ರರಗಣಿತ
ವಂದಿಮಾಗಧಸೂತಜನವಾ
ನಂದದಲಿ ಪಾಡುತ್ತ ಹೊಗಳುತ ಕೃಷ್ಣನಂಘ್ರಿಗಳ ೪

ಯಾಗದೀಕ್ಷಾವಿಧಿಯನಾ ನಿಜ
ಯೋಗನಿಧಿ ಧರಿಸಿದನು ಬಳಿಕ ಮ
ಹಾಗಮಜ್ಞ ದ್ವಿಜರ ನಿರುಪಮ ಮಂತ್ರಘೋಷದಲಿ
ಭಾಗವತರಾಳುದನ ಮಖಕನು
ರಾಗದಲಿ ತವ ತವಗೆ ತಂದರು
ಭೂಗಧೀಶರು ಬಹಳಮಖಸಾಧನದ ಸಂಪದವ ೫

ಶ್ರೀರಮಣನಧ್ವರದ ಸಿರಿಯನ
ದಾರು ಬಣ್ಣಿಪರೊಪ್ಪಿರಲು ಹದಿ
ನಾಱುಸಾವಿರ ಪತ್ನಿಯರ ತತ್ಪುತ್ರ ಪರಿಜನದ
ಭೂರಿಭೂಷಣ ಭೂಷಿತರ ಪರಿ
ಚಾರಕರ ತದ್ಭೃತ್ಯವರ್ಗದ
ಭೂರಿಸಂಭ್ರಮವಡಿಗಡಿಗೆ ತಲೆದೂಗಿಸಿತು ಜಗವ ೬

ಹೊಳೆವ ಕಂಗಳ ಕಾಂತಿಗಳ ಚಳ
ದಳಕ ನಿಚಯದ ಹೇಮ ಮಣಿಕುಂ
ಡಲದ ತಾಂಡವರಂಗವೆನಿಸುವ ಗಂಡಮಂಡಲದ
ಮೆಲುನಗೆಯ ಮಾಧುರ್ಯ ರಸಮಂ
ಜುಳಮುಖಾಬ್ಜದ ಪೀನಕುಚಯುಗ
ಕಲಶಭಾರದ ಭಾಮಿನಿಯರೊಪ್ಪಿದರು ಬಳಸಿನಲಿ ೭

ನೆರೆದು ಬಹ ಬಾಂಧವಧರಾಧೀ
ಶ್ವರರ ಮತ್ತಮದೇಭ ಘಟೆಗಳ
ಸುರಿವ ಮದಧಾರೆಯಲಿ ಕೆಸಱಾಯ್ತವನಿ ಯಂಬರವ
ತೆರಹು ಕೆತ್ತವು ಸತ್ತಿಗೆಯ ಚಾ
ಮರದ ಸಂದಣಿ ವರ ಪತಾಕೋ
ತ್ಕರದ ಬಹಳತೆ ಬಾಸಣಿಸಿದುದು ಸಕಲ ದಿಗುತಟವ ೮

ಹೋತೃಗಳ ಸಂದಣಿಯ ಬಹಳೋ
ದ್ಗಾತೃಗಳ ಕಳಕಳದ ಋತ್ವಿಕ್
ಜಾತದುರು ಪುಣ್ಯಾಹ ಮಂತ್ರದ ಸಾರಸೂಕ್ತಿಗಳ
ಆತತಾಧ್ವರ್ಯುಗಳ ಮಂತ್ರ ಸು
ಪೂತಹವಿಗಳ ಹೋಮಧೂಮೋ
ದ್ಭೂತ ಪರಿಮಳಲಕ್ಷ್ಮಿ ಮಿಗೆ ರಂಜಿಸಿತು ಮೂಜಗಕೆ ೯

ಉಂಬವರ ದಣಿವವರ ದಾನವ
ಕೊಂಬವರ ಮಣಿವವರ ಹೊಸ ದಿ
ವ್ಯಾಂಬರಂಗಳನುಡುವವರ ತೊಡುವವರ ಸಂಭ್ರಮವ
ಎಂಬೆನೇನನು ಮಾತ ಹೋ ಮಾ
ಣೆಂಬವರ ಕಳಕಳ ಮಹಾರವ
ವಂಬರವನಾವರಿಸಿ ಡಾವರಿಸಿತ್ತು ದಿಕ್ತಟವ ೧೦

ತುಷ್ಟಿವಡೆದುದು ಸಲೆ ಚತುರ್ದಶ
ವಿಷ್ಟಪದ ಜನನಿಕರ ದನುಜ ಘ
ರಟ್ಟನಧ್ವರಪೂಜೆಯಲಿ ಸನ್ಮಾನ ದಾನದಲಿ
ಮೃಷ್ಟ ಭೋಜನಗಳಲಿ ವಿವಿಧ ವಿ
ಶಿಷ್ಟ ಹೂ ವಸ್ತ್ರದಲಿ ರುಕ್ಮಾ
ಭೀಷ್ಟಮಣಿಭೂಷಣ ಮಹಾದಾನಾದಿ ವಿಭವದಲಿ ೧೧

ನೋಡಿ ದಣಿಯದು ಸಕಲ ಜನ ನೆಱೆ
ಪಾಡಿ ದಣಿಯದು ಕೃಷ್ಣಲೀಲೆಯ
ನೀಡಿಱಿವ ಕೌತುಕದ ಕಡಲಲಿ ಮುಳುಗಿ ಸಂತಸವ
ಮಾಡಿ ದಣಿಯರು ತಲೆಗಳನು ತೂ
ಗಾಡಿ ದಣಿಯರು ಸತತ ಸಂಸ್ತುತಿ
ಮಾಡಿ ದಣಿಯರು ಯಜ್ಞವಿಭವವನಾ ಜಗನ್ಮಯನ ೧೨

ಇರಲು ಪರಮೋತ್ಸವದ ಸುಖಸಾ
ಗರದಲಿಂತೋಲಾಡುತವನೀ
ಶ್ವರರು ಋಷಿಗಳು ಸಕಲ ಸುರನರ ಮಂಡಲೇಶ್ವರರು
ನೆರೆದಿರಲು ನಡೆತಂದನೊಬ್ಬನು
ಧರಣಿಯಮರನು ಕೈಯ ಹುಲ್ಲಲಿ
ಮೊಱೆಯಿಡುತ ಬಾಗಿಲಿಗೆ ನಿರುಪಮಯಾಗ ಮಂದಿರದ ೧೩

ಕಪಟಿಗಳು ದುರ್ವೃತ್ತದತಿಲೋ
ಲುಪರು ಧರ್ಮವಿಹಿಂಸಕರು ಕಡು
ಕೃಪಣರರ್ಥಾಸಕ್ತಮಾನಸರೆಂದೆನಿಪ ಧರೆಯ
ನೃಪರ ರಾಜ್ಯದಲಕಟಕಟ ಜೀ
ವಿಪುದು ಜನವೆಂತಹಹ ಕೆಟ್ಟೆನು
ನೃಪಕುಲದ ದೋಷದಲಿ ಸತ್ತರು ಪುತ್ರರೆನಗೆಂದ ೧೪

ಧರ್ಮಪಾಲಕನಾಗಿ ಸಾಕ್ಷಾತ್
ಧರ್ಮಮೂರುತಿ ವಿಷ್ಣುಗಡ ನರ
ಧರ್ಮದಲಿ ಜನಿಸಿದನು ಗಡ ಕೃಷ್ಣಾಭಿಧಾನದಲಿ
ಬ್ರಹ್ಮಕುಲವಿದು ತಾನೆ ಗಡ ದು
ಷ್ಕರ್ಮ ಮುಟ್ಟಿದೆ ತನಗೆ ಹಾಯೆನು
ತುಮ್ಮಳಿಸುತೊಱಲಿದನು ವಿಪ್ರೋತ್ತಮನು ಮಱುಕೊಳಿಸಿ ೧೫

ಇಂತೆನುತಲಾ ಶೋಕ ಚಿಂತಾ
ಕ್ರಾಂತಮತಿ ಮೂರ್ಛೆಯಲಿ ಬಾಗಿಲ
ಮುಂತೆ ಬಿದ್ದಳುತಿರಲು ಕೆಟ್ಟೆನು ಕೆಟ್ಟೆನೆಂದೆನುತ
ಅಂತವನೆ ನಿಶ್ಶ್ವಸಿಸಿ ಕಂತಾ
ಕ್ರಾಂತ ಘನನಿಶ್ವಾಸದಲಿ ಭೂ
ಕಾಂತ ಕೇಳೊಲಾಡುತಿರ್ದನು ನಯನವಾರಿಯಲಿ ೧೬

ಆರೆಲವೊ ಬೆಸಗೊಳ್ಳಿ ರಾಜ
ದ್ವಾರದಲಿ ಮೊಱೆಯಿಡುವ ದುಃಖಿತ
ರಾರು ಕರೆ ಕರೆ ಕಳಕಳವ ಹೋ ಮಾಣು ಮಾಣೆನುತ
ವೀರರರಸನು ಪಾರ್ಥನಿಳಿದನು
ಭೂರಿ ಮಣಿಪೀಠವನು ಬಂದನು
ಧಾರುಣೀಸುರನೊಱಲುವಲ್ಲಿಗೆ ಕೇಳಿದನು ಹದನ ೧೭

ಆರ ದೆಸೆಯಿಂದಾಯ್ತು ಹೇಳೆಲೆ
ಧಾರುಣೀಸುರವರನೆ ದುಃಖವಿ
ದಾರು ನೀನೇನಾಯ್ತು ಮಕ್ಕಳಿಗಳಲದೆನ್ನೊಡನೆ
ಕಾರಣವ ಹೇಳೀಗಳಂತೆ ಮ
ನೋರಥವ ಮಾಡುವೆನು ದುಃಖ ನಿ
ವಾರಣವನಿದಕಂಜಬೇಡೆನಲೆಂದನಾ ವಿಪ್ರ ೧೮

ಏನನೆಂಬೆನು ವೀರ ತನ್ನಯ
ಹಾನಿಯನು ಜನಿಸುವುವು ಮಕ್ಕಳು
ಮಾನಿನಿಗೆ ಸೂತೀಗೃಹಾಂತರದೊಳಗೆ ತನುಸಹಿತ
ಏನಹುದೊ ತಾನಱಿಯೆನೀಕ್ಷಿಪ
ಡಾನಭಾಗ್ಯನು ಪುತ್ರಮುಖವನು
ದೀನನನು ನೀನೇಕೆ ನುಡಿಸುವೆಯೆಂದನಾ ವಿಪ್ರ ೧೯

ಐಸಲೇ ಬೆದಱದಿರು ನಿನ್ನಾ
ವಾಸವಾವೆಡೆ ಚಾಪ ವಿದ್ಯಾ
ಭ್ಯಾಸವುಳ್ಳವರಿಲ್ಲಲಾ ಹರಹರ ನೃಪಾಲರಲಿ
ಈಸು ನೆರೆದಿದೆ ನೃಪವರರು ನರ
ವೇಷನಾರಿಯರಕಟ ನಿನ್ನಾ
ಯಾಸವನು ಪರಿಹರಿಸಲಾರಲೆ ವಿಪ್ರ ಹೇಳೆಂದ ೨೦

ಆರಿಗುಂಟೆಲೆ ವಿಪ್ರ ಧರ್ಮಾ
ಚಾರವೀ ಮೇದಿನಿಯುಲಶುಭಾ
ಚಾರೀ ಕ್ಷತ್ರಿಯರು ದಿಟಕಲ್ಲಡೆ ರಾಜ್ಯದಲಿ
ಧಾರುಣೀಸುರರಿಂತು ದುಃಖಾ
ಪಾರ ಜಲಧಿಗಳಹರೆ ನಿನ್ನ ಮ
ನೋರಥವ ನಾ ಮಾಳ್ಪೆ ನೀನೇಳೆಂದನಾ ಪಾರ್ಥ ೨೧

ಸಾಹಿಗನೆ ನೀನಾರು ಕಾವಡೆ
ಭಾಷೆಯನು ಹೋಗಾಡದಿರು ಬಲ
ವಾಸುದೇವ ಸ್ಮರ ತದಾತ್ಮಜರಿಂಗಸಾಧ್ಯವಿದು
ನೇಸಱಲಿ ಹಱಿಯದ ತಮಿಸ್ರದ
ರಾಶಿಯನು ಮಿಕ್ಕವರು ಕೆಡಿಸುವ
ಡಾಸೆಯಿಲ್ಲಿದ ನಂಬಲರಿದೆನಗೆಂದನಾ ವಿಪ್ರ ೨೨

ಕೆರಳಿದನು ಕಲಿ ಪಾರ್ಥನೇಕೆಲೆ
ಮರುಳು ಹಾರುವ ನನ್ನ ಸತ್ವದ
ಪರಿಯನಱಿಯದೆ ನುಡಿವೆ ತುಚ್ಛೀಕರಿಸಿ ವೀರರನು
ಸರಿಯದಾರ್ಯೆ ತನಗೆ ಧರೆಯಲಿ
ಹರಿ ಬಲ ಸ್ಮರ ತತ್ಸುತಾದ್ಯರಿ
ಗರಿದೆನಿಸಿದರೆ ತನಗೆ ಹಾನಿಯೆ ವಿಪ್ರ ಹೇಳೆಂದ ೨೩

ಅಲ್ಲ ನಿನ್ನ ಹಲಾಯುಧನು ತಾ
ನಲ್ಲ ವಸುದೇವಾತ್ಮಜನು ದಿಟ
ಕಲ್ಲ ಮನುಮಥತದಾತ್ಮಜರೆಂಬ ಯಾದವರು
ಬಲ್ಲನೀಶ್ವರನೆನ್ನ ಸತ್ವದ
ಸಲ್ಲಲಿತ ಸಂಸ್ಥಿತಿಯನಮರರ
ಬಲ್ಲಹನ ವೀರಾಸನಾರ್ಧದ ಸಲುಗೆ ತನಗೆಂದ ೨೪

ಮೂಱು ಲೋಕದ ಗಂಡನರ್ಜುನ
ನಾರಱಿಯರವನಿಯಲಿ ತನ್ನನು
ತೋಱು ಸಾಕೆಲೆ ವಿಪ್ರ ನಿಜಮಂದಿರವನಂತಕನ
ಮಾಱುವೆನು ಮೃತ್ಯುವಿಗೆ ಶಿಶುವನು
ಸೂಱೆಗೊಂಡಡೆ ಭುವನ ಹದಿನಾ
ಲ್ಕೋಱುಗುಡಿಸಲು ತಹೆನು ಸಂಶಯ ಬೇಡ ನಡೆಯೆಂದ ೨೫

ಭಂಗವಾದಡೆ ಭಾಷೆಗುರುಹುವೆ
ನಂಗವನು ತಾನಿದನು ನಡೆ ನಿ
ನ್ನಂಗನೆಗೆ ಹೇಳಾನು ಬಂದುದನೆನುತ ಭೂಸುರನ
ಹಿಂಗದಾಶ್ವಾಸಿಸುತ ಬಂದನು
ಶಾರ್ಙ್ಗಧರನಿದ್ದೆಡೆಗೆ ವಿಪ್ರ ಸು
ತಾಂಗರಕ್ಷೆಗೆ ದೇವ ಕೊಡು ನೇಮವನು ತನಗೆಂದ ೨೬

ಎನಲು ನಗುತಸುರಾರಿ ಪಾರ್ಥನ
ಮನದ ಧೃತಿಯನು ಕಂಡು ದುಷ್ಕರ
ವೆನುತ ನುಡಿದನು ಪಾರ್ಥ ಹೋಗದಿರಾಗದಿದು ನಿನಗೆ
ಧನುವನಿರಿಸಿರಿಸಕಟ ನೀನದ
ಱನುವನಱಿಯೆ ದುರಂತ ಭೂತ
ಧ್ವನಿತವಿದು ತಾ ಹೋಹೆನೆನಲಿಂತೆಂದನಾ ಪಾರ್ಥ ೨೭

ಏಕೆ ತನ್ನನು ಬೆದಱಿಸುವೆ ಸುರ
ಲೋಕಪಾಲರು ಸಹಿತ ಗೆಲಿದೆನು
ಪಾಕಶಾಸನನನು ಮಹಾಖಾಂಡವದ ದಾಹದಲಿ
ಔಕಿದೆನು ಭುಜಬಲಕೆ ಮೆಚ್ಚಿ ಪಿ
ನಾಕಿ ಕೊಟ್ಟನು ಶರವನೆನ್ನಲಿ
ನೂಕದೆಂಬಡಿದಾವ ಘನವೆಲೆ ಕೃಷ್ಣ ಹೇಳೆಂದ ೨೮

ಆತು ಬೆಂಬಲವಾಗಿ ನಿಜಪುರು
ಹೂತಮುಖ್ಯಾಮರರಿರಲ್ಕೆ ನಿ
ವಾತಕವಚಾದ್ಯರನು ಕೊಲ್ಲೆನೆ ಕೃಷ್ಣ ಕಳನೊಳಗೆ
ಭೀತಿಯನು ತನಗೇಕೆ ಬೀಱುವೆ
ಭೂತವಲ್ಲಿದಕಧಿಕವಾವುದು
ಕಾತರಿಸಬೇಡಕಟ ಕೊಡು ನೇಮವನು ತನಗೆಂದ ೨೯

ಎಂದಡಾಗಲಿ ಯೆನುತ ಮುರರಿಪು
ಮಂದಹಾಸದಲೀಕ್ಷಿಸಲು ಗೋ
ವಿಂದನನು ಬೀಳ್ಕೊಂಡು ಮನದುತ್ಸಾಹಭಾರದಲಿ
ಸ್ಯಂದನವನೇಱಿದನು ಭೂಸುರ
ವಂದ್ಯನನು ಕುಳ್ಳಿರಿಸಿಕೊಂಡಾ
ನಂದದಲಿ ಹೊಱವಂಟನಧ್ವರಶಾಲೆಯನು ಪಾರ್ಥ ೩೦

ಬಂದನಾ ದ್ವಿಜಸಹಿತ ಕುಂತೀ
ನಂದನನು ವಿಪ್ರೋತ್ತಮನ ನಿಜ
ಮಂದಿರದ ಸನ್ನಿಧಿಗೆ ರಥವನು ನಿಲಿಸಿ ಬಿಲುಗೊಂಡು
ನಿಂದು ನುಡಿದನು ವಿಪ್ರ ಹೋಗಾ
ಮಂದಿರಕೆ ತಾ ಬಂದೆನೆಂಬುದ
ನಿಂದುವದನೆಗೆ ಹೇಳು ಕಾಲದಲೆನ್ನ ಕರೆಯೆಂದ ೩೧

ಎನಲು ರಥದಿಂದಿಳಿದು ತನ್ನಯ
ಮನೆಗೆ ಬಂದನು ವಿಪ್ರನದನಂ
ಗನೆಗೆ ಹೇಳಿದನಾಕೆ ಹೊಕ್ಕಳು ಸೂತಿಕಾಗೃಹವ
ಜನನಸಮಯವಿದೆನಲು ಹರಿದ
ರ್ಜುನಗೆ ಹೇಳಿದನವನಿಸುರನಿಂ
ದಿನಲಿ ಕಾಂಬೆನು ನಿನ್ನ ಬಾಹುಪರಾಕ್ರಮವನೆಂದ ೩೨

ಬಾಯ ಬಿಡದಿರು ವಿಪ್ರ ನೋಡೆ
ನ್ನಾಯತಿಕೆಯಂಗವನೆನುತ ನಾ
ರಾಯಣನ ಮೈದುನನು ತುಡಕಿದನಮಳ ಗಾಂಡಿವವ
ಆಯೆನುತ ಬಿಗಿದನು ಮಹಾಸ್ತ್ರ ನಿ
ಕಾಯದಲಿ ಗಗನವನು ಧರೆಯನು
ವಾಯುಃ ನುಸುಳದವೋಲು ದಶದಿಗುವಿವರವನು ಪಾರ್ಥ ೩೩

ಇರಲಿರಲು ಬೆಸಲಾದಳಾ ಭೂ
ಸುರನ ವಧು ಬಾಲಕನೆಲೆಯೆಲಿ
ಧುರದ ವೀರನೆ ಕಾಯ್ದುಕೊಳ್ಳಾ, ಕಾಯ್ದುಕೊಳ್ಳೆನುತ
ಕರೆದನಾ ಕಲಿಪಾರ್ಥನನು ಭೂ
ಸುರನು ಹಾಯ್ದುದು ಹಸುಳೆ ಶರಪಂ
ಜರವದಿದ್ದಂತಿರ್ದುದೇನೆಂಬೆನು ಮಹಾದ್ಭುತವ ೩೪

ಮರುಳುಗೊಂಡನು ವಿಪ್ರನೆಲೆಯೆಲೆ
ಸೊರಹರರಸನೆ ಕಾಯ್ದೆಲಾ ಸಂ
ಕರುಷಣಾಚ್ಯುತ ಕಾಮ ತತ್ಸುತರಲ್ಲ ನೀನಲ್ಲ
ನಿರುತ ಕಂಡೆನು ಕಂಡೆನವರಿಂ
ಗರಿದಿದನು ರಕ್ಷಿಸಲು ಬಂದ್ಯೆ
ಕೊರಳುಗೊಯ್ಕನೆ ಸುಡಲಿ ಧನುವನು ಹಿಡಿಯಲೇಕೆಂದ ೩೫

ಹೋಹೊ ಸೈರಿಸು ತಹೆನು ಭುವನ
ವ್ಯೂಹದೊಳಗಿರಲಕಟ ಶಿಶುವನು
ಬಾಹಿರನ ಮಾಡದಿರು ತನ್ನನು ವಿಪ್ರ ನೀನಿದಕೆ
ಊಹಿಸದಿರಿನ್ನೊಂದನೀಗಳೆ
ಹೋಹೆನಂತಕನೂರ ಸುಡುವೆನು
ಸಾಹಸವ ನೋಡಾದಡೆನುತರ್ಜುನನು ಹೊಱವಂಟ ೩೬

ಅಱಸಿ ಸಂಯಮುನಿಯಲಿ ಕಾಣದೆ
ಸುರಪನೂರನು ನೋಡಿ ಪಾವಕ
ಪುರವ ನಿರುರುತಿ ವರುಣ ವಾಯು ಕುಬೇರ ಶಂಕರರ
ಪುರವ ಹೊಕ್ಕನು ಚಾರಣರ ಕಿ
ನ್ನರರ ವಿದ್ಯಾಧರರ ಗಂಧ
ರ್ವರ ನಿವಾಸವ ನೋಡಿ ಕಾಣದೆ ಮರಳಿದನು ಪಾರ್ಥ ೩೭

ಮೇಲುಜಗಗಳನಱಸಿದನು ಪಾ
ತಾಲಲೋಕಂಗಳನು ಹೊಕ್ಕನು
ಬಾಲಕನ ನೆಲೆಗಾಣದೈತಂದನು ಮಹಾಧ್ವರದ
ಶಾಲೆಗೆಲೆ ಗೋವಿಂದ ಭಾಷೆ ವಿ
ತಾಳಿಸಿತು ಹುತವಹಗೆ ತನುವನು
ಬೇಳುವೆನು ಮಾತಾಡಬೇಡೆನುತೆಱಗಿದನು ಕಲಿಪಾರ್ಥ ೩೮

ಏಳಿದೇನೈ ತಂದೆ ವೀರರ
ಮೌಳಿರತ್ನವೆ ತನ್ನ ಮಾತನು
ಹೇಳಿದರೆ ನೀ ಕೇಳಿ ಹರಹರ ತಾನಿರಲು ಶಿಖಿಗೆ
ಬೇಳುವೈ ನಿಜತನುವನಾಯ್ತೆ
ನ್ನೋಲಗಕೆ ಫಲವಂಜಬೇಡಾ
ಬಾಲಕನ ನಾ ತೋರ್ಪೆನೆನುತಪ್ಪಿದನು ಮುರವೈರಿ ೩೯

ಏರಿ ರಥವನು ಪಾರ್ಥಸಹಿತಸು
ರಾರಿ ಹೊಱವಂಟನು ನದೀಗಿರಿ
ಘೋರ ಕಾನನ ನಿಕರವನು ಸಾಗರಗಳನು ಕಳಿದು
ಮೀಱಿನಡೆದರು ಮುಂದೆ ಜಗದಾ
ಧಾರಮೂರುತಿ ಕೃಷ್ಣಪಾರ್ಥರು
ದಾರ ತೇಜೋನಿಧಿಗಳತ್ತಲು ಪಡುವ ಮುಂತಾಗಿ ೪೦

ನೂಕಿ ನಡೆದುದು ತೇರು ಲೋಕಾ
ಲೋಕ ಗಿರಿಯಿಂದತ್ತ ಸೂರ್ಯನ
ಸೋಕ ಸೈರಿಸದಮಳ ಕಾಂಚನಭೂಮಿಗುರವಣಿಸಿ
ತೇಕಿದವು ರಥ ವಾಜಿಗಳನಾ
ಲೋಕನದ ಕತ್ತಲೆಯಲಾ ಜಗ
ದೇಕವೀರನು ಪಾರ್ಥನೆಂದನು ನಡುಗಿ ಕೈಮುಗಿದು ೪೧

ನಡೆಯಲಮ್ಮವು ತುರಗತತಿ ಕಂ
ಗೆಡಿಸಿದುದು ಕತ್ತಲೆ ದುರಂತದ
ಕಡಲಲದ್ದೆನು ಬಿದ್ದೆನೀ ಭಯರಸನುಹಾಬ್ಧಿಯಲಿ
ಒಡಲು ಕಂಪಿಸುತಿದೆಯೆನುತ ಮೆ
ಲ್ಲಡಿಗಳಲಿ ತಲೆವಾಗಿರಲು ವೈ
ದಡವುತಂಜದಿರೆನುತ ನೆನೆದನು ವರ ಸುದರ್ಶನವ ೪೨

ಬಟ್ಟೆದೆಗೆದುದು ಚಕ್ರವಸುರಘ
ರಟ್ಟೆನಿದಿರಲಿ ಕತ್ತಲೆಯನೊಡೆ
ಮೆಟ್ಟ ರವಿಶತಕಾಂತಿಗಳ ಧಾರಾಸಹಸ್ರದಲಿ
ದೃಷ್ಟಿಗಳು ಕೋರವಿಸಿದವು ಮಱ
ವಟ್ಟನರ್ಜುನನಾ ರಥಾಗ್ರದ
ಲಿಟ್ಟ ಪುತ್ಥಳಿಯಂತೆ ಮೆಱೆದನು ಬಿಗಿದ ಬೆಱಗಿನಲಿ ೪೩

ಮಿಾಱಿ ನಡೆದನು ಮುಂದೆ ಪಾರಾ
ವಾರ ಪರಿಯಂತದಲಿ ಮೆಱೆವ ಗ
ಭೀರತೇಜದ ಸಾರಸಂಗ್ರಹವೆನಿಪ ನಿಜಪುರಕೆ
ದೂರದಲಿ ಕಾಣುತ್ತ ಕಂಗಳು
ಕೋರವಿಸೆ ಕಲಿಪಾರ್ಥನೀಕ್ಷಿಸ
ಲಾಱದೊಡೆ ಮುಚ್ಚಿದನು ಕಂಗಳನೆರಡು ಕೈಗಳಲಿ ೪೪

ಏನಿದೇನೈ ಪಾರ್ಥ ನಯನ
ಗ್ಲಾನಿಯೇನೆನೆ ನೋಡಲಾರೆನು
ದಾನವಾಂತಕ ನೂಕವಕ್ಷಿಗಳೀಕ್ಷಿಸಲು ಮುಂದೆ
ಸ್ಥಾನವಾವುದು ತೋರ್ಪುದಕಟಾ
ದೀನನಾದೆನು ಕೃಷ್ಣ ಪರಮ ಕೃ
ಪಾನಿಧಿಯೆ ಕೈಗಾಯಬೇಕೆಂದೆಱಗಿದನು ಪದಕೆ ೪೫

ಸಾಕು ಬಾರೈ ಪಾರ್ಥ ನಮ್ಮದು
ಲೋಕವಿದು ನೋಡುವಡೆ ಕಂಗಳು
ನೂಕವೇ ತಪ್ಪೇನು ಕೊಡುವೆನು ದಿವ್ಯದೃಷ್ಟಿಯನು
ಆಕುಲತೆ ಬೇಡೆನುತ ಪರಮ ಕೃ
ಪಾಕರನು ಕರುಣಿಸಿದನಾ ಕುಂ
ತೀಕುಮಾರಂಗಿರದೆ ದಿವ್ಯೇಕ್ಷಣವನೊಲವಿನಲಿ ೪೬

ಹೊಕ್ಕರಾ ಕೃಷ್ಣಾರ್ಜುನರು ವಿಜಿ
ತಾರ್ಕಕೋಟಿಪ್ರಭೆಯೆನಿಪ ಮಾ
ಣಿಕ್ಯಮಯ ಭವನವನು ಪಾಲಿತ ಭುವನಭವನವನು
ಲೆಕ್ಕವಿಲ್ಲದಜಾಂಡಕೋಟಿಯ
ದಿಕ್ಕೆಹಕ್ಕೆಯ ಪುದಿದ ಬೊಮ್ಮದ
ಹೆಕ್ಕಳದ ಹೆಸರಿಸಿದ ಮೂರ್ತಿಯ ಕಂಡರನುಪಮರು ೪೭

ಮೂಱು ತಾಪಂಗಳಿಗೆ ನೈಗುಡ
ದೋಱುಗುಡಿಸದೆ ಕಾಲಗತಿಯಲಿ
ನಾಱುವೋಗದೆ ಜನನವಿಲಯಸ್ಥಾನವಿಕ್ರಿಯೆಗೆ
ತೋಱದುಭಯಗುಣ ಪ್ರಪಂಚದ
ತೋಱಿಕೆಯ ಸತ್ವೈಕನಿಸ್ಸಾರ
ತಾಱುಘಟ್ಟನ ವಿಷ್ಣುಪದವನು ಕಂಡರತಿಬಲರು ೪೮

ಆಲಿಸುವ ಸನಕಾದಿ ಮುನಿವರ
ರೋಲಗದ ದಿಗುಪಾಲವಸೌಳಿಗ
ಳೋಲಗದ ಪರಮೇಷ್ಠಿರುದ್ರಾದಿತ್ಯರೋಲಗದ
ಸಾಲ ಮಾಯಾಶಕ್ತಿಗಳ ಮೆರೆ
ವೋಲಗದಲಾತ್ಮನನು ಕಂಡರು
ಬಾಲಸೂರ್ಯಪ್ರಭೆಯಲಿರಲಾಗಾ ಮಹೋತ್ತಮರು ೪೯

ತೆಗೆದು ನಿಂದುದು ಸಭೆ ಮಹಾತ್ಮರ
ಹುಗಿಲನೀಕ್ಷಿಸಿ ಜೀಯೆನುತ ವಸೌ
ಳಿಗಳಲೆತ್ತಿದ ಕರಪುಟದ ಸನ್ನಮಿತ ಕಂಧರದ
ವಿಗಡ ಮುನಿಗಳ ಸೇವಕರ ಸಾ
ಲುಗಳನೀಕ್ಷಿಸುತಹಿಪತಿಯ ಹಾ
ಸಿಗೆಯ ನಿದ್ರಾಮುದ್ರನನು ಕಂಡರು ನರಾಚ್ಯುತರು ೫೦

ವೇದಮಸ್ತಕನಿಕರಚರ್ಚಿತ
ಪಾದಕಮಲನನವ್ಯಯನನಣಿ
ಮಾದಿಸಿದ್ಧಿಗಳೊಡೆಯನನು ಕಾಣುತ್ತ ಭಕ್ತಿಯಲಿ
ಹೋದ ಪರಮಾತುಮನು ನರಹರಿ
ತಾದರದಲೆಱಗಿದನು ತಾನೇ
ಆದಿ ಪರಮಾತುಮಗೆ ನಿಜನಿತ್ಯಾತ್ಮರೂಪಂಗೆ ೫೧

ತೊಂಭತ್ತೊಂಭತ್ತನೆಯ ಸಂಧಿ ಮುಗಿಯಿತು.

# ನೂರನೆಯ ಸಂಧಿ

ದಂತವಕ್ತ್ರವಿಡೂರಥರನಸು
ರಾಂತಕನು ಸದೆದವರ ರಥಹಯ
ದಂತಿಮುಖ್ಯಧನಾವಳಿಯ ಕೊಂಡನು ರಣಾಗ್ರದಲಿ

ಚಿತ್ತವಿಸು ನೃಪ ಕೃಷ್ಣಪಾರ್ಥರು
ಉತ್ತಮೋತ್ತಮನಂಘ್ರಿಗೆಱಗಲು
ಮಸ್ತಕವ ಹಿಡಿದೆತ್ತಿ ತಕ್ಕವಿಸಿದನು ವೈದಡವಿ
ವೃತ್ತವಂತರನೀಕ್ಷಿಸಲು ದ್ವಿಜ
ಪುತ್ರರರನು ತರಿಸಿದೆನು ನಿಮ್ಮನು
ಚಿತ್ತದನುರಾಗದಲಿ ಮಂಗಳಮೂರ್ತಿಗಳಿರೆಂದ ೧

ಇಳಿದುದವನಿಯ ಭಾರ ಧರ್ಮ
ಸ್ಥಳ ಸುರಕ್ಷಿತವಾಯ್ತು ಗೋದ್ವಿಜ
ಕುಲಸುರಾವಳಿಗಳಿಗೆ ನಿರ್ಭಯವಾಯ್ತು ನಿಮ್ಮಿಂದ
ಸುಲಲಿತಾಮಳಕೀರ್ತಿ ಭವಭಯ
ಜಲಧಿತಾರಕವಾಯ್ತು ಬಹುದೀ
ನೆಲೆಗೆ ತಳುವದೆ ನೀವು ನನ್ನವತಾರಮೂರ್ತಿಗಳು ೨

ಎಂದು ಕೈವಿಡಿದಿತ್ತನಾ ದ್ವಿಜ
ನಂದನರನಖಿಳೇಶ್ವರನು ಗೋ
ವಿಂದ ಪಾರ್ಥರು ಬೀಳುಕೊಂಡರು ವಿನಯದಲಿ ನಮಿಸಿ
ಬಂದರಾ ಪಥದಿಂದ ವಿಪ್ರನ
ಮಂದಿರಕೆ ಬಳಿಕಿತ್ತು ಸುತರನು
ಸಂದುದೇ ನಿನ್ನಿಷ್ಟವೆಂದನು ನಗುತ ಮುರವೈರಿ ೩

ಆವುದರಿದೆಲೆ ದೇವ ನಿಜಪದ
ಸೇವಕನಲಾ ಪಾರ್ಥನೆನ್ನ ವೃ
ಥಾವಮಾನವ ನೋಡಲಾಗದು ದೀನನಾದೆನಗೆ
ಜೀವದಾನವನಿತ್ತೆ ಯೆನುತಾ
ದೇವದೇವನ ಪದದಲಾ ಭೂ
ದೇವನೆಱಗಿದನದ್ವನಾನಂದದಲಿ ಸತಿಸಹಿತ ೪

ಬೀಳುಕೊಟ್ಟಾತನನು ಲಕ್ಷ್ಮೀ
ಲೋಲಪಾರ್ಥರು ಬಂದರಧ್ವರ
ಶಾಲೆಗಧಿಕಾನಂದವಾಗಲು ಸಕಲ ಪರಿಜನಕೆ
ಹೇಳಲರಿದಾ ಮಖಮಹಾಧ್ವರ
ದೇಳಿಗೆಯ ಸಂಪದವನದನೀ
ರೇಳು ಭುವನಂಗಳಿಗೆ ತುಷ್ಟಿಪ್ರದವದಾಯ್ತೆಂದ ೫

ಕಂಡು ವೈಷ್ಣವ ಧಾಮವನು ದೋ
ರ್ದಂಡ ಬಲಯುತನೆನಿಪ ಮಧ್ಯಮ
ಪಾಂಡವನು ನೆನೆನೆನೆದು ವಿಸ್ಮಿತನಾದನಡಿಗಡಿಗೆ
ಗಂಡುಗಲಿಗಳೆನಿಪ್ಪವರು ನೆಱೆ
ಭಂಡರೀ ತ್ರಿಜಗದಲಿ ನೋಳ್ಪೊಡೆ
ಪುಂಡರೀಕಾಕ್ಷನ ಕೃಪೇಕ್ಷಣವಲ್ಲದಿಲ್ಲೆಂದ ೬

ಜ್ವಲನ ಪ್ರಾಯಶ್ಚಿತ್ತವನು ಕೈ
ಕೊಳಿಸಿ ಕಾರುಣ್ಯಾಬ್ಧಿ ಮಖವನು
ಬೆಳಸಿದನು ಬೀಱಿದನು ಧನವನು ಋತ್ವಿಜಾದ್ಯರಿಗೆ
ಬಳಿಕ ಮಾಡಿದನವಭೃತದ ಮಂ
ಗಳ ಮಹಾ ಮಜ್ಜನವನಾ ಜನ
ಜಲಧಿಸಹಿತ ಮಹೋತ್ಸವದ ರಹಿಮಿಗಲು ಯಮುನೆಯಲಿ ೭

ಸಂದಣಿಸಿ ಹೊಱವಂಟುದರಸಿಯ
ರಂದಣಂಗಳು ಜಡಿಯೆ ಪಾರ್ಶ್ವ
ದ್ವಂದ್ವದುಗ್ರಾಯುಧದ ವೀರರ ಕಂಚುಕಿವ್ರಜದ
ಸಂದ ಪುರಜನ ದೇಶಜನ ಮುನಿ
ವೃಂದದೊತ್ತೊತ್ತುಗಳ ವಿಭವದ
ಲಂದು ಮಾಡಿದರವಭೃತದ ಮಜ್ಜನ ಮಹೋತ್ಸವವ ೮

ಮೊಳಗಿದವು ದುಂದುಭಿ ಮೃದಂಗಾ
ವಳಿ ಮಹಾನಕ ಶಂಖ ಕಹಳಾ
ವಳಿ ಸುವೀಣಾವೇಣುನಿಸ್ವನದೊಡನೆ ನೆಲ ಜಡಿಯೆ
ಉಲಿವ ಸೂತರ ಮಾಗಧರ ಕಳ
ಕಳದ ವಂದಿವ್ರಜದ ಸಂದಣಿ
ಯೊಳಗೆ ದೆಸೆ ದೆಸೆಗಿಡಲು ನಡೆದುದು ಸಕಲಜನನಿವಹ ೯

ಒತ್ತಿ ಬಿರುದಾವಳಿಗಳನು ಕೈ
ಯೆತ್ತಿ ಹೊಗಳುವ ದಿವ್ಯನಾಮವ
ಕೀರ್ತಿಸುವ ನರ್ತಿಸುವ ಪಾಡುವ ಕುಣಿವ ಕೇಳಿಸುವ
ಮೊತ್ತದನುಜೀವಿಗಳು ಕಳಕಳ
ವಿತ್ತುದಘಕುಲನಾಶಕರವೆನ
ಲೊತ್ತರಿಸಿ ಮೂಜಗದ ಜೀವರ ಕರ್ಣಕೋಟರವ ೧೦

ಹೊಳೆವ ನವತೋರಣದ ಪಟ್ಟಾ
ವಳಿಯ ನಡೆಚಪ್ಪರದ ನಗೆನುಡಿ
ಗಳ ಪತಾಕಾವಳಿಯ ನಡೆಮುಡಿಗಳ ಮಹೋತ್ಸವದ
ಬೆಳುಗೊಡೆಯ ಚಾಮರದ ಘನ ಸಂ
ಕುಳದಲವನಿಯನಂಬರವನೆಡ
ಗಲಸಿ ನಡೆದುದು ಕೂಡೆ ಯಮುನಾನದಿಗೆ ಜನನಿವಹ ೧೧

ತೈಲ ಗೋರಸ ಗಂಧ ಕುಂಕುಮ
ಜಾಲದಲಿ ನಲಿದೊಬ್ಬರೊಬ್ಬರ
ಮೇಲೆ ಹೊಯ್ದಾಡುತ್ತ ಸಂಭ್ರಮದಿಂದ ತವತವಗೆ
ಬಾಲೆಯರು ಕುಚಕಲಶಭಾರವಿ
ಲೋಲೆಯರು ಪಾಡುತ್ತ ಕೃಷ್ಣನ
ಲೀಲೆಯನು ಹೊಗಳುತ್ತ ನಡೆದರು ಕೂಡೆ ಸಂದಣಿಸಿ ೧೨

ಬಳಿಕ ಪರಮೋತ್ಸವದ ರಹಿ ಮಿಗ
ಲಲಘುಮಹಿಮನು ಮಾಡಿದನು ಮಂ
ಗಳ ಮಹಾಮಜ್ಜನವನಾ ಯಮುನಾಜಲಾಂತದಲಿ
ಒಲಿದು ಬಹುವಿಧ ಸಲಿಲಕೇಳಿಯ
ಲಳಿಕುಲಾಳಕಿಯರು ಸಹಿತ ಮುನಿ
ಕುಲ ಮನೋಹರಮೂರ್ತಿ ನಲಿದಾಡಿದನು ವಿಭವದಲಿ ೧೩

ಸ್ನಾನ ವಸನ ವಿಭೂಷಣಂಗಳ
ನಾನತಪ್ರಿಯಬಂಧು ಪರಿಜನ
ಮಾನಿನೀಜನ ಸಹಿತ ಕೊಟ್ಟನು ವಂದಿಗಳಿಗೊಲಿದು
ಏನನೆಂಬೆನು ದಿವ್ಯಗಂಧ ವ
ರಾನುಲೇಪನ ವಸನ ವಿವಿಧ ನ
ವೀನ ಭೂಷಣಗಳಲಿ ನೆಱೆದನು ಸಕಲಜನಸಹಿತ ೧೪

ಇಂತು ನಿಜಲೀಲೆಯಲಿ ಲಕ್ಷ್ಮೀ
ಕಾಂತನಾಡುತ್ತಿರಲು ನಿಜ ಸೀ
ಮಂತಿನೀಜನದೊಡನೆ ಪರಿಜನ ಬಂಧುಜನದೊಡನೆ
ಅಂತರಾಯದವೋಲು ಮೊಳಗುವ
ದಂತಿ ಹಯ ರಥ ಪತ್ತಿ ಬಲದಲಿ
ದಂತವಕ್ತ್ರ ವಿಡೂರಥರು ನಡೆತಂದರುರವಣಿಸಿ ೧೫

ಮೇರೆದಪ್ಪಿದವೆಂಟು ದೆಸೆಗಳ
ಲೋರಣಿಸಿ ಚತುರಂಗಬಲ ಗಂ
ಭೀರ ಭೇರಿಯ ಕಹಳೆಗಳ ನಿಸ್ಸಾಳ ರಭಸದಲಿ
ಧಾರುಣಿಯು ನಡುಗಿಸುವ ಸುಭಟರ
ಘೋರ ಸಿಂಹನಿನಾದದಲಿ ರಣ
ಧೀರರಾವರಿಸಿದರು ದೈತ್ಯಾಂತಕನ ಪರಿಜನವ ೧೬

ಬೆಳದ ಬಾಳೆಯವನಕೆ ದಾವಾ
ನಲನ ಧಾಳಿಯೊ ಕೈದುವಿಲ್ಲದ
ನಳಿನನಾಭನ ಮೋಹರದ ಮುತ್ತಿಗೆಯೊ ಪರಬಲದ
ದಳದುಳವೊ ಧೃತಿಗೆಟ್ಟುದಂಬರ·
ದೊಳಗೆ ಸುರಕುಲ ರಾಯದಳ ಕಿ
ತ್ತೆಲಗಿನಲಿ ನಡೆತಂದುದೊಬ್ಬರನೊಬ್ಬರುರವಣಿಸಿ ೧೭

ಮುನಿಜನರು ಋತ್ವಿಜರು ವಿಪ್ರರು
ವನಿತೆಯರು ವಂದಿಗಳು ನಾನಾ
ಜನವದಿದ್ದುದು ವೈರಿಮಱೆದು ಕಲ್ಪಾಂತಸಾಗರದ
ಘನತೆಯಂತಿರೆ ಕೈದುವಿಲ್ಲದೆ
ಮನದ ಸಂತೋಷದ ಮಹೋತ್ಸವ
ಜನಿತ ಲೀಲೆಯಲಾಡುತಸುರಾಂತಕನ ಬಳಸಿನಲಿ ೧೮

ಕಾಲುನಡೆಯಲಿ ಧಾಳಿಡುವ ಕುಲ
ಶೈಲದಂತಿರಲವನಿಯನು ಪಾ
ತಾಳವನು ಹುಗಿಸುತ್ತ ತೀವ್ರ ಪದಾಭಿಘಾತದಲಿ
ಆಲಿಗಳಲುರಿಗೆದಱಲಂತಕ
ನೇಳಿಗೆಯಲಾ ದಂತವಕ್ತ್ರ ನೃ
ಪಾಲನಂದೈತಂದನು ಸುರಾಂತಕನ ಸಮ್ಮುಖಕೆ ೧೯

ನಿಲ್ಲು ನಿಲ್ಲೆಲೆ ಕೃಷ್ಣ ತಲ್ಲಣ
ವಿಲ್ಲದಿದ್ದರೆ ಸಮರಮುಖದಲಿ
ಬಲ್ಲಿದನು ನೀನಹಡೆ ಹಿಡಿ ಹಿಡಿ ಗದೆಯನಿದಿರಾಗಿ
ಅಲ್ಲದಂಜಿದೆನೆನ್ನು ಕೊಲ್ಲೆನು
ಕೊಲ್ಲೆನವನತನಾದಡೆನುತರಿ
ಮಲ್ಲ ಮದಭಂಜನನು ಮೊಳಗಿದನಿದಿರಲಚ್ಯುತನ ೨೦

ಇಳಿದನಸುರಾರಾತಿ ರಥವನು
ಖಳನ ಬರವನು ಕಾಣುತವೆ ಮುನಿ
ಕುಲಮನೋಹರಮೂರ್ತಿ ಪರಿಜನಕಭಯಹಸ್ತವನು
ಒಲಿದು ಕರುಣಿಸುತೆಯ್ದಿದನು ಘನ
ಜಲಧಿ ಮೇರೆಯ ಮೀಱೆ ಬರೆ ಮಾ
ರ್ಮಲೆವ ಸೇತುವಿನಂತೆ ಮೊಳಗುವ ವೈರಿಮೋಹರಕೆ ೨೧

ಆವ ಸುಕೃತದ ಫಲವೊ ಕಂಡೆನ:
ದೈವವಶದಲಿ ಕೃಷ್ಣ ನಿನ್ನನು
ಜೀವಿಸುವ ಪರಿಯೆಂತೊ ಹೇಳೆನ್ನೆನ್ನೊಡನೆ ತೊಡಕಿ
ಕಾವವರ ಕರೆ ಕಮಲಭವ ಭವ
ದೇವನಿಕರಂಗಳಲಿ ಹಿಡಿ ಹಿಡಿ
ಗೋವಳನೆ ಕೈದುವನು ಕಲಿಯಹಡೆಂದನಾ ಭೂಪ ೨೨

ಕೊಂದೆ ತನ್ನೊಡಹುಟ್ಟಿದನನೆಲೆ
ಹಂದೆ ಕಲಿಶಿಶುಪಾಲ ಭೀಷ್ಮಕ
ನಂದನರನವರಳಲ ಕಳೆಯೆನೆ ನಿಮಿಷಮಾತ್ರದಲಿ
ನಿಂದೆಯಾದರೆ ತನ್ನ ಸಮ್ಮುಖ
ಕೆಂದು ಕೋಪಾಟೋಪದಲಿ ನಡೆ
ತಂದನಸುರಾಂತಕನ ಸಮ್ಮುಖಕಧಿಕ ಗರ್ವದಲಿ ೨೩

ನಿಲ್ಲದಿರ್ದಡೆ ಹೋಹುದೈ ತನ
ಗುಳ್ಳನಿತು ಕಲಿತನವ ಮೆಱೆಯದೆ
ಬಲ್ಲಿದನ ಕೂಡಕಟ ವೈರವ ಕೊಂಡು ಕಳನೊಳಗೆ
ಇಲ್ಲ ತನಗಾಶ್ರಯವನಾಥಂ
ಗಿಲ್ಲ ಬೇಱೆನ್ನೊಂದು ಗತಿ ಬಲು
ಹುಳ್ಳಡಿದಿರಾಗೆನುತ ಮುರರಿಪು ತೂಗಿದನು ಗದೆಯ ೨೪

ಎಲೆಲೆ ಬಂಧುದ್ರೋಹಿ ಧೂರ್ತರ
ಕುಲಗುರುವೆ ವಿಶ್ವಾಸಘಾತಿಯೆ
ಗಳಹರರಸನೆ ಪಾರದಾರಿಕ ಪಟ್ಟವರ್ಧನನೆ
ಕೊಲುವೆನಿದೆ ನೋಡೆನುತ ಕೋಪಾ
ಕುಳಿತನಯನನು ಕೊಳ್ಳೆನುತ್ತ
ಪ್ಪಳಿಸಿದನು ಗದೆಯಿಂದ ಮುರಹರನುತ್ತಮಾಂಗದಲಿ ೨೫

ಅಹುದು ಮತ್ತೇನಾಡಿದರೆ ತ
ಪ್ಪಹುದೆ ವೀರರು ಹೇಳಿದನಿತೂ
ವಿಹಿತವೆನಲುಂಟುಂಟು ತನ್ನಲಿ ನಿನ್ನ ಪಲ್ಲುಗಳ
ಕುಹಕಿ ಹೇಳುದುರಿಸಿದರಾರೆನು
ತಹಿತನಾಕ್ಷೇಪವನು ಬಹು ಭಾ
ರಿಯ ಗದೆಯ ಗಾಯವನು ಸೈರಿಸುತೆಂದನಸುರಾರಿ ೨೬

ಆಯಿತೇ ನಿನ್ನಯ ಮನೋಭಿ
ಪ್ರಾಯಸಿದ್ಧಿ ಮದೀಯ ಗದೆಯೊಂ
ದಾಯತಿಕೆಯನು ನೋಡೆನುತ ಕೌಮೋದಕಿಯಲಿಡಲು
ಘಾಯದಿಂದೆದೆ ಬಿರಿದು ನೆತ್ತರು
ಬಾಯಲೊಕ್ಕುದು ಬಳಿಕ ಧರಣಿಗೆ
ಕಾಯವನು ಕೈಯೆಡೆಯನಿತ್ತನು ದಂತವಕ್ತ್ರನೃಪ ೨೭

ಹೊಳೆಹೊಳೆವುತಭ್ರದಲಿ ಮಿಂಚಿನ
ಹೊಳಹಿನಂತಿರೆ ದಂತವಕ್ತ್ರನ
ಕಳೆವರವ ಹೊಱವಂಟು ದೆಸೆದೆಸೆಗಳನು ಬೆಳಗುತ್ತ
ಸುಲಲಿತಾತ್ಮಜ್ಯೋತಿ ಬೆರಸಿದು
ದಿಳೆಯ ಜನವೀಕ್ಷಿಸಲು ಮುರಹರ
ನೊಳಗೆ ಚೈದ್ಯನವೋಲು ಸುರಮುನಿನಿಕರವುಘೆಯೆನಲು ೨೮

ವೀರನಳಿವನು ಕಾಣುತೊಡಲಲಿ
ಕೂರಲಗು ಮುಱಿದಂತೆ ಮನದಲಿ
ಘೋರತರ ಶೋಕಾಗ್ನಿ ಸಂವೃತನಾಗಿ ರೋಷದಲಿ
ಮೇರೆದಪ್ಪಿದನವನ ತಮ್ಮ ವಿ
ಡೂರಥನು ಸೆಳೆದಸಿಲತೆಯ ಹೊಂ
ದೇರನಿಳಿದನು ಮುರಹರನ ಸಮ್ಮುಖಕೆ ನಡೆತಂದ ೨೯

ಎಚ್ಚು ಕಡಿದನು ಕೈಯ ಖಡುಗವ
ನಚ್ಯುತನು ಬಾಣದಲಿ ಖಳನೊಡೆ
ಗಚ್ಚಿದನು ಮುನಿದೊಡನೆಯಡಿಗಡಿಗಧಿಕ ರೋಷದಲಿ
ಕಿಚ್ಚಿನಲಿ ನಿಂದಂತೆ ರೋಷದ
ಹೆಚ್ಚುಗೆಯ ಹೇರಾಳ ತಮದಲಿ
ಮುಚ್ಚಿ ಮುಸುಕಿದ ಮನದಲುಗಿದನು ಶಕ್ತಿಯನು ವೀರ ೩೦

ದನುಜಹರನಭಿಮುಖಕೆ ಬಹ ವೀ
ರನನು ಕಾಣುತ ಮುನಿದು ಚಕ್ರವ
ನೆನೆದು ಬೆಸಸಲು ನಡೆದುದವನಿಯನಂಬರವ ಮುಸುಕಿ
ಅನಿಮಿಷರು ಭಾಪೆನಲು ಕಡಿದುದು
ಕನಕಕುಂಡಲ ಮಕುಟ ಮಣಿಮಂ
ಡನದ ತಲೆಯನು ಸಿಕ್ಕಿದುದು ತಳತಂತ್ರವವನಿಪನ ೩೧

ಮತ್ತಗಜ ರಥತುರಗತತಿ ಪುರು
ಷೋತ್ತಮನ ವಶವಾಯ್ತು ಸಿಲುಕಿದ
ವಸ್ತು ವನಿತಾವ್ರಜದ ಸಂಖ್ಯೆಯನಱೆವರಾರದನು
ಉತ್ತಮೋತ್ತಮನೇಱೆ ಪುಣ್ಯಾ ರ
ಥೋತ್ತಮವನೈತಂದನೊಪ್ಪಿರೆ
ಮೊತ್ತದಾ ಜನನಿಕರ ಸಹಿತಾ ದ್ವಾರಕಾಪುರಕೆ ೩೨

ಬೀಳುಕೊಂಡುದು ಸಕಲ ಪೃಥ್ವೀ
ಪಾಲಜನ ಮುನಿಜನ ಮಹಾಧ್ವರ
ಶಾಲೆಯಲಿ ನೆರೆದಿರ್ದ ಪರಿಜನ ಬಂಧುಜನಸಹಿತ
ಲೀಲೆ ಮಿಗೆ ಷೋಡಶ ಸಹಸ್ರ ವಿ
ಶಾಲನೇತ್ರೆಯರೊಡನೆ ಲಕ್ಷ್ಮೀ
ಲೋಲ ನಿತ್ಯಾತುಮನು ಸುಖಿಸುತ್ತಿರ್ದನವನಿಯಲಿ ೩೩

ನೂರನೆಯ ಸಂಧಿ ಮುಗಿಯಿತು.

# ನೂರೊಂದನೆಯ ಸಂಧಿ

ಅರ್ಭಕರನಳಿದವರನಾ ಷಡು
ಗರ್ಭರನು ತಂದಿತ್ತು ಮಗುಳೆ ಚ
ತುರ್ಭುಜನು ಸಲಿಸಿದನು ದೇವಕಿದೇವಿಯಭಿಮತವ

ಒಂದು ದಿನ ಮುರವೈರಿ ನಿಜಪಿತೃ
ಮಂದಿರಕೆ ನಡೆತರಲು ಗುರುಪದ
ವಂದನೆಗೆ ಬಲಭದ್ರಸಹಿತ ಮನೋನುರಾಗದಲಿ
ಇಂದುಮುಖಿ ನಸುನಗುತ ತನ್ನಯ
ನಂದನರನಪ್ಪಿದಳು ದೇವಕಿ
ತಂದೆಗಳಿರಿದನೊಂದನವಧರಿಸುವುದು ನೀವೆನುತ ೧

ತಂದೆ ಗಡ ಸಾಂದೀಪನೀ ವರ
ನಂದನನನಧ್ವರದಲಾ ದ್ವಿಜ
ನಂದನರನಪಗತರನಂತಕಪುರಕೆ ನೀ ಹೋಗಿ
ತಂದೆ ನಿನ್ನೊಡಹುಟ್ಟಿದೆನ್ನಯ
ನಂದನರನಱುವರನು ಕಾಂಬೆನು
ತಂದುಕೊಡು ತನಗೆನುತ ನುಡಿದಳು ದೇವಕೀ ದೇವಿ ೨

ಎಂದಡಾಗಲಿ ತಹೆವೆನುತ ಗೋ
ವಿಂದರಾಮರು ಮೃತಕುಮಾರರ
ವೃಂದದೆಡೆಯನು ತಿಳಿದು ಸುತಲನಿವಾಸವನು ನೋಡಿ
ಅಂದು ಬಿಜಯಂಗೈಯ್ದುರಥಿಕಾ
ನಂದದಲಿ ಬಲಿ ಭುವನಪತಿಗಳು
ಬಂದುದನು ಕೇಳುತ್ತ ಪರಿಜನಸಹಿತಲಿದಿರಾಗಿ ೩

ಅಹಹ ಶಿವಶಿವ ಶಿವಶಿವಾನೆಂ
ತಹ ಸಭಾಗ್ಯನೊ ಪುಣ್ಯವಂತನೊ
ಬಹಳ ಜನ್ಮಾಂತರಸಹಸ್ರಾರ್ಜಿತ ತಪೋಯುತನೊ
ಗೃಹಕೆ ಸಾಕ್ಷಾತ್‌ಮುಸಿಮನೋ ದು
ಗ್ರಹವೆನಿಪ ಪರದೇವವಿಂತೈತ
ತಹುದ ಪಡೆದೆನೆನುತ್ತ ಮೈಯಿಕ್ಕುತ್ತ ನಡೆತಂದ ೪

ಇದಿರುಗೊಂಡನು ಕಳಸಕನ್ನಡಿ
ವಿದಿತ ಮಂಗಳ ವಾದ್ಯರವದಲಿ
ಸುದತಿಯರ ಸಂಗೀತ ನೃತ್ಯ ಮಹೋತ್ಸವದಲೆಸೆಯೆ
ಸದಮಳರ ಸಂಪನ್ನ ಪದಯುಗ
ಪದುಮದಲಿ ಮೈಯಿಕ್ಕಿ ತನುಪುಳ
ಕದಲಿ ನೆನೆದನು ನೋಡಿ ಪರಮಾನಂದಮೂರ್ತಿಗಳ ೫

ಮನೆಗೆ ಬಿಜಯಂಗೈಸಿ ತಂದಾ
ದನುಜಹರ ರಾಮರನು ದಿವ್ಯಾ
ಸನಗಳಲಿ ಕುಳ್ಳಿರಿಸಿ ಪರಮಾಹ್ಲಾದಭಾರದಲಿ
ಅನುಪಮರ ಪದಯುಗಕೆ ಪುನರಪಿ
ತನುವನೀಡಾಡಿದನು ತೊಳೆದನು
ಕನಕಕಲಶೋದಕದಲಚ್ಯುತ ರಾಮರಂಘ್ರಿಗಳ ೬

ಧರಿಸಿದನು ತತ್ಪಾದಪಂಕಜ
ಪರಮ ಪಾವನತೀರ್ಥವನು ನಿಜ
ಶಿರದಲಂಗನೆ ಸುತರು ಪರಿಜನ ಬಂಧುಜನಸಹಿತ
ಇರದೆ ಪೂಜಿಸಿ ಗಂಧಮಾಲ್ಯಾಂ
ಬರ ವಿಭೂಷಣ ವಿವಿಧರತ್ನೋ
ತ್ಕರಗಳಲಿ ದಿವ್ಯಾನ್ನಪಾನ ವಿಶಿಷ್ಟ ಭೋಗದಲಿ ೭

ಓಲಗಿಸಿ ಮೈದಣಿಯದೀಕ್ಷಿಸು
ತಾಲಿಗಳು ನೆಱೆ ದಣಿಯದಾ ಶ್ರೀ
ಲೋಲನನು ಸೇವಿಸುತ ನಾಮಾಮೃತಗಳನೆ ಸವಿದು
ನಾಲಗೆಗೆ ದಣಿವಾಗದುತ್ಸವ
ದೇಳಿಗೆಯ ಸಂತಸದಿ ತನು ಪುಳ
ಕಾಳಿಯಲಿ ಮುಳುಗಾಡುತಿರ್ದನು ವೀರನಡಿಗಡಿಗೆ ೮

ತೆಗೆದು ಮೆಲುದಳಗಳಲಿ ಸಿರಿಪದ
ಯುಗಳವನು ಪರಿಮಳಿಸುತೊತ್ತುತ
ದೃಗುಯುಗಳ ಮುಖಹೃದಯದೇಶಂಗಳಲಿ ಮನನಲಿದು
ಒಗುವ ಸುಖಜಲಧಾರೆಯಲಿ ನಸು
ಮುಗಿದ ಕಂಗಳಲೀಕ್ಷಿಸುತ ಕರು
ಣೆಗಳ ದಾತಾರಂಗೆ ಬಿನ್ನಹ ಮಾಡಿದನು ನಮಿಸಿ ೯

ದೇವದೇವನ ಚರಣ ಕಮಲಯು
ಗಾವಲೋಕನದಧಿಕ ಭಾಗ್ಯವಿ
ದಾವ ಜನ್ಮಾಂತರ ಸಹಸ್ರಾರ್ಜಿತ ತಪಃಫಲವೊ
ಭಾವಗೋಚರವಲ್ಲ ಮುನಿಗಳಿ
ಗಾವ ಧನ್ಯರ ದೇವನೋ ತಾ
ನಾವ ಕೃತಕೃತ್ಯನೊ ಸನಾಥನೊ ಶಿವಶಿವಾಯೆಂದ ೧೦

ಚಿತ್ತದಲಿ ಮಱೆದೊಮ್ಮೆ ನೆನೆದರೆ
ಸತ್ವಶುದ್ಧಿ ದ್ವಾರದಿಂದಲಿ
ಮುಕ್ತಿಪದಸಾಮ್ರಾಜ್ಯವನು ಕರುಣಿಸುವ ನಿಮ್ಮಡಿಯ
ಎತ್ತಲೀ ಪ್ರತ್ಯಕ್ಷ ದರುಶನ
ವೆತ್ತ ನಾನೆಲೆ ದೇವ ತಾಮಸ
ನತ್ಯಧಿಕ ಪಾಪಾತ್ಮನತಿ ದುಷ್ಟಾತ್ಮನಕಟೆಂದ ೧೧

ನೆನೆವರೇ ನಿನ್ನವರು ನಿನ್ನನು
ನೆನೆಯದವರನ್ನಿಗರು ದೇವರ
ಮನಕೆ ಬಹನುತ್ತಮನು ಬಾರದಡಾತನಧಮನಲ
ನೆನೆವ ಹೊಲೆಯನೆ ಮಿಗಿಲು ನಿನ್ನನು
ನೆನೆಯದಾ ದ್ವಿಜನಿಂದ ನಿನ್ನನು
ನೆನೆವ ಮತಿಯನು ಕೃಷ್ಣ ಕರುಣಿಸಬೇಹುದೆನಗೆಂದ ೧೨

ಅಕಟ ಸರ್ವಾಧಾರ ಸರ್ವಾ
ತ್ಮಕನೆನಿಪ ನಿನ್ನಲ್ಲಿ ತೋರ್ಪವು
ಸಕಲವಹ ಮಾಯಾಗುಣೋತ್ತಮ ತೀವ್ರವೃತ್ತಿಗಳು
ಸುಕೃತಿಗಳು ದುಷ್ಕೃತಿಗಳಿವರು
ದ್ಯುಕುತಗುಣರಿವರಧಮರೆಂಬೀ
ಪ್ರಕೃತಿಯಿದು ಪರಿಪೂರ್ಣ ಪರಮಾತ್ಮ ಸ್ವರೂಪನಲಿ ೧೩

ವೈರದಲಿ ಕೆಲರೈದುವರು ನಿಜ
ಚಾರು ಚರಣಂಗಳನು ನೆನೆದತಿ
ಘೋರಚೇಷ್ಟಿತರಾಗಿ ಕೆಲರು ಮನೋನುರಾಗದಲಿ
ಸೇರುವರು ಭಜಿಸುತ್ತ ಕಾಮ
ಪ್ರೇರಿತದಲೇ ಕೆಲರು ತತ್ವವಿ
ಚಾರದಲಿ ಪರಿತುಷ್ಟರಾಗಿಯೆ ಕೆಲರು ಕೇಳೆಂದ ೧೪

ದೇವ ನಿಮ್ಮಡಿಯಂಘ್ರಿಕಮಲದ
ಭಾವವೇ ಭವಮೋಕ್ಷ ಕಾರಣ
ಭಾವವೇ ಸರ್ವಾರ್ಥಸಂಪತ್ಸುಖಕೆ ಕಾರಣವು
ಶ್ರೀವರನೆ ಶಾಶ್ವತನೆ ತನಗೆ ಭ
ವಾವಳಿಯೊಳೀ ನಿನ್ನ ಪದರಾ
ಜೀವದಲಿ ನಿಜವೆನಿಪ ಭಾವವ ಕರುಣಿಸುವುದೆಂದ ೧೫

ಇತ್ತಲೇನು ನಿಮಿತ್ತ ದೇವರು
ಚಿತ್ತವಿಸಿದಿರಿ ಗಮನವನು ನಿಜ
ಭೃತ್ಯನೆನ್ನಯ ಗೃಹಕೆ ಕಾರುಣ್ಯದಲಿ ತನಗಾವ
ಕೃತ್ಯವೆಂಬುದ ಬೆಸಸಬೇಹುದೆ
ನುತ್ತ ಬಲಿ ತಲೆವಾಗಿರಲು ಪುರು
ಷೋತ್ತಮನು ನಸುನಗುತ ನುಡಿದನು ದೈತ್ಯಪತಿಯೊಡನೆ ೧೬

ಆದಿ ಮನ್ವಂತರದಲೆಲೆ ವಿನ
ಯೋದಧಿಯೆ ಪೂರ್ಣೆಯಲಿ ತನುಭವ
ರಾದರಱುವರು ಮುನಿಮರೀಚಿಗೆ ರೂಪಗರ್ವಿತರು
ಹೋದರಾ ದೇವಲನ ಪಾವನ
ಪಾದ ಪುಣ್ಯಾಶ್ರಮಕೆ ನಕ್ಕರ
ನಾದರದಲಾ ಮುನಿಯ ಕೃಶತರ ಗಾತ್ರವನು ಕಂಡು ೧೭

ಶಪಿಸಿದನು ಮುನವರನತಿಮದೋ
ದೃಪ್ತರನು ಬಳಿಕಾ ಹಿರಣ್ಯಕ
ಶಿಪುವಿನಂಗನೆಯಲ್ಲಿ ಜನಿಸಿದರಸುರರೆಂದೆನಿಸಿ
ಅಪಗಮಿಸಲಲ್ಲಿಂದ ದೇವಕಿ
ಯುಪಚಿತೋದರವಾಸದಲಿ ನಿ
ಷ್ಕೃಪರನೆನ್ನಯ ಯೋಗಮಾಯಾದೇವಿಯಿರಿಸಿದಳು ೧೮

ಕೊಂದನವರನು ಕಂಸನಾ ಮೃತ
ನಂದನರನೀಕ್ಷಿಸುವ ಮನದೊಲ
ವಿಂದ ಕಳುಹಿದಳೆಮ್ಮನಿತ್ತಲು ದೇವಕೀದೇವಿ
ಬಂದೆವಾವು ತದರ್ಥದಲಿ ನೆವ
ದಿಂದ ದಿಟ ನಿನ್ನವರನೀಕ್ಷಿಸು
ವೊಂದು ಮನದರ್ಥಿಯಲಿ ಮಱೆಯೇಕೆಂದನಸುರಾರಿ ೧೯

ಹಿಂಗಲಿವರಿಗೆ ಶಾಪ ನಿಜಪದ
ಸಂಗದಲಿ ಕೇಳೆನುತ ತಡವಿದ
ನಂಗವನು ತಕ್ಕವಿಸಿ ತನ್ನವರೆಂಬ ಮೋಹದಲಿ
ಸಂಗಲುಬ್ಧನೆ ನಿಲ್ಲೆನುತ್ತ ರ
ಥಾಂಗಧರನಾತನನು ಕರುಣಾ
ಪಾಂಗದಲಿ ಬೀಳ್ಕೊಟ್ಟನಾ ಷಡುಗರ್ಭರನು ಕೊಂಡು ೨೦

ಆ ಹಲಾಯುಧ ಸಹಿತ ಕರುಣಾ
ದೇಹಿಕನು ಬಲಿ ಮಾಳ್ಪ ಪೂಜಾ
ವ್ಯೂಹವನು ಕೈಕೊಂಡು ಕಳುಹಿಸಿಕೊಂಡು ನಿಜಪುರಕೆ
ವಾಹನದಲೈತಂದರಿಳಿದರು
ವಾಹನವನೊಲಿದಾ ಮುಕುಂದ
ಮಹಾಹಿಮೂರ್ತಿಗಳೆಱಗಿದರು ನಿಜಜನನಿಯಂಘ್ರಿಯಲಿ ೨೧

ಒಪ್ಪಿಸಿದರರ್ಭಕರನಱುವರ
ತಪ್ಪದೌ ನೀ ನೋಡೆನುತ ಕೈವಿಡಿ
ದೊಪ್ಪುಗೊಂಬುದೆನುತ್ತ ಪದಯುಗಳದಲಿ ಪೊಡವಡಿಸಿ
ದರ್ಪಕೋಪಮ ಮೂರ್ತಿಗಳು ನಿಳ
ಲುಪ್ಪರದ ಹರುಷದಲಿ ತೆಗೆ ತೆಗೆ
ದಪ್ಪಿದಳು ಬಾಲಕರನೊಲಿದಾ ದೇವಕೀದೇವಿ ೨೨

ತುಳುಕಿದಳು ಹರುಷಾಶ್ರುಜಲದಲಿ
ಲಲನೆ ಸುತಮೋಹದಲಿ ತೊರೆದವು
ಮೊಲೆಗಳರ್ಭಕರಂಗಸಂಸ್ಪರುಶನದ ಸೌಖ್ಯದಲಿ
ತಲೆಯನಾಘ್ರಾಣಿಸಿದಳಪ್ಪಿದ
ಳೊಲಿದು ಮೊಲೆಯೂಡಿದಳು ತನಿರಸ
ಪುಳಕದಲಿ ಮೈಮಱೆದಳಂಗನೆ ಪುತ್ರರನು ನೋಡಿ ೧೩

ಶ್ರೀರಮಣಮುಖಪೀತಶೇಷ
ಕ್ಷೀರವನು ಸೇವಿಸಿ ತದಂಗ ಸ
ಮೀರಸಂಸ್ಪರುಶನದ ಸತ್ವದಲಾ ಕುಮಾರಕರು
ಚಾರುಮೂರ್ತಿಗಳಾಗಿ ಮಾತೃಪ
ದಾರವಿಂದದಲೆಱಗಿ ಬಲ ದೈ
ತ್ಯಾರಿಗಳನೊಪ್ಪಿರಲು ಸಂಸ್ತುತಿ ಮಾಡಿದರು ನಲಿದು ೧೪

ಎಱಗಿದರು ಬಂದಾ ಕುಮಾರರು
ಮಿಱುಪ ಹರಿಬಲಂಘ್ರಿರಜವನು
ತುಱುಗಿ ಬೀಳ್ಕೊಂಡೆಸೆವ ದಿವ್ಯವಿಮಾನದಲಿ ದಿವವ
ಜಱಿದು ನಿಜತೇಜದಲಿ ವಿಷ್ಣುವಿ
ನುಱುವ ಪದವನುಗಮಿಸಿದರು ಸೈ
ವೆಱಗಿನಲಿ ನೋಡುತ್ತಲಿರ್ದಳು ದೇವಕೀದೇವಿ ೧೫

ಆರಿಗಾರೋ ಮಕ್ಕಳಾರಿಂ
ಗಾರು ತಾಯಿ ಮಹಾತ್ಮನೀ ದೈ
ತ್ಯಾರಿಯೀತನ ಮಾಯೆಯಿದಱ ಮಹಾನುಭಾವವನು
ಆರಱಿವರಕಟಕಟ ಬಱಿದೆ ವಿ
ಚಾರವಿಲ್ಲದೆ ಕೆಡುವುದೀ ಸಂ
ಸಾರ ದುಃಖದಲಖಿಳಜನವೆಂದಳು ಸರೋಜಮುಖಿ ೧೬

ತಿರುಗುತಿದೆ ಜಗ ಯೋನಿಶತದಲಿ
ನರಕ ದುಃಖಂಗಳಲಿ ಹುಟ್ಟುತ
ಹೊರವುತಳಿವುತ ಬಹಳ ಮೋಹಮದಾಂಧಕಾರದಲಿ
ಹೊರಳಿ ಹೊದಕುಳಿಗೊಂಡು ಭವಸಾ
ಗರವನಿದಸಿನ್ನಾವ ಕಾಲಾಂ
ತರಕೆ ಕಳಿವುದೊ ಶಿವಶಿವಾಯೆನುತದಿರಿದಳು ತನುವ ೧೭

ಮಗನೆ ಸಾಕ್ಷಾದ್ವಿಷ್ಣು ಗಡ ತನ
ಗೊಗೆದಸಮ್ಯಕ್ ಜ್ಞಾನಿ ಕೃಷ್ಣನ
ಬಗೆಯನಱೆವವರಾರು ಶಿಶುತನದಂದು ಬಾಯೊಳಗೆ
ಜಗವ ತೋಱನೆ ಹರಹರಾ ಮಾ
ಯೆಗಳರಸನೆತ್ತನೆ ಮಹಾದ್ರಿಯ
ನುಗುಳಿಸನೆ ಸುರಪತಿಯ ಗರ್ವವನೆಂದಳಬುಜಾಕ್ಷಿ ೧೮

ವಸುಮತಿಯ ಭಾರವನು ಕಳೆಯಲು
ಬಸಿದು ಮರ್ತ್ಯಾಕೃತಿಗೆ ಘನ ಪೌ
ರುಷವ ಮೆಱೆದನು ರಕ್ಷಿಸಲು ಗೋದ್ವಿಜಸುರಾವಳಿಯ
ಅಸಮವೆನಿಪ ಚರಿತ್ರವೇ ಸೂ
ಚಿಸದೆ ಕೃಷ್ಣನನಖಿಳ ಭುವನ
ಪ್ರಸರಪಾಲಕನೆಂಬುದನು ದಿಟಕೆಂದಳಬುಜಾಕ್ಷಿ ೧೯

ಅಱಿತೆನೇ ನಾ ನಿನ್ನನೀ ಜಗ
ಕುಱುವದೈವವೆನಿಪ್ಪ ಕೃಷ್ಣನ
ನಿಱುಗೆಯನು ಮಾಯಾಮಯೋಪಾಧಿಕದ ಗೋಚರದ
ಮಱೆವಿಡಿದು ನರನಂತೆ ಹೊಱಗನು
ಮೆಱೆವ ಪರಮಾತ್ಮನನು ದಿಟ ನೇ
ಸಱನೊಳೆಂತೋ ತಮವಿದೆಂದಳಲಿದಳು ಲಲಿತಾಂಗಿ ೨೦

ಕರುಣಿಸೆನಗೆಲೆ ಕೃಷ್ಣ ಕರುಣಾ
ಕರನೆ ಭಕ್ತಪ್ರಿಯನೆ ಭಕ್ತಾ
ಭರಣಮೂರ್ತಿಯೆ ಭಕ್ತಭಕ್ತನೆ ಭಕ್ತದೇಹಿಕನೆ
ತರಳಮತಿಗೆ ಭವತ್ಪದಾಬ್ಜ
ಸ್ಮರಣೆಯನು ಮಱೆವೊಕ್ಕೆನೀ ನಿಜ
ಚರಣಕಮಲವನೆಂದು ತಲೆವಾಗಿದಳು ತರಳಾಕ್ಷಿ ೨೧

ಎನಲದನು ಕೇಳುತ್ತ ಕಾಣುತ್ತ
ತನಯರಾಗಮನವನು ಗತಿಯನು
ವನಿತೆಯನು ತಾಪೋಪ ಬೃಂಹಿತಭಕುತಿಭಾವವನು
ನೆನೆದು ಮನದಲಿ ರಾಮಕೃಷ್ಣರ
ಜನನ ಕಾರಣಸಂಗತಿಯನುರು
ವಿನಯದಲಿ ವಸುದೇವನೆಂದನು ಭಕುತಿಭಾವದಲಿ ೨೨

ಅಲ್ಲ ನೀವೆನ್ನಾತ್ಮಜರು ದಿಟ
ಕಲ್ಲ ಮರ್ತ್ಯರು ನಿಮ್ಮ ನಿಜವನು
ಬಲ್ಲೆನಾ ಸಾಕ್ಷಾತು ವಿಷ್ಣುವೆ ನೀನು ಲೀಲೆಯಲಿ
ಇಲ್ಲಿಗಿಳಿದಿರಿ ದುಷ್ಟಭೂಪರ
ನೆಲ್ಲರನು ಸಂಹರಿಸಿ ನಿಜಪದ
ಪಲ್ಲವದ ಸಂಗದಲಿ ಧರೆಯನು ಪಾಲಿಸುವಡೆಂದ ೨೩

ಆದಿಯಲಿ ಮತ್ಸ್ಯಾಕೃತಿಯಲುರು
ವೇದವನು ನೀ ತಂದೆ ಕೂರುಮ
ನಾದೆ ಧರಿಸಿದೆ ಗಿರಿಯನೆತ್ತಿದೆ ಸೂಕರಾಂಗದಲಿ
ಮೇದಿನಿಯನೀ ತಂದೆ ಮಕ್ಕಳ
ವಾದವನು ಮಾಣಿಸಲು ನರಹರಿ
ಯಾದೆಯಲ್ಲೈ ಕೃಷ್ಣ ಕರುಣಾಕರನೆ ನೀನೆಂದ ೨೪

ಅಳಿದೆ ವಾಮನನಾಗಿ ಧರೆಯನು
ಬಲಿಯ ಬಾಗಿಲ ಕಾಯ್ದೆ ಖಳನೃಪ
ಕುಲವ ಸವಱಿದೆ ಪರುಶುರಾಮಾಖ್ಯನನು ನೀ ಧರಿಸಿ
ಲಲನೆಗೋಸುಗ ಕಟ್ಟದೆಯಲೈ
ಜಲಧಿಯನು ರಾಮಾಭಿಧಾನದ
ಲಲಘು ಮಹಿಮನೆ ನಿನ್ನ ಮಹಿಮೆಯನಱಿವರಾರೆಂದ ೩೫

ಒಲಿದು ಮತ್ತಿಂದೆನಗೆ ಕುರುಣಾ
ಜಲಧಿ ಜನಿಸಿದೆ ಸನ್ನತರ ನೆಱೆ
ಸಲಹಲೀ ಭೂಭಾರ ಹರಣವ ಮಾಡಲೋಸುಗವೆ
ಕಲಿಯುಗದಲೀ ಹಲವು ಪರಿಯಲಿ
ಹಲವು ನಾಮಾಕೃತಿಯಲೆಸೆವ
ಗ್ಗಳೆಯ ದೈವದ ದೈವವಲ್ಲೈ ಕೃಷ್ಣ ನೀನೆಂದ ೩೬

ಹಿರಿಯಮಗನಜನಖಿಳಜಗಧೀ
ಶ್ವರರು ನಿನ್ನಂಶಾಂಶಭೂತರು
ತರಣಿ ಶಶಿಪಾವಕರು ನಯನಮನೋಮುಖೋದ್ಭವರು
ಸುರರು ಮನುಗಳು ಸುಪ್ರಜಾಧೀ
ಶ್ವರರು ವಸುಗಳು ರುದ್ರರೆಂಬವ
ರುರುಗುಣ್ವಾನಿತರ್ಯದೆ ನಿನ್ನಂಶಾಂಶಭವರೆಂದ ೩೭

ಈ ಸಕಲ ಸುರನರ ಚರಾಚರ
ರಾಶಿಗಳನೊಳಗೊಂಡಜಾಂಡದ
ರಾಶಿಯನು ತನ್ನೊಂದು ಲೀಲಾಶಕ್ತಿಭೇದದಲಿ
ಸೂಸಿ ನೊಗೆವ ಸಮರ್ಥೆ ನಿಜಗೃಹ
ದಾಸಿ ಮಾಯಾದೇವಿ ಗಡ ನೀ
ನೇಸು ಸಾಮರ್ಥ್ಯದ ಸಗಾಢದ ದೈವವೋಯೆಂದ ೩೮

ಅಱಿವೆ ನಾನೆಂತಕಟ ಮುನಿವರ
ರಱಿಯಲಱಿಯರು ನಿನ್ನ ತತ್ವದ
ನಿಱುಗೆಯನು ನಿಗಮೌಘಮಸ್ತಕನಿಕರದಱಿಕೆಯನು
ಅಱಿವ ಬುದ್ಧಿಯನೀ ಚರಾಚರ
ವಱಿವುದೆಂತಜ್ಞಾನದಲಿ ಮೈ
ಮಱೆದು ಮೋಹ ಮದಾಂಧಕಾರದ ದೀರ್ಘನಿದ್ರೆಯಲಿ ೩೯

ಜ್ಞಾತವಾಗದೆನುತ್ತ ಮುನ್ನವೆ
ಸೂತಿಕಾಗೃಹದೊಳಗೆ ಕಾರು
ಣ್ಯಾತಿಶಯದಲಿ ಜನಿಸಿ ನಿಜರೂಪಿನಲಿ ತಮಗೊರೆದ
ಚೇತನಾತ್ಮಕ ಕೇಳು ಮತಿ ನಿ
ರ್ಣೀತವಾದುದು ಮಱವೆಯಲಿ ಸ
ರ್ವಾತುಮನೆ ಪುತ್ರಾನುರಾಗದ ಪಾರವಶ್ಯದಲಿ ೪೦

ಸಾಕು ಕೃಷ್ಣ ಕೃಪಾನಿಧಿಯೆ ಯವಿ
ವೇಕದಲಿ ತಾನಕಟ ದಿನವನು
ನೂಕಿದೆನು ವಿಷಯಾಮಿಷಾಪೇಕ್ಷೆಯಲಿ ಮೈಮೆಱೆದು
ತೇಕಿದೆನು ತತ್ತತ್ಫಲಾಂಗವ
ನೇಕ ಕರ್ಮಂಗಳಲಿ ನೀನೆನ
ಗೇಕೆ ಕರುಣಿಸೆ ಪರಮಸುಖಸಾಧನದ ಸಂಸ್ಥಿತಿಯ ೪೧

ಸಿಕ್ಕಿದೆನು ಭವಬಂಧದಲಿ ಮಱೆ
ವೊಕ್ಕೆ ನಾನೆಲೆ ಕೃಷ್ಣ ನೀ ಹಿಂ
ದಿಕ್ಕಿಕೊಳ್ಳೆನ್ನುವನು ನಿನ್ನವನೆಂದು ಕರುಣದಲಿ
ಅಕ್ಕಟೆದನೇ ಬೇಡುವೆನು ಮೈ
ಯಿಕ್ಕಿ ನಿನ್ನಂಘ್ರಿಯಲಿ ವಿಜ್ಞಾ
ನಕ್ಕೆ ಕಾರುಣ್ಯ ಪ್ರಕಾಶವನೀವುದೆನಗೆಂದ ೪೨

ತಂದೆ ತಾ ನೀನೆನಗೆ ಮಗನೆಂ
ಬೊಂದು ನಿನ್ನಯ ಮಾಯೆಯಲಿ ಗೋ
ವಿಂದ ಬಱುದೊಱೆವೋದೆನಿಂದ್ರಿಯವಿಷಯ ವಿಭ್ರಮಕೆ
ಇಂದು ಪರಿಯಂತಕಟ ನಿಧಿಯಿರೆ
ತಂದೆ ತೊಳಲಿದೆ ಜರಗನೆನ್ನವ
ನೆಂದು ತೆಗೆ ಮಱೆವೊಕ್ಕೆ ನಿನ್ನಂಘ್ರಿಕಮಲವನು ೪೩

ಎನಲು ನುಡಿದನು ಪರಮ ಕರುಣಾ
ವನಧಿ ಪಿತನನು ಮುಗುಳು ನಗೆಯಲಿ
ಜನನಿಯನು ಮೈದಡವಿ ಪರಮಕೃಪಾಕಟಾಕ್ಷದಲಿ
ಅನುನಯದಲೀಕ್ಷಿಸುತ ಕೇಳಿಲೆ
ಜನನಿ ಪಿತ ಕೇಳುಂಟು ನೀವೆಂ
ದಿನಿತು ಗುಣವೆನ್ನಲ್ಲಿ ಸಂಶಯ ಬೇಡ ನಿಮಗೆಂದ ೪೪

ಸಕಲವೆನ್ನಲಿ ತೋರ್ಪುದಖಿಳಾ
ತ್ಮಕನು ತಾನೆಲೆ ತಾಯೆ ಕನಕದ
ವಿಕೃತಿಗಳಿಗಾ ಕನಕವಲ್ಲದೆ ಬೇರೆ ನಿಜವುಂಟೆ
ಭಕುತಿ ನಿರ್ಮಳಮತಿಗಳಿಗೆ ಸು
ವ್ಯಕುತವೆನ್ನಯ ನಿಜ ನಿರಾಬಾ
ಧಕವದಖಿಳ ಜಗದ್ವಿಧಾನಸ್ಮೃತಿವಿನಾಶದಲಿ ೪೫

ಇಂತು ತನ್ನಯ ನಿಜವೆನಿಪ್ಪೇ
ಕಾಂತ ತತ್ವರಹಸ್ಯವನು ಸು
ಸ್ವಾಂತರಿಗೆ ತಿಳಿವಂತು ಕರುಣಿಸಿ ಮಾತೃಪಿತೃಗಳಿಗೆ
ಸಂತ ಸೆಱಿವನು ಸಕಲಸೇವಕ
ಸಂತತಿಗೆ ಸಲಿಸುತ್ತ ಲಕ್ಷ್ಮೀ
ಕಾಂತ ನಿತ್ಯಾತುಮನು ಮೆಱೆದನು ಭಕ್ತವಶ್ಯತೆಯ ೪೬

ನೂರೊಂದನೆಯ ಸಂಧಿ ಮುಗಿಯಿತು.

# ನೂರೆರಡನೆಯ ಸಂಧಿ

ಭುವನ ಮಂಗಳಮೂರ್ತಿ ಸುರನರ
ರವನಿಪಾವನ ಕೀರ್ತಿ ಕರುಣಾ
ರ್ಣವನು ಸಲಹಿದನವನಿಸುರ ಗೋ ವಿಪ್ರಸಂತತಿಯ

ಧರಣಿಪತಿ ಕೇಳಿಂತು ಲಕ್ಷ್ಮೀ
ಧರನೆಸೆದನಾ ದ್ವಾರಕಾಪುರ
ವರದಲಷ್ಟೈಶ್ವರ್ಯ ಭೋಗದಲಖಿಳ ಸೌಖ್ಯದಲಿ
ಅರಸಿಯರು ಹದಿನಾಱುಸಾವಿರ
ವೆರಸಿ ನೂಱಧಿಕವೆನಲಾವಿ
ಷ್ಕರಿಸಿ ನಿಜವರಯೋಗಮಾಯಾಶಕ್ತಿಸಂಪದವ ೧

ವೀರ ರಾಜಕುಮಾರವರ್ಗದ
ಭೂರಿ ಸಂಪತ್ಸುಖದ ಯಾದವ
ವೀರ ಪರಿವಾರದ ಸಮೃದ್ಧೈಶ್ವರ್ಯ ಸಂಪದವ
ಚಾರು ಭೂಷಣವಸನ ಮಾಲ್ಯೋ
ದಾರ ಗಂಧಾಲಂಕೃತಾಂಗದ
ನಾರಿಯರ ತಿಂತಿಣಿಯಲೆಸೆದುದು ವರ ಮಹಾನಗರ ೨

ಬಾಲೆಯರು ಕರ್ಣಾಂತ ನಯನವಿ
ಶಾಲೆಯರು ನಾನಾ ವಿಹಾರ ವಿ
ಲೋಲೆಯರು ದಿವ್ಯಾಂಬರಾಭರಣಂಗಳಲಿ ಹರಿಯ
ಲೀಲೆಯನು ಪಾಡುತ್ತ ಕಂತುಕ
ಕೇಳಿಗಳಲಾಡುತ್ತ ವರ ಹ
ರ್ಮ್ಯಾಳಿಗಳಲೊಪ್ಪಿರ್ದರಮರಾಂಗನೆಯರಂದದಲಿ ೩

ಆಧಿಗಳ ಭಯವಿಲ್ಲ ಬಹಳ
ವ್ಯಾಧಿಗಳ ಭಯವಿಲ್ಲ ಕರುಣಾಂ
ಬೋಧಿ ಕೃಷ್ಣನ ಪುರದಲಕಾಲದಲಿ ಮೃತ್ಯುವಿನ
ಬಾಧೆಗಳು ಮುನ್ನಿಲ್ಲ ಮಣಿಮಯ
ಸೌಧಶಿಖರಂಗಳಲಿ ವನಿತಾ
ಮಾಧವಸ್ತುತಿಗೀತ ಲೀಲೆಗಳೆಸೆವವನವರತ ೪

ಸೂತ ಮಾಗಧ ವಂದಿಗಳ ಸಂ
ಗೀತ ನೃತ್ಯಸ್ತುತಿ ವಿನೋದ
ಪ್ರಾತದಲಿ ಬಹುವಿಧ ಸುಮಂಗಳ ವಾದ್ಯಘೋಷದಲಿ
ಓತು ಹರಿಪದದರುಶನಕೆ ಬಹ
ಭೂತಳಾಧೀಶ್ವರರ ರಥದ ಪ
ದಾತಿಗಳ ಹಯನಿಕರದಲಿ ರಂಜಿಸಿದುದನವರತ ೫

ನೆರೆದು ನಭದಲಿ ಸಿದ್ಧ ವಿದ್ಯಾ
ಧರ ಮಹೋರಗ ಯಕ್ಷ ಗಂಧ
ರ್ವರ ಜಯಸ್ತುತಿ ಪಾಠರವದಲಿ ಪುಷ್ಪವೃಷ್ಟಿಯಲಿ
ನಿರುಪಮಿತ ಸಂಗೀತ ವಾದ್ಯೋ
ತ್ಕರಗಳಲಿ ಭಜಿಸುತ್ತಲಿರ್ದರು
ಪರಮ ಪಾವನಕೀರ್ತಿಯನು ಸಕಳತ್ರನೆಂದೆನಿಸಿ ೬

ಒಂದು ದಿನ ವನಕೇಳಿಗಾ ಗೋ
ವಿಂದನರ್ಥಿಸಿ ಸಕಲವನಿತಾ
ವೃಂದ ಸಹಿತೈದಿದನು ಹೊಗಳುವ ಸೂತಮಾಗಧರ
ವಂದಿಗಳ ಗಂಧರ್ವ ಕಿನ್ನರ
ವೃಂದ ಸಂಗೀತಾತಿಸಂಭ್ರಮ
ದಿಂದ ಖಗಮೃಗ ಭೃಂಗನಿಕರನಿರಾಜಿತ ಸ್ಥಳಕೆ ೭

ದೆಸೆ ವಿಮೋಹಿಸಲೆಂದು ವರ ಷೋ
ಡಶಸಹಸ್ರಾಂಗನೆಯರುನ್ನತ
ವಸನ ಮಣಿಭೂಷಣ ಝಣತ್ಕಾರದಲಿ ರಂಜಿಸಲು
ಮುಸುಕಿ ವನಭೂಮಿಯನು ಹೊಱವಂ
ಟಸುರವೈರಿಯ ಬಳಸಿನಲಿ ರಂ
ಜಿಸಿದುದುರು ಯೌವನಕುಚದ್ವಯವದನಕಾಂತಿಯಲಿ ೮

ಸರಸಿಜದ ಪರಿಮಳವನಂಗದ
ಪರಿಮಳದಲುತ್ಪಲದ ಕಾಂತಿಯ
ನರಳುಗಂಗಳ ಕಾಂತಿಯಲಿ ಭೃಂಗಾವಳೀದ್ಯುತಿಯ
ಕುರುಳುಗಳ ಕಾಂತಿಯಲಿ ಮೃದುತರ
ಚರಣ ಬಿಂಬಾಧರದ ರುಚಿಯಲಿ
ಹರಿಸಿದರು ಕೆಂದಳಿರ ಸಿರಿಯನು ಕಾಂತೆಯರು ವನದ ೯

ಮೊಲೆ ಮುಡಿಯ ಭಾರದಲಿ ಬಡನಡು
ಬಳುಕಿ ಬಹಳ ನಿತಂಬಭಾರ
ಸ್ಖಲಿತಗಮನೆಯರಾಡುತಚ್ಯುತನೊಡನೆ ವನದೊಳಗೆ
ಹಲವು ಪರಿಯ ವಿಹಾರದಲಿ ವರ
ಲಲನೆಯರು ಕಡೆಗಣ್ಣ ಮನುಮಥ
ನಲಗಿನಲಿ ವಿಟಮನವನಿಕ್ಕಡಿಗಳೆದರಡಿಗಡಿಗೆ ೧೦

ಆಡಿ ದಣಿಯರು ಲಲನೆಯರು ನೆಱೆ
ಪಾಡಿ ದಣಿಯರು ಲೀಲೆಯನು ನಡೆ
ನೋಡಿ ದಣಿಯರು ಭುವನಮೋಹನ ದಿವ್ಯಮೂರ್ತಿಯನು
ಕೂಡಿ ದಣಿಯರು ತನುಮನಂಗಳ
ಲಾಡಿ ದಣಿಯರು ಸರಸವಚನವ
ನೀಡಿಱುವ ಮನದಧಿಕತರ ಸೌಹಾರ್ದ ಭಾರದಲಿ ೧೧

ಎನಿಬರಾ ವನಕೇಳಿಗಬಲೆಯ
ರನಿಬರಿಂಗನಿತು ಸ್ವರೂಪವ
ನನುಕರಿಸಿ ಕರುಣಾಮಹೋದಧಿ ವಿವಿಧಲೀಲೆಯಲಿ
ಅನುಪಮಾನಂದಾಮೃತಾಂಬುಧಿ
ವನವಿಹಾರದಲೊಪ್ಪುತಿರ್ದನು
ವನಿತೆಯರ ಮಧ್ಯದಲಿ ರತಿಸುಖಗಳನು ಸಲಿಸುತ್ತ ೧೨

ಹೂತೆಸೆದ ಸಂಪಗೆಯ ವನವನು
ಕೇತಕೀ ವಿಪಿನವನು ಕುಸುಮಿತ
ಚೂತವನು ಖರ್ಜೂರ ಬಹಳಾಶೋಕವಿಪಿನವನು
ಆ ತಳೋದರಿಯರು ಸಹಿತ ಪರ
ಮಾತುಮನು ಹೊಕ್ಕಾಡುತಿರ್ದನು
ಕಾತ ಕದಳೀ ಪೂಗ ವನನಿಕರಂಗಳಲಿ ನಲಿದು ೧೩

ಅಂಗನೆಯರಚ್ಯುತನ ಪದಯುಗ
ಸಂಗಸುಖದಲಿ ಸೊಕ್ಕಿ ಮೈಮಱೆ
ದಂಗಜನ ಶರಹತಿಗೆ ಲಜ್ಜಾ ಭಾರವನು ಜಱಿದು
ಹೊಂಗಿದರು ರತಿಸುಖದಲಾ ಪರ
ಮಂಗೆ ಸಾರಿದ ಮುನಿವರರ ಹೃದ
ಯಂಗಳಂತಿರಲಿತರವಿಷಯ ವಿತೃಷ್ಣೆಯಲಿ ನಲಿದು ೧೪

ಆಡಿ ವನವನಗಳಲಿ ಸಲಿಲ
ಕ್ರೀಡೆಯಲಿ ಕರುಣಾಮಹೋದಧಿ
ಗಾಡಿಕಾತಿಯರೊಡನೆ ಚಲುಕಾಡುತ್ತ ಕೊಳನೊಳಗೆ
ತೀಡುವಬುಜಾಮೋದ ಪವನನು
ಮಾಡುವುಪಚಾರವನು ನಯದಲಿ
ಪಾಡುವಳಿಸಂಗೀತವನು ಕೇಳುತ್ತ ರಂಜಿಸಿದ ೧೫

ನೆರೆದು ಕಿನ್ನರ ಸಿದ್ಧ ವಿದ್ಯಾ
ಧರ ಮಹೋರಗ ಯಕ್ಷ ಗಂಧ
ರ್ವರು ಸುಮಂಗಳ ಗೀತವಾದ್ಯಸ್ತುತಿರವಂಗಳಲಿ
ಇರದೆ ಭಜಿಸುತ್ತಿರಲು ಪುಷ್ಪಕ
ಸರಿವಳೆಯ ಸಾರದಲಿ ಸನ್ನುತ
ಚರಣನಾಡುತ್ತಿರ್ದನುರು ಲೀಲಾವಿನೋದದಲಿ ೧೬

ಆ ಮಹಾರತಿಸುಖದಲಬಲಾ
ಸ್ತೋಮ ದೀಪಿತವಾದುದುದ್ಭವ
ಕಾಮುಪರವಶತೆಯಲಿ ಕಂಡುದನೆಲ್ಲ ಹರಿಯೆಂದು
ಭೂಮಿಪತಿ ಕೇಳೊಂದು ಕುರರಿಯ
ನಾ ಮಹಾತ್ಮೆಯರೀಕ್ಷಿಸುತ ವನ
ಭೂಮಿಯಲಿ ಕಾಂತೆಯರು ನುಡಿದರು ಮರುಳುಗೊಂಡಂತೆ ೧೭

ಕುರರಿ ನೀನೇಕಳುವೆ ನಿದ್ರೆಯ
ಪರಿಹರಿಸಿ ರಾತ್ರೆಯಲಿ ನಿದ್ರೆಯ
ಭರದಲಿರೆ ಜಗವೈದೆ ಜಗದೀಶ್ವರನ ವಶವಾಗಿ
ನಿರುತವೆಮ್ಮಂದದಲಿ ಮನವನು
ಹರಿಸಿದನೆ ಕಮಲಾಯತೇಕ್ಷಣ
ನುರುತರಸ್ಮಿತ ಮಧುರ ಸಲ್ಲಾಪೇಕ್ಷಣಂಗಳಲಿ ೧೮

ಅಕ್ಕಟಳುವೆಯಿದೇಕೆ ನೀನೆಲೆ
ಚಕ್ರವಾಕಿ ಮುಕುಂದನೇನೊಲಿ
ದಿಕ್ಕನೇ ನಿಜಚರಣ ನಿರ್ಮಾಲ್ಯ ಪ್ರಸಾದವನು
ಇಕ್ಕಿದೆವೆಗಳ ಕಂಗಳಲಿ ಜಲ
ವುಕ್ಕುತಿದೆ ಹರಿಚಿಂತೆಯಲಿ ಮನ
ಸಿಕ್ಕಿದುದೆ ತಮ್ಮಂತೆ ಧರಿಸಲು ಬಯಸಿ ಪದರಜವ ೧೯

ರೋಗವೇನೈ ಬಸುಱೊಳಗೆ ದಿಟ
ಸಾಗರನೆ ನೀನೇಕೆ ನರಳುವೆ
ಜಾಗರವಿದೇಕಕಟ ನಿನ್ನೊಳಗುಳ್ಳವಿಭವವನು
ಭೋಗಸಾಧನಗಳನು ಕೊಂಡನು
ಯೋಗನಿಧಿ ಹಾಯೆನುತ ಮನದು
ದ್ವೇಗದಲಿ ನೀನಳುವೆಯೋ ಮೇಣೆಂದರಬಲೆಯರು ೨೦

ಉಡುಪತಿಯೆ ನಿನಗಾಯ್ತುದೇತಕೆ
ಬಡತನವು ಯಕ್ಷ್ಮಾತ್ಮಹ್ವಯಾಮಯ
ವಿಡಿದುದೈ ನಿನ್ನುವನು ಮೇಣೆಮ್ಮಾ ನಿಜೇಶ್ವರನ
ನುಡಿಯ ಸವಿಯನೆ ಸತ್ಯವೆಂದೇ
ನೊಡರಿಸಿದೆಯೋ ಸಖ್ಯವನು ಧೃತಿ
ಗೆಡಿಸುವನು ಕೆಳೆಗೊಂಡಡೀ ಪರಿಯೆಂದರಬಲೆಯರು ೨೧

ಎಲೆಲೆ ಮಂದಾನಿಲನೆ ನೀನೇ
ಕುಲುಹುಗೊಂಬೆ ವೃಥಾ ಮುಕುಂದನ
ಚಲುವ ಕಡೆಗಣ್ಣಲಗಿನಲಿ ಕಡಿವೊಡೆದ ತಮ್ಮೊಡನೆ
ಕೆಳೆಯನಲ್ಲಾ ಕೃಷ್ಣನಂಘ್ರಿಗೆ
ಜಲದ ತದ್ವರ್ಣವನು ಧರಿಸಿದೆ
ತಿಳಿಯಲಾತನ ಸಂಗಸೌಖ್ಯವೆ ಸಾಕು ಬದುಕುವಡೆ ೨೨

ಕಂಡೆಯೋ ನೀನೆಲೆ ನವಿಲೆ ನೀ
ಗೋಂಡ ಮುಗಿಲಂದದ ಮುಕುಂದನ
ಖಂಡಸುಖಮಯ ಮೂರ್ತಿಯನು ನಿನ್ನೆಸೆವ ತಾಂಡವವ
ಕಂಡು ಮನ್ನಿಸಿದನೆ ಮನೋಜ್ಞಾ
ಖಂಡ ಕಾರುಣ್ಯೇಕ್ಷಣದಲು
ದ್ದಂಡಮಹಿಮಂಗಾರು ಮರುಳಾಗದವರವನಿಯಲಿ ೨೩

ಹೇಳು ನೀನೆಲೆ ಕುರರಿ ಮತವನು
ಪಾಲಿಸುವೆನಳಲದಿರು ಮಿಗೆ ಸಿರಿ
ಲೋಲನಂಘ್ರಿಸರೋಜವನು ನೀ ಧರಿಸಬೇಕೆಂದು
ಮೌಳಿಯಲಿ ತಮ್ಮಂತೆ ತಪವನು
ಹೇಳು ನೀನಾವುದನು ಮಾಡಿದೆ
ಕಾಲದಲಿ ಕೃಷ್ಣಾಂಘ್ರಿವಲ್ಲಭೆ ತುಳಸಿ ಮನವೊಲಿದು ೨೪

ಚಿಂತಿಸುವೆ ನೀನೇನನಮಳ
ಸ್ವಾಂತದಲಿ ಭೂಲಲನೆ ದಿಟ ತ
ಮ್ಮಂತೆ ಚರಿಸದೆ ಚಾರುತರ ಕೃಷ್ಣಾಂಘ್ರಿಪಂಕಜವ
ಚಿಂತಿಸುವೆಯೋ ಧರಿಸಲೆಂದು ಮ
ಹಾಂತರಂತೆಲೆ ನದಿಗಳಿರ ನೀ
ವೆಂತು ಕೃಶಗಾತ್ರಿಯರು ನೊಂದಿರೆ ಕೃಷ್ಣವಿರಹದಲಿ ೨೫

ಹಾಲನೆಱೆವೆವು ಹಂಸೆ ಕುಳ್ಳಿರು
ಹೇಳು ನೀನೆಲೆ ಸಖಿಯೆ ಲಕ್ಷ್ಮೀ
ಲೋಲನಮಳಚರಿತ್ರ ಗುಣಪೀಯೂಷ ಕಥನವನು
ಆಳಿಕಾಱನು ಸುಖದಲಿದ್ದನೆ
ಹೇಳಿಕೆಗೆ ದಿಟವುಂಟೆ ಲಕ್ಷ್ಮೀ
ಲೋಲಲೋಚನೆಯಲ್ಲದುಳಿದವರುಂಟೆ ನಂಬುವರು ೨೬

ಭ್ರಮರೆ ಹೇಳೆವಗೇನನಱುಹುವೆ
ಕಮಲನಾಭನ ದೂತನಹೆ ಸಂ
ಗಮಕೆ ನವವಧುಗಳನು ಕರೆಯಲು ಕಳುಹಿದನೆ ನಿನ್ನ
ಕ್ರಮದಲಿದೆ ಕಾಂತೆಯರ ಶಿಹತ
ಕಮಲಮುಖಿಯನು ಜೇಹವಳನೊ
ಯ್ದಮಳಗುಣಸಿಧಿಗೀವುದೆಂದರು ಕೃಷ್ಣಕಾಂತೆಯರು ೨೭

ಮುರಮಥನನಲಿ ತನಗೆ ಸಖ್ಯವ
ವಿರಚಿಸೈ ನಿಜಚರಣಕಮಲ
ಸ್ಪರುಶನವನೀಯನು ಸಮಾಹಿತ ವೈಮನಸ್ಯದಲಿ
ಬೆರಸಿ ಬದುಕುವ ಭಾಗ್ಯವುಳ್ಳಡೆ
ಸುರಪತಿಯ ಸುಖವೇಕೆ ಹರಹರ
ಸಿರಿಗೆ ಸಹಿತಭ್ಯರ್ಥನೀಯುವದೆಂದಳಬುಜಾಕ್ಷಿ ೨೮

ತಂಗಿ ತನ್ನಾಳುವನ ನಾಮ ಪ
ಥಂಗಳನು ಕೀರ್ತಿಸುವ ಕೋಗಿಲೆ
ಮಂಗಳವಲಾ ಜಗಕೆ ಮೃತಸಂಜೀವನವು ದಿಟಕೆ
ಹಿಂಗದಿರು ಹೇಳಿಷ್ಟವನು ಮಾ
ಳ್ಪಂಗವಾವುದು ನಿನಗೆ ನೋಳ್ಪೆ ಕು
ರಂಗಿ ಯಾರನು ಹೇಳು ಹರಿ ಗೋಚರಿಸಿದನೆ ನಿನಗೆ ೨೯

ಎಱೆವೆ ನಾನಮೃತವನು ಹೇಳೆ
ನ್ನೆಱೆಯನಮೃತ ಕಥಾಪ್ರಸಂಗವ
ನೊಱಲದಿರು ನೀ ಬಱಿದೆ ಕಾಪುರುಷಪ್ರಸಂಗವನು
ಅರಗಿಳಿಯೆ ಚಿರಕಾಲ ವಿರಹ
ಜ್ವರ ಮಹಾಸಂತಾಪತಪ್ತೆಗೆ
ಕರುಣಿಸೆಂದಳು ಕಾಂತೆಯೊಬ್ಬಳು ಕೈಗಳನು ಮುಗಿದು ೩೦

ಆಮಯವದೇನೊಡಲೊಳಗೆ ಹೇ
ಳೈ ಮಹಾರ್ಣವ ಮಾಣದೊಱಲುವೆ
ಕಾಮಬಾಣವಿಶೀರ್ಣ ದೇಹವ್ಯಥೆಯೆ ನಿನಗಿಂದು
ಶ್ರೀಮನೋರಮನೈದನೆನ್ನಯ
ಸೋಮಸನ್ನಿಭ ಶಂಖವನು ನಿ
ಸ್ಸೀಮ ನಿಜಕಾಂತಿಯನೆನುತ್ತವೆಮಱುಗಿ ಮನದೊಳಗೆ ೩೧

ಹಗೆಯೆ ನೀನೆಲೆ ಮಂದಮಾರುತ
ಬಗೆಗೆ ಬಹಳ ವ್ಯಥೆಯ ಮಾಡುವೆ
ಮುಗಮುಗಿಸುವಂಗದಲಿ ಮೋಣೀ ದೇವಕೀಸುತನ
ಸೊಗಯಿಸುವ ದಿವ್ಯಾಂಘ್ರಿಯನು ಮಱೆ
ವೊಗುವ ಮನದರ್ಥಿಯಲಿ ಗುಹೆಯನು
ಹೊಗುವೆಯೋ ತಮ್ಮಂತೆ ಯೆಂದರು ಕಮಲವದನೆಯರು ೩೨

ಎಲೆ ರವಿಯೆ ನೀನೇಕೆ ತೊಳಲುವೆ
ಸಲೆ ಸಮಸ್ತ ಜಗದ್ಧಿತಾರ್ಥದ
ಬಳಕೆಯೋ ತತ್ತತ್ಕ್ರಿಯಾ ವಿಸ್ತಾರಚೇಷ್ಟಿತವೊ
ಬಲವದೀಶ್ವರ ತಂತ್ರವೋ ನಿಜ
ಚಲನವಿದು ತಮ್ಮಂತೆ ಕೃಷ್ಣನ
ಚಲುವ ಪದಕಮಲವನು ನೀನಱುವೆಯೊ ರಮೆಯಂತೆ ೩೩

ಈಪರಿಯ ಭಾವದಲಿ ವನಿತೆಯ
ರಾ ಪರಮಪೂರುಷನ ಲೀಲಾ
ಲಾಪಮಧುರಸ್ಮಿತ ಕಟಾಕ್ಷ ನಿರೀಕ್ಷಣಂಗಳಲಿ
ಧೂಪಿತಸ್ಮರವಶತೆಯಲಿ ತ
ದ್ರೂಪವನು ನೆನೆವುತ್ತ ಭವಭಯ
ತಾಪವನು ಕಳಿದೈದಿದರು ತಾದಾತ್ಮ್ಯಸಂಪದವ ೩೪

ಕೇಳಿದಬಲೆಯುರಾವನೊಬ್ಬನ
ಲೀಲೆಯನು ಬಿಡಲಱಿಯರೆನಲಾ
ನೀಲ ಮೇಘಶ್ಯಾಮ ಕೋಮಲದಿವ್ಯಮೂರ್ತಿಯನು
ಶ್ರೀಲಲಾಮನನಕ್ಷಿಗಳಲಿರ
ದಾಲಿಸುವ ಪೂರ್ವಕೃತ ಸುಕೃತವಿ
ಶಾಲೆಯರು ತಾವೆಂತು ಮಱೆವೆವು ಕೃಷ್ಣನಂಘ್ರಿಗಳ ೩೫

ಕಾಣರಾವನ ಚರಣಕಮಲದ
ರೇಣುಗಳನಜ ಮುಖ್ಯರಾ ಗೀ
ರ್ವಾಣಪತಿಗಳು ಯೋಗನಿಷ್ಠರು ತಾಪಸೋತ್ತಮರು
ಕ್ಷೋಣಿಯಲಿ ಮುನ್ನಾವ ಸುಕೃತ
ಶ್ರೇಣಿಯೋ ಜಗದೇಕದೈವದ
ರಾಣಿಯರು ಮಾಡಿದುದು ರಾಜೋತ್ತಮನೆ ಕೇಳೆಂದ ೩೬

ನರರೊಳಗೆ ನರರಂತೆ ಸಲೆ ಸಂ
ಚರಿಸಿ ನೆಱೆವನು ಲೋಕಸಂಗ್ರಹ
ದುರುತುರಾಮಳ ಧರ್ಮತತ್ವ ರಹಸ್ಯಸಂಸ್ಥಿತಿಯ
ಪರಮಪುರುಷೋತ್ತಮನು ಕಲಿಮಲ
ಹರ ಪವಿತ್ರ ಚರಿತ್ರನೆಸೆದನು
ಧರೆಗೆ ಪಾವನವೆನಲು ನಿತ್ಯಾತುಮನು ರಂಜಿಸಿದ ೩೭

ನೂರೆರಡನೆಯ ಸಂಧಿ ಮುಗಿಯಿತು.

# ನೂರಮೂರನೆಯ ಸಂಧಿ

ಸಕಲಸುರನರ ಲೋಕಪಾಲ
ಪ್ರಕರ ಪರಮಾನಂದ ಸಂದಾ
ಯಕನು ತಾ ದ್ವಾರಕಿಯಲೆಸೆದನು ದಾನವಧ್ವಂಸಿ

ಅರಸ ಕೇಳಾದ್ವಾರಕಾಪುರ
ವರದಲಿಂತಸುರಾರಿ ರಾಮರು
ಪರಮ ಸಂತೋಷದಲಿ ರಾಜ್ಯವ ಪಾಲಿಸುತ್ತಿರಲು
ಪರಮ ಋಷಿಗಳು ತಾಪಸರು ಮುನಿ
ವರರು ಹರಿಪದ ಕಮಲಯುಗಳದ
ದರುಶನಕೆ ಬರುತಿರ್ದರಖಿಳದಿಗಂತ ಸಂಗತಿಯ ೧

ರಾಮಗಿರಿವರದಿಂದ ನಿರುಪಮ
ನೈಮಿಷಾಶ್ರಮದಿಂದ ಸಾಲ
ಗ್ರಾಮವೆಂಬಾ ಕ್ಷೇತ್ರದಿಂದಾ ವಾರಣಸಿಯಿಂದ
ಗೋಮತೀತಟನೀ ಪ್ರಯಾಗ ಸ
ನಾಮತೀರ್ಥನಿವಾಸದಿಂದ-ಮ
ಹಾಮುನಿಗಳೈತರುತಲಿರ್ದರು ದ್ವಾರಕಾಪುರಕೆ ೨

ಸುರನದೀತಟದಿಂದ ಗೋದಾ
ವರಿಯ ಸನ್ನಿಧಿಯಿಂದ ನರ್ಮದೆ
ಯುರು ನಿವಾಸಿಕದಿಂದ ಪಿಂಡಾರಕದ ದೆಸೆಯಿಂದ
ಸುರಗಿರಿಯ ಗೋಕರ್ಣ ಬದರೀ
ಪರಮ ಪುಣ್ಯಕ್ಷೇತ್ರದತ್ತಣ
ಪರಮಋಷಿಗಳು ಬಂದರಾ ದ್ವಾರಾವತೀ ಪುರಕೆ ೩

ವರಕುರುಕ್ಷೇತ್ರಪ್ರಭಾಸಾ
ಸ್ಫುರಿತ ಸಹ್ಯಾಚಲದ ಶೂರ್ಪಾ
ಕರದ ಭೃಗುಸುಕ್ಷೇತ್ರ ಪುಷ್ಕರದಖಿಳ ಮುನಿವರರು
ಪರಮಸೇತು ಹಿಮಾದ್ರಿ ಮೊದಲಾ
ದುರು ನದೀ ಗಿರಿ ಕಾನನದ ಮಂ
ದಿರದ ಮುನಿಜನ ಬರುತಲಿರ್ದುದು ದ್ವಾರಕಾಪುರಕೆ ೪

ಕೆಲರು ಯಮಗುಣಸಂಯುತರು ಕೆಲ
ಕೆಲರು ನಿಯಮವ್ರತಯುತರು ಕೆಲ
ಕೆಲರು ಪ್ರಾಣಾಯಾಮತತ್ಪರರಾಸನಸ್ಥಿತರು
ಕೆಲರು ಪ್ರತ್ಯಾಹಾರಧಾರಣೆ
ಗಳಲಿ ಕೆಲರು ಧ್ಯಾನ ಮೌನಂ
ಗಳಲಿ ನಿರತರು ಬಂದರಾ ದ್ವಾರಕಿಗೆ ಮುನಿವರರು ೫

ಮೌನಪರಿನಿಷ್ಠರು ತ್ರಿಕಾಲ
ಸ್ನಾನತತ್ಪರರಾತ್ಮ ತತ್ವ
ಜ್ಞಾನಮಾರ್ಗ ವಿಶಿಷ್ಟರಬ್ಭಕ್ಷ ವ್ರತಸ್ಥಿತರು
ದೀನದೇಹರು ಜಪತಪಾನು
ಷ್ಠಾನನಿರತರು ಬರುತಲಿರ್ದರು
ದಾನವಾಂತಕನಂಘ್ರಿ ಸೇವಾಪರಮಹೋತ್ಸವಕೆ ೬

ಸಲಿಲ ಮಾತ್ರಾಹಾರನಿಷ್ಠರು
ಕೆಲರು ಪವನಾಹಾರ ನಿಷ್ಠರು
ಕೆಲರು ವಿಗತಾಹಾರರುಗ್ರತಪಸ್ಸಮಾಸ್ಥಿತರು
ಕೆಲರು ಜಟಿಲರು ಮುಂಡಿತರು ವ
ಲ್ಕಲವಿನೀತರು ವಿವಿಧ ಧರ್ಮಾ
ವಲಿತಗಾತ್ರರು ಬರುತಲಿರ್ದರು ದ್ವಾರಕಾಪುರಕೆ ೭

ಶೈವ ಶಾಕ್ತೇಯಾರುಣವ್ರತ
ಭಾವಿತಾತ್ಮರು ವಿವಿಧ ಮಾಂತ್ರಿಕ
ಕೋವಿದರು ವೇದಾಂತಪಾರಾಯಣರು ಯಾಜ್ಞಿಕರು
ಭೂವಿಬುಧವರರಖಿಳಲೋಕನಿ
ಸೇವಿತರು ನಿತ್ಯಾರ್ಚನವ್ರತ
ಜೀವಿಗಳು ತಾವಾಗಿ ಬರುತಿರ್ದರು ಕುಶಸ್ಥಲಿಗೆ ೮

ವಿಕೃತ ವಾಮನ ಪಂಗು ಬಧಿರಾಂ
ಧಕರು ನಾನಾವರ್ಣಿಗಳು ಯಾ
ಚಕರು ಕೃತಕರ್ಮಕ್ಷಯಾಕಾಂಕ್ಷಿಗಳು ನಿರ್ಧನರು
ಸಕೃತು ನೆನೆದಡಘೌಘಕುಲನಾ
ಶಕನನೀಕ್ಷಿಸಿ ಧನ್ಯರಹೆವೆಂ
ದಕಟ ಬರುತಿರ್ದುದು ದಿಗಂತದ ಜನ ಕುಶಸ್ಥಲಿಗೆ ೯

ಧರೆಯ ರಾಜಕುಮಾರವರ್ಗದ
ನೆರವಿಗಳು ಸುರನರ ಮುನೀಂದ್ರರ
ನೆರವಿಗಳು ಮಾಗಧರ ವೀರರ ಸೂತವಂದಿಗಳ
ನೆರವಿಗಳ ಗಂಧರ್ವ ಕಿನ್ನರ
ವರ ಮಹೋರಗ ಯಕ್ಷ ರಕ್ಷೋ
ವರರ ನೆರವಿಗಳೆಸೆದವೊತ್ತೊತ್ತೆನಿಸಿ ಪುರದೊಳಗೆ ೧೦

ಇರುಳು ಹಗಲೆಡವಱಿಯದಿಕ್ಕವು
ಪುರದ ಬಾಗಿಲುಗಳು ಗತಾಗತ
ಭರಿತ ಜನನಿಕರದಲಿ ಸಂಕುಲವಾಗಲನವರತ
ಕರಣ ವಿಷಯ ಕುಟುಂಬ ಚಿಂತಾ
ಪರರಿಗೀ ನರಜನ್ಮವಫಲದ
ಲರುಳುವಂತೆ ನಿರರ್ಥವಾದುದು ಮಣಿಕವಾಟಚಯ ೧೧

ವರತಪೋವ್ರತಕರುಷಿತಾತ್ಮರು
ಬರಡುಗಾತ್ರರು ಪಡೆದು ಕಾಮಿತ
ವರಗಳನು ಚರ್ಮಾಸ್ಥಿಮಾತ್ರಶರೀರಜೀವಿಗಳು
ಮುರಹರನ ಸುಸ್ಮಿತ ಕಟಾಕ್ಷ
ಸ್ಫುರಿತ ಕರುಣೇಕ್ಷಣದಲತಿಪೀ
ವರ ಶರೀರರು ತರುಣರೆನಿಸುತ್ತಿರ್ದರನವರತ ೧೨

ಅವಿರತೋತ್ಸವ ಪುಣ್ಯಮಂಗಳ
ರವದ ಗಾಯಕ ಪಾಠಕರ ಸಂ
ಸ್ತವದ ತಾಂಡವ ಗೀತವಾದ್ಯ ಮೃದಂಗ ನಿಸ್ವನದ
ಅವನಿಸುರ ಸಂತತಿಗಳಾಶೀ
ರ್ವಚನ ವೈವಾಹಿಕಾಧ್ವರ
ನಿವಹದಲಿ ನಿತ್ಯೋತ್ಸವಾನಂದೈಕರಸವಾಯ್ತು ೧೩

ಮೂರ್ತಿಗೊಂಡೋಲಗಿಸುವುವು ತ
ತ್ಕೀರ್ತಿ ಸನ್ಮತಿ ತುಷ್ಟಿ ಪುಷ್ಟಿ ವಿ
ಮುಕ್ತಿ ವಿರಕ್ತಿ ವಿದ್ಯಾವಿದ್ಯೆ ಮೊದಲಾದ
ಶಕ್ತಿಗಳು ಶ್ರುತಿಗಳು ಮಹೋಪನಿ
ಷತ್ತುಗಳು ಮಂತ್ರಂಗಳಾ ಪುರು
ಷೋತ್ತಮನ ಪದಯುಗವನೇನೆಂಬೆನು ಮಹಾದ್ಭುತವ ೧೪

ಮತ್ತೆ ಮುರಹರನರಸಿಯರ ತ
ತ್ಪುತ್ರ ಪೌತ್ರರ ಸಂಖ್ಯೆಯನು ರಾ
ಜೋತ್ತಮನೆ ನಿರ್ಣಯಿಸಬಲ್ಲವರಾರು ತ್ರಿಜಗದಲಿ
ಪುತ್ರರಿಂಗಾಚಾರ್ಯರನು ನೃಪ
ಚಿತ್ತವಿಸು ಮೂಕೋಟಿ ಮೇಲೆಂ
ಬತ್ತು ನೂಱೈನೂಱು ಸಂಖ್ಯೆಯ ಕೇಳ್ದೆ ತಾನೆಂದ ೧೫

ನೂಱು ಮಿಗಿಲೆಂದೆನಿಸುವಾ ಹದಿ
ನಾಱುಸಾವಿರ ಸತಿಯರಿಂಗೆ ಕು
ಮಾರರೊಬ್ಬೊಬ್ಬಱಿಂಗೆ ದಶದಶ ಸಂಖ್ಯೆಯಲಿ ಮೆಱೆಯೆ
ವೀರರಷ್ಟಾದಶಸಮೇತ ಮ
ಹಾರಥರು ವಿಖ್ಯಾತರಾದರು
ಬೇಱೆ ಬೇಱವರವರ ಹೆಸರನು ಬಣ್ಣಿಸುವೆನೆಂದ ೧೬

ವೀರನಾ ಪ್ರದ್ಯುಮ್ನ ಸಾಂಬನು
ಚಾರುದೇವನು ದೀಪ್ತಿಮಂತನು
ಭೂರಿ ವಿಕ್ರಮಭಾನು ಸುಬೃಹದ್ಭಾನು ವರವೃಕರು
ಧೀರನಾ ಪುಷ್ಕರನು ಶ್ರುತದೇ
ವಾರುಣ ಸನಂದನ ವಿಡೂರಮ
ಹಾರಥರು ವಿಖ್ಯಾತರದಱೊಳು ಭೂಪ ಕೇಳೆಂದ ೧೭

ಚಿತ್ರ ಬರುಹಿ ಸುವೇದವಂತನು
ಸತ್ಯಸಂಜ್ಞನು ಕಲಿಸನಾಮನು
ವಿತ್ರನೆಂಬನು ವೀರನಾ ನ್ಯಗ್ರೋಧ ಸಂಜ್ಞಿಕನು
ಮತ್ತೆ ಕೇಳತಿವಕ್ರೆಯಲಿ ಸಂ
ವೃತ್ತನಾದನಲಾ ಕುಮಾರಕ
ನುತ್ತಮ ಶ್ಲೋಕಂಗುಪಶ್ಲೋಕಾಖ್ಯನವನೆಂದ ೧೮

ಆದನಾತನು ಶಿಷ್ಯನಧಿಕ ದ
ಯೋದಧಿಗೆ ನಾರದಗೆ ಬಳಿಕಾ
ವೇದಸಮ್ಮತನೆನಿಪ ಸಾತ್ವತ ತಂತ್ರವನು ಮುನಿಪ
ಸಾದರದಲಱುಹಿದನು ವೈಷ್ಣವ
ನಾದನವನಂತದುವೆ ಸ್ತ್ರೀಶೂ
ದ್ರಾದಿಚಿತ್ತವಿಶುದ್ಧಿ ಮುಕ್ತಿಗೆ ಮಾರ್ಗವಾಯ್ತೆಂದ ೧೯

ಎಲ್ಲರಿಂದತ್ಯಧಿಕನಪ್ರತಿ
ಮಲ್ಲನಾ ಪ್ರದ್ಯುಮ್ನನಾ ಶ್ರೀ
ವಲ್ಲಭನವೋಲಖಿಳಯಾದವವೀರಮುಖ್ಯರಿಗೆ
ಬಲ್ಲಿದನು ಜನಿಸಿದನು ಬಳಿಕವ
ನಲ್ಲಿ ಮಹದನಿರುದ್ಧನಾತನ
ವಲ್ಲಭೆಗೆ ವಜ್ರಾಖ್ಯನುದಿಸಿದನರಸ ಕೇಳೆಂದ ೨೦

ದೇಹಸಂಭವನಾದನಾ ಪ್ರತಿ
ಬಾಹುಕನು ವಜ್ರಂಗೆ ಬಳಿಕನು
ಬಾಹುಸಂಜ್ಞಿಕನಾದನಾ ಪ್ರತಿಬಾಹುಭೂಪತಿಗೆ
ರೂಹು ದೋಱಿದನುಗ್ರಸೇನನು
ಸಾಹಸಿಕ ಶತಸೇನನಾತನ
ಮೋಹದರಸಿಯಲಾದನಾತ್ಮಜನರಸ ಕೇಳೆಂದ ೨೧

ಇಂತು ಯಾದವರಾಯ ಲಕ್ಷ್ಮೀ
ಕಾಂತ ಮುಖ್ಯಾನಂತವಹ
ಸಂತತಿಯ ಸೌಖ್ಯವನು ಸಂಕ್ಷೇಪದಲಿ ನಾನಿದನು
ಸ್ವಾಂತಶುದ್ಧಿಪ್ರದವನೆಲೆ ಭೂ
ಕಾಂತ ಹೇಳಿದೆನಲ್ಲದಾರಿದ
ಱಂತವನು ಕಾಣಿಸುವ ಕವಿವರರೆಂದನಾ ಮುನಿಪ ೨೨

ಯಾದವರು ನೂಱೊಂದು ಕುಲದವ
ರಾದರತಿ ಸಂಪನ್ನರಾ ಕಮ
ಲೋದರನ ಕಾರುಣ್ಯವರಸಿತಾನನಾಬ್ಜವನು
ಸ್ವಾದಿಸುತ ಕಂಗಳಲಿ ಸಲೆ ತ
ತ್ಪಾದಪರಿಚರಿಯೆಯಲಿ ಸಹಶಯ
ನಾದಿಯಲಿ ಸಂಬಂಧದಲಿ ನರನಾಥ ಕೇಳೆಂದ ೨೩

ಲೋಕಸಂಗ್ರಹಬುದ್ಧಿಯಲಿ ಜಗ
ದೇಕನಾಥನು ಯಜಿಸಿದನು ಬಳಿ
ಕಾ ಕುರುಕ್ಷೇತ್ರದಲಿ ಹನ್ನೆರಡಬ್ದ ಪರಿಯಂತ
ಆಕೃತಿಯಲಾ ಚರಿತದಲಿ ಸು
ಶ್ಲೋಕಗುಣದಲಿ ಸಕಲಜೀವಾ
ನೀಕಸೌಖ್ಯೋದಯವನೀವುತ್ತಿರ್ದನನವರತ ೨೪

ಅರಸ ಕೇಳ್ಳೈ ಯೋಗಮಾಯೇ
ಶ್ವರನು ಮುನಿಹೃತ್ಕಮಲಚಿಂತಿತ
ಚರಣಕಮಲಪರಾಗನಹ ಪರಮಾತ್ಮನಿಂತೊಲಿದು
ಧರಣಿಪಾವನಮೂರ್ತಿ ಕಲಿಮಲ
ಹರಣಸದಮಳಕೀರ್ತಿ ನಿಜಪದ
ಶರಣಜನಸಂಸಾರಿಕನು ರಂಜಿಸಿದನವನಿಯಲಿ ೨೫

ಮೃತ್ಯುಮುಖಪತಿತರಿಗೆ ಭವಭಯ
ತಪ್ತರಿಗೆ ಮೋಹಾಂಧಕಾರನಿ
ವೃತ್ತದೃಷ್ಟಿಗಳಿಂಗೆ ದುಃಖನಿಮಗ್ನಮತಿಗಳಿಗೆ
ಮರ್ತ್ಯರಿಗೆ ಮನವೊಲಿದು ಕರುಣಾ
ಮೂರ್ತಿ ಸಕಲಾನರ್ಥ ದುಃಖನಿ
ವೃತ್ತಿಯನು ಮಾಡುತ್ತಲಿದ್ದನು ನಿಜಚರಿತ್ರದಲಿ ೨೬

ಜನಪ ಕೇಳಖಿಳಾಘಹರಮೆಂ
ದೆನಿಸಿತಿದೆಲಾ ನಾಮಸಂಕೀ
ರ್ತನ ಕಥಾಶ್ರವಣಾನುಚಿಂತನೆಗಳು ಜಗತ್ರಯಕೆ
ತನುವಿಡಿದು ಲೀಲೆಯಲಿ ಕರುಣಾ
ವನಧಿ ವರ್ತಿಸಲಿಲ್ಲದಿರ್ದಡೆ
ಜನಿಸಲಱಿವುದೆ ಸುಗತಿ ಜೀವರಿಗೆಂದನಾ ಮುನಿಪ ೨೭

ಆರಱಿವರಾತನ ವಚೋವಿ
ಸ್ತಾರವೆನಿಪೀ ಶ್ರುತಿಶಿರಂಗಳು
ಸಾರದಿರ್ದಡೆ ಸಕಲಕರಣಾತೀತ ಮೂರ್ತಿಯನು
ಕಾರಣಿಕನವತರಿಸಿ ತತ್ವ ವಿ
ಚಾರಪಥವನು ತೋಱುವನು ಸಂ
ಸಾರಿಗಳಿಲ್ಲದಡೆ ಗತಿ ಬೇಱಾವುದುಂಟೆಂದ ೨೮

ಆವನಂಘ್ರಿ ಸರೋಜವಾವ ನ
ಖಾವನೇಜದ ವಾರಿ ಜಗದಲಿ
ಪಾವನವಿದೆಂದೆನಿಸಿತ್ತೈ ಗಂಗಾಭಿಧಾನದಲಿ
ಪಾವನಕೆ ಪಾವನನು ಜೀವರ
ಜೀವನಕೆ ಜೀವನನು ದೇವರ
ದೇವ ದೇವ ಮುಕುಂದನಲ್ಲದೆ ಬೇಱದಾರೆಂದ ೨೯

ಆವ ನೆವದಿಂದಾದಡೊಂದಿದ
ಜೀವರಿಗೆ ನಿಜಪದವನೀವೆನು
ಕಾವೆನೆನ್ನನು ನೆನೆವ ಸದುಭಕ್ತರನು ತಾನೆಂದ
ಭೂವರನೆ ಜನನಾದಿ ಹೇತು ಗು
ಣಾವಲಂಬನವಿಲ್ಲದೀ ನಾ
ನಾವತಾರಂಗಳನು ಮಾಳ್ಪನು ಲೀಲೆಯಿಂದೆಂದ ೩೦

ಜಱಿವಡೀ ಮೃತ್ಯುವಿನ ಭಯವನು
ಹಱಿವಡೀ ಭವಪಾಶವನು ಭೂ
ವರನೆ ಮಱಿವೊಗುವುದು ಮನೋಭಾವದಲಿ ಮುರಹರನ
ಚರಣಕಮಲವನನ್ಯಥಾ ಗತಿ
ದೊರಕಲಱಿಯದು ವಿವಿಧ ಯತ್ನಾಂ
ತರ ಸಹಸ್ರದಲೆಂದು ಕರುಣಿಸಿದನು ಮಹೀಪತಿಗೆ ೩೧

ಕನಸಿನೆಲ್ಲಾ ತೋರ್ಕೆಗಳಿಗೀ
ನೆನಸು ನಿಜವೆಂತಂತೆ ಪರಮಾ
ತ್ಮನೆ ನಿಜಾತ್ಮನಲಾ ಚರಾಚರ ವಿಶ್ವಚೇತನಕೆ
ಜನಪ ಕೇಳಿದನಱಿತು ಕೃಷ್ಣನ
ವಿನುತ ಪಾವನಪಾದಕಮಲವ
ಮನದೊಳಗೆ ಮಱಿವೊಕ್ಕು ತನ್ಮಯನಾಗು ನೀನೆಂದ ೩೨

ಆವನಿದನೋದುವನು ಕೇಳುವ
ನಾವನೀ ಮುರಹರನ ಮಂಗಳ
ಪಾವನಾಮಳಚರಿತವನು ಕಾರುಣ್ಯಭರಿತವನು
ದೇವಸನ್ನಿಭ ಶುಕಮುಖ ಪ್ರ
ಸ್ತಾವಿತವನವರಿಬ್ಬರನು ನೆಱಿ
ಕಾವನಾ ಕಾರುಣ್ಯನಿಧಿ ನಿಜಪದವನೊಲಿದಿತ್ತು ೩೩

ಇದನಖಿಳಯೋಗೀಂದ್ರ ಪದಯುಗ
ಪದುಮ ಚರಿತ ಧ್ಯಾನ ನಿರ್ಮಳ
ಹೃದಯನಹ ಯೋಗೀಂದ್ರನಖಿಳೋದಿತ ಸದಾನಂದ
ಮುದದಲಭಿವರ್ಣಿಸಿದನಱಿವಂ
ದದಲಿ ಗುಣದೋಷವನು ನೋಡದೆ
ವಿದಿತ ತಿದ್ದುವುದೀಕೃತಿಯ ವಿಸ್ಮೃತ ಪದಾಕೃತಿಯ ೩೪

ಕರ್ತೃವಿದಕೆ ಹರೀತಕೀ ಪುರ
ಭರ್ತೃ ಗೋಪೀನಾಥನಾಜ್ಞಾ
ಕರ್ತೃ ಲೇಖಕ ನಾನು ಕೃತಿಗಿಂತಿದೆನೆ ನಿಧಾನಿಸಲು
ವಕ್ತೃವಿನ ಗುಣದೋಷ ಲೇಖನ
ಕರ್ತೃವಿಂಗೆತ್ತಣದು ವಚನ ನಿ
ಯೋಕ್ತೃ ನಿತ್ಯಾತ್ಮಕನೆ ರಕ್ಷಿಸುಗಖಿಳಸಜ್ಜನರ ೩೫

ನೂರಮೂರನೆಯ ಸಂಧಿ ಮುಗಿಯಿತು.

ದಶಮಸ್ಕಂಧ ಮುಗಿಯಿತು.

---

# ಅರ್ಥಕೋಶ

(ಮೊದಲನೆಯದು ಸಂಧಿ ಸಂಖ್ಯೆ ; ಎರಡನೆಯದು ಪದ್ಯ ಸಂಖ್ಯೆ)

## ಅ

ಅಕ್ಕಜ ೧೦-೪೦, ೧೨-೫,೭೦-೯ ಆಶ್ಚರ್ಯ

ಅಕ್ಕಱಿತು ೩೫-೪೩,೮.೩೧, ೧೪-೫೩ ಪ್ರೀತಿಸಿ

ಅಕ್ಕಾಡು ೯-೨೨ ಚೆಲ್ಲಿಹೋಗು

ಅಕ್ಕಾಡು ೫೩-೨೫ ಹಾಳಾಗು

ಅಕ್ಕುವುದೆ ೨೨-೪೦ ದಕ್ಕುತ್ತದೆಯೆ ?

ಅಕ್ಕುಳಿಸಿಕೊ ೩೧-೧೫ ನುಂಗಿಕೊ, ತಡೆದುಕೊ

ಅಕ್ಕುಳಿಸು ೩-೪೬ ನಾಶಪಡಿಸು

೭೬-೨೭ ಅಡಗಿಹೋಗು

೧೨-೩೩ ಸಂಕುಚಿತವಾಗು

ಅಗಡಿಸು ೬೧-೧೭ ರಂಪಮಾಡು (ಅಗಡು)

ಅಗಧರ ೨೭-೩೦, ೫೭-೪೨ ಬೆಟ್ಟಹೊತ್ತವನು, ಕೃಷ್ಣ

ಅಗಿದು ೪೯-೨೧ ಕಚ್ಚಿ

ಅಗಿಲು ೬-೬ ಪರಿಮಳದ್ರವ್ಯ

ಅಗಿವಟ್ಟೆ ೮೩-೪೧ ನಡುಗುವ ದೇಹ

ಅಗ್ಗ ೪೩-೧೩, ೩-೫೦ ಶ್ರೇಷ್ಠ

ಅಗ್ಗಳಿಕೆ ೪೯-೪೦ ಬಿರುದು, ಹೆಚ್ಚಳ

ಅಗ್ಗಳೆಯ ೫೦-೧೯ ೩೦-೧೩ ಶ್ರೇಷ್ಠ, ಹಿರಿಯ

ಅಗ್ರಣ್ಯ ೯-೨೧ ಶ್ರೇಷ್ಠತೆ, ಹಿರಿಮೆ

ಅಘ ೬೧-೪೫ ಪಾಪ

ಅಘವೃತ್ತ ೨೩-೨೫ ಪಾಪಚರಿತ

ಅಘಹರ ೨೮-೨೧ ಪಾಪಕಳೆಯುವ

ಅಘಾತ್ಮ ೧೪-೧೯ ಪಾಪಿ

ಅಘಾಯು ೩-೨೮ ಪಾಪಜೀವಿ

ಅಚಲ ೩೨-೨೬ ಬೆಟ್ಟ

ಅಜ ೧-೨ ಬ್ರಹ್ಮ

ಅಜಗರ ೧೨-೧೯ ದೊಡ್ಡಹಾವು

ಅಟ್ಟಾಲ ೬೮-೩೧ ೮೨-೩ ಉಪ್ಪರಿಗೆ, ಅರಮನೆ

ಅಟ್ಟುಳಿ ೨-೪೯ ೬೧-೧೫ ಹಿಂಸೆ

ಅಟ್ಟೆ ೩-೫೧, ೧೮-೩೧ } ಮುಂಡ

ಅಡಕಿಲು ೩೦-೩೭, ೮೨-೪೧ ಪೇರಿಸಿದಸಾಲು (ಉದಾ. ಮಡಕೆಸಾಲು)

ಅಡಕು ೧೧-೧೦ ಪೇರಿಸು

ಅಡಗಟ್ಟು ೨೨-೬೧ ಅಡ್ಡಹಾಕು

ಅಡಗೆಡೆ ೫-೪೮ ಕೆಳಗೆ ಬೀಳು

ಅಡಱು ೧೨-೯ ಏರು, ಹತ್ತು

ಅಡಾಯುಧ ೨-೯ ಎರಡು ಅಲಗಿನ ಕತ್ತಿ

ಅಣ್ಪು ೪೫-೫ ಲೇಪನ

ಅರ್ಣವ ೩-೧೮ ಸಮುದ್ರ

ಅತುಳ ೩-೨೯ ಎಣೆಯಿಲ್ಲದ

ಅರ್ತಿ ೫-೧೭ ಆಸೆ, ಸಂತೋಷ

೩೧-೩೯ ಸಂಭ್ರಮ, ಸಂತೋಷ

೨೨.೩೯ ದುಃಖ, ಯಾತನೆ

ಅರ್ಥಿ ೭-೨೮ ಯಾಚಕ, ಅಪೇಕ್ಷಿಸುವವನು

ಅರ್ಥಿ ೨೧-೪೦ ಆಸೆ, ಅಪೇಕ್ಷೆ

ಅದ್ದು ೧-೨೬ ಮುಳುಗಿಸು

ಅದ್ದು ೪೭-೩೭ ಮುಳುಗು

ಅಧರ ೩-೩೬ ತುಟಿ

ಅಧರೋಷ್ಠ ೧೨-೨೩ ಕೆಳತುಟಿ

ಅದ್ಭುತ ೧-೧೦ ಆಶ್ಚರ್ಯ

ಅಧ್ವಗಮನ ೧೧-೧೯ ದಾರಿನಡೆಯುವುದು

ಅಧ್ವರ ೮೦-೧೩, ೩೧-೭೮ ಯಜ್ಞ

ಅನಲ ೨-೧೯ ಬೆಂಕಿ

ಅನವದ್ಯ ೪೦-೬೯ ನಿರ್ದುಷ್ಟ

ಅನಶನ ೧-೧೪ ಉಪವಾಸ

ಅನಾಗತ ೬-೩ ಭವಿಷ್ಯ

ಅನಿಮಿಷರು ೩೩-೯ ದೇವತೆಗಳು

ಅನಿಮಿಷಾಕ್ಷಿಗಳು ೨೨-೪೫ ರೆಪ್ಪೆ ಹೊಡೆಯದವರು

ಅನುಕರಿಸು ೧೮-೧ ಅನುಸರಿಸು

ಅನುಗತ ೨೪-೧೫ ಜತೆಯಲ್ಲಿ ಬಂದ

ಅನುಗತಿ ೨೮- ೧೯ ಅನುಸರಿಸಿ ಹೋಗುವಿಕೆ

ಅನುಗರು ೪೦-೧೨ ಅನುಯಾಯಿಗಳು

ಅನುನಯ ೨-೩೧, ೫-೨೩ ಪ್ರಾರ್ಥನೆ

ಅನುಲೇಪನ ೪೫-೧೧ ಉದ್ವರ್ತನ, ಹಚ್ಚಿಕೊಳ್ಳುವ ಗಂಧ

ಅನುವರ ೪೭-೩೨, ೬೦-೧೪ ಯುದ್ಧ

ಅನುವಾಗು ೪೭-೬೭ ಸಿದ್ಧನಾಗು

ಅನುಷ್ಠಾತೃ ೨೮-೧೮ ಆಚರಿಸುವವನು

ಅನೂನ ೨೯-೧೧ ಕೊರತೆಯಿಲ್ಲದ, ಸಂಪೂರ್ಣ

ಅನ್ನೆಗ ೭-೩ ಆವೇಳೆಗೆ
ಅನ್ಯಾಪದೇಶ ೨೭-೩೧ ವ್ಯಾಜೋಕ್ತಿ
ಅನಂತ ೧-೩೧ ಆದಿಶೇಷ
ಅನ್ವಯ ೧-೧ ವಂಶ
ಅಪಗತ ೫೭-೧ ಕಳೆದುಹೋದ
ಅಪಗಮನ ೪೮-೬೭, ೪೯-೬೦ ಹೊರಟುಹೋಗುವಿಕೆ
ಅಪಗಮಿಸು ೮೧-೩೩ ಹೋಗು
ಅಪದಶ ೫೩-೨೨ ಕೀಳ
ಅಪವರ್ಗ ೨೪- ೨೪, ೭೧-೨ ಮೋಕ್ಷ
ಅಪಶದ ೫೪-೩೩ ಬಾಹಿರ
ಅಪಸದ ೬೪-೧೮ ಬಾಹಿರ
ಅಪಾಂಡವ ೭೨-೩೦ ಪಾಂಡವರಿಲ್ಲದ
ಅಪ್ರಮೇಯ ೬೨-೮ ಅಳತೆಗೆ ಸಿಕ್ಕದ
ಅಪಸವ್ಯಾಕ್ಷಿ ೩೩-೨೩ ಬಲಗಣ್ಣು
ಅಭಿಜನ ೪೧-೩೦ ಸಮಸ್ತಜನ
ಅಭಿಜ್ಞ ೨-೧೩ ಜ್ಞಾನಿ
ಅಭಿದಾನ ೫-೭೦ }
೧೫-೭೪ } ಹೆಸರು
ಅಭಿನಮಿಸು ೩-೩೯ ನಮಸ್ಕರಿಸು
ಅಭಿಭವಿಸು ೫೧-೪೩ ಸೋಲಿಸು
ಅಭಿಯೋಗ ೮೦-೧೬ ಯುದ್ಧ, ದಾಳಿ
,, ೬೬-೧೧ ಆಕ್ಷೇಪಣೆ, ಆಪಾದನೆ
ಅಭಿರಾಮ ೮-೪ }
೧೭-೧೨ } ರಮ್ಯ, ಪ್ರಿಯ
ಅಭಿವದನ ೫೬-೧ ಅಭಿಮುಖ
ಅಭಿವಂದಿಸು ೨-೩೭ ನಮಸ್ಕರಿಸು
ಅಭಿಶಂಕೆ ೫೦-೬೭ ಹೆಚ್ಚಿನ ಸಂಶಯ
ಅಭೀಪ್ಸೆ ೬-೭೮ }
೧-೩೧ } ಆಸೆ
ಅಭ್ಯರ್ಥಿಸು ೭-೩೭ }
೨೧-೬ } ಪ್ರಾರ್ಥಿಸು
ಅಭ್ಯುದಯ ೩-೧೬ ಅಭಿವೃದ್ಧಿ
ಅಭ್ಯಂತರಾಳ ೭-೨೫ ಒಳಭಾಗ
ಅಭ್ರ ೩-೬ ಆಕಾಶ
ಅಮರ್ಷ ೫೬-೪೫ ಆಗ್ರಹ, ಅಸಹನೆ
ಅಮ್ಮದೆ ೩-೪೦ ಶಕ್ತಿಯಿಲ್ಲದೆ, ಸಾಧ್ಯವಾಗದೆ
ಅಮ್ಮುವರು ೧೬-೧೬ ಸಮರ್ಥರು
ಅಮ್ಮೆವು ೮-೨೮ ಶಕ್ತರಲ್ಲ

ಅರ್ಭಕ ೮-೧೪, ೧೩-೧೪-ಮಗು
ಅರಳು ೩-೧೦ ಹೂ
ಅರಳುಗಂಗಳು ೩-೩೬ ಅರಳಿದ (ವಿಶಾಲವಾದ) ಕಣ್ಣುಗಳು
ಅರಿದು ೩೧-೧೬ ಅಸಾಧ್ಯ
ಅರಿ ೪೮-೫ ಕತ್ತರಿಸು
ಅರುಣ ೩-೦೬ ಕೆಂಪಾದ
ಅರುಣಿಮ ೨೬-೪೧ ಕೆಂಬಣ್ಣ
ಅಱಕೆ ೯-೨ ಹುಡುಕುವಿಕೆ
ಅಱಗುಲಿ ೩೨-೪೯ ಧರ್ಮವಿರೋಧಿ
ಅಱಿತ ೧೩-೪೨ ತಿಳಿವಳಿಕೆ
ಅಱಿತಗಾಱ ೭೨-೩೪ ತಿಳಿದವ
ಅಱೆ ೩-೧೨ ಬಂಡೆ
ಅಱೆಯಟ್ಟು ೭೧-೨೮ ಬಾಧಿಸು,
ಅವಗಡಿಸು ೭-೯ ೯೫-೨೬ ತಾಗು, ಮೇಲೆ ಬೀಳು
,, ೪೯-೨೩ ಕೀಳುಮಾಡು, ತಿರಸ್ಕರಿಸು
,, ೪೭-೯೫ ನುಗ್ಗು
ಅವಗಡೆಯ ೮-೩೨ ದುಡುಕುತನದವನು
ಅವಗತ ೭-೩೨ ಕಳೆದುಹೋದ
ಅವಗತ ವಿದ್ಯರು ೪೩-೧೬ ವಿದ್ಯೆ ವಶವಾದವರು
ಅವಗಾಹ ೮-೭ ಮುಳುಗುವಿಕೆ
ಅವಗಾಹನ ೩೫-೩೯ ಸ್ನಾನ ಮಾಡಿಸುವುದು
ಅವಜ್ಞೆ ೨೧-೩೮ ತಿರಸ್ಕಾರ
ಅವದ್ಯವಿರಹಿತ ೧೪-೮ ನಿಂದಾಸ್ಪದನಲ್ಲದ
ಅವಧರಿಸು ೧-೨೩ ಲಾಲಿಸು
ಅವನತದೇವ ೧೩-೨೨ ಶರಣಾಗತರ ದೇವರು
ಅವನತ ಕಾಮಧೇನು ೩೨-೧೬ ಭೂಮಿಗಿಳಿದ ಕಾಮಧೇನು
ಅವನಿ ೧. ಸೂ. ಭೂದೇವಿ
ಅವಮತಿ ೨೮-೬೭ }
೨೯-೭೩ } ಅವಮಾನ
ಅವಲೇಪ ೨೯-೧೩ ಅಹಂಕಾರ
ಅವಸಥ ೧-೨೪ }
೫೨-೧೯ } ವಾಸಸ್ಥಾನ
ಅವಸರದವರು ೬೫-೯ ಪರಿವಾರ
ಅವಸಾನ ೫೮-೪ ಕೊನೆ
ಅವಿರತ ೮-೪ ಸಂತತವಾದ
ಅವ್ಯಯ ೧೯-೫೮ ವ್ಯತ್ಯಾಸ ಹೊಂದದವನು, ಶಾಶ್ವತನು
ಅಶ್ರುಪೂರ ೩೨-೪೧ ಕಣ್ಣೀರಿನ ಪ್ರವಾಹ
ಅಷ್ಟವಿಂಶತಿ ೬೭-೧೫ ಇಪ್ಪತ್ತೆಂಟು

ಅಸಿಧಾರೆ ೮-೫ ಕತ್ತಿಯ ಅಲಗು
ಅಸಿಲತೆ ೨೦-೧೧ ಬಳ್ಳಿಯಂತೆ (ಬಳುಕುವ) ಕತ್ತಿ
ಅಸುಕೆ ೨೧-೧೮ ಅಶೋಕ
ಅಸುಬೆಗಲ್ಲು ೯-೨೮ ಅರೆಯುವ ಕಲ್ಲು
ಅಹಮುಹವಿಕೆ ೮೨-೨೩ ನಾ ಮುಂದು ತಾ ಮುಂದು ಎಂದು ಬರುವಿಕೆ
ಅಹರೆ ೧-೧೭ ಆದರೆ
ಅಹಿ ೧೨-೨೫ ಹಾವು
ಅಹಿರಿಪು ೧೯-೫೭ ಗರುಡ (ಹಾವಿನ ಶತ್ರು)
ಅಳಕ ೨೮-೩, ೨೩-೧೭ } ಮುಂಗುರುಳು
ಅಳಲಿಗ ೨೯-೭ ದುಃಖಿ
ಅಳಲು ೯-೩೮, ೧೧-೩ } ಸಂಕಟ
ಅಳವು ೧-೧೯ ಶಕ್ಯ
,, ೫೫-೧೩, ೪೯-೪೬ } ಶಕ್ತಿ, ಸಾಮರ್ಥ
ಅಳವಟ್ಟ ೧೨-೨ ಹೊಂದಿಕೆಯಾದ, ಲಭಿಸಿದ
ಅಳಿಬಲ ೪೯-೪೦ ಕೀಳು ಸೈನ್ಯ
ಅಳಿಮನ ೪-೭ ನೀಚಮನಸ್ಸು
ಅಳಿಸನ್ಯಾಸಿ ೧೩-೭೨ ಕೀಳು (ಕಪಟ) ಸನ್ಯಾಸಿ
ಅಳುಕು ೧೦-೯ ಅಂಜು, ಹಿಂತೆಗೆ
ಅಳುಪು ೨೫-೪೮ ಆಸೆಪಡು
ಅಳ್ಳಿಱಿ ೨೨-೯೫ ಭೇದಿಸು
ಅಂಕೆ ೨೨-೩೨ ಯುದ್ಧ
,, ೪೯-೨೫ ಶೌರ್ಯ
ಅಂಕೆ ೨೧-೩೧ ತೊಡೆ
ಅಂಕಿಸು ೧೫-೩ ಗುರುತು ಮಾಡು
ಅಂಗ ೭೧-೨೨ ದೇಹ
ಅಂಗಣ ೬೦-೭೧ ಒಳ ಬಯಲು
ಅಂಗ ಭೂಷಣ ೩೦—೯—ದೇಹಾಲಂಕಾರ
ಅಂಗರಾಗ ೮-೫, ೨೯-೨೩ } ಲೇಪನ, ಹಚ್ಚಿಕೊಳ್ಳುವ ಗಂಧ
ಅಂಗಲಕ್ಷ್ಮಿ ೩-೩೯ ದೇಹ ಸೌಂದರ್ಯ
ಅಂಗವಿಸು ೩೧-೬, ೧೮-೪೪ } ಮುನ್ನುಗ್ಗು
ಅಂಗವಿಸು ೬೦-೧೫ ಗುಂಪು ಸೇರು
ಅಂಜುಳಿ ೧೨-೩೨ ಬೊಗಸೆ
ಅಂಡಲೆ ೫-೨೬ ಹಿಂಸಿಸು
ಅಂತರ್ಜಠರ ೧೨-೨೮ ಹೊಟ್ಟೆಯ ಒಳಭಾಗ
ಅಂತರ ೯-೪೦ ದೂರ, ವ್ಯತ್ಯಾಸ
,, ೨೨-೩೧ ಅಂತಸ್ತು
ಅಂತರಾಯ ೧೩-೧೬ ವಿಘ್ನ, ಅಡ್ಡಿ
ಅಂತರಿತ ೧೨-೨೯ ಮರೆಯಾದ
ಅಂತಸ್ತಾಪ ೩೦-೨೪ ಒಳಗಿನ ಬೇಗೆ, ದುಃಖ
ಅಂತಿಕ ೨-೩೭ ಸಮೀಪ
ಅಂತುಕ ೧೯-೩೫ ಮುಕ್ತಾಯ
ಅಂದಣ ೨೬-೭೪ ೧೮-೧೩ ಪಲ್ಲಕ್ಕಿ
ಅಂಧತಮಿಸ್ರ ೬೧-೧ ಗಾಢವಾದ ಕತ್ತಲೆ
ಅಂಬರ ೧೦-೨೦ ವಸ್ತ್ರ
,, ೩-೩೦ ಆಕಾಶ
ಅಂಬುರುಹದೃಶ ೨೯-೬೮ ಕಮಲಾಕ್ಷ, ಕೃಷ್ಣ
ಅಂಸ ೨೬-೨೦ ೩೦-೩೬ ೪೯-೫೬ ಹೆಗಲು

## ಆ

ಆಕೆವಾಳ ೧೪-೬೫ ೪೬-೩೪ ಶೂರ
ಆಕ್ರಂದನ ೩-೮ ಅಳು
ಆಖಂಡಲ ೭-೧೩ ೧೯-೧೬ ಇಂದ್ರ
ಆಗಸ ೮-೪೦ ಆಕಾಶ
ಆಘೋಷಿಸು ೯-೪ ಗಟ್ಟಿಯಾಗಿ ಹೇಳು
ಆಚ್ಛಾದನ ೫೪-೨೪ ಹೊದಿಕೆ
ಆಟವಿಕ ೫೫-೩೫ ಕಾಡು ಮನುಷ್ಯ
ಆಟೋಪ ೨೨-೪೦ ರಭಸ
ಆಡು ೨೩-೪೦ ಕುಣಿ
ಆತು ೫೫-೧೮ ನೆರವಾಗಿ, ಊರೆಯಾಗಿ
ಆದಿತ್ಯ ೩-೧೦ ಸೂರ್ಯ
ಆದೇಶ ೯-೯ ಅಪ್ಪಣೆ
ಆಧಿ ೧೧-೨೦ ವಿಪತ್ತು
ಆನಕ ೫೫-೩೪ ನಗಾರಿ
ಆನತ ೨೭-೬ ಶರಣಾಗತ
ಆನು ೩೩-೭೯ ಪ್ರತಿಭಟಿಸು
ಆನಲಾರದೆ ೩೯-೧೭ ಸಹಿಸಲಾರದೆ
ಆಪಡೆ ೯-೩೮ ೩೨-೧೨ ಶಕ್ತನಾದರೆ
ಆಪನ್ನ ೨೭-೧೪ ಆಪತ್ತಿಗೆ ಸಿಕ್ಕಿದವನು
ಆಪ್ಯಾಯನ ೩೭-೨೨ ತೃಪ್ತಿದಾಯಕ
ಆಭೀಲ ೨೯-೩೪ ಭಯಂಕರ
ಆಮಿಷ ೧೨-೨೪ ಆಸೆ, ಪ್ರಲೋಭನ
ಆಮೋದ ೬-೪೧ ೭೦-೧೦ ಪರಿಮಳ
ಆಮ್ನಾಯ ೧೩-೪೮ ೧೬-೨೭ ೯೨-೩೦ ವೇದ

ಆಮ್ರೇಡಿಸು ೩-೨೫ ಪುನರುಚ್ಚರಿಸು
ಆಯತಿಕೆ ೧೫-೨೬ ಸಾಮರ್ಥ್ಯ
,, ೪೧-೭೧ ಪರಾಕ್ರಮ
ಆಯಸ ೧೪-೧೩ ಆಯಾಸ
ಆರು ೫೩-೨೨ ೫೬-೭ ಗರ್ಜಿಸು
ಆರುಭಟೆ ೮೨-೧೫ ಆರ್ಭಟ
ಆರೋಗಣೆ ೭೮-೭ ಊಟ
ಆಲೋಲ ೨೧-೭೦ ಚಂಚಲ
ಆವರಣ ೩-೪೩ ಮರೆ, ಮುಚ್ಚಳ
ಆವರ್ತ ೧೪-೨೫ ಸುಳಿ
ಆವಾಸ ೧-೧೦ ಮನೆ
ಆಶ್ಲೇಷ ೨೬-೯ ಆಲಿಂಗನ
ಆಸರು ೩೮-೯೮ ಆಸಱು ೯-೯, ೨-೫೯ ಆಯಾಸ
ಆಸಾರ ೬೧-೨೨ ಮಳೆ
ಆಸುರ ೧-೩೨ ಭಯಂಕರ
ಆಸ್ಯ ೧-೩೪ ಬಾಯಿ
ಆಸ್ವಾದಿಸು ೧-೧೪ ರುಚಿನೋಡು
ಆಹವ ೧-೧೮ ಯುದ್ಧ
ಆಹ್ವಯ ೧೦-೮ ಹೆಸರು
ಆಳ್ದನ್ ೪೧-೧೫ ೫-೧೩ ಒಡೆಯ, ಸ್ವಾಮಿ
ಆಳು ೯-೯೮, ೫೯-೭ ೧೯-೨೯ ೩-೧೯ ೧೮-೩೧ ಮುಳುಗು

## ಇ

ಇಕ್ಕಡಿ ೫೭-೧೯ ಎರಡು ತುಂಡು
ಇಕ್ಕಲಿಸು ೭೦-೯ ಗುಂಪು ಕೂಡು
ಇಕ್ಕು ೩೧-೩೨ ಹೊಡೆ, ಕೊಲ್ಲು
ಇಕ್ಕೆಲ ೫-೭ ೧೧-೧೩ ಎರಡು ಪಕ್ಕ
ಇಕ್ಕೆಹಕ್ಕೆ ೨೨-೪೪ ೪೨-೭೨ ವಾಸಸ್ಥಾನ
ಇಕ್ಕೈ ೫-೩೮ ೪೦-೧೬ ಎರಡು ಕೈ
ಇಟ್ಟಳಿಸು ೨೨-೩೫ ೬೫-೨೫ ದಟ್ಟವಾಗಿ ಸೇರು
ಇಟ್ಟೆ ೬೦-೨೧ ೨೦-೬೯ ೩೩-೬೬ ಈಟಿ
ಇಡಿಕು ೫೪-೨೧ ತುಂಬು (ತುರುಕು)
ಇಡಿ ೫೦-೨೨ ಬಿಗಿಯಾದ
ಇಡು ೮-೨೭ ಹೊಡೆ
ಇಡುಕು ೯-೬೬ ಎಸೆ
ಇಡುಕುಱು ೩೫-೨೮ ದಟ್ಟ
ಇತ್ತಡಿ ೪-೧೪ ಎರಡು ಪಡ
ಇತ್ತಂಡ ೧೩-೨೧ ಎರಡು ಪಂಗಡ
ಇತ್ತೆಱ ೧-೩, ೧೮-೨೨ ೭-೨೭ ಎರಡು ರೀತಿ
ಇದ್ವೆಸೆ ೪-೧೫ ಎರಡು ಪಕ್ಕ
ಇನಜ ೪೧-೨೬ ಸೂರ್ಯಪುತ್ರ, ಯಮ
ಇಪ್ಪಿಡಿ ೧೩-೪೨, ೮-೧೫ ಎರಡು ಹಿಡಿ
ಇಪ್ಪೋಳು ೨೮-೫ ಎರಡುಹೋಳು
ಇಬ್ಬೆರಳು ೯-೪೦ ಎರಡು ಬೆರಳು
ಇರವು ೨-೩೫, ೩೩-೧೯ } ಸ್ಥಿತಿ, ಇರುವಿಕೆ
ಇಱಿ ೩-೭ ತಿವಿ
ಇಱುಬು ೧೩-೧೮, ೨೮-೩೬ ಗುಳಿ, ಹಳ್ಳ
ಇಷ್ಟ ೭-೧೬, ಇಷ್ಟಾಪೂರ್ತ ೩೪-೩೩ ಇಷ್ಟಾ, ಪೂರ್ತ ಎಂಬ ಧರ್ಮಕಾರ್ಯಗಳು
ಇಂಗಡಲು ೩೨-೨೧ ೨-೯ ೧-೧೯ ಕ್ಷೀರಸಮುದ್ರ
ಇಂಡೆ ೧೨-೧೨ ಹಾರ
ಇಂದೀವರ ೨೭-೨ ನೈದಿಲೆ
ಇಂದ್ರದಿಗುಭಾಗ ೬೨-೧೪ ಪೂರ್ವ

## ಈ

ಈಡಾಡು ೪೪-೪೫ ಬಿಟ್ಟುಬಿಡು
ಈಡಿಱಿ ೯-೨೭, ೪-೩, ೧೮-೨೯, ೪೭-೭೮ ಉಕ್ಕು, ಹೆಚ್ಚು ಎರಚಾಡು ಚಲಿಸು, ಹಾರಾಡು
ಈಪ್ಸಿತಾರ್ಥ ೫೭-೧೪ ಬಯಸಿದ ಪ್ರಯೋಜನ
ಈರಡಿ ೪-೪ ಎರಡು ಹೆಜ್ಜೆ
ಈಶಾನೆ ೧೯-೪೧ ಈಶ್ವರನ ಹೆಂಡತಿ
ಈಳೆ ೫೩-೨೫ ಕಿತ್ತಿಳೆ

## ಉ

ಉಗ್ಗಡ ೪-೨೦ ಹೆಚ್ಚಳ
,, ೧೦-೧೭ ಶಬ್ದ (ಉದ್ಘೋಷ)
ಉಗಿ ೪೯-೪೭ ಕೀಳು
ಉಚ್ಚಳಿಸು ೧೮-೬, ೭೭-೫ ಭೇದಿಸು, ಹೊರಹೊಮ್ಮು
ಉಡಿ ೬-೫, ೩೨-೨೮ } ಮುರಿ
ಉಡೆ ೯-೩೧ ಉಡಿಗೆ
ಉತ್ತಂಸ ೫೧-೭ ಅಲಂಕಾರ, ಶ್ರೇಷ್ಠ
ಉತ್ತಮಾಂಗ ೧-೨೫ - ೨-೩೩ } ತಲೆ

ಉತ್ತರಿಸು ೧-೬ ೪-೧೬, ೧೫-೮, ೬೦-೭೭ ದಾಟು
ಉತ್ತರಿಸು ೬೪-೨೨ ಉತ್ತರ ಹೇಳು
ಉತ್ಪಾತ ೧೧-೩೮ ಅಪಶಕುನ ಸೂಚಿಸುವ ಅಸಾಧಾರಣ ಘಟನೆ
ಉತ್ತಾರಕ ೮-೯ ದಾಟಿಸುವವ
ಉದಂತ ೨೬-೪೯ ವೃತ್ತಾಂತ, ಕಥೆ
ಉದಗ್ರ ೩೦-೩೧ ಭಯಂಕರ
ಉದಧಿ ೪-೪ ಸಮುದ್ರ
ಉದಧಿಘೋಷ ೨-೬ ಸಮುದ್ರದ ಅರ್ಭಟ
ಉದಯ ೩-೩೧ ಜನ್ಮ
ಉದುಗರಿಸು ೨೬-೪ ಹೊರಚೆಲ್ಲು
ಉದ್ಗಾಯಕ ೩೫-೧೫ ಗಟ್ಟಿಯಾಗಿ ಹಾಡುವ
ಉದುಗಾರತಂತ್ರ ೨೯-೬ ಹೊರಚೆಲ್ಲುವ ಉಪಾಯ
ಉದ್ಗಾರಿಸು ೧೬-೪೨ ಹೊರಚೆಲ್ಲಿಸು
ಉದ್ದಂಡ ೭೦-೨೩ ಶ್ರೇಷ್ಠ
ಉದ್ದು ೮೧-೪ ಉಜ್ಜು
ಉದ್ರೇಕಾರ್ತಿ ೪೬-೧೯ ಉದ್ರೇಕವೆಂಬ ರೋಗ
ಉದ್ವೃತ್ತ ೧೬-೧೮, ೯-೨೬ ಉಕ್ಕಿಹೋದ
ಉದ್ವೇಲವಿಕ್ರಮ ೧೫-೧ ಮೇರೆಯಿಲ್ಲದ ಪರಾಕ್ರಮ
ಉನ್ಮೂಲನ ೨೮-೨೧, ೪-೪೪ ಬೇರು ಕೀಳುವುದು
ಉಪಚಿತ ೭೬-೫ ಪೂಜಾರ್ಹ
,, ೫೭-೫ ಶ್ರೇಷ್ಠ
ಉಪಮಾತೀತ ೮-೬ ಹೋಲಿಕೆಗೆ ಮೀರಿದ
ಉಪರಾಗ ೭೨-೩ ಗ್ರಹಣ
ಉಪಸನ್ನ ೨೭-೬ ಹತ್ತಿರದ
ಉಪಾಧಿ ೭೨-೧೬ ವೇಷ
ಉಪಾಶ್ರಯನು ೪-೫೦ ಆಧಾರ
ಉಪ್ಪರ ೪೫-೬೬ ಔನ್ನತ್ಯ
ಉಪ್ಪವಡಿಸು ೪೧-೫ ಏಳು
ಉಬ್ಬಟೆ ೨-೧೩ ಆಧಿಕ್ಯ, ಹೆಚ್ಚಳ
ಉಬ್ಬಱಿಸು ೫೫-೧೫ ಗರ್ವಪಡು, ಹೆಚ್ಚು
ಉಮ್ಮಳಿಸು ೨೭-೧೬ ದುಃಖಿಸು, ಧಾವತಿಬಡು
ಉಯ್ಯಲ ೧೮-೮ ಉಯ್ಯಾಲೆ
ಉಯಸ್ ೧೪ ೧೪ ಹೊಟ್ಟು
ಉರವಣಿಸು ೨-೩ ವಿಜೃಂಭಿಸು
ಉರವಣೆ ೪೨-೩೪ ಆತುರ, ದುಡುಕುತನ
ಉರಗಾಧಿಪತಿ ೧-೨೮ ಸರ್ಪರಾಜ, ಆದಿಶೇಷ
ಉರಗಾಲಯ ೩೨-೨೬ ಸರ್ಪಲೋಕ
ಉರಗಾಸ್ಯ ೨೯-೪ ಹಾವಿನ ಬಾಯಿ
ಉಱುಬು ೪೨-೪೭ ರಭಸದಿಂದ ನುಗ್ಗು
ಉಱುಬೆ ೨-೪೬ ಒತ್ತಡ, ಹಿಂಸೆ
ಉಱುವ ೨೪-೧೪ ಶ್ರೇಷ್ಠಮದ
ಉರ್ಬಿ ೭-೧೩ (ಉರ್ವಿ) ಭೂಮಿ
ಉಲಿ ೪೭-೭೧ ಕೂಗು, ಶಬ್ದಮಾಡು
ಉಲೂಖಲರ್ ೯-೪೬ ಒರಳು
ಉಲ್ಲೋಲ ೪-೧೪ ದೊಡ್ಡ ಅಲೆ
ಉತ್ಕ್ಷೇಪ ೧೮-೧೦ ಎತ್ತಿ ಎಸೆಯುವುದು

## ಊ

ಊಣೆಯ ೧೩-೧೬ ಕೊರತೆ, ಲೋಪ
ಊಳಿಗ ೧-೨೮ ಪ್ರಾರ್ಥನೆ
,, ೯-೨೦ ಕೆಲಸ
ಊಷ್ಮ ೮೨-೪೭ ಸೆಕೆ, ಶಾಖ

## ಋ

ಋಕ್ಷಪ ೬೭-೧೧ ಕರಡಿಯೊಡೆಯ ಜಾಂಬವಂತ

## ಎ

ಎಕ್ಕತುಳ ೭೮-೨೦ ಪರಾಕ್ರಮ
ಎಕ್ಕಸೆಕ್ಕ ೮-೩೧ ಅಪಹಾಸ್ಯ
ಎಗ್ಗತನ ೫೦-೧೯ ಒರಟುತನ
ಎಡಱು ೪೬-೨೭ ಕಷ್ಟ
ಎಡೆಗೆ ೪೭-೩೧ ಹತ್ತಿರಕ್ಕೆ
ಎಡೆಗೆಡಿಸಿ ೭೩-೧೧ ಅಂತರವಿಲ್ಲದಂತೆ ಮಾಡಿ
ಎಡೆಗೆಡು ೫೫-೨೩ ಬಿಡುವಿಲ್ಲದಂತಾಗು
ಎಡೆಯಾಡು ೮-೨೦ ಸಂಚರಿಸು
ಎಡೆಯಾಟ ೨೪-೩೭ ಸಂಚಾರ
ಎಡೆವಟ್ಟೆ ೮೧-೪೧ ದಾರಿಯ ಮಧ್ಯೆ, ನಡುದಾರಿ
ಎಡೆವಱಿಯದೆ ೨-೧೫ ನಿರಂತರವಾಗಿ
ಎಣೆ ೨-೦೧ ಸಮಾನ
ಎಣ್ದೆಸೆ ೪-೨೪ ಎಂಟು ದಿಕ್ಕುಗಳು
ಎನ್ನೆವರ ೧೪-೩೨ ಎಲ್ಲಿಯವರೆಗೆ
ಎಬ್ಬಟ್ಟು ೧೬-೧೨ ಓಡಿಸು, ಹೊರಡಿಸು
ಎಬ್ಬೆಟ್ಟು ೪೮-೨೬ ಅಟ್ಟಿಸಿಕೊಂಡು ಹೋಗು
ಎಯ್ದು ೯-೩೫ ಹೋಗು
ಎರಳೆ ೪೦-೭೦ ಜಿಂಕೆ
ಎಱಕ ೬-೬ ಪ್ರೀತಿ, ಸ್ನೇಹ
ಎಱಗಿ ೮-೩೫ ಬಗ್ಗಿ
ಎಱಗು ೨-೫೪ ನಮಸ್ಕರಿಸು
ಎಱವಿಗ ೪೬-೧೨ ಅನ್ಯ, ಬೇರೆಯವ

ಎಱಿತೆಯ ೨_೪೦ ಒಡೆಯ, ಸ್ವಾಮಿ
ಎಹಗೆ ೬೫_೧೭ ಹೇಗೆ
ಎಂಜಲಿಸು ೩೨_೫ ರುಚಿನೋಡು, ತಿನ್ನು

ಏ

ಏಕದೇಶ ೭_೨೫ ಭಾಗ
ಏಗುವುದು ೩೩_೩ ಏನುಮಾಡುವರು
ಏಡಿಸು ೨೨_೨೮ ಹಾಸ್ಯಮಾಡು
ಏಣಧರ ೨೬_೨ ಚಂದ್ರ
ಏಳಿಗೆಯ ೪೪_೫೮ ಹೆಚ್ಚಾದ
ಏಳಿದಿಕೆ ೧೪_೨೦ ಹಾಸ್ಯ
ಏಳಿದಿಟ ೧_೨೯ ತಿರಸ್ಕಾರ, ಅಲಕ್ಷ್ಯ
ಏಳಿಸುವ ೨೯_೧೦ ಹಾಸ್ಯಮಾಡುವ

ಐ

ಐದರೆ ೨೫_೨೨ ಇದ್ದಾರೆ
ಐದೆತನ ೬೯_೧೪ ಸೌಮಾಂಗಲ್ಯ

ಒ

ಒಕ್ಕ ೧೩_೬೫ ಚೆಲ್ಲಿದ
ಒಕ್ಕನು ೭೦_೯ ಕೆಡವಿದನು
ಒಕ್ಕತನ ೫_೨೫ ಸಂಸಾರ
ಒಕ್ಕಲಿಕ್ಕು ೮_೨೩ ಧ್ವಂಸಮಾಡು
ಒಗುಮಿಗೆ ೭_೪ ಹೆಚ್ಚಾಗಿ
ಒಗುವ ೨೭_೨೦ ಹೊರಹೊಮ್ಮುವ
ಒಗ್ಗೊಡೆ ೪೭_೪೬ ಚೆದುರು
ಒಚ್ಚತ ೧೩_೧೩ ಸಂತೋಷ
ಒಟ್ಟು ೬_೫ ರಾಶಿಹಾಕು
ಒಡಲ ೧೨_೨ ಶರೀರದ
ಒಡರಿಸು ೨_೧೪ ಉಂಟುಮಾಡು
ಒಡ್ಡಣೆ ೪೯_೪೨ ರಾಶಿ, ಸಮೂಹ
ಒತ್ತು ೬೨_೧೦ ಗುಂಪು
ಒತ್ತೊತ್ತೆ ೬೦_೪೩ ಗುಂಪುಗುಂಪುಗಳು
ಒದಱಿಸಿ ೪೭_೩೨ ಶಬ್ದಮಾಡಿ
ಒದಱು ೫_೩೯ ಗಟ್ಟಿಯಾಗಿ ಕೂಗು
ಒಪ್ಪ ೮೧_೧ ಕಾಂತಿ, ಮೆಱುಗು
ಒಬ್ಬುದ್ಧಿ ೨೨_೨೦ ಒಂದು ಮನಸ್ಸು
ಒಯ್ಯನೆ ೬_೩೩ ಮೆಲ್ಲನೆ
ಒಯ್ಯಾರಿಸಿ ೨_೩ ಮೆರೆಯಿಸಿ
ಒರಸು ೭೦_೧ ನಾಶಪಡಿಸು
ಒರೆ ೨_೪೧ ಹೇಳು
ಒಱಗಿದ ೮_೨೪ ನಿದ್ರಿಸಿದ
ಒಱಗು ೨೯_೩ ಮಲಗು, ನಿದ್ರಿಸು
ಒಱಲು ೭_೬ ಗಟ್ಟಿಯಾಗಿ ಅಳು
ಒಲವರ ೫೨_ ೨ ಪ್ರೀತಿ, ಪಕ್ಷಪಾತ
ಒಲೆ ೨೫_೨೪ ತೂಗಾಡು
ಒಸಗೆವಱಿತೆ ೨೪_೬ ಉತ್ಸವದ ತಮಟೆ
ಒಸರು ೧_೧೪ ಜಿನುಗು
ಒಂದು ೬_೧೧ ಐಕ್ಯವಾಗು

ಓ

ಓಕರಿಸು ೬೮_೧೦ ವಾಂತಿಮಾಡು
ಓಜೆಯಲಿ ೩೧_೩೮ ನೇರವಾಗಿ
ಓಜೆ ೫೫_೮೦ ಗಾಂಭೀರ್ಯ
ಓರಣ ೭೦_೩ ಸಾಲು
ಓರೆ ೧೧_೭ ಸಮಾನ
ಓಲಗ ೪_೩೯ ಸಭೆ
ಓಲಾಡು ೬_೩೦ ತೂಗಾಡು
ಓವರಿ ೯_೨೮ ಒಳಮನೆ
ಓವು ೧_೬ ರಕ್ಷಿಸು
ಓಳಿ ೫_೫ ಸಾಲು

ಔ

ಔಕು ೧೧_೨ ಎತ್ತಿಹಿಡಿ (ಅವುಕು)
ಔಡು ೯_೨೭ ತುಟಿ
ಔತ್ಪತ್ತಿಕ ೧೬_೫೬ ಉತ್ಪತ್ತಿಸಹಜವಾದ, ಜನ್ಮಸಿದ್ಧವಾದ
ಔಪಾಧಿಕ ೬೦_೮ ಉಪಾಧಿಯಿಂದ ಕೂಡಿದ
ಔರ್ವಾನಳ ೬೯_೨೯ ಬಡಬಾಗ್ನಿ (ಸಮುದ್ರದ ತಳದ ಬೆಂಕಿ)

ಕ

ಕಕ್ಕುಲತೆ ೬೫_೧೨ ಒಣ ಅಭಿಮಾನ, ಬಹಳ ಆಸೆ
ಕಚ್ಛಪ ೪೭_೬೩ ಆಮೆ
ಕಜ್ಜಲ ೫೬_೬೧ ಕಾಡಿಗೆ, ಮೇಘ
ಕಟಕ ೩೯_೭೬ ಸೈನ್ಯ
,, ೪೬_೩೫ ಕಡಗ
,, ೫೯_೧೭ ರಾಜಧಾನಿ
ಕಟಾಹ ೩೫_೩೮ ಕೊಪ್ಪರಿಗೆ
,, ೭.೨೨ ಕಡಾಯಿ
ಕಟಿ ೫_೪೮ ಸೊಂಟ
ಕಟ್ಟೊಡೆಯ ೫೨_೭೧ ಪ್ರಭು, ಅಭಿಷಿಕ್ತರಾಜ
ಕಟ್ಟೋಗರ ೧೯_೧೦ ಬುತ್ತಿಯ ಅನ್ನ, (ಕಟ್ಟಿ ತಂದ ಅನ್ನ)
ಕಡಿವಡೆ ೫೬_೨ ತುಂಡಾಗು

ಕಡುಗಿ ೫-೪೦ ರಭಸದಿಂದ
,, ೧೦-೧೭ ಆತುರಪಟ್ಟು
ಕಡುಗು ೨-೨೬ ಆತುರಪಡು, (ಉತ್ಸಾಹಿಸು)
ಕಡುಹು ೧೮-೨೫ ತೀವ್ರತೆ
ಕಣಿ ೨೦-೬೮ ಗಣಿ
ಕತ್ತರಿವೀಲಿ ೧೪-೫೦ ನವಿಲುಗರಿ (ಪೀಲಿ)
,, ೧೯-೨೬ (ಕಿವಿಯ ಮೇಲೆ ಧರಿಸುವ ರತ್ನಾಭರಣ)
ಕಥಾ ಯಥಾಮೃತ ೧೪-೧೩ ಅಮೃತದಂಥ ಕಥೆ
ಕದಪು ೫-೩೦ ಕೆನ್ನೆ
ಕದಂಬ ೪೭-೧೯ ಸಮೂಹ
ಕನಲದೆ ೯-೨೯ ಸಿಟ್ಟಾಗದೆ
ಕಪಿತ್ಥ ೧೧-೩೦ ಬೇಲ
ಕಮನೀಯ ೧೦-೪೭ ಆಕರ್ಷಕ, ರಮಣೀಯ
ಕಮಲದೃಶ ೮-೩೪ ಕಮಲಾಕ್ಷ, ಕೃಷ್ಣ
ಕಯ್ದುಕಾಱ ೮೨-೩೩ ಶಸ್ತ್ರಕುಶಲಿ
ಕರಣ ೧-೮ ಇಂದ್ರಿಯ
ಕರಣೋತ್ಕರ ೨೦-೭೩ ಇಂದ್ರಿಯಸಮೂಹ
ಕರಣಶ್ರೇಣಿ ೧೭-೧೫ ಇಂದ್ರಿಯಸಮೂಹ
ಕರಮರೀಚಿ ೧೮-೫ ಮರೀಚಿಯೇ ಕರಗಳಾಗಿ ಉಳ್ಳವ (ಸೂರ್ಯ)
ಕರವತಿ ೧೪-೭೨ ಯಾಗೋಪಕರಣ
ಕರಿಣೀಯೂಥ ೨೭-೨೯ ಹೆಣ್ಣಾನೆಗಳ ಹಿಂಡು
ಕಲಕಲ ೫೬-೨೭ ಗದ್ದಲ
ಕಲಿತ ೭೦-೩ ಕೂಡಿದ
ಕಲುಷ ೩೫-೭೨ ಕೋಪ
ಕಲಸೋಗರ ೧೩-೭ ಕಲಸಿದ ಅನ್ನ
ಕಲ್ಪ ೬-೨೮ ನಾಲ್ಕು ಯುಗಗಳ ಕಾಲ
ಕಲ್ಪಾಂತರ ೧೯-೪೦ ಬೇರೆ ಕಲ್ಪ
ಕವಾಟ ೪-೯ ಬಾಗಿಲು, ಕದ
ಕರ್ಣಿಕೆ ೧೩-೮ ಮೊಗ್ಗು
ಕರ್ಬುರ ೫೨-೩ ವರ್ಣ ವೈವಿಧ್ಯ
ಕರ್ಬುರಿತ ೨೯-೮ ವರ್ಣವೈವಿಧ್ಯದಿಂದ ಕೂಡಿದ
ಕರ್ಬೊಗೆ ೧೭-೨೦ ಕಪ್ಪುಹೊಗೆ
ಕರ್ಶಿತೆ ೨೦-೧ ಕೃಶಳು (ಆಯಾಸಗೊಂಡವಳು)
ಕಷ್ಟಜನ್ಮ ೬೧-೩೩ ನೀಚಜನ್ಮ
ಕಷ್ಟಜೀವರು ೩೩-೧೭ ನೀಚಜೀವಿಗಳು
ಕಸರಿಕೆ ೬೭-೨೬ ಅಸಮಾಧಾನ
ಕಳ ೩೧-೩೨ ಮಲ್ಲರಂಗ
,, ೩೪-೩೭ ಯುದ್ಧಭೂಮಿ
ಕಳಜ ೧೦-೭ ಗಳಿಗೆ (ಧಾನ್ಯ ತುಂಬುವ ಬಿದಿರಿನ ಕಣಜ)
ಕಳಿಲು ೫೬-೪೨ ಬೀಳು
ಕಳಲೆ ೧೮-೨ ಬೀಳುವಂತೆ
ಕಳಿ ೩-೧೮ ದಾಟು
ಕಳೆ ೪-೧೦ ವಿದ್ಯೆ
ಕಳೆವರ ೨೫-೧೬ ಶರೀರ
ಕಱುಗಾಹಿ ೧೩-೧ ಕರುಗಳನ್ನು ಕಾಯುವವನು
ಕಱೆಗಟ್ಟು ೪-೬೬ ಮುಸಿಹತ್ತು
ಕಾಕಪಕ್ಷ ೪-೪ ಶಿಖೆ
ಕಾಕೋದರ ೮೨-೪೮ ಹಾವು
ಕಾತ (ಬರ್ಬರವನ) ೪೬-೨೩ ಕಾಯಿ ಬಿಟ್ಟ
ಕಾಮಗ ೮೧-೨೦ ಸ್ವೇಚ್ಛಾಸಂಚಾರಿ
ಕಾರ್ಪಣ್ಯ ೪-೨೨ ದೈನ್ಯ
ಕಾರ್ಶ್ಯ ೪೫-೮ ಕೃಶತೆ, ಬಡವಾಗಿರುವಿಕೆ
ಕಾಲಕಾಲ ೩-೫೨ ಯಮನಿಗೆ ಯಮ
ಕಾಲತೈಲಿಕ ೪೯-೩೨ ಯಮನೆಂಬ ಗಾಣಿಗ
ಕಾಲಾಟ ೫೫-೩೫ ಸಂಚಾರ, ಓಡಾಟ
ಕಾಲಾತ್ಮಕ ೧-೮ ಯಮಸ್ವರೂಪಿ
ಕಾವರು ೩-೫೩ ರಕ್ಷಕರು
ಕಾವಳ ೧೩-೫೧ ಕತ್ತಲೆ
ಕಾವುದು ೩-೨೭ ರಕ್ಷಿಸಬೇಕು
ಕಾಸೆ ೭೨-೨೮ ಕಾಷಾಯವಸ್ತ್ರ (ಕಾಶಾ)
ಕಾಹುರ ೧೯-೭ ಉದ್ರೇಕ
ಕಾಳಗಿಚ್ಚು ೧೭-೨೦ ಯಮನಂಥ ಬೆಂಕಿ
ಕಾಳಿಂದಿ ೩೫-೩ ಯಮುನೆ
ಕಾಳುಮಾಡಿದೆ ೨೩-೧೭ ಕೆಡಿಸಿದೆ, ಹಾಳುಮಾಡಿದೆ,
ಕಾಳು ೪-೪೯ ಹಾಳು
ಕಾಳುಮೂಢ ೫೭-೪ ಕೆಟ್ಟ ದಡ್ಡ
ಕಾಳುರಿ ೪-೨೨ ಕಾಡುಕಿಚ್ಚು
ಕಾಳೋರಗ ೨-೪೧ ಕರಿಯ ಹಾವು
ಕಾಂಕ್ಷಿತ ೫೨-೨೦ ಅಪೇಕ್ಷಿತ
ಕಿಗ್ಗಡಲು ೧೪-೧ ಚಿಕ್ಕ ಸಮುದ್ರ
ಕಿಱಿದು ೪೭-೫೧ ಸ್ವಲ್ಪ
ಕಿಂಜಲ್ಕ ೭೦-೨೫ ಪುಷ್ಪಪರಾಗ
ಕೀಱಿ ೧೬-೧೭ ಕೂಗಿಕೊಂಡು
ಕೀಲಿಸು ೨೨-೩೫ ಚುಚ್ಚು
ಕೀಸು ೩೨-೬೫ ಕೀಳು
ಕುಕ್ಕುಟವ್ರಜ ೩೪-೩೧ ಕೋಳಿಗಳ ಗುಂಪು

ಕುಕ್ಕುಱಿಸು ೬೦-೯ ಬೀಳು

ಕುಠಾರರು ೫-೨೫ ವಿನಾಶಕಾರರು (ಕೊಡಲಿಯಂಥವರು)

ಕುಡಿತೆ ೧೩-೪೩ ಬೊಗಸೆ

ಕುಡಿನೋಟ ೨೬.೩೨ ಕಡೆಗಣ್ಣಿನ ನೋಟ

ಕುಡುತೆ ೧೧-೩೧ ಬೊಗಸೆ

ಕುತ್ತಿ ೧೦.೩೪ ಚುಚ್ಚಿ

ಕುದಿಪ ೭೫-೧೭ ವ್ಯಥೆ

ಕುನಿಯೋಗ ೩೦-೭೨ ಕೆಟ್ಟ ರಾಜಕೀಯ

ಕುನ್ನಿ ೩-೪೮ ನಾಯಿ, ನಾಯಿಯಂಥ ನೀಚ

ಕುರವಕ ೨೬-೧೫ ಮುಳ್ಳುಗೋರಂಟೆ

ಕೂರುಮೆ ೪೩-೩೯ ಪ್ರೀತಿ (ಕೂರ್ಮೆ)

ಕುರುಳು ೧೧-೩೬ ಮುಂಗೂದಲು

ಕುರುಳೊತ್ತು ೨೭-೧೧ ಮುಂಗೂದಲಿನ ಮೊತ್ತ

ಕುಱಿವ ೪೭-೭ ಸಮುದ್ರದ ನಡುಗಡ್ಡೆ

ಕುಱುವ ೨೭-೬೫ ಬೆಟ್ಟ

ಕುಲಶೈಲ ೫-೪೧ ಪ್ರಧಾನ ಪರ್ವತ

ಕುಶೇಶಯ ೯-೧೯ ಕಮಲ

ಕುಹರ ೫೯-೨೦ ಗವಿ

ಕುಹರಾವರ್ತ ೧೨-೨೧ ಡೊಂಕಾದ ಗುಹೆ

ಕುಳಿಸ ೮೨-೨೩ ವಜ್ರಾಯುಧ

ಕೂಜಿಸು ೪೮-೧೬ ಹಕ್ಕಿಗಳ ಕೂಗು

ಕೂಪ ೪೪-೭೩ ಬಾವಿ

ಕೂಪೋದಕ ೧-೯ ಬಾವಿಯ ನೀರು

ಕೂರ್ಗೋಲು ೩೦-೩೭ ಹರಿತವಾದ ಬಾಣ

ಕೂರ್ತು ೧೬-೫೦ ಪ್ರೀತಿಸಿ

ಕೊಳಕಲ್ಲಿ ೧೨-೪ ಅನ್ನದ ಚೀಲ

ಕೃತಾಘ ೨೧-೪೫ ಮಾಡಿದ ಪಾಪ

ಕೃತ್ತಿವಾಸ ೩-೯ ಚರ್ಮವನ್ನು ಬಟ್ಟೆಯಂತೆ ಹೊದ್ದಿರುವವ : ಶಿವ

ಕೃತ್ಯೆ ೬೫ ೩೯ ಶಕ್ತಿದೇವತೆ

ಕೃಪಣ ೪೩-೪೦ ದೀನ

ಕೃಪಣೆ ೨-೨೭ ದೀನೆ, ಆರ್ತಳು

ಕೃಶಾನು ೧-೨೦ ಅಗ್ನಿ, ಬೆಂಕಿ

ಕೃಷ್ಣವರ್ತ್ಮ ೬೭-೩ ಅಗ್ನಿ

ಕೆಟ್ಟುದು ೨-೫೫ ಕಳೆದುಹೋಯಿತು

ಕೆಡೆ ೨-೧೦ ಬೀಳು

ಕೆಡೆಗುತ್ತು ೧೪-೬೮ ಬೀಳುವಂತೆ ತಿವಿ

ಕೆತ್ತು ೩೯-೭೧ ಹೊತ್ತಿಕೊಳ್ಳು

ಕೆತ್ತು ೩೯-೬೬ ಅದಿರು, ಚಲಿಸು

ಕೆತ್ತು ೭-೪ ಮುಚ್ಚಿಕೊಳ್ಳು

ಕೆದಱು ೨೨-೨೯ ಚೆಲ್ಲಾಡು, ಚೆದರಿಸು

ಕೆಪ್ಪುಗೇಳು ೨೧-೬ ಕೇಳಿಸಿಕೊಳ್ಳದೆ ಅಸಡ್ಡೆಮಾಡು

ಕೆಯ್ ೧೯-೧೪ ಹೊಲ, ಬಯಲು

ಕೆಲಸಾರು ೧೦-೪ ಪಕ್ಕಕ್ಕೆ ಸರಿ

ಕೆಲ್ಲವಿಸು ೧೧-೧೫ ಕೇಕೆಹಾಕು

ಕೆಳೆ ೪೩-೧೫ ಸ್ನೇಹ

ಕೇಕಾರವ ೧೯-೬ ಕೇಕೆಯ ಶಬ್ದ

ಕೇಣ ೯-೩೦ ಮತ್ಸರ

ಕೇಣಿ ೫೦-೩೮ ಗುತ್ತಿಗೆ

ಕೇತಕಿ ೨೫-೨೬ ತಾಳೆಹೂ

ಕೇಯೂರ ೭೮-೪ ಹಾರ

ಕೇಸುರಿ ೧೨-೨೧ ಕೆಂಪಾದ ಜ್ವಾಲೆ

ಕೇಳಿ ೧-೧೧ ಆಟ

ಕೈಗಟ್ಟು ೪೦-೯ ಲಭಿಸು

ಕೈತವ ೨೦-೫ ಮೋಸ

ಕೈಪಱಿ[3]ಗಾಡು ೧೦-೫೫ ಚಪ್ಪಾಳೆ ತಟ್ಟು

ಕೈಮಾಟ ೨೮-೬೯ ಸ್ವರೂಪ

ಕೈಯಟ್ಟು ೧೬-೧೨ ಉಂಟುಮಾಡು

ಕೈಯೆಡೆ ೪೬-೨೭ ದಾನ

ಕೈಯೊಡನೆ ೪೦-೫ ಕೂಡಲೆ, ಒಡನೆಯೇ

ಕೈರವಾಕರ ೧-೩೧ ನೈದಿಲೆಯ ಆಶ್ರಯ, ಸರೋವರ

ಕೈವರ್ತಿಸು ೮೧-೪೧ ಒಪ್ಪಿಸು

ಕೈವರೆಗುಟ್ಟು ೫೬-೧೨ ಚಪ್ಪಾಳೆತಟ್ಟು

ಕೈವಾರ ೪೫-೪೦ ಸ್ತೋತ್ರ

ಕೈವಾರಿಸು ೫-೧೪ ಹೊಗಳು

ಕೊಗ್ಗೆಸರು ೫೬.೨೫ ಕೊಚ್ಚೆ

ಕೊಡಕೆ ೮-೧೫ ಕಿವಿ

ಕೊಣ ೬೩.೨೪ ಕೊಳ, ಕಟ್ಟೆ

ಕೊಪ್ಪು ೭೪-೪೦ ಬಿಲ್ಲಿನ ಕೊನೆ

ಕೊಲ್ಲಣಿಗೆ ೧೮-೧೪ ಆಟ, ವಿನೋದ

ಕೊಸಕಿಲ್ ೧೯-೨೬ ಬೆಟ್ಟದಾವರೇ (?)

ಕೊಳುಗುಳ ೪೯-೩೩ ಯುದ್ಧ

ಕೋಡದಿರು ೭೦-೩೧ ಅಂಜದಿರು

ಕೋಡಿದರು ೫೭-೨೪ ಅಂಜಿದರು, ನಡುಗಿದರು

ಕೋಡು ೩೨-೭೧ ಕೊಂಬು

ಕೋದ ೪೭-೬೦ ಪೋಣಿಸಿದ

ಕೋರಕ ೩೦-೯ ಮೊಗ್ಗು

ಕೋರಡಿಗತನ ೮-೩೪ ತುಂಟತನ
ಕೋರವಿಸು ೩-೩ ಕಾಂತಿಯಿಂದ ಕಣ್ಣು ಕುಕ್ಕಿದಂತಾಗು
ಕೋಲ ೬೫-೪ ಬಾಣದ
ಕೋವಿದ ೨-೩೪ ಪಂಡಿತ
ಕೋಳುವಿಡಿ ೪೧-೧೮ ಸೆರೆಹಿಡಿ
ಕೋಳ್ಗುದಿ ೨೫-೩೭ ತೀವ್ರವಾದ ವ್ಯಥೆ
ಕೌಮುದಿ ೬೨-೧೫ ಬೆಳದಿಂಗಳು
ಕೌಳಿಕ ೮೬-೧೨ ಮೋಸ
ಕಂಕಣ ೨೫-೧೩ ಬಳೆ
ಕಂಗಾಹಿ ೨೦-೧೭ ನಟ್ಟ ದೃಷ್ಟಿಯುಳ್ಳವರು
ಕಂಗುಡಿತೆ ೭೨-೪ ಕಣ್ಣುಂಬ ಬೊಗಸೆ
ಕಂಜ ೧೭-೨೫, ೬೭-೫ ಕಮಲ
ಕಂಜಸಖ ೧೮-೨೦ ಸೂರ್ಯ
ಕಂಟಕ ೫೨-೮ ಮುಳ್ಳು
ಕಂಟಣಿಸು ೫೬-೫೩ ಪ್ರತಿಭಟಿಸು
ಕಂದರ ೧೩-೧೭ ಕಣಿವೆ ೫-೪೫ ಗುಹೆ
ಕಂದರ್ಪಕ ೧೯-೨ ಮನ್ಮಥ
ಕಂದಲು ೨೫-೧೦ ಸಣ್ಣ ಮಣ್ಣಿನ ಪಾತ್ರೆ (ಹಾಲು ಕರೆಯುವುದು)
ಕಂಬುಕಂಠ ೧೯-೩೮ ಶಂಖದಂಥ ಕೊರಳು
ಕಾಂಚೀಗುಣ ೨೮-೫ ಸೊಂಟಕ್ಕೆ ಕಟ್ಟುವ ದಾರ (ಸೊಂಟ ಪಟ್ಟಿ)
ಕಾಂತಾರ ಪಥಿಕರು ೨೪-೩೪ ಅಡವಿಯ ದಾರಿಹೋಕರು
ಕುಂಠಿಣಿ ೧೮-೨೧ ದೂದವಿ, ಕುಂಟಣಗಿತ್ತಿ
ಕುಂಡಲ ೩-೩೫ ಕಿವಿಯ ಒಡವೆ
ಕುಂತ ೪೩-೨ ಭರ್ಜಿ
ಕುಂದರದನ ೫೯-೨೧ ಬಿಳಿಯ ಹಲ್ಲು (ಕುಂದ ಪುಷ್ಪದಂಥ)
ಕ್ರತು ೪೨-೫೦ ಯಾಗ
ಕ್ಷಮ ೧೨-೨೨ ಶಕ್ತ
ಕ್ಷಾಮಕಾಯ ೫೫-೩೦ ಕೃಶವಾದ ಮೈಯವ
ಕ್ಷಾಮಗಾತ್ರ ೭೧-೯ ,,
ಕ್ಷಿತಿ ೧-೧೧ ಭೂಮಿ
ಕ್ಷೀರೋದನ ೨೨-೨೧ ಹಾಲು ಅನ್ನ
ಕ್ಷುರಮಾಲೆ ೧೨-೬೯ ಕತ್ತಿಗಳ ಸಾಲು
ಕ್ಷೇಮಧಾಮ ೭೪-೧೫ ಸುಖಾಶ್ರಯ

## ಖ

ಖಗ ೧೧-೩ ಹಕ್ಕಿ
ಖಗರಾಜ, ಖಗರಾಯ ೧೭-೮, ೪೧-೭೧ ಹಕ್ಕಿಗಳಲ್ಲಿ ಶ್ರೇಷ್ಠ, ಗರುಡ
ಖಚರ ೩-೧೦ ಆಕಾಶಸಂಚಾರಿ
ಖಟ್ವಾಂಗ ೬೨-೧೫ ಗದೆ (ಶಿವನ ಗದೆ) ಕುಣಿಲಕೋಲು
ಖದ್ದತನ ೨೫-೧೭ ನೀಚತನ, ಮೂರ್ಖತೆ
ಖದ್ದರು ೮-೮ ಮೂರ್ಖರು
ಖಡ್ಡಿ ೫೧-೪೫ ಗಟ್ಟಿಗ ?
ಖಡ್ಡಿಸು ೫೧-೪೫ ಹಟಮಾಡು
ಖದ್ಯೋತಮಣಿ ೧೦-೫೩ ಸೂರ್ಯ
ಖಯಖೋಡಿ ೭೩-೨೯ ಕೆಟ್ಟ ಹಟ
ಖರಖುರ ೧೫-೩೮ ಕತ್ತೆಯ ಗೊರಸು
ಖವಿಖವಿಸಿ ೫೬-೧೩ ಆತುರಪಟ್ಟು
ಖಳ ೨-೯, ೩-೪೭ ನೀಚ, ದುಷ್ಟ.
ಖಿನ್ನಗಾತ್ರರು ೧-೧೮ ನೊಂದ ದೇಹವುಳ್ಳವರು
ಖುರಹತಿ ೩೦-೧೬ ಗೊರಸಿನ ಪೆಟ್ಟು
ಖೇಚರರು ೬-೧೬ ಆಕಾಶಸಂಚಾರಿಗಳು
ಖೇಡ ೧೪ ೫೬ ಭೀತ
ಖೇಳ ೧೨-೧೪ ಆಟ
ಖೇಳಮೇಳ ೨೭-೭೯, ೪೯-೭೨ ಆಟದ ಗೋಷ್ಠಿ
ಖಂಡಪರಶು ೫-೬೬, ೫೬-೯ ಶಿವ
ಖಂಡೆಯ ೩೧-೧೪, ೭೪-೪೫ ಕತ್ತಿ

## ಗ

ಗಜಬಿ ೫೫-೧೩ ಗದರಿಸು
ಗಡಣ ೧೨-೨ ಸಮೂಹ
ಗಡಬಡೆ ೨೨-೯೫, ೪೭-೬ ಗದ್ದಲ
ಗಡಿಗಟ್ಟು ೨೯-೧೪ ಅವಧಿಯನ್ನು ನಿರ್ಣಯಿಸು
ಗದ್ದುಗೆ ೨-೪೨, ೪೭-೪ ಪೀಠ, ಸಿಂಹಾಸನ
ಗನ್ನಗತಕ ೫೪-೨೮ ಮೋಸ
ಗಬ್ಬಳಿಸಿ ೩೨-೨ ಅಗೆದು, ಸೀಳಿ
ಗಬ್ಬಳಿಸು ೧೫-೩೮, ೧೭-೬೯ ಅಗೆ
ಗರ್ಘರ ಮಹಾರವ ೩೨-೮ ಗರ್, ಘರ್ ಎಂಬ ಶಬ್ದ
ಗರುತ್ಮ ೬೯-೨೪ ಗರುಡ
ಗರುವಿಕೆ ೩೫-೮ ಗಾಂಭೀರ್ಯ
ಗವಲು ೫೪-೨೨ ದುರ್ವಾಸನೆ
ಗಳ ೧೨-೩೩, ೨-೨೫ ಕೊರಳು
ಗಳಹತನ ೫೫-೧೨ ಹರಟುವ ಸ್ವಭಾವ
ಗಳಿಸು ೨-೩೨ ಸಂಪಾದಿಸು
ಗಾದಿ ೯-೨೪ ಚಮತ್ಕಾರ ?
ಗಾಡಿಕಾತಿ ೨೮-೨೪, ೪೮-೩೭, ೯-೪೩ ಸುಂದರಿ
ಗಾತ್ರ ೩೧-೩, ೫೭-೧೮ ಶರೀರ
ಗಾವರ ೨೨-೨೨ ಗದ್ದಲ, ಕೋಲಾಹಲ
ಗಾವಿಲ ೬೦-೨೫ ದಡ್ಡ

ಗಾಹಿಸು ೪೭-೩೩ ಗಾಬರಿಪಡಿಸು
ಗಾಜು ೫೧-೫೨ ಅಪಮಾನಗೊಳಿಸು, ರೇಗಿಸು
ಗಿಜಿಕಿಜು ೩೦-೪೧ ಸದ್ದುಮಾಡು
ಗಿರಿಯಾಚಾಟ ೧೮-೨೨ ಗೋಪಾಲಕರ ಒಂದು ಆಟ
ಗಿರಿವಿವರ ೨೩-೧೦ ಬೆಟ್ಟದ ರಂಧ್ರ, ಗುಹೆ
ಗುಡಾಳಕ ೩೩-೧೫, ೩೩-೬೬ ಒಂದು ಆಭರಣ
ಗುಡಿ ೬೫-೨ ಧ್ವಜ
ಗುಪಿತ ೨-೩೭ ರಹಸ್ಯ
ಗುರುಗುಂಜಿ ೧೨-೧೨ ಗುಲಗಂಜಿ
ಗುರುತರ ೭-೨ ಬಹಳ ದೊಡ್ಡದಾದ
ಗುಲ್ಮ ೪೪-೪೨ ಪೊದೆ
ಗೆಡೆ ೫೫-೧೩ ಹರಟು
ಗೆಡ್ಡೆ ೫೧-೪೫ ಮುಖಂಡ, ಮುಂದಾಳು
ಗೊಡವೆ ೭೨-೨೧ ಸಂಬಂಧ,
ಗೊಡ್ಡಾಟ ೫೬-೧೭ ಅವಿವೇಕ
ಗೊಡ್ಡುತನ ೫೧-೪೫ ಅಪ್ರಯೋಜಕತ್ವ
ಗೊರವ ೯-೨೩ ಗುರು
ಗೋನಾಳಿ ೨೪-೩೦ ಕೊರಳು
ಗೋಮಾಯು ೫೬-೨೭, ೭೪-೩೩ ನರಿ
ಗೋರಜ ೫-೪೭ ಗೋಧೂಳಿ
ಗೋರಸ ೧೭-೧೯, ೮೦-೩೯ ಹಾಲು, ಮಜ್ಜಿಗೆ
ಗೋಷ್ಠಿ ೧೬-೪೬ ಗುಂಪು, ಸಂಘ
ಗೋಳುಂಡೆ ೮-೨೫ ಸಂಕಟ
ಗೋಳುಂಡೆಗೊಳ್ ೮೧-೨೭ ಸಂಕಟಪಡು
ಗಂಹರ ೧೧-೬೭ ಗಹ್ವರ
ಗಾಂದಿನೀಸುತ ೬೫-೩ ಅಕ್ರೂರ
ಗುಂಜಾಟವಿ ೧೮-೩೬ ದಟ್ಟವಾದ ಕಾಡು
ಗುಂಜಾಭರಣ ೧೨-೩ ಗುಲಗಂಜಿಯ ಒಡವೆ
ಗುಂಜಿ ೬೭-೫ ಗುಲಗಂಜಿ
ಗೊಂದಣ ೫೭-೨೬, ೧೨-೪ ಗುಂಪು, ಸಭೆ
ಗ್ರಾಸ ೮೧-೨೦ ಆಹಾರ
ಗ್ಲಾನಿ ೧೬-೧, ೩೧-೫ ಕ್ಲೇಶ, ವ್ಯಥೆ

## ಘ

ಘುಟಧೂಪ ೬-೭ ಹೆಣ ಸುಟ್ಟ ಹೊಗೆ
ಘುಡಾವಣೆ ೬೧-೧೨ ಕೋಲಾಹಲ, ಅವಾಂತರ
ಘನರಭಸ ೨-೮ ಮೇಘದ ಶಬ್ದ, ಗುಡುಗು
ಘನಸನ್ನಿಭ ೧-೨೭ ಮೇಘಸದೃಶ, ವಿಷ್ಣು
ಘುಲ್ಲಣೆ ೨೮-೧೧, ೩೨-೯, ೫೮-೭ ದಾಳಿ
ಘುಸೃಣ ೩೩-೧೪ ಕೇಸರಿ
ಘುಳಿಲನೆ ೧೨-೬ ತಟ್ಟನೆ
ಘುಳಿಯ ೪೮-೧೦ ಸಿದ್ಧಪಡಿಸಿದ
ಘೀಳಿಡು ೫-೪೨ ಗಟ್ಟಿಯಾಗಿ ಕೂಗಿಕೊಳ್ಳು
ಘೋಟಕ ೫೫-೩೫ ಕುದುರೆ

## ಚ

ಚಕಿತಗರ್ಭ ೨.೪೮ ಚಲಿಸಿದ ಗರ್ಭ
ಚಕ್ರ ೮೧-೨೧ ಮಂಡಲ
ಚತ್ವರ ೫೯-೪ ಚೌಕನಾದ ವೇದಿಕೆ
ಚಮ್ಮಟಿಕೆ ೪೮-೨೧ ಚಾವಟಿ
ಚಲ್ಲ ೧೯-೫೧ ಉಲ್ಲಾಸ
ಚವುಕಿಗೆ ೫೦-೧೭ ಒಳಮನೆಯ ಮಂತ್ರಶಾಲೆ
ಚಳೆಯ ೫೯-೪ ಚಿಮುಕಿಸುವುದು
ಚಾಮೀಕರ ೧೪-೧ ಚಿನ್ನ
ಚಾರಣ ೫೨-೭ ದೇವಲೋಕದ ಹೊಗಳುಭಟ್ಟರು
ಚಾರು ೧-೧೩ ರಮ್ಯ
ಚಾರುಗಾತ್ರ ೧೭-೩೦ ಸುಂದರ ಶರೀರ
ಚಿಕೀರ್ಷೆ ೧-೩೧ ಉದ್ದೇಶ, ಸಂಕಲ್ಪ
ಚಿಗಿ ೪-೩೯, ೩೩-೪೦ ಹಾರು
ಚಿಣ್ಣ ೫-೩೯, ೯-೨೧, ೨೬-೨೮ ಹುಡುಗ
ಚಿತ್ತವಿಸು ೩-೫೪ ಲಾಲಿಸು, ಕೇಳು
ಚಿದ್ರೂಪ ೭-೩೭ ಜ್ಞಾನಸ್ವರೂಪ
ಚಿನುಮಯ ೩-೪೪, ೨೧-೩೧ ಜ್ಞಾನಸ್ವರೂಪಿ, ಜ್ಞಾನಮಯನು
ಚಿಪ್ಪಿಗ ೩೨-೨೭ ಬಟ್ಟೆಹೊಲಿಯುವವ
ಚೀಟು ೬೫-೨೭ ಚೀಟಿ, ಆಜ್ಞೆ
ಚುಬುಕ ೩೫-೧೦ ಗಲ್ಲ
ಚೂಣಿ ೪೯-೩೯ ಸೈನ್ಯದ ಮುಂಭಾಗ
ಚೂತ ೨೫-೨೩ ಮಾವು
ಚೇತೋದೂರ ೧೫-೯ ಮನಸ್ಸಿಗೆ ದೂರನಾದವ
ಚೇಷ್ಟಿಸು ೧೭-೧೫ ಕೆಲಸಮಾಡು
ಚೌಷಷ್ಟಿ ೪೧-೭ ಅರವತ್ತುನಾಲ್ಕು
ಚಂಗುವಾಜು ೩೭-೬೫ ನೆಗೆದಾಡು
ಚಂಡ ೨೯-೧೫ ಪ್ರಬಲವಾದ
ಚಂಡಿ ೨-೩೫ ಹಟ
ಚಂಡಿಕೆ ೪-೧೭ ದುರ್ಗಿ
ಚಂಡಿಮೆ ೫೭-೫೭ ತೀಕ್ಷ್ಣತೆ, ಪ್ರಾಬಲ್ಯ
ಚಿಂತಾಪ್ರೋತ ೨೫-೩೪ ಚಿಂತಾಗ್ರಸ್ತ, ಚಿಂತೆಗೆ ಸಿಕ್ಕಿದ

## ಛ

ಛಡಾಳ ೫೬-೫೭, ೫೪-೧೭ ಹೆಚ್ಚಳ,
ಛಳಯು ೧೮-೬ ಚಿಮುಕಿಸಿದಂತೆ

## ಜ

ಜಕ್ಕುಲಿಸು ೬೯-೧೨, ೧೧-೧೮, ೧೫-೨೫ ೧೮-೨ ಅಲ್ಲಗಳೆ, ಕೀಳುಮಾಡು
ಜಕ್ಕುಲಿಸು ೧೨-೫ ವಿನೋದಪಡು, ಆನಂದಿಸು
ಜಗುಳು ೯-೪೪ ಜಾರು
ಜಡಿ ೫೫-೧೧ ಗದರಿಸು
ಜನಜಾತ ೪-೩೪ ಜನಸಮೂಹ
ಜನಪದ ೬-೩೨ ಹಳ್ಳಿ
ಜನ್ನಶಾಲೆ ೨೧-೨೯ ಯಜ್ಞಶಾಲೆ
ಜನಿ ೫೦-೨೬ ಜನನ
ಜನ್ಮರ್ಕ್ಷದಿನ ೧೦-೫೦ ಜನ್ಮನಕ್ಷತ್ರವಿರುವ ದಿನ, ಜನ್ಮದಿನ
ಜಱೆ ೨-೨೩ ದೂಷಿಸು
ಜಱೆ ೮-೪೩ ,,
ಜಱೆ ೫೧-೩ ಗದರಿಸು
ಜಲಜದೃಶ ೪೭-೨೩ ಕಮಲಾಕ್ಷ, ವಿಷ್ಣು
ಜಲಜಾದು ೮೨-೪೮ ಕಾವಿಬಣ್ಣ (ಗೈರಿಕಧಾತು ಜಲ)
ಜಲನಿಧಿ ೩-೪೭ ಸಮುದ್ರ
ಜಲಾವಿಲೇಕ್ಷಣ ೩೨-೪೧ ನೀರುತುಂಬಿದ ಕಣ್ಣುನೋಟ
ಜಲಾಸಾರ ೨೨-೩೪ ನೀರಿನ ಮಳೆ
ಜವ ೮೨-೨೬ ವೇಗ
ಜವಳಿವಿಡಿ ೫೬-೧೩ ಜತೆಯಾಗಿ ಹಿಡಿ
ಜವ ೪೧-೧೯ ಯಮ
ಜಾಗರ ೩-೮ ಎಚ್ಚರ
ಜಾತಿಜರಾಮರಣ ೭-೩೮ ಹುಟ್ಟು, ಮುಪ್ಪು, ಸಾವು.
ಜಾಯೆ ೬೬-೧೦ ೭೦-೧೪ ಹೆಂಡತಿ
ಜಾಲ ೩-೧೭ ಬಲೆ, ಗೋಜು
ಜಾಲ ೫೮-೨೬, ೨೬-೨೫ ಸಮೂಹ
ಜಾಲನ ೧೪-೧೦ ಕುಸ್ತಿಯ ಒಂದು ಪಟ್ಟು
ಜಾಳಿಗೆ ೪೮-೨೯ ಉಡುಗೆ, ಬಟ್ಟೆ
ಜೂಳಿಗೆ ೬೩-೯ ಗಿಂಡಿಯ ಕೊಂಬು
ಜಿಗಿ ೬೪-೧೪ ದಪ್ಪವಾದ
ಜಿತಪಾರ ೬೨-೩೧ ಮೃತ್ಯುವನ್ನು ಗೆದ್ದವ (ಅಂತ್ಯವನ್ನು ಗೆದ್ದವ)
ಜಿಷ್ಣು ೫-೪೯ ಜಯಶೀಲ, ವಿಷ್ಣು
ಜೀಯ ೪-೪೯ ಸ್ವಾಮಿ, ಒಡೆಯ
ಜೀವಜಾತ ೬-೨೫, ೮-೭ ಪ್ರಾಣಿಸಮೂಹ
ಜೀವಿಕೆ ೨-೫೦ ಜೀವನೋಪಾಯ
ಜೇನುಹುಟ್ಟೆ ೫೬-೮ ಮಧು ತುಂಬಿರುವ ಗೂಡು
ಜೋಡು ೪೫-೭೮, ೪೭-೨೪ ಕವಚ
ಜೋಡೆ ೫೪-೨೦ ಸೂಳೆ
ಜೋದ ೬೦-೧೧ ಯೋಧ
ಜ್ವಲನ ೧೭-೨೩ ಅಗ್ನಿ
ಜಂಗುಳಿ ೧೮-೮ ಸಮೂಹ, ಗುಂಪು
ಜಾಂಬೂನದ ೧೭-೧೨ ಚಿನ್ನ

## ಝ

ಝಡತಿ ೧-೨೯ ಬೇಗನೆ
ಝಷ ೪೦-೭೦ ಮೀನು
ಝಾಡಿ ೧೮-೨ ಸೈನ್ಯ

## ಠ

ಠಾವು ೧-೩೫, ೧೯-೪೩ ಸ್ಥಳ

## ಡ

ಡಿಂಡೀರ ೧೪-೨೫ ಸಮುದ್ರದ ನೊರೆ
ಡಿಂಬ ೨೭-೧೦ ಶರೀರ
ಡಿಳ್ಳಿಸು ೭೬-೩೫ ಸ್ಖಲಿತನಾಗು, ಸೋರಿಹೋಗು
ಡೆಂಕಣಿ ೪೯-೨೫ ಕೋಟೆಯ ಬುರುಜು
ಡೆಂಢಣಿಸು ೫೬-೪೦ ತತ್ತರಿಸು
ಡೋಱು ೬೧-೧೬, ೬೨-೫ ರಂಧ್ರ
ಡೋಱುವೋಗು ೩೨-೧೦ ಸೀಳಿಹೋಗು

## ತ

ತಕ್ಕಯಿಸು ೪-೧೦ ಆಲಿಂಗಿಸು
ತಗವು ೭೦-೨೬ ಅಡ್ಡಿಪಡಿಸು, ತಡೆ
ತಗಹು ೩೫-೧೬ ಪ್ರತಿಬಂಧಕ
ತಗುಳು ೧೭-೨೧ ಅಟ್ಟು, ಓಡಿಸು
ತಗುಳ್ದು ೪೭-೬೫ ಆಟ್ಟಿ
ತಟಾಕ ೫೭-೧೧ ಕೆರೆ
ತಟಿತ್ ೬೯-೨೦ ಮಿಂಚು
ತಡಿ ೧೧-೭೩, ೨-೧೯, ೧-೨೦ ದಡ
ತಣ್ಣೆಲರು ೨೫-೨೩ ತಂಗಾಳಿ
ತತ್ತವಿಸು ೨೭-೧೦ ಜೋಡಿಸು, ಸೇರಿಸು
ತತ್ವಂಪರಾರ್ಥ ೧೭-೩೨ ಸತ್ಯಾರ್ಥ
ತಥ್ಯ ೪೯-೩೬ ಸತ್ಯ
ತನಿಗೆಡೆ ೭-೮ ಪೂರ್ಣವಾಗಿ ಬೀಳು
ತನ್ವಂಗಿ ೨೭-೨೮ ಕೃಶಾಂಗಿ, ಸುಂದರಿ

ತರಹರಿಸು ೩೭-೭೭, ೫೯-೧೫ ಸಹಿಸು
ತರಳಮತಿ ೪೫-೪೮ ಚಂಚಲಬುದ್ಧಿ
ತರಳೆ ೩-೪೯, ೯-೧೫ ಅರಿಯದ ಹೆಂಗಸು
ತರಕ್ಷು ೫೯-೧೫, ೮-೪ ಹುಲಿ
ತಳ ೨೬-೩೨ ಅಂಗೈ
ತಳತಂತ್ರ ೪೯-೧೭ ಸೈನ್ಯ
ತಳುವದೆ ೧೪-೪೫ ತಡಮಾಡದೆ
ತಳುವಿದುದು ೧೦-೪೬ ತಡವಾಯಿತು
ತಳುವು ೫೫-೨೧ ತಡಮಾಡು
ತಱುಬು ೧೪-೬೭ ೪೮-೩೮ ಅಟ್ಟು
ತಾಟಿಸು ೨೪-೩೭ ಹೊಡೆ
ತಾಡನ ೧೬-೪೧ ಹೊಡೆತ
ತಾಂಡವ ೪೩-೧೨ ನಾಟ್ಯ
ತಾಡಿಸುವ ೨೩-೪೦ ಹೊಡೆಯುವ
ತಾರಕ ೧-೨೩ ನಕ್ಷತ್ರ
ತಾಳಕೇತನ ೧೫-೨೬ ಬಲರಾಮ
ತಾಳಿಗೆ ೩೨-೨೦ ಗಂಟಲು
ತಾಳತ್ರಯ ೪೨-೩೦ ಮೂರು ತಾಳೇಮರ
ತಾಳದ ೫೪-೬ ತಾಳೆಯ ಗರಿಯ
ತಿಣ್ಣ ೪-೩೪ ಭಾರ, ಹೆಚ್ಚಳ
ತಿತ್ತಿರಿಗಾಳೆ ೧೩-೨೫ ತುತ್ತೂರಿ ಕಹಳೆ
ತಿರಿವವ ೯-೨೩ ಬೇಡುವವ
ತಿರು ೪೯-೫೩ ಬಿಲ್ಲಿನ ಹಗ್ಗ
ತಿಳುಹು ೨-೨೫ ಎಚ್ಚರಿಸು
ತಿಱಿ ೮-೩೮ ಬೇಡು
ತೀಡುವ ೨೫-೨೩ ಬೀಸುವ
ತೀದುದು ೨೬-೭೫, ೪-೪, ೮೧-೨೫ ಮುಗಿಯಿತು
ತೀದ ೫೧-೪೯ ಮುಗಿದು ಹೋದ
ತುಟ್ಟಿಸು ೩೧-೧೦ ತಗ್ಗಿಹೋಗು
ತುಡುಕು ೫೦-೬ ಹಿಡಿ
ತುತ್ತುಗೊಳ್ ೫-೩೪ ತಿನ್ನು
ತುಬ್ಬು ೪೬-೨೫ ತಿಳಿವಳಿಕೆ
ತುಬ್ಬು ೬೯-೧೭ ಪ್ರಯೋಗಿಸು
ತುಱುವಳ ೨೬-೨೯ ದನಕಾಯುವವ
ತುಱುಗಾಱ ೮-೫೦ ದನಕಾಯುವವ
ತುಱುಗಿ ೧೩-೩ ದಟ್ಟವಾಗಿ
ತುಱುಗು ೪೯-೩೯ ಒತ್ತಾಗು
ತುಱುಂಬಿಸು ೨೬-೩೭ ಮುಡಿಸು

ತುಱುವಿಂಡು ೫-೯ ಹಸುಗಳ ಮಂದೆ
ತುಷ್ಟಿ ೧-೧೪, ೨೨-೫ ತೃಪ್ತಿ
ತೂರ್ಣ ೪೭-೨೨ ವೇಗ
ತೂಳ್ ೨೨-೩೩ ನುಗ್ಗು
ತೂಳು ೫೭-೩೦, ೫೯-೮ ಹೆಚ್ಚು
ತೂಳು ೨೧-೧೨ ವಿಜೃಂಭಿಸು
ತೃಣಲೋಭ ೧೮-೩೫ ಹುಲ್ಲಿನ ಆಸೆ
ತೃಷೆ ೨೨-೪೬, ೧-೧೪ ಬಾಯಾರಿಕೆ
ತೆಕ್ಕೆ ೬೦-೪೩ ಆಲಿಂಗನ
ತೆತ್ತಿಗ ೬೯-೯ ಸಂಬಂಧಿ
ತೆಬ್ಬು ೮೨-೨೪, ೭೧-೩ ಬಿಲ್ಲ ಹಗ್ಗ
ತೆಱಹು ೩೪-೨೪ ೭೨-೧೬ ಅವಕಾಶ
ತೇಕು ೫-೩೯, ೨೬-೧೨ ಮೇಲುಸಿರುಬಿಡು
ತೊಡವು ೨೫-೩೯ ಆಭರಣ, ಒಡವೆ
ತೊಡೆ ೮-೪೪ ಒರೆಸು
ತೊತ್ತಿಯರು ೨೫-೩೯ ದಾಸಿಯರು
ತೊಳಲು ೩-೫೩ ಅಲೆದಾಡು
ತೋಟಿ ೧೮-೧೪ ಯುದ್ಧ
,, ೫೮-೨೪ ಸ್ಪರ್ಧೆ
,, ೩೫-೬೭ ಜಗಳ
ತೋದ ೯೧-೨ ನೆನೆದ, ತೊಯ್ದ
ತೋಮರ ೬೯-೩೮, ೬೦-೨೧ ಕಬ್ಬಿಣದ ಗದೆ
ತೋಹು ೬೧-೧೩ ಮೋಸ, ಉಪಾಯ
ತೋರಮುತ್ತಿ ೨೦-೨ ದಪ್ಪ ಮುತ್ತಿಯ ಗಿಡ
ತುಂಗ ೨೫-೫೦ ಶ್ರೇಷ್ಠ
ತುಂಡ ೧೧-೪೦ ಕೊಕ್ಕು
ತುಂಬು ೮೧-೩೨ ವಿಸ್ತಾರ
ತೊಂಗಲು ೧೩-೧೦ ಗೊಂಚಲು
ತ್ರಿಂಶದಿಳೇಶರು ೪೬-೫೫ ಮೂವತ್ತು ರಾಜರು
ತ್ರಿದಶ ೨೪-೪೧, ೩೭-೬೯ ದೇವತೆ
ತ್ರಿದಶಕುಲ ೪-೪೬ ದೇವಕುಲ
ತ್ರುಟಿಕಾಲ ೨೭-೧೨ ಅತ್ಯಲ್ಪಕಾಲ

### ಥ

ಥಟ್ಟುಗಡೆ ೭-೭ ಒಟ್ಟಾಗಿ ಬೀಳು

### ದ

ದಡಿ ೨೯-೫, ೫೫-೩೨ ದೊಣ್ಣೆ
ದಡಿಗ ೧೮-೭೦ ದೊಡ್ಡ ದೇಹದವ, ಧಾಂಡಿಗ

